


# ಸತ್ಯಾರ್ಥ ಪ್ರಕಾಶ

## ಸ್ವಾಮೀ ದಯಾನಂದ ಸರಸ್ವತೀ



ಸಮಾಜ ಶ್ರದ್ಧಾನಂದ ಭವನ
ಹೋತ್ಸವ ಸಂಸ್ಕರಣ
ಪುರಂ, ಬೆಂಗಳೂರು - 560004

## ನಾಂದೀ

ದಯಾಯಾ ಆನಂದೋ ವಿಲಸತಿ ಪರಃ
ಸ್ವಾತ್ಮವಿದಿತಃಸ್ಸರಸ್ವತ್ಯಸ್ಯಾಂತೇ ನಿವಸತಿ
ಮುಂದಾ ಸತ್ಯಶರಣಾ ।
ತದಾಖ್ಯಾತಿರ್ಯಸ್ಯ ಪ್ರಕಟಿತಗುಣಾ
ರಾಷ್ಟ್ರಿಪರಮಾ, ಸ ಕೋ ದಾಂತಶ್ಶಾಂತೋ
ವಿದಿತವಿದಿತೋ ವೇದ್ಯವಿದಿತಃ ॥
ಧರ್ಮಾತ್ಮಾ ವಿಜಯೀ ಸ ಶಾಸ್ತ್ರಶರಣೋ
ವಿಜ್ಞಾನವಿದ್ಯಾವರೋಽಧರ್ಮೇಣೈವ ಹತೋ
ವಿಕಾರಸಹಿತೋಽಧರ್ಮಸ್ಸುದುಃಖಪ್ರದಃ ।
ಯೇನಾಽಸೌ ವಿಧಿವಾಕ್ಯಮಾನಮನಸಾ
ಪಾಖಂಡಖಂಡಃ ಕೃತಃ ಸತ್ಯಂ ಯೋ ವಿದಧಾತಿ
ಶಾಸ್ತ್ರವಿಹಿತನ್ನಿತ್ಯೋಽಸ್ತು ತಾರಬ್ಧಿ ಸಃ ॥

['ಸತ್ಯಾರ್ಥಪ್ರಕಾಶ', ಪ್ರಥಮ
ಸಂಸ್ಕರಣ (1875)]

(ಪರಮಾತ್ಮನನ್ನು ತಿಳಿದ, ಜಿತೇಂದ್ರಿಯನೂ, ಶಾಂತನೂ, ವೇದಜ್ಞಾನ ಬಲ್ಲವನೂ ಆದ ಯಾವನ ದಯೆಯ ಆನಂದವು ಕ್ರೀಡಿಸುತ್ತಿದೆಯೋ, ಅವನ ಹೆಸರಿನ ಅಂತ್ಯದಲ್ಲಿ ಪ್ರಸನ್ನಳೂ, ಸತ್ಯಶರಣಳೂ, ಗುಣಪ್ರಕಾಶವುಳ್ಳವಳೂ ಆದ ಸರಸ್ವತಿಯು ನಿವಾಸಮಾಡುತ್ತಿದ್ದಾಳೆ.

ಯಾವನು ವೇದವಿಧಾನವಾಕ್ಯಗಳ ಮಾನವನ್ನು ಮನಸ್ಸಿನಲ್ಲಿಟ್ಟುಕೊಂಡು, ಪಾಖಂಡ–ಖಂಡನವನ್ನು ಮಾಡಿದನೋ, ಆ ಶಾಸ್ತ್ರಶರಣನಾದ, ಮತ್ತು ವಿಜ್ಞಾನ–ವಿದ್ಯೆಗಳಲ್ಲಿ ಶ್ರೇಷ್ಠನಾದ ಧರ್ಮಾತ್ಮನು ವಿಜಯಿಯಾಗಲೀ! ವಿಕಾರಸಹಿತನಾದವನು ಅಧರ್ಮದಿಂದಲೇ ಕೊಲ್ಲಲ್ಪಡುತ್ತಾನೆ. ಅಧರ್ಮವು ಅತ್ಯಂತ ದುಃಖಪ್ರದವಾಗಿರುತ್ತದೆ. ಶಾಸ್ತ್ರವಿಹಿತ ಆಚರಣವನ್ನು ಮಾಡುವವನೇ ನಿಜವಾಗಿ ಧನ್ಯನು!)



ಬೆಲೆ : 100 ರೂ.
(ಎರಡು ಖಂಡಗಳೂ ಸೇರಿ)




ಆರ್ಯ ಸಮಾಜ ಶ್ರದ್ಧಾನಂದ ಭವನ ವಜ್ರಮಹೋತ್ಸವ ಸಂಸ್ಕರಣ

# ಸತ್ಯಾರ್ಥ ಪ್ರಕಾಶ

(ವೇದಾದಿ-ವಿವಿಧ-ಸಚ್ಛಾಸ್ತ್ರ-ಪ್ರಮಾಣಗಳಿಂದ ಕೂಡಿದೆ)

## (ಉತ್ತರಾರ್ಧ)


ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ

**ಸ್ವಾಮೀ ದಯಾನಂದ ಸರಸ್ವತೀ**

ಅವರಿಂದ ವಿರಚಿತವಾಗಿದೆ



ಪ್ರಕಾಶಕರು :

ಆರ್ಯ ಸಮಾಜ, ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ.
ಬೆಂಗಳೂರು-560 004 (ದೂರವಾಣಿ : 626380)

ಪರಿಷ್ಕೃತ ಪಂಚಮ ಸಂಸ್ಕರಣ

1990

(ಸೃಷ್ಟಿಸಂವತ್ : 1,97,29,49,090)

ಬೆಲೆ : 100 ರೂಪಾಯಿ
(ಎರಡು ಖಂಡಗಳೂ ಸೇರಿ)

3000 ಪ್ರತಿಗಳು

# SATYĀRTHA PRAKĀSA (Kannada)—Uttarārdha

—A Hand Book for Religious, Educational, Social, Cultural and Political Revolutionaries.

**(Arya Samaj Shraddhanand Bhavan Diamond Jubilee Edition)**

*Written in Hindi by :* SWAMI DAYANANDA SARASWATI
(Founder of Arya Samaj)

*Translated by :* Pt. SUDHAKARA CHATURVEDI, Bangalore

*Edited by* (Fifth Edition) : UPENDRA BHOOPALA

| | | | |
|---|---|---|---|
| First (Kannada) Edition : | | 1909 | (1,000 Copies) |
| Second | ,, | 1939 | (2,000 ,, ) |
| Third | ,, | 1955 | (4,000 ,, ) |
| Fourth | ,, | 1974 | (5,000 ,, ) |
| (Revised) Fifth | ,, | 1990 | (3,000 ,, ) |

*Pages :* 780 + xxxii

*Published by :* Arya Samaj, Shraddhanand Bhavan,
Visvesvarapuram, Bangalore-560 004
(Phone : 626380)

*Price* (for both volumes) : Rs. 100

*Printed by :* Y. V. Keshava Murthy, Managing Director,
Praja Printers Private Limited
(National Award Winners),
Praja Bhavan, 53/2, Bull Temple Road,
Bangalore-560 019. Karnataka (India)
Grams : 'Praja' Phone : 604261 & 625823



ಸ್ವಾಮೀ ದಯಾನಂದ ಸರಸ್ವತೀ

ಜನನ : ಇ. 1824 ಮರಣ : ಇ. 1883

# ಪ್ರಕಾಶಕರ ಮಾತು

ಆರ್ಯ ಸಮಾಜ, ಸ್ವಾಮೀ ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ, ಬೆಂಗಳೂರು, ಸ್ಥಾಪನೆಯಾಗಿ 60 ವರ್ಷಗಳು ಸಂದಿವೆ. ಇದರ ಸ್ಮರಣೆಗಾಗಿ **"ಸತ್ಯಾರ್ಥಪ್ರಕಾಶ"**ದ ಕನ್ನಡ ಆವೃತ್ತಿಯ ಪ್ರಸ್ತುತ ಪಂಚಮ ಸಂಸ್ಕರಣವನ್ನು ಈ ಸಮಾಜದ **'ಸ್ಥಾಪನಾ-ವಜ್ರಮಹೋತ್ಸವ-ಸಂಸ್ಕರಣ'**ದ ರೂಪವಾಗಿ ಪ್ರಕಾಶಿಸಲಾಗಿದೆ.

ಈ ಗ್ರಂಥದ ಪ್ರಥಮ 10 ಸಮುಲ್ಲಾಸಗಳಿಂದ ಕೂಡಿದ **'ಪೂರ್ವಾರ್ಧ'**ವನ್ನು ನಾವು 23 ನೆಯ ಆಗಸ್ಟ್ 1989 ರಂದು ಪ್ರಕಟಿಸಿದ ಮೇಲೆ, ಉಳಿದ 4 ಸಮುಲ್ಲಾಸಗಳೂ ಮತ್ತು ಗ್ರಂಥಕರ್ತರ **'ಸ್ವಮಂತವ್ಯಾಮಂತವ್ಯಪ್ರಕಾಶ'**, ಎಂಬ ಪರಿಶಿಷ್ಟದ ಭಾಗವು **'ಉತ್ತರಾರ್ಧ'**ದ ರೂಪದಲ್ಲಿ ಈಗ ಪ್ರಕಾಶಿತವಾಗುತ್ತಿದೆ.

ಎರಡು ಖಂಡಗಳಿಂದೊಡಗೂಡಿ, ಸುಮಾರು 1400 ಪುಟಗಳುಳ್ಳ ಈ ಗ್ರಂಥದ ಮುದ್ರಣದ ಬೃಹತ್ ಯೋಜನೆಯನ್ನು ಧೈರ್ಯದಿಂದ ಪ್ರಾರಂಭಿಸಿದ್ದರಿಂದಲೋ ಏನೋ, ಹಿರಿಯರ ನಾಣ್ಣುಡಿ—'ಸತ್‌ಸಂಕಲ್ಪ'ವೊಂದಿದ್ದರೆ ಸಾಕು ; ಬೆಟ್ಟದಷ್ಟು ಕಷ್ಟ ಬಂದರೂ ಸುಲಭವಾಗುತ್ತದೆ', ಎಂಬಂತೆ ಈ ಪ್ರಕಾಶನಕ್ಕೆ ಆವಶ್ಯಕ ಅಂಗಗಳಾದ ಸಂಪಾದಕರು, ಮುದ್ರಕರು, ದಾನಿಗಳು ಒದಗಿಬಂದು, ನಮ್ಮ ಕಣ್ಣನ್ನು ನಾವೇ ನಂಬಲಾಗದಷ್ಟು ಯಶಸ್ವಿಯಾಗಿ ಈ ಕಾರ್ಯ ನೆರವೇರಿದೆ !

ಈ ಮಹದ್ ಗ್ರಂಥವನ್ನು ಅತ್ಯುನ್ನತ ಮಟ್ಟಕ್ಕೆ ತರಲು ಎಲ್ಲ ವಿಧದಿಂದಲೂ ಶ್ರಮಿಸಿ, ಸಂಪಾದಕತ್ವದ ಜವಾಬ್ದಾರಿಯನ್ನು ಹೊತ್ತು, ಕೊನೆಗೆ ಮುದ್ರಣದ ದೋಷವನ್ನು ತಗ್ಗಿಸಲು ತಾವೇ ಖುದ್ದಾಗಿ ಬೆಂಗಳೂರಿನಲ್ಲಿ ತಂಗಿದ್ದು, 'ಪ್ರೂಫ್ ವಾಚನ' ಮಾಡಿದುದಲ್ಲದೇ, ಎಲ್ಲ ರೀತಿಯಿಂದ ಈ ಕಾರ್ಯ ಸುಸೂತ್ರವಾಗಿ ನೆರವೇರುವಂತೆ ಸಹಕರಿಸಿದ ಸಂಸ್ಕೃತ–ವೇದ ವಿದ್ವಾಂಸರೂ, ಹಾಗೂ ವೃತ್ತಿಯಿಂದ ಇಂಜಿನಿಯರರೂ, ಕರ್ನಾಟಕ ಆರ್ಯಪ್ರತಿನಿಧಿ ಸಭೆಯ ಆಚಾರ್ಯರೂ ಆದ ಪಂ॥ ಉಪೇಂದ್ರ ಭೂಪಾಲರಿಗೆ ನಮ್ಮ ಅನನ್ಯ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈ ಸಂಸ್ಕರಣದ ಪ್ರಕಾಶನಕ್ಕಾಗಿ ಧನದ ಸಂಗ್ರಹ ಮತ್ತು ಮುದ್ರಣದ ವ್ಯವಸ್ಥೆ ಮಾಡಿದ **'ಸತ್ಯಾರ್ಥಪ್ರಕಾಶ ಪ್ರಕಟಣಾ ಸಮಿತಿ'**ಯ ಅಧ್ಯಕ್ಷರೂ ಮತ್ತು ಕರ್ನಾಟಕ ಆರ್ಯಪ್ರತಿನಿಧಿ ಸಭೆಯ ಅಧ್ಯಕ್ಷರೂ ಆದ ಶ್ರೀ ಎಂ. ಆರ್ಯಮಿತ್ರ,

ಐ.ಎ.ಎಸ್. (ಸೇವಾ-ನಿವೃತ್ತ) ಅವರಿಗೂ, ಹಾಗೂ ಸಮಿತಿಯ ಎಲ್ಲ ಸದಸ್ಯರಿಗೂ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಈ ಪ್ರಕಾಶನಕ್ಕೆ ನೆರವಾದ ಸಮಸ್ತ ದಾನೀ ಮಹಾನುಭಾವರುಗಳಿಗೂ, ಮತ್ತು ಪ್ರತ್ಯಕ್ಷ, ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲ ಆತ್ಮೀಯ ಧರ್ಮಬಂಧುಗಳಿಗೂ ನಮ್ಮ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಈ ಪ್ರಸ್ತುತ ಗ್ರಂಥದ ಸಂಶೋಧನ, ಪರಿಷ್ಕರಣ ಮತ್ತು ಸಂಪಾದನೆಗಾಗಿ ರಾಮಲಾಲ್ ಕಪೂರ್ ಟ್ರಸ್ಟ್, ಪೋಸ್ಟ್ ಬಹಾಲ್‌ಗಢ್ (ಸೋನೀಪತ್ ಜಿಲ್ಲೆ), ಹರಯಾಣಾ ಅವರಿಂದ ಪ್ರಕಾಶಿತವಾದ **'ಸತ್ಯಾರ್ಥಪ್ರಕಾಶ'** ದ್ವಿತೀಯ ಸಂಸ್ಕರಣ (1975) ರಾಜಸಂಸ್ಕರಣವನ್ನು ಆಧಾರವನ್ನಾಗಿಟ್ಟುಕೊಳ್ಳಲಾಗಿದೆ. ಅದಕ್ಕಾಗಿ ಟ್ರಸ್ಟಿನ ಅಧ್ಯಕ್ಷರಾದ ಮಹಾಮಹೋಪಾಧ್ಯಾಯ ಪಂಡಿತ ಯುಧಿಷ್ಠಿರ ಮೀಮಾಂಸಕರಿಗೆ ಹಾರ್ದಿಕ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಅತ್ಯಲ್ಪ ಅವಧಿಯಲ್ಲೇ ಅಂದವಾಗಿ, ಅತ್ಯುತ್ತಮ ಗುಣಮಟ್ಟದಲ್ಲಿ ಈ ಗ್ರಂಥವನ್ನು ಮುದ್ರಿಸಿದ ರಾಷ್ಟ್ರಪ್ರಶಸ್ತಿ ವಿಜೇತರಾದ ಪ್ರಜಾ ಪ್ರಿಂಟರ್ಸ್. ಪ್ರೈವೇಟ್ ಲಿಮಿಟೆಡ್, ಬಸವನಗುಡಿ, ಬೆಂಗಳೂರು, ಅವರ ಪ್ರಧಾನ ಸಂಚಾಲಕರಾದ ಶ್ರೀ ವೈ. ವಿ. ಕೇಶವಮೂರ್ತಿ ಅವರಿಗೂ, ಕಾರ್ಯಕಾರೀ ಸಂಚಾಲಕರಾದ ಶ್ರೀ ವೈ. ವಿ. ಶ್ರೀನಿವಾಸಮೂರ್ತಿ ಅವರಿಗೂ ಮತ್ತು ಮುದ್ರಣಾಲಯದ ವ್ಯವಸ್ಥಾಪಕರ ಜೊತೆಗೆ ಸಿಬ್ಬಂದಿ ವರ್ಗ, ಇವರೆಲ್ಲರಿಗೂ ನಮ್ಮ ಆತ್ಮೀಯ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥದ ಸಂಪಾದನೆಯ ವಿವರಗಳಿಗಾಗಿ **'ಪೂರ್ವಾರ್ಧ'**ದಲ್ಲಿ ಕೊಟ್ಟಿರುವ **'ಸಂಪಾದಕನ ಮನವಿ'**ಯನ್ನು ಅವಶ್ಯವಾಗಿ ಓದಬೇಕೆಂದು ಓದುಗರಲ್ಲಿ ವಿನಂತಿ ಮಾಡುತ್ತೇವೆ.

**'ಪೂರ್ವಾರ್ಧ'**ದಲ್ಲಿ ಸೃಷ್ಟಿಸಂವತ್ಸರದ ಬಗ್ಗೆ ಕೊಟ್ಟ ಪರಿಶಿಷ್ಟದಂತೆಯೇ, ಈ **'ಉತ್ತರಾರ್ಧ'**ದಲ್ಲಿಯೂ ಕೂಡ, ಐತಿಹಾಸಿಕ ಮಹತ್ವವುಳ್ಳ ಆರು ಪರಿಶಿಷ್ಟಗಳನ್ನು ಓದುಗರ ಜ್ಞಾನಾಭಿವೃದ್ಧಿಗಾಗಿ ಕೊಡಲಾಗಿದೆ.

ಸುಮಾರು 800 ಪುಟಗಳುಳ್ಳ **'ಉತ್ತರಾರ್ಧ'**ದ ಈ ಸಂಸ್ಕರಣದ ಮುದ್ರಣವನ್ನು ತಪ್ಪಿಲ್ಲದಂತೆಯೇ ಮುದ್ರಿತವಾಗಬೇಕೆಂದು ಪ್ರಯತ್ನಿಸಿದ್ದರೂ ಕೂಡ, ದೃಷ್ಟಿದೋಷದಿಂದ ಹಲವು ತಪ್ಪುಗಳಂತೂ ಉಳಿದೇ ಬಿಟ್ಟಿವೆ. ಅವನ್ನು ದಯೆಯಿಟ್ಟು

ಓದುಗರು 'ಶುದ್ಧಾಶುದ್ಧಪತ್ರ'ದಂತೆ ತಿದ್ದುಕೊಂಡೇ, ಓದಬೇಕೆಂದು ಪ್ರಾರ್ಥಿಸುತ್ತೇವೆ.

ಇಷ್ಟೇ ಅಲ್ಲದೇ, ಎಲ್ಲರೂ ಈ ಗ್ರಂಥದ ಎರಡು ಖಂಡಗಳನ್ನೂ ಓದಿ, ಲಾಭ ಪಡೆದಲ್ಲಿ, ನಮ್ಮ ಶ್ರಮ ಸಫಲವಾಯಿತೆಂದು ಭಾವಿಸುತ್ತೇವೆ.

ಆರ್ಯ ಸಮಾಜ, ಶ್ರದ್ಧಾನಂದ ಭವನ,
ವಿಶ್ವೇಶ್ವರಪುರಂ, ಬೆಂಗಳೂರು.
23ನೆಯ ಫೆಬ್ರುವರಿ 1990 (ಋಷಿಬೋಧರಾತ್ರಿ; ಶಾ.ಶ. 1911)

| | | |
|---|---|---|
| ಸುಧಾಮ | ಸತ್ಯವ್ರತ | ಡಾ॥ ಆರ್. ರಾಧಾಕಿಶನ್ ವರ್ಮಾ |
| ಕೋಶಾಧ್ಯಕ್ಷ | ಕಾರ್ಯದರ್ಶಿ | ಅಧ್ಯಕ್ಷ |



**ಈ ಕಲ್ಲುಗಳಲ್ಲಿ ವಿಶೇಷವೇನಿದೆ ?**

ಮಾರ್ಗದಲ್ಲಿ ಶೀತಲಾದೇವಿಯ ಮಂದಿರದ ಬಳಿ ಸ್ತ್ರೀಯರೂ-ಪುರುಷರೂ ನೆರೆದಿದ್ದರು. ಸ್ವಾಮೀಜೀಗಳು—"ಶಿಲ್ಪಿಗಳು ತಮ್ಮ ಕೌಶಲ್ಯದಿಂದ ನಿರ್ಮಿಸುವ ಪದಾರ್ಥಗಳು ಅವರ ಸಾಮರ್ಥ್ಯ ಮತ್ತು ರಚನಾಶಕ್ತಿಯನ್ನಂತೂ ಪ್ರಕಟಗೊಳಿಸುತ್ತವೆ. ಆದರೆ, ಅವುಗಳನ್ನು ಶಿಲ್ಪಿಗಳು ಪೂಜಿಸಬೇಕು ಅಥವಾ ಇತರರು ಪೂಜಿಸಬೇಕು, ಎಂಬ ಯೋಗ್ಯತೆ ಆ ಮೂರ್ತಿಗಳಲ್ಲಿರುವುದಿಲ್ಲ. ಕಲ್ಲುಗಳಿಂದ ಯಾವ ಉದ್ದೇಶ್ಯ, ಕಾರಣ ಮತ್ತು ವಿವಿಧ ಪ್ರಯೋಜನಗಳಿವೆಯೋ, ಅವಕ್ಕಿಂತ ಹೆಚ್ಚು ಕೆಲಸ ತೆಗೆದುಕೊಳ್ಳುವುದು ಉಚಿತವಲ್ಲ. ಈ ಕಲ್ಲುಗಳಲ್ಲಿ ವಿಶೇಷವೇನಿದೆ? ಯಾರಿಗೂ ದುಃಖ ಕೊಡುವ, ಅಥವಾ ಲಾಭ ಕೊಡುವ ಗುಣ ಇವುಗಳಲ್ಲಿಲ್ಲ", ಎಂದರು.

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'
—ಪಂ. ಲೇಖರಾಮ್; ಪುಟ 608]

## ಮನೋಮಂದಿರಗಳಿಂದ ಮೂರ್ತಿಗಳು ಹೊರಗಾಗಬೇಕು

ಫರೂಖಾಬಾದಿನ ಪೇಟೆಯ ಆಳತೆ ನಡೆಯುತ್ತಿತ್ತು. ಅದರ ಬೀದಿಯ ಮಧ್ಯದಲ್ಲಿ ಚಿಕ್ಕ ಗುಡಿಯೊಂದಿತ್ತು. ಅದರಲ್ಲಿ ಜನರು ಧೂಪ-ದೀಪಗಳನ್ನು ಹಚ್ಚುತ್ತಿದ್ದರು. ಮದನಮೋಹನಲಾಲರು ಸ್ವಾಮೀಜೀಯವರ ಬಳಿ ಬಂದು—"ಮಹಾರಾಜ್! ಪಾದರೀ ಸ್ಕಾಟ್ ಮಹಾಶಯರು ನಿಮ್ಮ ಮಾತಿಗೆ ಬಹಳ ಗೌರವ ಕೊಡುತ್ತಾರೆ. ನೀವು ಸಂಕೇತ ಮಾಡಿಬಿಟ್ಟರೆ, ಸಾಕು! ಈ ಚಿಕ್ಕ ಗುಡಿಯು ದಾರಿಯಿಂದ ಅದೃಶ್ಯವಾಗಿ ಬಿಡುವುದು. ಭ್ರಮೆಯ ಈ ಸ್ಥಾನ ದೂರವಾಗಬಲ್ಲದು", ಎಂದರು.

ಸ್ವಾಮೀಜೀಯವರು—"ಇಂತಹ ವಿಪರೀತ ಪಾಠವನ್ನು ನನಗೆ ಕಲಿಸಬೇಡಿ. ಇಂತಹ ಸೊಟ್ಟ-ಪಟ್ಟಾದ ರೀತಿಗಳಿಂದ ಯಾವ ಮತಕ್ಕಾದರೂ ಹಾನಿ ತರುವುದು ಅಧರ್ಮ, ದ್ರೋಹ, ನೀಚತೆ, ಅನೀತಿ ಮತ್ತು ಅನ್ಯಾಯ! ಮುಸಲ್ಮಾನ ಬಾದಶಾಹರು ನೂರಾರು ದೇವಸ್ಥಾನಗಳನ್ನು ವಿಗ್ರಹಗಳೊಂದಿಗೆ ಧೂಳುಧೂಸರಿತ ಮಾಡಿಬಿಟ್ಟರು. ಆದರೂ ಕೂಡ, ಮೂರ್ತಿಪೂಜೆಯನ್ನು ನಿಲ್ಲಿಸುವುದರಲ್ಲಿ ಸಫಲರಾಗಲಿಲ್ಲ. ನಮ್ಮ ಕೆಲಸ ವಂತೂ ಮನುಷ್ಯರ ಮನೋಮಂದಿರಗಳಿಂದ ಮೂರ್ತಿಗಳನ್ನು ತೆಗೆಯುವುದಾಗಿದೆ; ಇಟ್ಟಿಗೆ-ಕಲ್ಲುಗಳಿಂದ ನಿರ್ಮಿತವಾದ ದೇವಾಲಯಗಳನ್ನು ಒಡೆಯುವುದಲ್ಲ.", ಎಂದು ಉತ್ತರ ಕೊಟ್ಟರು.

['ಶ್ರೀಮದ್ದಯಾನಂದ ಪ್ರಕಾಶ'—ಸ್ವಾಮೀ ಸತ್ಯಾನಂದ,
ಸಂಗಠನ ಕಾಂಡ, ಪುಟ 888]



## ಭೀಮಾ ಅಲ್ಲ; ಭೂದೇವ!

ಸ್ವಾಮೀಜೀಗಳು ಒಳ್ಳೆಯ, ಸುಂದರ, ಹಾಗೂ ಸಾರ್ಥಕ ಹೆಸರುಗಳನ್ನಿಡುವ ಶಿಕ್ಷಣವನ್ನು ಕೊಡುತ್ತಿದ್ದರು. ಒಂದು ದಿನ ಸ್ವಾಮೀಜೀಯವರ ಹತ್ತಿರ ಅನೇಕ ಸತ್ಸಂಗಿಗಳು ಕೂತಿದ್ದರು. ಆಗ ಹಲವು ಮಹಿಳೆಯರೂ ಬಂದು ಸೇರಿದರು. ಅವರಲ್ಲಿ ಒಬ್ಬಳ ಬಳಿ ಸಣ್ಣ ಮಗುವೊಂದಿತ್ತು. ಸ್ವಾಮೀಜೀ ಅದರ ಹೆಸರನ್ನು ಕೇಳಿದಾಗ, ಆಕೆ—"ಇವನ ಹೆಸರು ಭೀಮಾ, ಅಂತ", ಎಂದು ಹೇಳಿದಳು.

ಸ್ವಾಮೀಜೀಯವರು—"ಇಂತಹ ಹೆಸರನ್ನಿಡಬೇಡಿರಿ. ಹೆಸರು ಅತ್ಯುತ್ತಮವಾಗಿರ ಬೇಕು. ಇಂದಿನಿಂದ ಈ ಮಗುವಿನ ಹೆಸರನ್ನು 'ಭೂದೇವ', ಎಂದಿಡಿ", ಎಂದು ಹೇಳಿದರು.

['ಶ್ರೀಮದ್ದಯಾನಂದ ಪ್ರಕಾಶ'—ಸ್ವಾಮೀ ಸತ್ಯಾನಂದ,
ಸಂಗಠನ ಕಾಂಡ, ಪುಟ 338]

# ವಿಷಯಾನುಕ್ರಮಣಿಕೆ

## ಪೂರ್ವಾರ್ಧ



## ಉತ್ತರಾರ್ಧ

**ಪರಿಶಿಷ್ಟ**





# ಸಂದರ್ಭ–ಸಂಕೇತ ಸೂಚೀ

| | | |
|---|---|---|
| ಅಥರ್ವ. | = | ಅಥರ್ವವೇದ |
| ಅನು. | = | ಅನುವಾದಕ |
| ಅಯ್ಯೂಬ. | = | ಅಯ್ಯೂಬನ ಪುಸ್ತಕ |
| ಆ. | = | ಆಯತ (Verse) |
| ಇಂ. | = | ಇಂಜೀಲ್ (New Testament of The Bible) |
| ಉತ್ಪತ್ತಿ. | = | ಉತ್ಪತ್ತಿ ಪುಸ್ತಕ (The Book of Genesis) |
| ಋ. | = | ಋಗ್ವೇದ |
| ಚಾರವಾಕ. | = | ಚಾರವಾಕ ದರ್ಶನ |
| ಛಾಂ. ಉ. ; ಛಾಂದೋಗ್ಯ. | = | ಛಾಂದೋಗ್ಯೋಪನಿಷತ್ |
| ತೈತ್ತಿರೀಯ. | = | ತೈತ್ತಿರೀಯೋಪನಿಷತ್ |
| ತೌ. | = | ತೌರೇತ್ (Old Testament of The Bible) |
| ದ.ಸ. | = | ದಯಾನಂದ ಸರಸ್ವತೀ |
| ಮಂ. | = | ಮಂಜಿಲ್ |
| ಮನು. | = | ಮನುಸ್ಮೃತಿ |
| ಮೀಮಾಂಸಾ. | = | ಮೀಮಾಂಸಾ ದರ್ಶನ |
| ಮುಂಡಕ. | = | ಮುಂಡಕೋಪನಿಷತ್ |

| | | |
|---|---|---|
| ಮ್ಯಾಥ್ಯೂ. | = | ಮ್ಯಾಥ್ಯೂರಚಿತ ಇಂಜೀಲ್ |
| ಯಜು. | = | ಯಜುರ್ವೇದ |
| ಯಾತ್ರಾ. | = | ಯಾತ್ರಾ ಪುಸ್ತಕ (The Book of Exodus) |
| ಯು.ಮೀ. | = | ಯುಧಿಷ್ಠಿರ ಮೀಮಾಂಸಕ |
| ಯೋಹನ. | = | ಯೋಹನರಚಿತ ಸುಸಮಾಚಾರ |
| ಲೂಕ್. | = | ಲೂಕ್‌ರಚಿತ ಇಂಜೀಲ್ |
| ವೇದಾಂತ. | = | ವೇದಾಂತ ದರ್ಶನ |
| ಶತಪಥ. | = | ಶತಪಥ ಬ್ರಾಹ್ಮಣ |
| ಸಂ. | = | ಸಂಪಾದಕ |
| ಸಿ. | = | ಸಿಪಾರಾ |
| ಸೂ. | = | ಸೂರತ್ |



## ಸಿಂಹಾಸನ ಗಂಗಾನದಿಯ ಪಾಲು !

ಪಂಡಿತ ಹೀರಾವಲ್ಲಭನು ಸಭಾಮಧ್ಯದಲ್ಲಿ ಚಿಕ್ಕ, ಸುಂದರ ಸಿಂಹಾಸನ ಒಂದರ ಮೇಲೆ ಬಾಲಕೃಷ್ಣ, ಗೋಮತೀ ಚಕ್ರ, ಶಾಲಿಗ್ರಾಮ ಮೊದಲಾದ ಮೂರ್ತಿಗಳನ್ನಿಟ್ಟು, ಸ್ವಾಮೀಜೀ ಮಹಾರಾಜರಿಂದ ಪೂಜೆ ಮಾಡಿಸಿಯೇ ಏಳುತ್ತೇನೆ, ಎಂದು ಪ್ರತಿಜ್ಞೆ ಮಾಡಿದನು. ಆರು ದಿನಗಳ ಪರ್ಯಂತ ಇಬ್ಬರ ನಡುವೆಯೂ ಸಂಸ್ಕೃತದಲ್ಲಿ ಧಾರಾಪ್ರವಾಹವಾಗಿ ಧರ್ಮಚರ್ಚೆ ನಡೆಯಿತು. ಕೊನೆಗೆ, ಪಂಡಿತ ಹೀರಾವಲ್ಲಭನು ಎದ್ದು ನಿಂತುಕೊಂಡು, ಎಲ್ಲರೆದುರಿಗೆ—

"ಸ್ವಾಮೀಜೀ ಮಹಾರಾಜರು ಏನು ಹೇಳುತ್ತಾರೋ, ಅದೆಲ್ಲವೂ ಸತ್ಯವೂ, ಪ್ರಾಮಾಣಿಕವೂ ಆಗಿದೆ.", ಎಂದು ಘೋಷಿಸಿ, ಸಿಂಹಾಸನದೊಡನೆ ಸಮಸ್ತ ಮೂರ್ತಿಗಳನ್ನೊಳಗೊಂಡ ಸರಂಜಾಮನ್ನು ಗಂಗಾನದಿಯಲ್ಲಿ ಎಸೆದು ಬಿಟ್ಟನು!

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'
—ಪಂ. ಲೇಖರಾಮ್; ಪುಟ 78]

## ವೇದವು ಸೂರ್ಯನ ಹಾಗೆ ಮಾನವೋಪಕಾರಿ!

ಮೌಲವೀ ಅಬ್ದುಲ್ ರಹಮಾನ್—ಒಂದುವೇಳೆ, ವೇದವು ಈಶ್ವರಪ್ರಣೀತವಾಗಿದ್ದಿದ್ದರೆ, ಜಗತ್ತಿನ ಮಾನವರಿಗೆಲ್ಲ, ಸೂರ್ಯನ ಹಾಗೆ, ಲಾಭ ಕೊಡುತ್ತಿತ್ತು?

ಸ್ವಾಮೀಜೀ—ಪವಿತ್ರವಾದ ವೇದವು, ಸೂರ್ಯನ ಹಾಗೆಯೇ, ಜಗತ್ತಿನ ಮಾನವರಿಗೆಲ್ಲ ಲಾಭವನ್ನು ಕೊಡುತ್ತಲೇ ಇದೆ! ಸಮಸ್ತ ಧರ್ಮಗ್ರಂಥಗಳ ಮತ್ತು ಸಮಸ್ತ ವಿದ್ಯೆಯ ಪುಸ್ತಕಗಳ ಮೂಲವು ವೇದವೇ ಆಗಿದೆ. ಇದು ಎಲ್ಲಕ್ಕಿಂತ ಮೊದಲಿದೆ. ಆದ್ದರಿಂದಲೇ, ಇತರ ಗ್ರಂಥಗಳಲ್ಲಿರುವ ಶುಭ ವಿಚಾರಗಳು, ಮತ್ತು ಜ್ಞಾನದ ಮಾತುಗಳೆಲ್ಲವೂ ವೇದದಿಂದಲೇ ತೆಗೆದು ಕೊಳ್ಳಲ್ಪಟ್ಟಿವೆ. ಆ ಗ್ರಂಥಗಳಲ್ಲಿನ ಹಾನಿಕಾರಕ ಕಥೆಗಳೆಲ್ಲವೂ ಆ ಗ್ರಂಥಗಳ ರಚನಾಕಾರರ ಕಪೋಲ ಕಲ್ಪನೆ ಮಾತ್ರ! ವೇದದಲ್ಲಿ ಯಾವುದರ ಖಂಡನೆ-ಮಂಡನೆಯೂ ಇಲ್ಲ. ಆದ್ದರಿಂದ, ಅದು ಪಕ್ಷಪಾತರಹಿತವಾಗಿದೆ. ಹೇಗೆ ಸೃಷ್ಟಿ ವಿದ್ಯೆಯ ಅಧ್ಯಯನ ಮಾಡುವವರು ಸೂರ್ಯ ಮೊದಲಾದ ಪದಾರ್ಥಗಳಿಂದ ಹೆಚ್ಚು ಲಾಭ ಹೊಂದುತ್ತಾರೋ, ಹಾಗೆಯೇ ವೇದದ ಅನುಶೀಲನ ಮಾಡುವವರು ವೇದದಿಂದ ಹೆಚ್ಚು ಹೆಚ್ಚು ಉಪಕಾರ ಪಡೆದುಕೊಳ್ಳುವರು.

['ಶ್ರೀಮದ್ದಯಾನಂದ ಪ್ರಕಾಶ'—ಸ್ವಾಮೀ ಸತ್ಯಾನಂದ,
ರಾಜಸ್ಥಾನ ಕಾಂಡ; ಪುಟ 404]



## ಅಧರ್ಮದ ಊಟ ಬೇಡ!

ಉದಯಪುರದ ಆಸ್ಥಾನದಲ್ಲಿ ಮನುಸ್ಮೃತಿಯನ್ನು ಹೇಳಿಕೊಡುತ್ತಿರುವಾಗ ಸ್ವಾಮೀಜೀಯವರು—"ಯಜಮಾನನು ಧರ್ಮಕ್ಕೆ ಅನುಕೂಲವಾದ ಆಜ್ಞೆಯನ್ನು ಕೊಟ್ಟರೆ ಮಾತ್ರ, ಅದನ್ನು ಪಾಲಿಸಬೇಕು. ಅಧರ್ಮದ ಆಜ್ಞೆಯನ್ನಲ್ಲ!", ಎಂದು ಹೇಳಿದರು.

ಠಾಕುರ ಮನೋಹರಸಿಂಹರೆಂಬ ಸರದಾರರು—"ಇವರು ನಮ್ಮ ಉಚ್ಚತರ ಅಧಿಕಾರಿಗಳು. ಅವರ ಆಜ್ಞೆಯನ್ನು ಅಧರ್ಮವೆಂದು ತಿಳಿದು, ನಾವು ಪಾಲಿಸದಿದ್ದರೆ, ಅವರು ನಮ್ಮ ಜಾಗೀರನ್ನೇ ಜಪ್ತಿ ಮಾಡಿಕೊಂಡು ಬಿಟ್ಟಾರು!", ಎಂದು ನಿವೇದಿಸಿದರು.

ಸ್ವಾಮೀಜೀಗಳು—"ಚಿಂತೆಯಿಲ್ಲ! ಧರ್ಮಕ್ಕಾಗಿ ಸಂಪತ್ತು ಅಥವಾ ಜಾಗೀರು ಹೋದರೆ, ಹೋಗಲಿ! ಅಧರ್ಮದ ಕೆಲಸ ಮಾಡಿ, ಅಧರ್ಮದ ಕೂಳನ್ನು ತಿನ್ನುವ ಬದಲು, ಭಿಕ್ಷೆ ಬೇಡಿ, ತಿನ್ನುವುದು ಒಳಿತು", ಎಂದರು.

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'
—ಪಂ. ಲೇಖರಾಮ್ ; ಪುಟ 598]

## ಪರಮಾತ್ಮನ ರಾಜ್ಯದಿಂದ ಹೇಗೆ ಹೊರಹೋಗಬಲ್ಲೆ?

ಒಂದು ದಿನ ಉದಯಪುರಾಧೀಶನಾದ ಮಹಾರಾಣಾ ಸಜ್ಜನಸಿಂಹನು ಏಕಾಂತ ದಲ್ಲಿ ಸ್ವಾಮೀಜೀಗೆ—"ತಾವು ಮೂರ್ತಿಪೂಜೆಯ ಖಂಡನೆಯನ್ನು ಮಾಡಬೇಡಿರಿ! ಈ ರಾಜ್ಯ ಏಕಲಿಂಗೇಶ್ವರ ಮಹಾದೇವನ ಅಧೀನದಲ್ಲಿದೆ. ತಾವು ಅದಕ್ಕೆ ಮಹಂತರಾಗಲು ಸ್ವೀಕರಿಸಿದರೆ, ಲಕ್ಷಾಂತರ ರೂಪಾಯಿಗಳ ಆಸ್ತಿಯ ಮೇಲೆ ತಮ್ಮ ಅಧಿಕಾರವಾಗಿ ಬಿಡುವುದು", ಎಂದು ನಿವೇದನ ಮಾಡಿಕೊಂಡನು.

ಸ್ವಾಮೀಜೀಗಳು ಅತ್ಯಂತ ಕ್ರುದ್ಧರಾಗಿ—"ನೀವು ನನಗೆ ಈ ತುಚ್ಛ ಲೋಭವನ್ನು ಕೊಟ್ಟು, ಮಹಾನ್ ಶಕ್ತಿಶಾಲೀ ಪರಮಾತ್ಮನ ಆಜ್ಞಾಪಾಲನೆಯಿಂದ ನನ್ನನ್ನು ವಿರತ ನನ್ನಾಗಿ ಮಾಡಬಯಸುತ್ತೀರೋ? ಈ ಸಣ್ಣ ರಾಜ್ಯ! ಮತ್ತು ಅದರ ದೇವಸ್ಥಾನ!! ಒಂದೇ ಓಟದಲ್ಲಿ ನಿಮ್ಮ ರಾಜ್ಯದಿಂದ ಹೊರಹೋದೇನು! ಆದರೆ, ನಾನು ಪರಮಾತ್ಮನ ರಾಜ್ಯದಿಂದ ಹೇಗೆ ಹೊರಹೋಗಬಲ್ಲೆ? ವೇದದ ಮತ್ತು ಈಶ್ವರನ ಆಜ್ಞೆಯನ್ನು ಭಂಗ ಮಾಡುವುದಕ್ಕಾಗಿ ನನ್ನನ್ನು ಎಂದಿಗೂ ನೀವು ವಿವಶಗೊಳಿಸಲಾರಿರಿ!", ಎಂದರು.

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'
—ಪಂ. ಲೇಖರಾಮ್; ಪುಟ 600]



## ಹೇಗೆ ಹರಿದ್ವಾರವೋ, ಹಾಗೆ ಅಜಮೇರು!

ಮಕಾರ ಅಲೀ ಬೇಗ್ ಡೆಪ್ಯುಟೀ ಕಮಿಶ್ನರ್—ಈ ಹರಿದ್ವಾರ ಮತ್ತು 'ಹರ ಕೀ ಪೈಡೀ' ಏನು?

ಸ್ವಾಮೀಜೀ—'ಹರ ಕೀ ಪೈಡೀ' ಅಲ್ಲ; 'ಹಾಡ್ ಕೀ ಪೈಡೀ'! (ಹರನ ಸೋಪಾನ ವಲ್ಲ; ಮೂಳೆಗಳ ಸೋಪಾನ). ಏಕೆಂದರೆ, ಇಲ್ಲಿ ಸಾವಿರಾರು ಮೃತಕರ ಮೂಳೆಗಳು ಬೀಳುತ್ತವೆ.

ಅಲೀಬೇಗ್—ಈ ಗಂಗೆಯಲ್ಲಿ ಸ್ನಾನಮಾಡುವುದರ ಮಾಹಾತ್ಮ್ಯವಿದ್ದರೆ; ಹರಿ ದ್ವಾರದಲ್ಲಿ ಸ್ನಾನ ಮಾಡುವುದರಲ್ಲಿ ಏನು ವಿಶೇಷವಿದೆ?

ಸ್ವಾಮೀಜೀ—ಈ ಮಾತನ್ನು ಪಂಡಾಗಳು ನಿರ್ಧರಿಸಿದ್ದಾರೆ. ಗಂಗೆಯಲ್ಲಿ ಎಲ್ಲೆಡೆಯೂ ಸ್ನಾನಮಾಡಿಬಿಡುವುದಾದರೆ, ಪಂಡಾಗಳಿಗೆ ದಕ್ಷಿಣೆ-ದಾನ ಎಲ್ಲಿಂದ ದೊರಕ ಬೇಕು?

ನಿಮ್ಮ ಅಜಮೇರಿನಲ್ಲೂ ಇದೇ ಮಾತಾಗಿದೆ! ಗೋರಿಯ ಸಮೀಪದಲ್ಲಿರು ವವರು—'ಕಾಣಿಕೆಯನ್ನು ಈ ಇಟ್ಟಿಗೆಗಳ ಮೇಲೇ ಅರ್ಪಿಸಿರಿ', ಎನ್ನುತ್ತಾರೆ. ಖ್ವಾಜಾ (ಮೋಇನುದ್ದೀನ್ ಶಾಹ್ ಚಿಸ್ತಿ) ಸಾಹೇಬರು ಈ ಇಟ್ಟಿಗೆಗಳಲ್ಲಿ ಹುದುಗಿಕೊಂಡಿದ್ದಾ ರಲ್ಲವೇ!

ಈ ಮಾತನ್ನು ಕೇಳಿ, ಡೆಪ್ಯುಟೀ ಸಾಹೇಬರು ಮೌನ ತಾಳಿದರು.

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'—
ಪಂ. ಲೇಖರಾಮ್; ಪುಟ 658]

[ಉತ್ತರಾರ್ಧ]



# ಅನುಭೂಮಿಕಾ [೧]

## (ಮಹಾಭಾರತಯುದ್ಧ ವೇದಗಳ ಅಪ್ರವೃತ್ತಿಗೆ ಕಾರಣ)

ಐದು ಸಾವಿರ ವರ್ಷಗಳಿಗೆ ಹಿಂದೆ, ವೇದಧರ್ಮದಿಂದ ಬೇರೆಯಾದ ಯಾವುದೇ ಮತವೂ ಇರಲಿಲ್ಲ, ಎನ್ನುವುದು ಸಿದ್ಧವಾದ ಮಾತಾಗಿದೆ. ಏಕೆಂದರೆ, ವೇದೋಕ್ತವಾದ ಸರ್ವವಿಷಯಗಳೂ ವಿದ್ಯೆಗೆ ಅವಿರುದ್ಧವಾಗಿವೆ.

'ಮಹಾಭಾರತ ಯುದ್ಧ'ವು ವೇದಗಳ ಅಪ್ರವೃತ್ತಿಯಾಗಲು ಕಾರಣವಾಯಿತು. ಇವುಗಳ ಅಪ್ರವೃತ್ತಿಯಿಂದ, ಅವಿದ್ಯೆಯ ಅಂಧಕಾರವು ಭೂಮಂಡಲದಲ್ಲಿ ವಿಸ್ತೃತವಾಗಿ, ಮಾನವರ ಬುದ್ಧಿಯು ಭ್ರಮಯುಕ್ತವಾಗಿ, ಯಾವನ ಮನಸ್ಸಿಗೆ ಹೇಗೆ ತೋರಿತೋ, ಅವನು ಅಂತಹ ಮತವನ್ನು ಪ್ರವರ್ತಿಸಿದನು.*

## ('ನಾಲ್ಕು' ಮತಗಳು ಎಲ್ಲ ವೇದವಿರುದ್ಧ ಮತಗಳಿಗೆ ಮೂಲ)

ಆ ಎಲ್ಲ ಮತಗಳಲ್ಲಿಯೂ ನಾಲ್ಕು ಮತಗಳು—ಎಂದರೆ, ವೇದವಿರುದ್ಧವಾದ 'ಪೌರಾಣಿಕ'. 'ಜೈನ'. 'ಕ್ರೈಸ್ತ', ಹಾಗೂ 'ಇಸ್ಲಾಮೀ', ಮತಗಳು ಎಲ್ಲ ಮತಗಳ ಮೂಲವಾಗಿವೆ. ಅವು ಕ್ರಮಶಃ, ಮೊದಲನೆಯದರ ನಂತರ ಎರಡನೆಯದು, ಮೂರನೆಯದು, ನಾಲ್ಕನೆಯದು, ಈ ಕ್ರಮದಿಂದ ಹೊರಟಿವೆ.

ಈಗ, ಈ ನಾಲ್ಕರ ಶಾಖೆಗಳು ಒಂದು ಸಾವಿರಕ್ಕಿಂತ ಕಡಿಮೆಯಿಲ್ಲ. ಈ ಎಲ್ಲ ಮತವಾದಿಗಳಿಗೂ, ಇವರ ಅನುಯಾಯಿಗಳಿಗೂ, ಮತ್ತು ಬೇರೆ ಎಲ್ಲರಿಗೂ ಪರಸ್ಪರ ಸತ್ಯಾಸತ್ಯದ ಆಲೋಚನೆ ಮಾಡಲು ಹೆಚ್ಚು ಪರಿಶ್ರಮವಾಗದಿರಲಿ, ಎಂದು ಈ ಗ್ರಂಥವನ್ನು† ರಚಿಸಿದ್ದೇನೆ.

## (ಸತ್ಯದ ಮಂಡನ ಮತ್ತು ಅಸತ್ಯದ ಖಂಡನವೇ ಉದ್ದೇಶ್ಯ)

ಇದರಲ್ಲಿ ಯಾವ ಯಾವ ಸತ್ಯಮತದ ಮಂಡನವನ್ನೂ ಮತ್ತು ಅಸತ್ಯದ ಖಂಡನವನ್ನೂ ಬರೆದಿದ್ದೇನೋ, ಅದನ್ನು ಎಲ್ಲರಿಗೂ ತಿಳಿಸಿ ಕೊಡುವುದೇ

---

*ವೈದಿಕ ಧರ್ಮದ ಹ್ರಾಸದ ಚಿತ್ರವನ್ನು ಪರಿಶಿಷ್ಟ-೨ರಲ್ಲಿ ತೋರಿಸಲಾಗಿದೆ. — ಸಂ.

†ಎಂದರೆ, 'ಸತ್ಯಾರ್ಥಪ್ರಕಾಶ'-ಉತ್ತರಾರ್ಧ—ಸಂ.

**ಉದ್ದೇಶ್ಯವೆಂದು ತಿಳಿಯಲ್ಪಟ್ಟಿದೆ.** ಈ ವಿಷಯದಲ್ಲಿ, ನನ್ನ ಬುದ್ಧಿ ಹೇಗಿದೆಯೋ, ಮತ್ತು ಈ ನಾಲ್ಕು ಮತಗಳ ಮೂಲ ಗ್ರಂಥಗಳನ್ನು ನೋಡುವುದರಿಂದ ಎಷ್ಟು ಜ್ಞಾನ ಲಭಿಸಿದೆಯೋ, ಅದನ್ನು ಎಲ್ಲರ ಸಮ್ಮುಖದಲ್ಲಿ ನಿವೇದನ ಮಾಡುವುದನ್ನು ನಾನು ಉತ್ತಮವೆಂದು ತಿಳಿದಿದ್ದೇನೆ. **ಏಕೆಂದರೆ, ಗುಪ್ತವಾಗಿ ಹೋದ ವಿಜ್ಞಾನದ ಪ್ರಾಪ್ತಿ ಪುನಃ ಸಹಜವಾಗಿ ಆಗುವುದಿಲ್ಲ.**

ಪಕ್ಷಪಾತವನ್ನು ಬಿಟ್ಟು, ಇದನ್ನು ನೋಡುವುದರಿಂದ, ಸತ್ಯ-ಅಸತ್ಯ ಮತ ಎಲ್ಲರಿಗೂ ವಿದಿತವಾಗಿ ಹೋಗುವುದು. ಆ ಮೇಲೆ, ಎಲ್ಲರಿಗೂ ತಮ್ಮ ತಮ್ಮ ತಿಳಿವಿಗನುಸಾರವಾಗಿ, ಸತ್ಯ ಮತದ ಸ್ವೀಕಾರ ಮಾಡುವುದು, ಮತ್ತು ಅಸತ್ಯ ಮತವನ್ನು ಬಿಟ್ಟು ಬಿಡುವುದು ಸಹಜವಾಗುವುದು.

## (ಹನ್ನೊಂದನೆಯ ಸಮುಲ್ಲಾಸದಲ್ಲಿ ಪೌರಾಣಿಕ ಮತಗಳ ವಿವೇಚನೆ)

ಇವುಗಳಲ್ಲಿ, **ಪುರಾಣಗಳೇ** ಮೊದಲಾದ ಗ್ರಂಥಗಳಿಂದ ಶಾಖಾ-ಶಾಖಾಂತರ ರೂಪವಾಗಿ ಯಾವ ಮತಗಳು **ಆರ್ಯಾವರ್ತ** ದೇಶದಲ್ಲಿ ಹೊರಟಿವೆಯೋ, ಅವುಗಳ ಗುಣ-ದೋಷಗಳು, ಸಂಕ್ಷೇಪವಾಗಿ, **ಈ ಹನ್ನೊಂದನೆಯ ಸಮುಲ್ಲಾಸದಲ್ಲಿ ತೋರಿಸಲ್ಪಡುತ್ತವೆ.**

ನನ್ನ ಈ ಉದ್ಯಮದಿಂದ ಉಪಕಾರವಾಗುವುದೆಂದು ಒಪ್ಪದಿದ್ದರೆ, ಚಿಂತೆಯಿಲ್ಲ; ವಿರೋಧವನ್ನಂತೂ ಮಾಡಬೇಡಿರಿ. ಏಕೆಂದರೆ, **ನನ್ನ ಉದ್ದೇಶ್ಯ ಯಾರಿಗಾದರೂ ಹಾನಿಯನ್ನು ಅಥವಾ ವಿರೋಧವನ್ನು ಮಾಡುವುದಲ್ಲ ; ಆದರೆ, ಸತ್ಯಾ–ಸತ್ಯ ನಿರ್ಣಯವನ್ನು ಮಾಡುವುದು–ಮಾಡಿಸುವುದು ಮಾತ್ರವೇ ಆಗಿದೆ.**

## (ಮಾನವರಿಗೆ ಯೋಗ್ಯವಾದ ಕರ್ತವ್ಯ)

ಇದೇ ರೀತಿ, ಮಾನವರೆಲ್ಲರೂ ನ್ಯಾಯದ ದೃಷ್ಟಿಯಿಂದ ವರ್ತಿಸುವುದು ಅತಿ ಉಚಿತವಾಗಿರುತ್ತದೆ. **ಮಾನವ–ಜನ್ಮ ಪ್ರಾಪ್ತವಾಗುವುದು ಸತ್ಯಾಸತ್ಯ ನಿರ್ಣಯವನ್ನು ಮಾಡುವುದಕ್ಕಾಗಿ–ಮಾಡಿಸುವುದಕ್ಕಾಗಿಯೇ ಹೊರತು, ವಾದ-ವಿವಾದ, ವಿರೋಧಗಳನ್ನು ಮಾಡುವುದಕ್ಕಾಗಿ–ಮಾಡಿಸುವುದಕ್ಕಾಗಿ ಅಲ್ಲ.**

ಇದೇ ಮತ–ಮತಾಂತರಗಳ ವಿವಾದದಿಂದ ಜಗತ್ತಿನಲ್ಲಿ ಏನೇನು ಅನಿಷ್ಟವಾದ ಪರಿಣಾಮಗಳಾಗಿವೆಯೋ, ಆಗುತ್ತಿವೆಯೋ, **ಹಾಗೂ ಆಗಲಿವೆಯೋ,** ಅವುಗಳನ್ನು ಪಕ್ಷಪಾತರಹಿತರಾದ ವಿದ್ವಜ್ಜನರು ತಿಳಿದುಕೊಳ್ಳಬಲ್ಲರು.

ಎಂದಿನವರೆಗೆ ಈ ಮಾನವಜಾತಿಯೊಳಗಿನಿಂದ, ಪರಸ್ಪರ ಮಿಥ್ಯಾ ಮತ-ಮತಾಂತರಗಳ ವಿರುದ್ಧವಾದವು ಬಿಟ್ಟು ಹೋಗದೋ, ಅಂದಿನವರೆಗೆ ಅನ್ಯೋಽನ್ಯರಿಗೆ ಆನಂದ ಉಂಟಾಗುವುದಿಲ್ಲ.

**(ಸದ್ಯಃ-ಐಕಮತ್ಯವುಂಟಾಗುವ ಉಪಾಯ)**

**ಒಂದು ವೇಳೆ, ನಾವೆಲ್ಲ ಮಾನವರು, ಮತ್ತು ವಿಶೇಷತಃ ವಿದ್ವಜ್ಜನರು, ಈರ್ಷ್ಯಾ-ದ್ವೇಷಗಳನ್ನು ಬಿಟ್ಟು, ಸತ್ಯಾಸತ್ಯ ನಿರ್ಣಯವನ್ನು ಮಾಡಿ, ಸತ್ಯದ ಸ್ವೀಕಾರವನ್ನೂ ಮತ್ತು ಅಸತ್ಯದ ತ್ಯಾಗವನ್ನೂ ಮಾಡಲು-ಮಾಡಿಸಲು ಬಯಸುವೆವಾದರೆ, ನಮಗೆ ಈ ವಿಷಯ ಅಸಾಧ್ಯವಲ್ಲ.**

**ಈ [ಮತಾನುಯಾಯೀ] ವಿದ್ವಾಂಸರ ವಿರೋಧವೇ ಎಲ್ಲರನ್ನೂ ವಿರೋಧದ ಜಾಲದಲ್ಲಿ ಸಿಕ್ಕಿಸಿಟ್ಟಿದೆ, ಎನ್ನುವುದು ನಿಶ್ಚಯವಾಗಿದೆ.** ಈ ಜನರು ತಮ್ಮ ಸ್ವಾರ್ಥದಲ್ಲಿ ಸಿಕ್ಕಿ ಬೀಳದೇ, ಸರ್ವರ ಉಪಕಾರವನ್ನು ಸಾಧಿಸಲಪೇಕ್ಷಿಸಿದರೆ, **ಈಗಲೇ, ಐಕಮತ್ಯ ಉಂಟಾದೀತು !**

ಇದನ್ನು ಸಾಧಿಸುವ ಯುಕ್ತಿಯನ್ನು ಈ ಗ್ರಂಥದ ಸಮಾಪ್ತಿ*ಯಲ್ಲಿ ಬರೆಯುವೆವು.

**ಸರ್ವಶಕ್ತಿಮಾನ್ ಪರಮಾತ್ಮನು ಒಂದು ಮತದಲ್ಲಿ ಪ್ರವೃತ್ತರಾಗುವ ಉತ್ಸಾಹವನ್ನು ಎಲ್ಲ ಮಾನವರ ಆತ್ಮಗಳಲ್ಲಿಯೂ ಪ್ರಕಾಶಿತವಾಗಿ ಮಾಡಲಿ !**

**ಅಲಮತಿವಿಸ್ತರೇಣ ವಿಪಶ್ಚಿದ್ವರಶಿರೋಮಣಿಷು ॥**



*ಎಂದರೆ, 'ಸ್ವಮಂತವ್ಯಾಮಂತವ್ಯಪ್ರಕಾಶ'ದಲ್ಲಿ.—ಯು.ಮೀ.

## ಉತ್ತರಾರ್ಧಃ

# ಅಥೈಕಾದಶಸಮುಲ್ಲಾಸಾರಂಭಃ

## ಅಥಾಽಽರ್ಯಾವರ್ತೀಯಮತಖಂಡನಮಂಡನೇ ವಿಧಾಸ್ಯಾಮಃ

ಈಗ ಆರ್ಯಾವರ್ತ ದೇಶದಲ್ಲಿ ವಾಸಮಾಡುವ ಆರ್ಯಜನರ ಮತಗಳ ಖಂಡನ–ಮಂಡನದ ವಿಧಾನವನ್ನು ನಿರೂಪಿಸುವೆವು.

### (ಭಾರತವು ಸ್ವರ್ಣಭೂಮಿ)

**ಈ ಆರ್ಯಾವರ್ತ ದೇಶವು, ಭೂಮಂಡಲದಲ್ಲಿ ತನಗೆ ಸಾಟಿಯಾದ ಬೇರಾವ ದೇಶವೂ ಇಲ್ಲದಂತಹುದಾಗಿದೆ, ಆದುದರಿಂದ, ಈ ಭೂಮಿಗೆ 'ಸ್ವರ್ಣಭೂಮಿ' ಎಂದು ಹೆಸರಾಗಿದೆ.** ಏಕೆಂದರೆ, ಇದೇ ಸುವರ್ಣ ಮೊದಲಾದ ರತ್ನಗಳನ್ನು ಉತ್ಪನ್ನ ಮಾಡುತ್ತದೆ. ಇವೇ ಕಾರಣದಿಂದ, **ಸೃಷ್ಟಿಯ ಆರಂಭದಲ್ಲಿ** ಇದೇ ದೇಶಕ್ಕೆ ಬಂದು ಆರ್ಯಜನರು ನೆಲೆಸಿದರು.* ಈ ಕಾರಣದಿಂದಲೇ, ನಾವು ಸೃಷ್ಟಿವಿಷಯದಲ್ಲಿ **ಆರ್ಯ** ಎನ್ನುವುದು ಉತ್ತಮ ಪುರುಷರ ಹೆಸರು, ಮತ್ತು ಆರ್ಯರಿಂದ ಬೇರೆ ಯಾವವರ ಹೆಸರು **'ದಸ್ಯು'**, ಎಂದು ಹೇಳಿದ್ದೇವೆ.†

### (ಭಾರತವೇ 'ಸ್ಪರ್ಶಮಣಿ')

ಭೂಮಂಡಲದಲ್ಲಿ ಎಷ್ಟು ದೇಶಗಳಿವೆಯೋ, ಅವೆಲ್ಲಾ ಇದೇ ದೇಶವನ್ನು ಕೊಂಡಾಡುತ್ತವೆ. ಮತ್ತು **'ಸ್ಪರ್ಶಮಣಿ'** ಎಂಬ ಶಿಲೆಯ ವಿಷಯ ಏನು ಕಿವಿಗಳ ಮೇಲೆ ಬೀಳುತ್ತದೋ, ಅದಂತೂ ಸುಳ್ಳು! ಆದರೆ, ಈ ಆರ್ಯಾವರ್ತ ದೇಶವೇ ನಿಜವಾದ ಸ್ಪರ್ಶಮಣಿಯಾಗಿದೆ—ಎಂದು ಆಶಾಭರಿತವಾಗಿ ನೋಡುತ್ತಾರೆ.‡ ಎಂದರೆ,

---

*'ಸೃಷ್ಟಿಯ ಆರಂಭದಲ್ಲಿ' ಎಂಬ ಮಾತನ್ನು ಗಮನಿಸಿ. 'ತ್ರಿವಿಷ್ಟಪ' ದಿಂದ ಭಾರತಕ್ಕೆ ಬಂದು ನೆಲಸಿದರು. **ಪುಟ 430ನ್ನು ನೋಡಿ.—ಸಂ.**

†**ಪುಟ 431ನ್ನು ನೋಡಿ—ಸಂ.**

‡ಇದಕ್ಕಾಗಿಯೇ, ಮೊದಲು ಗ್ರೀಕರು, ನಂತರ ಮುಸಲ್ಮಾನರು; ಮತ್ತೆ ಚಂಗೇಜ್ ಖಾನ್, ತೈಮೂರ್ ಲಂಗ್, ನಾದಿರಶಾಹರಂತಹ ದರೋಡೆಕೋರರು; ತದನಂತರ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಷರು ಭಾರತಕ್ಕೆ ಬಂದದು. ಮುಸಲ್ಮಾನರು ಭಾರತದ ಸಂಪತ್ತಿಯನ್ನು ಒಟ್ಟಾಗಿ ದೋಚುವುದರಲ್ಲಿ ನಿಸ್ಸೀಮರೆಂಬುದೂ, ಮತ್ತೆ ಕ್ರಮ-ಕ್ರಮವಾಗಿ ದೋಚುವುದರಲ್ಲಿ ಇಂಗ್ಲಿಷರು ಪ್ರವೀಣರೆಂಬುದೂ ಐತಿಹಾಸಿಕ ತಥ್ಯವಾಗಿದೆ.—ಸಂ.

ಯಾವುದನ್ನು ಕಬ್ಬಿಣದಂತಿರುವ ದರಿದ್ರರಾದ ವಿದೇಶೀಯರು ಸ್ಪರ್ಶ ಮಾಡಿದೊಡನೆಯೋ, ಸುವರ್ಣರಾಗಿ, ಎಂದರೆ ಧನಾಢ್ಯರಾಗಿ ಹೋಗುತ್ತಾರೋ, ಅದು!

## (ಆರ್ಯರ ಸಾರ್ವಭೌಮ ಚಕ್ರವರ್ತೀ ರಾಜ್ಯ)

ಸೃಷ್ಟಿಯಿಂದ ಹಿಡಿದು, ಐದು ಸಾವಿರ ವರ್ಷಗಳ ಪೂರ್ವದವರೆಗೆ ಆರ್ಯರ ಸಾರ್ವಭೌಮ ಚಕ್ರವರ್ತೀ ರಾಜ್ಯ, ಎಂದರೆ, ಭೂಮಂಡಲದಲ್ಲಿ ಸರ್ವೋಪರಿ ಏಕಮಾತ್ರ ರಾಜ್ಯವಿದ್ದಿತು.

ಬೇರೆ ದೇಶದಲ್ಲಿ ಮಾಂಡಲಿಕರು, ಎಂದರೆ ಸಾಮಂತ ರಾಜರುಗಳು ಇರುತ್ತಿದ್ದರು. ಏಕೆಂದರೆ, ಕೌರವ–ಪಾಂಡವರ ಕಾಲದವರೆಗೆ, ಇಲ್ಲಿನ ರಾಜ್ಯ ಮತ್ತು ರಾಜಶಾಸನದಲ್ಲಿ ಸಕಲ ಮಹೀಮಂಡಲದ ರಾಜರುಗಳೂ, ಪ್ರಜೆಗಳೂ ನಡೆದು ಬರುತ್ತಿದ್ದರು. ಏಕೆಂದರೆ, ಯಾವುದು ಸೃಷ್ಟಿಯ ಆದಿಕಾಲದಲ್ಲಿ ರಚಿತವಾಗಿದೆಯೋ, ಆ ಮನುಸ್ಮೃತಿಯ ಪ್ರಮಾಣ ಹೀಗಿದೆ:—

ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।
ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥

[ಮನು:—2.20]

"ಇದೇ ಆರ್ಯಾವರ್ತ ದೇಶದಲ್ಲಿ ಉತ್ಪನ್ನರಾದ ಬ್ರಾಹ್ಮಣರಿಂದ, ಎಂದರೆ ವಿದ್ವಾಂಸರಿಂದ, ಭೂಮಂಡಲದ ಮಾನವರು=ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ದಸ್ಯುಗಳು, ಮ್ಲೇಚ್ಛರು ಮೊದಲಾದವರೆಲ್ಲರೂ ತಮ-ತಮಗೆ ಯೋಗ್ಯವಾದ ವಿದ್ಯಾ–ಚಾರಿತ್ರ್ಯಗಳ ಶಿಕ್ಷಣವನ್ನೂ ಪಡೆಯಬೇಕು. ಮತ್ತು ವಿದ್ಯಾಭ್ಯಾಸವನ್ನೂ ಮಾಡಿಕೊಳ್ಳಬೇಕು", ಎಂದಿರುತ್ತದೆ.

ಮತ್ತು ಮಹಾರಾಜ ಯುಧಿಷ್ಠಿರ ಅವರ ರಾಜಸೂಯಯಾಗದ, ಮತ್ತು ಮಹಾಭಾರತದ ಯುದ್ಧದವರೆಗೆ ಎಲ್ಲ ರಾಜ್ಯಗಳೂ ಇಲ್ಲಿನ ರಾಜ್ಯಕ್ಕೆ ಆಧೀನವಾಗಿದ್ದುವು.

ಆಲಿಸಿರಿ! ಚೀನದ ಭಗದತ್ತ, ಅಮೇರಿಕಾದ ಬಭ್ರುವಾಹನ, ಯೂರೋಪ್ ಖಂಡದ ಬಿಡಾಲಾಕ್ಷ, ಎಂದರೆ ಬೆಕ್ಕಿನದರಂತಹ ಕಣ್ಣುಗಳನ್ನುಳ್ಳವನು, ಯೂನಾನ್ ಎಂದು ನಾವು ನಿರ್ದೇಶಿಸಿರುವ ಯವನ, ಮತ್ತು ಈರಾನಿನ ಶಲ್ಯ ಮೊದಲಾದ ಸಮಸ್ತ ರಾಜರುಗಳೂ 'ರಾಜಸೂಯ'ಯಾಗಕ್ಕೆ ಮತ್ತು 'ಮಹಾಭಾರತ'ದ ಯುದ್ಧಕ್ಕೆ, ಆಜ್ಞಾನುಸಾರವಾಗಿ ಬಂದಿದ್ದರು.

ಯಾವಾಗ ರಘುವಂಶೀಯರು ರಾಜರಾಗಿದ್ದರೋ, ಆಗ **ರಾವಣನೂ*** ಕೂಡ **ಈ ದೇಶಕ್ಕೆ ಅಧೀನನಾಗಿದ್ದನು.** ರಾಮಚಂದ್ರನ ಕಾಲದಲ್ಲಿ ವಿರುದ್ಧನಾಗಿ ಹೋದುದ ರಿಂದ, ಅವನಿಗೆ **ರಾಮಚಂದ್ರನು** ಶಿಕ್ಷೆಯನ್ನು ಕೊಟ್ಟು, ರಾಜ್ಯದಿಂದ ಚ್ಯುತನನ್ನಾಗಿ ಮಾಡಿ, ಅವನ ತಮ್ಮನಾದ ವಿಭೀಷಣನಿಗೆ ರಾಜ್ಯವನ್ನು ಕೊಟ್ಟಿದ್ದನು.

## (ಆರ್ಯರ ಅವನತಿಗೆ ಕಾರಣ)

ಸ್ವಾಯಂಭುವ ರಾಜನಿಂದ ಹಿಡಿದು, ಪಾಂಡವರವರೆಗೆ ಆರ್ಯರ ಚಕ್ರವರ್ತೀ ರಾಜ್ಯವಿದ್ದಿತು. ಅನಂತರ, ಪರಸ್ಪರ ವಿರೋಧದಿಂದ ಹೋರಾಡಿ, ನಾಶವಾಗಿ ಹೋದರು.

**ಏಕೆಂದರೆ, ಪರಮಾತ್ಮನ ಈ ಸೃಷ್ಟಿಯಲ್ಲಿ ದುರಭಿಮಾನಿಗಳೂ, ಅನ್ಯಾಯ ಕಾರಿಗಳೂ, ಅವಿದ್ವಾಂಸರೂ ಆದ ಜನರ ರಾಜ್ಯ ಬಹಳ ದಿನ ನಡೆಯುವುದಿಲ್ಲ. ಮತ್ತು ಯಾವಾಗ ಬಹಳ ಧನವು, ಅಸಂಖ್ಯವಾದ ಉಪಯೋಗಗಳಿಗೆ ಬೇಕಾದುದ ಕ್ಕಿಂತ ಅಧಿಕವಾಗಿರುತ್ತದೋ, ಆಗ ಆಲಸ್ಯ, ಪುರುಷಾರ್ಥರಹಿತತ್ವ, ಈರ್ಷ್ಯೆ, ದ್ವೇಷ, ವಿಷಯಾಸಕ್ತಿ ಮತ್ತು ಪ್ರಮಾದ ಹೆಚ್ಚುವುದು ಈ ಜಗತ್ತಿನ ಸ್ವಾಭಾವಿಕವಾದ ಪ್ರವೃತ್ತಿಯಾಗಿದೆ.** ಇದರಿಂದ, ದೇಶದ ವಿದ್ಯೆ, ಉತ್ತಮ ಶಿಕ್ಷಣಗಳು ನಾಶವಾಗಿ, ದುರ್ಗುಣಗಳೂ, ದುಷ್ಟ ವ್ಯಸನಗಳೂ ಹೆಚ್ಚಾಗಿ ಹೋಗುತ್ತವೆ. ಉದಾಹರಣೆಗಾಗಿ, ಮದ್ಯ-ಮಾಂಸ-ಸೇವನೆ, ಬಾಲ್ಯಾವಸ್ಥೆಯಲ್ಲಿ ವಿವಾಹ ಮತ್ತು ಸ್ವೇಚ್ಛಾಚಾರ ಮೊದಲಾದ ದೋಷಗಳು ಹೆಚ್ಚುತ್ತವೆ.

ಮತ್ತು ಯುದ್ಧ-ವಿಭಾಗದಲ್ಲಿ ಯಾವಾಗ ಯುದ್ಧ-ವಿದ್ಯಾ ಕೌಶಲವೂ, ಮತ್ತು ಸೇನೆಯೂ ಭೂಮಂಡಲದಲ್ಲಿ ಎದುರಿಸಬಲ್ಲವನಾದ ಬೇರೆ ಯಾವನೂ ನಿಲ್ಲ ದಿರುವಷ್ಟು ಸಮೃದ್ಧವಾಗಿ ಹೋಗುವುವೋ, ಆಗ ಆ ಜನರಲ್ಲಿ ಪಕ್ಷಪಾತ-ಅಭಿಮಾನ ಗಳು ವರ್ಧಿಸಿ, ಅನ್ಯಾಯವು ಹೆಚ್ಚಿ ಹೋಗುತ್ತದೆ. ಯಾವಾಗ ಈ ದೋಷಗಳು ಉದ್ಭವಿಸುತ್ತವೋ, ಆಗ **ತಮ್ಮ-ತಮ್ಮಲ್ಲೇ ವಿರೋಧ ಉಂಟಾಗಿ,** [ಧ್ವಂಸ ವಾಗುತ್ತಾರೆ].

ಅಥವಾ ಬೇರೆ ಸಣ್ಣ ಕುಲಗಳಲ್ಲಿ ಅವರಿಗಿಂತ ಹೆಚ್ಚಾಗಿ, ಅವರನ್ನು ಪರಾಜಯ ಗಳಿಸಲು ಸಮರ್ಥನಾದ ಯಾವನಾದರೂ ಸಾಮರ್ಥ್ಯಶಾಲೀ ಪುರುಷನು ಉದಯಿಸು ತ್ತಾನೆ.

---

*ರಾವಣನು ಅತಿ ದೀರ್ಘಜೀವಿಯಾಗಿದ್ದನು. ಅದಕ್ಕೆ ಅವನ ವೈಜ್ಞಾನಿಕ ಉನ್ನತಿಯೇ ಕಾರಣವಾಗಿತ್ತು. ಆದರೆ, ಸೀತಾಪಹರಣದ ಅಪರಾಧದಿಂದ, ಅವನು ಶೀಘ್ರವೇ ಮೃತ್ಯುವಿಗೀಡಾದನು.—ಸಂ.

ಉದಾಹರಣೆಗಾಗಿ, ಮುಸಲ್ಮಾನರ ಚಕ್ರವರ್ತಿತ್ವಕ್ಕೆ ಎದುರಾಗಿ, **ಶಿವಾಜೀ,** ಗೋವಿಂದಸಿಂಹರು ನಿಂತು, ಮುಸಲ್ಮಾನರ ರಾಜ್ಯವನ್ನು ಭಿನ್ನ-ಭಿನ್ನವಾಗಿ ಮಾಡಿ ಬಿಟ್ಟರು !

## (ಪ್ರಾಚೀನ ಕಾಲದ ಕೆಲವು ಚಕ್ರವರ್ತೀ ಆರ್ಯರಾಜರು)

'ಅಥ ಕಿಮೇತೈರ್ವಾ ಪರೇಽನ್ಯೇ ಮಹಾಧನುರ್ಧರಾಶ್ಚಕ್ರವರ್ತಿನಃ ಕೇಚಿತ್ ಸುದ್ಯುಮ್ನ-ಭೂರಿದ್ಯುಮ್ನೇಂದ್ರದ್ಯುಮ್ನ-ಕುವಲಯಾಶ್ವ-ಯೌವನಾಶ್ವ-ವದ್ಧ್ರ್ಯಶ್ವಾಶ್ವಪತಿ- ಶಶಬಿಂದು- ಹರಿಶ್ಚಂದ್ರಾಂಬರೀಷ- ನನಕ್ತು - ಶರ್ಯಾತಿ - ಯಯಾತ್ಯನರಣ್ಯಾಕ್ಷ-ಸೇನಾದಯಃ । ಅಥ ಮರುತ್ತ-ಭರತಪ್ರಭೃತಯೋ ರಾಜಾನಃ ॥

[ಮೈತ್ರ್ಯುಪನಿಷತ್ :-1.4]

ಹೇಗೆ ಇಲ್ಲಿ ಸುದ್ಯುಮ್ನ, ಭೂರಿದ್ಯುಮ್ನ, ಕುವಲಯಾಶ್ವ, ಯೌವನಾಶ್ವ, ವದ್ಧ್ರ್ಯಶ್ವ, ಅಶ್ವಪತಿ, ಶಶಬಿಂದು, ಹರಿಶ್ಚಂದ್ರ, ಅಂಬರೀಷ, ನನಕ್ತು, ಶರ್ಯಾತಿ, ಯಯಾತಿ, ಅನರಣ್ಯ, ಅಕ್ಷಸೇನ, ಮರುತ್ತ ಮತ್ತು ಭರತ ಸಾರ್ವಭೌಮರ= ಸಕಲ ಭೂಮಂಡಲದಲ್ಲಿಯೂ ಪ್ರಸಿದ್ಧರಾದ ಚಕ್ರವರ್ತೀ ರಾಜರುಗಳ ಹೆಸರುಗಳನ್ನು ಬರೆದಿರುವಂತೆಯೇ, ಸ್ವಾಯಂಭುವ ಮೊದಲಾದ ಚಕ್ರವರ್ತೀ ರಾಜರುಗಳ ಹೆಸರುಗಳನ್ನು ಸ್ಪಷ್ಟವಾಗಿ ಮನುಸ್ಮೃತಿ, ಮಹಾಭಾರತ ಮೊದಲಾದ ಗ್ರಂಥಗಳಲ್ಲಿ ಬರೆದಿದ್ದಾರೆ. ಇದನ್ನು ಸುಳ್ಳೆಂದು ವಾದಿಸುವುದು ಅಜ್ಞಾನಿಗಳ ಮತ್ತು ಪಕ್ಷ ಪಾತಿಗಳ ಕೆಲಸವಾಗಿದೆ.

ಈ ಮೊದಲಾದ ಪ್ರಮಾಣಗಳಿಂದ ಸೃಷ್ಟಿಯಿಂದಾರಂಭಿಸಿ, ಮಹಾಭಾರತ [ಕಾಲದ]ವರೆಗೆ ಚಕ್ರವರ್ತೀ ಸಾರ್ವಭೌಮ ರಾಜರು* ಆರ್ಯಕುಲದಲ್ಲಿಯೇ ಆಗಿದ್ದುದು ಸಿದ್ಧವಾಗಿದೆ.

ಈಗ, ಇವರ ಸಂತತಿಯು ಅಭಾಗ್ಯದ ಉದಯವಾಗಿರುವುದರಿಂದ, ರಾಜ್ಯ-ಭ್ರಷ್ಟರಾಗಿ, ಆರ್ಯರು ವಿದೇಶೀಯರ ಪಾದಾಕ್ರಾಂತರಾಗುತ್ತಿದ್ದಾರೆ.

## (ಪ್ರಾಚೀನ ಕಾಲದಲ್ಲಿ ಆಗ್ನೇಯಾದಿ ಅಸ್ತ್ರಗಳ ವಿದ್ಯಮಾನತೆ)

ಪ್ರಶ್ನೆ:—ಯಾವ ಆಗ್ನೇಯಾಸ್ತ್ರ ಮೊದಲಾದುದರ ವಿದ್ಯೆಯನ್ನು ಬರೆದಿದ್ದಾರೋ, ಅವು ಸತ್ಯವಾಗಿವೆಯೋ, ಅಥವಾ ಇಲ್ಲವೋ ? ಮತ್ತು ತೋಪು ಮತ್ತು ಬಂದೂಕುಗಳು ಆ ಕಾಲದಲ್ಲಿದ್ದವೋ, ಅಥವಾ ಇಲ್ಲವೋ ?

---

*ತಮ್ಮ ಸದ್ಗುಣ-ಸಚ್ಚಾರಿತ್ರ್ಯ-ಸತ್ಸಾಮರ್ಥ್ಯಗಳಿಂದ ಸಂಪೂರ್ಣ ಪ್ರಪಂಚದ ಮೇಲೆಯೇ ಆಧಿಪತ್ಯವನ್ನು ಸ್ಥಾಪಿಸಿದವರು.—ಅನು.

**ಉತ್ತರ:**—ಈ ಮಾತು ಸತ್ಯವಾಗಿದೆ. **ಈ ಶಸ್ತ್ರಗಳೂ ಇದ್ದವು!** ಏಕೆಂದರೆ, ಪದಾರ್ಥವಿದ್ಯೆಯಿಂದ* ಈ ಎಲ್ಲಾ ವಿಷಯಗಳ ಸಿದ್ಧಿ ಸಂಭವವಾಗಿರುತ್ತದೆ.

**ಪ್ರಶ್ನೆ:**—ಇವು ದೇವತೆಗಳ ಮಂತ್ರಗಳಿಂದ ಸಿದ್ಧಿಸುತ್ತಿದ್ದವೇನು ?

**ಉತ್ತರ:**—ಇಲ್ಲ! ಯಾವುದರಿಂದ ಅಸ್ತ್ರ–ಶಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರೋ, ಆ ವಿಷಯಗಳೆಲ್ಲವನ್ನೂ "**ಮಂತ್ರ**"ಗಳು, ಎಂದರೆ ಆಲೋಚನೆಗಳಿಂದ, ಆವಿಷ್ಕಾರಗಳನ್ನು ಮಾಡುತ್ತಿದ್ದರು; ಮತ್ತು ಪ್ರಯೋಗಿಸುತ್ತಿದ್ದರು.

ಮತ್ತು ಯಾವುದು ಶಬ್ದಮಯವಾಗಿರುತ್ತದೋ, ಆ **ಮಂತ್ರ**ದಿಂದ ಯಾವ ದ್ರವ್ಯವೂ ಉತ್ಪನ್ನವಾಗಲಾರದು. ಮತ್ತು ಯಾವನಾದರೂ–"ಮಂತ್ರದಿಂದ ಅಗ್ನಿ ಉತ್ಪನ್ನವಾಗುತ್ತದೆ," ಎಂದು ಹೇಳುವುದಾದರೆ, ಆ ಮಂತ್ರದ ಜಪ ಮಾಡುವವನ ಹೃದಯವನ್ನು ಮತ್ತು ನಾಲಿಗೆಯನ್ನು ಆ ಮಂತ್ರ ಭಸ್ಮಮಾಡಿ ಬಿಟ್ಟೀತು !

ಸಾಯಿಸ ಹೊರಟರು ಶತ್ರುವನ್ನು ; ಆದರೆ, ಸತ್ತು ಹೋಗುತ್ತಿದ್ದಾರೆ, ಸ್ವತಃ ತಾವೇ !

ಆದುದರಿಂದ, '**ಮಂತ್ರ**' ಎನ್ನುವುದು 'ಆಲೋಚನೆ'ಯ ಹೆಸರಾಗಿದೆ. ಹೇಗೆ ರಾಜಕಾರ್ಯಗಳ ಆಲೋಚನೆ ಮಾಡುವವನು '**ರಾಜಮಂತ್ರೀ**' ಎನ್ನಿಸಿಕೊಳ್ಳುತ್ತಾನೋ, ಹಾಗೆ, '**ಮಂತ್ರ**', ಎಂದರೆ ಆಲೋಚನೆಯಿಂದ, ಸಮಸ್ತ ಸೃಷ್ಟಿಯ ಪದಾರ್ಥಗಳನ್ನು ಮೊದಲು ತಿಳಿದುಕೊಂಡು, ಮತ್ತು ಆಮೇಲೆ '**ಕ್ರಿಯೆ**'ಯನ್ನು ಮಾಡುವುದರಿಂದ, ಅನೇಕ ವಿಧದ ಪದಾರ್ಥಗಳೂ, ಹಾಗೂ ಕ್ರಿಯಾ**ಕೌಶಲವೂ ಉತ್ಪನ್ನವಾಗುತ್ತವೆ.**

ಯಾವನಾದರೂ ಒಬ್ಬನು ಕಬ್ಬಿಣದ ಬಾಣವನ್ನು ಅಥವಾ ಗೋಳವನ್ನು ನಿರ್ಮಿಸಿ, ಅದರಲ್ಲಿ, ಬೆಂಕಿ ತಗಲುವುದರಿಂದ ವಾಯುವಿನಲ್ಲಿ ಹೊಗೆ ಹರಡಿಕೊಳ್ಳುವಂತಹ, ಅಥವಾ ಸೂರ್ಯನ ಕಿರಣದ, ಇಲ್ಲವೇ ವಾಯುವಿನಲ್ಲಿ ಸ್ಪರ್ಶವಾಗುವುದರಿಂದ, ಬೆಂಕಿ ಹೊತ್ತಿಕೊಳ್ಳುವಂತಹ ಪದಾರ್ಥಗಳನ್ನು ತುಂಬಿಸಿದರೆ, ಅದು **'ಆಗ್ನೇಯಾಸ್ತ್ರ'**-ಎಂಬ ಹೆಸರನ್ನು ಹೊಂದುತ್ತದೆ.

ಇನ್ನೊಬ್ಬನು ಇದನ್ನು ನಿವಾರಿಸಲು ಅಪೇಕ್ಷಿಸಿದರೆ, ಅದರ ಮೇಲೆಯೇ **'ವಾರುಣಾಸ್ತ್ರ'**ವನ್ನು ಪ್ರಯೋಗಿಸಬೇಕು.

---

***ಭೌತಿಕವಿಜ್ಞಾನದಿಂದ—ಅನು.**

ಎಂದರೆ, ಹೇಗೆ ಶತ್ರುವು ತನ್ನ ಶತ್ರುವಿನ ಸೇನೆಯ ಮೇಲೆ **'ಆಗ್ನೇಯಾಸ್ತ್ರ'** ವನ್ನು ಬಿಟ್ಟು, ನಾಶಮಾಡಬಯಸಿದನೋ, ಹಾಗೆಯೇ, ತನ್ನ ಸೇನೆಯ ರಕ್ಷಣೆಗಾಗಿ, ಸೇನಾಪತಿಯು **ವಾರುಣಾಸ್ತ್ರ**ದಿಂದ ಆಗ್ನೇಯಾಸ್ತ್ರವನ್ನು ನಿವಾರಿಸಬೇಕು. ಯಾವುದರ ಹೊಗೆ ವಾಯುವಿನ ಸ್ಪರ್ಶವಾದೊಡನೆಯೇ ಮೋಡವಾಗಿ, ಕೂಡಲೇ ಮಳೆಗರೆಯ ಲಾರಂಭಿಸುವುದೋ, ಹಾಗೂ ಬೆಂಕಿಯನ್ನಾರಿಸಿಬಿಡುವುದೋ, ಅಂತಹ ದ್ರವ್ಯಗಳ ಯೋಗದಿಂದ ಅದು ಸಿದ್ಧವಾಗುತ್ತದೆ.

ಹೀಗೆಯೇ, **'ನಾಗಪಾಶ'**–ಎಂದರೆ, ಶತ್ರುವಿನ ಮೇಲೆ ಬಿಡುವುದರಿಂದ, ಅವನ ಅಂಗಗಳನ್ನು ಸೆಳೆದು, ಕಟ್ಟಿಹಾಕಿಬಿಡುವ ಅಸ್ತ್ರ.

ಹಾಗೆಯೇ, **'ಮೋಹನಾಸ್ತ್ರ'**ವೂ ಒಂದಿರುತ್ತದೆ. ಅಂದರೆ, ಯಾವುದರಲ್ಲಿ ಮಾದಕ ದ್ರವ್ಯ ಸೇರಿದ್ದು, ಹೊಗೆ ತಗುಲಿದೊಡನೆ, ಸಮಸ್ತ ಶತ್ರುಸೈನ್ಯವೂ ನಿದ್ರಾವಶವಾಗುವುದೋ, ಅಥವಾ ಮೂರ್ಛಿತವಾಗುವುದೋ, ಅಂತಹ ಅಸ್ತ್ರವಿರುತ್ತದೆ.

ಇದೇ ರೀತಿ, ಸಕಲ ಶಸ್ತ್ರಾಸ್ತ್ರಗಳೂ ಇರುತ್ತಿದ್ದವು.

ಮತ್ತು ಒಂದು ತಂತಿಯಿಂದ, ಅಥವಾ ಸೀಸೆಯಿಂದ, ಇಲ್ಲವೇ ಮತ್ತಾವುದಾದರೂ ಪದಾರ್ಥದಿಂದ, ವಿದ್ಯುತ್ತನ್ನು ಉತ್ಪನ್ನಮಾಡಿ, ಶತ್ರುಗಳನ್ನು ನಾಶಪಡಿಸುತ್ತಿದ್ದರು. ಅದನ್ನೂ ಕೂಡ **'ಆಗ್ನೇಯಾಸ್ತ್ರ'** ಮತ್ತು **'ಪಾಶುಪತಾಸ್ತ್ರ'** ಎನ್ನುತ್ತಾರೆ.

**'ತೋಪು ಮತ್ತು ಬಂದೂಕು'**–ಈ ಹೆಸರುಗಳು ಬೇರೆ ದೇಶದ ಭಾಷೆಯವಾಗಿವೆ ; ಸಂಸ್ಕೃತ [ಭಾಷೆಯದು] ಮತ್ತು ಆರ್ಯಾವರ್ತೀಯ ಭಾಷೆಯದು ಅಲ್ಲ. ಆದರೆ, ಯಾವುದನ್ನು ವಿದೇಶೀಯ ಜನರು 'ತೋಪು' ಎನ್ನುತ್ತಾರೋ, ಅದರ ಹೆಸರು ಸಂಸ್ಕೃತದಲ್ಲಿ, ಮತ್ತು ಭಾಷೆಯಲ್ಲಿ* **'ಶತಘ್ನೀ'** ಎಂದಾಗಿದೆ ; ಮತ್ತು ಯಾವುದನ್ನು **'ಬಂದೂಕು'** ಎನ್ನುತ್ತಾರೋ, ಅದನ್ನು ಸಂಸ್ಕೃತದಲ್ಲಿ ಮತ್ತು ಆರ್ಯಭಾಷೆಯಲ್ಲಿ† **'ಭುಷುಂಡೀ'** ಎನ್ನುತ್ತಾರೆ.

ಯಾರು ಸಂಸ್ಕೃತ ವಿದ್ಯೆಯನ್ನು ಓದಿಲ್ಲವೋ, ಅವರು ಭ್ರಮದಲ್ಲಿ ಬಿದ್ದು, ಏನೇನೋ ಬರೆಯುತ್ತಾರೆ, ಮತ್ತು ಏನೇನೋ ಒದರಿಕೊಳ್ಳುತ್ತಾರೆ. ಬುದ್ಧಿವಂತರಾದ ಜನರು ಅದನ್ನು ಪ್ರಮಾಣವೆಂದು ಒಪ್ಪಲಾರರು.

---

*ಎಂದರೆ, ಹಿಂದೀ ಮೊದಲಾದ ಭಾರತೀಯ ಭಾಷೆಗಳಲ್ಲಿ.—ಸಂ.

†ಹಿಂದೀ ಭಾಷೆಗೆ ಮಹರ್ಷಿ ದಯಾನಂದರು 'ಆರ್ಯಭಾಷೆ' ಎಂಬ ಹೆಸರನ್ನು ಕೊಟ್ಟಿದ್ದರು.—ಸಂ.

## (ಎಲ್ಲಾ ವಿದ್ಯೆಗಳೂ ಆರ್ಯಾವರ್ತದಿಂದಲೇ ಹರಡಿವೆ)

ಮತ್ತು ಭೂಮಂಡಲದಲ್ಲಿ ಎಷ್ಟು ವಿದ್ಯೆ ಹರಡಿದೆಯೋ, ಅದೆಲ್ಲವೂ ಆರ್ಯಾವರ್ತ ದೇಶದಿಂದ ಈಜಿಪ್ಟಿನವರಿಗೂ, ಅವರಿಂದ ಯೂನಾನಿನವರಿಗೂ, ಅವರಿಂದ ರೋಮಿನವರಿಗೂ, ಅವರಿಂದ ಸಂಪೂರ್ಣ ಯೂರೋಪ್ ಖಂಡದಲ್ಲೂ, ಅವರಿಂದ ಅಮೇರಿಕಾ ಮೊದಲಾದ ದೇಶಗಳಲ್ಲಿಯೂ ಹರಡಿದೆ.

**ಈವರೆಗೆ ಸಂಸ್ಕೃತ ವಿದ್ಯೆಯು ಎಷ್ಟು ಪ್ರಚಾರ ಆರ್ಯಾವರ್ತ ದೇಶದಲ್ಲಿದೆಯೋ, ಅಷ್ಟು ಬೇರೆ ಯಾವ ದೇಶದಲ್ಲಿಯೂ ಇಲ್ಲ.** ಯಾವ ಜನರು—"ಜರ್ಮನೀ ದೇಶದಲ್ಲಿ ಸಂಸ್ಕೃತ ವಿದ್ಯಾಪ್ರಚಾರ ಬಹಳವಾಗಿದೆ; ಮತ್ತು ಎಷ್ಟು ಸಂಸ್ಕೃತವನ್ನು **ಮೋಕ್ಷ ಮೂಲರ್*** ಸಾಹೇಬರು ಓದಿದ್ದಾರೋ, ಅಷ್ಟನ್ನು ಬೇರೆ ಯಾರೂ ಓದಿಲ್ಲ.", ಎಂದು ಹೇಳುತ್ತಾರೋ, ಆ ಮಾತು ಹೇಳುವುದಕ್ಕೆ ಮಾತ್ರ ಅಷ್ಟೇ! ಏಕೆಂದರೆ—

**"ಯಸ್ಮಿನ್ ದೇಶೇ ದ್ರುಮೋ ನಾಸ್ತಿ ತತ್ರೈರಂಡೋಽಪಿ ದ್ರುಮಾಯತೇ."**

ಎಂದರೆ, ಯಾವ ದೇಶದಲ್ಲಿ ಯಾವ ಮರವೂ ಇರುವುದಿಲ್ಲವೋ, ಆ ದೇಶದಲ್ಲಿ 'ಹರಳಿನ ಗಿಡ'ವನ್ನೇ ಮಹಾವೃಕ್ಷವೆಂದು ತಿಳಿಯುತ್ತಾರೆ. ಹಾಗೆಯೇ, ಯೂರೋಪ್ ಖಂಡದಲ್ಲಿ ಸಂಸ್ಕೃತ ವಿದ್ಯೆಯು ಪ್ರಚಾರವಿಲ್ಲದಿರುವುದರಿಂದ, ಜರ್ಮನ್ ಜನರು ಮತ್ತು **ಮೋಕ್ಷಮೂಲರ್** ಸಾಹೇಬರು ಸ್ವಲ್ಪ ಓದಿಕೊಂಡರು; ಅದೇ ಆ ದೇಶಕ್ಕೆ ಬಹಳವಾಗಿದೆ! ಆದರೆ, ಆರ್ಯಾವರ್ತ ದೇಶದ ಕಡೆ ನೋಡಿದರೆ, ಅವರ ಗಣನೆ ಅತ್ಯಲ್ಪವಾಗಿದೆ. ಏಕೆಂದರೆ, ಜರ್ಮನ್ ದೇಶನಿವಾಸಿಯಾದ ಪ್ರಿನ್ಸಿಪಾಲರೊಬ್ಬರ ಪತ್ರದಿಂದ, ಜರ್ಮನೀ ದೇಶದಲ್ಲಿ ಸಂಸ್ಕೃತ ಪತ್ರದ ಅರ್ಥವನ್ನು ಹೇಳುವವರೂ ಕೂಡ ಬಹಳ ಕಡಿಮೆಯಾಗಿದ್ದಾರೆಂದು, ನನಗೆ ತಿಳಿದು ಬಂದಿದೆ.

## ('ಮೋಕ್ಷಮೂಲ'ರ ವೇದಜ್ಞಾನದ ಪರೀಕ್ಷೆ)

ಮತ್ತು ಮೋಕ್ಷಮೂಲರ್ ಸಾಹೇಬರ ಸಂಸ್ಕೃತ ಸಾಹಿತ್ಯವನ್ನೂ ಮತ್ತು ಅಲ್ಪ-ಸ್ವಲ್ಪ ವೇದ-ಭಾಷ್ಯವನ್ನೂ ನೋಡಿ, ಮೋಕ್ಷಮೂಲರ್ ಸಾಹೇಬರು, ಅಲ್ಲಿ-ಇಲ್ಲಿ ಆರ್ಯಾವರ್ತೀಯ ಜನರು ಮಾಡಿರುವ ಟೀಕೆಯನ್ನು ನೋಡಿಕೊಂಡು, ಅಲ್ಪ-ಸ್ವಲ್ಪ ಹೇಗೋ, ಹಾಗೆ ಬರೆದಿದ್ದಾರೆ, ಎಂದು ನನಗೆ ವಿದಿತವಾಗುತ್ತದೆ. ಉದಾಹರಣೆಗೆ—

**"ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿತಸ್ಥುಷಃ ।**
**ರೋಚಂತೇ ರೋಚನಾ ದಿವಿ"॥** [ಋಗ್ವೇದಃ— 1.6.1]

---

*ಮ್ಯಾಕ್ಸ್‌ಮುಲರ್.—ಸಂ.

ಈ ಮಂತ್ರದ ['ಬ್ರಧ್ನಮ್'] ಪದದ ಅರ್ಥವನ್ನು 'ಕುಮಾರೆ'ಗೆ ಅನ್ವಯಿಸಿದ್ದಾರೆ.

ಸಾಯಣಾಚಾರ್ಯರು 'ಸೂರ್ಯ' ಎಂಬ ಯಾವ ಅರ್ಥವನ್ನು ಮಾಡಿದ್ದಾರೋ, ಅದು ಇದಕ್ಕಿಂತ ಎಷ್ಟೋ ಚೆನ್ನಾಗಿದೆ.

ಆದರೆ, ಇದರ ಸರಿಯಾದ ಅರ್ಥ 'ಪರಮಾತ್ಮ' ಎಂದಾಗಿದೆ. ಅದನ್ನು ನಾನು ರಚಿಸಿರುವ **'ಋಗ್ವೇದಾದಿಭಾಷ್ಯ-ಭೂಮಿಕಾದಲ್ಲಿ*** **ನೋಡಿಕೊಳ್ಳಿರಿ.** ಅದರಲ್ಲಿ ಈ ಮಂತ್ರದ ಯಥಾರ್ಥವಾದ ಅರ್ಥವನ್ನು ಮಾಡಿದ್ದೇನೆ.

ಇಷ್ಟರಿಂದ, ಜರ್ಮನೀ ದೇಶದಲ್ಲಿ, ಮತ್ತು ಮೋಕ್ಷಮೂಲರ್ ಸಾಹೇಬರಲ್ಲಿ ಸಂಸ್ಕೃತವಿದ್ಯೆಯ ಪಾಂಡಿತ್ಯವೆಷ್ಟಿದೆ, ಎಂದು ತಿಳಿಯಿರಿ!

**(ಆರ್ಯಾವರ್ತದಿಂದಲೇ ಬೇರೆ ಕಡೆ ವಿದ್ಯೆ ಮತ್ತು ಮತಗಳು ಹರಡಿವೆ)**

ಎಷ್ಟು ವಿದ್ಯೆ, ಹಾಗೂ ಮತಗಳು ಭೂಮಂಡಲದಲ್ಲಿ ಹರಡಿವೆಯೋ, ಅವೆಲ್ಲವೂ ಆರ್ಯಾವರ್ತ ದೇಶದಿಂದಲೇ ಪ್ರಚಾರಿತವಾಗಿವೆ, ಎಂಬುದು ನಿಶ್ಚಯವಾಗಿದೆ.

ನೋಡಿರಿ! ಪ್ಯಾರಿಸ್ ನಗರದ, ಎಂದರೆ ಫ್ರಾನ್ಸ್ ದೇಶದ ನಿವಾಸಿಯಾದ **'ಗೋಲ್ಡ್‌ಸ್ಟಕರ್'**† ಎಂಬ ಸಜ್ಜನರೊಬ್ಬರು, ತಮ್ಮ **'[ದಿ] ಬೈಬಲ್ ಇನ್ ಇಂಡಿಯಾ'**‡ ಎಂಬ ಕೃತಿಯಲ್ಲಿ—

"ಸಮಸ್ತ ವಿದ್ಯೆಗಳ ಮತ್ತು ಒಳಿತುಗಳ ಭಂಡಾರವಾಗಿವೆ, ಈ ಆರ್ಯಾವರ್ತ ದೇಶ. ಮತ್ತು ಸಕಲ ವಿದ್ಯೆಗಳೂ ಮತ್ತು ಮತಗಳೂ ಈ ದೇಶದಿಂದಲೇ ಹರಡಿವೆ."; ಮತ್ತು ಪರಮಾತ್ಮನಲ್ಲಿ ಪ್ರಾರ್ಥಿಸುತ್ತಾರೇನೆಂದರೆ—

"ಓ ಪರಮೇಶ್ವರ! ಪೂರ್ವಕಾಲದಲ್ಲಿ ಆರ್ಯಾವರ್ತದ ದೇಶದ ಉನ್ನತಿ ಹೇಗಿದ್ದಿತೋ, ಹಾಗೆಯೇ ನಮ್ಮ ದೇಶಕ್ಕೂ ಕರುಣಿಸು", ಎಂದು ಬರೆಯುತ್ತಾರೆ. ಆ ಗ್ರಂಥದಲ್ಲಿ ನೋಡಿಕೊಳ್ಳಿರಿ!

---

*'ಉಪಾಸನಾವಿಷಯ' ಪ್ರಕರಣದಲ್ಲಿ.—ಸಂ.

†'ಜೆಕಾಲಿಯಟ್' ಎಂದಿರಬೇಕಿತ್ತು.—ಯು. ಮೀ.

‡ಲಾ ಬೈಬಲ್ ಡನ್ಸ್ ಲಾ ಇಂಡೇ-ಎಂಬ ಫ್ರೆಂಚ್ ಭಾಷೆಯ ಮೂಲಗ್ರಂಥ. ಪ್ರಕಾಶನ ವರ್ಷ 1869—ಭಗವದತ್ತ.

## (ದಾರಾ ಶಿಕೋಹನ ಅಭಿಮತ)

ಮತ್ತು 'ದಾರಾ ಶಿಕೋಹ್'* ಬಾದಶಹನೂ ಕೂಡ—'ಪೂರ್ಣವಿದ್ಯೆ ಹೇಗೆ ಸಂಸ್ಕೃತದಲ್ಲಿದೆಯೋ, ಹಾಗೆ ಬೇರೆ ಯಾವ ಭಾಷೆಯಲ್ಲಿಯೂ ಇಲ್ಲ', ಎಂದೇ ನಿಶ್ಚಯಿಸಿದ್ದನು. ಉಪನಿಷತ್ತುಗಳ ಭಾಷಾಂತರದಲ್ಲಿ† ಅವನು—"ನಾನು ಅರಬ್ಬೀ ಮೊದಲಾದ ಬಹಳ ಭಾಷೆಗಳನ್ನೋದಿದೆ. ಆದರೆ, ಮನಸ್ಸಿನ ಸಂದೇಹ ದೂರವಾಗಿ, ಆನಂದ ಉಂಟಾಗಲಿಲ್ಲ. ಯಾವಾಗ ಸಂಸ್ಕೃತವನ್ನು ನೋಡಿದೆನೋ, ಮತ್ತು ಆಲಿಸಿದೆನೋ, ಆಗ ಸಂದೇಹರಹಿತನಾಗಿ, ನನಗೆ ಮಹದಾನಂದ ಉಂಟಾಗಿದೆ", ಎಂದು ಬರೆಯುತ್ತಾನೆ.

## (ಪ್ರಾಚೀನ ಜ್ಯೋತಿಷಯಂತ್ರ)

ಯಾವುದಕ್ಕೆ ಪೂರ್ಣವಾದ ರಕ್ಷಣೆ ಸಿಕ್ಕದೇ ಹೋದರೂ, ಯಾವುದರಿಂದ ಈಗ ಕೂಡ ಖಗೋಳದ ಬಹಳ ವೃತ್ತಾಂತ ವಿದಿತವಾಗುತ್ತದೋ, ಕಾಶಿಯ "ಮಾನ ಮಂದಿರ" ದಲ್ಲಿರುವ ಆ "ಶಿಶುಮಾರ ಚಕ್ರ" ಎಷ್ಟು ಉತ್ತಮವಾಗಿದೆ, ನೋಡಿರಿ! ಸವಾಯೀ ಜಯಪುರಾಧೀಶರು ಅದನ್ನು ರಕ್ಷಿಸಿಕೊಂಡು, ಭಿನ್ನ-ಭಿನ್ನವಾಗಿರುವುದನ್ನು ಪುನಃ ಕಟ್ಟಿಸಿಕೊಂಡು ಹೋದರೆ, ಬಹಳ ಒಳ್ಳೆಯದಾದೀತು.‡

## (ಮಹಾಭಾರತ ಯುದ್ಧದ ವಿಪರೀತ ಪ್ರಭಾವ)

**ಆದರೆ, ಇಂತಹ ಶಿರೋಮಣಿ ದೇಶಕ್ಕೆ ಮಹಾಭಾರತ ಯುದ್ಧವು ಎಂತಹ ಆಘಾತವನ್ನುಂಟುಮಾಡಿತೆಂದರೆ, ಈಗಿನವರೆಗೂ ಇದು ತನ್ನ ಪೂರ್ವದ ಸ್ಥಿತಿಗೆ ಬಂದಿಲ್ಲ.**

**ಏಕೆಂದರೆ, ಸೋದರನು ಸೋದರನನ್ನು ಕೊಲ್ಲಹತ್ತಿದರೆ, ನಾಶವಾಗುವುದರಲ್ಲಿ ಸಂದೇಹವೇನು ?**

---

*ಔರಂಗಜೇಬ್ ಬಾದಶಾಹನ ಹಿರಿಯ ಅಣ್ಣ.—ಅನು.

†ಈ ಭಾಷಾಂತರದ ಫಾರಸೀ ಹೆಸರು.—'ಸಿರೇ ಅಕಬರ್' ಎಂದರೆ, 'ದೊಡ್ಡ ರಹಸ್ಯ' ಎಂದು.—ಭಗವದ್ದತ್ತ.

‡ಜಯಪುರಾಧೀಶನಾದ ಸವಾಯಿ ಮಾನಸಿಂಹನು, ವಾರಾಣಸೀ, ಉಜ್ಜಯಿನಿ, ಮತ್ತು ಜಯಪುರಗಳಲ್ಲಿ ಜ್ಯೋತಿಷಶಾಸ್ತ್ರೋಪಯೋಗಿ 'ಮಾನಮಂದಿರ'ಗಳನ್ನು ನಿರ್ಮಿಸಿದ್ದನು. ದೆಹಲಿಯ 'ಮಾನಮಂದಿರ'ವು 'ಜಂತರ್ ಮಂತರ್' ಎಂದು ಪ್ರಸಿದ್ಧವಾಗಿದ್ದು ಈಗ ಭಗ್ನಾವಸ್ಥೆಯಲ್ಲಿದೆ.—ಯು. ಮೀ.

ಆದರೆ, ಕರ್ಕ-ಸಂಕ್ರಾಂತಿ ವೃತ್ತದ ಮೇಲೆ ಸ್ಥಿತವಾಗಿರುವ ಉಜ್ಜಯಿನಿಯ ವೇಧಶಾಲೆಯು (Observatory) ಈಗಲೂ ಪ್ರಾಮಾಣಿಕ ಪರೀಕ್ಷಣೆಗಳನ್ನು ಕೊಡುತ್ತಿದೆ.—ಸಂ.

**"ವಿನಾಶಕಾಲೇ ವಿಪರೀತಬುದ್ಧಿಃ"***

ಇದು ಯಾವುದೋ ಕವಿಯ ವಚನವಾಗಿದೆ.

ಯಾವಾಗ ನಾಶವಾಗುವ ಸಮಯ ಹತ್ತಿರ ಬರುತ್ತದೋ, ಆಗ ಬುದ್ಧಿ ತಲೆಕೆಳಗಾಗಿ, ತಲೆಕೆಳಗಾದ ಕಾರ್ಯಗಳನ್ನೇ ಮಾಡುತ್ತಾರೆ. ಯಾರಾದರೂ ಅವರಿಗೆ ಯುಕ್ತವಾದುವನ್ನು ತಿಳಿಸಿದರೆ, ಅದನ್ನು ತಲೆಕೆಳಗಾಗಿಯೇ ಅಂಗೀಕರಿಸುತ್ತಾರೆ. ಮತ್ತು ತಲೆಕೆಳಗಾದುದನ್ನು ಬೋಧಿಸಿದರೆ, ಅದನ್ನೇ ಯುಕ್ತವಾದುದೆಂದು ಭಾವಿಸುತ್ತಾರೆ.

ಯಾವಾಗ ದೊಡ್ಡ ದೊಡ್ಡ ವಿದ್ವಾಂಸರೂ, ರಾಜರುಗಳೂ, ಮಹಾರಾಜರುಗಳೂ ಋಷಿ-ಮಹರ್ಷಿಜನರೂ ಮಹಾಭಾರತ ಯುದ್ಧದಲ್ಲಿ ಬಹಳವಾಗಿ ಕೊಲ್ಲಲ್ಪಟ್ಟರೋ, ಮತ್ತು ಬಹು ಮಂದಿ ಮೃತರಾದರೋ,ಆಗ ವಿದ್ಯೆಯ ಮತ್ತು ವೇದೋಕ್ತ ಧರ್ಮದ ಪ್ರಚಾರ ಧ್ವಸ್ತವಾಗುತ್ತಾ ನಡೆಯಿತು. ಈರ್ಷ್ಯೆ, ದ್ವೇಷ, ಅಭಿಮಾನಗಳನ್ನು ಪರಸ್ಪರ ಮಾಡತೊಡಗಿದರು. ಯಾವನು ಬಲಶಾಲಿಯಾಗಿದ್ದನೋ, ಅವನು ದೇಶವನ್ನು ಅದುಮಿ ರಾಜನಾಗಿ ಕುಳಿತುಬಿಟ್ಟನು. **ಹಾಗೆಯೇ,ಆರ್ಯಾವರ್ತ ದೇಶದಲ್ಲಿ ಎಲ್ಲೆಡೆಯೂ ತುಂಡು–ತುಂಡಾಗಿ ರಾಜ್ಯಗಳು ತಲೆಯೆತ್ತಿದುವು. ಇನ್ನು ದ್ವೀಪ–ದ್ವೀಪಾಂತರಗಳ ವ್ಯವಸ್ಥೆಯನ್ನು ಯಾವನು ಮಾಡಬೇಕು ?**

## (ವಿದ್ಯೆಯ ಅಭಾವದಿಂದ, ಹೆಸರಿಗೆ ಮಾತ್ರ ಬ್ರಾಹ್ಮಣರಾದವರ ಸ್ವಾರ್ಥಸಾಧನೆ)

ಯಾವಾಗ ಬ್ರಾಹ್ಮಣರುಗಳೇ ವಿದ್ಯಾಹೀನರಾದರೋ, ಆಗ ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಅವಿದ್ವಾಂಸರಾಗುವುದರ ಕಥೆಯನ್ನು ಹೇಳುವುದಾದರೂ ಏನಿದೆ! ಪರಂಪರೆಯಿಂದ ವೇದಗಳೇ ಮೊದಲಾದ ಶಾಸ್ತ್ರಗಳ ಅರ್ಥಸಹಿತ ಅಧ್ಯಾಪನದ ಯಾವ ಪ್ರಚಾರವಿತ್ತೋ, ಅದೂ ಕೂಡ ಕೈಬಿಟ್ಟು ಹೋಯಿತು. ಕೇವಲ ಜೀವನ ನಿರ್ವಾಹಕ್ಕಾಗಿ ಬ್ರಾಹ್ಮಣರು ಪಾಠವನ್ನು ಮಾತ್ರ ಕಲಿಯುತ್ತಿದ್ದರು.† ಆ ಪಾಠಮಾತ್ರವನ್ನೂ ಕೂಡ, ಕ್ಷತ್ರಿಯರು

---

*ವೃದ್ಧಚಾಣಕ್ಯ:–16.17.—ಅನು.

†ಕೇವಲ ಕುರುಡು ಪಾಠ ಮಾತ್ರ ಕಲಿಯುವುದರಿಂದ–ಕಲಿಸುವುದರಿಂದ, ಜೀವನ ನಿರ್ವಾಹ ಆಗದೆಂದು ಎಲ್ಲರೂ ಬಲ್ಲರು. ಆದುದರಿಂದ, ಮೂರ್ತಿಪೂಜೆ, ಮೃತಕ ಶ್ರಾದ್ಧ, ಮಾಡಿಸುವುದು, ಫಲಿತ ಜ್ಯೋತಿಷ್ಯ ಹೇಳುವುದು ಮೊದಲಾದ ಅವೈದಿಕ ಹಾಗೂ, ಅಬ್ರಾಹ್ಮಣೋಚಿತ ಕರ್ಮಗಳನ್ನು ಬ್ರಾಹ್ಮಣರು ಮಾಡತೊಡಗಿದರು.—ಸಂ.

ಮೊದಲಾದವರಿಗೆ ಕಲಿಸಲಿಲ್ಲ. ಏಕೆಂದರೆ, ಯಾವಾಗ ಅವಿದ್ವಾಂಸರಾದವರು ಗುರುಗಳಾದರೋ, ಆಗ ಛಲ, ಕಪಟ, ಅಧರ್ಮವೂ ಕೂಡ ಅವರಲ್ಲಿ ಹೆಚ್ಚುತ್ತಾ ಹೋದವು.

ಬ್ರಾಹ್ಮಣರು ತಮ್ಮ ಜೀವಿಕಾ-ನಿರ್ವಾಹದ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕೆಂದು ಯೋಚಿಸಿದರು. ಪರ್ಯಾಲೋಚನೆ ಮಾಡಿ, ಇದೇ ನಿರ್ಣಯವನ್ನು ಮಾಡಿ, ಕ್ಷತ್ರಿಯರೇ ಮೊದಲಾದವರಿಗೆ—

"ನಾವೇ ನಿಮ್ಮ ಪೂಜ್ಯ ದೇವರು. ನಮ್ಮ ಸೇವೆಯನ್ನು ಮಾಡದೇ ಹೋದರೆ, ನಿಮಗೆ ಸ್ವರ್ಗ ಅಥವಾ ಮುಕ್ತಿ ಸಿಕ್ಕಲಾರದು. ಅಷ್ಟೇ ಅಲ್ಲ! ನೀವು ನಮ್ಮ ಸೇವೆಯನ್ನು ಮಾಡುವುದಿಲ್ಲವಾದರೆ, ಘೋರವಾದ ನರಕದಲ್ಲಿ ಬೀಳುವಿರಿ.", ಎಂದು ಉಪದೇಶವನ್ನು ಮಾಡಲಾರಂಭಿದರು.

ವೇದಗಳಲ್ಲಿ ಮತ್ತು ಋಷಿ–ಮುನಿಗಳ ಶಾಸ್ತ್ರಗಳಲ್ಲಿ ಯಾವ-ಯಾವ ಪೂರ್ಣ ವಿದ್ವಾಂಸರಾದ ಧಾರ್ಮಿಕರ ಹೆಸರು **'ಬ್ರಾಹ್ಮಣರು'**, ಮತ್ತು **'ಪೂಜನೀಯರು'**, ಎಂದು ಬರೆದಿದ್ದಿತೋ, ಅದನ್ನು ಮೂರ್ಖರೂ, ವಿಷಯಾಸಕ್ತರೂ, ಕಪಟಿಗಳೂ, ಲಂಪಟರೂ ಆದ ತಮಗೆಯೇ ಅನ್ವಯಿಸಿಕೊಂಡರು.

ಅಲ್ಲಾ! ಆಪ್ತ ವಿದ್ವಾಂಸರ ಆ ಲಕ್ಷಣಗಳು ಈ ಮೂರ್ಖರಲ್ಲಿ ಯಾವಾಗ ತಾನೇ ಅನ್ವಯವಾಗಬಲ್ಲವು ?

ಆದರೆ, ಯಾವಾಗ ಕ್ಷತ್ರಿಯರೇ ಮೊದಲಾದ ಯಜಮಾನರುಗಳು ಸಂಸ್ಕೃತ ವಿದ್ಯೆಯಿಂದ ಪೂರ್ಣತಃ ರಹಿತರಾದರೋ, ಆಗ, ಅವರ ಮುಂದೆ ಯಾವ ಯಾವ ಬರಡು ಕತೆಗಳನ್ನು ಬಿತ್ತರಿಸಿದರೋ, ಅವುಗಳನ್ನೆಲ್ಲಾ ಆ ಬಡಪಾಯಿಗಳು ಸರಿಯೆಂದು ಒಪ್ಪಿಕೊಂಡುಬಿಟ್ಟರು.* ಆಗ, ಈ ಹೆಸರಿಗೆ ಮಾತ್ರ ಬ್ರಾಹ್ಮಣರಾದವರ

---

*ಸಂಸ್ಕೃತ ಭಾಷೆಯನ್ನು ಸ್ವತಃ ಕಲಿಯದೇ, ಇತರರ ಉಪದೇಶಗಳನ್ನೇ ಆಲಿಸುತ್ತಾ, ಅಥವಾ ಅನುವಾದಗಳ ಮೇಲೆ ನಿರ್ಭರರಾದ ಭಾರತೀಯರು ಎಷ್ಟು ಭ್ರಾಂತಿಗೆ ಈಡಾಗಿದ್ದಾರೆಂಬುದಕ್ಕೆ ಒಂದು ವಾಲ್ಮೀಕೀಯ ರಾಮಾಯಣದ ಬದಲು ಐವತ್ತಾರು ರಾಮಾಯಣಗಳು ಹುಟ್ಟಿಕೊಂಡಿರುವುದೇ ನಿದರ್ಶನ. ಈ ಐವತ್ತಾರು ರಾಮಾಯಣಗಳು ವಾಲ್ಮೀಕಿ ರಾಮಾಯಣಕ್ಕೂ, ಮತ್ತು ಪರಸ್ಪರವಾಗಿಯೂ, ವಿರುದ್ಧವಾದ ಘಟನೆಗಳಿಂದ ಕೂಡಿವೆ.

ಅನುವಾದದಿಂದ, ಉತ್ಪನ್ನವಾಗುವಂತಹ ಭ್ರಾಂತಿಗಾಗಿ ಛಾಂದೋಗ್ಯೋಪನಿಷತ್ತಿನ ಜಾನಶ್ರುತಿ ಎಂಬ ರಾಜನ ಕಥಾನಕವನ್ನು ಒಂದು ದೃಷ್ಟಾಂತವಾಗಿ ಕೊಡಬಹುದು—

"ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚ." [ಛಾಂ.ಉ.4.2.5]

→

ಯುಕ್ತಿ ಸಫಲವಾಯಿತು. ಎಲ್ಲರನ್ನೂ ತಮ್ಮ ಬಲೆಯಲ್ಲಿ ಸಿಕ್ಕಿಸಿಕೊಂಡು, ವಶೀಭೂತರನ್ನಾಗಿ ಮಾಡಿಕೊಂಡರು. ಮತ್ತು—

"ಬ್ರಹ್ಮವಾಕ್ಯಂ ಜನಾರ್ದನಃ"*

ಎಂದು ಹೇಳಲಾರಂಭಿಸಿದರು. ಎಂದರೆ, ಬ್ರಾಹ್ಮಣರ ಬಾಯಿಯಿಂದ ಯಾವುದೊಂದು ಮಾತು ಹೊರಡುತ್ತದೋ, ಅದು ಸಾಕ್ಷಾತ್ ಭಗವಂತನ ಮುಖದಿಂದ ಹೊರಟುದೇ ಸರಿ, ಎಂದು ತಿಳಿಯಿರಿ!

ಯಾವಾಗ ಕ್ಷತ್ರಿಯರೇ, ಮೊದಲಾದ ವರ್ಣದವರು–**ಕಣ್ಣಿದ್ದ ಕುರುಡರೂ ; ಹಣದ ಗಂಟಿನಿಂದ ಬಲಿಷ್ಠರೂ ಆದವರು ;** ಎಂದರೆ, ಯಾರ ವಿದ್ಯೆಯ ಆಂತರಿಕ ನೇತ್ರ ಮುಚ್ಚಿ ಹೋಯಿತೋ, ಮತ್ತು ಯಾರ ಬಳಿ ಹಣ ಮಾತ್ರ ಪುಷ್ಕಳವಾಗಿದ್ದಿತೋ, ಅಂತಹವರು ಶಿಷ್ಯರಾಗಿ ಸಿಕ್ಕಿದರೋ, ಆಗ ಈ ನಿರರ್ಥಕರಾದ ಬ್ರಾಹ್ಮಣ–ನಾಮಧಾರಿಗಳಿಗೆ ವಿಷಯಾನಂದದ ಉದ್ಯಾನವೇ ಲಭಿಸಿಬಿಟ್ಟಿತು ! ಆ ಜನರು—

"ಪೃಥಿವಿಯಲ್ಲಿ ಯಾವ ಯಾವ ಉತ್ತಮ ಪದಾರ್ಥಗಳಿವೆಯೋ, ಅವೆಲ್ಲವೂ ಬ್ರಾಹ್ಮಣರಿಗಾಗಿಯೇ ಇವೆ.", ಎಂದೂ ಕೂಡ ಪ್ರಸಿದ್ಧಪಡಿಸಿದರು.

ಎಂದರೆ, ಗುಣ-ಕರ್ಮ-ಸ್ವಭಾವಗಳಿಂದ ಬ್ರಾಹ್ಮಣ ಮೊದಲಾದ ವರ್ಣಗಳ ಯಾವ ವ್ಯವಸ್ಥೆಯಿದ್ದಿತೋ, ಅದನ್ನು ನಾಶಪಡಿಸಿ, ಹುಟ್ಟಿನ ಮೂಲದ ಅವಲಂಬನವನ್ನು ಸ್ಥಾಪಿಸಿದರು. ಮತ್ತು ಮೃತನಾದವನವರೆಗಿನ ದಾನವನ್ನೂ ಕೂಡ ಯಜಮಾನರುಗಳಿಂದ ತೆಗೆದುಕೊಳ್ಳಲಾರಂಭಿಸಿದರು !

ಹೇಗೆ ತಮಗೆ ಇಚ್ಛೆಯಾಯಿತೋ, ಹಾಗೆ ಮಾಡುತ್ತಾ ಹೋದರು.

"ನಾವು ಭೂದೇವರು. ನಮ್ಮ ಸೇವೆಯನ್ನು ಮಾಡದೇ, ದೇವಲೋಕವು ಯಾವನಿಗೂ ಸಿಕ್ಕಲಾರದು.", ಎನ್ನುವವರೆಗೂ ಮುನ್ನಡೆದರು. ಇವರನ್ನು—

---

→ ಎಂಬುದರ ಅರ್ಥ—'ಅವಳ ಮುಖವನ್ನು ಎತ್ತಿ ಹಿಡಿದು, ಹೇಳತೊಡಗಿದನು', ಎಂದಾಗುವುದು. ಕೆಲವು ಅನುವಾದಕರು—'ಆ ಸ್ತ್ರೀಯ ಮುಖವನ್ನು ಪ್ರೇಮದಿಂದ ಚುಂಬಿಸುತ್ತಾ ಹೇಳತೊಡಗಿದನು', ಎಂದು ಭಾಷಾಂತರ ಮಾಡಿದ್ದಾರೆ. ['ಏಕಾದಶೋಪನಿಷತ್-ಸಂಗ್ರಹ'–'ಸ್ವಾಮೀ ಸತ್ಯಾನಂದ]'

ಆದ್ದರಿಂದಲೇ, ಮಹರ್ಷಿ ದಯಾನಂದರು ತಮ್ಮ ವೇದಭಾಷ್ಯದ ಇಂಗ್ಲಿಷ್ ಅನುವಾದಕ್ಕೆ ಅನುಮತಿ ಕೊಡಲಿಲ್ಲ.—ಸಂ.

*ಬ್ರಾಹ್ಮಣವಾಕ್ಯ ಭಗವದ್ವಾಕ್ಯ-ಎಂಬ ಪಾಮರೋಕ್ತಿ.—ಅನು.

"ತಾವು ಯಾವ ಲೋಕಕ್ಕೆ ದಯಮಾಡಿಸುವಿರಿ ? ತಮ್ಮ ಕರ್ಮಗಳಂತೂ ಘೋರ ನರಕದ ಭೋಗಕ್ಕೆ ತಕ್ಕವಾಗಿವೆ. ಕೃಮಿ, ಕೀಟ, ಪತಂಗ ಮೊದಲಾದುವಾಗಿ ಜನಿಸುವಿರೇನೋ ?", ಎಂದು ಕೇಳಬೇಕು.

ಆಗಲಾದರೋ, ಮಹಾಕ್ರುದ್ಧರಾಗಿ—

"ನಾವು ಶಾಪ ಹಾಕಿದರೆ, ನಿಮ್ಮ ನಾಶವಾಗಿ ಹೋಗುವುದು. ಏಕೆಂದರೆ—

**'ಬ್ರಹ್ಮದ್ರೋಹೀ ವಿನಶ್ಯತಿ'.**

ಎಂದರೆ, ಯಾವನು ಬ್ರಾಹ್ಮಣರಿಗೆ ದ್ರೋಹ ಮಾಡುತ್ತಾನೋ, ಅವನು ನಾಶವಾಗಿ ಹೋಗುತ್ತಾನೆ, ಎಂದು ಬರೆದಿದೆ", ಎಂದು ಹೇಳುತ್ತಾರೆ.

ಹೌದು ! ಯಾವನು ಪೂರ್ಣ ವೇದಗಳನ್ನೂ ಮತ್ತು ಪರಮಾತ್ಮನನ್ನೂ ತಿಳಿದಿರುವ, ಧರ್ಮಾತ್ಮರೂ, ಸರ್ವಜಗತ್ತಿಗೂ ಉಪಕಾರಿಗಳೂ ಆದ ಪುರುಷರೊಂದಿಗೆ ದ್ವೇಷವನ್ನು ಸಾಧಿಸುವನೋ, ಅವನು ಅವಶ್ಯವಾಗಿಯೂ ನಾಶಹೊಂದುವನು, ಎಂಬುದೇನೋ ನಿಜವೇ ! **ಆದರೆ, ಯಾರು ಬ್ರಾಹ್ಮಣರಲ್ಲವೋ, ಅವರಿಗೆ ಬ್ರಾಹ್ಮಣರೆಂಬ ಹೆಸರೂ ಸಲ್ಲದು; ಅವರ ಸೇವೆಯನ್ನು ಮಾಡುವುದೂ, ಯೋಗ್ಯವಲ್ಲ.**

**(ಹೆಸರು-ಮಾತ್ರದ ಬ್ರಾಹ್ಮಣರೇ 'ಪೋಪ'ರು !)**

**ಪ್ರಶ್ನೆ:**—ಹಾಗಾದರೆ, ನಾವು ಯಾರು ?

**ಉತ್ತರ:**—ನೀವು **'ಪೋಪ'**ರಾಗಿದ್ದೀರಿ!

**ಪ್ರಶ್ನೆ:**—ಯಾವನನ್ನು **'ಪೋಪ'**ನೆಂದು ಕರೆಯುತ್ತಾರೆ ?

**ಉತ್ತರ:**—ಇದರ ಸಂಕೇತ ರೋಮನ್* ಭಾಷೆಯಲ್ಲೇನೋ ಹಿರಿಯನು ; ಮತ್ತು ತಂದೆಯ ಹೆಸರು **'ಪೋಪ್'**-ಎಂದಿದೆ.

ಆದರೆ, ಛಲ-ಕಪಟಗಳಿಂದ ಅನ್ಯರನ್ನು ವಂಚಿಸಿ, ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವವನನ್ನು **'ಪೋಪ್'** ಎನ್ನುತ್ತಾರೆ.



*ಲ್ಯಾಟಿನ್—ಅನು.

## (ಬ್ರಾಹ್ಮಣರು ಮತ್ತು ಸಾಧುಗಳು ಜನ್ಮದಿಂದಲ್ಲ ; ಗುಣ-ಕರ್ಮ ಸ್ವಭಾವದಿಂದಾಗುತ್ತಾರೆ)

**ಪ್ರಶ್ನೆ**:—ನಾವೇನೋ ಬ್ರಾಹ್ಮಣರು ಮತ್ತು ಸಾಧುಗಳಾಗಿದ್ದೇವೆ. ಏಕೆಂದರೆ, ನಮ್ಮ ತಂದೆ ಬ್ರಾಹ್ಮಣನಾಗಿದ್ದನು ; ನಮ್ಮ ತಾಯಿ ಬ್ರಾಹ್ಮಣಿಯಾಗಿದ್ದಳು. ಮತ್ತು ನಾವು ಇಂತಹ ಸಾಧುವಿನ ಶಿಷ್ಯರಾಗಿದ್ದೇವೆ!

**ಉತ್ತರ**:—ಇದು ಸತ್ಯ. ಆದರೆ, ಕೇಳು ಸೋದರನೇ! ತಂದೆ-ತಾಯಿಗಳು ಬ್ರಾಹ್ಮಣ-ಬ್ರಾಹ್ಮಣಿಗಳಾಗಿರುವುದರಿಂದ, ಮತ್ತು ಯಾವನಾದರೂ ಸಾಧುವಿನ ಶಿಷ್ಯ ನಾಗಿರುವುದರಿಂದ, ನೀನು ಬ್ರಾಹ್ಮಣ, ಹಾಗೂ ಸಾಧುವಾಗಲಾರೆ. ಆದರೆ, ಯಾರು ಪರೋಪಕಾರಿಗಳಾಗಿರುತ್ತಾರೋ, ಅವರು, ತಮ್ಮ ಉತ್ತಮವಾದ ಗುಣ-ಕರ್ಮ-ಸ್ವಭಾವದಿಂದಲೇ ಬ್ರಾಹ್ಮಣರು ಮತ್ತು ಸಾಧುಗಳು ಆಗಿರುತ್ತಾರೆ.

## (ರೋಮಿನ ಪೋಪರ ವರ್ಣನೆ)

ರೋಮ್ ನಗರದ **ಪೋಪ್** ಅವರು ತಮ್ಮ ಶಿಷ್ಯರಿಗೆ—

"ನೀವು ನಿಮ್ಮ ಪಾಪಗಳನ್ನು ನಮ್ಮ ಮುಂದೆ ಹೇಳಿಕೊಳ್ಳುವಿರಾದರೆ, ನಾವು ಕ್ಷಮಿಸಿಬಿಡುತ್ತೇವೆ. ನಮ್ಮ ಸೇವೆಯನ್ನು ಮಾಡದೇ, ಮತ್ತು ನಮ್ಮ ಅಪ್ಪಣೆ ಯಿಲ್ಲದೇ ಯಾವನೂ ಸ್ವರ್ಗಕ್ಕೆ ಹೋಗಲಾರನು. ನೀವು ಸ್ವರ್ಗಕ್ಕೆ ಹೋಗಲು ಬಯಸುವಿರಾದರೆ, ನಮ್ಮ ಬಳಿ ಎಷ್ಟು ರೂಪಾಯಿಗಳನ್ನು ಶೇಖರಿಸಿಡುವಿರೋ, ಅಷ್ಟರದೇ ಸಾಮಗ್ರಿ ನಿಮಗೆ ಸ್ವರ್ಗದಲ್ಲಿ ಸಿಕ್ಕುವುದು", ಎಂದು ಹೇಳುತ್ತಿದ್ದ ರೆಂದು [ನಾವು] ಕೇಳಿದ್ದೇವೆ.

ಇಂತಹ ಮಾತುಗಳನ್ನು ಕೇಳಿ, ಯಾರೋ, **'ಕಣ್ಣಿದ್ದ ಕುರುಡರೂ, ಹಣದ ಗಂಟಿನಿಂದ ಬಲಿಷ್ಠರೂ'** ಆದ ಜನರು ಸ್ವರ್ಗಕ್ಕೆ ಹೋಗಲು ಬಯಸಿ, ಪೋಪರಿಗೆ ಬೇಕಾದಷ್ಟು ರೂಪಾಯಿಗಳನ್ನು ಕೊಡುತ್ತಿದ್ದರು. ಆಗ, ಆ ಪೋಪ್ ಮಹಾ ಶಯರು ಏಸು ಮತ್ತು ಮೇರಿಯ ಪ್ರತಿಮೆಗಳ ಮುಂದೆ ನಿಂತು—

"ಓ ಭಗವತ್ಸೇವಕ ಏಸುಪ್ರಸಾದಿ! ಈ ಹೆಸರಿನ ಪುರುಷನು ನಿನ್ನ ಹೆಸರಿನ ಮೇಲೆ ಲಕ್ಷ ರೂಪಾಯಿಗಳನ್ನು ಸ್ವರ್ಗದಲ್ಲಿ ಪ್ರವೇಶಿಸುವುದಕ್ಕಾಗಿ ನಮ್ಮ ಬಳಿ ಮುಡಿಪಾಗಿಟ್ಟಿದ್ದಾನೆ. ಯಾವಾಗ ಅವನು ಸ್ವರ್ಗಕ್ಕೆ ಬರುವನೋ, ಆಗ ನೀನು ನಿನ್ನ ತಂದೆಯ ಸ್ವರ್ಗರಾಜ್ಯದಲ್ಲಿ ಇಪ್ಪತ್ತೈದು ಸಾವಿರ ರೂಪಾಯಿಗಳಲ್ಲಿ ತೋಟ-ತುಡಿಕೆ, ಹಾಗೂ ಕಟ್ಟಡಗಳನ್ನೂ, ಇಪ್ಪತ್ತೈದು ಸಾವಿರಕ್ಕೆ ವಾಹನಗಳು-ಬೇಟೆಗಾರರು, ಮತ್ತು ನೌಕರ-ಚಾಕರರನ್ನೂ, ಇಪ್ಪತ್ತೈದು ಸಾವಿರದಲ್ಲಿ ಭೋಜನ-ಪಾನ ಬಟ್ಟೆ-ಬರೆಗಳನ್ನೂ, ಮತ್ತು ಇಪ್ಪತ್ತೈದು ಸಾವಿರ ರೂಪಾಯಿಗಳನ್ನು

ಜೀವನ ಜಿಪ್ಪವಿಚಿತ್ರರು, ಸೋದರ-ನಂಟರು ಮೊದಲಾದವರ ಮನೋರಂಜನೆಗಾಗಿ ಕೊಡಿಸಿಬಿಡು." ಎಂದು ಕರಾರು ಪತ್ರ ಬರೆದು ಕೊಡುತ್ತಿದ್ದರು.

ಮತ್ತೆ, ಆ ಕರಾರು ಪತ್ರಕ್ಕೆ **ಪೋಪ್ ಮಹಾಶಯರು** ತಮ್ಮ ರುಜು ಹಾಕಿ, ಆ ಕರಾರು ಪತ್ರವನ್ನು ಆ ಪುರುಷನ ಕೈಗೆ ಕೊಟ್ಟು—

"ನೀನು ಯಾವಾಗ ಮೃತನಾಗುವೆಯೋ, ಆಗ ಕರಾರು ಪತ್ರವನ್ನು ಗೋರಿ ಯಲ್ಲಿ ನಿನ್ನ ತಲೆದಿಂಬಿನ ಕಡೆಗಿಟ್ಟು ಬಿಡುವಂತೆ ನಿನ್ನ ಕುಟುಂಬಕ್ಕೆ ಹೇಳಿಬಿಟ್ಟಿರು. ಮತ್ತೆ, ನಿನ್ನನ್ನು ಕರೆದೊಯ್ಯಲು ದೇವತೆಗಳು ಬರುವರು. ಆಗ ನಿನ್ನನ್ನೂ, ಮತ್ತು ನಿನ್ನ ಕರಾರು ಪತ್ರವನ್ನೂ ಸ್ವರ್ಗಕ್ಕೆ ತೆಗೆದುಕೊಂಡು ಹೋಗಿ, ಅದರಲ್ಲಿ ನಮೂದಿಸಿರುವಂತೆ, ಎಲ್ಲಾ ಪದಾರ್ಥಗಳನ್ನೂ ನಿನಗೆ ಕೊಡಿಸಿಬಿಡುವರು," ಎಂದು ಹೇಳುತ್ತಿದ್ದರು.

ಈಗ ನೋಡಿರಿ! ಪೋಪ್ ಮಹಾಶಯರು ಸ್ವರ್ಗದ ಗುತ್ತಿಗೆಯನ್ನು ತೆಗೆದು ಕೊಂಡುಬಿಟ್ಟಂತೆ ಕಾಣುತ್ತದೆ! ಎಂದಿನವರೆಗೆ **ಯೂರೋಪ್ ಖಂಡದಲ್ಲಿ ಮೂರ್ಖತ್ವ ವಿತ್ತೋ, ಅವರೆಗೆ ಮಾತ್ರ ಪೋಪ್ ಮಹಾಶಯರ** ಲೀಲೆ ನಡೆಯುತ್ತಿತ್ತು. ಆದರೆ, ಈಗ ವಿದ್ಯೆ ಹರಡಿರುವುದರಿಂದ, ಪೋಪರ ಸುಳ್ಳು ಲೀಲೆ ಹೆಚ್ಚಾಗಿ ನಡೆಯು ವುದಿಲ್ಲ. ಆದರೆ, ನಿರ್ಮೂಲವೂ ಆಗಿಲ್ಲ.*

## (ಆರ್ಯಾವರ್ತೀಯರಾದ ಛಲೀ-ಕಪಟೀ ಪೋಪರ ಲೀಲೆ)

ಹಾಗೆಯೇ, ಆರ್ಯಾವರ್ತ ದೇಶದಲ್ಲೂ ಪೋಪ್ ಮಹಾಶಯರು ಲಕ್ಷಾಂತರ ಅವತಾರಗಳನ್ನೆತ್ತಿ. ಲೀಲೆಯನ್ನು ಬಿತ್ತರಿಸಿದಂತೆ ಕಾಣುತ್ತದೆ. ಎಂದರೆ, ರಾಜರಿಗೂ ಮತ್ತು ಪ್ರಜೆಗಳಿಗೂ ವಿದ್ಯೆ ಕಲಿಯಲು ಬಿಡದಿರುವುದು, ಸತ್ಪುರುಷರ ಸಂಗಕ್ಕೆ ಅವಕಾಶ ಕೊಡದಿರುವುದು; ಹಗಲಿರುಳೂ ಹಾದಿ ತಪ್ಪಿಸುವುದೊಂದನ್ನು ಬಿಟ್ಟು, ಮತ್ತೆ ಯಾವ ಕೆಲಸವನ್ನೂ ಮಾಡದಿರುವುದು!

ಆದರೆ, ಛಲ-ಕಪಟ ಮೊದಲಾದ ಕುತ್ಸಿತ ವ್ಯವಹಾರಗಳನ್ನು ಯಾರು ಯಾರು ಮಾಡುತ್ತಾರೋ, [ಅವರು] ಅವರೇ ಪೋಪರೆನ್ನಿಸಿಕೊಳ್ಳುತ್ತಾರೆ, ಎಂಬ ಈ ವಿಷಯವನ್ನು ಗಮನದಲ್ಲಿಡಬೇಕು.

ಅವರಲ್ಲಿಯೂ ಯಾರು ಧಾರ್ಮಿಕರೂ, ವಿದ್ವಾಂಸರೂ, ಪರೋಪಕಾರಿಗಳೂ ಆಗಿದ್ದಾರೋ, ಅವರು ನಿಜವಾದ ಬ್ರಾಹ್ಮಣರು ಮತ್ತು ಸಾಧುಗಳು ಆಗಿರುತ್ತಾರೆ.

---

*ಈ ಮಾತು 115 ವರ್ಷಗಳಿಗೆ ಮೊದಲು ಬರೆದುದು. ಆದರೆ, ಈಗಲೂ ನಿಜವಾಗಿಯೇ ಇದೆ.—ಸಂ.

ಈಗ **ಪೋಪ್** ಎಂಬ ಶಬ್ದದಿಂದ, ಅದೇ ಛಲಯುಕ್ತರೂ, ಕಪಟಿಗಳೂ, ಸ್ವಾರ್ಥಿಗಳೂ ಆದ ಜನರನ್ನು, ಎಂದರೆ ಮಾನವರನ್ನು ವಂಚಿಸಿ, ತಮ್ಮ ಸ್ವಾರ್ಥವನ್ನು ಸಾಧಿಸುವವರನ್ನು, ಮಾತ್ರ ಗ್ರಹಿಸಬೇಕು.

ಮತ್ತು 'ಬ್ರಾಹ್ಮಣರು' ಮತ್ತು 'ಸಾಧುಗಳು' ಎಂಬ ಹೆಸರುಗಳಿಂದ ಉತ್ತಮರಾದ ಪುರುಷರನ್ನು ಸ್ವೀಕರಿಸುವುದು ಯೋಗ್ಯವಾಗಿರುತ್ತದೆ.

### (ಉತ್ತಮ ಬ್ರಾಹ್ಮಣರಿಂದ ಸಸ್ವರ-ವೇದಾದಿ ಶಾಸ್ತ್ರಗಳ ರಕ್ಷಣೆ)

**ನೋಡಿರಿ! ಯಾರೂ ಉತ್ತಮರಾದ ಬ್ರಾಹ್ಮಣರು, ಹಾಗೂ ಸಾಧುಗಳು ಇಲ್ಲದೇ ಹೋಗಿದ್ದರೆ, ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಪುಸ್ತಕಗಳನ್ನು ಸ್ವರಸಹಿತವಾಗಿ ಓದುವುದು-ಓದಿಸುವುದು ; ಜೈನ, ಮುಸಲ್ಮಾನ ಮತ್ತು ಕ್ರೈಸ್ತ ಮೊದಲಾದವರ ಜಾಲದಿಂದ ಸ್ವತಃ ಅವನ್ನು ರಕ್ಷಿಸಿಕೊಂಡು, ಆರ್ಯರನ್ನು ವೇದಗಳೇ ಮೊದಲಾದ ಸತ್ಯಶಾಸ್ತ್ರಗಳಲ್ಲಿ ಪ್ರೀತಿಯುಕ್ತರನ್ನಾಗಿ ಮಾಡಿ, ವರ್ಣಾಶ್ರಮಗಳಲ್ಲಿ ಸ್ಥಿತರನ್ನಾಗಿಡುವುದು—ಹೀಗೆ ಬ್ರಾಹ್ಮಣ ಸಾಧುಗಳ ಹೊರತು ಇನ್ನಾರಿಗೆ ಶಕ್ಯವಿತ್ತು ?**

**"ವಿಷಾದಪ್ಯಮೃತಂ ಗ್ರಾಹ್ಯಮ್."**

**[ಮನು:-2.239]**

**ವಿಷದಿಂದಲೂ ಕೂಡ ಅಮೃತವನ್ನು ಗ್ರಹಿಸುವ ಹಾಗೆ, ಪೋಪ್-ಲೀಲೆಯ ದುಷ್ಪ್ರೇರಣೆಯೊಳಗಿನಿಂದಲೂ, ಜೈನ ಮೊದಲಾದ ಮತಗಳಿಂದ ಆರ್ಯರು ದೂರ ಉಳಿದುಕೊಂಡುದು, ವಿಷದಲ್ಲಿಯೂ ಅಮೃತದಂತಹ ಗುಣವೆಂದೇ ತಿಳಿಯಬೇಕು.**

### (ಸ್ವಾರ್ಥೀ ಬ್ರಾಹ್ಮಣರ ಲೀಲೆ)

ಯಾವಾಗ ಯಜಮಾನರು ವಿದ್ಯಾಹೀನರಾದರೋ, ಮತ್ತು ತಾವು ಸ್ವಲ್ಪ ಪೂಜಾ-ಪಾಠಗಳನ್ನು ಕಲಿತು, ಅಭಿಮಾನದಲ್ಲಿ ಬಿದ್ದರೋ, ಆಗ ಎಲ್ಲ ಜನರೂ ಪರಸ್ಪರ ಸಮಾಲೋಚನೆ ನಡೆಯಿಸಿ, ರಾಜರೇ ಮೊದಲಾದವರಿಗೆ—

"ಬ್ರಾಹ್ಮಣರು ಮತ್ತು ಸಾಧುಗಳು ದಂಡಾರ್ಹರಲ್ಲ", ಎಂದು ಹೇಳಿದರು. ನೋಡಿರಿ !

'ಬ್ರಾಹ್ಮಣೋ ನ ಹಂತವ್ಯಃ' ; 'ಸಾಧುರ್ನ ಹಂತವ್ಯಃ.'

ಮೊದಲಾದ ಯಾವ ವಚನಗಳು ನಿಜವಾದ ಬ್ರಾಹ್ಮಣರ, ಮತ್ತು ಸಾಧು ಗಳ ವಿಷಯದಲ್ಲಿದ್ದುವೋ, ಅವುಗಳನ್ನು ಪೋಪರು ತಮಗೇ ಅನ್ವಯಿಸಿಕೊಂಡರು.

ಇಷ್ಟೇ ಅಲ್ಲದೇ, ಸುಳ್ಳಾದ ವಚನಗಳಿಂದ ಯುಕ್ತವಾದ ಗ್ರಂಥಗಳನ್ನು ರಚಿಸಿ, ಅವುಗಳಲ್ಲಿ ಋಷಿ-ಮುನಿಗಳ ಹೆಸರುಗಳನ್ನು ಉಲ್ಲೇಖಿಸಿ, ಅವರ ಹೆಸರುಗಳಿಂದಲೇ ಶ್ರವಣಮಾಡಿಸುತ್ತಾ ನಡೆದರು.

ಆ ಪ್ರತಿಷ್ಠಿತರಾದ ಋಷಿ-ಮಹರ್ಷಿಗಳ ಹೆಸರಿನಿಂದ, ತಮ್ಮ ಮೇಲಿನ ದಂಡದ ವ್ಯವಸ್ಥೆಯನ್ನೇ ತೆಗೆಸಿಹಾಕಿದರು!

ಪುನಃ ಇಷ್ಟ ಬಂದಂತೆ ವರ್ತಿಸತೊಡಗಿದರು. ಅಂದರೆ, ಎಂತಹ ಕಠೋರ ನಿಯಮಗಳನ್ನು ಬಳಕೆಗೆ ತಂದರು, ಎಂದರೆ, ಆ ಪೋಪರ ಅನುಮತಿಯಿಲ್ಲದೇ, ನಿದ್ರಿಸುವುದು, ಏಳುವುದು-ಕುಳಿತುಕೊಳ್ಳುವುದು, ಹೋಗುವುದು-ಬರುವುದು, ತಿನ್ನುವುದು-ಕುಡಿಯುವುದು ಮೊದಲಾದುವೂ ಕೂಡ ಮಾಡಲಾಗುತ್ತಿರಲಿಲ್ಲ.

"ಪೋಪ್ ಎಂಬ ಸಂಜ್ಞೆಯುಳ್ಳ ನಾಮಮಾತ್ರದ ಬ್ರಾಹ್ಮಣರು, ಸಾಧು ಗಳು ತಮಗೆ ಬೇಕಾದುದನ್ನು ಮಾಡಲಿ; ಅವರಿಗೆ ಎಂದಿಗೂ ಶಿಕ್ಷೆ ವಿಧಿಸಲಾಗದು. ಅಂದರೆ, ಮನಸ್ಸಿನಲ್ಲಿಯೂ ಅವರಿಗೆ ಶಿಕ್ಷೆಕೊಡಲು ಇಚ್ಛಿಸಬಾರದು", ಎಂದು ರಾಜರುಗಳಿಗೆ ನಿಶ್ಚಯ ಮಾಡಿಸಿದರು.

ಯಾವಾಗ ಇಂತಹ ಮೂರ್ಖತ್ವ ಉಂಟಾಯಿತೋ, ಆಗ ಪೋಪರಿಗೆ ಹೇಗೆ ಇಚ್ಛೆಯಾಯಿತೋ, ಹಾಗೆ ಮಾಡತೊಡಗಿದರು. ಎಂದರೆ, **ಈ ಕೇಡಿನ ಮೂಲಗಳು ಮಹಾಭಾರತದ ಯುದ್ಧಕ್ಕಿಂತ ಒಂದು ಸಾವಿರ ವರ್ಷ ಮೊದಲಿ ನಿಂದ ಪ್ರವೃತ್ತವಾಗಿದ್ದುವು.** ಏಕೆಂದರೆ, ಆ ಸಮಯದಲ್ಲಿ ಋಷಿ-ಮುನಿಗಳು ಇದ್ದರೂ ಕೂಡ, ಆಗ, ಸ್ವಲ್ಪ ಸ್ವಲ್ಪ ಆಲಸ್ಯ, ಪ್ರಮಾದ, ಈರ್ಷ್ಯೆ-ದ್ವೇಷಗಳ ಮೊಳಕೆಗಳು ಎದ್ದಿದ್ದುವು. ಅವು ವರ್ಧಿಸುತ್ತಾ-ವರ್ಧಿಸುತ್ತಾ ಪ್ರವೃದ್ಧವಾಗಿ ಹೋದವು.

### (ನಿಜವಾದ ಉಪದೇಶಕರಿಲ್ಲದೇ ಅಂಧಪರಂಪರೆ)

ಯಾವಾಗ ಸತ್ಯೋಪದೇಶ ಉಳಿಯಲಿಲ್ಲವೋ, ಆಗ ಆರ್ಯಾವರ್ತದಲ್ಲಿ ಅವಿದ್ಯೆ ಹರಡಿಕೊಂಡು, ಜನರು ಪರಸ್ಪರ ಹೋರಾಡಲು-ಜಗಳವಾಡಲು ಆರಂಭಿ ಸಿದರು. ಏಕೆಂದರೆ —

**ಉಪದೇಶ್ಯೋಪದೇಷ್ಟೃತ್ವಾತ್ತತ್ಸಿದ್ಧಿಃ ।**

**ಇತರಥಾಽನ್ಧಪರಂಪರಾ ॥** [ಸಾಂಖ್ಯ ಸೂತ್ರ:-3.79,81]

ಎಂದರೆ, ಯಾವಾಗ ಉತ್ತಮ-ಉತ್ತಮರಾದ ಉಪದೇಶಕರು ಇರುತ್ತಾರೋ, ಆಗ ಒಳ್ಳೆಯ ರೀತಿಯಲ್ಲಿ ಧರ್ಮ-ಅರ್ಥ-ಕಾಮ-ಮೋಕ್ಷಗಳು ಸಿದ್ಧಿಸುತ್ತವೆ.

ಮತ್ತು ಯಾವಾಗ ಉತ್ತಮರಾದ ಉಪದೇಶಕರೂ ಮತ್ತು ಶ್ರೋತೃಗಳೂ ಇರುವುದಿಲ್ಲವೋ, ಆಗ ಅಂಧ ಪರಂಪರೆ ನಡೆಯುತ್ತದೆ.

ಆದರೂ, ಯಾವಾಗ ಸತ್ಪುರುಷರು ಜನಿಸಿ, ಸತ್ಯೋಪದೇಶ ಮಾಡುತ್ತಾರೋ, ಆಗಲೇ ಅಂಧ ಪರಂಪರೆ ನಾಶವಾಗಿ, ಪ್ರಕಾಶವ ಪರಂಪರೆ ಪ್ರಚಲಿತವಾಗುತ್ತದೆ.

## (ಕುತ್ಸಿತ ಆಚರಣೆಗಳಲ್ಲಿ ಪೋಪರ ಪ್ರವೃತ್ತಿ)

ಪುನಃ ಆ ಪೋಪರುಗಳು ತಮ್ಮ, ಮತ್ತು ತಮ್ಮ ಚರಣಗಳ ಪೂಜೆಯನ್ನು ಮಾಡಿಸಿಕೊಳ್ಳತೊಡಗಿದರು. ಮತ್ತು—'ಇವರಲ್ಲಿಯೇ ನಿಮ್ಮ ಉದ್ಧಾರವಿದೆ'., ಎಂದು ಹೇಳತೊಡಗಿದರು.

ಯಾವಾಗ ಈ ಜನರು ಇವರ ವಶಕ್ಕೆ ಸಿಕ್ಕಿದರೋ, ಆಗ ಪ್ರಮಾದದಲ್ಲಿ, ವಿಷಯಾಸಕ್ತಿಯಲ್ಲಿ ನಿಮಗ್ನರಾಗಿ, ಕುರುಬರ ಹಾಗೆ ಮಿಥ್ಯಾಗುರುಗಳಾಗಿ [ಕುಳಿತರು] ; ಮತ್ತು ಶಿಷ್ಯರುಗಳು ಇವರ ಬಲೆಗೆ ಬಿದ್ದರು. ವಿದ್ಯೆ, ಬಲ, ಬುದ್ಧಿ, ಪರಾಕ್ರಮ, ಶೂರ–ವೀರತ್ವ ಮೊದಲಾದ ಶುಭಗುಣಗಳು ನಾಶವಾಗುತ್ತಾ ಹೋದುವು. ಆ ಮೇಲೆ, ಯಾವಾಗ ವಿಷಯಾಸಕ್ತರಾದರೋ, ಆಗ ಮಾಂಸ-ಮದ್ಯಗಳ ಸೇವನೆಯನ್ನು ಗುಟ್ಟು–ಗುಟ್ಟಾಗಿ ಮಾಡಲಾರಂಭಿಸಿದರು.

## (ವಾಮಮಾರ್ಗದ ಜನ್ಮ ; ಪಂಚ ಮಕಾರಗಳ ಸ್ಥಾಪನೆ)

ಆ ಮೇಲೆ, ಅವರಲ್ಲಿಯೇ ಒಬ್ಬನು ವಾಮಮಾರ್ಗವನ್ನು ಪ್ರಚಲಿತವಾಗಿ ಮಾಡಿದನು.

'ಶಿವ ಉವಾಚ' ; 'ಪಾರ್ವತ್ಯುವಾಚ' : 'ಭೈರವ ಉವಾಚ'—ಎಂದು ಮೊದಲಾಗಿ ಹೆಸರುಗಳನ್ನು ಬರೆದು, ಆ ಕೃತಿಗಳಿಗೆ 'ತಂತ್ರ'ವೆಂದು ಹೆಸರಿಟ್ಟನು.

ಅವುಗಳಲ್ಲಿ ಎಂತೆಂತಹ ವಿಚಿತ್ರ ರೀತಿಯ ಮಾತುಗಳನ್ನು ಬರೆಯಲಾಗಿದೆ ಯೆಂದರೆ—

**ಮದ್ಯಂ ಮಾಂಸಂ ಚ ಮೀನಂ ಚ ಮುದ್ರಾ ಮೈಥುನಮೇವ ಚ ।**
**ಏತೇ ಪಂಚ ಮಕಾರಾಃ ಸ್ಯುರ್ಮೋಕ್ಷದಾ ಹಿ ಯುಗೇ ಯುಗೇ ॥1॥**

[ಕಾಲೀ ತಂತ್ರ]

ಪ್ರವೃತ್ತೇ ಭೈರವೀಚಕ್ರೇ ಸರ್ವೇ ವರ್ಣಾ ದ್ವಿಜಾತಯಃ ।
ನಿವೃತ್ತೇ ಭೈರವೀಚಕ್ರೇ ಸರ್ವೇ ವರ್ಣಾಃ ಪೃಥಕ್ ಪೃಥಕ್ ॥2॥

[ಕುಲಾರ್ಣವತಂತ್ರ:–8.96]

ಪೀತ್ವಾ ಪೀತ್ವಾ ಪುನಃ ಪೀತ್ವಾ ಯಾವತ್ಪತತಿ ಭೂತಲೇ ।
ಪುನರುತ್ಥಾಯ ವೈ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥3॥

[ಕುಲಾರ್ಣವತಂತ್ರ:–7.100]

ಮಾತೃಯೋನಿಂ ಪರಿತ್ಯಜ್ಯ ವಿಹರೇತ್ಸರ್ವಯೋನಿಷು ॥4॥
ವೇದಶಾಸ್ತ್ರಪುರಾಣಾನಿ ಸಾಮಾನ್ಯಗಣಿಕಾ ಇವ ।
ಏಕೈವ ಶಾಂಭವೀ ಮುದ್ರಾ ಗುಪ್ತಾ ಕುಲವಧೂರಿವ ॥5॥

[ಜ್ಞಾನಸಂಕಲನೀ ತಂತ್ರ]

ಎಂದರೆ, ನೋಡಿರಿ, ಈ ವಿಕೃತಮತಿಗಳಾದ ಪೋಪರ ಲೀಲೆಯನ್ನು !

ವೇದವಿರುದ್ಧವಾದ ಯಾವ ಮಹಾನ್ ಅಧರ್ಮದ ಕರ್ಮಗಳಿವೆಯೋ, ಅವುಗಳನ್ನೇ ಶ್ರೇಷ್ಠವೆಂದು ವಾಮಮಾರ್ಗಿಗಳು ಅಂಗೀಕರಿಸಿದ್ದಾರೆ. **ಮದ್ಯ, ಮಾಂಸ, ಮೀನು, ಮುದ್ರೆ**; ಪೂರಿ, ಉಪ್ಪಿನ ಕಜ್ಜಾಯ, ವಡೆ, ಮತ್ತು ರೊಟ್ಟಿ ಮೊದಲಾದ ಅಗಿದು ತಿನ್ನುವ ಖಾದ್ಯಗಳು ; ಯೋನಿಪಾತ್ರಧಾರಿ ಮುದ್ರೆ ; ಮತ್ತು ಐದನೆಯದು **ಮೈಥುನ**–

ಅಂದರೆ, ಪುರುಷರೆಲ್ಲರೂ ಶಿವಸಮಾನರು ಮತ್ತು ಸ್ತ್ರೀಯರೆಲ್ಲರೂ ಪಾರ್ವತೀ ಸಮಾನರು, ಎಂದು ಅಂಗೀಕರಿಸಿ—

'ಅಹಂ ಭೈರವಸ್ತ್ವಂ ಭೈರವೀ ಹ್ಯಾವಯೋರಸ್ತು ಸಂಗಮಃ ।'

ಯಾವನು ಪುರುಷನಾಗಿರಲೀ, ಯಾವಳೇ ಸ್ತ್ರೀಯಾಗಿರಲೀ ; ಈ ಸೊಟ್ಟ ಪಟ್ಟಾದ ವಚನವನ್ನು ಉಚ್ಚರಿಸಿ, ಸಂಭೋಗ ಮಾಡುವುದರಲ್ಲಿ ವಾಮಮಾರ್ಗಿಗಳು ದೋಷವನ್ನೆಣಿಸರು. ಎಂದರೆ, ಯಾವ ನೀಚ ನಾರಿಯರನ್ನು ಮುಟ್ಟಬಾರದೋ, ಅವರನ್ನು ಅತಿ ಪವಿತ್ರರೆಂದು, ಅವರು ತಿಳಿದಿದ್ದಾರೆ. ಉದಾಹರಣೆಗೆ—ಶಾಸ್ತ್ರಗಳಲ್ಲಿ ರಜಸ್ವಲೆಯರ ಸ್ಪರ್ಶವ ನಿಷೇಧವಿದೆ ; ಅವರನ್ನು ವಾಮಮಾರ್ಗಿಗಳು ಅತಿ ಪವಿತ್ರರೆಂದೆಣಿಸಿದ್ದಾರೆ.

ಆಲಿಸಿರಿ ! ಇವರ ಮುಖ-ಮೂತಿಗಳಿಲ್ಲದ ಶ್ಲೋಕವನ್ನು—

**ರಜಸ್ವಲಾ ಪುಷ್ಕರಂ ತೀರ್ಥಂ ಚಾಂಡಾಲೀ ತು ಸ್ವಯಂ ಕಾಶೀ ।**
**ಚರ್ಮಕಾರೀ ಪ್ರಯಾಗಃ ಸ್ಯಾದ್ರಜಕೀ ಮಥುರಾ ಮತಾ ।**
**ಅಯೋಧ್ಯಾ ಪುಕ್ಕಸೀ ಪ್ರೋಕ್ತಾ ॥**†

ಈ ಮೊದಲಾದುವಿವೆ.

"ರಜಸ್ವಲೆಯೊಂದಿಗೆ ಸಮಾಗಮ ಮಾಡಿದಲ್ಲಿ ಪುಷ್ಕರಸ್ನಾನ ಮಾಡಿದಂತೆ, ಎಂದು ತಿಳಿಯಿರಿ. ಚಾಂಡಾಲಿಯೊಂದಿಗೆ ಸಮಾಗಮ ಮಾಡಿದಲ್ಲಿ ಕಾಶೀಯಾತ್ರೆ ಮಾಡಿದಂತೆ ; ಚಮ್ಮಾರಗಿತ್ತಿಯೊಡನೆ ಸಮಾಗಮ ಮಾಡುವುವರಲ್ಲಿ ಮಥುರಾಯಾತ್ರೆ ; ಮತ್ತು ಕಂಜರಿಯೊಂದಿಗೆ ಲೀಲೆ ಮಾಡುವುದರಿಂದ ಅಯೋಧ್ಯಾಯಾತ್ರೆ ಮಾಡಿ ಬಂದಂತೆ ಆಯಿತು, ಎಂದು ಅಂಗೀಕರಿಸಿರಿ.

## (ಪಂಚ ಮಕಾರಗಳಿಗೆ ಬೇರೆ ಕಲ್ಪಿತ ಹೆಸರುಗಳು)

**'ಮದ್ಯ'**ಕ್ಕೆ **'ತೀರ್ಥ'**ವೆಂದು ಹೆಸರಿಟ್ಟರು. **'ಮಾಂಸ'**ಕ್ಕೆ **'ಶುದ್ಧಿ'**ಯೆಂದೂ, **'ಪುಷ್ಪ'**ವೆಂದೂ, ಹೆಸರಿಟ್ಟರು. ಮೀನಿಗೆ **'ತೃತೀಯಾ'**, **'ಜಲತುಂಬಿಕಾ'** ಎಂದೂ, ಮುದ್ರೆ*ಗೆ **'ಚತುರ್ಥೀ'** ಎಂದೂ, ಮತ್ತು ಮೈಥುನಕ್ಕೆ **'ಪಂಚಮೀ'** ಎಂದೂ ಹೆಸರಿಟ್ಟರು. ಬೇರೆಯವನಿಗೆ ತಿಳಿಯಲಾಗದಿರಲಿ, ಎಂದು ಇಂತಿಂತಹ ಹೆಸರುಗಳನ್ನು ಇಟ್ಟಿದ್ದಾರೆ!

ತಮಗೆ **ಕೌಲರು, ಆರ್ದ್ರವೀರರು, ಶಾಂಭವರು,** ಮತ್ತು **ಗಣರು** ಮೊದಲಾದ ಹೆಸರುಗಳನ್ನಿಟ್ಟುಕೊಂಡರು. ಮತ್ತು ಯಾರು ವಾಮಮಾರ್ಗದ ಮತದಲ್ಲಿಲ್ಲವೋ, ಅವರಿಗೆ **'ಕಂಟಕ'**ಗಳು, **'ವಿಮುಖ'**ರು, **'ಶುಷ್ಕಪಶು'**ಗಳು, ಎಂದು ಮೊದಲಾದ ಹೆಸರುಗಳನ್ನಿಟ್ಟಿದ್ದಾರೆ. [1]

ಮತ್ತು, "ಯಾವಾಗ ಭೈರವೀಚಕ್ರದಲ್ಲಿರುವರೋ, ಆಗ ಬ್ರಾಹ್ಮಣನಿಂದ ಹಿಡಿದು ಚಾಂಡಾಲನವರೆಗೆ ಎಲ್ಲರಿಗೂ ದ್ವಿಜರೆಂದು ಹೆಸರಾಗುತ್ತದೆ ; ಮತ್ತು ಯಾವಾಗ ಭೈರವೀಚಕ್ರದಿಂದ ಬೇರೆಯಾಗುತ್ತಾರೋ, ಆಗ ಎಲ್ಲರೂ ತಮ್ಮ ತಮ್ಮ ವರ್ಣದವರಾಗಿ ಹೋಗುವರು", ಎಂದು ಹೇಳುತ್ತಾರೆ. [2]

---

†ರುದ್ರಯಾಮಲ ತಂತ್ರ—ಯು. ಮೀ.

*ಯೋನಿ ಮತ್ತು ಸಂಭೋಗ ಕ್ರಿಯೆಯನ್ನು ಕೈಬೆರಳುಗಳಿಂದ ತೋರಿಸುವ ಸಂಕೇತಗಳು. —ಸಂ.

ಭೈರವೀಚಕ್ರದಲ್ಲಿ ವಾಮಮಾರ್ಗಿಗಳು ನೆಲದ ಮೇಲೆಯೋ, ಅಥವಾ ಒಂದು ಹಲಗೆಯ ಮೇಲೆಯೋ, ತ್ರಿಕೋಣಾಕಾರವಾಗಿಯೋ,† ಚತುಷ್ಕೋಣಾಕಾರವಾಗಿಯೋ, ವರ್ತುಲಾಕಾರವಾಗಿಯೋ, ಕೇಂದ್ರ* ಒಂದನ್ನು ರಚಿಸಿ, ಅದರ ಮೇಲೆ ಮದ್ಯದ ಗಡಿಗೆಯನ್ನಿಟ್ಟು, ಅದರ ಪೂಜೆಯನ್ನು ಮಾಡುತ್ತಾರೆ. ಮತ್ತೆ—

**"ಬ್ರಹ್ಮಶಾಪಂ ವಿಮೋಚಯ."**

"ಓ, ಮದ್ಯ ! ನೀನು ಬ್ರಹ್ಮಾ ಮೊದಲಾದವರ ಶಾಪದಿಂದ ರಹಿತವಾಗು", ಎಂಬ ಮಂತ್ರವನ್ನು ಉಚ್ಚರಿಸುತ್ತಾರೆ.

ಎಲ್ಲಿ ವಾಮಮಾರ್ಗಿಗಳನ್ನುಳಿದು, ಅನ್ಯರನ್ನು ಹೋಗಗೊಡುವುದಿಲ್ಲವೋ, ಅಂತಹ ಗುಪ್ತಸ್ಥಾನದಲ್ಲಿ ಸ್ತ್ರೀಯರು ಮತ್ತು ಪುರುಷರು ಒಟ್ಟು ಸೇರುತ್ತಾರೆ. ಅಲ್ಲಿ ಒಬ್ಬಳು ಸ್ತ್ರೀಯನ್ನು 'ನಗ್ನೆ'ಯನ್ನಾಗಿ ಮಾಡಿ, ಪೂಜಿಸುತ್ತಾರೆ. ಮತ್ತು ಸ್ತ್ರೀಯರು ಒಬ್ಬ ಪುರುಷನನ್ನು 'ನಗ್ನ'ನನ್ನಾಗಿ ಮಾಡಿ ಪೂಜಿಸುತ್ತಾರೆ.

ಆಮೇಲೆ, ಯಾವಳೋ, ಯಾವನೊಬ್ಬನ ಪತ್ನಿಯಾಗಿರಬಹುದು; ಯಾವಳೋ, ತನ್ನ, ಅಥವಾ ಮತ್ತೊಬ್ಬನ ಮಗಳಾಗಿರಬಹುದು ; ಯಾವಳಾದರೂ ಯಾವನೊಬ್ಬನ, ಅಥವಾ ತನ್ನ, ತಾಯಿಯೋ, ಸೋದರಿಯೋ, ಸೊಸೆಯೋ, [ಆಗಿರಬಹುದು]–ಈ ಮೊದಲಾದವರೆಲ್ಲಾ ಬರುತ್ತಾರೆ.

ಆ ಮೇಲೆ, ಒಂದು ಪಾತ್ರೆಯಲ್ಲಿ ಮದ್ಯವನ್ನು ತುಂಬಿಸಿ, ಮಾಂಸ, ವಡೆ ಮೊದಲಾದುವನ್ನು ಒಂದು ತಟ್ಟೆಯಲ್ಲಿಡುತ್ತಾರೆ. ಯಾವನು ಅವರ ಆಚಾರ್ಯನಾಗಿರುತ್ತಾನೋ, ಅವನು ಆ ಮದ್ಯದ ಬಟ್ಟಲನ್ನು ಕೈಯಲ್ಲಿ ತೆಗೆದುಕೊಂಡು—

---

†ವಾಮಮಾರ್ಗೀ ತಾಂತ್ರಿಕರು ತಲೆಕೆಳಗಾದ ತ್ರಿಭುಜಾಕೃತಿಯನ್ನು ಸ್ತ್ರೀ-ಜನನೇಂದ್ರಿಯದ ಪ್ರತೀಕವೆಂದು ಅಂಗೀಕರಿಸಿದ್ದಾರೆ. ಇಂತಹ ತ್ರಿಭುಜಗಳಿಂದ, ಮತ್ತು ವೃತ್ತದಿಂದ ಕೂಡಿದ ಕೆಂಪುವರ್ಣದ "ಶ್ರೀಚಕ್ರ"ದ ರಚನೆಯನ್ನು ಇವರೇ ನಿರ್ಮಿಸಿದ್ದಾರೆ.

*ಇದೇ ಅವರ 'ಕೇಂದ್ರ'. ಈ 'ಶ್ರೀಚಕ್ರ'ವನ್ನು ಭಾರತದ ಭೌಗೋಲಿಕ ಮೇರೆಯಾಗಿ, ಎಲ್ಲಿ-ಎಲ್ಲಿ ವಾಮಮಾರ್ಗಿಗಳ ಕೇಂದ್ರಗಳೋ, ಅಲ್ಲಿ-ಅಲ್ಲಿ ಅಳವಡಿಸಿಕೊಂಡಿದ್ದಾರೆ. ಉದಾಹರಣೆಗೆ--ಈ ತ್ರಿಭುಜದ ಒಂದು ಕೋಣ ಶ್ರೀನಗರದಲ್ಲೂ (ಕಾಶ್ಮೀರ), ಇನ್ನೊಂದು ಕಾಶಿಯಲ್ಲೂ, ಮೂರನೆಯದು ಕನ್ಯಾಕುಮಾರಿಯಲ್ಲೂ ಇದೆಯೆಂದು ಭಾವಿಸುತ್ತಾರೆ.

ಹೀಗಿದ್ದರೂ ಸಹ, ವಾಮಾಚಾರಗಳಿಗೆ ವಿರುದ್ಧರಾದ ಶೈವರೂ, ಹಲವಾರು ದೇವಿಯ ಉಪಾಸಕರೂ, ಫಲಿತ-ಜ್ಯೋತಿಷಿಗಳೂ ಮೊದಲಾದವರು 'ಶ್ರೀಚಕ್ರ'ವನ್ನು ತಾಂತ್ರಿಕರಂತೆಯೇ, ಉಪಾಸ್ಯವೆಂದು ಅಂಗೀಕರಿಸಿರುವುದು ಆಶ್ಚರ್ಯದ ವಿಷಯ !

ಭಾರತ ಸರಕಾರದ 'ಪರಿವಾರ ನಿಯೋಜನ' ಮಂತ್ರಾಲಯವೂ ಕೂಡ ತಲೆಕೆಳಗಾದ ಕೆಂಪುಬಣ್ಣದ ತ್ರಿಭುಜವನ್ನೇ ತಮ್ಮ ಪ್ರತೀಕವೆಂದು ಸ್ವೀಕರಿಸಿದ್ದಾರೆ.—ಸಂ.

**'ಭೈರವೋऽಹಮ್, ಶಿವೋऽಹಮ್'.**

"ನಾನು ಭೈರವ ಅಥವಾ ಶಿವ," ಎಂದು ಹೇಳಿ, ಕುಡಿದುಬಿಡುತ್ತಾನೆ. ಮತ್ತೆ, ಆ ಎಂಜಲು ಪಾತ್ರೆಯಲ್ಲಿಯೇ ಎಲ್ಲರೂ ಕುಡಿಯುತ್ತಾರೆ.

ಮತ್ತೆ, ಯಾವನಾದರೊಬ್ಬನ ಪತ್ನಿಯನ್ನು, ಅಥವಾ ವೇಶ್ಯೆಯನ್ನು ನಗ್ನೆಯನ್ನಾಗಿ ಮಾಡಿ, ಅಥವಾ ಯಾವನಾದರೂ ಪುರುಷನನ್ನು ನಗ್ನನನ್ನಾಗಿ ಮಾಡಿ, ಕೈಯಲ್ಲಿ ಕತ್ತಿಯನ್ನು ಕೊಟ್ಟು, ಅವಳ ಹೆಸರು **'ದೇವಿ'**, ಎಂದೂ ; ಮತ್ತು ಪುರುಷನ ಹೆಸರು **'ಮಹಾದೇವ'**, ಎಂದೂ ಇಡುತ್ತಾರೆ. ಅವರ ಉಪಸ್ಥೇಂದ್ರಿಯಗಳ ಪೂಜೆಯನ್ನು ಮಾಡುತ್ತಾರೆ.

ಆಗ, ಆ **ದೇವಿಗೆ** ಅಥವಾ **ಶಿವನಿಗೆ** ಬಟ್ಟಲು ಮದ್ಯವನ್ನು ಕುಡಿಸಿ, ಅದೇ ಎಂಜಲು ಪಾತ್ರೆಯಿಂದ ಎಲ್ಲ ಜನರೂ ಒಂದೊಂದು ಬಟ್ಟಲು ಕುಡಿಯುತ್ತಾರೆ.

ಮತ್ತೆ, ಅದೇ ರೀತಿ, ಕ್ರಮದಿಂದ ಕುಡಿದು-ಕುಡಿದು, ಉನ್ಮತ್ತರಾಗಿ ; ಯಾವಳಾದವರೂ, ಯಾವನೊಬ್ಬನ ಸೋದರಿ, ಮಗಳು ಅಥವಾ ತಾಯಿಯೇ ಆಗಿರಲೊಲ್ಲಳೇಕೆ, ಯಾವನಿಗೆ ಯಾವಳೊಂದಿಗೆ ಇಚ್ಛೆಯಾಗುವುದೋ, ಅವಳೊಂದಿಗೆ ಕುಕರ್ಮವನ್ನು ಮಾಡುತ್ತಾರೆ.

ಒಂದೊಂದು ಸಾರಿ ಮದ ವಿಪರೀತವಾಗಿ ಏರುವುದರಿಂದ, ಪಾದರಕ್ಷೆಗಳು, ಒದೆತ, ಗುದ್ದಾಟ, ಕೂದಲನ್ನು ಪರಸ್ಪರ ಎಳೆದೆಳೆದು ಹೋರಾಡುವುದು— ಈ ಬಗೆಗಳಿಂದ ಪರಸ್ಪರ ಜಗಳವಾಡುತ್ತಾರೆ.

ಹಲಕೆಲವರಿಗೆ ಅಲ್ಲಿಯೇ ವಾಂತಿಯಾಗುತ್ತದೆ. ಅವರಲ್ಲಿ ಯಾವನು ಸಿದ್ಧಿ ಪ್ರಾಪ್ತ **'ಅಘೋರಿ'**, ಎಂದರೆ ಸರ್ವೋತ್ತಮಸಿದ್ಧನೆಂದು ಎಣಿಸಲ್ಪಡುತ್ತಾನೋ, ಅವನು ವಾಂತಿಯಾದ ವಸ್ತುವನ್ನೂ ಕೂಡ ತಿಂದುಬಿಡುತ್ತಾನೆ !

ಎಂದರೆ, ಇವರಲ್ಲಿ ಸರ್ವೋಚ್ಚಸಿದ್ಧನ ಲಕ್ಷಣಗಳು ಇವಾಗಿರುತ್ತವೆ :—

**ಹಾಲಾಂ ಪಿಬತಿ ದೀಕ್ಷಿತಸ್ಯ ಮಂದಿರೇ ಸುಪ್ತೋ ನಿಶಾಯಾಂ**
**ಗಣಿಕಾಗೃಹೇಷು ।**
**ವಿರಾಜತೇ ಕೌಲವಚಕ್ರವರ್ತೀ ॥**

ಯಾವನು ದೀಕ್ಷಿತನ, ಎಂದರೆ ಮದ್ಯವನ್ನಿಳಿಸುವವನ ಮನೆಗೆ ಹೋಗಿ, ಬಾಟಲಿಗಳ ಮೇಲೆ ಬಾಟಲಿಗಳನ್ನೇರಿಸುವನೋ, ವೇಶ್ಯೆಯರ ಮನೆಗೆ ಹೋಗಿ,

ಅವರೊಡನೆ ಕುಕರ್ಮ ಮಾಡಿ ನಿದ್ರಿಸುವನೋ, ಮತ್ತು ಇವೇ ಮೊದಲಾದ ಕುಕರ್ಮಗಳನ್ನು ನಿರ್ಲಜ್ಜನೂ, ನಿಃಶಂಕನೂ ಆಗಿ ಮಾಡುವನೋ, ಅವನೇ ವಾಮಮಾರ್ಗಿಗಳಲ್ಲಿ ಸರ್ವೋನ್ನತನೂ, ಮುಖ್ಯನೂ ಆದ ಚಕ್ರವರ್ತೀ ರಾಜನಿಗೆ ಸಮಾನನೆಂದು ಅಂಗೀಕರಿಸಲ್ಪಡುತ್ತಾನೆ.

ಎಂದರೆ, ಯಾವನು ದೊಡ್ಡ ಕುಕರ್ಮಿಯೋ, ಅವನೇ ಅವರಲ್ಲಿ ದೊಡ್ಡವನು ; ಮತ್ತು ಯಾವನು ಒಳ್ಳೆಯ ಕೆಲಸಗಳನ್ನು ಮಾಡುವನೋ, ಮತ್ತು ಕೆಟ್ಟಕೆಲಸಗಳಿಗೆ ಹೆದರುವನೋ, ಅವನೇ ಚಿಕ್ಕವನು. ಏಕೆಂದರೆ ;—

**ಪಾಶಬದ್ಧೋ ಭವೇಜ್ಜೀವಃ ಪಾಶಮುಕ್ತಃ ಸದಾಶಿವಃ ॥**

**[ಜ್ಞಾನಸಂಕಲನೀ ತಂತ್ರ—48]**

ಲೋಕಲಜ್ಜೆ, ಶಾಸ್ತ್ರಲಜ್ಜೆ, ಕುಲಲಜ್ಜೆ, ದೇಶಲಜ್ಜೆ ಮೊದಲಾದ ಪಾಶಗಳಲ್ಲಿ ಯಾವನು ಬದ್ಧನಾಗಿರುತ್ತಾನೋ, ಅವನು **'ಜೀವನು ;'** ಮತ್ತು ಯಾವನು ನಿರ್ಲಜ್ಜನಾಗಿ, ಕೆಟ್ಟ ಕೆಲಸಗಳನ್ನು ಮಾಡುವನೋ,ಅವನೇ **'ಸದಾಶಿವ'**ನಾಗಿರುತ್ತಾನೆ, ಎಂದು **ತಂತ್ರ**ದಲ್ಲಿ ಹೇಳುತ್ತಾರೆ.

**ಉಡ್ಡೀಸ ತಂತ್ರ** ಮೊದಲಾದುದರಲ್ಲಿ ಹೀಗೆ ಒಂದು ಪ್ರಯೋಗವನ್ನು ಬರೆದಿದ್ದಾರೆ:—

ಒಂದು ಮನೆಯಲ್ಲಿ ನಾಲ್ಕು ಕಡೆಯ ಗೋಡೆಗಳಲ್ಲಿಯೂ ಗೂಡುಗಳಿರಬೇಕು. ಅವುಗಳಲ್ಲಿ ಮದ್ಯದ ಶೀಶಿಗಳನ್ನು ತುಂಬಿಸಿ ಇಟ್ಟುಬಿಡಬೇಕು. ಒಂದು ಗೂಡಿನಿಂದ ಒಂದು ಬಾಟಲಿ ಕುಡಿದು, ಎರಡನೆಯ ಗೂಡಿಗೆ ಹೋಗಬೇಕು. ಅದರಿಂದಲೂ ಕುಡಿದು, ಮೂರನೆಯದಕ್ಕೂ, ಮತ್ತು ಮೂರನೆಯದರಿಂದ ಕುಡಿದು, ನಾಲ್ಕನೆಯ ಗೂಡಿಗೂ ಹೋಗಬೇಕು. ಎಲ್ಲಿಯವರೆಗೆ ಕಟ್ಟಿಗೆಯಂತೆ ನೆಲದ ಮೇಲೆ ಬಿದ್ದು ಹೋಗನೋ, ಆ ವರೆಗೆ ನಿಂತು-ನಿಂತೇ ಮದ್ಯವನ್ನು ಕುಡಿಯಬೇಕು. ಮತ್ತೆ, ಯಾವಾಗ ಮದವಿಳಿಯುವುದೋ, ಆಗ, ಅದೇ ರೀತಿ ಕುಡಿದು, ಬೀಳಬೇಕು. ಮತ್ತೆ ಮೂರನೆಯ ಸಾರಿ ಇದೇ ರೀತಿ ಕುಡಿದು, ಬಿದ್ದು, ಎದ್ದರೆ, ಅವನಿಗೆ ಪುನರ್ಜನ್ಮವಿರುವುದಿಲ್ಲ! [3]

ಎಂದರೆ, ಇಂತಿಂತಹ ಮನುಷ್ಯರಿಗೆ ಪುನಃ ಮಾನವ ಜನ್ಮ ಲಭಿಸುವುದೇ ಕಠಿಣ. ಆದರೆ, ನೀಚ ಯೋನಿಯಲ್ಲಿ ಬಿದ್ದು ಬಹುಕಾಲ ಪರ್ಯಂತ ಅವನು ತೊಳಲುತ್ತಾ ಇರುವನು, ಎನ್ನುವುದೇನೋ ಸತ್ಯವೇ ಆಗಿದೆ.

ವಾಮೀಯರ ತಂತ್ರ ಗ್ರಂಥಗಳಲ್ಲಿ—'ತಾಯಿಯೊಬ್ಬಳನ್ನುಳಿದು, ಬೇರೆ ಯಾವಳೇ ಸ್ತ್ರೀಯನ್ನೂ ಬಿಡಬಾರದು', ಎಂಬ ನಿಯಮವಿದೆ. ಅಂದರೆ, ಮಗಳಾಗಲೀ, ಅಥವಾ ಸೋದರಿಯೇ ಮೊದಲಾದ, ಯಾವ ಹತ್ತಿರದ ನೆಂಟಳೇ ಆಗಿರಲೊಲ್ಲಳೇಕೆ, ಎಲ್ಲರೊಂದಿಗೂ ಸಂಭೋಗ ಮಾಡಬೇಕು.", ಎಂದು ಬರೆದಿದೆ.

ಈ ವಾಮಮಾರ್ಗಿಗಳಲ್ಲಿ **'ದಶ ಮಹಾವಿದ್ಯೆ'**ಗಳು ಪ್ರಸಿದ್ಧವಾಗಿವೆ. ಅವರಲ್ಲಿ ಒಬ್ಬ **'ಮಾತಂಗೀ'**ವಿದ್ಯಾಯುಕ್ತನು—

**"ಮಾತರಮಪಿ ನ ತ್ಯಜೇತ್."**

ಎಂದರೆ, "ತಾಯಿಯನ್ನೂ ಕೂಡ ಸಂಭೋಗ ಮಾಡದೇ ಬಿಡಬಾರದು", ಎಂದು ಹೇಳುತ್ತಾನೆ!

ಮತ್ತು ಸ್ತ್ರೀ-ಪುರುಷರ ಸಮಾಗಮದ ಸಮಯದಲ್ಲಿ—"ನಮಗೆ ಸಿದ್ಧಿ ಪ್ರಾಪ್ತವಾಗಲಿ", ಎಂಬ ಮಂತ್ರವನ್ನು ಜಪಿಸುತ್ತಾರೆ.

**ಇಂತಹ ಹುಚ್ಚು, ಮಹಾಮೂರ್ಖ ಮಾನವರೂ ಕೂಡ ಜಗತ್ತಿನಲ್ಲಿ ಬಹಳ ಕಡಿಮೆಯೇ ಇದ್ದಾರು!** [4]

**ಯಾವ ಮಾನವನು ಸುಳ್ಳನ್ನು ಪ್ರಚಲಿತವಾಗಿ ಮಾಡಲು ಬಯಸುತ್ತಾನೋ, ಅವನು ಅವಶ್ಯವಾಗಿಯೇ ಸತ್ಯದ ನಿಂದೆಯನ್ನು ಮಾಡುತ್ತಾನೆ.** ನೋಡಿರಿ, ವಾಮಮಾರ್ಗಿಗಳು ಏನು ಹೇಳುತ್ತಾರೆ—

"ವೇದಗಳು, ಶಾಸ್ತ್ರಗಳು, ಮತ್ತು ಪುರಾಣಗಳು–ಇವೆಲ್ಲಾ ಸಾಮಾನ್ಯ ವೇಶ್ಯೆಯರಂತೆ ಇವೆ; ಮತ್ತು ಯಾವ ಈ **ಶಾಂಭವೀ** ವಾಮಮಾರ್ಗಿಯ ಮುದ್ರೆ ಯಿದೆಯೋ, ಅದು **ಗುಪ್ತಕುಲ***ದ ಸ್ತ್ರೀಗೆ ಸಮವಾಗಿದೆ." [5]

## (ವೇದಗಳ ಹೆಸರಿನಲ್ಲೂ ವಾಮಮಾರ್ಗದ ಲೀಲೆ)

ಇದೇ ಕಾರಣದಿಂದ, ಈ ಜನರು ಕೇವಲ ವೇದವಿರುದ್ಧವಾದ ಮತವನ್ನು ಎತ್ತಿ ನಿಲ್ಲಿಸಿದ್ದಾರೆ.

ಆ ಮೇಲೆ, ಈ ಜನರ ಮತ ಬಹಳ ಪ್ರಚಲಿತವಾಯಿತು. ಆಗ ಧೂರ್ತ ತನವನ್ನು ಮಾಡಿ, ವೇದಗಳ ಹೆಸರಿನಿಂದಲೂ ಕೂಡ ವಾಮಮಾರ್ಗದ ಲೀಲೆ ಯನ್ನು ಸ್ವಲ್ಪ-ಸ್ವಲ್ಪ ನಡೆಯಿಸಿದರು. ಎಂದರೆ:—

---

*ಎಂದರೆ, ಪರದೆಯಲ್ಲಿರುವ ಕುಲೀನ ಸ್ತ್ರೀ.—ಯು. ವಿ.

**ಸೌತ್ರಾಮಣ್ಯಾಂ ಸುರಾಂ ಪಿಬೇತ್ ॥1॥**

[ಶತಪಥ:-12.9.3.7]

**ಪ್ರೋಕ್ಷಿತಂ ಭಕ್ಷಯೇನ್ಮಾಂಸಮ್ ॥2॥**

[ಮನು:-5.27]

**ವೈದಿಕೀ ಹಿಂಸಾ ಹಿಂಸಾ ನ ಭವತಿ ॥3॥***

**ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ ।**
**ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ ॥4॥†**

[ಮನು:-5.56]

ಸೌತ್ರಾಮಣೀ‡ ಯಜ್ಞದಲ್ಲಿ ಮದ್ಯ ಕುಡಿಯಬೇಕು. [1]

ಇದರ ಸರಿಯಾದ ಅರ್ಥ-**ಸೌತ್ರಾಮಣೀ** ಯಜ್ಞದಲ್ಲಿ ಸೋಮರಸವನ್ನು, ಎಂದರೆ, ಸೋಮಲತೆಯ ರಸವನ್ನು ಕುಡಿಯಬೇಕು, ಎಂದಾಗಿರುತ್ತದೆ.

ಪ್ರೋಕ್ಷಿತವಾದುದನ್ನು, ಎಂದರೆ-ಯಜ್ಞದಲ್ಲಿ ಮಾಂಸವನ್ನು ತಿನ್ನುವುದರಲ್ಲಿ ದೋಷವಿಲ್ಲ-ಎನ್ನುವಂತಹ ಪಾಮರತನದ ಮಾತುಗಳನ್ನೂ ವಾಮಮಾರ್ಗೀಯರು ಪ್ರಚಲಿತಗೊಳಿಸಿದ್ದಾರೆ. [2]

ಅವರನ್ನು—"ವೈದಿಕೀ ಹಿಂಸೆ ಹಿಂಸೆಯಲ್ಲವಾದರೆ, ನಿನ್ನನ್ನು ಮತ್ತು ನಿನ್ನ ಕುಟುಂಬವನ್ನು ವಧಿಸಿ, ಹೋಮ ಮಾಡಿಬಿಟ್ಟರೆ, ಚಿಂತೆ ಏನು?", ಎಂದು ಕೇಳಬೇಕು. [3]

ಮಾಂಸ ಭಕ್ಷಣ ಮಾಡುವುದರಲ್ಲಿ, ಮದ್ಯ ಕುಡಿಯುವುದರಲ್ಲಿ, ಪರಸ್ತ್ರೀಗಮನ ಮಾಡುವುದು ಮೊದಲಾದುದರಲ್ಲಿ ದೋಷವಿಲ್ಲವೆನ್ನುವುದು ಹುಡುಗುತನವಾಗಿದೆ.

---

*ಮನುಸ್ಮೃತಿ (5.44)ಯೊಂದಿಗೆ ತುಲನೆ ಮಾಡಿ. —ಯು. ಮಿ.

†ಇವು ಮನುಸ್ಮೃತಿಯ ಪ್ರಕ್ಷಿಪ್ತ ಶ್ಲೋಕಗಳು. ಗ್ರಂಥಕರ್ತರು ಇವನ್ನು ಇಲ್ಲಿ ಉದ್ಧರಿಸಿದ್ದಾರೆ. ಮನುಸ್ಮೃತಿಯ 2600 ಶ್ಲೋಕಗಳಲ್ಲಿ 1200 ಶ್ಲೋಕಗಳು ಪ್ರಕ್ಷಿಪ್ತ (ಮನುರಚಿತವಲ್ಲ)ವೆಂದು ಗಣಿಸಲಾಗಿದೆ. ಆರ್ಷ ಸಾಹಿತ್ಯ ಪ್ರಚಾರ ಟ್ರಸ್ಟ್, 455, ಖಾರೀ ಬಾವಲೀ, ನವದೆಹಲಿ 110006 ಅವರು ಈ ಅನುಸಂಧಾನಾತ್ಮಕ 'ಮನುಸ್ಮೃತಿ' ಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಪ್ರತ್ಯೇಕ ಪ್ರಕ್ಷಿಪ್ತ ಶ್ಲೋಕಕ್ಕೂ ಕಾರಣಗಳನ್ನು ಕೊಡಲಾಗಿದೆ.—ಸಂ.

‡ಇಂದ್ರನಿಗೆ ಸಂಬಂಧಿಸಿದುದು.—ಅನು.

ಏಕೆಂದರೆ, ಪ್ರಾಣಿಗಳಿಗೆ ನೋವನ್ನು ಉಂಟುಮಾಡದೇ, ಮಾಂಸ ಪ್ರಾಪ್ತವಾಗುವುದಿಲ್ಲ; ಮತ್ತು ಅಪರಾಧವಿಲ್ಲದೇ, ನೋವನ್ನು ಉಂಟುಮಾಡುವುದು ಧರ್ಮದ ಕಾರ್ಯವಲ್ಲ.

ಮದ್ಯಪಾನದ ಬಗೆಗಂತೂ ಸರ್ವಥಾ ನಿಷೇಧವೇ ಇದೆ. ಏಕೆಂದರೆ, ಈ ವರೆಗೆ, ವಾಮಮಾರ್ಗಿಗಳ ಹೊರತು, ಯಾವುದೇ ಗ್ರಂಥದಲ್ಲಿಯೂ ಮದ್ಯವು ಸೇವನೀಯವೆಂದು ಬರೆದಿಲ್ಲ. ಆದರೆ, ಎಲ್ಲೆಡೆಯೂ ನಿಷೇಧವಿದೆ.

ಮತ್ತು ವಿವಾಹವಿಲ್ಲದೇ ಮೈಥುನದಲ್ಲಿಯೂ ದೋಷವಿದೆ. ಇದನ್ನು ನಿರ್ದೋಷವೆನ್ನುವವನು ದೋಷಯುಕ್ತನಾಗಿರುತ್ತಾನೆ. [4]

## (ಹಸು ಮೊದಲಾದ ಪಶುಗಳನ್ನು ಕೊಂದು, ಹೋಮ ಮಾಡುವುದು)

"ಪಶುಗಳನ್ನು ಕೊಂದು, ಹೋಮ ಮಾಡುವುದರಿಂದ, ಯಜಮಾನನಿಗೆ ಮತ್ತು ಪಶುವಿಗೆ ಸ್ವರ್ಗದ ಪ್ರಾಪ್ತಿಯಾಗುತ್ತದೆ", ಎಂಬಂತಹ ವಚನಗಳನ್ನೂ ಋಷಿಗಳ ಗ್ರಂಥಗಳಲ್ಲಿ ಸೇರಿಸಿ, ಅದೆಷ್ಟೋ ಋಷಿ-ಮುನಿಗಳ ಹೆಸರಿನಿಂದ ಗ್ರಂಥಗಳನ್ನು ರಚಿಸಿ, ಗೋಮೇಧ, ಅಶ್ವಮೇಧವೆಂಬ ಹೆಸರಿನ ಯಜ್ಞಗಳನ್ನೂ ಮಾಡಿಸಲು ತೊಡಗಿದ್ದರು.

ಇದರ ಪ್ರಚಲನೆಯಿಂದ, ನಿಶ್ಚಯವಾಗುವುದೇನೆಂದರೆ, ಬ್ರಾಹ್ಮಣ ಗ್ರಂಥಗಳಲ್ಲಿ ಯಾವ ಅಶ್ವಮೇಧ, ಗೋಮೇಧ, ನರಮೇಧ ಮೊದಲಾದ ಶಬ್ದಗಳಿವೆಯೋ, ಅವುಗಳ ಅರ್ಥವನ್ನು ಸರಿಯಾಗಿ ತಿಳಿದುಕೊಂಡಿಲ್ಲ, ಎಂದು. ಏಕೆಂದರೆ, ಹಾಗೆ ತಿಳಿದುಕೊಂಡಿದ್ದರೆ, ಇಂತಹ ಅನರ್ಥವನ್ನೇಕೆ ಮಾಡುತ್ತಿದ್ದರು ?†

---

†ಮಹೀಧರನು ಯಜುರ್ವೇದದ 'ಗಣಾನಾಂ ತ್ವಾ ಗಣಪತಿಂ ಹವಾಮಹೇ' (23/19.31) ಮೊದಲಾದ ಹಲವು ಮಂತ್ರಗಳ ಭಾಷ್ಯವನ್ನು ಮಹಾ ಅಶ್ಲೀಲಕರವಾಗಿಯೂ, ಜಿಗುಪ್ಸೆ ತರುವಂತಹದಾಗಿಯೂ ಮಾಡಿ, ತನ್ನ ಲೇಖನಿಗೆ ಕಳಂಕ ತಂದಿದ್ದಾನೆ. ಈ ಭಾಷ್ಯವನ್ನು ಬಯಲಿಗೆ ತಂದು, ಘೋರವಾಗಿ ಖಂಡನೆ ಮಾಡಿದವರಲ್ಲಿ ಮಹರ್ಷಿ ದಯಾನಂದರು ಮೊದಲನೆಯವರು. ವೇದಗಳ ಸ್ವಾಧ್ಯಾಯಮಾಡದೇ, ಕೇವಲ ಪೂಜಾ-ಪಾಠ-ಶ್ರಾದ್ಧಗಳನ್ನು ಮಾಡಿಸುವುದರಲ್ಲೇ ನಿರತರಾದ ಪೌರಾಣಿಕ ವಿದ್ವಾಂಸರು ಈ ವರೆಗೂ ಮಹೀಧರನನ್ನು ಮಹಾವಿದ್ವಾಂಸನೆಂದು ತಿಳಿದಿದ್ದರು! ಮಹರ್ಷಿ ದಯಾನಂದರು ತಮ್ಮ 'ಋಗ್ವೇದಾದಿ-ಭಾಷ್ಯಭೂಮಿಕಾ'ದ ಭಾಷ್ಯಕರಣ-ಶಂಕಾ-ಸಮಾಧಾನಾದಿವಿಷಯ ಪ್ರಕರಣದಲ್ಲಿ ಮಹೀಧರನ ಭ್ರಷ್ಟಭಾಷ್ಯವನ್ನು ಹೊರಗೆಡಹಿ, ಮಂತ್ರಗಳ ಸತ್ಯಾರ್ಥವನ್ನು ತೋರಿಸಿದ್ದಾರೆ.—ಸಂ.

## (ಅಶ್ವಮೇಧ, ಗೋಮೇಧ ಮೊದಲಾದುದರ ಶುದ್ಧ ಅರ್ಥ)

ಪ್ರಶ್ನೆ:—ಅಶ್ವಮೇಧ, ಗೋಮೇಧ, ನರಮೇಧ ಮೊದಲಾದ ಶಬ್ದಗಳ ಅರ್ಥವಾದರೂ ಏನು ?

ಉತ್ತರ:—ಇವುಗಳ ಅರ್ಥವಾದರೋ ಇದಾಗಿದೆ :—

**ರಾಷ್ಟ್ರಂ ವಾ ಅಶ್ವಮೇಧಃ ॥**

[ಶತಪಥಃ-13.1.6.3]

**ಅನ್ನಂ ಹಿ ಗೌಃ ॥**

[ಶತಪಥಃ-4.3.1.25]

**ಅಗ್ನಿರ್ವಾ ಅಶ್ವಃ ॥**

[ಶತಪಥಃ-3.6.2.5]

**ಆಜ್ಯಂ ಮೇಧಃ ॥**

[ಶತಪಥ-13.3.6.2]

ಕುದುರೆಗಳು, ಹಸು ಮೊದಲಾದ ಪಶುಗಳನ್ನು ಮತ್ತು ಮನುಷ್ಯರನ್ನು ವಧಿಸಿ, ಹೋಮ ಮಾಡುವುದನ್ನು ಎಲ್ಲಿಯೂ ಬರೆದಿಲ್ಲ. ಕೇವಲ ವಾಮಮಾರ್ಗಿಗಳ ಗ್ರಂಥಗಳಲ್ಲಿ ಇಂತಹ ಅನರ್ಥವನ್ನು ಬರೆದಿದ್ದಾರೆ. **ಮತ್ತು ಈ ವಿಷಯವನ್ನೂ ಕೂಡ ವಾಮಮಾರ್ಗಿಗಳೇ ಪ್ರಚಲಿತವಾಗಿಮಾಡಿದ್ದಾರೆ.** ಮತ್ತು ಎಲ್ಲಿ-ಎಲ್ಲಿ ಇಂತಹ ಲೇಖನವಿದೆಯೋ, ಅಲ್ಲಿ-ಅಲ್ಲಿಯೂ ವಾಮಮಾರ್ಗಿಗಳು **ಪ್ರಕ್ಷೇಪ*ವನ್ನು ಮಾಡಿದ್ದಾರೆ.**

ನೋಡಿರಿ! ರಾಜನು ನ್ಯಾಯ-ಧರ್ಮದಿಂದ ಪ್ರಜಾ-ಪಾಲನೆ ಮಾಡುವುದು ; ಯಜಮಾನನು ವಿದ್ಯೆ-ಮೊದಲಾದುವುಗಳ ದಾನವನ್ನು ಮಾಡುವುದು ; ಮತ್ತು ಅಗ್ನಿಯಲ್ಲಿ ತುಪ್ಪ ಮೊದಲಾದುದರ ಹೋಮವನ್ನು ಮಾಡುವುದು **'ಅಶ್ವಮೇಧ'**;

ಅನ್ನ, ಇಂದ್ರಿಯಗಳು, ಪೃಥಿವೀ ಮೊದಲಾದುವನ್ನು ಪವಿತ್ರವಾಗಿಡುವುದು **'ಗೋಮೇಧ'**;

ಯಾವಾಗ ಮಾನವನು ಮೃತನಾಗುವನೋ, ಆಗ ವಿಧಿಪೂರ್ವಕವಾಗಿ ಅವನ ಶರೀರದ ದಹನಮಾಡುವುದು **'ನರಮೇಧ'**, ಎನಿಸುತ್ತದೆ.

---

*ಎಂದರೆ, ತಮ್ಮ ವಿಚಾರವನ್ನೇ ಮೂಲಗ್ರಂಥಗಳಲ್ಲಿ ತೂರಿಸಿದ್ದಾರೆ.—ಅನು.

## (ಪಶುಯಾಗದಿಂದ ಯಜಮಾನ ಅಥವಾ ಪಶುವಿಗೆ ಸ್ವರ್ಗವಿಲ್ಲ)

**ಪ್ರಶ್ನೆ:**—ಯಜ್ಞ ಮಾಡುವವರು—

"ಯಜ್ಞ ಮಾಡುವುದರಿಂದ, ಯಜಮಾನನು ಮತ್ತು ಪಶುವು ಸ್ವರ್ಗಗಾಮಿಗಳಾಗುತ್ತಾರೆ. ಮತ್ತು ಹೋಮಮಾಡಿ, ಮತ್ತೆ ಪಶುವನ್ನು ಜೀವಿತವನ್ನಾಗಿ ಮಾಡುತ್ತಿದ್ದರು", ಎಂದು ಹೇಳುತ್ತಾರೆ. ಈ ಮಾತು ಸತ್ಯವೋ,ಅಥವಾ ಅಲ್ಲವೋ?

**ಉತ್ತರ:**—ಅಲ್ಲ ! ಅವರು ಸ್ವರ್ಗಕ್ಕೆ ಹೋಗುವುದಾದರೆ, ಇಂತಹ ಮಾತುಗಳನ್ನಾಡುವವರನ್ನು ವಧಿಸಿ, ಹೋಮಮಾಡಿ, ಸ್ವರ್ಗಕ್ಕೆ ಕಳುಹಿಸಬೇಕು ! ಅಥವಾ ಅವರಿಗೆ ಪ್ರಿಯರಾದ ತಾಯಿ, ತಂದೆ, ಹೆಂಡತಿ ಅಥವಾ ಮಕ್ಕಳು ಮೊದಲಾದವರನ್ನು ವಧಿಸಿ, ಹೋಮಮಾಡಿ, [ಸ್ವರ್ಗಕ್ಕೆ] ತಲುಪಿಸುವುದಿಲ್ಲವೇಕೆ ? ಅಥವಾ ವೇದಿಕೆಯ ಮಧ್ಯದಿಂದ, ಮರಳಿ ಬದುಕಿಸಿಕೊಳ್ಳುವುದಿಲ್ಲವೇಕೆ ?

## (ಮಂತ್ರಗಳ ಅರ್ಥ ಪಶುಗಳನ್ನು ಕೊಲ್ಲುವ ಸಂಬಂಧದಲ್ಲಿಲ್ಲ)

**ಪ್ರಶ್ನೆ:**—ಯಾವಾಗ ಯಜ್ಞವನ್ನು ಮಾಡುತ್ತಾರೋ, ಆಗ ವೇದಮಂತ್ರಗಳನ್ನು ಉಚ್ಚರಿಸುತ್ತಾರೆ. ಅವು ವೇದಗಳಲ್ಲಿ ಇಲ್ಲದೇ ಇದ್ದಿದ್ದರೆ, ಎಲ್ಲಿಂದ ಉಚ್ಚರಿಸುತ್ತಿದ್ದರು ?

**ಉತ್ತರ:**—ಮಂತ್ರವು ಯಾವನನ್ನೂ, ಎಲ್ಲಿಯೇ ಆಗಲೀ, ಉಚ್ಚರಿಸುವುದರಿಂದ ತಡೆಯುವುದಿಲ್ಲ. ಏಕೆಂದರೆ, ಆದು ಒಂದು ಶಬ್ದ! ಆದರೆ, **ಅದರ ಅರ್ಥ–ಪಶುವನ್ನು ಕೊಂದು, ಹೋಮ ಮಾಡಬೇಕು, ಎಂಬುದಲ್ಲ.**

ಉದಾಹರಣೆಗಾಗಿ—

**"ಅಗ್ನಯೇ ಸ್ವಾಹಾ".**

ಮೊದಲಾದ ಮಂತ್ರಗಳ ಅರ್ಥ, ಅಗ್ನಿಯಲ್ಲಿ ಹವಿಸ್ಸು, ಪುಷ್ಟಿ ಮೊದಲಾದುವನ್ನು ಕೊಡುವ ತುಪ್ಪ ಮೊದಲಾದ ಉತ್ತಮ ಪದಾರ್ಥಗಳ ಹೋಮ ಮಾಡುವುದರಿಂದ, ವಾಯು, ಮಳೆ, ಜಲ ಶುದ್ಧವಾಗಿ, ಜಗತ್ತಿಗೆ ಸುಖಕರವಾಗುತ್ತವೆ, ಎಂದಾಗಿದೆ. ಆದರೆ, ಈ ಸತ್ಯವಾದ ಅರ್ಥಗಳನ್ನು ಆ ಮೂಢರು ತಿಳಿದುಕೊಂಡಿರಲಿಲ್ಲ. ಏಕೆಂದರೆ, ಯಾರು ಸ್ವಾರ್ಥ–ಬುದ್ಧಿಗಳಾಗಿರುತ್ತಾರೋ, ಅವರು ಕೇವಲ ತಮ್ಮ ಸ್ವಾರ್ಥ ಸಾಧಿಸುವುದರ ಹೊರತು, ಬೇರೆ ಏನನ್ನೂ ತಿಳಿದುಕೊಳ್ಳುವುದಿಲ್ಲ ; ಒಪ್ಪಿಕೊಳ್ಳುವುದೂ ಇಲ್ಲ.

### (ಪೋಪರ ಅನಾಚಾರದಿಂದ ಬೌದ್ಧ-ಜೈನಮತಗಳ ಪ್ರಾದುರ್ಭಾವ)

ಜನರು ಯಾವಾಗ ಈ ಪೋಪರ ಇಂತಹ ಅನಾಚಾರವನ್ನು ಕಂಡರೋ, ಮತ್ತು ಮೃತನಾದವನಿಗಾಗಿ ತರ್ಪಣ-ಶ್ರಾದ್ಧ ಮೊದಲಾದುವನ್ನು ಮಾಡುವುದನ್ನು ನೋಡಿದರೋ, ಆಗ ಒಂದು ಮಹಾ ಭಯಂಕರವಾದ, ವೇದಗಳೇ ಮೊದಲಾದ ಶಾಸ್ತ್ರಗಳ ನಿಂದಕವಾದ, ಬೌದ್ಧ **ಅಥವಾ** ಜೈನ ಮತ ಪ್ರಚಲಿತವಾಯಿತು.

ಇದೇ ದೇಶದಲ್ಲಿ ಗೋರಖಪುರದ ರಾಜನೊಬ್ಬನಿದ್ದನು. ಪೋಪರು ಅವನಿಂದ ಯಜ್ಞ ಮಾಡಿಸಿದರು. ಅವನ ಪ್ರಿಯೆಯಾದ ರಾಣಿಯ ಸಮಾಗಮವನ್ನು ಕುದುರೆಯೊಂದಿಗೆ ಮಾಡಿಸಿದುದರಿಂದ*, ಅವಳು ಮೃತಳಾದ ಮೇಲೆ, ರಾಜನು ವೈರಾಗ್ಯವಂತನಾಗಿ, ತನ್ನ ಮಗನಿಗೆ ರಾಜ್ಯವನ್ನಿತ್ತು†, ಸಾಧುವಾಗಿ, ಪೋಪರ ಪೊಳ್ಳನ್ನು ಬಹಿರಂಗಪಡಿಸತೊಡಗಿದನು, ಎಂದು ಕೇಳಿದ್ದೇವೆ.

ಇವರದೇ ಶಾಖೆಗಳ ರೂಪದಲ್ಲಿ **ಚಾರವಾಕ**, ಹಾಗೂ **ಆಭಾಣಕ** ಮತಗಳೂ ಕೂಡ ಹೊರಟಿದ್ದವು. ಇವರು ಈ ರೀತಿಯ ಶ್ಲೋಕಗಳನ್ನು ರಚಿಸಿದ್ದಾರೆ:—

**ಪಶುಶ್ಚೇನ್ನಿಹತಃ ಸ್ವರ್ಗಂ ಜ್ಯೋತಿಷ್ಟೋಮೇ ಗಮಿಷ್ಯತಿ ।**
**ಸ್ವಪಿತಾ ಯಜಮಾನೇನ ತತ್ರ ಕಥಂ ನ ಹಿಂಸ್ಯತೇ ॥1॥**

---

*ಮಹೀಧರನ ಯಜುರ್ವೇದ ಭಾಷ್ಯ ಈ ಜಘನ್ಯ ಅತ್ಯಾಚಾರಕ್ಕೆ ಪ್ರೇರಕವಾಗಿದೆ.—ಸಂ.

†ಇಂತಹ ಇನ್ನೊಂದು ಪ್ರಸಂಗ ಬ್ರಹ್ಮವೈವರ್ತ ಪುರಾಣದಲ್ಲಿ (ಶ್ರೀಕೃಷ್ಣಜನ್ಮ ಖಂಡ-4, ಅಧ್ಯಾಯ 14, ಶ್ಲೋಕ 44-52) ಹೀಗೆ ಕೊಡಲಾಗಿದೆ.—

"ಜನಮೇಜಯ ರಾಜನು ಅಶ್ವಮೇಧ ಯಜ್ಞವನ್ನು ಮಾಡಿ, ಇಂದ್ರನ ಅರಮನೆಯಲ್ಲಿ ಬಿಡಾರಹಾಕಿದ್ದನು. ಸುಂದರ ಯಜ್ಞಾಶ್ವವನ್ನು ನೋಡುವ ಕುತೂಹಲದಿಂದ ಜನಮೇಜಯನ ರಾಣಿಯು ಏಕಾಕಿನಿಯಾಗಿ ಅಶ್ವದ ಬಳಿಗೆ ಹೋದಾಗ, ಇಂದ್ರನು ಅವಳನ್ನು ಹಿಡಿದು, ಬಲಾತ್ಕಾರದಿಂದ ಭೋಗಿಸಿದನು. ರಾಣಿಯು ಈ ಬಲಾತ್ಕಾರದಿಂದ ಕಂಗೆಟ್ಟು, ಶರೀರ ತ್ಯಾಗಮಾಡಿದಳು".

ಈ ರೀತಿಯಾಗಿ, ಈ ಅಶ್ವಮೇಧಯಜ್ಞದ ಜೊತೆಗೆ ಅನೇಕ ಕುಕರ್ಮಗಳು ಹತ್ತಿಕೊಂಡು, ಈ ಯಜ್ಞವು ಕೆಟ್ಟ ಹೆಸರನ್ನು ಪಡೆದು, ಈಗ ಲುಪ್ತವಾಗಿದೆ. ಇದಕ್ಕೆಲ್ಲಾ ವಾಮಮಾರ್ಗಿಗಳ ಕುಚೇಷ್ಟೆ-ಕುತಂತ್ರಗಳೇ ಕಾರಣ.

ವರ್ತಮಾನದಲ್ಲಿ ಬ್ರಾಹ್ಮಣ ಯಾಜ್ಞಿಕರು ಪಶುಯಾಗ ಮೊದಲಾದ ಇಂತಹ ಭ್ರಾಂತ ಕರ್ಮಕಾಂಡಗಳಲ್ಲಿನ ಅನೀತಿ-ಅಕರ್ಮಗಳನ್ನು ಪ್ರಕಾರಾಂತರಗಳಿಂದ ಸಮರ್ಥಿಸುವ ಬದಲು, ಅವುಗಳಿಂದ ದೂರಸರಿದು, ಸನ್ಮಾರ್ಗಕ್ಕೆ ಬರುವುದು ಒಳ್ಳೆಯದು.—ಸಂ.

**ಮೃತಾನಾಮಿಹ ಜಂತೂನಾಂ ಶ್ರಾದ್ಧಂ ಚೇತ್ತೃಪ್ತಿಕಾರಣಮ್ ।**
**ಗಚ್ಛತಾಮಿಹ ಜಂತೂನಾಂ ವ್ಯರ್ಥಂ ಪಾಥೇಯಕಲ್ಪನಮ್ ॥2॥**

[ಸರ್ವದರ್ಶನ ಸಂಗ್ರಹ]

ಪಶುವನ್ನು ಕೊಂದು, ಅಗ್ನಿಯಲ್ಲಿ ಹೋಮ ಮಾಡುವುದರಿಂದ, ಪಶುವು ಸ್ವರ್ಗಕ್ಕೆ ಹೋಗುತ್ತದೆಯಾದರೆ, ಯಜಮಾನನು ತನ್ನ ತಂದೆ ಮೊದಲಾದವರನ್ನು ಕೊಂದು, ಸ್ವರ್ಗಕ್ಕೆ ಕಳುಹಿಸಿಕೊಡುವುದಿಲ್ಲವೇಕೆ ? [1]

ಮೃತನಾದ ಮಾನವನ ತೃಪ್ತಿಗಾಗಿ ಶ್ರಾದ್ಧ, ಹಾಗೂ ತರ್ಪಣ ಇರುವುದಾದರೆ, ವಿದೇಶಕ್ಕೆ ತೆರಳುವ ಜನರಿಗಾಗಿ ಮಾರ್ಗವ್ಯಯ, ಖಾದ್ಯ–ಪೇಯಗಳ ಬುತ್ತಿ ಕಟ್ಟಿ ಕೊಡುವುದು ವ್ಯರ್ಥವಾಗಿರುತ್ತದೆ. [2]

ಏಕೆಂದರೆ, ಮೃತನಾದವನಿಗೆ ಶ್ರಾದ್ಧ-ತರ್ಪಣದಿಂದ ಅನ್ನ-ಜಲ ಸಿಕ್ಕುವುದಾದರೆ, ಪರದೇಶದಲ್ಲಿರುವ ಜೀವಂತರಿಗಾಗಿ, ಅಥವಾ ಮಾರ್ಗದಲ್ಲಿ ಸಂಚರಿಸುತ್ತಿರುವವರಿಗಾಗಿ, ಅಡಿಗೆ ಮಾಡಿದ ಭೋಜನವನ್ನು ಮನೆಯಲ್ಲಿ ಎಲೆಯ ಮೇಲೆ ಬಡಿಸಿ, ಲೋಟದಲ್ಲಿ [ನೀರು] ತುಂಬಿಸಿ, ಅವರ ಹೆಸರನ್ನು ಹೇಳುವುದರಿಂದ, ಅವರಿಗೆ ತಲುಪುವುದಿಲ್ಲವೇಕೆ ?

ಆದ್ದರಿಂದ, ಜೀವಂತನಾಗಿದ್ದು, ದೂರದಲ್ಲಿ ಅಥವಾ ಹತ್ತು ಮೊಳ ದೂರದಲ್ಲಿ ಕುಳಿತವನಿಗೆ ಕೊಟ್ಟುದು ತಲುಪುವುದಿಲ್ಲವಾದರೆ, ಸತ್ತವನ ಹತ್ತಿರಕ್ಕೆ ಯಾವ ರೀತಿಯಲ್ಲಿಯೂ ತಲುಪಲಾರದು.

## (ಬೌದ್ಧ–ಜೈನಮತಗಳ ವೃದ್ಧಿ)

ಅವರ ಇಂತಹ ಯುಕ್ತಿಸಿದ್ಧವಾದ ಉಪದೇಶಗಳನ್ನು ಜನರು ಒಪ್ಪತೊಡಗಿದರು. ಮತ್ತು, ಅವರ ಮತ ವರ್ಧಿಸತೊಡಗಿತು. ಯಾವಾಗ ಬಹಳ ಮಂದಿ ಜಾಗೀರದಾರರು ಅವರ ಮತವನ್ನು ಸೇರಿದರೋ, ಆಗ ಪೋಪರೂ ಕೂಡ ಅವರ ಕಡೆಗೇ ಒಲಿದರು. ಏಕೆಂದರೆ, ಇವರಿಗೆ ಎಲ್ಲಿ ಭಾರೀ ತುತ್ತು ಚೆನ್ನಾಗಿ ಸಿಕ್ಕುವುದೋ, ಅಲ್ಲಿಗೇ ಹೊರಟು ಹೋಗುವರು. ಸರ್ರನೇ ಜೈನರಾಗತೊಡಗಿದರು!

ಜೈನ [ಮತ]ದಲ್ಲಿಯೂ ಬೇರೆ ಬಗೆಯ ಪೋಪಲೀಲೆ ಬಹಳವಿದೆ. ಅವನ್ನು ಹನ್ನೆರಡನೆಯ ಸಮುಲ್ಲಾಸದಲ್ಲಿ ಬರೆಯುವೆವು.

ಬಹುಮಂದಿ ಇವರ ಮತವನ್ನು ಸ್ವೀಕಾರಮಾಡಿದರು. ಆದರೆ, ಪರ್ವತ ಪ್ರದೇಶಗಳು, ಕಾಶೀ, ಕಾನ್ಯಕುಬ್ಜ, ಪಶ್ಚಿಮ ಮತ್ತು ದಕ್ಷಿಣ ದೇಶಗಳ ಅದೆಷ್ಟೋ ಮಂದಿ ಜನರು ಜೈನರ ಮತವನ್ನು ಸ್ವೀಕರಿಸಿರಲಿಲ್ಲ.

### (ಜೈನರಿಂದ ಆರ್ಯರ ಉತ್ಪೀಡನೆ, ಮತ್ತು ವೇದಾದಿಗಳ ನಾಶ)

ಆ ಜೈನರು ವೇದಾರ್ಥವನ್ನು ತಿಳಿಯದೇ, ಬಾಹ್ಯ ಪೋಪಲೀಲೆಯನ್ನು ಭ್ರಾಂತಿಯಿಂದ ವೇದಾನುಕೂಲವೆಂದು ಅಂಗೀಕರಿಸಿ, ವೇದಗಳನ್ನೂ ಕೂಡ ನಿಂದಿಸಲಾರಂಭಿಸಿದರು.* ಅವರ ಪಠನ–ಪಾಠನಗಳನ್ನೂ, ಯಜ್ಞೋಪವೀತ, ಹಾಗೂ ಬ್ರಹ್ಮಚರ್ಯ ಮೊದಲಾದ ನಿಯಮಗಳನ್ನೂ ಕೂಡ ನಾಶಮಾಡಿದರು. **ವೇದಗಳೇ ಮೊದಲಾದುವುಗಳ ಎಷ್ಟು ಪುಸ್ತಕಗಳು ಎಲ್ಲಿ ಸಿಕ್ಕಿದವೋ, ಅಷ್ಟನ್ನೂ ನಾಶ ಪಡಿಸಿದರು.**

**ಆರ್ಯರ ಮೇಲೆ ಬಹಳ ರಾಜ್ಯಶಾಸನವನ್ನೂ ಕೂಡ ನಡೆಯಿಸಿದರು; ದುಃಖವನ್ನು ಕೊಟ್ಟರು!**

ಯಾವಾಗ ಅವರಿಗೆ ಭಯ-ಸಂಶಯ ಉಳಿಯಲಿಲ್ಲವೋ, ಆಗ ತಮ್ಮ ಮತೀಯರಾದ ಗೃಹಸ್ಥರಿಗೆ ಮತ್ತು ಸಾಧುಗಳಿಗೆ ಗೌರವವನ್ನೂ, ಮತ್ತು ವೇದಮಾರ್ಗಿಗಳಿಗೆ ಅಪಮಾನವನ್ನೂ, ಮತ್ತು ಪಕ್ಷಪಾತದಿಂದ ಶಿಕ್ಷೆಯನ್ನೂ ಕೂಡ ಕೊಡತೊಡಗಿದರು.† ಮತ್ತು ತಾವು ಸುಖದಲ್ಲಿ, ಆರಾಮದಲ್ಲಿ ಮತ್ತು ಗರ್ವದಲ್ಲಿ ಉಬ್ಬಿ, ತಿರುಗಹತ್ತಿದರು.

**ಋಷಭದೇವನಿಂದ** ಹಿಡಿದು **ಮಹಾವೀರನವರೆಗಿನ** ತಮ್ಮ ತೀರ್ಥಂಕರರ ದೊಡ್ಡ-ದೊಡ್ಡ ಪ್ರತಿಮೆಗಳನ್ನು ರಚಿಸಿ, ಪೂಜೆ ಮಾಡತೊಡಗಿದರು.

ಎಂದರೆ, **ಪಾಷಾಣ ಮೊದಲಾದುದರ ವಿಗ್ರಹಗಳ ಪೂಜೆಯು ಮೂಲ ಜೈನರಿಂದ ಪ್ರಚಲಿತವಾಯಿತು.**

ಪರಮೇಶ್ವರನ ಅಂಗೀಕಾರ ಕಡಿಮೆಯಾಯಿತು; ಶಿಲೆಯೇ ಮೊದಲಾದುವುಗಳ ಮೂರ್ತಿಗಳ ಪೂಜೆಯಲ್ಲಿ ನಿರತರಾದರು. **ಹೀಗೆ ಮುನ್ನೂರು ವರ್ಷಗಳವರೆಗೆ**

---

*ಪ್ರಮಾಣಕ್ಕಾಗಿ ಕರ್ನಾಟಕದವನೇ ಆದ ಸೋಮದೇವಸೂರಿ-ವಿರಚಿತ 'ಯಶಸ್ತಿಲಕ-ಚಂಪೂ' (ಸಂಸ್ಕೃತ) ಎಂಬ ಗ್ರಂಥವನ್ನು ಓದಿ—ಸಂ.

†ರಾಜನು ಯಾವಾಗ ಜೈನಮತವನ್ನು ಅಂಗೀಕರಿಸುತ್ತಿದ್ದನೋ, ಆಗ ವೇದಮಾರ್ಗಿಗಳನ್ನು ಆನೆಯ ಕಾಲಿನಿಂದ ತುಳಿಸಿ, ಕೊಲ್ಲಿಸುತ್ತಿದ್ದರೆಂದು ಇತಿಹಾಸವಿದೆ. ಉಜ್ಜಯಿನಿಯ ರಾಜನು ಹೀಗೆ ಮಾಡುತ್ತಿದ್ದನು. ಆದ್ದರಿಂದ, ಶಂಕರಾಚಾರ್ಯರು ಮೊದಲು ಅಲ್ಲಿಗೇ ಹೊರಟರು.—ಸಂ.

ಆರ್ಯಾವರ್ತದಲ್ಲಿ ಜೈನರ ರಾಜ್ಯವಿದ್ದಿತು.* ಪ್ರಾಯಶಃ [ಜನರು] ಪದಾರ್ಥ ಜ್ಞಾನದಿಂದ ಶೂನ್ಯರಾಗಿ ಹೋಗಿದ್ದರು. ಈ ಘಟನೆಗೆ ಸುಮಾರು ಎರಡೂವರೆ ಸಾವಿರ ವರ್ಷಗಳು ತೀರಿರಬಹುದು.

## (ಶಂಕರಾಚಾರ್ಯರ ಪ್ರಾದುರ್ಭಾವ)

2,200 ವರ್ಷಗಳು ಉರುಳಿದ ಮೇಲೆ, **ಶಂಕರಾಚಾರ್ಯರೆಂಬ** ದ್ರವಿಡ ದೇಶೋತ್ಪನ್ನರಾದ† ಬ್ರಾಹ್ಮಣರೊಬ್ಬರು ವ್ಯಾಕರಣ ಮೊದಲಾದ ಸರ್ವ ಶಾಸ್ತ್ರಗಳನ್ನೂ ಓದಿ—

"**ಓಹೋ! ಸತ್ಯವೂ, ಆಸ್ತಿಕವೂ ಆದ ವೇದಮತ ಬಿಟ್ಟುಹೋದುದು, ಮತ್ತು ಜೈನ ನಾಸ್ತಿಕ ಮತದ ಪ್ರಚಲನವಾದುದು ಮಹಾ ಹಾನಿಕರವಾದ ವಿಷಯವಾಗಿದೆ. ಇವರನ್ನು ಯಾವ ರೀತಿಯಿಂದಲಾದರೂ ದೂರಮಾಡಬೇಕು.**", ಎಂದು ಯೋಚಿಸಲಾರಂಭಿಸಿದರು.

ಶಂಕರಾಚಾರ್ಯರು ಶಾಸ್ತ್ರಗಳನ್ನಂತೂ ಓದಿಯೇ ಇದ್ದರು. ಜೊತೆಗೆ, ಜೈನಮತದ ಪುಸ್ತಕಗಳನ್ನೂ ಓದಿದ್ದರು. ಮತ್ತು ಅವರ ಯುಕ್ತಿಯೂ ಕೂಡ ಬಹಳ ಪ್ರಬಲವಾಗಿದ್ದಿತು.

ಇವರನ್ನು ಹೇಗೆ ಮೂಲೆಗುಂಪಾಗಿಸಬೇಕು, ಎಂದವರು ಆಲೋಚಿಸಿದರು. ಉಪದೇಶ ಮತ್ತು ಶಾಸ್ತ್ರಾರ್ಥಗಳನ್ನು ಮಾಡುವುದರಿಂದ ಈ ಜನರು, ದೂರ ಸರಿದು ಹೋಗುವರೆಂದು ನಿಶ್ಚಯವಾಯಿತು.

## (ಜೈನಮತದ ನಿರಾಕರಣೆಗೆ ಪ್ರಯತ್ನ)

ಹೀಗೆ, ಆಲೋಚಿಸಿ, ಉಜ್ಜಯಿನೀ ನಗರಿಗೆ ಬಂದರು. ಅಲ್ಲಿ, ಆ ಕಾಲದಲ್ಲಿ ಜೈನರ ಗ್ರಂಥಗಳನ್ನೂ ಮತ್ತು ಸ್ವಲ್ಪ ಸಂಸ್ಕೃತವನ್ನೂ ಕೂಡ ಓದಿದ್ದ **ಸುಧನ್ವಾ** ರಾಜರಾಗಿದ್ದರು. ಅಲ್ಲಿಗೆ ಹೋಗಿ, ವೇದೋಪದೇಶ ಮಾಡತೊಡಗಿದರು. ಮತ್ತು ರಾಜನನ್ನು ಸಂಧಿಸಿ—

"ತಾವು ಸಂಸ್ಕೃತವನ್ನೂ ಮತ್ತು ಜೈನರ ಗ್ರಂಥಗಳನ್ನೂ ಕೂಡ ಓದಿದ್ದೀರಿ; ಮತ್ತು ಜೈನಮತವನ್ನು ಅಂಗೀಕರಿಸಿದ್ದೀರಿ. ಆದುದರಿಂದ, ನಾನು ತಮಗೆ

---

*ಜೈನರ ಐತಿಹಾಸಿಕ ಹಿನ್ನೆಲೆ ಮತ್ತು ಮೂರ್ತಿಪೂಜೆಯ ಬಗ್ಗೆ ವಿಶೇಷ ವಿವರಗಳಿಗೆ ಪರಿಶಿಷ್ಟ-ಆನ್ನು ನೋಡಿ—ಸಂ.

†ಕೇರಳೀಯ.—ಅನು.

ಯಾವನು ಸೋಲುವನೋ, ಅವನು ಗೆಲ್ಲುವವನ ಮತವನ್ನು ಸ್ವೀಕರಿಸಬೇಕು, ಎಂಬ ಪ್ರತಿಜ್ಞೆಯ ಮೇಲೆ, ಜೈನರ ಪಂಡಿತರೊಂದಿಗೆ ನನ್ನ ಶಾಸ್ತ್ರಾರ್ಥವನ್ನು ಮಾಡಿಸಬೇಕೆಂದು ಕೋರುತ್ತೇನೆ. ಮತ್ತು ತಾವೂ ಕೂಡ ಗೆಲ್ಲುವವನ ಮತವನ್ನು ಸ್ವೀಕರಿಸಿ.", ಎಂದು ಹೇಳಿದರು.

ಸುಧನ್ವಾ ರಾಜರು ಜೈನಮತದಲ್ಲಿದ್ದರೂ ಕೂಡ, ಸಂಸ್ಕೃತ ಗ್ರಂಥಗಳನ್ನು ಓದಿದ್ದರಿಂದ, ಅವರ ಬುದ್ಧಿಯಲ್ಲಿ ಸ್ವಲ್ಪ ವಿದ್ಯೆಯ ಪ್ರಕಾಶವಿದ್ದಿತು. ಇವರಿಂದಾಗಿ, ಅವರ ಮನಸ್ಸಿನಲ್ಲಿ ಅತ್ಯಂತ ಪಶುತ್ವ ಆವರಿಸಿರಲಿಲ್ಲ. ಏಕೆಂದರೆ, **ಯಾವನು ವಿದ್ವಾಂಸನಾಗಿರುತ್ತಾನೋ, ಅವನು ಸತ್ಯಾಸತ್ಯದ ಪರೀಕ್ಷೆಯನ್ನು ಮಾಡಿ, ಸತ್ಯದ ಸ್ವೀಕಾರವನ್ನೂ ಮತ್ತು ಅಸತ್ಯದ ತ್ಯಾಗವನ್ನೂ ಮಾಡುತ್ತಾನೆ.**

ಎಂದಿನವರೆಗೆ ಸುಧನ್ವಾ ರಾಜರಿಗೆ ದೊಡ್ಡ ವಿದ್ವಾಂಸನಾದ ಉಪದೇಶಕನು ಸಿಕ್ಕಿರಲಿಲ್ಲವೋ, ಅಲ್ಲಿಯವರೆಗೆ, ಇವುಗಳಲ್ಲಿ ಸತ್ಯವಾವುದು, ಮತ್ತು ಅಸತ್ಯವಾವುದು, ಎಂಬ ಸಂದೇಹದಲ್ಲಿದ್ದರು. ಯಾವಾಗ ಶಂಕರಾಚಾರ್ಯರ ಈ ಮಾತನ್ನು ಕೇಳಿದರೋ, ಆಗ ಬಹಳ ಪ್ರಸನ್ನತೆಯಿಂದ—

"ನಾವು ಶಾಸ್ತ್ರಾರ್ಥವನ್ನು ಮಾಡಿಸಿ, ಸತ್ಯಾಸತ್ಯದ ನಿರ್ಣಯವನ್ನು ಅವಶ್ಯವಾಗಿ ಮಾಡಿಸುವೆವು.", ಎಂದು ಹೇಳಿದರು.

## (ಜೈನ ವಿದ್ವಾಂಸರೊಡನೆ ಶಂಕರಾಚಾರ್ಯರ ಶಾಸ್ತ್ರಾರ್ಥ)

ಜೈನರ ಪಂಡಿತರುಗಳನ್ನು ದೂರ ದೂರದಿಂದ ಕರೆಯಿಸಿ, ಸಭೆಯನ್ನು ಮಾಡಿಸಿದರು. ಅದರಲ್ಲಿ ಶಂಕರಾಚಾರ್ಯರದು ವೇದಮತವೂ, ಮತ್ತು ಜೈನರದು ವೇದವಿರುದ್ಧವಾದ ಮತವೂ ಆಗಿದ್ದಿತು. ಎಂದರೆ, ಶಂಕರಾಚಾರ್ಯರ ಪಕ್ಷ ವೇದ ಮತದ ಸ್ಥಾಪನೆಯೂ, ಹಾಗೂ ಜೈನರ [ಮತದ] ಖಂಡನವೂ; ಮತ್ತು ಜೈನರ ಪಕ್ಷ ತಮ್ಮ ಮತದ ಸ್ಥಾಪನೆಯೂ, ಹಾಗೂ ವೇದದ ಖಂಡನವೂ ಆಗಿದ್ದಿತು.

ಶಾಸ್ತ್ರಾರ್ಥವು ಅನೇಕ ದಿನಗಳವರೆಗೆ ನಡೆಯಿತು. **ಜೈನರ ಮತವು—**

**"ಸೃಷ್ಟಿಯ ಕರ್ತೃವಾದ ಅನಾದಿ ಈಶ್ವರನು ಯಾವನೂ ಇಲ್ಲ.** ಈ ಜಗತ್ತು ಮತ್ತು ಜೀವರು ಅನಾದಿಗಳಾಗಿದ್ದಾರೆ. ಈ ಎರಡು ತತ್ತ್ವಗಳ ಉತ್ಪತ್ತಿ ಮತ್ತು ನಾಶ ಎಂದಿಗೂ ಆಗುವುದಿಲ್ಲ.", ಎಂಬುದಾಗಿದ್ದಿತು.

ಇವಕ್ಕೆ ವಿರುದ್ಧವಾಗಿ, **ಶಂಕರಾಚಾರ್ಯರ ಮತವು—**

"ಅನಾದಿಸಿದ್ಧನಾದ ಪರಮಾತ್ಮನೇ ಜಗತ್ತಿನ ಕರ್ತೃವಾಗಿದ್ದಾನೆ. ಈ ಜಗತ್ತು ಮತ್ತು ಜೀವ ಮಿಥ್ಯೆ. ಏಕೆಂದರೆ, ಆ ಪರಮೇಶ್ವರನು ತನ್ನ ಮಾಯೆಯಿಂದ ಜಗತ್ತನ್ನು ರಚಿಸಿದನು. ಅವನೇ ಧಾರಣ, ಹಾಗೂ ಪ್ರಳಯವನ್ನು ಮಾಡುತ್ತಾನೆ. ಮತ್ತು ಈ ಜೀವ, ಹಾಗೂ ಪ್ರಪಂಚ ಸ್ವಪ್ನದಂತೆ [ಮಿಥ್ಯೆ] ಆಗಿವೆ. ಪರಮೇಶ್ವರನು ತಾನೇ ಸರ್ವರೂಪನಾಗಿ ಲೀಲೆಯನ್ನು ಮಾಡುತ್ತಿದ್ದಾನೆ", ಎಂಬುದಾಗಿದ್ದಿತು.

## (ಶಾಸ್ತ್ರಾರ್ಥದಲ್ಲಿ ಜೈನರ ಪರಾಜಯ)

ಬಹು ದಿನಗಳ ವರೆಗೆ ಶಾಸ್ತ್ರಾರ್ಥವಾಗುತ್ತಾ ಹೋಯಿತು. ಆದರೆ, ಕೊನೆಯಲ್ಲಿ, ಯುಕ್ತಿ ಮತ್ತು ಪ್ರಮಾಣದಿಂದ, ಜೈನರ ಮತವು ಕಡಿದುಹೋಯಿತು; ಮತ್ತು ಶಂಕರಾಚಾರ್ಯರ ಮತವು ಅಖಂಡವಾಗಿ ಉಳಿಯಿತು.

ಆಗ, ಆ ಜೈನರ ಪಂಡಿತರೂ ಮತ್ತು ಸುಧನ್ವಾರಾಜರೂ ವೇದಮತವನ್ನು ಸ್ವೀಕರಿಸಿದರು; ಜೈನಮತವನ್ನು ಬಿಟ್ಟುಬಿಟ್ಟರು. ಮತ್ತೆ, ಬಹಳ ಕೋಲಾಹಲ ವಾಯಿತು. ಮತ್ತು ಸುಧನ್ವಾರಾಜರು ತಮ್ಮ ಇಷ್ಟಮಿತ್ರರಾದ ರಾಜರುಗಳಿಗೆ ಬರೆದು, ಶಂಕರಾಚಾರ್ಯರಿಂದ ಶಾಸ್ತ್ರಾರ್ಥ ಮಾಡಿಸಿದರು. ಆಗ ಜೈನರ ಪರಾಜಯ ಕಾಲ ಬಂದಿದ್ದುದರಿಂದ, ಪರಾಜಿತರಾಗುತ್ತಾ ಹೋದರು. ಆ ಮೇಲೆ, ಆರ್ಯಾವರ್ತದೇಶವಲ್ಲಿ ಎಲ್ಲೆಡೆಯೂ ಶಂಕರಾಚಾರ್ಯರಿಗೆ ಪರ್ಯಟನಮಾಡುವ ವ್ಯವಸ್ಥೆಯನ್ನು ಸುಧನ್ವಾ ಮೊದಲಾದ ರಾಜರುಗಳೇ ಮಾಡಿದರು. ಮತ್ತು ಅವರ ರಕ್ಷಣೆಗಾಗಿ, ಜೊತೆಗೆ ಸೇವಕ–ಪರಿಚಾರಕರನ್ನೂ ಕೂಡ ನೇಮಿಸಿದರು.

## (ವೈದಿಕಮತದ ಪುನರುದ್ಧಾರ)

ಅದೇ ಕಾಲದಿಂದ, ಎಲ್ಲರಿಗೂ ಯಜ್ಞೋಪವೀತ ಸಂಸ್ಕಾರಗಳು ಆಗತೊಡಗಿದವು. ಮತ್ತು ವೇದಗಳ ಪಠನ-ಪಾಠನವೂ ಆರಂಭವಾಯಿತು. [ಶಂಕರಾಚಾರ್ಯರು] ಹತ್ತು ವರ್ಷಗಳಷ್ಟು ಕಾಲ ಆರ್ಯಾವರ್ತದಲ್ಲಿ ಸುತ್ತಾಡಿ, ಜೈನ [ಮತ]ದ ಖಂಡನವನ್ನೂ, ಮತ್ತು ವೇದಗಳ ಮಂಡನವನ್ನೂ ಮಾಡಿದರು.

ಅಲ್ಲದೇ, ಶಂಕರಾಚಾರ್ಯರ ಕಾಲದಲ್ಲಿ ಜೈನ [ವಿಗ್ರಹಗಳ] ವಿಧ್ವಂಸ ಎಂದರೆ, ಜೈನರ ಎಷ್ಟು ವಿಗ್ರಹಗಳು ಭೂಮಿಯ ಒಳಗಿನಿಂದ ಭಗ್ನವಾಗಿ ಸಿಕ್ಕುತ್ತವೋ, ಅವು ಶಂಕರಾಚಾರ್ಯರ ಕಾಲದಲ್ಲಿ ಭಗ್ನವಾಗಿದ್ದವು. ಮತ್ತು ಯಾವವು ಭಗ್ನವಾಗ ದೆಯೇ ನೆಲದಿಂದ ಹೊರಬರುತ್ತವೋ, ಅವುಗಳನ್ನು ಜೈನರು. ಮುರಿಯಲ್ಪಡದೇ ಇರಲಿ, ಎಂದು [ಆಮೇಲೆ] ಹೂತಿಟ್ಟಿದ್ದರು. ಅವು. ಈವರೆಗೂ ಕೂಡ, ಎಲ್ಲೆಲ್ಲಿಯೋ ಭೂಮಿಯೊಳಗಿನಿಂದ ಹೊರಬರುತ್ತಿವೆ.

ಶಂಕರಾಚಾರ್ಯರಿಗಿಂತ ಮೊದಲು ಶೈವಮತವೂ ಸ್ವಲ್ಪ ಪ್ರಚಲಿತವಾಗಿದ್ದಿತು. [ಅವರು] ಅದನ್ನೂ ಕೂಡ ಖಂಡಿಸಿದ್ದರು.* ವಾಮಮಾರ್ಗದ ಖಂಡನವನ್ನೂ ಮಾಡಿದರು.

ಆ ಕಾಲದಲ್ಲಿ ಈ ದೇಶದಲ್ಲಿ ಐಶ್ವರ್ಯ ಪುಷ್ಕಳವಾಗಿದ್ದಿತು. ಮತ್ತು ಸ್ವದೇಶಭಕ್ತಿಯೂ ಕೂಡ ಇದ್ದಿತು.

ಜೈನರ ದೇವಾಲಯಗಳನ್ನು ಶಂಕರಾಚಾರ್ಯರು ಅಥವಾ ಸುಧನ್ವಾರಾಜರು ಒಡೆಯಿಸಿರಲಿಲ್ಲ. ಏಕೆಂದರೆ, ಅವುಗಳಲ್ಲಿ ವೇದಗಳೇ ಮೊದಲಾದುದರ ಪಾಠಶಾಲೆಗಳನ್ನು ನಡೆಯಿಸುವ ಇಚ್ಛೆಯಿದ್ದಿತು.

## (ಜೈನಮತಾನುಯಾಯಿಗಳಿಂದ ಶಂಕರಾಚಾರ್ಯರಿಗೆ ವಿಷಪ್ರದಾನ)

ಯಾವಾಗ ವೇದಮತದ ಸ್ಥಾಪನೆಯಾಯಿತೋ, ಮತ್ತು ವಿದ್ಯಾಪ್ರಚಾರ ಮಾಡುವ ಆಲೋಚನೆಯನ್ನು ಮಾಡುತ್ತಲಿದ್ದರೋ, ಆಗಲೇ, ಅಷ್ಟರಲ್ಲಿಯೇ ಇಬ್ಬರು ಜೈನರು–ಹೊರಗೆಮಾತ್ರ ಹೆಸರಿಗೆ ವೇದಮತೀಯರೂ ಮತ್ತು ಒಳಗಿನಿಂದ ಕಟ್ಟುಗ್ರ ಜೈನರೂ, ಅಂದರೆ, ಕಪಟಮುನಿಗಳೂ ಆದವರು ; [ಬಳಿಸೇರಿದರು]. ಶಂಕರಾಚಾರ್ಯರು ಅವರ ಮೇಲೆ ಬಹಳ ಪ್ರಸನ್ನರಾಗಿದ್ದರು. ಅವರಿಬ್ಬರೂ ಅವಕಾಶ ಸಾಧಿಸಿ, ಶಂಕರಾಚಾರ್ಯರಿಗೆ ಹಸಿವೆಯೇ ಮಂದವಾಗಿ ಹೋಗುವಂತಹ ವಿಷಯುಕ್ತವಾದ ವಸ್ತುವನ್ನು ತಿನ್ನಿಸಿದರು. ಆ ಮೇಲೆ ಶರೀರದಲ್ಲಿ ಗುಳ್ಳೆಗಳು-ಗಾಯಗಳು ಉದ್ಭವಿಸಿ, ಆರು ತಿಂಗಳುಗಳೊಳಗೆ ಶರೀರವು ಬಿದ್ದುಹೋಯಿತು.

## (ಶಂಕರಾಚಾರ್ಯರ ಉತ್ತರಾಧಿಕಾರಿಗಳು)

ಆಗ ಎಲ್ಲರೂ ನಿರುತ್ಸಾಹರಾಗಿಹೋದರು. ಮತ್ತು ಯಾವ ವಿದ್ಯೆಯ ಪ್ರಚಾರವಾಗಲಿದ್ದಿತೋ, ಅದೂ ಕೂಡ ಆಗದೇ ಹೋಯಿತು.

---

*ನೋಡಿ, 'ಶಂಕರದಿಗ್ವಿಜಯ'-ಸರ್ಗ 15, ಶ್ಲೋಕ 164—

ಶಾಕ್ತ್ಯೈಃ ಪಾಶುಪತೈರಪಿ ಕ್ಷಪಣಕೈಃ ಕಾಪಾಲಿಕೈರ್ವೈಷ್ಣವೈ-
ರಪ್ಯನ್ಯೈರಖಿಲೈಃ ಖಿಲಂ ಖಲು ಖಲೈರ್ದುರ್ವಾದಿಭಿರ್ವೈದಿಕಮ್ ।
ಮಾರ್ಗಂ ರಕ್ಷಿತುಮುಗ್ರವಾದಿವಿಜಯಂ ನೋ ಮಾನಹೇತೋರ್ವ್ಯಧಾತ್
ಸರ್ವಜ್ಞೋ ನ ಯತೋಽಸ್ಯ ಸಂಭವತಿ ಸಮ್ಮಾನಗ್ರಹಗ್ರಸ್ತತಾ ॥

—ಆಶ್ಚರ್ಯದ ವಿಷಯವೇನೆಂದರೆ, ಶಂಕರಾಚಾರ್ಯರು ಯಾವ ಶೈವ ಮತದ ಖಂಡನೆಯನ್ನು ಮಾಡಿದ್ದರೋ, ಅವರ ಅನುಯಾಯೀ ಉತ್ತರಾಧಿಕಾರಿ ಶಂಕರಾಚಾರ್ಯರುಗಳು ಶೈವ ಮತವನ್ನೇ ಅಂಗೀಕರಿಸುತ್ತಾರೆ! –ಯು.ಮೀ.

ಅವರು ಶಾರೀರಕ ಭಾಷ್ಯ ಮೊದಲಾದ ಯಾವಯಾವುದನ್ನು ರಚಿಸಿದ್ದರೋ, ಅವುಗಳ ಪ್ರಚಾರವನ್ನು ಶಂಕರಾಚಾರ್ಯರ ಶಿಷ್ಯರು ಮಾಡತೊಡಗಿದರು. ಎಂದರೆ, ಜೈನರ ಖಂಡನಕ್ಕಾಗಿ—'ಬ್ರಹ್ಮಸತ್ಯ; ಜಗನ್ಮಿಥ್ಯಾ', ಮತ್ತು ಜೀವ-ಬ್ರಹ್ಮ-ಏಕತ್ವದ ಯಾವ ಯಾವ ಕಥನವನ್ನು ಮಾಡಿದ್ದರೋ, ಅವರ ಉಪದೇಶವನ್ನು ಮಾಡಲಾರಂಭಿಸಿದರು.

ದಕ್ಷಿಣದಲ್ಲಿ ಶೃಂಗೇರಿ, ಪೂರ್ವದಲ್ಲಿ ಭೂಗೋವರ್ಧನ,* ಉತ್ತರದಲ್ಲಿ ಜೋಶೀ, ಮತ್ತು ದ್ವಾರಿಕೆಯಲ್ಲಿ ಶಾರದಾಮಠಗಳನ್ನು ಸ್ಥಾಪಿಸಿ†, ಶಂಕರಾಚಾರ್ಯರ ಶಿಷ್ಯರು ಮಹಂತರಾಗಿ, ಮತ್ತು ಐಶ್ವರ್ಯಶಾಲಿಗಳಾಗಿ, ಆನಂದದಿಂದ ಮೆರೆಯತೊಡಗಿದರು. ಏಕೆಂದರೆ, ಶಂಕರಾಚಾರ್ಯರ ನಂತರ, ಅವರ ಶಿಷ್ಯರಿಗೆ ಬಹಳ ಪ್ರತಿಷ್ಠೆ ಸಿಕ್ಕತೊಡಗಿತು.

## ('ಬ್ರಹ್ಮ ಸತ್ಯ—ಜಗತ್ತು ಮಿಥ್ಯೆ', ಎಂಬುದು ಶಂಕರಾಚಾರ್ಯರ ಮತವಾಗಿತ್ತೇನು?)

ಈಗ, ಈ ಬಗೆಗೆ ಯೋಚಿಸಬೇಕಾದುದು ಏನೆಂದರೆ—ಜೀವ-ಬ್ರಹ್ಮರ ಏಕತ್ವ, ಜಗತ್ತಿನ ಮಿಥ್ಯಾತ್ವ ಶಂಕರಾಚಾರ್ಯರ ಸ್ವಂತ ಮತವಾಗಿದ್ದರೆ, ಅದು ಒಳ್ಳೆಯ ಮತವಲ್ಲ. [ಜೈನರ] ಮತದ ಖಂಡನಕ್ಕಾಗಿ, ಆ ಮತವನ್ನು ಸ್ವೀಕರಿಸಿದ್ದಿದ್ದರೆ, ಸ್ವಲ್ಪ ಒಳ್ಳೆಯದು.

---

*ಪುರೀ ಜಗನ್ನಾಥ—ಅನು.

†ಪ್ರಚಲಿತ ಧಾರಣೆಯಂತೆ, ಆದಿಶಂಕರಾಚಾರ್ಯರೇ ಈ ನಾಲ್ಕೂ ಮಠಗಳನ್ನೂ, ಮತ್ತು ಅವುಗಳಲ್ಲಿನ ವಿಗ್ರಹದ ಪ್ರತಿಷ್ಠೆ, ಪೂಜೆ ಮೊದಲಾದ ವ್ಯವಸ್ಥೆಯನ್ನೂ ಮಾಡಿದರೆಂದು ನಂಬಿಕೆ ಇದೆ. ಆದರೆ, ಇಲ್ಲಿ ಮಹರ್ಷಿ ದಯಾನಂದರು ಆದಿಶಂಕರಾಚಾರ್ಯರ ಅನುಯಾಯಿಗಳು ಈ ಮಠಗಳನ್ನು ಸ್ಥಾಪಿಸಿದರೆಂದು ಹೇಳುತ್ತಾರೆ. ಆದಿಶಂಕರಾಚಾರ್ಯರ ಶಿಷ್ಯಂದಿರೂ ಕೂಡ ಶಂಕರಾಚಾರ್ಯರ ಹೆಸರಿನಿಂದಲೇ ತಾವೂ ಮೆರೆದ,ಮೆರೆಯುತ್ತಿರುವ ಕಾರಣದಿಂದ,ಇವರ ಕಾರ್ಯಗಳೆಲ್ಲಾ ಆದಿಶಂಕರಾಚಾರ್ಯರ ತಲೆಗೇ ಕಟ್ಟಿಬಿಟ್ಟಿವೆ, ಎಂದು ಹೇಳಿದರೆ, ಅತಿಶಯೋಕ್ತಿ ಏನಲ್ಲ! ಏಕೆಂದರೆ, ಆದಿಶಂಕರಾಚಾರ್ಯರ ಹೆಸರಿನಲ್ಲಿ ರಚಿತವಾಗಿರುವ ದೇವೀ-ದೇವತೆಗಳ ಸ್ತೋತ್ರ-ಪಾಠಗಳಂತಹ ಗ್ರಂಥಗಳು ಅವರದಲ್ಲವೆಂದು, ಅವರ ಅನುಯಾಯೀ ವಿದ್ವಾಂಸರೇ ಒಪ್ಪುತ್ತಾರೆ. ಆದಿಶಂಕರಾಚಾರ್ಯರಂತಹ ಅಸಾಧಾರಣ, ಅಭೂತಪೂರ್ವ ವ್ಯಕ್ತಿತ್ವವು ಇಂತಹ ಸಾಮಾನ್ಯ ಜನರಂಜನೆಯ ಕಾರ್ಯಗಳನ್ನು ಮಾಡಿರಲಿಲ್ಲವೆಂಬುದು, ಅವರ 'ಶಾರೀರಕಭಾಷ್ಯ'ದ ಸ್ತರದಿಂದಲೇ ತಿಳಿದುಬರುತ್ತದೆ.—ಸಂ.

## (ನವೀನ ವೇದಾಂತಿಗಳ ಮತದ ವಿವೇಚನೆ)

**ನವೀನ ವೇದಾಂತಿಗಳ ಮತವು ಹೀಗಿದೆ:—**

**ಪ್ರಶ್ನೆ:**—ಜಗತ್ತು ಸ್ವಪ್ನದಂತೆ, ಹಗ್ಗದಲ್ಲಿ ಹಾವಿನಂತೆ, ಚಿಪ್ಪಿನಲ್ಲಿ ಬೆಳ್ಳಿಯಂತೆ, ಬಿಸಿಲ್ಗುದುರೆಯಲ್ಲಿ ನೀರಿನಂತೆ, ಗಂಧರ್ವ ನಗರ*[ದಂತೆ], ಇಂದ್ರಜಾಲದಂತೆ ಈ ಪ್ರಪಂಚ ಸುಳ್ಳಾಗಿದೆ. ಒಂದು ಬ್ರಹ್ಮಮಾತ್ರ ಸತ್ಯವಾಗಿದೆ.

**ಸಿದ್ಧಾಂತಿ:**—ನೀವು ಯಾವುದನ್ನು 'ಸುಳ್ಳು' ಎನ್ನುತ್ತೀರಿ ?

**ನವೀನ:**—ಯಾವ ವಸ್ತು ಇಲ್ಲವೋ, ಮತ್ತು ಪ್ರತೀತವಾಗುತ್ತದೋ, ಅದನ್ನು.

**ಸಿದ್ಧಾಂತಿ:**—ಯಾವ ವಸ್ತುವೇ ಇಲ್ಲವೋ, ಅದರ ಪ್ರತೀತಿ ಹೇಗೆ ಆಗಬಲ್ಲದು?

**ನವೀನ:—ಅಧ್ಯಾರೋಪದಿಂದ.**

### (ಅಧ್ಯಾಸ ಮತ್ತು ಅಧ್ಯಾರೋಪದ ಲಕ್ಷಣಗಳು ಸರಿಯಲ್ಲ)

**ಸಿದ್ಧಾಂತಿ:**—ಯಾವುದನ್ನು ಅಧ್ಯಾರೋಪವೆನ್ನುತ್ತೀರಿ ?

**ನವೀನ:—**

**"ವಸ್ತುನ್ಯವಸ್ತ್ವಾರೋಪಣಮಧ್ಯಾಸಃ".**[1]

**"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ".**[2]

ಪದಾರ್ಥವಾವುದೋ ಆಗಿದ್ದು, ಅದರಲ್ಲಿ ಅವಸ್ತುವಿನ ಆರೋಪಣ ಮಾಡುವುದು **'ಅಧ್ಯಾಸ'**;

ಅಧ್ಯಾರೋಪ, ಹಾಗೂ ಅದರ ನಿರಾಕರಣವನ್ನು ಮಾಡುವುದು **'ಅಪವಾದ'**, ಎನಿಸುತ್ತದೆ. ಇವೆರಡರಿಂದ, ಪ್ರಪಂಚರಹಿತವಾದ ಬ್ರಹ್ಮದಲ್ಲಿ ಪ್ರಪಂಚವೆಂಬ ಜಗತ್ತಿನ ವಿಸ್ತಾರವನ್ನು ಮಾಡುತ್ತಾರೆ.

---

*ವರ್ಷಾ-ಋತುವಿನ ನಂತರ, ಆಕಾಶದಲ್ಲಿ ಕಾಣುವ ಮೇಘಮಂಡಲವು ಒಮ್ಮೊಮ್ಮೆ ನಗರದಂತೆ ಕಾಣುತ್ತದೆ. ಇದಕ್ಕೆ 'ಗಂಧರ್ವನಗರ' ಎಂದು ಕಲ್ಪನೆ.—ಸಂ.

1. ವೇದಾಂತಸಾರ, ಖಂಡ 6—ಯು. ಮೀ.

2. ಅನುಭೂತಿ ಪ್ರಕಾಶ 1.18—ಯು. ಮೀ.

**ಸಿದ್ಧಾಂತಿ:**—ನೀವು ಹಗ್ಗವನ್ನು ವಸ್ತು ಮತ್ತು ಸರ್ಪವನ್ನು ಅವಸ್ತುವೆಂದು ಅಂಗೀಕರಿಸಿ, ಈ ಭ್ರಮಜಾಲದಲ್ಲಿ ಬಿದ್ದಿದ್ದೀರಿ.

ಸರ್ಪವು ವಸ್ತುವಲ್ಲವೇನು ? 'ಹಗ್ಗದಲ್ಲಿಲ್ಲ', ಎನ್ನುವಿರಾದರೆ, ಬೇರೆ ಕಡೆ ಇದೆ; ಮತ್ತು ಅದರ ಸಂಸ್ಕಾರ-ಮಾತ್ರವು ಹೃದಯದಲ್ಲೂ ಇದೆಯಲ್ಲಾ! ಮತ್ತೆ ಆ ಸರ್ಪವೂ ಕೂಡ ಅವಸ್ತುವಾಗಿ ಉಳಿಯಲಿಲ್ಲ.

ಹಾಗೆಯೇ, ಕಾಂಡದಲ್ಲಿ ಪುರುಷನ, ಚಿಪ್ಪಿನಲ್ಲಿ ಬೆಳ್ಳಿ ಮೊದಲಾದುದರ, ವ್ಯವಸ್ಥೆಯನ್ನೂ ತಿಳಿದುಕೊಳ್ಳಿರಿ!

ಮತ್ತು ಸ್ವಪ್ನದಲ್ಲಿಯೂ ಯಾವವುಗಳ ಭಾಸವಾಗುತ್ತದೋ, ಅವು ಬೇರೆಡೆಯಲ್ಲಿವೆ; ಅವುಗಳ ಸಂಸ್ಕಾರಗಳು ಆತ್ಮನಲ್ಲಿಯೂ ಕೂಡ ಇರುತ್ತವೆ. ಆದುದರಿಂದ, ಆ ಸ್ವಪ್ನವೂ ಕೂಡ, ವಸ್ತುವಿನಲ್ಲಿ ಅವಸ್ತುವಿನ ಆರೋಪಣಕ್ಕೆ ಸಮಾನವಾಗಿಲ್ಲ.

**ನವೀನ:**—'ತನ್ನ ತಲೆ ಕತ್ತರಿಸಿದೆ, ಮತ್ತು ತಾನೇ ಅಳುತ್ತಾನೆ; ಜಲದ ಧಾರೆ ಮೇಲಕ್ಕೇರಿ ಹೋಗುತ್ತದೆ'. ಹೀಗೆ, ಯಾವುದನ್ನು ಯಾವಾಗಲೂ ನೋಡಲಿಲ್ಲವೋ, ಆಲಿಸಲಿಲ್ಲವೋ, ಯಾವುದು ಎಂದಿಗೂ ಆಗಿಯೇ ಇರಲಿಲ್ಲವೋ, ಅದು [ಸ್ವಪ್ನದಲ್ಲಿ] ನೋಡಲ್ಪಡುತ್ತದೆ. ಅದು ಹೇಗೆ ತಾನೇ ಸತ್ಯವಾಗಬಲ್ಲದು ?

**ಸಿದ್ಧಾಂತಿ:**—ಈ ದೃಷ್ಟಾಂತವೂ ನಿಮ್ಮ ಪಕ್ಷವನ್ನು ಸಿದ್ಧಪಡಿಸಲಾರದು. ಏಕೆಂದರೆ, **ನೋಡದೇ-ಕೇಳದೇ ಸಂಸ್ಕಾರವು ಮೂಡುವುದಿಲ್ಲ. ಸಂಸ್ಕಾರವಿಲ್ಲದೇ ಸ್ಮೃತಿ; ಮತ್ತು ಸ್ಮೃತಿಯಿಲ್ಲದೇ ಸ್ವಪ್ನದಲ್ಲಿ ಅನುಭವ ಆಗುವುದಿಲ್ಲ.**

'ಇಂತಹವನ ತಲೆ ಕತ್ತರಿಸಿ ಹೋಯಿತು; ಮತ್ತು ಅವನ ಸೋದರ, ಅಥವಾ ತಂದೆ ಮೊದಲಾದವರುಗಳನ್ನು ಯುದ್ಧದಲ್ಲಿ ಪ್ರತ್ಯಕ್ಷವಾಗಿ ಅತ್ತಿರುವಾಗ ನೋಡಿದನು; ಎಂಬುದನ್ನು ಯಾವನಿಂದಲೋ ಆಲಿಸಿದನು; ಇಲ್ಲವೇ ನೋಡಿದನು.

ಮತ್ತು ಚಿಲುಮೆಯ ನೀರು ಮೇಲೇರುವುದನ್ನು ನೋಡಿದನು, ಇಲ್ಲವೇ ಕೇಳಿದನು. ಅದರ ಸಂಸ್ಕಾರವು ಅವನ ಆತ್ಮನಲ್ಲಿಯೇ ಮೂಡುತ್ತದೆ.

ಯಾವಾಗ ಅವನು ಜಾಗ್ರತ್ತಿನ ಪದಾರ್ಥಗಳಿಂದ ಬೇರೆಯಾಗಿ* ನೋಡುತ್ತಾನೋ, ಆಗ ಯಾವುದನ್ನು ನೋಡಿರುತ್ತಾನೋ, ಅಥವಾ ಆಲಿಸಿರುತ್ತಾನೋ, ಆ ಪದಾರ್ಥಗಳನ್ನೇ ತನ್ನ ಆತ್ಮನಲ್ಲಿ ನೋಡುತ್ತಾನೆ. ಯಾವಾಗ ತನ್ನಲ್ಲಿಯೇ

*ಎಂದರೆ, ಸ್ವಪ್ನದಲ್ಲಿ.—ಯು.ಮೀ.

ನೋಡುತ್ತಾನೋ. ಆಗ ತನ್ನ ತಲೆ ಕತ್ತರಿಸಿತು; ತಾನೇ ಅಳುತ್ತಾನೆ; ಮತ್ತು ಜಲಧಾರೆ ಮೇಲಕ್ಕೇರಿ ಹೋಗುತ್ತಿದೆ, ಎನ್ನುವಂತೆ ನೋಡುತ್ತಾನೆ.

ಇದೂ ಕೂಡ ವಸ್ತುವಿನಲ್ಲಿ ಅವಸ್ತುವಿನ ಆರೋಪಣವಂತೆ ಇಲ್ಲ. ಆದರೆ, ಹೇಗೆ ಚಿತ್ರ ಬರೆಯುವವರು ಮೊದಲು ನೋಡಿದ, ಆಲಿಸಿದ, ಅಥವಾ ಮಾಡಿದು ದನ್ನು, ಆತ್ಮನಲ್ಲಿಂದ ಹೊರತೆಗೆದು, ಕಾಗದದ ಮೇಲೆ ಬರೆದು ಬಿಡುತ್ತಾರೋ; ಅಥವಾ ಪ್ರತಿಬಿಂಬವನ್ನು ರಚಿಸುವವನು, ಬಿಂಬವನ್ನು ನೋಡಿ, ಆತ್ಮನಲ್ಲಿ ಆಕೃತಿ ಯನ್ನಿಳಿಸಿಕೊಂಡು, ಸರಿಯಾಗಿ ಬರೆದು ಬಿಡುತ್ತಾನೋ, ಹಾಗೆಯೇ ಇದೂ ಕೂಡ!

ಅಹುದು! ಹಲವು ಸಾರಿ ಸ್ವಪ್ನದಲ್ಲಿ, ತನ್ನ ಅಧ್ಯಾಪಕನನ್ನು ನೋಡುತ್ತಾನೆ; ಅದರ ಸ್ಮರಣಯುಕ್ತವಾದ ಪ್ರತೀತಿಯುಂಟಾಗುತ್ತದೆ. ಮತ್ತೆ ಹಲವು ಸಾರಿ, ನೋಡಿ, ಮತ್ತು ಆಲಿಸಿ, ಬಹುಕಾಲವಾದ, ಅತೀತದ ಜ್ಞಾನವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಆಗ, ಯಾವುದನ್ನು ನಾನು ಆ ಸಮಯದಲ್ಲಿ ನೋಡಿದ್ದೆನೋ, ಕೇಳಿದ್ದೆನೋ, ಅಥವಾ ಮಾಡಿದ್ದೆನೋ, ಅದನ್ನೇ ನೋಡುತ್ತೇನೆ, ಕೇಳುತ್ತೇನೆ, ಅಥವಾ ಮಾಡುತ್ತೇನೆ–ಎಂಬ ಸ್ಮರಣವಿರುವುದಿಲ್ಲ; ಇಷ್ಟೇನೋ ಸತ್ಯ!

ಹೇಗೆ ಜಾಗ್ರತ್ತಿನಲ್ಲಿ ಸ್ಮರಣಮಾಡುತ್ತಾನೋ, ಹಾಗೆ ಸ್ವಪ್ನದಲ್ಲಿ [**ನಿಯಮ ಪೂರ್ವಕವಾಗಿ**] ಆಗುವುದಿಲ್ಲ.

[ನೋಡಿರಿ, ಜನ್ಮಾಂಧನಿಗೆ ರೂಪದ ಸ್ವಪ್ನ ಬರುವುದಿಲ್ಲ]. ಆದುದರಿಂದ, ನಿಮ್ಮ ಅಧ್ಯಾಸದ ಮತ್ತು ಅಧ್ಯಾರೋಪದ ಲಕ್ಷಣ ಸುಳ್ಳಾಗಿರುತ್ತದೆ.

ಮತ್ತು ವೇದಾಂತಿಗಳು ಯಾವ **ವಿವರ್ತವಾದ**, ಎಂದರೆ, ಹಗ್ಗದಲ್ಲಿ ಹಾವಿನ ಭ್ರಮೆ ಹುಟ್ಟುವುದೇ ಮೊದಲಾದ ದೃಷ್ಟಾಂತಗಳನ್ನು, ಬ್ರಹ್ಮನಲ್ಲಿ ಜಗತ್ತಿನ ಪ್ರತೀತಿಯಾಗುವುದರ [ಸಮರ್ಥನೆಗೆ] ಕೊಡುತ್ತಾರೋ, ಅದೂ ಕೂಡ ಸರಿಯಾದುದಲ್ಲ.

**ನವೀನ:**—ಅಧಿಷ್ಠಾನವಿಲ್ಲದೇ, **ಅಧ್ಯಸ್ತವು*** ಪ್ರತೀತವಾಗುವುದಿಲ್ಲ. ಉದಾ ಹರಣೆಗೆ—

ಹಗ್ಗವೇ ಇಲ್ಲವಾದರೆ, ಸರ್ಪದ ಪ್ರತೀತಿಯೂ ಆಗಲಾರದು.† ಹಗ್ಗದಲ್ಲಿ ಹಾವು ಮೂರು ಕಾಲಗಳಲ್ಲಿಯೂ ಇಲ್ಲ. ಆದರೆ, ಕತ್ತಲೆ, ಹಾಗೂ ಅಲ್ಪ ಪ್ರಕಾಶದ

---

*ಆರೋಪಿತವಾದ ವಸ್ತು.—ಅನು.

†ಇದು ಬುದ್ಧಿಹೀನರ ದೃಷ್ಟಾಂತ! ಸರ್ಪವನ್ನು ನೋಡಿದ ಮೇಲೆಯೇ, ಅದು ಹಗ್ಗ ದಂತಿದೆ, ಎಂದು ಪ್ರತೀತಿಯಾಗುವುದು. ಸರ್ಪವನ್ನು ಎಂದೂ ನೋಡದೇ–ಕೇಳದೇ, ಹಗ್ಗವನ್ನು ಮಾತ್ರ ನೋಡಿ, ಅದು ಸರ್ಪದಂತಿದೆ, ಎಂದು ಯಾವನೂ ಭಾವಿಸಲಾರನು.—ಸಂ.

ಸಂಧಿ ವೇಳೆಯಲ್ಲಿ ಆಕಸ್ಮಾತ್ತಾಗಿ ಹಗ್ಗವನ್ನು ನೋಡುವುದರಿಂದ, ಹಾವಿನ ಭ್ರಮೆ ಉಂಟಾಗಿ ಭಯದಿಂದ ಕಂಪಿಸುತ್ತಾನೆ. ಯಾವಾಗ ಅದನ್ನು ದೀಪ ಮೊದಲಾದುದರಿಂದ ನೋಡಿಕೊಳ್ಳುತ್ತಾನೋ, ಆಗಲೇ ಭ್ರಮೆ ಮತ್ತು ಭಯ ನಿವೃತ್ತವಾಗುತ್ತವೆ. ಹೇಗೆ ಸರ್ಪದ ನಿವೃತ್ತಿ ಮತ್ತು ಹಗ್ಗದ ಪ್ರತೀತಿಯಾಗುತ್ತದೋ, ಹಾಗೆಯೇ ಬ್ರಹ್ಮನಲ್ಲಿ ಯಾವ ಜಗತ್ತಿನ ಮಿಥ್ಯಾಪ್ರತೀತಿಯುಂಟಾಗಿದೆಯೋ ; ಅದು, ಬ್ರಹ್ಮನ ಸಾಕ್ಷಾತ್ಕಾರವಾಗುವಲ್ಲಿ, ಅದರ ನಿವೃತ್ತಿ ; ಮತ್ತು ಬ್ರಹ್ಮನ ಪ್ರತೀತಿ ಉಂಟಾಗುತ್ತದೆ.

**ಸಿದ್ಧಾಂತಿ:**—ಬ್ರಹ್ಮನಲ್ಲಿ ಜಗತ್ತಿನ ಪ್ರತೀತಿ ಯಾವನಿಗಾಯಿತು ?

**ನವೀನ:**—ಜೀವನಿಗೆ.

**ಸಿದ್ಧಾಂತಿ:**—ಜೀವನು ಎಲ್ಲಿಂದ ಆದನು ?

**ನವೀನ:**—ಅಜ್ಞಾನದಿಂದ.

**ಸಿದ್ಧಾಂತಿ:**—ಅಜ್ಞಾನ ಎಲ್ಲಿಂದ ಆಯಿತು ? ಮತ್ತು ಎಲ್ಲಿರುತ್ತದೆ ?

**ನವೀನ:**—ಅಜ್ಞಾನ ಅನಾದಿ; ಮತ್ತು ಬ್ರಹ್ಮನಲ್ಲಿರುತ್ತದೆ.

**ಸಿದ್ಧಾಂತಿ:**—ಬ್ರಹ್ಮನಲ್ಲಿ ಬ್ರಹ್ಮನ [ಬಗೆಗೆ] ಅಜ್ಞಾನ ಉಂಟಾಯಿತೋ, ಅಥವಾ ಬೇರೆ ಇನ್ನೊಂದರ ಬಗೆಗೋ ? ಆ ಅಜ್ಞಾನ ಯಾವನಿಗಾಯಿತು ?

**ನವೀನ:**—ಚಿದಾಭಾಸನಿಗೆ.

**ಸಿದ್ಧಾಂತಿ:**—ಚಿದಾಭಾಸನ ಸ್ವರೂಪವೇನು ?

**ನವೀನ:**—ಬ್ರಹ್ಮ! ಬ್ರಹ್ಮನಿಗೆ ಬ್ರಹ್ಮನ ಬಗೆಗೆ ಅಜ್ಞಾನ [ಉಂಟಾಗುತ್ತದೆ]. ಅಂದರೆ, ತನ್ನ ಸ್ವರೂಪವನ್ನು ತಾನೇ ಮರೆತುಬಿಡುತ್ತಾನೆ.

**ಸಿದ್ಧಾಂತಿ:**—ಅವನು ಮರೆಯುವುದಕ್ಕೆ ನಿಮಿತ್ತವೇನು ?

**ನವೀನ:**—ಅವಿದ್ಯೆ.

**ಸಿದ್ಧಾಂತಿ:**—ಅವಿದ್ಯೆಯು ಸರ್ವವ್ಯಾಪಕ-ಸರ್ವಜ್ಞನ ಗುಣವೋ, ಅಥವಾ ಅಲ್ಪಜ್ಞನದೋ ?

**ನವೀನ:**—ಅಲ್ಪಜ್ಞನದು.

**ಸಿದ್ಧಾಂತಿ:**—ಹಾಗಾದರೆ, ನಿಮ್ಮ ಮತದಲ್ಲಿ ಒಬ್ಬ ಅನಂತ ಸರ್ವಜ್ಞ ಚೇತನನಲ್ಲದೇ, ಬೇರೆ ಯಾವನಾದರೂ ಚೇತನನು ಇದ್ದಾನೋ, ಅಥವಾ ಇಲ್ಲವೋ? ಮತ್ತು ಅಲ್ಪಜ್ಞನು ಎಲ್ಲಿಂದ ಬಂದನು?

ಅಹುದು! ಬ್ರಹ್ಮನಿಂದ ಭಿನ್ನನಾದ ಅಲ್ಪಜ್ಞ ಚೇತನನನ್ನು ಒಪ್ಪುವಿರಾದರೆ, ಸರಿ.

ಬ್ರಹ್ಮನಿಗೆ ಒಂದೆಡೆಯಲ್ಲಿ ತನ್ನ ಸ್ವರೂಪದ ಅಜ್ಞಾನವಾಗುವುದಾದರೆ, ಎಲ್ಲೆಡೆಯೂ ಅಜ್ಞಾನ ಪ್ರಸರಿಸಿಬಿಟ್ಟೀತು!

ಹೇಗೆ ಶರೀರದಲ್ಲಿ ಕುರುವಿನ ನೋವು ಸಮಸ್ತ ಶರೀರದ ಅವಯವಗಳನ್ನೂ ನಿರರ್ಥಕವಾಗಿ ಮಾಡಿಬಿಡುತ್ತದೋ, ಅದೇ ರೀತಿ ಬ್ರಹ್ಮನೂ ಒಂದು ಎಡೆಯಲ್ಲಿ ಅಜ್ಞಾನಿ; ಮತ್ತು ಕ್ಲೇಶಯುಕ್ತನಾದಲ್ಲಿ, ಸರ್ವ ಬ್ರಹ್ಮನೂ ಅಜ್ಞಾನಿ, ಮತ್ತು ನೋವಿನ ಅನುಭವದಿಂದ ಕೂಡಿದವನಾಗಿ ಹೋದಾನು!

**ನವೀನ:**—ಇದೆಲ್ಲಾ ಉಪಾಧಿಯ ಧರ್ಮವಾಗಿದೆ; ಬ್ರಹ್ಮನದ್ದಲ್ಲ.

**ಸಿದ್ಧಾಂತಿ:**—ಉಪಾಧಿ ಜಡವೋ ಅಥವಾ ಚೇತನವೋ? ಮತ್ತು ಸತ್ಯವೋ, ಅಥವಾ ಅಸತ್ಯವೋ?

**ನವೀನ:**—ಅನಿರ್ವಚನೀಯವಾಗಿದೆ. ಎಂದರೆ, ಅವನ್ನು ಜಡ ಅಥವಾ ಚೇತನ; ಸತ್ಯ ಅಥವಾ ಅಸತ್ಯ, ಎಂದು ಹೇಳಲಾರೆವು.

**ಸಿದ್ಧಾಂತಿ:**—ಈ ನಿಮ್ಮ ಹೇಳುವಿಕೆ **"ವದತೋ ವ್ಯಾಘಾತಃ"*** ಗೆ ಸಮವಾಗಿದೆ.

ಏಕೆಂದರೆ, ಅವಿದ್ಯೆಯಿದೆ, ಎನ್ನುತ್ತೀರಿ; ಅದನ್ನು ಜಡ, ಚೇತನ, ಸತ್, ಅಸತ್, ಎಂದು ಹೇಳಲಾರೆವೆನ್ನುತ್ತೀರಿ. ಈ ಮಾತು ಹೇಗಿದೆಯೆಂದರೆ—

ಚಿನ್ನದಲ್ಲಿ ಹಿತ್ತಾಳೆ ಸೇರಿದೆ. ಇದು ಚಿನ್ನವೋ ಅಥವಾ ಹಿತ್ತಾಳೆಯೋ, ಎಂದು ಸ್ವರ್ಣಕಾರನ ಬಳಿ ಪರೀಕ್ಷೆ ಮಾಡಿಸುತ್ತೀರಿ. ಆ ಮೇಲೆ—

*ಎಂದರೆ, ಸ್ವಪಕ್ಷ ಖಂಡನಕ್ಕೆ.—ಅನು.

"ಇವನ್ನು ನಾವು ಚಿನ್ನವೆಂದೂ ಹೇಳಲಾರೆವು; ಹಿತ್ತಾಳೆಯೆಂದೂ ಹೇಳಲಾರೆವು. ಆದರೆ, ಎರಡು ಧಾತುಗಳೂ ಸೇರಿವೆ", ಎಂದೇ ಹೇಳುವಿರಿ. [ಅಲ್ಲವೇ ?]

**ನವೀನ:**—ನೋಡಿ! **ಘಟಾಕಾಶ, ಮಠಾಕಾಶ, ಮೇಘಾಕಾಶ,** ಮತ್ತು **ಮಹದಾಕಾಶ**ಗಳು ಉಪಾಧಿಗಳ,* ಎಂದರೆ ಘಟ, ಮನೆ, ಹಾಗೂ ಮೇಘದ ಇರುವಿಕೆಯಿಂದ ಹೇಗೆ ಬೇರೆ-ಬೇರೆಯಾಗಿ ತೋರುತ್ತವೋ, ವಸ್ತುತಃ ಮಹದಾಕಾಶ ಒಂದೇ ಇರುತ್ತದೋ; ಹಾಗೆಯೇ **ಮಾಯೆ,** ಅವಿದ್ಯೆ, ಸಮಷ್ಟಿ[1], ವ್ಯಷ್ಟಿ[2] ಮತ್ತು ಅಂತಃಕರಣಗಳ ಉಪಾಧಿಗಳಿಂದ, ಬ್ರಹ್ಮನು ಅಜ್ಞಾನಿಗಳಿಗೆ ಬೇರೆ ಬೇರೆಯಾಗಿ ತೋರುತ್ತಾನೆ. ವಸ್ತುತಃ ಒಂದೇ ಆಗಿದ್ದಾನೆ.

ನೋಡಿರಿ, ಮುಂದಿನ ಪ್ರಮಾಣದಲ್ಲಿ ಹೀಗೆ ಹೇಳಿದೆ:—

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥**

**[ಕಠೋಪನಿಷತ್–ವಲ್ಲೀ.5. ಮಂತ್ರ.9]**

ಹೇಗೆ ಅಗ್ನಿಯು, ಉದ್ದವಾದ–ಅಗಲವಾದ, ಗುಂಡಾದ, ಚಿಕ್ಕದಾದ–ದೊಡ್ಡದಾದ ಎಲ್ಲ ಆಕೃತಿಗಳಿಂದ ಕೂಡಿದ ಪದಾರ್ಥಗಳಲ್ಲಿ ವ್ಯಾಪಕವಾಗಿ, ಅದೇ ಆಕಾರವುಳ್ಳದ್ದಾಗಿ ಕಾಣಿಸುತ್ತದೋ. ಮತ್ತು ಅವುಗಳಿಂದ ಬೇರೆಯಾಗಿದೆಯೋ, ಹಾಗೆ ಸರ್ವವ್ಯಾಪಕನಾದ ಪರಮಾತ್ಮನು, ಅಂತಃಕರಣಗಳಲ್ಲಿ ವ್ಯಾಪಕನಾಗಿ, ಅಂತಃಕರಣಾಕಾರನಾಗಿ ರಾಜಿಸುತ್ತಿದ್ದಾನೆ. ಆದರೆ, ಅವುಗಳಿಂದ ಬೇರೆಯಾಗಿದ್ದಾನೆ.

**ಸಿದ್ಧಾಂತಿ:**—ಈ ನಿಮ್ಮ ಕಥನವೂ ಕೂಡ ವ್ಯರ್ಥವಾಗಿದೆ. ಏಕೆಂದರೆ, ಹೇಗೆ ಘಟ, ಮಠ, ಮೇಘಗಳನ್ನು ಮತ್ತು ಆಕಾಶವನ್ನು ಬೇರೆಯೆಂದು ಅಂಗೀಕರಿಸುತ್ತೀರೋ, ಹಾಗೆ ಕಾರಣ-ಕಾರ್ಯರೂಪವಾದ ಜಗತ್ತನ್ನು, ಮತ್ತು ಜೀವನನ್ನು ಬ್ರಹ್ಮನಿಂದ, ಮತ್ತು ಬ್ರಹ್ಮನನ್ನು ಇವುಗಳಿಂದ, ಬೇರೆಯೆಂದು ಒಪ್ಪಿಕೊಳ್ಳಿರಿ.

---

*ಆವರಣಗಳ.—ಅನು.

1. ಸಮೂಹ.—ಅನು.

2. ಘಟಕ.—ಅನು.

## (ಸಾಕಾರದ ಪ್ರತಿಬಿಂಬವು ಬೀಳುತ್ತದೆ; ನಿರಾಕಾರದ್ದಲ್ಲ)

**ನವೀನ:**—ಹೇಗೆ ಅಗ್ನಿ ಎಲ್ಲದರಲ್ಲಿ ಪ್ರವಿಷ್ಟವಾಗಿ, ನೋಡುವುದಕ್ಕೆ ಅದೇ ಆಕಾರವುಳ್ಳದ್ದಾಗಿ ಕಾಣಿಸುತ್ತದೋ, ಇದೇ ರೀತಿ ಪರಮಾತ್ಮನು ಜಡದಲ್ಲಿ ಮತ್ತು ಜೀವನಲ್ಲಿ ವ್ಯಾಪಕನಾಗಿ, ಆಕೃತಿಯುಕ್ತನಾಗಿ; ಎಂದರೆ, ಅಜ್ಞಾನಿಗಳಿಗೆ ಸಾಕಾರನಾಗಿ ಕಾಣಿಸುತ್ತಾನೆ. ವಸ್ತುತಃ ಬ್ರಹ್ಮನು ಜಡವೂ ಅಲ್ಲ; ಜೀವನೂ ಅಲ್ಲ.

ಉದಾಹರಣೆಗೆ—

ಸಾವಿರ ಜಲದ ಕುಂಡಗಳು ಇಡಲ್ಪಟ್ಟಲ್ಲಿ, ಅವುಗಳಲ್ಲಿ ಸೂರ್ಯನ ಸಹಸ್ರ ಪ್ರತಿಬಿಂಬಗಳು ಕಾಣಿಸುತ್ತವೆ. ವಸ್ತುತಃ ಸೂರ್ಯನು ಒಬ್ಬನೇ ಇದ್ದಾನೆ. ಕುಂಡಗಳು ಒಡೆದು ಹೋಗುವುದರಿಂದ, ನೀರು ಹರಿಯುವುದರಿಂದ, ಅಥವಾ ಹರಡುವುದರಿಂದ, ಸೂರ್ಯನು ಭಗ್ನನಾಗುವುದಿಲ್ಲ; ಚಲಿಸುವುದಿಲ್ಲ, ಮತ್ತು ಹರಡುವುದೂ ಇಲ್ಲ. ಇದೇ ರೀತಿಯಲ್ಲಿ ಅಂತಃಕರಣಗಳಲ್ಲಿ, **'ಚಿದಾಭಾಸ'** ಎನ್ನಿಸಿಕೊಳ್ಳುವ, ಬ್ರಹ್ಮನ ಆಭಾಸ ಬಿದ್ದಿರುತ್ತದೆ.

ಎಂದಿನವರೆಗೆ ಅಂತಃಕರಣವಿದೆಯೋ, ಆವರೆಗೆ ಮಾತ್ರ ಜೀವನಿರುತ್ತಾನೆ. ಯಾವಾಗ ಅಂತಃಕರಣವು ಜ್ಞಾನದಿಂದ ನಾಶವಾಗಿ ಹೋಗುತ್ತದೋ, ಆಗ ಜೀವನು ಬ್ರಹ್ಮಸ್ವರೂಪನಾಗಿರುತ್ತಾನೆ.

ಈ ಚಿದಾಭಾಸನು [ಎಲ್ಲಿಯವರೆಗೆ] ತನ್ನ ಬ್ರಹ್ಮಸ್ವರೂಪದ ಅಜ್ಞಾನವನ್ನುಂಟುಮಾಡಿಕೊಳ್ಳುವವನೂ, ಭೋಗಕರ್ತೃವೂ, ಸುಖಿಯೂ, ದುಃಖಿಯೂ, ಪಾಪಿಯೂ, ಪುಣ್ಯಾತ್ಮನೂ ಆಗಿ, ಜನನ-ಮರಣಗಳನ್ನು ತನ್ನಲ್ಲಿಯೇ ಆರೋಪಿಸಿಕೊಳ್ಳುತ್ತಾನೋ, ಆ ವರೆಗೆ ಸಾಂಸಾರಿಕ ಬಂಧನಗಳಿಂದ ಬಿಡುಗಡೆ ಹೊಂದುವುದಿಲ್ಲ.

**ಸಿದ್ಧಾಂತಿ:**—ಈ ನಿಮ್ಮ ದೃಷ್ಟಾಂತ ವ್ಯರ್ಥವಾಗಿದೆ. ಏಕೆಂದರೆ, ಸೂರ್ಯನು ಆಕಾರವಂತನು; ಜಲದ ಕುಂಡಗಳೂ ಸಾಕಾರವಾಗಿವೆ. ಸೂರ್ಯನು ಜಲದ ಕುಂಡಗಳಿಂದ ಬೇರೆಯಾಗಿದ್ದಾನೆ. ಮತ್ತು ಸೂರ್ಯನಿಂದ ಜಲಕುಂಡಗಳು ಬೇರೆಯಾಗಿವೆ. ಆಗ ಮಾತ್ರ ಪ್ರತಿಬಿಂಬ ಬೀಳುತ್ತದೆ. ನಿರಾಕಾರವಾಗಿದ್ದರೆ, ಅವುಗಳ ಪ್ರತಿಬಿಂಬವೆಂದಿಗೂ ಬೀಳುತ್ತಿರಲಿಲ್ಲ.

ಮತ್ತು ಪರಮೇಶ್ವರನು ನಿರಾಕಾರನೂ, ಆಕಾಶದಂತೆ ಎಲ್ಲೆಡೆಯೂ ವ್ಯಾಪಕನೂ ಆಗಿರುವುದರಿಂದ, ಬ್ರಹ್ಮನಿಂದ ಯಾವ ಪದಾರ್ಥಗಳೂ ಬೇರೆಯಾಗಿಲ್ಲ; ಅಥವಾ ಪದಾರ್ಥಗಳಿಂದ ಬ್ರಹ್ಮನೂ ಬೇರೆಯಾಗಲಾರನು.

ಮತ್ತು ವ್ಯಾಪ್ಯ-ವ್ಯಾಪಕ ಸಂಬಂಧವಿರುವುದರಿಂದ, ಒಂದೂ ಆಗಲಾರನು. ಎಂದರೆ, **ಅನ್ವಯ-ವ್ಯತಿರೇಕಭಾವದಿಂದ*** ನೋಡುವುದರಿಂದ, ವ್ಯಾಪ್ಯ-ವ್ಯಾಪಕರು ಒಂದುಗೂಡಿದವರೂ, ಮತ್ತು ಸದಾ ಬೇರೆಯಾಗಿರುವವರೂ ಆಗಿರುತ್ತಾರೆ.

ಒಂದೇ ಆಗಿದ್ದಲ್ಲಿ, ತನ್ನಲ್ಲಿಯೇ ವ್ಯಾಪ್ಯ-ವ್ಯಾಪಕಭಾವದ ಸಂಬಂಧ ಎಂದಿಗೂ ಅನ್ವಯಿಸಲಾರದು. ಇದು **ಬೃಹದಾರಣ್ಯಕದ ಅಂತರ್ಯಾಮೀ ಬ್ರಾಹ್ಮಣ**† ದಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟಿದೆ.

ಮತ್ತು ಬ್ರಹ್ಮನ ಆಭಾಸವೂ ಕೂಡ ಬೀಳಲಾರದು. ಏಕೆಂದರೆ, ಆಕಾರ ವಿಲ್ಲದೇ ಪ್ರತಿಬಿಂಬ ಮೂಡುವುದು ಅಸಂಭವವಾಗಿದೆ.

## (ಅಂತಃಕರಣೋಪಾಧಿಯಿಂದ ಬ್ರಹ್ಮನನ್ನು ಜೀವನೆಂದು ತಿಳಿಯುವುದು ಸರಿಯಲ್ಲ)

ಅಂತಃಕರಣದ ಉಪಾಧಿಯಿಂದ, ಬ್ರಹ್ಮನನ್ನು ಜೀವನೆಂದು ಅಂಗೀಕರಿಸುವ ನಿಮ್ಮ ಮಾತೂ ಕೂಡ ಬಾಲಕನ ಮಾತಂತಿದೆ.

ಅಂತಃಕರಣವು ಚಲಾಯಮಾನವೂ, ಖಂಡ-ಖಂಡವೂ ಆಗಿದೆ; ಮತ್ತು ಬ್ರಹ್ಮನು ಅಚಲನೂ ಅಖಂಡನೂ ಆಗಿದ್ದಾನೆ. ನೀವು ಬ್ರಹ್ಮನನ್ನು ಮತ್ತು ಜೀವನನ್ನು ಬೇರೆ ಬೇರೆ, ಎಂದು ಅಂಗೀಕರಿಸುವುದಿಲ್ಲವಾದರೆ, ಇದಕ್ಕೆ ಉತ್ತರವನ್ನು ಕೊಡಿರಿ.—

ಅಂತಃಕರಣವು ಎಲ್ಲಿ-ಎಲ್ಲಿ ಹೋಗುವುದೋ, ಅಲ್ಲಿ-ಅಲ್ಲಿಯ ಬ್ರಹ್ಮನನ್ನು ಅಜ್ಞಾನಿಯನ್ನಾಗಿಯೂ, ಮತ್ತು ಯಾವ ಯಾವ ಸ್ಥಾನವನ್ನು ಬಿಡುವುದೋ, ಅಲ್ಲಿ-ಅಲ್ಲಿಯ ಬ್ರಹ್ಮನನ್ನು ಜ್ಞಾನಿಯನ್ನಾಗಿಯೂ ಮಾಡಿಬಿಡುವುದೋ, ಅಥವಾ ಇಲ್ಲವೋ?

ಹೇಗೆ ಕೊಡೆಯು ಬೆಳಕಿನ ನಡುವೆ ಎಲ್ಲಿ-ಎಲ್ಲಿ ಹೋಗುತ್ತದೋ, ಅಲ್ಲಿ-ಅಲ್ಲಿಯ ಪ್ರಕಾಶವನ್ನು ಆವರಣಯುಕ್ತವನ್ನಾಗಿಯೂ, ಮತ್ತು ಎಲ್ಲಿ-ಎಲ್ಲಿನಿಂದ ಸರಿದು ಹೋಗುತ್ತದೋ, ಅಲ್ಲಿ-ಅಲ್ಲಿಯ ಪ್ರಕಾಶವನ್ನು ಆವರಣರಹಿತವನ್ನಾಗಿಯೂ ಮಾಡುತ್ತದೋ, ಹಾಗೆಯೇ ಅಂತಃಕರಣವು ಬ್ರಹ್ಮನನ್ನು ಕ್ಷಣ-ಕ್ಷಣವೂ ಜ್ಞಾನಿಯನ್ನಾಗಿಯೂ, ಅಜ್ಞಾನಿಯನ್ನಾಗಿಯೂ, ಬದ್ಧನನ್ನಾಗಿಯೂ, ಮತ್ತು ಮುಕ್ತನನ್ನಾಗಿಯೂ ಮಾಡುತ್ತಾ ಹೋಗುವುದು.

---

*ಅನ್ವಯ-ವ್ಯತಿರೇಕಭಾವವೆಂದರೆ, ಸಾಧರ್ಮ್ಯ-ವೈಧರ್ಮ್ಯಗಳ, ಸಾಮ್ಯ-ವೈಷಮ್ಯಗಳ ಭಾವ.—ಅನು.

†ಬೃಹದಾರಣ್ಯಕೋಪನಿಷತ್ (3.7.3-23)—ಅನು.

ಅಖಂಡವಾದ ಬ್ರಹ್ಮನ ಏಕಸ್ಥಾನದಲ್ಲಿಯ ಆವರಣದ ಪ್ರಭಾವವು ಸರ್ವ ಸ್ಥಾನದಲ್ಲಿಯೂ ಉಂಟಾಗುವುದರಿಂದ, ಸಂಪೂರ್ಣ ಬ್ರಹ್ಮನು ಅಜ್ಞಾನಿಯಾಗಿ ಹೋಗುವನು. ಏಕೆಂದರೆ, ಅವನು ಚೇತನನಾಗಿದ್ದಾನೆ.[1]

ಮತ್ತು ಮಥುರೆಯಲ್ಲಿ ಯಾವ ಅಂತಃಕರಣ-ಸ್ಥಿತನಾದ ಬ್ರಹ್ಮನು ಯಾವ ವಸ್ತುವನ್ನು ನೋಡಿದನೋ, ಅದರ ಸ್ಮರಣೆಯು ಅದೇ ಅಂತಃಕರಣ-ಸ್ಥಿತನಾದವನಿಗೆ ಕಾಶಿಯಲ್ಲಿ ಉಂಟಾಗಲಾರದು. ಏಕೆಂದರೆ—

**"ಅನ್ಯದೃಷ್ಟಮನ್ಯೋ ನ ಸ್ಮರತೀತಿ ನ್ಯಾಯಾತ್."**

ಒಬ್ಬನು ನೋಡಿದುವರ ಸ್ಮರಣೆ ಇನ್ನೊಬ್ಬನಿಗೆ ಆಗಲಾರದು. ಯಾವ ಚಿದಾಭಾಸನು ಮಥುರೆಯಲ್ಲಿ ನೋಡಿದನೋ, ಆ ಚಿದಾಭಾಸನು ಕಾಶಿಯಲ್ಲಿರುವುದಿಲ್ಲ. ಏಕೆಂದರೆ, ಮಥುರೆಯಲ್ಲಿನ ಅಂತಃಕರಣದ ಪ್ರಕಾಶಕನಾದ ಬ್ರಹ್ಮನು ಕಾಶಿಯಲ್ಲಿನ ಬ್ರಹ್ಮನಾಗಿರುವುದಿಲ್ಲ.[2]

ಬ್ರಹ್ಮನೇ ಜೀವನಾಗಿದ್ದರೆ; ಬೇರೆಯುವನಲ್ಲವಾದರೆ, ಜೀವನು ಸರ್ವಜ್ಞನಾಗಿರಬೇಕು. ಬ್ರಹ್ಮನ ಪ್ರತಿಬಿಂಬ ಬೇರೆಯಾಗಿದ್ದರೆ, '**ಪ್ರತ್ಯಭಿಜ್ಞಾ**", ಎಂದರೆ, ಹಿಂದೆ ನೋಡಿದುದರ-ಕೇಳಿದುದರ ಜ್ಞಾನ ಯಾವನಿಗೂ ಉಂಟಾಗಲಾರದು.

'ಬ್ರಹ್ಮ ಒಬ್ಬನು; ಆದಕಾರಣ ಸ್ಮರಣವಾಗುತ್ತದೆ.', ಎನ್ನುವಿರಾದರೆ— ಒಂದೆಡೆ ಅಜ್ಞಾನ ಅಥವಾ ದುಃಖ ಉಂಟಾಗುವುದರಿಂದ, ಸಮಸ್ತ ಬ್ರಹ್ಮನಿಗೂ ಅಜ್ಞಾನ ಅಥವಾ ದುಃಖವಾಗಬೇಕು.

ಮತ್ತು ಇಂತಿಂತಹ ದೃಷ್ಟಾಂತಗಳಿಂದ, ನಿತ್ಯ-ಶುದ್ಧ-ಮುಕ್ತ ಸ್ವಭಾವನಾದ ಬ್ರಹ್ಮನನ್ನು ನೀವು ಅಶುದ್ಧ, ಅಜ್ಞಾನಿ ಮತ್ತು ಬದ್ಧ ಮೊದಲಾದ ದೋಷಗಳಿಂದ ಕೂಡಿದವನನ್ನಾಗಿ ಮಾಡಿಬಿಟ್ಟಿರಿ! ಮತ್ತು ಅಖಂಡನನ್ನು ಖಂಡ-ಖಂಡನನ್ನಾಗಿ ಮಾಡಿಬಿಟ್ಟ[ದ್ದೀರಿ]!

---

1. ವಿಶಾಲವಾಗಿ ಹರಡಿದ ಯಾವುದಾದರೂ ಜಡತತ್ತ್ವ. ಉದಾಹರಣೆಗೆ—ವಾಯು ದೇಶ-ದೇಶಗಳ ಸಮುದ್ರಸಾಮೀಪ್ಯ ಸ್ತರದ ಔನ್ನತ್ಯ ಮೊದಲಾದ ಕಾರಣಗಳಿಂದ, ಹಲವೆಡೆ ತಂಪಾಗಿ, ಹಲವೆಡೆ ಬಿಸಿಯಾಗಿ ಇರಬಹುದು. ಆದರೆ, ಅಖಂಡ ಚೇತನನ ಬಗೆಗೆ ಹಾಗೆನ್ನಲು ಎಂದಿಗೂ ಸಾಧ್ಯವಿಲ್ಲ. ಅಖಂಡ ಚೇತನನ ಪ್ರತಿಯೊಂದು ಗುಣವೂ ಅಖಂಡವೇ ಆಗಿರುವುದು, ಎನ್ನುತ್ತಾರೆ ಮಹರ್ಷಿ.—ಅನು.

2. ಮಥುರೆಯಲ್ಲಿಯ ಬ್ರಹ್ಮನ ಅಂತಃಕರಣಕ್ಕೆ ಸಿಕ್ಕಿ ಕಂಡ ನೋಟ, ಕಾಶಿಯಲ್ಲಿಲ್ಲ; ಚಿದಾಭಾಸರು ಬೇರೆ ಬೇರೆ!—ಅನು.

ನವೀನ:—ನಿರಾಕಾರದ ಆಭಾಸವೂ ಆಗುತ್ತದೆ. ಹೇಗೆ ಕನ್ನಡಿಯಲ್ಲಿ, ಅಥವಾ ನೀರು ಮೊದಲಾದುವದರಲ್ಲಿ, ಆಕಾಶದ ಆಭಾಸ ಬೀಳುತ್ತದೋ ; ಅದು ನೀಲಿಯಾಗಿ ಅಥವಾ ಬೇರೆ ಯಾವುದಾದರೂ ರೀತಿ ಗಂಭೀರವೂ, ಆಳವೂ ಆಗಿ ಕಾಣಿಸುತ್ತದೋ, ಹಾಗೆ, ಬ್ರಹ್ಮನ ಆಭಾಸವೂ ಸಮಸ್ತ ಅಂತಃಕರಣಗಳಲ್ಲಿ ಬೀಳುತ್ತದೆ.

**ಸಿದ್ಧಾಂತಿ:—ಆಕಾಶಕ್ಕೆ ರೂಪವೇ ಇಲ್ಲದಿರುವಾಗ, ಅದನ್ನು ಯಾವನೂ ಕಣ್ಣಿನಿಂದ ನೋಡಲಾರನು.** ಯಾವ ಪದಾರ್ಥ ಕಾಣಿಸುವುದೇ ಇಲ್ಲವೋ, ಅದು ಕನ್ನಡಿ ಮತ್ತು ನೀರು ಮೊದಲಾದುದರಲ್ಲಿ ಕಾಣಿಸುತ್ತದೆಂತು ?

**ಗಾಢವಾಗಿ ಅಥವಾ ತೆಳುವಾಗಿ ಸಾಕಾರವಸ್ತು ಕಾಣಿಸುತ್ತದೆ ; ನಿರಾಕಾರ ವಾದುದಲ್ಲ!**

ನವೀನ:— ಹಾಗಾದರೆ, ಮತ್ತೆ ಮೇಲುಗಡೆ ನೀಲಿಯಾಗಿರುವಂತೆ, ಅದೇನೋ ಕಾಣಿಸುತ್ತಿದೆಯಲ್ಲ! ಅದೇ, ಕನ್ನಡಿಯಲ್ಲಿ, ಅಥವಾ ನೀರಿನಲ್ಲಿ ಪ್ರತಿಬಿಂಬಿತವಾಗು ತ್ತದೆ. ಅದು ಏನು ಪದಾರ್ಥ ?

**ಸಿದ್ಧಾಂತಿ:**—ಅದು ಪೃಥಿವಿಯಿಂದ ಹಾರಿ, [ಮೇಲೆ ಹೋಗಿರುವ] ಜಲದ, ಪೃಥಿವಿಯ ಮತ್ತು ಅಗ್ನಿಯ ತ್ರಸರೇಣುಗಳು.

**ಎಲ್ಲಿಂದ ಮಳೆಯಾಗುತ್ತದೋ, ಅಲ್ಲಿ ನೀರು ಇಲ್ಲದಿದ್ದರೆ, ಮಳೆ ಎಲ್ಲಿಂದ ಆದೀತು ?**

ಆದುದರಿಂದ, ದೂರ ದೂರದಲ್ಲಿ ಯಾವುದು ಗುಡಾರದಂತೆ ಕಾಣಿಸುತ್ತದೋ, ಅದು ಜಲದ ಚಕ್ರವಾಗಿದೆ.

ಹೇಗೆ ಮಂಜು ದೂರದಿಂದ ಘನವಾದ ಆಕಾರವುಳ್ಳದ್ದಾಗಿ, ಮತ್ತು ಹತ್ತಿರದಿಂದ ತೆಳುವಾಗಿ, ಮತ್ತು ಗುಡಾರದ ಹಾಗೆಯೂ ಕೂಡ ಕಾಣಿಸುತ್ತದೋ, ಹಾಗೆ ಆಕಾಶದಲ್ಲಿ ಕಾಣಿಸುತ್ತದೆ.

ನವೀನ:—ನಮ್ಮ ಹಗ್ಗ, ಹಾವು ಮತ್ತು ಸ್ವಪ್ನ ಮೊದಲಾದ ದೃಷ್ಟಾಂತಗಳು ಮಿಥ್ಯೆಯೇನು ?

**ಸಿದ್ಧಾಂತಿ:—ಅಲ್ಲ ; ನಿಮ್ಮ ತಿಳಿವು ಮಿಥ್ಯೆ!** ಅದನ್ನು ನಾವು ಮೊದಲೇ ಬರೆದಿದ್ದೇವೆ.*

---

*594ನೇ ಪುಟ ನೋಡಿ—ಸಂ.

ಒಳ್ಳೆಯದು ! ಮೊದಲು ಅಜ್ಞಾನ ಯಾವನಿಗಾಗುತ್ತದೆ, ಎಂಬುದನ್ನಾದರೂ ಹೇಳಿರಿ.

**ನವೀನ:**—ಬ್ರಹ್ಮನಿಗೆ.

**ಸಿದ್ಧಾಂತಿ:**—ಬ್ರಹ್ಮನು ಅಲ್ಪಜ್ಞನೋ ಅಥವಾ ಸರ್ವಜ್ಞನೋ ?

**ನವೀನ:**—ಸರ್ವಜ್ಞನೂ ಅಲ್ಲ; ಮತ್ತು ಅಲ್ಪಜ್ಞನೂ ಅಲ್ಲ. ಏಕೆಂದರೆ, ಸರ್ವಜ್ಞತ್ವವು ಉಪಾಧಿಸಹಿತನಾದವನಿಗೆ ಉಂಟಾಗುವುದು.

**ಸಿದ್ಧಾಂತಿ:**—ಉಪಾಧಿಸಹಿತನಾದವನು ಯಾವನು ?

**ನವೀನ:**—ಬ್ರಹ್ಮ.

**ಸಿದ್ಧಾಂತಿ:**—**ಹಾಗಾದರೆ, ಬ್ರಹ್ಮನೇ ಸರ್ವಜ್ಞನೂ, ಮತ್ತು ಅಲ್ಪಜ್ಞನೂ ಆದನು !** ಹಾಗಿದ್ದಲ್ಲಿ, ನೀವು [ಬ್ರಹ್ಮನಿಗೆ] ಸರ್ವಜ್ಞ ಮತ್ತು ಅಲ್ಪಜ್ಞ, ಎಂಬುದರ ನಿಷೇಧವನ್ನೇಕೆ ಮಾಡಿದ್ದಿರಿ ?

ಉಪಾಧಿಯು ಕಲ್ಪಿತವಾದುದು, ಎಂದರೆ, ಮಿಥ್ಯೆಯಾದುದು, ಎನ್ನುವಿರಾದರೆ, ಕಲ್ಪಕನು, ಎಂದರೆ, ಕಲ್ಪನೆ ಮಾಡುವವನು ಯಾವನು ?

**ನವೀನ:**—ಜೀವನು ಬ್ರಹ್ಮನೋ, ಅಥವಾ ಬೇರೆಯೋ ?

**ಸಿದ್ಧಾಂತಿ:**—**ಬೇರೆಯವನಾಗಿದ್ದಾನೆ.** ಏಕೆಂದರೆ, [ಜೀವನು] ಬ್ರಹ್ಮ ಸ್ವರೂಪನಾಗಿದ್ದಾನೆಯಾದರೆ, ಯಾವನು ಮಿಥ್ಯಾಕಲ್ಪನೆಯನ್ನು ಮಾಡಿದನೋ, ಅವನು ಬ್ರಹ್ಮನೇ ಆಗಿರಲಾರನು. ಯಾವನ ಕಲ್ಪನೆಯೇ ಮಿಥ್ಯೆಯೋ, ಅವನು ಸತ್ಯನಾಗಬಲ್ಲನಾದರೂ ಯಾವಾಗ ?

**ನವೀನ:**—**ನಾವು ಸತ್ಯವನ್ನೂ ಮತ್ತು ಅಸತ್ಯವನ್ನೂ ಸುಳ್ಳೆಂದು ಅಂಗೀಕರಿಸುತ್ತೇವೆ.** ಮತ್ತು ವಾಣಿಯಿಂದ ಮಾತನಾಡುವುದೂ ಕೂಡ ಮಿಥ್ಯೆಯೇ ಆಗಿದೆ.

**ಸಿದ್ಧಾಂತಿ:**—ನೀವು ಸುಳ್ಳನ್ನು ಹೇಳುವವರು, ಮತ್ತು ಒಪ್ಪುವವರು ಆಗಿದ್ದೀರಿ. ಎಂದ ಮೇಲೆ, ನೀವು ಸುಳ್ಳರೇಕಲ್ಲ ?

ನವೀನ:—ಆಗಲಿ, ಬಿಡಿ! ಸುಳ್ಳು ಮತ್ತು ನಿಜ ನಮ್ಮಲ್ಲಿಯೇ ಕಲ್ಪಿತ ವಾಗಿವೆ. ಮತ್ತು ನಾವು ಎರಡರ ಸಾಕ್ಷಿಗಳಾದ ಅಧಿಷ್ಠಾನ*ರಾಗಿದ್ದೇವೆ.

ಸಿದ್ಧಾಂತಿ:—ನೀವು ಸತ್ಯದ ಮತ್ತು ಸುಳ್ಳಿನ ಆಧಾರವಾದಿರಿ, ಎಂದಾಗ, ನೀವೇ ಸಾಹುಕಾರನಂತೆಯೂ, ಮತ್ತು ಕಳ್ಳನಂತೆಯೂ ಆದಿರಿ! ಈ ಕಾರಣದಿಂದ, ನೀವು ಪ್ರಾಮಾಣಿಕರಾಗಿಯೂ ಕೂಡ ಉಳಿಯಲಿಲ್ಲ.

ಏಕೆಂದರೆ, **ಯಾವನು ಸರ್ವದಾ ಸತ್ಯವನ್ನಂಗೀಕರಿಸುತ್ತಾನೋ, ಸತ್ಯವನ್ನು ಹೇಳುತ್ತಾನೋ, ಸತ್ಯವನ್ನಾಚರಿಸುತ್ತಾನೋ; ಸುಳ್ಳನ್ನು ಒಪ್ಪುವುದಿಲ್ಲವೋ, ಸುಳ್ಳನ್ನಾಡುವುದಿಲ್ಲವೋ, ಮತ್ತು ಎಂದಿಗೂ ಸುಳ್ಳನ್ನು ವ್ಯವಹರಿಸುವುದಿಲ್ಲವೋ, ಅವನು ಪ್ರಾಮಾಣಿಕನಾಗಿರುತ್ತಾನೆ.**

ನೀವು ನಿಮ್ಮ ಮಾತನ್ನು ಸುಳ್ಳಾಗಿ ಮಾಡುತ್ತಿರುವುದರಿಂದ, ಸ್ವತಃ ನೀವೇ ಮಿಥ್ಯಾವಾದಿಗಳಾಗಿದ್ದೀರಿ!

ನವೀನ:—ಬ್ರಹ್ಮನ ಆಶ್ರಯದಲ್ಲಿರುವ ಮತ್ತು ಬ್ರಹ್ಮನನ್ನೇ ಆವರಿಸುವ ಅನಾದಿಯಾದ ಮಾಯೆಯನ್ನು ನೀವು ಒಪ್ಪುತ್ತೀರೋ, ಅಥವಾ ಇಲ್ಲವೋ ?

**ಸಿದ್ಧಾಂತಿ:—ಒಪ್ಪುವುದಿಲ್ಲ !**

ಏಕೆಂದರೆ, ನೀವು—"ಯಾವ ವಸ್ತು ಇಲ್ಲವೋ, ಆದರೂ ಭಾಸವಾಗುವುದೋ, ಅದು", ಎಂದು ಮಾಯೆಗೆ ಅರ್ಥ ಹೇಳುತ್ತೀರಿ. ಯಾವನ ಹೃದಯದ ಕಣ್ಣು ಇಂಗಿ ಹೋಗಿದೆಯೋ, ಅವನು ಈ ಮಾತನ್ನು ಒಪ್ಪುವನು.

ಏಕೆಂದರೆ, ಯಾವ ವಸ್ತುವಿಲ್ಲವೋ, ಅದರ ಭಾಸವಾಗುವಿಕೆ ಸರ್ವಥಾ ಅಸಂಭವ. ಉದಾಹರಣೆಗೆ—ಬಂಜೆಯ ಮಗನ ಪ್ರತಿಬಿಂಬ ಎಂದಿಗೂ ಬೀಳ ಲಾರದು.

ಮತ್ತು ಇದನ್ನು—

**"ಸನ್ಮೂಲಾಃ ಸೋಮ್ಯೇಮಾಃ ಪ್ರಜಾಃ".**†

ಈ ಮೊದಲಾದ ಛಾಂದೋಗ್ಯೋಪನಿಷತ್ತಿನ ವಚನ [ಮೊದಲಾದುವು]ಗಳಿಗೆ ವಿರುದ್ಧವಾಗಿ ಹೇಳುತ್ತೀರಿ.

---

*ಎಂದರೆ, ಆಶ್ರಯಭೂತ—ಅನು.

†ಛಾಂದೋಗ್ಯೋಪನಿಷತ್ (6.84)—ಅನು.

ನವೀನ:—ನೀವು, **ವಸಿಷ್ಠ, ಶಂಕರಾಚಾರ್ಯ** ಮೊದಲಾದವರು ಮತ್ತು **ನಿಶ್ಚಲದಾಸರ**ವರೆಗೆ, ನಿಮಗಿಂತ ದೊಡ್ಡ ಪಂಡಿತರೇ ಆಗಿದ್ದವರು ಬರೆದಿರುವುದನ್ನು ಖಂಡಿಸುತ್ತೀರೇನು ?

ನಮಗೇನೋ **ವಸಿಷ್ಠ, ಶಂಕರಾಚಾರ್ಯ** ಮತ್ತು **ನಿಶ್ಚಲದಾಸರು** ಮೊದಲಾದವರು ಅಧಿಕ [ವಿದ್ವಾಂಸ]ರೆಂದು ಕಾಣಿಸುತ್ತಾರೆ.

**ಸಿದ್ಧಾಂತಿ:**—ನೀವು ವಿದ್ವಾಂಸರೋ, ಅಥವಾ ಅವಿದ್ವಾಂಸರೋ ?

**ನವೀನ:**—ನಾವೂ ಸ್ವಲ್ಪ ವಿದ್ವಾಂಸರಾಗಿದ್ದೇವೆ.

**ಸಿದ್ಧಾಂತಿ:**—ಒಳ್ಳೆಯದು! **ವಸಿಷ್ಠ, ಶಂಕರಾಚಾರ್ಯ** ಮತ್ತು **ನಿಶ್ಚಲದಾಸರ ಪಕ್ಷವನ್ನು ನಮ್ಮ ಮುಂದೆ ಸ್ಥಾಪಿಸಿರಿ. ನಾವು ಖಂಡಿಸುತ್ತೇವೆ!**

ಯಾವನ ಪಕ್ಷ ಸಿದ್ಧವಾಗುವುದೋ, ಅವನೇ ದೊಡ್ಡವನು. ಅವರ, ಮತ್ತು ನಿಮ್ಮ ಮಾತು ಅಖಂಡನೀಯವಾಗಿದ್ದಿದ್ದರೆ, ನೀವು ಅವರ ಯುಕ್ತಿಗಳನ್ನು ಆಧಾರವಾಗಿ ಮಾಡಿಕೊಂಡು, ನಮ್ಮ ಮಾತನ್ನು ಖಂಡಿಸಲಾರಿರೇಕೆ ? ಹಾಗೆ ಮಾಡಿದರೆ ಮಾತ್ರ ನಿಮ್ಮ, ಮತ್ತು ಅವರ ಮಾತು ಮಾನನೀಯವಾದೀತು !

### (ಜೈನರ ಮತವನ್ನು ಖಂಡಿಸಲು ಹೊಸಮತವನ್ನು ಶಂಕರಾಚಾರ್ಯರು ಅಂಗೀಕರಿಸಿದ್ದರು)

**ಶಂಕರಾಚಾರ್ಯ** ಮೊದಲಾದವರೇನೋ ಜೈನರ ಮತವನ್ನು ಖಂಡಿಸುವುದಕ್ಕಾಗಿಯೇ ಈ ಮತವನ್ನು ಸ್ವೀಕರಿಸಿರಬಹುದು, ಎಂಬ ಊಹೆಯಿದೆ.

ಏಕೆಂದರೆ, ದೇಶ-ಕಾಲಗಳಿಗೆ ಅನುಕೂಲವಾಗಿ ತಮ್ಮ ಪಕ್ಷವನ್ನು ಸಿದ್ಧಪಡಿಸುವುದಕ್ಕಾಗಿ, ಬಹುಜನ ಸ್ವಾರ್ಥೀ ವಿದ್ವಾಂಸರು ತಮ್ಮ ಆತ್ಮನ ಜ್ಞಾನಕ್ಕೆ ವಿರುದ್ಧವಾಗಿಯೂ ವರ್ತಿಸಿಬಿಡುತ್ತಾರೆ.

ಮತ್ತು [ಅವರು] ಈ ಮಾತುಗಳನ್ನು, ಎಂದರೆ, **ಜೀವ-ಈಶ್ವರರ ಏಕತ್ವ ; ಜಗತ್ತಿನ ಮಿಥ್ಯಾತ್ವ** ಮೊದಲಾದ ವ್ಯವಹಾರಗಳನ್ನು ಸತ್ಯವಲ್ಲವೆಂದು ಒಪ್ಪುತ್ತಿದ್ದವರಾಗಿದ್ದರೆ, ಅವರ ಈ ಮಾತು* ಸತ್ಯವಾಗಲಾರದು.

---

***ಎಂದರೆ, ಹೊಸ ಸಿದ್ಧಾಂತದ ಅಂಗೀಕಾರ.—ಸಂ.**

## (ನಿಶ್ಚಲದಾಸರ ಪಾಂಡಿತ್ಯ)

ನಿಶ್ಚಲದಾಸರ ಪಾಂಡಿತ್ಯವನ್ನು ನೋಡಿರಿ ; ಹೀಗಿದೆ:—

**"ಜೀವೋ ಬ್ರಹ್ಮಾಽಭಿನ್ನಶ್ಚೇತನತ್ವಾತ್".**

ಅವರು **"ವೃತ್ತಿಪ್ರಭಾಕರ"**ದಲ್ಲಿ ಜೀವ-ಬ್ರಹ್ಮರ ಏಕತ್ವಕ್ಕೆ ಅನುಮಾನ ಪ್ರಮಾಣವಾಗಿ—

"ಚೇತನನಾಗಿರುವುದರಿಂದ, ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆ", ಎಂದು ಬರೆದಿದ್ದಾರೆ.

ಇದು ಬಹಳ ಕಡಿಮೆ ತಿಳಿವಳಿಕೆಯ ಪುರುಷನ ಮಾತಿಗೆ ಸಮಾನವಾದ ಮಾತಾಗಿದೆ. ಏಕೆಂದರೆ, ಸಾಧರ್ಮ್ಯಮಾತ್ರದಿಂದ,* ಒಂದರ ಏಕತ್ವ ಇನ್ನೊಂದರೊಂದಿಗೆ ಉಂಟಾಗುವುದಿಲ್ಲ ; ವೈಧರ್ಮ್ಯವು† ಬೇರ್ಪಡಿಸುವಂತಹದಾಗಿರುತ್ತದೆ. ಉದಾಹರಣೆಗೆ—

**'ಪೃಥಿವೀ ಜಲಾಽಭಿನ್ನಾ ಜಡತ್ವಾತ್'.**

ಯಾವನಾದರೂ— "ಜಡವಾದುದರಿಂದ, ಪೃಥಿವಿಯು ಜಲದಿಂದ ಅಭಿನ್ನವಾಗಿದೆ.", ಎಂದು ಹೇಳಿದರೆ, ಹೇಗೆ ಈ ವಾಕ್ಯ ಸಂಗತವಾಗಲಾರದೋ, ಹಾಗೆ ನಿಶ್ಚಲದಾಸರು ಹೇಳಿರುವ ಲಕ್ಷಣವೂ ಕೂಡ ವ್ಯರ್ಥವಾಗಿದೆ.

ಏಕೆಂದರೆ, ಅಲ್ಪತ್ವ, ಅಲ್ಪಜ್ಞತ್ವ, ಮತ್ತು ಭ್ರಾಂತಿಯುಕ್ತತ್ವ ಮೊದಲಾದ ಧರ್ಮಗಳು ಜೀವನಲ್ಲಿ, ಬ್ರಹ್ಮನಿಗೆ ವಿರುದ್ಧವಾಗಿ, ಇದ್ದು ; ಮತ್ತು ಸರ್ವಗತತ್ವ ಸರ್ವಜ್ಞತ್ವ ಮತ್ತು ಭ್ರಾಂತಿರಹಿತತ್ವ ಮೊದಲಾದ ವೈಧರ್ಮ್ಯಗಳು ಬ್ರಹ್ಮನಲ್ಲಿ, ಜೀವನಿಗೆ ವಿರುದ್ಧವಾಗಿ, ಇವೆ. **ಆದುದರಿಂದ, ಬ್ರಹ್ಮ ಮತ್ತು ಜೀವರು ಬೇರೆ-ಬೇರೆಯಾಗಿದ್ದಾರೆ.**

ಹೇಗೆ ಗಂಧವತ್ತ್ವ, ಕಠಿಣತ್ವ ಮೊದಲಾದ ಭೂಮಿಯ ಧರ್ಮಗಳು ರಸವತ್ತ್ವ, ದ್ರವತ್ವ ಮೊದಲಾದ ಜಲದ ಧರ್ಮಕ್ಕೆ ವಿರುದ್ಧವಾಗಿರುವುದರಿಂದ, ಪೃಥಿವೀ ಮತ್ತು ಜಲ ಒಂದಲ್ಲವೋ, ಹಾಗೆಯೇ, ಜೀವನ ಮತ್ತು ಬ್ರಹ್ಮನ ನಡುವೆ ವೈಧರ್ಮ್ಯವಿರುವುದರಿಂದ, **ಜೀವ ಮತ್ತು ಬ್ರಹ್ಮ ಎಂದೂ ಒಂದಾಗಿರಲಿಲ್ಲ, ಒಂದಾಗಿಲ್ಲ, ಮತ್ತು ಎಂದೂ ಒಂದಾಗುವುದೂ ಇಲ್ಲ!**

---

*ಕೇವಲ ಸಮಾನ ಗುಣತ್ವದಿಂದ—ಅನು.

†ವಿರುದ್ಧ ಗುಣತ್ವವು—ಅನು.

ಇಷ್ಟರಿಂದಲೇ, ನಿಶ್ಚಲದಾಸರೇ ಮೊದಲಾದವರ ಬಗೆಗೆ ಅವರಲ್ಲಿ ಎಷ್ಟು ಪಾಂಡಿತ್ಯವಿದ್ದಿತೆಂದು ತಿಳಿದುಕೊಳ್ಳಿರಿ !

**('ಯೋಗವಾಸಿಷ್ಠ'ವು ವಸಿಷ್ಠನ ಅಥವಾ ವಾಲ್ಮೀಕಿಯ ರಚನೆಯಲ್ಲ)**

ಮತ್ತು ಯಾವನು **ಯೋಗವಾಸಿಷ್ಠ**ವನ್ನು ರಚಿಸಿದ್ದಾನೋ, ಅವನು ಯಾವನೋ ಆಧುನಿಕ ವೇದಾಂತಿಯಾಗಿದ್ದನು. ಅದು **ವಾಲ್ಮೀಕಿಯು, ವಸಿಷ್ಠರು** ಮತ್ತು **ರಾಮಚಂದ್ರನು** ರಚಿಸಿದುದು, ಅಥವಾ ಹೇಳಿದುದು–ಕೇಳಿದುದು ಅಲ್ಲ. ಏಕೆಂದರೆ, **ಅವರೆಲ್ಲರೂ ವೇದಾನುಯಾಯಿಗಳಾಗಿದ್ದರು ; ವೇದಕ್ಕೆ ವಿರುದ್ಧವಾಗಿ ರಚಿಸಬಲ್ಲವರಾಗಿರಲಿಲ್ಲ ; ಹೇಳಬಲ್ಲವರಾಗಿರಲಿಲ್ಲ ; ಮತ್ತು ಕೇಳಬಲ್ಲವರಾಗಿಯೂ ಇರಲಿಲ್ಲ!**

**(ಶಾರೀರಕ ಸೂತ್ರಗಳಲ್ಲೂ ಜೀವ–ಬ್ರಹ್ಮಗಳ ಐಕ್ಯತೆ ಇಲ್ಲ)**

**ಪ್ರಶ್ನೆ:—ವ್ಯಾಸರು** ಯಾವ **ಶಾರೀರಕ ಸೂತ್ರ**ಗಳನ್ನು ರಚಿಸಿದ್ದಾರೋ, ಅವುಗಳಲ್ಲಿಯೂ ಕೂಡ ಜೀವ–ಬ್ರಹ್ಮರ ಏಕತ್ವ ಕಂಡುಬರುವುದಿಲ್ಲವೇನು ? ನೋಡಿರಿ—

**ಸಂಪದ್ಯಾಽಽವಿರ್ಭಾವಃ ಸ್ವೇನ ಶಬ್ದಾತ್** ॥1॥

[ವೇದಾಂತ:–4.4.1]

**ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ** ॥2॥

[ವೇದಾಂತ:-4.4.5]

**ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ** ॥3॥

[ವೇದಾಂತ:–4.4.6]

**ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ** ॥4॥

[ವೇದಾಂತ:–4.4.7]

**ಅತ ಏವ ಚಾನನ್ಯಾಧಿಪತಿಃ** ॥5॥

ವೇದಾಂತ-[4.4.9]

ಎಂದರೆ, ಮೊದಲು ಯಾವನು ಬ್ರಹ್ಮಸ್ವರೂಪನಾಗಿದ್ದನೋ, ಆ ಜೀವನು ತನ್ನ ಸ್ವರೂಪವನ್ನು ಪಡೆದುಕೊಂಡು ಪ್ರಕಟನಾಗುತ್ತಾನೆ. ಏಕೆಂದರೆ, 'ಸ್ವ' ಎಂಬ ಶಬ್ದದಿಂದ ತನ್ನ ಬ್ರಹ್ಮಸ್ವರೂಪದ ಗ್ರಹಿಕೆಯಾಗುತ್ತದೆ.

"ಅಯಮಾತ್ಮಾ ಅಪಹತಪಾಪ್ಮಾ." ಮೊದಲಾದ ಉಪನ್ಯಾಸಗಳಿಂದ, ಐಶ್ವರ್ಯದ* ಪ್ರಾಪ್ತಿಯಾಗುವ ಪರ್ಯಂತ [ಉಕ್ತವಾಗಿರುವ] ಕಾರಣಗಳಿಂದ, ಜೀವನು ಬ್ರಹ್ಮಸ್ವರೂಪದಿಂದ ಸ್ಥಿತನಾಗುತ್ತಾನೆ, ಎಂದು **ಜೈಮಿನಿ** ಆಚಾರ್ಯರ ಅಭಿಪ್ರಾಯವಿದೆ.

ಮತ್ತು ಔಡುಲೋಮಿ ಆಚಾರ್ಯರು—ತದಾತ್ಮಕಸ್ವರೂಪದ ನಿರೂಪಣ ಮೊದಲಾದ, **ಬೃಹದಾರಣ್ಯಕದ** ಕಾರಣರೂಪವಾದ ವಚನಗಳ ಪ್ರಮಾಣದಿಂದ, ಜೀವನು ಮುಕ್ತಿಯಲ್ಲಿ ಚೈತನ್ಯಮಾತ್ರಸ್ವರೂಪದಿಂದ ಸ್ಥಿತನಾಗಿರುತ್ತಾನೆ, ಎನ್ನುತ್ತಾರೆ. [3]

**ವ್ಯಾಸರು**—ಮೊದಲು ಹೇಳಿರುವ ಈ ಉಪನ್ಯಾಸ ಮೊದಲಾದುದರಿಂದಲೂ, ಐಶ್ವರ್ಯ-ಪ್ರಾಪ್ತಿಯೆಂಬ ಹೇತುಗಳಿಂದಲೂ, ಜೀವನು ಬ್ರಹ್ಮಸ್ವರೂಪನಾಗುವುದರಲ್ಲಿ ಅವಿರೋಧವನ್ನು ಅಂಗೀಕರಿಸುತ್ತಾರೆ. [4]

ಯೋಗಿಯು ಐಶ್ವರ್ಯಸಹಿತನಾದ† ತನ್ನ ಬ್ರಹ್ಮಸ್ವರೂಪವನ್ನು ಪಡೆದುಕೊಂಡು, ಬೇರೆಯ ಅಧಿಪತಿಯಿಂದ ರಹಿತನಾಗಿ, ಎಂದರೆ ಸ್ವತಃ ತಾನೇ ತನ್ನ, ಮತ್ತು ಎಲ್ಲರ ಅಧಿಪತಿಯ ರೂಪದಲ್ಲಿ, ಬ್ರಹ್ಮಸ್ವರೂಪದಿಂದ ಮುಕ್ತಿಯಲ್ಲಿ ಸ್ಥಿತನಾಗಿರುತ್ತಾನೆ. [5]

**ಉತ್ತರ:**—ಈ ಸೂತ್ರಗಳ ಅರ್ಥ ಈ ರೀತಿಯದ್ದಲ್ಲ. ಆದರೆ, ಇವುಗಳ ಯಥಾರ್ಥವಾದ ಅರ್ಥ ಹೀಗಿದೆ; ಕೇಳಿರಿ.—

ಎಲ್ಲಿಯವರೆಗೆ ಜೀವನು ತನ್ನ ಸ್ವಕೀಯ ಶುದ್ಧ ಸ್ವರೂಪವನ್ನು ಗಳಿಸಿಕೊಂಡು, ಎಲ್ಲ ಕಶ್ಮಲಗಳಿಂದಲೂ ರಹಿತನಾಗಿ, ಪವಿತ್ರನಾಗುವುದಿಲ್ಲವೋ, ಅಲ್ಲಿನವರೆಗೆ ಯೋಗದಿಂದ ಐಶ್ವರ್ಯವನ್ನು‡ ಸಾಧಿಸಿ, ತನ್ನ ಅಂತರ್ಯಾಮೀ ಬ್ರಹ್ಮನನ್ನು ಪಡೆದುಕೊಂಡು, ಆನಂದದಲ್ಲಿ ಸ್ಥಿತನಾಗಲಾರನು. [1]

ಇದೇ ರೀತಿ, ಯೋಗಿಯು ಯಾವಾಗ ಪಾಪ ಮೊದಲಾದುವುಗಳಿಂದ ರಹಿತನಾಗಿ, ಐಶ್ವರ್ಯಯುಕ್ತನಾಗುತ್ತಾನೋ, ಆಗ ಮಾತ್ರ ಬ್ರಹ್ಮನೊಂದಿಗೆ ಮುಕ್ತಿಯ

---

* ಈಶ್ವರತ್ವ—ಅನು.

† ಈಶ್ವರಯುಕ್ತನಾಗಿ.—ಅನು.

‡ ಯೋಗಾಭ್ಯಾಸದಿಂದ ಲಭಿಸುವ, ಇಂದ್ರಿಯಗಳೇ ಮೊದಲಾದುವುಗಳ ಮೇಲಿನ ಸ್ವಾಮಿತ್ವ.—ಅನು.

ಆನಂದವನ್ನು ಅನುಭವಿಸಬಲ್ಲನು. ಹೀಗೆ ಜೈಮಿನಿ ಆಚಾರ್ಯರ ಅಭಿಪ್ರಾಯ ವಿದೆ. [2]

ಯಾವಾಗ ಅವಿದ್ಯೆಯೇ ಮೊದಲಾದ ದೋಷಗಳಿಂದ ಬಿಡುಗಡೆ ಹೊಂದಿ, ಶುದ್ಧ ಚೈತನ್ಯಮಾತ್ರಸ್ವರೂಪದಿಂದ, ಜೀವನು ಸ್ಥಿರನಾಗುತ್ತಾನೋ, ಆಗ ಮಾತ್ರ "ತದಾತ್ಮಕತ್ವ"ವನ್ನು, ಎಂದರೆ ಬ್ರಹ್ಮಸ್ವರೂಪದೊಂದಿಗೆ ಸಂಬಂಧವನ್ನು ಗಳಿಸಿ ಕೊಳ್ಳುತ್ತಾನೆ. [ಹೀಗೆ, ಔಡುಲೋಮಿ ಆಚಾರ್ಯರ ಮತವಾಗಿದೆ.] [3]

ಯಾವಾಗ [ಜೀವನು] ಬ್ರಹ್ಮನೊಂದಿಗೆ ಐಶ್ವರ್ಯವನ್ನೂ* ಮತ್ತು ಶುದ್ಧ ವಿಜ್ಞಾನವನ್ನೂ† ಗಳಿಸಿಕೊಂಡು, ಜೀವಂತನಾಗಿರುವಾಗಲೇ, ಜೀವನ್ಮುಕ್ತ ನಾಗುತ್ತಾನೋ, ಆಗ ತನ್ನ ನಿರ್ಮಲವಾದ ಮೊದಲ ಸ್ವರೂಪವನ್ನು ಗಳಿಸಿ, ಆನಂದಿತನಾಗುತ್ತಾನೆ, ಎಂದು ವ್ಯಾಸಮುನಿಗಳ ಅಭಿಪ್ರಾಯವಿದೆ. [4]

ಯಾವಾಗ ಯೋಗಿಯ ಸಂಕಲ್ಪವು ಸತ್ಯವಾಗುತ್ತದೋ, ಆಗ ಸ್ವತಃ ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಂಡು, ಮುಕ್ತಿಸುಖವನ್ನು ಪಡೆಯುತ್ತಾನೆ. **ಅಲ್ಲಿ** ಸ್ವಾಧೀನನಾಗಿ, ಸ್ವತಂತ್ರನಾಗಿರುತ್ತಾನೆ.

**ಹೇಗೆ ಜಗತ್ತಿನಲ್ಲಿ ಒಬ್ಬನು ಮುಖ್ಯ, ಇನ್ನೊಬ್ಬನು ಅಮುಖ್ಯನಾಗಿರು ತ್ತಾನೋ ; ಹಾಗೆ ಮುಕ್ತಿಯಲ್ಲಿರುವುದಿಲ್ಲ. ಆದರೆ, ಮುಕ್ತಜೀವರೆಲ್ಲರೂ ಒಂದೇ ಸಮನಾಗಿರುತ್ತಾರೆ.** [5]

### (ಜೀವನಿಂದ ಬ್ರಹ್ಮನು ಬೇರೆಯಿದ್ದಾನೆ)

ಹೀಗೆ ಅಲ್ಲವಾದರೆ:—

**ನೇತರೋಽನುಪಪತ್ತೇಃ** ॥1॥

[ವೇದಾಂತ:—1.1.16]

**ಭೇದವ್ಯಪದೇಶಾಚ್ಚ** ॥2॥

[ವೇದಾಂತ:—1.1.17]

**ವಿಶೇಷಣಭೇದವ್ಯಪದೇಶಾಭ್ಯಾಂ [ಚ] ನೇತರೌ** ॥3॥

[ವೇದಾಂತ:—1.2.22]

**ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ** ॥4॥

[ವೇದಾಂತ:—1.1.19]

---

*ಆಧ್ಯಾತ್ಮಿಕ ಉತ್ಕೃಷ್ಟ ಭಾವವನ್ನೂ.—ಅನು.

†ವಿವಿಧ ತತ್ವಸಂಬಂಧವಾದದ್ದು.—ಅನು.

ಅಂತಸ್ತದ್ಧರ್ಮೋಪದೇಶಾತ್ ॥5॥

[ವೇದಾಂತ:—1.1.20]

ಭೇದವ್ಯಪದೇಶಾಚ್ಚಾನ್ಯಃ ॥6॥

[ವೇದಾಂತ:—1.1.21]

ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥7॥

[ವೇದಾಂತ:—1.2.11]

ಅನುಪಪತ್ತೇಸ್ತು ನ ಶಾರೀರಃ ॥8॥

[ವೇದಾಂತ:—1.2.3]

ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥9॥

[ವೇದಾಂತ:—1.2.18]

ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ॥10॥

[ವೇದಾಂತ:—1.2.20]

ವ್ಯಾಸಮುನಿಕೃತವೇದಾಂತ ಸೂತ್ರಾಣಿ ॥

ಅರ್ಥ:—ಬ್ರಹ್ಮನಿಂದ ಬೇರೆ ಇರುವ ಜೀವನು ಸೃಷ್ಟಿಕರ್ತೃವಲ್ಲ. ಏಕೆಂದರೆ, ಅಲ್ಪನೂ,* ಅಲ್ಪ ಸಾಮರ್ಥ್ಯಯುಕ್ತನೂ, ಮತ್ತು ಅಲ್ಪಜ್ಞನೂ ಆದ,† ಜೀವನಲ್ಲಿ ಸೃಷ್ಟಿಕರ್ತೃತ್ವ ಘಟಿಸಲಾರದು. ಆದುದರಿಂದ, ಜೀವನು ಬ್ರಹ್ಮನಲ್ಲ. [1]

"ರಸಂ ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ."

ಇದು ಉಪನಿಷತ್ತಿನ‡ ವಚನವಾಗಿದೆ.

ಜೀವ ಮತ್ತು ಬ್ರಹ್ಮ ಬೇರೆಯಾಗಿದ್ದಾರೆ. ಏಕೆಂದರೆ, ಇವರಿಬ್ಬರ ಭೇದವು ಪ್ರತಿಪಾದಿಸಲ್ಪಟ್ಟಿದೆ. ಹೀಗೆ ಅಲ್ಲವಾಗಿದ್ದಲ್ಲಿ, 'ರಸ'ವನ್ನು, ಎಂದರೆ ಆನಂದ ಸ್ವರೂಪನಾದ ಬ್ರಹ್ಮನನ್ನು ಪಡೆದು, ಜೀವನು ಆನಂದಸ್ವರೂಪನಾಗುತ್ತಾನೆ, ಎಂಬ, ಸಾಕ್ಷಾತ್ಕರಿಸಿಕೊಳ್ಳಬೇಕಾದ ಬ್ರಹ್ಮ, ಮತ್ತು ಪ್ರಾಪ್ತಿಗಾಗಿ ಸಾಧನೆಮಾಡುವ ಜೀವರ, ನಿರೂಪಣ ಅನ್ವಯಿಸಲಾರದು. ಆದುದರಿಂದ, ಜೀವ ಮತ್ತು ಬ್ರಹ್ಮ ಒಂದಲ್ಲ. [2]

---

*ಮತ್ತು ಅಣುಸ್ವರೂಪನೂ, ಏಕದೇಶೀಯನೂ.—ಅನು.

†ಮತ್ತು ದೇಹ-ದೇಹಾಂತರನಿವಾಸೀ. —ಅನು.

‡ತೈತ್ತಿರೀಯೋಪನಿಷತ್, ಬ್ರಹ್ಮಾನಂದವಲ್ಲೀ. 7—ಯು.ವಿ..

**ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋಽಕ್ಷರಾತ್ಪರತಃ ಪರಃ ॥**

[**ಮುಂಡಕೋಪನಿಷತ್ :– 2.1.2**]

ದಿವ್ಯನು, ಶುದ್ಧನು, ಆಕಾರರಹಿತನು, ಸರ್ವದರಲ್ಲಿಯೂ ಪೂರ್ಣನು, ಹೊರಗೆ-ಒಳಗೆ ನಿರಂತರವಾಗಿ ವ್ಯಾಪಕನು, ಅಜನು = ಜನನ–ಮರಣ–ಶರೀರಧಾರಣ ಮೊದಲಾದವುಗಳಿಂದ ರಹಿತನು, ಶ್ವಾಸ–ಪ್ರಶ್ವಾಸಗಳು, ಶರೀರ–ಮನಸ್ಸುಗಳ ಸಂಬಂಧದಿಂದ ರಹಿತನು, ಪ್ರಕಾಶಸ್ವರೂಪನು–ಈ ಮೊದಲಾದ ವಿಶೇಷಣಗಳು ಪರಮಾತ್ಮನಿಗಿವೆ. ಮತ್ತು **'ಅಕ್ಷರ'**, [ಎಂದರೆ] ನಾಶರಹಿತವಾದ ಪ್ರಕೃತಿಗಿಂತ ಶ್ರೇಷ್ಠನಾದವನು, ಎಂದರೆ ಸೂಕ್ಷ್ಮನಾದ ಜೀವನು ; ಅವನಿಗಿಂತಲೂ ಪರಮಾತ್ಮನು ಶ್ರೇಷ್ಠನು ; ಎಂದರೆ ಬ್ರಹ್ಮನು ಸೂಕ್ಷ್ಮನಾಗಿದ್ದಾನೆ.

ಪ್ರಕೃತಿಯಿಂದ, ಮತ್ತು ಜೀವರಿಂದ ಬ್ರಹ್ಮನ ಭೇದದ ಪ್ರತಿಪಾದನಗಳಿರುವ ಕಾರಣಗಳಿಂದ, **ಪ್ರಕೃತಿ ಮತ್ತು ಜೀವರಿಂದ ಬ್ರಹ್ಮನು ಬೇರೆಯಾಗಿದ್ದಾನೆ.**[3]

ಇದೇ ಸರ್ವವ್ಯಾಪಕ ಬ್ರಹ್ಮನಲ್ಲಿ ಜೀವನ ಯೋಗವನ್ನು, ಅಥವಾ ಜೀವನಲ್ಲಿ ಬ್ರಹ್ಮನ ಯೋಗವನ್ನು **ಪ್ರತಿಪಾದಿಸುವುದರಿಂದ, ಜೀವ ಮತ್ತು ಬ್ರಹ್ಮ ಬೇರೆಯಾಗಿದ್ದಾರೆ.**

ಏಕೆಂದರೆ, **ಯೋಗವು* ಬೇರೆ ಬೇರೆಯ ಪದಾರ್ಥಗಳದು ಮಾತ್ರ ಆಗುತ್ತದೆ.** [4]

ಈ ಬ್ರಹ್ಮನಿಗೆ ಅಂತರ್ಯಾಮಿತ್ವ ಮೊದಲಾದ ಧರ್ಮಗಳನ್ನು ಹೇಳಿದ್ದಾರೆ. ಮತ್ತು ಜೀವನಲ್ಲಿ ವ್ಯಾಪಕನಾಗಿರುವುದರಿಂದ, **ವ್ಯಾಪ್ಯನಾದ ಜೀವನು ವ್ಯಾಪಕನಾದ ಬ್ರಹ್ಮನಿಂದ ಬೇರೆಯಾಗಿದ್ದಾನೆ.** ಏಕೆಂದರೆ, **ವ್ಯಾಪ್ಯ-ವ್ಯಾಪಕ ಸಂಬಂಧವೂ ಕೂಡ ಭೇದವಿದ್ದಲ್ಲಿ ಅನ್ವಯಿಸಬಲ್ಲದು.** [5]

ಹೇಗೆ ಪರಮಾತ್ಮನು ಜೀವನಿಂದ ಬೇರೆಯಾದ ಸ್ವರೂಪದಿಂದ ಯುಕ್ತನಾಗಿದ್ದಾನೋ, ಹಾಗೆ ಇಂದ್ರಿಯಗಳು, ಅಂತಃಕರಣಗಳು ; ಪೃಥಿವೀ ಮೊದಲಾದ ಭೂತಗಳು; ದಿಕ್ಕುಗಳು, ವಾಯು,† ಸೂರ್ಯ ಮೊದಲಾದವು; ಮತ್ತು **ದಿವ್ಯಗುಣಗಳ ಯೋಗದಿಂದ, ದೇವತೆಗಳೆಂದು ನಿರ್ದೇಶಿಸಲ್ಪಡುವ ವಿದ್ವಾಂಸರು**—ಇವರಿಂದಲೂ ಕೂಡ ಪರಮಾತ್ಮನು ಬೇರೆಯಾಗಿದ್ದಾನೆ. [6]

---

*ಎಂದರೆ, ಸೇರುವಿಕೆ, ಒಂದಕ್ಕಿಂತ ಹೆಚ್ಚು ವಸ್ತುಗಳಿದ್ದಾಗ ಮಾತ್ರ.—ಅನು.

†ಆಕರ್ಷಣಶಕ್ತಿ—ಅನು.

**"ಗುಹಾಂ ಪ್ರವಿಷ್ಟೌ ಸುಕೃತಸ್ಯ ಲೋಕೇ".***

—ಮೊದಲಾದ ಉಪನಿಷತ್ತಿನ ವಚನಗಳಿಂದ, **ಜೀವ** ಮತ್ತು **ಪರಮಾತ್ಮನು ಬೇರೆಯಾಗಿದ್ದಾರೆ**, ಎಂದು ಸ್ಪಷ್ಟವಾಗಿದೆ. ಹಾಗೆಯೇ ಉಪನಿಷತ್ತುಗಳಲ್ಲಿ ಒಹಳ ಕಡೆ ತೋರಿಸಿದ್ದಾರೆ. [7]

**"ಶರೀರೇ ಭವಃ ಶಾರೀರಃ".**

**—ಶರೀರಧಾರೀ ಜೀವನು** ಬ್ರಹ್ಮನಲ್ಲ. ಏಕೆಂದರೆ, ಬ್ರಹ್ಮನ ಗುಣ, ಕರ್ಮ, ಸ್ವಭಾವಗಳು ಜೀವನಿಗೆ ಅನ್ವಯಿಸುವುದಿಲ್ಲ. [8]

[**ಅಧಿದೇವ**] ಎಲ್ಲ ದಿವ್ಯವಾದ ಮನಸ್ಸು ಮೊದಲಾದುದರಲ್ಲಿಯೂ : ಇಂದ್ರಿಯಗಳು ಮೊದಲಾದ ಸಕಲ ವಸ್ತುಗಳಲ್ಲಿಯೂ : [**ಅಧಿಭೂತ**] ಪೃಥಿವೀ ಮೊದಲಾದ ಭೂತಗಳಲ್ಲಿಯೂ ; [**ಅಧ್ಯಾತ್ಮ**] ಸಮಸ್ತ ಜೀವರಲ್ಲಿಯೂ ಪರಮಾತ್ಮನು ಅಂತರ್ಯಾಮಿರೂಪದಿಂದ ಸ್ಥಿತನಾಗಿದ್ದಾನೆ. ಏಕೆಂದರೆ, ಅದೇ ಪರಮಾತ್ಮನ ವ್ಯಾಪಕತ್ವ ಮೊದಲಾದ ಧರ್ಮಗಳು ಉಪನಿಷತ್ತುಗಳಲ್ಲಿ ಸರ್ವತ್ರ ವಿವರಿಸಲ್ಪಟ್ಟಿವೆ. [9]

**ಶರೀರಧಾರಿಯಾದ ಜೀವನು** ಬ್ರಹ್ಮನಲ್ಲ ; **ಏಕೆಂದರೆ,** ಬ್ರಹ್ಮನಿಂದ **ಜೀವನ ಭೇದವು ಸ್ವರೂಪದಿಂದ ಸಿದ್ಧಪಡಿಸಲಾಗಿದೆ.** [10]

ಈ ಮೊದಲಾದ ಶಾರೀರಕ ಸೂತ್ರಗಳಿಂದಲೂ ಕೂಡ, ಸ್ವರೂಪದಿಂದ, ಬ್ರಹ್ಮ ಮತ್ತು ಜೀವರ ಭೇದ ಸಿದ್ಧವಾಗಿದೆ.

## (ಉಪಕ್ರಮ ಮತ್ತು ಉಪಸಂಹಾರದ ಕಲ್ಪನೆ ಸುಳ್ಳಾಗಿದೆ)

ಹಾಗೆಯೇ, ವೇದಾಂತಿಗಳ **'ಉಪಕ್ರಮ'** ಮತ್ತು **'ಉಪಸಂಹಾರ'**ವೂ ಕೂಡ ಅನ್ವಯಿಸಲಾರದು. ಏಕೆಂದರೆ, **'ಉಪಕ್ರಮ'**, ಎಂದರೆ ಆರಂಭವೂ ಬ್ರಹ್ಮನಿಂದ; ಮತ್ತು **'ಉಪಸಂಹಾರ'**, ಎಂದರೆ ಪ್ರಳಯವೂ ಕೂಡ ಬ್ರಹ್ಮನಲ್ಲಿಯೇ [ಆಗುತ್ತವೆ], ಎಂದು ಹೇಳುತ್ತಾರೆ.

ಬೇರೆಯ ಯಾವುದೇ ವಸ್ತುವನ್ನೂ [ನೀವು] ಒಪ್ಪದೇ ಇರುವಾಗ, ಉತ್ಪತ್ತಿ ಮತ್ತು ಪ್ರಳಯವೂ ಕೂಡ ಬ್ರಹ್ಮನ ಧರ್ಮಗಳಾಗಿ ಹೋಗುತ್ತವೆ. ಮತ್ತು ಉತ್ಪತ್ತಿ-ವಿನಾಶರಹಿತ ಬ್ರಹ್ಮನ ಪ್ರತಿಪಾದನವನ್ನು ವೇದಗಳೇ ಮೊದಲಾದ

---

***ಕಠೋಪನಿಷತ್ 3·1—ಅನು.**

ಸತ್ಯಶಾಸ್ತ್ರಗಳಲ್ಲಿ ಮಾಡಲಾಗಿದೆ. **ಅದು ನವೀನ ವೇದಾಂತಿಗಳ ಮೇಲೆ ಕೋಪಿಸಿ ಕೊಳ್ಳುವುದು! ಏಕೆಂದರೆ, ನಿರ್ವಿಕಾರ, ಅಪರಿಣಾಮಿ, ಶುದ್ಧ, ಸನಾತನ, ನಿಭ್ರಾಂತ** ಮೊದಲಾದ ವಿಶೇಷಣಗಳಿಂದ ಸೂಚ್ಯವಾಗುವ ಬ್ರಹ್ಮನಲ್ಲಿ **ವಿಕಾರ, ಉತ್ಪತ್ತಿ** ಮತ್ತು **ಅಜ್ಞಾನ** ಮೊದಲಾದುದರ ಸಂಭವವು ಯಾವ ರೀತಿಯಲ್ಲಿಯೂ ಉಂಟಾಗಲಾರದು.

ಮತ್ತು **ಉಪಸಂಹಾರ**=ಪ್ರಳಯವಾದಮೇಲೆಯೂ ಬ್ರಹ್ಮ, ಕಾರಣ ರೂಪವಾದ ಜಡ, ಮತ್ತು ಜೀವರು ನಿಃಸಂದೇಹವಾಗಿ ಇದ್ದೇ ಇರುತ್ತಾರೆ. ಆದುದರಿಂದ, ಈ ವೇದಾಂತಿಗಳ **ಉಪಕ್ರಮ** ಮತ್ತು **ಉಪಸಂಹಾರ** ಎಂಬ ಈ ಕಲ್ಪನೆ ಕೂಡ ಸುಳ್ಳಾಗಿದೆ.

**ಶಾಸ್ತ್ರಗಳು ಮತ್ತು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಗೆ ವಿರುದ್ಧವಾದ ಇಂತಹ ಬೇರೆ ಅಶುದ್ಧವಾದ ಬಹಳ ಮಾತುಗಳೂ ಇವರ ಬಳಿ ಇವೆ.**

## (ವಿಕ್ರಮಾದಿತ್ಯ ಮತ್ತು ಭರ್ತೃಹರಿ)

ಇವರ ನಂತರ, ಸ್ವಲ್ಪ ಸ್ವಲ್ಪ ಜೈನರ, ಮತ್ತು ಸ್ವಲ್ಪ ಸ್ವಲ್ಪ ಶಂಕರಾಚಾರ್ಯರ ಅನುಯಾಯಿಗಳ ಉಪದೇಶದ ಸಂಸ್ಕಾರಗಳು ಆರ್ಯಾವರ್ತದಲ್ಲಿ ಹರಡಿದ್ದವು. ಮತ್ತು ಪರಸ್ಪರ ಖಂಡನ-ಮಂಡನಗಳೂ ನಡೆಯುತ್ತಿದ್ದವು.

**ಶಂಕರಾಚಾರ್ಯರ** ನಂತರ, ಮುನ್ನೂರು ವರ್ಷಗಳು ಆದ ಮೇಲೆ, **ಉಜ್ಜಯಿನೀ** ನಗರಿಯಲ್ಲಿ **ವಿಕ್ರಮಾದಿತ್ಯನು** ಪ್ರತಾಪ ಶಾಲಿಯಾದ ರಾಜನಾದನು. ಅವನು ಸರ್ವರಾಜರುಗಳ ಮಧ್ಯೆ ಪ್ರವೃತ್ತವಾಗಿದ್ದ ಯುದ್ಧವನ್ನು ಕೊನೆಮುಟ್ಟಿಸಿ, ಶಾಂತಿಯನ್ನು ಸ್ಥಾಪಿಸಿದನು.

ಅವನ ನಂತರ, ರಾಜಾ **ಭರ್ತೃಹರಿಯು** ಕಾವ್ಯ ಮೊದಲಾದ ಶಾಸ್ತ್ರಗಳಲ್ಲಿಯೂ, ಅನ್ಯ [ವಿಷಯಗಳಲ್ಲಿಯೂ] ಸ್ವಲ್ಪ ಸ್ವಲ್ಪ ವಿದ್ವಾಂಸನೆನಿಸಿದನು. ಅವನು ವೈರಾಗ್ಯವಂತನಾಗಿ ರಾಜ್ಯವನ್ನು ಬಿಟ್ಟುಬಿಟ್ಟನು.*

## (ರಾಜಾ ಭೋಜ ಮತ್ತು ಕವಿ ಕಾಳಿದಾಸ)

**ವಿಕ್ರಮಾದಿತ್ಯನ** ನಂತರ, ಐನೂರು ವರ್ಷಗಳಾದ ಮೇಲೆ, ರಾಜಾ **ಭೋಜನು** ಬಂದನು. ಅವನು ಅಲ್ಪ ಸ್ವಲ್ಪ ವ್ಯಾಕರಣದ ಮತ್ತು ಕಾವ್ಯಾಲಂಕಾರ ಮೊದಲಾದುದರ ಎಷ್ಟು ಪ್ರಚಾರವನ್ನು ಮಾಡಿದನೆಂದರೆ, ಅವನ ರಾಜ್ಯದಲ್ಲಿ **ಕುರಿ, ಮೇಕೆಗಳನ್ನು ಮೇಯಿಸುವವನಾದ ಕಾಳಿದಾಸನೂ** ಕೂಡ **'ರಘುವಂಶ'** ಕಾವ್ಯದ ಕರ್ತೃವಾದನು.

---

*ಭರ್ತೃಹರಿಯು 'ನೀತಿಶತಕ'ದ ಪ್ರಥಮ ಶ್ಲೋಕದಲ್ಲಿ (ಒಂದು ಕಿಂವದಂತಿಗನುಸಾರವಾಗಿ), ಈ ವೈರಾಗ್ಯಕ್ಕೆ ಕಾರಣಭೂತವಾದ ಘಟನೆಯ ಸಂಕೇತವಿದೆ. —ಸಂ.

ಯಾವನೇ ಆದರೂ. ಒಳ್ಳೆಯ ಶ್ಲೋಕವನ್ನು ರಚಿಸಿ, **ರಾಜಾ ಭೋಜರ** ಬಳಿಗೆ ತೆಗೆದುಕೊಂಡು ಹೋದರೆ, ಅವನಿಗೆ ಬಹಳ ಧನವನ್ನು ಕೊಡುತ್ತಿದ್ದರು ; ಮತ್ತು ಗೌರವ ಲಭಿಸುತ್ತಿದ್ದಿತು.

**ಅವನ ನಂತರ, ರಾಜರುಗಳೂ, ಮತ್ತು ಶ್ರೀಮಂತರೂ ಓದುವುದನ್ನೇ ಬಿಟ್ಟು ಬಿಟ್ಟರು!**

### (ವಾಮಮಾರ್ಗದ ನಂತರ, ಶೈವಮತ)

ಶಂಕರಾಚಾರ್ಯರಿಗಿಂತ ಮೊದಲು, [ಮತ್ತು] ವಾಮಮಾರ್ಗಿಗಳ ನಂತರ, **ಶೈವ** ಮೊದಲಾದ ಸಂಪ್ರದಾಯಸ್ಥರಾದ ಮತೀಯರು ಇದ್ದರೂ ಕೂಡ, ಅವರ ಬಲ ಹೆಚ್ಚಾಗಿರಲಿಲ್ಲ. ಮಹಾರಾಜಾ ವಿಕ್ರಮಾದಿತ್ಯನಿಂದ ಆರಂಭಿಸಿ, ಶೈವರ ಬಲ ಹೆಚ್ಚುತ್ತಾ ಬಂದಿತು. ಶೈವರಲ್ಲಿ **ಪಾಶುಪತ** ಮೊದಲಾದ ಬಹಳ ಶಾಖೆಗಳು ವಾಮ-ಮಾರ್ಗಿಗಳಲ್ಲಿನ ದಶ **ಮಹಾವಿದ್ಯ** ಮೊದಲಾದ ಶಾಖೆಗಳಂತೆಯೇ ಹೊರಟಿದ್ದವು.

### (ಶೈವಮತದಲ್ಲಿ ಶಾಂಕರ ಮತಾನುಯಾಯಿಗಳ ಪ್ರವೇಶ)

**ಜನರು ಶಂಕರಾಚಾರ್ಯರನ್ನು ಶಿವನ ಅವತಾರವೆಂದು ಪರಿಗಣಿಸಿದರು.** ಅವರ ಅನುಯಾಯಿಗಳಾದ ಸಂನ್ಯಾಸಿಗಳೂ ಕೂಡ ಶೈವ ಮತದಲ್ಲಿ ಪ್ರವೃತ್ತರಾದರು. ಮತ್ತು ವಾಮಮಾರ್ಗಿಗಳನ್ನೂ ಕೂಡ ಸೇರಿಸಿಕೊಳ್ಳುತ್ತಾ ಹೋದರು.

**ವಾಮಮಾರ್ಗಿಗಳು** ಶಿವನ ಪತ್ನಿಯಾದ **ದೇವಿಯ** ಉಪಾಸಕರೂ, ಮತ್ತು **ಶೈವರು ಮಹಾದೇವನ** ಉಪಾಸಕರೂ ಆದರು. ಈ ಇಬ್ಬರೂ ರುದ್ರಾಕ್ಷ ಮತ್ತು ಭಸ್ಮವನ್ನು ಇಂದಿನವರೆಗೂ ಧರಿಸುತ್ತಾರೆ.

ಆದರೆ, **ವಾಮಮಾರ್ಗಿಗಳು ಎಷ್ಟು ವೇದವಿರೋಧಿಗಳಾಗಿದ್ದಾರೋ, ಶೈವರು ಅಷ್ಟು ವಿರೋಧಿಗಳಾಗಿಲ್ಲ!**

### (ರುದ್ರಾಕ್ಷಧಾರಣೆಯ ತಥಾಕಥಿತ ಮಹತ್ವ)

**ಧಿಕ್ ಧಿಕ್ ಕಪಾಲಂ ಭಸ್ಮರುದ್ರಾಕ್ಷವಿಹೀನಮ್ ॥1॥**
ರುದ್ರಾಕ್ಷಾನ್ ಕಂಠದೇಶೇ ದಶನಪರಿಮಿತಾನ್, ಮಸ್ತಕೇ ವಿಂಶತಿ ದ್ವೇ.
**ಷಟ್ ಷಟ್ ಕರ್ಣಪ್ರದೇಶೇ, ಕರಯುಗಲಗತಾನ್ ದ್ವಾದಶಾನ್ದ್ವಾದಶೈವ ।**
**ಬಾಹ್ವೋರಿಂದೋಃ ಕಲಾಭಿಃ, ಪೃಥಗಿತಿ ಗದಿತಮೇಕಮೇವಂ ಶಿಖಾಯಾಮ್**
ವಕ್ಷಸ್ಯಷ್ಟಾಧಿಕಂ ಯಃ ಕಲಯತಿ ಶತಕಂ ಸ ಸ್ವಯಂ ನೀಲಕಂಠಃ ॥*

---

*ನೋಡಿರಿ, 'ರುದ್ರಾಕ್ಷಜಾಬಾಲೋಪನಿಷತ್' [1.15.16]—ಯು. ಮೀ.

ಈ ಮೊದಲಾದ ಅನೇಕ ವಿಧದ ಶ್ಲೋಕಗಳನ್ನು ಈ ಜನರು ರಚಿಸಿದರು. ಮತ್ತು ಏನು ಹೇಳಲಾರಂಭಿಸಿದರೆಂದರೆ—

"ಯಾವನ ಕಪಾಲದಲ್ಲಿ ಭಸ್ಮ ಮತ್ತು ಕಂಠದಲ್ಲಿ ರುದ್ರಾಕ್ಷವಿಲ್ಲವೋ, ಅವನಿಗೆ ಧಿಕ್ಕಾರವಿದೆ.

**"ತಂ ತ್ಯಜೇದಂತ್ಯಜಂ ಯಥಾ".**

—ಅವನನ್ನು ಚಾಂಡಾಲನಿಗೆ ಸಮನೆಂದು ತ್ಯಜಿಸಬೇಕು. [1]

ಯಾವನು ಕಂಠದಲ್ಲಿ ಮೂವತ್ತ ಎರಡು, ತಲೆಯಲ್ಲಿ ನಾಲ್ವತ್ತು, ಕಿವಿಗಳಲ್ಲಿ ಆರು-ಆರು, ಕರಗಳಲ್ಲಿ ಹನ್ನೆರಡು-ಹನ್ನೆರಡು, ಭುಜಗಳಲ್ಲಿ ಹದಿನಾರು-ಹದಿನಾರು, ಶಿಖೆಯಲ್ಲಿ ಒಂದು, ಮತ್ತು ಹೃದಯದಲ್ಲಿ ನೂರೆಂಟು ರುದ್ರಾಕ್ಷಗಳನ್ನು ಧರಿಸುತ್ತಾನೋ, ಅವನು ಸಾಕ್ಷಾತ್ ಮಹಾದೇವನಂತೆಯೇ ಇರುತ್ತಾನೆ. [2]

ಹೀಗೆಯೇ, ಶಾಕ್ತರೂ ಕೂಡ ಒಪ್ಪುತ್ತಾರೆ.

## (ಭಗ–ಲಿಂಗದ ಪೂಜೆ)

ಆ ಮೇಲೆ, ಈ ವಾಮಮಾರ್ಗಿಗಳೂ ಮತ್ತು ಶೈವರೂ ಸಮ್ಮತರಾಗಿ ಭಗ-ಲಿಂಗದ ಸ್ಥಾಪನೆಯನ್ನು ಮಾಡಿದರು. ಅದನ್ನು **'ಜಲಾಧಾರೀ'** ಮತ್ತು **'ಲಿಂಗ'**, ಎನ್ನುತ್ತಾರೆ. ಮತ್ತು ಅದರ ಪೂಜೆಯನ್ನು ಮಾಡತೊಡಗಿದರು.

ತಾವು ಈ ಪಾಮರತನದ ಕೆಲಸವನ್ನೇತಕ್ಕೆ ಮಾಡುತ್ತೇವೆ, ಎಂದು ಆ ನಿರ್ಲಜ್ಜರಿಗೆ ಸ್ವಲ್ಪವೂ ನಾಚಿಕೆಯಾಗಲಿಲ್ಲ.

ಯಾವನೋ ಕವಿಯು—

**"ಸ್ವಾರ್ಥೀ ದೋಷಂ ನ ಪಶ್ಯತಿ",**

ಎಂದಿದ್ದಾನೆ. ಸ್ವಾರ್ಥೀ ಜನರು ತಮ್ಮ ಸ್ವಾರ್ಥ ಸಿದ್ಧಿ ಮಾಡಿಕೊಳ್ಳುವಲ್ಲಿ, ದುಷ್ಟ ಕರ್ಮಗಳನ್ನೂ ಕೂಡ ಶ್ರೇಷ್ಠವೆಂದೊಪ್ಪಿಕೊಂಡು, ದೋಷವನ್ನು ನೋಡುವುದಿಲ್ಲ.

ಇವರು ಅದೇ ಶಿಲೆ ಮೊದಲಾದುದರ ಪ್ರತಿಮೆಗಳ, ಮತ್ತು ಭಗ–ಲಿಂಗದ ಪೂಜೆಯಲ್ಲಿ ಸಮಸ್ತ ಧರ್ಮ, ಅರ್ಥ, ಕಾಮ, ಮೋಕ್ಷ ಮೊದಲಾದ ಸಿದ್ಧಿಗಳನ್ನು ಅಂಗೀಕರಿಸತೊಡಗಿದರು.

## (ಯವನರ ಮತ್ತು ಜೈನರ ನಿಂದೆ)

ಯಾವಾಗ ಜೈನರು, **ರಾಜಾ ಭೋಜರ** ನಂತರ, ತಮ್ಮ ಮಂದಿರಗಳಲ್ಲಿ ಮೂರ್ತಿ ಸ್ಥಾಪನೆ, ದರ್ಶನ ಮತ್ತು ಸ್ಪರ್ಶನಕ್ಕಾಗಿ ಬರಲು-ಹೋಗಲು ಆರಂಭಿಸಿದರೋ, ಆಗ ಈ ಪೋಪರ ಹಿಂಬಾಲಕರೂ ಕೂಡ ಜೈನಮಂದಿರಕ್ಕೆ ಹೋಗಲೂ-ಬರಲೂ ಆರಂಭಿಸಿದರು.

ಮತ್ತು, ಆ ಕಡೆ ಪಶ್ಚಿಮದಲ್ಲಿ ಅನ್ಯರ ಹಲವು ಮತಗಳು, **ಮತ್ತು ಯವನರೂ ಕೂಡ ಆರ್ಯಾವರ್ತಕ್ಕೆ ಬರಲು-ಹೋಗಲು ತೊಡಗಿದರು.**

ಆಗ, ಪೋಪರುಗಳು ಈ ಶ್ಲೋಕವನ್ನು ರಚಿಸಿದರು:—

**ನ ವದೇದ್ಯಾವನೀಂ ಭಾಷಾಂ ಪ್ರಾಣೈಃ ಕಂಠಗತೈರಪಿ ।**
**ಹಸ್ತಿನಾ ತಾಡ್ಯಮಾನೋಽಪಿ ನ ಗಚ್ಛೇಜ್ಜೈನಮಂದಿರಮ್ ॥***

"ಎಷ್ಟೇ ದುಃಖ ಬೇಕಾದರೂ ಬರಲೀ, ಮತ್ತು ಪ್ರಾಣವು ಕಂಠಗತವಾಗಿ, ಎಂದರೆ, ಸಾವಿನ ಸಮಯವೇ ಬಂದಿರಲೊಲ್ಲದೇಕೆ; ಹಾಗಿದ್ದರೂ ಕೂಡ ಯಾವನೀ ಭಾಷೆಯನ್ನು, ಎಂದರೆ ಮ್ಲೇಚ್ಛಭಾಷೆಯನ್ನು ಬಾಯಿನಿಂದಾಡಬಾರದು.

ಮತ್ತು ಮದವೇರಿದ ಆನೆ ಕೊಲ್ಲಲು ಅಟ್ಟಿಸಿಕೊಂಡು ಬರುತ್ತಿರಲೊಲ್ಲದೇಕೆ, ಮತ್ತು ಜೈನ ಮಂದಿರದೊಳಹೋದರೆ, ಪ್ರಾಣ ಉಳಿಯುವುದಾದರೂ ಕೂಡ, ಜೈನ ಮಂದಿರದಲ್ಲಿ ಪ್ರವೇಶ ಮಾಡಬಾರದು.

ಎಂದರೆ, **ಜೈನ ಮಂದಿರದಲ್ಲಿ ಪ್ರವೇಶಮಾಡಿ ಉಳಿಯುವುದಕ್ಕಿಂತ, ಆನೆಯ ಮುಂದೆ ಹೋಗಿ, ಸತ್ತು ಹೋಗುವುದು ಒಳ್ಳೆಯದು!"**

ಇಂತಿಂತಹ ಉಪದೇಶಗಳನ್ನು ಶಿಷ್ಯರಿಗೆ ಮಾಡತೊಡಗಿದರು. ಅವರನ್ನು ಯಾವನಾದರೂ—

'ನಿಮ್ಮ ಮತಕ್ಕೆ ಯಾವುದಾದರೂ ಮಾನನೀಯ ಗ್ರಂಥದ ಪ್ರಮಾಣವೂ ಇದೆಯೇ?', ಎಂದು ಪ್ರಮಾಣವನ್ನು ಕೇಳಿದರೆ,—'ಹೌದು! ಇದೆ', ಎನ್ನುತ್ತಿದ್ದರು.

---

*ಭವಿಷ್ಯ ಪುರಾಣ, ಪ್ರತಿಸರ್ಗಪರ್ವ (3.3.28.53)—ಯು. ಮೀ.

ಅವರು—'ತೋರಿಸಿರಿ.', ಎಂದು ಕೇಳಿದಾಗ, **ಮಾರ್ಕಂಡೇಯಪುರಾಣ** ಮೊದಲಾದವರ ವಚನಗಳನ್ನು ಉದ್ಧರಿಸುತ್ತಿದ್ದರು, ಮತ್ತು **ದುರ್ಗಾಪಾಠ**ದಲ್ಲಿ ದೇವಿಯ ವರ್ಣನೆಯನ್ನು ಹೇಗೆ ಬರೆದಿದ್ದಾರೋ, ಹಾಗೆ ತಿಳಿಸುತ್ತಿದ್ದರು.

### (ಮಾರ್ಕಂಡೇಯ ಮತ್ತು ಶಿವಪುರಾಣದ ರಚನಾಕಾರನಿಗೆ ಶಿಕ್ಷೆ)

ರಾಜಾ ಭೋಜರ ರಾಜ್ಯದಲ್ಲಿ ವ್ಯಾಸರ ಹೆಸರಿನಿಂದ **ಮಾರ್ಕಂಡೇಯ** ಮತ್ತು **ಶಿವಪುರಾಣ**ಗಳನ್ನು ಯಾವನೋ ರಚಿಸಿ, ಸ್ಥಾಪಿಸಿದನು. ಅದರ ಸಂಗತಿಯು ರಾಜಾ ಭೋಜರಿಗೆ ತಿಳಿದು, ಆ ಪಂಡಿತರಿಗೆ ಕೈಗಳನ್ನು ಕತ್ತರಿಸುವ ಶಿಕ್ಷೆಯನ್ನು ವಿಧಿಸಿದರು. ಮತ್ತು ಅವರಿಗೆ—

"ಯಾವನಾದರೂ ಕಾವ್ಯ ಮೊದಲಾದ ಗ್ರಂಥಗಳನ್ನು ರಚಿಸುವುದಾದರೆ, ಅವನು ತನ್ನ ಹೆಸರಿನಿಂದ ರಚಿಸಬೇಕು; ಋಷಿ-ಮುನಿಗಳ ಹೆಸರಿನಿಂದಲ್ಲ.", ಎಂದು ಆಜ್ಞಾಪಿಸಿದರು.

ಯಾವುದು **ಗ್ವಾಲಿಯರ್** ರಾಜ್ಯದ '**ಭಿಂಡ್**' ಎಂಬ ನಗರದ ತಿವಾರೀ ಬ್ರಾಹ್ಮಣರ ಮನೆಯಲ್ಲಿದೆಯೋ, ಯಾವುದನ್ನು **ಲಖುನಾದ ರಾವ್ ಸಾಹೇಬರು ಮತ್ತು ಅವರ ಗುಮಾಸ್ತೆ ರಾಮ ದಯಾಳ ಚೌಬೆಯವರು** ತಮ್ಮ ಕಣ್ಣಿನಿಂದ ನೋಡಿದ್ದಾರೋ, ಅಂತಹ ರಾಜಾ ಭೋಜರು ರಚಿಸಿದ "**ಸಂಜೀವನೀ**", ಎಂಬ ಹೆಸರಿನ ಇತಿಹಾಸದಲ್ಲಿ ಈ ಸಂಗತಿಯನ್ನು ಬರೆದಿದ್ದಾರೆ.

### (ಮಹಾಭಾರತದಲ್ಲಿ ಪ್ರಕ್ಷೇಪಗಳ ಉಲ್ಲೇಖ, ಮತ್ತು ಒಂಟೆಯ ಹೊರೆ)

ಅದರಲ್ಲಿ ಸ್ಪಷ್ಟವಾಗಿ—

"**ವ್ಯಾಸರು** ನಾಲ್ಕು **ಸಾವಿರದ** ನಾಲ್ಕುನೂರು. ಮತ್ತು **ಅವರ ಶಿಷ್ಯರು ಐದು ಸಾವಿರದ ಆರುನೂರು ಶ್ಲೋಕಗಳಿಂದ ಕೂಡಿದ, ಎಂದರೆ, ಎಲ್ಲ ಸೇರಿ ಹತ್ತು ಸಾವಿರ ಶ್ಲೋಕಗಳ ಪ್ರಮಾಣದ ಭಾರತವನ್ನು** ಬರೆದಿದ್ದರು. ಅದು ಮಹಾರಾಜಾ **ವಿಕ್ರಮಾದಿತ್ಯನ** ಕಾಲದಲ್ಲಿ **ಇಪ್ಪತ್ತು ಸಾವಿರವಾಯಿತು.**

ಮಹಾರಾಜಾ ಭೋಜರು—

"ನನ್ನ ತಂದೆಯವರ ಕಾಲದಲ್ಲಿ **ಇಪ್ಪತ್ತೈದು ಸಾವಿರವಾಯಿತು.** ಮತ್ತು, ಈಗ ನನ್ನ ಮಧ್ಯ ವಯಸ್ಸಿನಲ್ಲಿ **ಮೂವತ್ತು ಸಾವಿರ ಶ್ಲೋಕಯುಕ್ತವಾದ ಮಹಾಭಾರತದ ಪುಸ್ತಕ** ಸಿಕ್ಕುತ್ತದೆ. ಹೀಗೆಯೇ ಬೆಳೆಯುತ್ತಾ ಹೋದರೆ, ಮಹಾಭಾರತದ ಪುಸ್ತಕ ಒಂದು ಒಂಟೆಯ ಹೊರೆಯಾಗಿ ಹೋಗುವುದು", ಮತ್ತು—

"[ಜನರು] ಋಷಿಮುನಿಗಳ ಹೆಸರಿನಿಂದ, ಪುರಾಣಗಳೇ ಮೊದಲಾದ ಗ್ರಂಥಗಳನ್ನು ರಚಿಸುವರಾದರೆ, ಆರ್ಯಾವರ್ತೀಯರಾದ ಜನರು ಭ್ರಮಜಾಲದಲ್ಲಿ ಬಿದ್ದು, ವೈದಿಕಧರ್ಮಹೀನರಾಗಿ, ಭ್ರಷ್ಟರಾಗಿ ಹೋಗುವರು.", ಎಂದು ಹೇಳುತ್ತಾರೆ.

ಇದರಿಂದ, ರಾಜಾ ಭೋಜರಿಗೆ ಸ್ವಲ್ಪ ಸ್ವಲ್ಪ ವೇದಗಳ ಸಂಸ್ಕಾರವಿದ್ದಿತು, ಎಂದು ಗೊತ್ತಾಗುತ್ತದೆ.

### (ರಾಜಾ ಭೋಜರ ಸಮಯದಲ್ಲಿ ಯಂತ್ರಕಲಾಯುಕ್ತ ಯಾನ ಮತ್ತು ಬೀಸಣಿಗೆ)

ಇವರ* "ಭೋಜಪ್ರಬಂಧ"ದಲ್ಲಿ ಹೀಗೆ ಬರೆಯಲಾಗಿದೆ—

**ಘಟ್ಯೈಕಯಾ ಕ್ರೋಶದಶೈಕಮಶ್ವಃ**
**ಸುಕೃತ್ರಿಮೋ ಗಚ್ಛತಿ ಚಾರುಗತ್ಯಾ ।**
**ವಾಯುಂ ದದಾತಿ ವ್ಯಜನಂ ಸುಪುಷ್ಕಲಂ**
**ವಿನಾ ಮನುಷ್ಯೇಣ ಚಲತ್ಯಜಸ್ರಮ್ ॥†**

ರಾಜಾ ಭೋಜರ ರಾಜ್ಯದಲ್ಲಿ ಮತ್ತು [ಅದರ] ನೆರೆಹೊರೆಯಲ್ಲಿ ಎಂತೆಂತಹ ಶಿಲ್ಪಿಜನರಿದ್ದರೆಂದರೆ—

ಅವರು ಕುದುರೆಯ ಆಕಾರದ, ಯಂತ್ರಕಲಾಯುಕ್ತವಾದ, ಯಾನವೊಂದನ್ನು ರಚಿಸಿದ್ದರು. ಅದು ಒಂದು ಲಘು ಘಟಿಕೆಯಲ್ಲಿ‡ ಹನ್ನೊಂದು ಕ್ರೋಶಗಳಷ್ಟು, ಮತ್ತು ಒಂದು ಘಂಟೆಯಲ್ಲಿ ಇಪ್ಪತ್ತೇಳೂವರೆ ಕ್ರೋಶದಷ್ಟು ದೂರ ಹೋಗುತ್ತಿದ್ದಿತು. ಆ ಯಾನವು ಭೂಮಿಯ ಮೇಲೆಯೂ, ಮತ್ತು ಅಂತರಿಕ್ಷದಲ್ಲಿಯೂ ಕೂಡ ನಡೆಯುತ್ತಿದ್ದಿತು.$

---

*ಎಂದರೆ, ಇವರಿಗೆ ಸಂಬಂಧಪಟ್ಟ ಗ್ರಂಥ. ಇದನ್ನು ಬಲ್ಲಾಳಪಂಡಿತನು ರಚಿಸಿದ್ದಾನೆ.—ಸಂ.

†ರಾಜಾ ಭೋಜರಿಂದ ರಚಿತವಾದ 'ಸಮರಾಂಗಣಸೂತ್ರಧಾರ'ದ ಯಂತ್ರಾಧ್ಯಾಯದಲ್ಲಿ ಅನೇಕ ಯಂತ್ರಗಳ ಮತ್ತು ವಿಮಾನ ರಚನೆಯ ವರ್ಣನೆ ಇದೆ. ಅವರ 'ಯುಕ್ತಿಕಲ್ಪತರು' ಗ್ರಂಥವನ್ನೂ ನೋಡಿ.—ಯು. ಮೀ.

‡ಎರಡೂವರೆ ಘಟಿಕೆಗಳಿಗೆ ಒಂದು ಘಂಟೆ; ಒಂದು ಕ್ರೋಶವೆಂದರೆ ಸುಮಾರು ಮೂರು ಮೈಲಿಗಳು.—ಅನು.

$ಈ ಬಗ್ಗೆ ತಮ್ಮ 'ಪೂನಾ ಪ್ರವಚನ'ದಲ್ಲೂ (ಐದನೆಯ ಪ್ರವಚನ) ಮಹರ್ಷಿ ದಯಾನಂದರು ಉಲ್ಲೇಖ ಮಾಡಿದ್ದರು.—ಸಂ.

ಮತ್ತು ಎರಡನೆಯದಾಗಿ ಬೀಸಣಿಗೆಯನ್ನು ಹೇಗೆ ನಿರ್ಮಿಸಿದ್ದರೆಂದರೆ—ಮನುಷ್ಯನು ಸಂಚಾಲನಮಾಡದೇ, ಕಲಾಯಂತ್ರದ ಬಲದಿಂದ ನಿರಂತರವೂ ಚಲಿಸುತ್ತಿತ್ತು: ಮತ್ತು ಪುಷ್ಕಳವಾದ ವಾಯುವನ್ನು ಕೊಡುತ್ತಿತ್ತು.

**ಈ ಎರಡು ಪದಾರ್ಥಗಳೂ ಇಂದಿದವರೆಗೆ ಇರುತ್ತಿದ್ದರೆ, ಐರೋಪ್ಯರು ಅಭಿಮಾನದಿಂದ ಇಷ್ಟು ಉಬ್ಬಿ ಹೋಗುತ್ತಿರಲಿಲ್ಲ!**

### (ಜೈನರ ಅನುಕರಣೆಯಲ್ಲಿ ಅವತಾರ-ಪುರಾಣಗಳ ಕಲ್ಪನೆ)

ಪೋಪರು ತಮ್ಮ ಶಿಷ್ಯರನ್ನು ಜೈನರ ಬಳಿ ಹೋಗದಂತೆ ತಡೆಯತೊಡಗಿದರೂ ಕೂಡ,ಅವರು ಹೋಗದೇ ಇರಲಾರದಾದರು. ಮತ್ತು ಜೈನರ '**ಕಥೆ**'*ಗೆ ಕೂಡ ಜನರು ಹೋಗತೊಡಗಿದರು, ಜೈನರ ಪೋಪರು ಈ ಪೌರಾಣಿಕ ಪೋಪರ ಶಿಷ್ಯರುಗಳನ್ನು ದಾರಿ ತಪ್ಪಿಸಹತ್ತಿದರು. ಆಗ ಪೌರಾಣಿಕರು—

"ಇವಕ್ಕೇನಾದರೂ ಉಪಾಯಮಾಡಬೇಕು. ಇಲ್ಲವಾದರೆ, ನಮ್ಮ ಶಿಷ್ಯರು ಜೈನರಾಗಿ ಹೋಗುವರು.", ಎಂದು ಆಲೋಚಿಸಿದರು.

ಆ ಮೇಲೆ ಪೋಪರು—"ಜೈನರಂತೆ ನಮ್ಮ [ದೇವರ] ಅವತಾರಗಳನ್ನೂ, ಮಂದಿರಗಳನ್ನೂ, ಮೂರ್ತಿಗಳನ್ನೂ ಮತ್ತು ಕಥಾ-ಪುಸ್ತಕಗಳನ್ನೂ ರಚಿಸಬೇಕು.", ಎಂದೇ ಸಮ್ಮತಿ ಸೂಚಿಸಿದರು. ಈ ಜನರು ಜೈನರ ಇಪ್ಪತ್ತನಾಲ್ಕು ತೀರ್ಥಂಕರರಿಗೆ ಸಮನಾಗಿ ಇಪ್ಪತ್ತನಾಲ್ಕು ಅವತಾರಗಳನ್ನೂ, ಮಂದಿರಗಳನ್ನೂ ಮತ್ತು ಮೂರ್ತಿಗಳನ್ನೂ ನಿರ್ಮಿಸಿದರು. ಮತ್ತು ಹೇಗೆ ಜೈನರ 'ಆದಿ' ಮತ್ತು '**ಉತ್ತರ**' ಪುರಾಣಗಳು ಮೊದಲಾದವು ಇವೆಯೋ, ಹಾಗೆ ಹದಿನೆಂಟು ಪುರಾಣಗಳನ್ನು ರಚಿಸತೊಡಗಿದರು.

### (ವೈಷ್ಣವ ಮತದ ಆರಂಭ)

ರಾಜಾ ಭೋಜರ ನಂತರ, ನೂರೈವತ್ತು ವರ್ಷಗಳಾದ ಮೇಲೆ **ವೈಷ್ಣವ ಮತ ಆರಂಭವಾಯಿತು.**

'**ಶಠಕೋಪ**' ಎಂಬ ಹೆಸರಿನ ಪುರುಷನೊಬ್ಬನು ಮೋದರ ಕುಲದಲ್ಲಿ ಉದ್ಭವಿಸಿದ್ದನು. ವೈಷ್ಣವ ಮತ ಅವನಿಂದ ಸ್ವಲ್ಪ ಪ್ರಚಲಿತವಾಯಿತು. ಅವನ ನಂತರ, ಶೌಚಕರ್ಮ ಮಾಡುವವರ ಕುಲದಲ್ಲಿ ಜನಿಸಿದ 'ಮುನಿವಾಹನ'ನೂ, ಮತ್ತು

---

*ಪೌರಾಣಿಕರ 'ಹರಿಕಥೆ' ಇದ್ದಂತೆ, ಜೈನ ಮುನಿಗಳ ಪ್ರವಚನ ಮೊದಲಾದುವು. ಇವು ಈಗಲೂ, ಮತ್ತು ಚಾತುರ್ಮಾಸ್ಯಗಳಲ್ಲಿ ಜೈನರಲ್ಲಿ ರೂಢಿಯಲ್ಲಿವೆ.—ಸಂ.

ಮೂರನೆಯವನಾಗಿ,ಯವನಕುಲೋತ್ಪನ್ನನಾದ '**ಯಾವನಾಚಾರ್ಯ**'ನೂ ಆಚಾರ್ಯ ರಾದರು. ಆಮೇಲೆ, ಬ್ರಾಹ್ಮಣ ಕುಲೋತ್ಪನ್ನನಾದ '**ರಾಮಾನುಜನು**' ನಾಲ್ಕನೆಯ ಆಚಾರ್ಯನಾದನು. ಅವನು ತನ್ನ ಮತವನ್ನು ಪ್ರಸರಿಸಿದನು.

## (ವಿವಿಧ ಪುರಾಣಗಳ ರಚನೆ)

ಶೈವರು **ಶಿವಪುರಾಣ ಮೊದಲಾದುವನ್ನೂ**, ಶಾಕ್ತರು **ದೇವೀಭಾಗವತ ಮೊದಲಾದುವನ್ನೂ**, ವೈಷ್ಣವರು **ವಿಷ್ಣುಪುರಾಣ ಮೊದಲಾದುವನ್ನೂ**, ರಚಿಸಿದರು. "ತಮ್ಮ ಹೆಸರುಗಳಿಂದ ರಚಿತವಾದರೆ, ಯಾವನೂ [ಅವನ್ನು] ಪ್ರಮಾಣವೆಂದು ತಿಳಿಯುವುದಿಲ್ಲ.", ಎಂಬ ಕಾರಣದಿಂದ, ಅವುಗಳಲ್ಲಿ ತಮ್ಮ ಹೆಸರುಗಳನ್ನು ಸೂಚಿಸ ಲಿಲ್ಲ. ಆದ್ದರಿಂದ, ವ್ಯಾಸರೇ ಮೊದಲಾದ ಋಷಿ-ಮುನಿಗಳ ಹೆಸರುಗಳನ್ನು ಕೊಟ್ಟು, ಪುರಾಣಗಳನ್ನು ರಚಿಸಿದರು.

ಇವುಗಳ ಹೆಸರುಗಳನ್ನೂ ಕೂಡ ವಸ್ತುತಃ "**ನವೀನಗಳು**", ಎಂದು ಇಡ ಬೇಕಾಗಿದ್ದಿತು. ಆದರೆ, ಯಾವನಾದರೂ ಬಡವನು ತನ್ನ ಮಗನಿಗೆ 'ಮಹಾ ರಾಜಾಧಿರಾಜ' ಎಂಬ ಹೆಸರನ್ನೂ; ಮತ್ತು ಆಧುನಿಕ ವಸ್ತುವಿಗೆ 'ಸನಾತನ' ಎಂದು ಹೆಸರಿಟ್ಟರೆ, ಆಶ್ಚರ್ಯವೇನು ?

ಈಗ ಇವರ ನಡುವೆ ಹೇಗೆ ಪರಸ್ಪರ ವಿವಾದಗಳಿವೆಯೋ, ಹಾಗೆಯೇ ಪುರಾಣ ಗಳಲ್ಲಿಯೂ ತುಂಬಿಸಿಬಿಟ್ಟಿದ್ದಾರೆ.

## (ದೇವೀಭಾಗವತದಲ್ಲಿ ದೇವಿಯು ಚಮತ್ಕಾರ ?)

ನೋಡಿರಿ! **ದೇವೀಭಾಗವತದಲ್ಲಿ**—

"'ಶ್ರೀ' ಎಂಬ ಹೆಸರಿನ, ಯಾವಳನ್ನು ಶ್ರೀಪುರದ ಸ್ವಾಮಿನೀ, ಎಂದು ಬರೆದಿದ್ದಾರೋ, ಅವಳೇ ಸಮಸ್ತ ಜಗತ್ತನ್ನೂ ರಚಿಸಿದಳು. ಮತ್ತು **ಬ್ರಹ್ಮಾ, ವಿಷ್ಣು** ಮತ್ತು **ಮಹಾದೇವರನ್ನೂ** ಅವಳೇ ಸೃಜಿಸಿದ್ದಾಳೆ.

ಯಾವಾಗ ಆ ದೇವಿಗೆ ಇಚ್ಛೆಯಾಯಿತೋ, ಆಗ ಅವಳು ತನ್ನ ಕೈಯನ್ನು ಉಜ್ಜಿದಳು. ಅದರಿಂದ, ಕೈಯಲ್ಲಿ ಒಂದು ಗುಳ್ಳೆಯಾಯಿತು. ಅದರಿಂದ, **ಬ್ರಹ್ಮನ ಉತ್ಪತ್ತಿ**ಯಾಯಿತು. ದೇವಿಯು ಅವನಿಗೆ—

'ನೀನು ನನ್ನೊಂದಿಗೆ ವಿವಾಹ ಮಾಡಿಕೋ.', ಎಂದಳು.

ಬ್ರಹ್ಮನು—'ನೀನು ನನ್ನ ತಾಯಿಯಾಗಿರುವೆ. ನಾನು ನಿನ್ನೊಂದಿಗೆ ವಿವಾಹ ಮಾಡಿಕೊಳ್ಳಲಾರೆನು.', ಎಂದನು.

ಇದನ್ನು ಕೇಳಿ ಮಾತೆಗೆ ಕೋಪವೇರಿತು. ಮತ್ತು ಮಗನನ್ನು ಭಸ್ಮ ಮಾಡಿಬಿಟ್ಟಳು.

ಮತ್ತು ಮರಳಿ ಕೈಗಳನ್ನುಜ್ಜಿ, ಅದೇ ರೀತಿ ಎರಡನೆಯ ಮಗನನ್ನು ಸೃಜಿಸಿದಳು. ಅವನಿಗೆ ವಿಷ್ಣು ಎಂದು ಹೆಸರಿಟ್ಟಳು. ಅವನಿಗೂ ಅದೇ ರೀತಿ ಹೇಳಿದಳು. ಅವನೂ ಒಪ್ಪಲಿಲ್ಲವಾದುದರಿಂದ, ಅವನನ್ನೂ ಭಸ್ಮ ಮಾಡಿಬಿಟ್ಟಳು.

ಮತ್ತೆ, ಅದೇ ರೀತಿ ಮೂರನೆಯ ಮಗನನ್ನು ಉತ್ಪನ್ನಮಾಡಿದಳು. ಅವನಿಗೆ **ಮಹಾದೇವ** ಎಂದು ಹೆಸರನ್ನಿಟ್ಟಳು.

ಮತ್ತು ಅವನಿಗೆ—'ನೀನು ನನ್ನೊಂದಿಗೆ ವಿವಾಹ ಮಾಡಿಕೋ', ಎಂದಳು.

ಮಹಾದೇವನು—'ನಾನು ನಿನ್ನೊಂದಿಗೆ ವಿವಾಹ ಮಾಡಿಕೊಳ್ಳಲಾರೆನು. ನೀನು ಬೇರೆ ಸ್ತ್ರೀಯ ಶರೀರವನ್ನು ಧರಿಸು.', ಎಂದನು.

ದೇವಿಯು ಹಾಗೆಯೇ ಮಾಡಿದಳು. ಆಗ ಮಹಾದೇವನು—

'ಈ ಎರಡು ಕಡೆ, ಬೂದಿಯಂತೆ ಬಿದ್ದಿರುವುದೇನು ?', ಎಂದು ಕೇಳಿದನು.

ದೇವಿಯು—'ಇವರಿಬ್ಬರೂ ನಿನ್ನ ಸಹೋದರರು. ಇವರು ನನ್ನ ಆಜ್ಞೆಯನ್ನು ಪಾಲಿಸಲಿಲ್ಲವಾದುದರಿಂದ, ಭಸ್ಮ ಮಾಡಿಬಿಟ್ಟೆನು.', ಎಂದಳು.

ಮಹಾದೇವನು—'ನಾನು ಒಂಟಿಯಾಗಿ ಏನನ್ನು ತಾನೇ ಮಾಡಬಲ್ಲೆನು ? ಇವರನ್ನು ಜೀವಿತರನ್ನಾಗಿ ಮಾಡು. ಹಾಗೂ ಇನ್ನಿಬ್ಬರು ಸ್ತ್ರೀಯರನ್ನು ನಿರ್ಮಿಸು. ಮೂವರ ವಿವಾಹಗಳೂ ಮೂವರೊಂದಿಗೆ ಆಗವುವು.', ಎಂದನು.

ದೇವಿಯು ಹಾಗೆಯೇ ಮಾಡಿದಳು. ಆಮೇಲೆ, ಮೂವರೊಂದಿಗೆ ಮೂವರ ವಿವಾಹಗಳೂ ಆದವು."

## (ಸಮೀಕ್ಷೆ)

**ಆಹಾ! ಹಾ! ತಾಯಿಯೊಂದಿಗೆ ಮದುವೆ ಮಾಡಿಕೊಳ್ಳಲಿಲ್ಲ; ತಂಗಿಯೊಂದಿಗೆ ಮಾಡಿಕೊಂಡು ಬಿಟ್ಟನು!** ಇದನ್ನು ಉಚಿತವೆಂದು ತಿಳಿಯಬೇಕೇ ?

"ಆಮೇಲೆ. ಇಂದ್ರ ಮೊದಲಾದವರನ್ನು ಸೃಜಿಸಿದಳು. ಬ್ರಹ್ಮ, ವಿಷ್ಣು. ರುದ್ರ ಮತ್ತು ಇಂದ್ರ–ಇವರನ್ನು ಪಲ್ಲಕ್ಕಿ ಹೊರುವ ಭೋಯಿಗಳನ್ನಾಗಿ ಮಾಡಿದಳು."

ಈ ಮೊದಲಾಗಿ ಸುಳ್ಳುಮಾತುಗಳನ್ನು ಉದ್ದುದ್ದ-ಅಗಲಗಲವಾಗಿ ಮನ ಬಂದಂತೆ ಬರೆದಿದ್ದಾರೆ.

ಯಾರಾದರೂ ಅವರನ್ನು—

"ಆ ದೇವಿಯ ಶರೀರವನ್ನು ಮತ್ತು ಆ ಶ್ರೀಪುರವನ್ನು ರಚಿಸಿದವನಾವನು ? ಯಾರು ದೇವಿಯ ಮಾತಾಪಿತೃಗಳಾಗಿದ್ದರು, ? ಎಂದು ಕೇಳಬೇಕು.

'ದೇವಿಯು ಅನಾದಿ', ಎನ್ನುವಿರಾದರೆ. ಯಾವುದು ಸಂಯೋಗದಿಂದ ಉದ್ಭವಿಸುವ ವಸ್ತುವಾಗಿರುತ್ತದೋ, ಅದು ಎಂದಿಗೂ ಅನಾದಿಯಾಗಿರಲಾರದು. ಮಾತಾ-ಪುತ್ರರ ವಿವಾಹಕ್ಕೆ ಹೆದರುವುದಾದರೆ, ಸೋದರ-ಸೋದರಿಯರ ವಿವಾಹ ದಲ್ಲಿ ಯಾವ ಒಳ್ಳೆಯ ಮಾತಿದ್ದೀತು ?

ಹೇಗೆ, ಈ **ದೇವೀಭಾಗವತ**ದಲ್ಲಿ ಮಹಾದೇವ, ವಿಷ್ಣು ಮತ್ತು ಬ್ರಹ್ಮ ಮೊದಲಾದವರ ಕ್ಷುದ್ರತ್ವವನ್ನೂ ಮತ್ತು ದೇವಿಯ ಮಹಾತ್ಮ್ಯವನ್ನೂ ಬರೆದಿದ್ದಾರೋ, ಹಾಗೆಯೇ **ಶಿವಪುರಾಣ**ದಲ್ಲಿ ದೇವೀ ಮೊದಲಾದವರ ಅತಿ ಕ್ಷುದ್ರತ್ವ ವನ್ನೂ ಬರೆದಿದ್ದಾರೆ. ಎಂದರೆ, 'ಇವರೆಲ್ಲಾ ಮಹಾದೇವನ ದಾಸರು ಮತ್ತು ಮಹಾದೇವನು ಎಲ್ಲರಿಗೂ ಈಶ್ವರನು', ಎಂದಿದ್ದಾರೆ.

## ('ಭಸ್ಮ' ಮತ್ತು 'ರುದ್ರಾಕ್ಷ'ದ ಟೀಕೆ)

**ರುದ್ರಾಕ್ಷ**ವನ್ನು, ಎಂದರೆ, ಒಂದು ವೃಕ್ಷದ ಫಲದ ಓಟೆಯನ್ನು ಮತ್ತು ಭಸ್ಮವನ್ನು ಧರಿಸುವುದರಿಂದ, ಮುಕ್ತಿಯಾಗುವುದೆಂದು ಒಪ್ಪುವರಾದರೆ, ಬೂದಿ ಯಲ್ಲಿ ಹೊರಳಾಡುವ ಕತ್ತೆಯೇ ಮೊದಲಾದ ಪಶುಗಳೂ ಮತ್ತು ಮಣಿಗಳೇ ಮೊದಲಾದುವನ್ನು ಧರಿಸುವ ಭೀಲರು, ಮೇದರು ಮೊದಲಾದವರೂ, ಮುಕ್ತಿಗೆ ಪಾತ್ರರಾದಾರು !

ಮತ್ತು ಹಂದಿಗಳು, ನಾಯಿಗಳು, ಕತ್ತೆಗಳು ಮೊದಲಾದ ಬೂದಿಯಲ್ಲಿ ಹೊರಳಾಡುವ ಪ್ರಾಣಿಗಳಿಗೆ ಮುಕ್ತಿ ಏತಕ್ಕಾಗುವುದಿಲ್ಲ!

**ಪ್ರಶ್ನೆ:—ಕಾಲಾಗ್ನಿರುದ್ರೋಪನಿಷತ್ತಿ**ನಲ್ಲಿ ಭಸ್ಮ ಧರಿಸುವ ವಿಧಾನ ಬರೆದಿದೆ. ಅದು ಸುಳ್ಳೇನು ? ಮತ್ತು—

**'ತ್ರ್ಯಾಯುಷಂ ಜಮದಗ್ನೇಃ'.**

ಯಜುರ್ವೇದದ ಈ ವಚನ [3.62.] ಮೊದಲಾದ ವೇದ ಮಂತ್ರಗಳಿಂದಲೂ ಭಸ್ಮಧಾರಣದ ವಿಧಾನವಿದೆ. ಮತ್ತು ಪುರಾಣಗಳಲ್ಲಿ—

ಮತ್ತು ಏನಾದರೂ ಸ್ವಲ್ಪ ಲಭಿಸುವುದಾದರೆ, ಅದು ಯಾರ ಪ್ರತಿಮೆಗಳು ರಚಿತವಾಗಿರುತ್ತವೋ, ಅವರ ಸಂಗದಿಂದ, ಹಾಗೂ ಉಪದೇಶ ಮತ್ತು ಅವರ ಇತಿಹಾಸ ಮೊದಲಾದುವನ್ನು ನೋಡುವುದರಿಂದ, ಪ್ರಾಪ್ತವಾಗುತ್ತದೆ. ಏಕೆಂದರೆ, ಯಾವನ ಗುಣ-ದೋಷಗಳ ಅರಿವಿಲ್ಲವೋ, ಅವನ ಪ್ರತಿಮೆಯನ್ನು ಮಾತ್ರ ನೋಡುವುದರಿಂದ, ಪ್ರೀತಿಯುಂಟಾಗುವುದಿಲ್ಲ. ಪ್ರೀತಿಯುಂಟಾಗಲು ಗುಣದ ಜ್ಞಾನವು ಕಾರಣವಾಗಿರುತ್ತದೆ.

ಪ್ರತಿಮಾಪೂಜನದಂತಹ ದುಷ್ಟ ಕಾರಣಗಳಿಂದಲೇ ಆರ್ಯಾವರ್ತದಲ್ಲಿ ನಿಷ್ಕರ್ಮಿಗಳಾದ ಪೂಜಾರಿಗಳೂ, ಭಿಕ್ಷುಕರೂ, ಸೋಮಾರಿಗಳೂ, ಪುರುಷಾರ್ಥ ರಹಿತರೂ ಆದ ಕೋಟ್ಯಂತರ ಜನರಿದ್ದಾರೆ. ಅವರು ಮೂಢರಾಗಿರುವುದರಿಂದ, ಸಮಸ್ತ ಜಗತ್ತಿನಲ್ಲಿಯೂ ಮೌಢ್ಯವನ್ನು ಅವರೇ ಪ್ರಸರಿಸಿದ್ದಾರೆ. ಸುಳ್ಳು-ಮೋಸ ಕೂಡ ಬಹಳ ಹರಡಿದೆ.*

## (ಭಾರತದ ಪ್ರಸಿದ್ಧ ತೀರ್ಥಕ್ಷೇತ್ರಗಳಲ್ಲಿನ 'ಪೋಪ-ಲೀಲೆ'ಗಳ ವರ್ಣನೆ)
## (ಕಾಶಿಯ ಲಾಟಭೈರವ, ಮಹಾದೇವ, ವೇಣೀಮಾಧವರ 'ಚಮತ್ಕಾರ'ಗಳ ಖಂಡನೆ)

ಪ್ರಶ್ನೆ :—

(1) ನೋಡಿರಿ! ಕಾಶಿಯಲ್ಲಿ ಔರಂಗಜೇಬ್ ಸಮ್ರಾಟನಿಗೆ 'ಲಾಟ ಭೈರವ' ಮೊದಲಾದವರು ದೊಡ್ಡ ದೊಡ್ಡ ಚಮತ್ಕಾರಗಳನ್ನು ತೋರಿಸಿದ್ದರು! ಯಾವಾಗ ಮುಸಲ್ಮಾನರು ಅವುಗಳನ್ನು ಒಡೆದು ಹಾಕಲು ಹೋದರೋ, ಮತ್ತು ಯಾವಾಗ ಅವರು ಅವುಗಳ ಮೇಲೆ ತೋಪು–ಗುಂಡು ಮೊದಲಾದುವನ್ನು ಹೊಡೆದರೋ, ಆಗ ದೊಡ್ಡ ದೊಡ್ಡ ಜೇನುನೊಣಗಳು ಹೊರಬಂದು, ಸೈನ್ಯವನ್ನೆಲ್ಲಾ ವ್ಯಾಕುಲ ವಾಗಿ ಮಾಡಿ, ಓಡಿಸಿಬಿಟ್ಟವು!†

---

*ಇದು ಈಗಲೂ ಸತ್ಯ ! ಭಾರತದ ರಾಜನೈತಿಕ, ಆರ್ಥಿಕ ಮತ್ತು ಚಾರಿತ್ರಿಕ ಉನ್ನತಿಗೆ ಅಡ್ಡಿಯಾಗಿ ನಿಂತಿದೆ, ಈ ಮೂರ್ತಿಪೂಜೆಯು ಉನ್ನತಿ ಮತ್ತು ಇದರ ವೈವಿಧ್ಯ ವಿಸ್ತಾರ. —ಸಂ.

†ಲಜ್ಜಾಜನಕವಾದ ವಾಸ್ತವಿಕ ಘಟನೆಗಳಿಗೆ ಏರು-ಪೇರು ಅರ್ಥ ಕಲ್ಪಿಸಿ, ನಪುಂಸಕತೆಗೆ ಪೌರುಷದ ಮೆರಗು ಹಚ್ಚಿ, ಚಮತ್ಕಾರಗಳ ರೂಪದಲ್ಲಿ ಬಣ್ಣಿಸಿ, ಜನರನ್ನು ಮರುಳುಗೊಳಿಸಿ, ನಿಷ್ಕ್ರಿಯರನ್ನಾಗಿ ಮಾಡುವುದೇ ಪುರಾಣರಚನಾಕಾರರ ಉದ್ದೇಶ್ಯವಾಗಿತ್ತು.

ಈ ಪ್ರಶ್ನೆ ಮತ್ತು ಮುಂದಿನ ಪ್ರಶ್ನೆಗಳೆಲ್ಲಾ ಈ ಮಾತಿಗೆ ದೃಷ್ಟಾಂತ ರೂಪದಲ್ಲಿವೆ.—ಸಂ.

ಉತ್ತರ :—ಇದು ಶಿಲೆಯ ಚಮತ್ಕಾರವಲ್ಲ. ಆದರೆ, ಅಲ್ಲಿ ಜೇನುನೊಣಗಳ ಗೂಡುಗಳು ಇದ್ದಿರಬಹುದು! ಅವುಗಳ ಸ್ವಭಾವವೇ ಕ್ರೂರ! ಯಾವನಾದರೂ ಅವನ್ನು ಕೆಣಕಿದರೆ, ಅವು ಕುಟುಕಲು ಓಡಿಬರುತ್ತವೆ.

(2) ಮತ್ತು ಹಾಲಿನ ಧಾರೆಯು ಯಾವ ಚಮತ್ಕಾರ ನಡೆಯುತ್ತಿದ್ದಿತೋ, ಅದು ಪೂಜಾರೀ ಮಹಾಶಯರ ಲೀಲೆಯಾಗಿದ್ದಿತು, ಅಷ್ಟೇ !

**ಪ್ರಶ್ನೆ :—**

**(3) ನೋಡಿರಿ! ಮಹಾದೇವನು ಮ್ಲೇಚ್ಛನಿಗೆ ದರ್ಶನ ಕೊಡಬಾರದೆಂದು ಬಾವಿಯಲ್ಲಿಯೂ, ಮತ್ತು ವೇಣೀಮಾಧವನು ಒಬ್ಬ ಬ್ರಾಹ್ಮಣನ ಮನೆಯಲ್ಲಿಯೂ ಹೋಗಿ ಬಚ್ಚಿಟ್ಟುಕೊಂಡರು!**

**ಇದೂ ಕೂಡ ಚಮತ್ಕಾರವಲ್ಲವೇನು ?**

ಉತ್ತರ :—ಭಲೇ ! ಅವನ ಕೋಟೆಯ ಪಾಲಕರಾದ **ಕಾಲಭೈರವ, ಲಾಟ-ಭೈರವ** ಮೊದಲಾದವರೂ, ಭೂತ-ಪ್ರೇತಗಳೂ ಮತ್ತು ಗರುಡನೇ ಮೊದಲಾದ ಗಣ ಗಳೂ ಯುದ್ಧಮಾಡಿ, ಮುಸಲ್ಮಾನರನ್ನು ಓಡಿಸಲಿಲ್ಲವೇಕೆ ?

**ಮಹಾದೇವ** ಮತ್ತು ವಿಷ್ಣುವಿನ ಬಗೆಗೆ, ಪುರಾಣಗಳಲ್ಲಿ—"**ತ್ರಿಪುರಾಸುರನೇ** ಮೊದಲಾದ ದೊಡ್ಡ ದೊಡ್ಡ ಭಯಂಕರ ದುಷ್ಟರನ್ನು ಭಸ್ಮಮಾಡಿಬಿಟ್ಟರು", ಎಂದು ಕಥೆಯಿದೆ. ಹಾಗಾದರೆ, ಮುಸಲ್ಮಾನರನ್ನು ಏತಕ್ಕೆ ಭಸ್ಮ ಮಾಡಲಿಲ್ಲ ? **ಇದರಿಂದ ಸಿದ್ಧವಾಗುತ್ತದೇನೆಂದರೆ, ಬಡಪಾಯಿಗಳಾದ ಕಲ್ಲುಗಳು ಯುದ್ಧ ಮಾಡುವುದು–ಮಾಡಿಸುವುದಾದರೂ ಏನಿತ್ತು?**

ಮುಸಲ್ಮಾನರು ದೇವಾಲಯಗಳನ್ನೂ, ಪ್ರತಿಮೆಗಳನ್ನೂ ಒಡೆಯುತ್ತಾ-ಮುರಿಯುತ್ತಾ **ಕಾಶಿಯ** ಬಳಿ ಬಂದಾಗ, ಪೂಜಾರಿಗಳು ಆ ಪಾಷಾಣ–ಲಿಂಗವನ್ನು ಬಾವಿಯಲ್ಲಿ ಹಾಕಿದರು! ಮತ್ತು **ವೇಣೀಮಾಧವನನ್ನು** ಬ್ರಾಹ್ಮಣನ ಮನೆಯಲ್ಲಿ ಬಚ್ಚಿಟ್ಟರು!

ಕಾಶಿಯಲ್ಲಿ **ಕಾಲಭೈರವನ** ಭಯದಿಂದ ಯಮದೂತರೂ ಹೋಗುವುದಿಲ್ಲ; ಮತ್ತು ಪ್ರಳಯ ಕಾಲದಲ್ಲಿಯೂ ಕೂಡ ಕಾಶಿಯನ್ನು ನಾಶವಾಗಲು ಬಿಡುವುದಿಲ್ಲ, ಎಂದ ಮೇಲೆ, ಮ್ಲೇಚ್ಛರ ದೂತರನ್ನೇಕೆ ಹೆದರಿಸಲಿಲ್ಲ ? ತನ್ನ ರಾಜನ ಮಂದಿರವನ್ನು ನಾಶವಾಗಲು ಬಿಟ್ಟನೇಕೆ ?

ಇದೆಲ್ಲಾ ಪೋಪ–ಮಾಯೆಯಾಗಿದೆ!

## (ಗಯಾಶ್ರಾದ್ಧದ ಖಂಡನೆ)

ಪ್ರಶ್ನೆ:—

(4) ಗಯಾದಲ್ಲಿ ಶ್ರಾದ್ಧ ಮಾಡುವುದರಿಂದ ಪಿತೃಗಳ ಪಾಪ ಕಳಚಿಹೋಗಿ, ಅಲ್ಲಿನ ಶ್ರಾದ್ಧದ ಪುಣ್ಯ-ಪ್ರಭಾವದಿಂದ ಸ್ವರ್ಗಕ್ಕೆ ತೆರಳುತ್ತಾರೆ.

ಮತ್ತು ಪಿತೃಗಳು ತಮ್ಮ ಕೈಗಳನ್ನು ಚಾಚಿ, ಪಿಂಡವನ್ನು ತೆಗೆದುಕೊಳ್ಳುತ್ತಾರೆ. ಈ ಮಾತೂ ಕೂಡ ಸುಳ್ಳೇನು ?

ಉತ್ತರ:—ಸರ್ವಥಾ ಸುಳ್ಳು ! ಅಲ್ಲಿ ಪಿಂಡದಾನಮಾಡುವುದರ ಪ್ರಭಾವ ಇದೇ ಆಗಿದ್ದಲ್ಲಿ. ಯಾವ 'ಪಂಡಾ'*ಗಳಿಗೆ ಪಿತೃಗಳ ಸುಖಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಕೊಡುತ್ತಾರೋ, ಅದನ್ನು ಗಯಾದವರು ವೇಶ್ಯಾಗಮನ ಮೊದಲಾದ ಪಾಪದಲ್ಲಿ ವ್ಯಯಿಸುತ್ತಾರೆ. ಆ ಪಾಪ ಬಿಟ್ಟುಹೋಗುವುದಿಲ್ಲವೇಕೆ ?

ಮತ್ತು ಪಂಡಾಗಳ ಕೈಗಳನ್ನು ಬಿಟ್ಟರೆ, ಬೇರೆ ಯಾರೂ ಕೈಚಾಚುವುದು ಈ ದಿನಗಳಲ್ಲಿ ಎಲ್ಲಿಯೂ ಕಾಣಿಸುವುದಿಲ್ಲ!

ಯಾವಾಗಲೋ ಯಾವನೋ ಒಬ್ಬ ಧೂರ್ತನು ನೆಲದಲ್ಲಿ ಗುಂಡಿತೋಡಿ, ಅದರಲ್ಲಿ ಒಬ್ಬ ಮನುಷ್ಯನನ್ನು ಕೂಡಿಸಿರಬಹುದು. ಅಮೇಲೆ, ಅದರ ದ್ವಾರದ ಮೇಲೆ ಹುಲ್ಲನ್ನು ಹರಡಿ, ಪಿಂಡವನ್ನಿಟ್ಟಿರಬಹುದು. ಮತ್ತೆ, ಆ ಕಪಟಿಯು ಅದನ್ನು ಎತ್ತಿಕೊಂಡಿರಬಹುದು. ಯಾವನಾದರೂ ಕಣ್ಣಿದ್ದರೂ ಕುರುಡನಾದ, ಹಣದ ಗಂಟಿನ ಭಂಟನೊಬ್ಬನನ್ನು ಹೀಗೆ ವಂಚಿಸಿದ್ದರೆ, ಆಶ್ಚರ್ಯವಿಲ್ಲ.

(5) ಹಾಗೆಯೇ, ವೈಜನಾಥನನ್ನು ರಾವಣನು ತಂದಿದ್ದನು, ಎನ್ನುವುದೂ ಸುಳುಮಾತೇ ಆಗಿರುತ್ತದೆ.

---

*ಭಟ್ಟರುಗಳಿಗೆ —ಅನು.

ಉತ್ತರಭಾರತದ ತೀರ್ಥಸ್ಥಾನಗಳಲ್ಲಿ ತೀರ್ಥಯಾತ್ರಿಗಳ ವ್ಯವಸ್ಥೆ ಮಾಡುವ, ಮತ್ತು ಅವರಿಂದ ಪೂಜಾ-ಪಾಠ-ಶ್ರಾದ್ಧ ಮೊದಲಾದುವನ್ನು ಮಾಡಿಸುವ, ಹಾಗೂ ಅವರಿಂದ ಪುಷ್ಕಳವಾಗಿ ಭೋಜನ ಮತ್ತು ದಕ್ಷಿಣೆಗಳನ್ನು ಗಿಟ್ಟಿಸಿಕೊಂಡು, ಕೊನೆಗೆ ಅವರನ್ನು ಧನದಿಂದ ರಿಕ್ತರನ್ನಾಗಿ ಮಾಡುವ ಬ್ರಾಹ್ಮಣ-ಪಟಿಂಗರಿಗೆ 'ಪಂಡಾ', ಎಂಬುದು ರೂಢಿಯಾದ ಹೆಸರು. ಆದರೆ, 'ಪಂಡಾ' ಶಬ್ದದ ವಾಸ್ತವಿಕ ಅರ್ಥ 'ಸದಸದ್ವಿವೇಕಶಾಲಿನೀ ಬುದ್ಧಿ', ಎಂದು. ಈ ಬುದ್ಧಿ ಯಾರಲ್ಲಿದೆಯೋ, ಅವರಿಗೆ 'ಪಂಡಿತ', ಎಂದು ಹೆಸರು.—ಸಂ.

### (ಕಲ್ಕತ್ತೆಯ ಕಾಳೀ ಮತ್ತು ಅಸ್ಸಾಮಿನ ಕಾಮಾಕ್ಷಿಗಳ ಚಮತ್ಕಾರದ ಖಂಡನೆ)

**ಪ್ರಶ್ನೆ:—**

**(6) ನೋಡಿರಿ! ಕಲಕತ್ತೆಯ ಕಾಳೀ, ಮತ್ತು**

**(7) ಕಾಮಾಕ್ಷಿ*–ಮೊದಲಾದ ದೇವಿಯರನ್ನು ಲಕ್ಷಾಂತರ ಜನರು ಅಂಗೀಕರಿಸುತ್ತಾರೆ!**

**ಇದು ಚಮತ್ಕಾರವಲ್ಲವೇನು ?**

**ಉತ್ತರ:—ಏನೂ ಅಲ್ಲ!** ಈ ಅಂಥರಾದ ಮಂದಿಗಳು ಕುರಿಗಳಂತೆ ಒಬ್ಬರ ಹಿಂದೊಬ್ಬರು ನಡೆಯುತ್ತಾರೆ ; ಭಾವಿಯಲ್ಲಿ-ಕಮರಿಯಲ್ಲಿ ಬೀಳುತ್ತಾರೆ ; ದೂರ ಸರಿಯಲಾರರು. ಅದೇ ರೀತಿ, ಒಬ್ಬ ಮೂರ್ಖನ ಹಿಂದೆ ಮತ್ತೊಬ್ಬನು ನಡೆದು, ಪ್ರತಿಮಾ ಪೂಜನವೆಂಬ ಹಳ್ಳದಲ್ಲಿ ಸಿಕ್ಕಿಹಾಕಿಕೊಂಡು, ದುಃಖವನ್ನು ಹೊಂದುತ್ತಾರೆ.

### (ಪುರಿಯ ಜಗನ್ನಾಥಸ್ವಾಮಿಯ ಚಮತ್ಕಾರದ ಖಂಡನೆ)

**ಪ್ರಶ್ನೆ:—ಒಳ್ಳೆಯದು! ಇದು ಹೋಗಲಿ ಬಿಡಿರಿ!**

**(8) 'ಜಗನ್ನಾಥ'ದಲ್ಲಿಯಂತೂ ಪ್ರತ್ಯಕ್ಷವಾದ ಚಮತ್ಕಾರವಿದೆ. ಒಂದು ಶರೀರವನ್ನು ಪರಿವರ್ತಿಸುವ ಕಾಲಕ್ಕೆ. ಚಂದನದ ತೊಲೆ ಸಮುದ್ರದೊಳಗಿನಿಂದ ಸ್ವತಃ ಬರುತ್ತದೆ!**

**ಒಲೆಯ ಮೇಲೆ, ಒಂದರ ಮೇಲೆ ಒಂದರಂತೆ,ಏಳು ಹಂಡೆಗಳನ್ನಿಡುವುದರಿಂದ, ಮೇಲೆ–ಮೇಲಿನದರ ಅಕ್ಕಿ ಮೊದಲು ಬೇಯುತ್ತದೆ!**

**ಮತ್ತು ಯಾವನಾದರೂ ಅಲ್ಲಿ ಜಗನ್ನಾಥನ ಪ್ರಸಾದವನ್ನು ತಿನ್ನದಿದ್ದರೆ, ಕುಷ್ಠರೋಗಿಯಾಗಿ ಹೋಗುತ್ತಾನೆ!**

**ಮತ್ತು ರಥವು ತನ್ನಷ್ಟಕ್ಕೆ ತಾನೇ ಚಲಿಸುತ್ತದೆ!**

---

*'ಕಾಮಾಕ್ಷಾ', ಎಂಬ ಹೆಸರಿನ ದೇವಿಯ ಮಂದಿರ ಅಸ್ಸಾಮಿನಲ್ಲಿದೆ. ಇವೆರಡು ದೇವಿಯ ಮಂದಿರಗಳೂ ವಾಮಮಾರ್ಗಿಗಳ ಪ್ರಧಾನಕ್ಷೇತ್ರಗಳಾಗಿವೆ. ಪಶುಬಲಿಯ ನಿತ್ಯ ಕಾರ್ಯದಿಂದ, ಮಂದಿರದ ಹೊರಗೆ ರಕ್ತ ಕೋಡಿ ಹರಿಯುತ್ತಿರುತ್ತದೆ. ಕಾಮಾಕ್ಷಾ ದೇವಿಯ ಮಂದಿರದಲ್ಲಿ ಪಂಚ ಮಕಾರಗಳ ಭ್ರಷ್ಟಲೀಲೆ ಇನ್ನಷ್ಟು ಪ್ರಬಲವಾಗಿದೆ.—ಸಂ.

**ಪಾಪಿಗೆ ದರ್ಶನವಾಗುವುದಿಲ್ಲ!**

**ಇಂದ್ರದಮನನ ರಾಜ್ಯಭಾರದ ಕಾಲದಲ್ಲಿ ದೇವತೆಗಳು ದೇವಾಲಯವನ್ನು ನಿರ್ಮಿಸಿದ್ದಾರೆ!**

**ಶರೀರವನ್ನು ಪರಿವರ್ತಿಸುವ ಕಾಲದಲ್ಲಿ ಒಬ್ಬ ರಾಜನು, ಒಬ್ಬ ಪಂಡಾ ಮತ್ತು ಒಬ್ಬ ಬಡಗಿಯೂ ಮೃತರಾಗುತ್ತಾರೆ!**

**ಈ ಮೊದಲಾದ ಚಮತ್ಕಾರಗಳನ್ನು ನೀವು ಸುಳ್ಳೆಂದು ಮಾಡಲಾರಿರಿ!**

**ಉತ್ತರ:**—ಯಾವನು ಹನ್ನೆರಡು ವರ್ಷ ಪರ್ಯಂತ ಜಗನ್ನಾಥನ ಪೂಜೆಯನ್ನು ಮಾಡಿದ್ದನೋ, ಅವನು ವಿರಕ್ತನಾಗಿ ಮಥುರೆಗೆ ಬಂದಿದ್ದನು. ನನ್ನನ್ನು ಸಂಧಿಸಿದ್ದನು. ನಾನು ಈ ಪ್ರಶ್ನೆಗಳಿಗೆ ಉತ್ತರವನ್ನು ಕೇಳಿದ್ದೆನು. ಅವನು ಈ ಎಲ್ಲ ಮಾತುಗಳೂ ಸುಳ್ಳೆಂದು ಹೇಳಿದನು. ಆದರೆ, ವಿಚಾರದಿಂದ ನಿಶ್ಚಯವಾಗುವುದೇನೆಂದರೆ—

ಯಾವಾಗ ಶರೀರವನ್ನು ಪರಿವರ್ತಿಸುವ ಕಾಲ ಬರುತ್ತದೋ, ಆಗ, ಹಡಗಿನಲ್ಲಿ ಚಂದನದ ಕೊರಡನ್ನು ಒಯ್ದು, ಸಮುದ್ರದಲ್ಲಿ ಹಾಕುತ್ತಾರೆ. ಅದು ಸಮುದ್ರದ ಅಲೆಗಳಿಂದ ತೀರಕ್ಕೆ ಬಂದು ಮುಟ್ಟುತ್ತದೆ. ಅದನ್ನು ತೆಗೆದುಕೊಂಡು, ಬಡಗಿಗಳು ಪ್ರತಿಮೆಗಳನ್ನು ನಿರ್ಮಿಸುತ್ತಾರೆ.

ಯಾವಾಗ ಅಡಿಗೆಯಾಗುತ್ತದೋ, ಆಗ ದ್ವಾರವನ್ನು ಮುಚ್ಚಿ, ಬಾಣಸಿಗನೊಬ್ಬನನ್ನು ಬಿಟ್ಟು, ಬೇರೆ ಯಾವನನ್ನೂ ಒಳಹೋಗಲೂ ಬಿಡುವುದಿಲ್ಲ, ನೋಡಲೂ ಬಿಡುವುದಿಲ್ಲ!

ನೆಲದ ಮೇಲೆ ಸುತ್ತಲೂ ಆರು, ಮತ್ತು ಮಧ್ಯೆ ಒಂದು, ಚಕ್ರಾಕಾರವಾಗಿ ಒಲೆಗಳು ರಚಿತವಾಗುತ್ತವೆ. ಆ ಹಂಡೆಗಳ ತಳಕ್ಕೆ ತುಪ್ಪ, ಮಣ್ಣು ಮತ್ತು ಬೂದಿಯನ್ನು ಸವರಿ, ಆರು ಒಲೆಗಳ ಮೇಲೆ ಅಕ್ಕಿಯನ್ನು ಬೇಯಿಸಿ, ಅವುಗಳ ತಳವನ್ನುಜ್ಜಿ, ಆ ಮಧ್ಯದ ಹಂಡೆಯಲ್ಲಿ ಆಗಲೇ ಅಕ್ಕಿ ಹಾಕಿ, ಅದರ ಮೇಲೆ ಆ ಆರು ಹಂಡೆಗಳನ್ನಿಟ್ಟು, ಆರು ಹಂಡೆಗಳ ಬಾಯಿಗಳನ್ನು ಕಬ್ಬಿಣದ ಕಾವಲಿಗಳಿಂದ ಮುಚ್ಚಿ, ಧನಾಢ್ಯರಾಗಿರುವ ದರ್ಶನಾಕಾಂಕ್ಷಿಗಳನ್ನು ಒಳಕ್ಕೆ ಕರೆದು ತೋರಿಸುತ್ತಾರೆ.

ಮೇಲಮೇಲಣ ಹಂಡೆಗಳಿಂದ ಅನ್ನವನ್ನು ತೆಗೆದು, ಬೆಂದಿರುವ ಅಗಳುಗಳನ್ನು ತೋರಿಸಿ, ಕೆಳಗಿನ ಹಸಿಯ ಅಕ್ಕಿಯನ್ನು ತೆಗೆದು ತೋರಿಸಿ, ಅವರಿಗೆ—

'ಹಂಡೆಗಳಿಗಾಗಿ ಏನನ್ನಾದರೂ ಅರ್ಪಿಸಿಬಿಡಿ.', ಎನ್ನುತ್ತಾರೆ.

'ಕಣ್ಣಿದ್ದರೂ ಕುರುಡರಾದ ಆ ಹಣದ ಗಂಟಿನ ಬಂಟರು'* ರೂಪಾಯಿಗಳನ್ನೂ, ಚಿನ್ನದ ವರಹಗಳನ್ನೂ ಅರ್ಪಿಸುತ್ತಾರೆ. ಮತ್ತು ಕೆಲವರು ಮಾಸಿಕ ವಂತಿಕೆಯನ್ನೂ ಕಟ್ಟಿಬಿಡುತ್ತಾರೆ."

ಶೂದ್ರರೂ, ನೀಚರೂ ದೇವಾಲಯಕ್ಕೆ ನೈವೇದ್ಯವನ್ನು ತರುತ್ತಾರೆ. ಯಾವಾಗ ನೈವೇದ್ಯ ಸಮರ್ಪಿತವಾಗಿ ತೀರುತ್ತದೋ, ಆಗ ಆ ಶೂದ್ರ, ನೀಚ ಜನರು ಎಂಜಲು ಮಾಡಿಬಿಡುತ್ತಾರೆ. ಆಮೇಲೆ, ಯಾವನು ರೂಪಾಯಿಗಳನ್ನು ಕೊಟ್ಟು, ಹಂಡೆಯನ್ನು ತೆಗೆದುಕೊಳ್ಳುತ್ತಾನೋ, ಅವನ ಮನೆಗೆ ತಲುಪಿಸುತ್ತಾರೆ, ಮತ್ತು ಬಡ ಗೃಹಸ್ಥರು, ಸಾಧು-ಸಂತರಿಂದ ಹಿಡಿದು ಶೂದ್ರರ ಮತ್ತು ಅಂತ್ಯಜರವರೆಗೆ, ಒಂದು ಪಂಕ್ತಿಯಲ್ಲಿ ಕುಳಿತು, ಒಬ್ಬರು ಇನ್ನೊಬ್ಬರ ಎಂಜಲನ್ನು ಉಣ್ಣುತ್ತಾರೆ. ಯಾವಾಗ ಆ ಪಂಕ್ತಿ ಏಳುತ್ತದೋ, ಆಗ ಅದೇ ಎಲೆಗಳ ಮೇಲೆ ಬೇರೆಯವರಿಗೆ ಬಡಿಸುತ್ತಾ ಹೋಗುತ್ತಾರೆ. **ಮಹಾ ಅನಾಚಾರವಾಗಿದೆ !**

ಮತ್ತು ಬಹಳ ಮಂದಿ ಅಲ್ಲಿ ಹೋಗಿ, ಅವರ ಎಂಜಲನ್ನು ತಿನ್ನದೇ, ತಮ್ಮ ಕೈಯಿಂದಲೇ ಅಡಿಗೆಮಾಡಿ, ಊಟಮಾಡಿ, ಹೊರಟು ಬರುತ್ತಾರೆ. ಕುಷ್ಠ ಮೊದಲಾದ ಯಾವ ರೋಗಗಳೂ ಬರುವುದಿಲ್ಲ.

ಮತ್ತು ಆ ಜಗನ್ನಾಥಪುರಿಯಲ್ಲಿಯೂ ಕೂಡ, ಬಹಳ ಮಂದಿ ಪ್ರಸಾದವನ್ನು ತಿನ್ನುವುದಿಲ್ಲ. ಅವರಿಗೂ ಕುಷ್ಠವೇ ಮೊದಲಾದ ರೋಗಗಳು ಬರುವುದಿಲ್ಲ.

ಮತ್ತು ಜಗನ್ನಾಥಪುರಿಯಲ್ಲಿಯೂ ಬಹಳ ಜನ ಕುಷ್ಠರೋಗಿಗಳಿದ್ದಾರೆ. ಪ್ರತಿನಿತ್ಯವೂ ಎಂಜಲನ್ನು ತಿನ್ನುವುದರಿಂದಲೂ ಕೂಡ, ಆ ರೋಗ ಬಿಡುವುದಿಲ್ಲ.

ಮತ್ತು **ಈ ಜಗನ್ನಾಥದಲ್ಲಿ ವಾಮಮಾರ್ಗಿಗಳು** 'ಭೈರವೀಚಕ್ರ'† ವನ್ನು ನಿರ್ಮಿಸಿದ್ದಾರೆ. ಏಕೆಂದರೆ, ಸುಭದ್ರೆಯು ಶ್ರೀಕೃಷ್ಣ ಮತ್ತು ಬಲರಾಮರ ಸೋದರಿಯಾಗಿದ್ದಾಳೆ. ಅವಳನ್ನೇ ಇಬ್ಬರು ಸೋದರರ ನಡುವೆ ಪತ್ನಿಯು ಮತ್ತು

---

*ಹಿಂದಿಯಲ್ಲಿ ಇದಕ್ಕೆ-'ಆಂಖ್ ಕೇ ಅಂಧೇ ಔರ್ ಗಾಂಠ್ ಕೇ ಪೂರೇ', ಎಂಬ ವಾಗ್ಧೋರಣೆಯನ್ನು ಪ್ರಯೋಗಿಸಲಾಗಿದೆ. ಈ ಪ್ರಯೋಗವನ್ನು ಮಹರ್ಷಿ ದಯಾನಂದರು ಮೂಢ ಧನಿಕರಿಗಾಗಿ, ಈ ಗ್ರಂಥದಲ್ಲಿ ಅನೇಕ ಕಡೆ ಮಾಡಿದ್ದಾರೆ.—ಸಂ.

†'ಭೈರವೀಚಕ್ರ'ದ ವರ್ಣನೆಯು ಹಿಂದೆ ಇದೇ ಸಮುಲ್ಲಾಸದಲ್ಲಿ ಮಾಡಲ್ಪಟ್ಟಿದೆ. 577ನೆಯ ಪುಟವನ್ನು ನೋಡಿ.—ಸಂ.

ಮಾತೆಯು* ಸ್ಥಾನದಲ್ಲಿ ಕೂಡಿಸಿದ್ದಾರೆ. ಇದು 'ಭೈರವೀಚಕ್ರ'ವಲ್ಲದಿದ್ದಲ್ಲಿ, ಈ ಘಟನೆ ಎಂದಿಗೂ ಆಗುತ್ತಿರಲಿಲ್ಲ.†

ಮತ್ತು ರಥದ ಚಕ್ರಗಳೊಂದಿಗೆ ಕೀಲನ್ನು ಹೊಂದಿಸಿದ್ದಾರೆ. ಅವುಗಳನ್ನು ಯಾವಾಗ ನೇರವಾಗಿ ತಿರುಗಿಸುತ್ತಾರೋ, ಕೀಲೂ ತಿರುಗುತ್ತದೆ. ಆಗ ರಥ ಚಲಿಸುತ್ತದೆ. ಯಾವಾಗ ಜಾತ್ರೆಯ ನಡುವೆ ರಥ ಸೇರುತ್ತದೋ, ಆಗಲೇ ಅವರ ಕೀಲನ್ನು ವಿರುದ್ಧವಾಗಿ ತಿರುಗಿಸುವುದರಿಂದ, ರಥವು ನಿಂತುಬಿಡುತ್ತದೆ.

ಪೂಜಾರಿಗಳು—"ಜಗನ್ನಾಥನು ಪ್ರಸನ್ನನಾಗಿ,ತನ್ನ ರಥವನ್ನು ನಡೆಸುವುದಕ್ಕಾಗಿ ದಾನ ಕೊಡಿರಿ! ಪುಣ್ಯಗಳಿಸಿರಿ! ನಮ್ಮ ಧರ್ಮ ಉಳಿಯಲಿ!", ಎಂದು ಕರೆಗೊಡುತ್ತಾರೆ.

ಯಾವವರೆಗೆ ಕಾಣಿಕೆ ಬರುತ್ತಾ ಹೋಗುತ್ತದೋ, ಆ ವರೆಗೆ ಹೀಗೆಯೇ ಕರೆಗೊಡುತ್ತಾ ಹೋಗುತ್ತಾರೆ.

ಯಾವಾಗ ಕಾಣಿಕೆ ಬರುವುದು ನಿಲ್ಲುತ್ತದೋ, ಆಗ ಒಬ್ಬ ವ್ರಜವಾಸಿಯು ಒಳ್ಳೆಯ ವಸ್ತ್ರಗಳನ್ನೂ, ಶಾಲನ್ನೂ ಹೊದೆದು, ಮುಂದುಗಡೆ ನಿಂತು, ಕೈಮುಗಿದು—

"ಓ ಜಗನ್ನಾಥ ಸ್ವಾಮಿ! ನೀವು ದಯೆತೋರಿ, ರಥವನ್ನು ನಡೆಯಿಸಿ. ನಮ್ಮ ಧರ್ಮವನ್ನುಳಿಸಿ", ಎಂದು ಸ್ತುತಿಸುತ್ತಾನೆ. ಈ ಮೊದಲಾದುವನ್ನು ಹೇಳಿ, ಸಾಷ್ಟಾಂಗ ದಂಡಪ್ರಣಾಮ ಮಾಡಿ, ರಥದ ಮೇಲೆ ಹತ್ತುತ್ತಾನೆ.

ಅದೇ ಕಾಲಕ್ಕೆ ಕೀಲನ್ನು ನೇರವಾಗಿ ತಿರುಗಿಸಿ ಬಿಡುತ್ತಾರೆ. ಮತ್ತು 'ಜಯ–ಜಯಕಾರ' ಮಾಡಿ, ಸಾವಿರಾರು ಮಂದಿ ಹಗ್ಗವನ್ನೆಳೆಯುತ್ತಾರೆ. ರಥ ನಡೆಯುತ್ತದೆ.

---

*ಪ್ರಾಚೀನ ಭಾರತೀಯ ಶಿಷ್ಟಾಚಾರಕ್ಕನುಸಾರವಾಗಿ, ಯಜ್ಞಕಾರ್ಯವಲ್ಲದ ವೇಳೆಗಳಲ್ಲಿ, ಪತ್ನಿಯನ್ನು ಪತಿಯು ಎಡಭಾಗದಲ್ಲಿ, ಮತ್ತು ಪತ್ನಿಯಲ್ಲದ ಇತರ ಸ್ತ್ರೀಯರನ್ನು ಬಲಭಾಗದಲ್ಲಿ ಕೂಡಿಸುವ ವಿಧಾನವಿದೆ. ಇಬ್ಬರ ಮಧ್ಯದಲ್ಲೂ ಸುಭದ್ರೆಯನ್ನು ಕೂಡಿಸಿರುವುದರಿಂದ, ಅವಳ ಸ್ಥಿತಿಯು, ಅವಳು ಯಾರ ಎಡಭಾಗದಲ್ಲಿರುವಳೋ, ಅವನಿಗೆ ಪತ್ನಿಯಂತೆಯೂ, ಮತ್ತು ಯಾರ ಬಲಭಾಗದಲ್ಲಿರುವಳೋ, ಅವನಿಗೆ ಮಾತೆಯಂತೆಯೂ, ಆಗುತ್ತದೆ.—ಯು. ಮೀ.

†ಈ ಮಾತು ಜಗನ್ನಾಥ ಮಂದಿರದ ಮೇಲೆ ಕೆತ್ತಿರುವ ಭೋಗಾತ್ಮಕ (ಸಂಭೋಗರತ) ಮೂರ್ತಿಗಳಿಂದ ಸಿದ್ಧವಾಗುತ್ತದೆ.—ಯು. ಮೀ.

ಮಧ್ಯಪ್ರದೇಶದ ಛತರಪುರ ಜಿಲ್ಲೆಯಲ್ಲಿನ ಖಜುರಾಹೋ ಎಂಬ ಸ್ಥಾನದ ದೇವಾಲಯಗಳು ಈ ವಿಧದ ಪ್ರತಿಮೆಗಳ ಬಾಹುಲ್ಯದ ಕಾರಣದಿಂದ, ಭೋಗಾತ್ಮಕ ಜೀವಿಗಳಾದ ಪಶ್ಚಿಮೀಯರಿಗೆ ಅತಿ ದರ್ಶನೀಯ ಸ್ಥಾನಗಳಾಗಿವೆ.—ಸಂ.

ಮಂದಿರವು ಇಷ್ಟು ದೊಡ್ಡದಾಗಿದ್ದರೂ. ಹಗಲಿನಲ್ಲಿಯೂ ಕೂಡ ಕತ್ತಲೆ ಕವಿದಿರುತ್ತದೆ. ಯಾವಾಗ ಬಹು ಮಂದಿ ದರ್ಶನಕ್ಕೆ ಬರುತ್ತಾರೋ, ಆಗ ದೀಪವನ್ನು ಹಚ್ಚಬೇಕಾಗುತ್ತದೆ.

ಆ ಪ್ರತಿಮೆಗಳ ಮುಂದೆ ಎಳೆದು ಮರೆಮಾಡುವ ತೆರೆಗಳು ಎರಡು ಪಕ್ಕಗಳಿಗೂ ಇರುತ್ತವೆ. ಪಂಡೇ-ಪೂಜಾರಿಗಳು ಒಳಗೆ ನಿಂತಿರುತ್ತಾರೆ. ಯಾವಾಗ ಒಂದು ಕಡೆಯವನು ತೆರೆಯನ್ನು ಎಳೆಯುತ್ತಾನೋ, ಆ ಕೂಡಲೇ ಪ್ರತಿಮೆ ಮರೆಯಾಗಿ ಹೋಗುತ್ತದೆ. ಆಗ ಎಲ್ಲ ಪಂಡಾಗಳು, ಪೂಜಾರಿಗಳು—

"ನೀವು ಕಾಣಿಕೆ ನೀಡಿರಿ! ನಿಮ್ಮ ಪಾಪಗಳು ಬಿಟ್ಟುಹೋಗುವುವು! ಆಗ ದರ್ಶನವಾಗುವುದು! ಬೇಗ ಮಾಡಿರಿ!", ಎಂದು ಕರೆಗೊಡುತ್ತಾರೆ.

ಆ ಬಡಪಾಯೀ ಮುಗ್ಧ ಜನರು ಧೂರ್ತರುಗಳಿಂದ ಕೊಳ್ಳೆಹೊಡೆಯಲ್ಪಡುತ್ತಾರೆ!

ಮತ್ತು ಸಟ್ಟನೆ ಎರಡನೆಯ ತೆರೆಯನ್ನು ಎಳೆದುಬಿಡುತ್ತಾರೆ. ಆಗಲೇ ದರ್ಶನವಾಗುತ್ತದೆ. ಆಗ ಜಯಕಾರಮಾಡಿ, ಪ್ರಸನ್ನರಾಗಿ, ತಳ್ಳಿಸಿಕೊಂಡು, ತಿರಸ್ಕೃತರಾಗಿ, ಹೊರಟುಬರುತ್ತಾರೆ!

ಇಂದ್ರದಮನನ ಕುಲದವರು ಇಂದಿಗೂ ಕಲಕತ್ತೆಯಲ್ಲಿದ್ದಾರೆ. ಅವನು ಧನಾಢ್ಯನಾದ ರಾಜನೂ, ದೇವಿಯ ಉಪಾಸಕನೂ ಆಗಿದ್ದನು. ಈ ರೀತಿಯಿಂದಲಾದರೂ ಆರ್ಯಾವರ್ತ ದೇಶದ ಭೋಜನದ ಗೊಂದಲವನ್ನು ಬಗೆಹರಿಸೋಣವೆಂದು, ಅವನು ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡಿ, ದೇವಾಲಯವನ್ನು ಕಟ್ಟಿಸಿದ್ದನು. ಆದರೆ, ಆ ಮೂರ್ಖರು ಯಾವಾಗ ತಾನೇ ಬಿಟ್ಟಾರು?

'ದೇವ', ಎಂದು ಅಂಗೀಕರಿಸುವಿರಾದರೆ, ಯಾವ ಶಿಲ್ಪಿಗಳು ದೇವಾಲಯವನ್ನು ನಿರ್ಮಿಸಿದರೋ, ಆ ಕಾರ್ಯಕುಶಲರನ್ನೇ ಹಾಗೆಂದು ಅಂಗೀಕರಿಸಿರಿ.

ರಾಜನೂ, ಪಂಡನೂ ಮತ್ತು ಬಡಗಿಯೂ ಆ ಸಮಯದಲ್ಲಿ ಮೃತರಾಗುವುದಿಲ್ಲ; ಆದರೆ, ಮೂವರೂ ಅಲ್ಲಿ ಪ್ರಧಾನರಾಗಿರುತ್ತಾರೆ! ಅಪ್ರಧಾನರಿಗೆ ಅವರು ದುಃಖವನ್ನುಂಟುಮಾಡುತ್ತಿದ್ದರೋ, ಏನೋ? ಆ ಕಾಲದಲ್ಲಿ, ಎಂದರೆ ಶರೀರವನ್ನು ಪರಿವರ್ತಿಸುವ ಸಮಯದಲ್ಲಿ, ಆ ಮೂವರೂ ಉಪಸ್ಥಿತರಾಗಿರುತ್ತಾರೆ.

ಅವರು* ಪರಸ್ಪರ ಆಲೋಚಿಸಿ, ಪ್ರತಿಮೆಯ ಹೃದಯವನ್ನು ಟೊಳ್ಳಾಗಿ ಮಾಡಿರುತ್ತಾರೆ. ಅದರಲ್ಲಿ ಒಂದು ಚಿನ್ನದ ಕರಡಿಗೆಯಲ್ಲಿ, ಸಾಲಿಗ್ರಾಮ ಒಂದನ್ನು

*ಎಂದರೆ, ಪಂಡಾ-ಪೂಜಾರಿಗಳು—ಸಂ.

ಇಟ್ಟಿರುತ್ತಾರೆ. ಅದನ್ನು ಪ್ರತಿದಿನವೂ ತೊಳೆದು, ಚರಣಾಮೃತವನ್ನು ಸಿದ್ಧಪಡಿಸುತ್ತಾರೆ. ಶಯನೋತ್ಸವದ ರಾತ್ರಿಯಲ್ಲಿ, ಆರತಿಯಾಗುವಾಗ, ಆ ಜನರು ಆ ಸಾಲಿಗ್ರಾಮದ ಮೇಲೆ ವಿಷದ ದ್ರಾವಕವನ್ನು ಸವರಿರಬಹುದು! ಅದನ್ನು ತೊಳೆದು, ಅದೇ ಮೂವರಿಗೆ ಕುಡಿಸಿರಬಹುದು! ಅದರಿಂದ, ಯಾವಾಗಲೋ ಅವರು ಮೃತರಾಗಿ ಹೋಗಿರಬಹುದು!

ಅವರು ಸತ್ತುದೇನೋ ಹೀಗೆಯೇ! ಆದರೆ, ಭೋಜನ ಭಟ್ಟರು—

"ಜಗನ್ನಾಥ ದೇವರು ತಮ್ಮ ಶರೀರವನ್ನು ಪರಿವರ್ತಿಸುವ ಕಾಲದಲ್ಲಿ ಮೂವರು ಭಕ್ತರನ್ನೂ ಕೂಡ ಸಂಗಡ ಕರೆದೊಯ್ದರು.", ಎಂದು ಪ್ರಸಿದ್ಧಪಡಿಸಿರಬಹುದು!

**ಇಂತಹ ಕಪಟನಾಟಕಗಳು ಪರಧನವನ್ನು ಕಸಿದುಕೊಳಲು, ನಡೆಯುತ್ತಲೇ ಇರುತ್ತವೆ.**

## (ರಾಮೇಶ್ವರದಲ್ಲಿ ಲಿಂಗ-ಚಮತ್ಕಾರದ ಖಂಡನೆ)

**ಪ್ರಶ್ನೆ:—**

**(9)ರಾಮೇಶ್ವರದಲ್ಲಿ ಗಂಗೋತ್ರಿಯ ಜಲವನ್ನು ಅಭಿಷೇಕ ಮಾಡುವ ಕಾಲದಲ್ಲಿ ಲಿಂಗವು ದೊಡ್ಡದಾಗುತ್ತದೆ!**

**ಈ ಮಾತೂ ಸುಳ್ಳೇನು ?**

**ಉತ್ತರ:—ಸುಳ್ಳು!** ಏಕೆಂದರೆ, ಆ ದೇವಾಲಯದಲ್ಲಿಯೂ ಕೂಡ ಹಗಲಿನಲ್ಲಿಯೂ ಕತ್ತಲಿರುತ್ತದೆ. ದೀಪಗಳು ಹಗಲಿರುಳೂ ಉರಿಯುತ್ತಾ ಇರುತ್ತವೆ.* ಯಾವಾಗ ಜಲದ ಧಾರೆಯನ್ನು ಬಿಡುತ್ತಾರೋ, ಆಗ ಆ ಜಲದಲ್ಲಿ ಮಿಂಚಿನಂತೆ ದೀಪದ ಪ್ರತಿಬಿಂಬ ಹೊಳೆಯುತ್ತದೆ. ಮತ್ತೇನೂ ಇಲ್ಲ. ಶಿಲೆ ಕುಗ್ಗುವುದೂ ಇಲ್ಲ; ಹಿಗ್ಗುವುದೂ ಇಲ್ಲ! ಎಷ್ಟಿರುತ್ತದೋ ಅಷ್ಟೇ ಇರುತ್ತದೆ. ಇಂತಹ ಲೀಲೆಮಾಡಿ, ಬಡಪಾಯಿಗಳಾದ ಬುದ್ಧಿಹೀನರನ್ನು ವಂಚಿಸುತ್ತಾರೆ.

**ಪ್ರಶ್ನೆ:—ರಾಮೇಶ್ವರನನ್ನು ರಾಮಚಂದ್ರನೇ ಸ್ಥಾಪಿಸಿದ್ದಾನೆ. ಪ್ರತಿಮಾ-ಪೂಜನ ವೇದವಿರುದ್ಧವಾಗಿದ್ದಲ್ಲಿ, ರಾಮಚಂದ್ರನು ಪ್ರತಿಮಾಸ್ಥಾಪನೆಯನ್ನು ಏತಕ್ಕೆ ಮಾಡುತ್ತಿದ್ದನು? ಮತ್ತು ರಾಮಾಯಣದಲ್ಲಿ ವಾಲ್ಮೀಕಿಗಳು ಏಕೆ ಬರೆಯುತ್ತಿದ್ದರು?**

---

*ಈ ಮಾತುಗಳು ಪ್ರತ್ಯಕ್ಷ ಅನುಭವದಂತಿವೆ. ಆದ್ದರಿಂದ, ಮಹರ್ಷಿ ದಯಾನಂದರು ರಾಮೇಶ್ವರದ ಯಾತ್ರೆಯನ್ನೂ ಮಾಡಿದ್ದಿರಬಹುದೆಂಬ ಅನುಮಾನವುಂಟಾಗುತ್ತದೆ.—ಸಂ.

ಉತ್ತರ:—ರಾಮಚಂದ್ರರ ಕಾಲದಲ್ಲಿ ಆ ಲಿಂಗದ, ಅಥವಾ ದೇವಾಲಯದ ಹೆಸರು-ಕುರುಹು ಕೂಡ ಇರಲಿಲ್ಲ.* ಆದರೆ, ದಕ್ಷಿಣ ದೇಶಸ್ಥನಾದ 'ರಾಮ', ಎಂಬ ಹೆಸರನ್ನುಳ್ಳ ರಾಜನು ದೇವಾಲಯವನ್ನು ಕಟ್ಟಿ, ಲಿಂಗಕ್ಕೆ 'ರಾಮೇಶ್ವರ', ಎಂದು ಹೆಸರಿಟ್ಟಿದ್ದಾನೆ, ಎಂಬುದು ಸರಿಯಾಗಿದೆ!

ಯಾವಾಗ ರಾಮಚಂದ್ರರು ಸೀತೆಯನ್ನು ಕರೆದುಕೊಂಡು, ಹನುಮಂತ ಮೊದಲಾದವರೊಂದಿಗೆ ಲಂಕೆಯಿಂದ ಆಕಾಶಮಾರ್ಗದಲ್ಲಿ ಕುಳಿತು ಅಯೋಧ್ಯೆಗೆ ಬರುತ್ತಿದ್ದರೋ, ಆಗ ಸೀತೆಗೆ ಏನು ಹೇಳಿದರೆಂದರೆ—

**'ಅತ್ರ ಪೂರ್ವಂ ಮಹಾದೇವಃ ಪ್ರಸಾದಮಕರೋದ್ವಿಭುಃ' ।**

[ವಾಲ್ಮೀಕಿರಾಮಾಯಣ, ಯುದ್ಧಕಾಂಡ :—123. 22]

**'ಸೇತುಬಂಧ ಇತಿ ವಿಖ್ಯಾತಂ [ತ್ರೈಲೋಕ್ಯಪರಿಪೂಜಿತಮ್] ।'**

[ವಾಲ್ಮೀಕಿರಾಮಾಯಣ, ಯುದ್ಧಕಾಂಡ :—123. 21]

"ಹೇ ಸೀತೆ ! ನಿನ್ನ ವಿಯೋಗದಿಂದ, ನಾವು ವ್ಯಾಕುಲರಾಗಿ ತಿರುಗುತ್ತಿದ್ದೆವು. ಮತ್ತು ಈ ಜಾಗದಲ್ಲೇ ಚಾತುರ್ಮಾಸ್ಯವನ್ನು ಮಾಡಿದ್ದೆವು. ಮತ್ತು ಪರಮೇಶ್ವರನ ಉಪಾಸನಾ–ಧ್ಯಾನಗಳನ್ನೂ ಕೂಡ ಮಾಡುತ್ತಿದ್ದೆವು. ಅದೇ ಯಾವ ಸರ್ವತ್ರ ವಿಭು=ವ್ಯಾಪಕನಾದ, ದೇವತೆಗಳಿಗೆಲ್ಲಾ ದೇವನಾದ **'ಮಹಾದೇವನು'**, ಪರಮಾತ್ಮನು ಇದ್ದಾನೋ, ಅವನ ಕೃಪೆಯಿಂದ, ನಮಗೆ ಇಲ್ಲಿ ಸಮಸ್ತ ಸಲಕರಣೆಗಳೂ ಸಿಕ್ಕಿವೆ.

"ಮತ್ತು ನೋಡು! ನಾವು ಈ ಸೇತುವನ್ನು ಕಟ್ಟಿ, ಲಂಕೆಗೆ ಹೋಗಿ, ಆ ರಾವಣನನ್ನು ಸಂಹರಿಸಿ, ನಿನ್ನನ್ನು ಕರೆತಂದೆವು."

ಇದರ ಹೊರತು, ಅಲ್ಲಿ ವಾಲ್ಮೀಕಿಯು ಮತ್ತೇನನ್ನೂ ಬರೆಯಲಿಲ್ಲ.†

---

*ಇದರಿಂದ, ರಾಮಚಂದ್ರನ ಕಾಲವು ಎಷ್ಟು ಪ್ರಾಚೀನವೆಂದು ತಿಳಿದುಬರುತ್ತದೆ.—ಸಂ.

†ವಾಲ್ಮೀಕಿರಾಮಾಯಣದಲ್ಲಿ ಬರೆಯಲ್ಪಡದ ಅನ್ಯ ಸಂಗತಿಗಳು ಅನ್ಯ ಕವಿಗಳಿಂದ ಪ್ರಕ್ಷಿಪ್ತವಾಗಿ, ಪುರಾಣವಾಚನ–ಹರಿಕಥೆಗಳ ಮೂಲಕ ಜನರ ಕಿವಿಗಳನ್ನು ಪ್ರವೇಶಿಸಿ, ಹೃದಯದಲ್ಲಿ ಬೇರೂರಿವೆ.—ಸಂ.

## (ಕಾಲಿಯಾಕಂತನ ಚಮತ್ಕಾರದ ಖಂಡನೆ)

ಪ್ರಶ್ನೆ :—

(10) ರಂಗ್ ಹೈ ಕಾಲಿಯಾ ಕಂತ್ ಕೋ।

ಜಿಸ್ ನೇ ಹುಕ್ಕಾ ಪಿಲಾಯಾ ಸಂತ್ ಕೋ॥

ದಕ್ಷಿಣದಲ್ಲಿ ಕಾಲಿಯಾಕಂತನ ಒಂದು ಮೂರ್ತಿಯಿದೆ. ಅದು ಈವರೆಗೂ ಕೂಡ ಗುಡುಗುಡಿ* ಯನ್ನು ಸೇದುತ್ತದೆ!

ಪ್ರತಿಮಾಪೂಜನ ಸುಳ್ಳಾಗಿದ್ದಿದ್ದರೆ, ಈ ಚಮತ್ಕಾರವೂ ಕೂಡ ಸುಳ್ಳಾಗಿ ಹೋದೀತು !

ಉತ್ತರ :—ಸುಳ್ಳು-ಸುಳ್ಳು ! ಇದೆಲ್ಲವೂ ಪೋಪಲೀಲೆಯಾಗಿದೆ.

ಏಕೆಂದರೆ, ಆ ಪ್ರತಿಮೆಯ ಬಾಯಿ ಟೊಳ್ಳಾಗಿರಬಹುದು! ಅದರ ಛಿದ್ರವನ್ನು, ಬೆನ್ನಿನಿಂದ ಹೊರಹೊರಡಿಸಿ, ಗೋಡೆಯ ಅತ್ತಕಡೆ, ಇನ್ನೊಂದು ಮನೆಯಲ್ಲಿ ಕೊಳವೆ ಹೊಂದಿಕೊಂಡಿರಬಹುದು! ಯಾವಾಗ ಪೂಜಾರಿಯು ಗುಡಗುಡಿಯನ್ನು ತುಂಬಿಸಿ, ತೆರೆಯನ್ನೆಳೆದು, ಪ್ರತಿಮೆಯ ಬಾಯಿಗೆ ಕೊಳವೆಯನ್ನಿಟ್ಟು, ಹೊರಗೆ ಬರುತ್ತಿರಬಹುದೋ, ಆಗಲೇ ಹಿಂದಿರುವ ಮನುಷ್ಯನು ತನ್ನ ಬಾಯಿನಿಂದ ಎಳೆಯುತ್ತಿರಬಹುದು! ಆಗ ಗುಡುಗುಡಿ **'ಗಡಗಡ'** ನಾದವನ್ನು ಮಾಡುತ್ತಿರಬಹುದು!

ಮತ್ತೊಂದು ರಂಧ್ರವು [ಪ್ರತಿಮೆಯ] ಮೂಗು ಮತ್ತು ಬಾಯಿಯೊಂದಿಗೆ ಸಂಬಂಧವನ್ನು ಹೊಂದಿರಬಹುದು! ಹಿಂದೆ ಕುಳಿತು, ಯಾವಾಗ ಹಿಂದಿನಿಂದ ಉಸಿರು ಬಿಡುತ್ತಾನೋ, ಆಗ [ಪ್ರತಿಮೆಯ], ಮೂಗು-ಬಾಯಿಗಳ ಛಿದ್ರಗಳಿಂದ ಹೊಗೆಯು ಹೊರಡುತ್ತಿರಬಹುದು!

ಆಗ ಬಹುಮಂದಿ ಮೂಢರನ್ನು, ಧನವೇ ಮೊದಲಾದ ವಸ್ತುಗಳಿಂದ ಸೂರೆ ಮಾಡಿ, ನಿರ್ಧನರನ್ನಾಗಿ ಮಾಡುತ್ತಿರಬಹುದು!

---

*ಹಿಂದೀ ಭಾಷೆಯಲ್ಲಿ ಇದಕ್ಕೆ 'ಹುಕ್ಕಾ', ಎಂದು ಹೆಸರು. ಇದರಲ್ಲಿ ತಂಬಾಕು ಮತ್ತು ನೀರಿನ ಸಂಬಂಧವಿದೆ. ಈ ದುರಭ್ಯಾಸ ಮುಸಲ್ಮಾನ ನವಾಬರಿಂದ ಭಾರತದ ಹಿಂದೂ ಧನಿಕರಲ್ಲಿ ಪ್ರವೇಶಿಸಲ್ಪಟ್ಟಿತು. ನಂತರ, ಸಾಧಾರಣ ರೈತನವರೆಗೆ ! ಇದು ಉತ್ತರ ಭಾರತದಲ್ಲಿ ಅತ್ಯಂತ ಪ್ರಚಲಿತವಾಗಿತ್ತು. ಧನಿಕ ಸ್ತ್ರೀಯರೂ ಇದರ ಸೇವನೆ ಮಾಡುತ್ತಿದ್ದರು. ಈಗ ಇದರ ಪ್ರಚಲನೆ ನಿಂತಿದೆ. ಅನೇಕ ತೀರ್ಥಸ್ಥಾನಗಳು ಎಷ್ಟು ಆಧುನಿಕ, ಎಂಬುದು ಇದರಿಂದ ಅರಿವಾಗುತ್ತದೆ. —ಸಂ.

## (‘ಡಾಕೋರ’ದ ಚಮತ್ಕಾರಗಳ ಖಂಡನೆ)

**ಪ್ರಶ್ನೆ :—**

**(11) ನೋಡಿರಿ ! ಡಾಕೋರದ* ದೇವರ ಪ್ರತಿಮೆ ದ್ವಾರಿಕೆಯಿಂದ ಭಕ್ತನೊಂದಿಗೆ ಹೊರಟುಬಂದಿತು!**

**ಒಂದೂಕಾಲು ಗುಲಗಂಜಿ ತೂಕದ ಚಿನ್ನಕ್ಕೆ ಅದೆಷ್ಟೋ ಮಣದ ಪ್ರತಿಮೆ ಸರಿತೂಗಿತು! ಇದೂ ಚಮತ್ಕಾರವಲ್ಲವೇ ?**

**ಉತ್ತರ :—ಅಲ್ಲ !** ಆ ಭಕ್ತನು ಮೂರ್ತಿಯನ್ನು ಕದ್ದುಕೊಂಡು ಬಂದಿರಬಹುದು!

ಮತ್ತು ಒಂದೂಕಾಲು ಗುಲಗುಂಜಿಯಷ್ಟು ಚಿನ್ನಕ್ಕೆ ಸರಿತೂಗುವ ಪ್ರತಿಮೆಯ ಬಗೆಗೆ ಯಾವನೋ ಭಂಗೀಕೋರನು ಬುರುಡೆ ಹೊಡೆದಿರಬಹುದು !

## (‘ಸೋಮನಾಥ’ದ ಮಂದಿರ ಮತ್ತು ಮಹಮೂದ ಗಜನವೀ)

**ಪ್ರಶ್ನೆ :—**

**(12) ನೋಡಿರಿ ! ಸೋಮನಾಥದ† ದೇವರು ನೆಲದಿಂದ ಮೇಲಕ್ಕೆಯೇ ಇರುತ್ತಿದ್ದನು! ಹಾಗೂ ಭಾರೀ ಚಮತ್ಕಾರವಿತ್ತು!**

**ಇದೂ ಕೂಡ ಸುಳ್ಳುಮಾತೇನು ?**

**ಉತ್ತರ :—ಹೌದು, ಸುಳ್ಳು !**

ಆಲಿಸಿ! ಮೇಲೆ-ಕೆಳಗೆ ಚುಂಬಕ ಶಿಲೆಯನ್ನು ಅಳವಡಿಸಿದ್ದರು. ಅದರ ಆಕರ್ಷಣದಿಂದ, ಆ ಪ್ರತಿಮೆ ಅದರಲ್ಲಿ ನಿಂತಿದ್ದಿತು. ಯಾವಾಗ **‘ಮಹಮೂದ್ ಗಜನವೀ’** ಬಂದು ಹೋರಾಡಿದನೋ, ಆಗ ನಡೆದ ಚಮತ್ಕಾರವೆಂದರೆ, ಅದರ ದೇವಾಲಯ ಒಡೆಯಲ್ಪಟ್ಟಿತು. ಮತ್ತು ಪೂಜಾರಿಗಳಿಗೂ, ಭಕ್ತರಿಗೂ ದುರ್ಗತಿಯುಂಟಾಯಿತು. ಮತ್ತು ಲಕ್ಷಾಂತರ ಜನರ ಸೈನ್ಯ‡ ಹತ್ತು ಸಾವಿರ ಮಂದಿಯ§ ಸೇನೆಯ ಮುಂದೆ ಪಲಾಯನ ಮಾಡಿತು!



---

*ಈ ವೈಷ್ಣವ ತೀರ್ಥಸ್ಥಾನ ಗುಜರಾತಿನಲ್ಲಿದೆ.—ಸಂ.

†ಈ ಪ್ರಸಿದ್ಧ ಶೈವ ತೀರ್ಥಸ್ಥಾನವೂ ಕೂಡ ಗುಜರಾತಿನ ಸೌರಾಷ್ಟ್ರ ಪ್ರದೇಶದಲ್ಲಿದೆ.—ಸಂ.

‡ಹಿಂದುಗಳದು.—ಸಂ.

§ಮ್ಲೇಚ್ಛರದು—ಸಂ.

ಪೋಪ ಪೂಜಾರಿಗಳು ಪೂಜೆ, ಪುರಶ್ಚರಣ, ಸ್ತುತಿ, ಪ್ರಾರ್ಥನೆ ಮಾಡುತ್ತಿದ್ದ ರೇನೆಂದರೆ—

"ಹೇ ಮಹಾದೇವ ! ಈ ಮ್ಲೇಚ್ಛನನ್ನು ನೀನು ಸಾಯಿಸಿಬಿಡು! ನಮ್ಮನ್ನು ರಕ್ಷಿಸು!", ಎಂದು.

ಮತ್ತು ತಮ್ಮ ಮುಗ್ಧ ಶಿಷ್ಯರಾದ ರಾಜರುಗಳಿಗೆ—

"ತಾವು ನಿಶ್ಚಿಂತರಾಗಿರಿ! **ಮಹಾದೇವ**-ಭಗವಾನರು **ಭೈರವ**ನನ್ನು ಅಥವಾ **ವೀರಭದ್ರ**ನನ್ನು ಕಳುಹಿಸಿಕೊಡುವರು. ಅವರು ಎಲ್ಲ ಮ್ಲೇಚ್ಛರನ್ನೂ ಸಾಯಿಸಿ ಬಿಡುವರು. ಅಥವಾ ಕುರುಡರನ್ನಾಗಿ ಮಾಡುವರು. ಇದೀಗ ನಮ್ಮ ದೇವತೆ ಪ್ರಸಿದ್ಧನಾಗುತ್ತಾನೆ. **ಹನುಮಾನ್**, **ದುರ್ಗಾ** ಮತ್ತು **ಭೈರವ**ರು—"ನಾವೆಲ್ಲಾ ಕೆಲಸವನ್ನೂ ಮಾಡಿಬಿಡುವೆವು.", ಎಂದು ಸ್ವಪ್ನದಲ್ಲಿ ಹೇಳಿದ್ದಾರೆ.," ಎಂದು ತಿಳಿಸುತ್ತಾ ಕುಳಿತಿದ್ದರು.

ಆ ಬಡಪಾಯಿಗಳಾದ ಮುಗ್ಧ ರಾಜರುಗಳು ಮತ್ತು ಕ್ಷತ್ರಿಯರು ಪೋಪರ ದುಷ್ಪ್ರೇರಣೆಯಿಂದ ನಂಬಿಕೊಂಡು, ಕುಳಿತರು.

ಎಷ್ಟೋ ಜನ ಜ್ಯೋತಿಷಿ-ಪೋಪರು—

"ಇನ್ನೂ ನಿಮ್ಮ ಪ್ರತ್ಯಾಕ್ರಮಣದ ಮುಹೂರ್ತ ಬಂದಿಲ್ಲ.", ಎಂದರು.

ಒಬ್ಬನು—'ಚಂದ್ರ ಎಂಟನೆಯ ಮನೆಯಲ್ಲಿದ್ದಾನೆ'., ಎಂದನು.

ಮತ್ತೊಬ್ಬನು ಯೋಗಿನಿಯನ್ನು ಮುಂದೆಮಾಡಿ, ತೋರಿಸಿದನು.

ಇದೇ ಮೊದಲಾದ ಭ್ರಷ್ಟ ಪಥಪ್ರದರ್ಶನಗಳಿಗೆ ಸಿಕ್ಕಿಬಿದ್ದರು.

ಯಾವಾಗ ಮ್ಲೇಚ್ಛರ ಸೈನ್ಯ ಬಂದು ಮುತ್ತಿಕೊಂಡಿತೋ, ಆಗ ದುರ್ಗತಿ ಗೀಡಾಗಿ ಓಡಿ ಹೋದರು. ಅದೆಷ್ಟೋ ಜನ ಪೋಪ-ಪೂಜಾರಿಗಳೂ ಮತ್ತು ಅವರ ಶಿಷ್ಯರೂ ಹಿಡಿಯಲ್ಪಟ್ಟರು.

ಪೂಜಾರಿಗಳು ಕೈಮುಗಿದು—

"ಮೂರು ಕೋಟಿ ರೂಪಾಯಿಗಳನ್ನು ತೆಗೆದುಕೊಳ್ಳಿರಿ. ದೇವಾಲಯವನ್ನು ಮತ್ತು ಪ್ರತಿಮೆಯನ್ನು ಒಡೆಯಬೇಡಿ.", ಎಂದೂ ಕೂಡ ಕೇಳಿಕೊಂಡರು.

ಮುಸಲ್ಮಾನರು—

"ನಾವು 'ಬುತ್‌ಪರಸ್ತ್' ಅಲ್ಲ ; ಆದರೆ, 'ಬುತ್‌ಶಿಕನ್', ಎಂದರೆ ಪ್ರತಿಮಾ ಪೂಜಕರಲ್ಲ ; ಆದರೆ, ಪ್ರತಿಮಾಭಂಜಕರಾಗಿದ್ದೇವೆ.", ಎಂದು ಹೇಳಿದರು.

ಶೀಘ್ರವಾಗಿ ತೆರಳಿ, ಮಂದಿರವನ್ನು ಒಡೆದು ಹಾಕಿದರು !

ಯಾವಾಗ ಮೇಲಿನ ಚಾವಣಿ ಮುರಿದುಬಿದ್ದಿತೋ, ಆಗ ಚುಂಬಕಶಿಲೆಯು ಬೇರೆಯಾದ ಕಾರಣ, ಪ್ರತಿಮೆ ಬಿದ್ದು ಹೋಯಿತು. ಪ್ರತಿಮೆಯನ್ನು ಒಡೆದಾಗ, ಹದಿನೆಂಟು ಕೋಟಿ ರೂಪಾಯಿಗಳ ರತ್ನ ಸಿಕ್ಕಿತೆಂದು ಕೇಳಿದ್ದೇವೆ.

ಯಾವಾಗ ಪೂಜಾರಿಗಳಿಗೆ ಮತ್ತು ಪೋಪರಿಗೆ ಚಾವಟಿ ಏಟುಗಳು ಬಿದ್ದವೋ, ಆಗ ರೋದಿಸತೊಡಗಿದರು. [ಆಕ್ರಮಣಕಾರಿಗಳು]—

"ನಿಧಿಯನ್ನು ತೋರಿಸಿರಿ.", ಎಂದರು.

ಪ್ರಹಾರದ ಕಾರಣದಿಂದ, [ಪೋಪರುಗಳು] ಕೂಡಲೇ ತೋರಿಸಿಬಿಟ್ಟರು!

ಆಗ ಸಮಸ್ತ ಕೋಶವನ್ನೂ ಸೂರೆಮಾಡಿ, ಸುಲಿಗೆಮಾಡಿ, ಪೋಪರನ್ನೂ ಅವರ ಶಿಷ್ಯರನ್ನೂ ಗುಲಾಮರನ್ನಾಗಿಯೂ, ಬಿಟ್ಟಿ ಕೆಲಸದ ಕೂಲಿಗಳನ್ನಾಗಿಯೂ ಮಾಡಿ, ಅವರಿಂದ ಹಿಟ್ಟನ್ನು ಬೀಸಿಸಿದರು, ಹುಲ್ಲನ್ನು ಕೆತ್ತಿಸಿದರು, ಮಲ-ಮೂತ್ರ ಮೊದಲಾದುವನ್ನು ಎತ್ತಿಸಿದರು. ಮತ್ತು ತಿನ್ನಲು ಕಡಲೆಯನ್ನು ಕೊಟ್ಟರು.*

**ಅಯ್ಯೋ! ಕಲ್ಲಿನ ಪೂಜೆಯನ್ನು ಮಾಡಿ, ಸರ್ವನಾಶವನ್ನೇತಕ್ಕೆ ಮಾಡಿ ಕೊಂಡಿರಿ ? ಪರಮೇಶ್ವರನಲ್ಲಿ ಭಕ್ತಿಯನ್ನೇತಕ್ಕೆ ಇಡದೇ ಹೋದಿರಿ ? ಮ್ಲೇಚ್ಛರ ಹಲ್ಲು ಮುರಿಯಬೇಕಾಗಿತ್ತಲ್ಲ ! ಮತ್ತು ಸ್ವತಃ ವಿಜಯ ಗಳಿಸಬೇಕಾಗಿತ್ತಲ್ಲ !**

**ನೋಡಿರಿ! ಎಷ್ಟು ಪ್ರತಿಮೆಗಳ [ಪೂಜೆ ಮಾಡಿದ್ದೀರೋ], ಅಷ್ಟು ಮಂದಿ ಶೂರ-ವೀರರ ಪೂಜೆಯನ್ನೇ ಮಾಡಿದ್ದರೂ, ಎಷ್ಟೊಂದು ರಕ್ಷಣೆ ಸಿಕ್ಕುತ್ತಿತ್ತು?**

**ಪೂಜಾರಿಗಳು ಈ ಶಿಲೆಗಳಲ್ಲಿ ಇಷ್ಟು ಭಕ್ತಿಯಿಟ್ಟರು! ಆದರೆ, ಒಂದು ಪ್ರತಿಮೆಯೂ ಕೂಡ [ಆ ಶತ್ರುಗಳ] ತಲೆಯ ಮೇಲೆ ಹಾರಿ ಬಡಿಯಲಿಲ್ಲ!**

**ಯಾವನಾದರೂ ಒಬ್ಬ ಶೂರ-ವೀರ ಪುರುಷನ ಸೇವೆಯನ್ನು, ಪ್ರತಿಮೆಗೆ ಮಾಡಿದ್ದಂತೆ ಮಾಡಿದ್ದಿದ್ದರೆ, ಅವನು ತನ್ನ ಸೇವಕರನ್ನು ಯಥಾಶಕ್ತಿ ರಕ್ಷಿಸುತ್ತಿದ್ದನು. ಮತ್ತು ಆ ಶತ್ರುಗಳನ್ನು ಸದೆಬಡಿಯುತ್ತಿದ್ದನು!**

---

*ಓದುಗರು ಈ ಸಂಬಂಧದ ಭಾರತೀಯ ಇತಿಹಾಸವನ್ನು ಮತ್ತೆ ಅಧ್ಯಯನ ಮಾಡಬೇಕು.—ಸಂ.

## (ದ್ವಾರಕೆಯ ರಣಛೋಡನ ಚಮತ್ಕಾರದ ಖಂಡನೆ)

ಪ್ರಶ್ನೆ:—

(13) ದ್ವಾರಕೆಯ 'ರಣಛೋಡ್'* ದೇವರು ನರಸೀ ಮೆಹತಾನ ಬಳಿ ಹುಂಡಿಯನ್ನು ಕಳುಹಿಸಿದರು! ಹಾಗೂ ಅವನ ಸಾಲವನ್ನು ತೀರಿಸಿಬಿಟ್ಟರು!

ಈ ಮೊದಲಾದ ಮಾತುಗಳೂ ಕೂಡ ಸುಳ್ಳೇನು ?

ಉತ್ತರ:—ಯಾವನೋ ಸಾಹುಕಾರನು ರೂಪಾಯಿಗಳನ್ನು ಕೊಟ್ಟಿರಬಹುದು! ಯಾವನೋ—'ಶ್ರೀಕೃಷ್ಣನು ಕಳುಹಿಸಿದನು', ಎಂದು ಸುಳ್ಳು ಸುದ್ದಿಯನ್ನು ಹಾರಿಸಿರಬಹುದು!

---

*ಶ್ರೀಕೃಷ್ಣನು ತನ್ನ ಸೋದರ ಮಾವನಾದ ಕಂಸನನ್ನು ಸಂಹರಿಸಿ, ರಾಜ್ಯವನ್ನು ಕಂಸನ ತಂದೆಯಾದ ಉಗ್ರಸೇನನಿಗೆ ವಾಪಸು ಕೊಟ್ಟಮೇಲೆ, ಇದರಿಂದ ಕ್ರುದ್ಧನಾಗಿ, ಕಂಸನ ಮಾವನಾದ ಮಹಾಶಕ್ತಿಶಾಲೀ ಸಮ್ರಾಟ್ ಮಗಧ ನರೇಶ ಜರಾಸಂಧನು ಮಥುರೆಯ ಮೇಲೆ ದಂಡೆತ್ತಿ ಬಂದನು. ಯುದ್ಧದಲ್ಲಿ ಕೃಷ್ಣನಿಗೆ ಜಯ ಸಿಗದಿದ್ದ ಕಾರಣ, ಜರಾಸಂಧನ ಆಧೀನತೆಯನ್ನು ಸ್ವೀಕರಿಸಿ, ಅವನೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಮತ್ತೆ, ಯಾವಾಗ-ಯಾವಾಗ ಮಥುರಾ ರಾಜ್ಯ ತಲೆ ಎತ್ತುತ್ತಿತ್ತೋ, ಆಗ-ಆಗ ಜರಾಸಂಧನು ಮುತ್ತಿಗೆ ಹಾಕಿ, ಧೀಮಾರಿ ಹಾಕುತ್ತಿದ್ದನು. ಹೀಗೆ ಹದಿನಾರು ಸಲ ನಡೆಯಿತು. ಇಷ್ಟರತನಕ ಎದುರಿಸಿದ ಕೃಷ್ಣನ ಬಲ ಈಗ ಉಡುಗಿಹೋಯಿತು. ಆಗ ಕೊನೆಯದಾಗಿ, ಹದಿನೇಳನೆಯ ಸಲ ಜರಾಸಂಧನು ದಂಡೆತ್ತಿ ಬಂದು, ಕೃಷ್ಣನ ಸೇನೆಯನ್ನು ಸೋಲಿಸಿ, ಮಥುರೆಯನ್ನು ವಶಪಡಿಸಿಕೊಂಡನು.

ಕೃಷ್ಣನು ತನ್ನ ಉಳಿದ ಬಂಧು-ಭಾಂಧವರ, ಮತ್ತು ಸೇನೆಯೊಡನೆ ಮಥುರೆಯನ್ನು ತ್ಯಜಿಸಿ, ಪ್ರಾಣ ಉಳಿಸಿಕೊಂಡು, ದಕ್ಷಿಣ-ಪಶ್ಚಿಮ ದಿಕ್ಕಿನ ಕಡೆಗೆ ಓಡಿದನು. ಜರಾಸಂಧನ ಸೇನೆ ಅವನ ಬೆನ್ನಟ್ಟಿತು. ಕೊನೆಗೆ ಕೃಷ್ಣನು ಭಾರತದ ಭೂಪ್ರದೇಶವನ್ನು ದಾಟಿ, ಸೌರಾಷ್ಟ್ರದ ಆಚೆ, ಸಮುದ್ರದ ದ್ವೀಪವೊಂದರಲ್ಲಿ ಬಿಡಾರ ಬಿಟ್ಟನು. ಅಲ್ಲೇ ಯಾದವರ ರಾಜಧಾನಿ 'ದ್ವಾರಕಾ' ಹುಟ್ಟಿ, ಮೆರೆಯಿತು.

ಹೀಗೆ,ಯುದ್ಧದಿಂದ ಪಲಾಯನ ಮಾಡಿದುದರಿಂದ, ಶ್ರೀಕೃಷ್ಣನಿಗೆ 'ರಣ-ಛೋಡ್ ಜೀ', ಎಂದು ಸೌರಾಷ್ಟ್ರದಲ್ಲಿ ಪ್ರಸಿದ್ಧ ಹೆಸರಾಯಿತು. ಕೃಷ್ಣನನ್ನು ಪರಮಾತ್ಮನೆಂದು ಅಂಗೀಕರಿಸುವವರು ಈ ಐತಿಹಾಸಿಕ ಘಟನೆಯ ಬಗ್ಗೆ ಗಮನವೀಯಬೇಕು!

ನಂತರ, ಕೃಷ್ಣನು ಯುಧಿಷ್ಠಿರನ ರಾಜಸೂಯಯಾಗದ ಸಂದರ್ಭದಲ್ಲಿ ಭೀಮನಿಂದ ಜರಾಸಂಧನನ್ನು ಕೊಲ್ಲಿಸಿ, ತನಗಾದ ಅಪಮಾನವನ್ನು ಒರೆಸಿಹಾಕಿದನು.—ಸಂ.

ಯಾವಾಗ [ವಿಕ್ರಮ] ಸಂವತ್ 1914ರ* ವರ್ಷದಲ್ಲಿ ತೋಪುಗಳಿಂದ, ಆಂಗ್ಲರು ದೇವಾಲಯ-ಪ್ರತಿಮೆಗಳನ್ನು ಹಾರಿಸಿಬಿಟ್ಟಿದ್ದರೋ, ಆಗ ಪ್ರತಿಮೆ ಎಲ್ಲಿಗೆ ಹೋಗಿದ್ದಿತು ?

ಹಾಗೆ ನೋಡಿದರೆ, ಬಾಘೇರ ಜನರು ಎಷ್ಟೋ ವೀರತ್ವವನ್ನು ತೋರಿಸಿದರು, ಹೋರಾಡಿದರು ಮತ್ತು ಶತ್ರುಗಳನ್ನು ಕೊಂದರು! ಆದರೆ, ಪ್ರತಿಮೆ ಒಂದು ನೊಣದ ಕಾಲನ್ನೂ ಕೂಡ ಮುರಿಯಲು ಸಮರ್ಥವಾಗಲಿಲ್ಲ!

ಶ್ರೀಕೃಷ್ಣನಂತಹವನು ಯಾವನಾದರೂ ಇದ್ದಿದ್ದರೆ, ಇವರನ್ನು† ನುಚ್ಚು ನೂರಾಗಿ ಮಾಡುತ್ತಿದ್ದನು. ಮತ್ತು ಇವರು† ಪರದಾಡುತ್ತಿದ್ದರು.

ಅಲ್ಲಾ! ಯಾವನ ರಕ್ಷಕನೇ ಪೆಟ್ಟನ್ನು ತಿನ್ನುತ್ತಾನೋ, ಅವನ ಶರಣಾಗತರು ಏಕೆ ಚಚ್ಚಲ್ಪಡುವುದಿಲ್ಲ, ಎಂಬುದನ್ನಾದರೂ ಹೇಳಿರಿ!

## (‘ಜ್ವಾಲಾಮುಖಿ’ಯ ಚಮತ್ಕಾರದ ಖಂಡನೆ)

ಪ್ರಶ್ನೆ:—

(14) ‘ಜ್ವಾಲಾಮುಖಿ’‡ಯಂತೂ ಪ್ರತ್ಯಕ್ಷ ದೇವಿಯೇ ಆಗಿದ್ದಾಳೆ! ಎಲ್ಲವನ್ನೂ ತಿಂದುಬಿಡುತ್ತಾಳೆ! ಮತ್ತು ಪ್ರಸಾದವನ್ನು ಕೊಟ್ಟರೆ, ಅರ್ಧವನ್ನು ತಿಂದುಬಿಡುತ್ತಾಳೆ; ಮತ್ತು ಅರ್ಧವನ್ನು ಬಿಟ್ಟುಬಿಡುತ್ತಾಳೆ!

ಮುಸಲ್ಮಾನ ಬಾದಶಾಹರು ಅವಳ ಮೇಲೆ ನೀರಿನ ಕಾಲುವೆ ಹರಿಸಿದ್ದರು. ಮತ್ತು ಕಬ್ಬಿಣದ ಕಾವಲಿಗಳನ್ನು ಮುಚ್ಚಿದ್ದರು. ಆದರೂ ಜ್ವಾಲೆ ಆರಲಿಲ್ಲ! ಮತ್ತು ನಿಲ್ಲಲೂ ಇಲ್ಲ!

## (‘ಹಿಂಗಲಾಜ’ದ ಚಮತ್ಕಾರದ ಖಂಡನೆ)

(15) ಹಾಗೆಯೇ, ‘ಹಿಂಗಲಾಜ’ ದೇವತೆಯೂ ಕೂಡ ನಡುರಾತ್ರಿ ಸವಾರಿ ಮಾಡುತ್ತಾ ಪರ್ವತದ ಮೇಲೆ ಕಾಣಿಸಿಕೊಳ್ಳುತ್ತಾಳೆ! ಪರ್ವತವನ್ನು ಗುಡುಗಿಸುತ್ತಾಳೆ!

ಚಂದ್ರಕೂಪ ಮಾತನಾಡುತ್ತದೆ!

---

*ಎಂದರೆ, 1857ನೇ ಇಸವಿಯ ಭಾರತೀಯ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ. ಈ ಸಂಗ್ರಾಮದ ಜೊತೆ ಮಹರ್ಷಿ ದಯಾನಂದರ ಸಂಬಂಧ ಅನ್ವೇಷಣೆಯಲ್ಲಿದೆ.—ಸಂ.

†ಎಂದರೆ, ಆಂಗ್ಲರು.—ಸಂ.

‡ಜ್ವಾಲಾಮುಖೀ ಮತ್ತು ಹಿಂಗಲಾಜ ಕ್ಷೇತ್ರಗಳು ಹಿಮಾಚಲ ಪ್ರದೇಶದ ಕಾಂಗಡಾ ಜಿಲ್ಲೆಯಲ್ಲಿ ವಾಮಮಾರ್ಗಿಗಳ ತೀರ್ಥಸ್ಥಾನಗಳಾಗಿವೆ.—ಸಂ.

**ಮತ್ತು ಯೋನಿಯಂತ್ರದಿಂದ ನುಸಿದು ಬಂದರೆ, ಪುನರ್ಜನ್ಮ ಬರುವುದಿಲ್ಲ!**

**ಹವಳದ ಸರ ಕಟ್ಟಿಕೊಳ್ಳುವುದರಿಂದ, ಪೂರ್ಣ ಮಹಾಪುರುಷನೆನಿಸುತ್ತಾನೆ! ಎಂದಿನವರೆಗೆ ಹಿಂಗಲಾಜಿಗೆ ಹೋಗಿ ಬರುವುದಿಲ್ಲವೋ, ಅಂದಿನವರೆಗೆ ಅರ್ಧ ಮಹಾಪುರುಷನೆನಿಸುತ್ತಾನೆ!**

**ಈ ಮೊದಲಾದ ಮಾತುಗಳೆಲ್ಲಾ ಒಪ್ಪಲರ್ಹವಲ್ಲವೇನು ?**

ಉತ್ತರ:—ಇಲ್ಲ ! ಏಕೆಂದರೆ, ಆ ಜ್ವಾಲಾಮುಖಿಯು, ಪರ್ವತದಿಂದ ಹೊರಡುವ ಬೆಂಕಿ ಮಾತ್ರವಾಗಿದೆ. ಅದರಲ್ಲಿ ಪೂಜಾರಿಗಳ ವಿಚಿತ್ರವಾದ ಲೀಲೆಯಿದೆ! ಹೇಗೆ ಒಗ್ಗರಣೆಯ ತುಪ್ಪದ ಸೌಟಿನಲ್ಲಿ ಉರಿ ಏಳುತ್ತದೋ; ಬೇರೆ ಮಾಡುವುದರಿಂದ, ಅಥವಾ ಊದುವುದರಿಂದ ಆರಿ ಹೋಗುತ್ತದೋ; ಸ್ವಲ್ಪ ತುಪ್ಪವನ್ನು ಹೀರಿ, ಉಳಿದುದನ್ನು ಬಿಟ್ಟುಬಿಡುತ್ತದೋ, ಹಾಗೆಯೇ ಅಲ್ಲಿಯೂ ನಡೆಯುತ್ತದೆ! ಉದಾಹರಣೆಗೆ—

ಒಲೆಯ ಉರಿಯಲ್ಲಿ ಏನು ಹಾಕಲ್ಪಟ್ಟರೂ, ಎಲ್ಲವೂ ಬೂದಿಯಾಗಿ ಹೋಗುವುದು. ಕಾಡಿನಲ್ಲಿ ಅಥವಾ ಮನೆಯಲ್ಲಿ [ಬೆಂಕಿ] ಹೊತ್ತಿಕೊಳ್ಳುವುದರಿಂದ, [ಅದು] ಎಲ್ಲವನ್ನೂ ಕಬಳಿಸುವುದಿಲ್ಲವೇನು ? ಇದಕ್ಕಿಂತ ಅಲ್ಲಿ ಏನು ವಿಶೇಷವಿದೆ ?

ಒಂದು ದೇವಾಲಯ, ಕುಂಡ ಮತ್ತು ಅಲ್ಲಿ–ಇಲ್ಲಿ ನಲ್ಲಿಗಳ ಪ್ರಸರಣವನ್ನುಳಿದು, ಹಿಂಗಲಾಜಿನಲ್ಲಿ ಯಾವ ಸವಾರಿಯೂ ಆಗುವುದಿಲ್ಲ! ಏನೇನು ನಡೆಯುತ್ತದೋ, ಅದೆಲ್ಲಾ [ಪೋಪ]–ಪೂಜಾರಿಗಳ ಲೀಲೆಯಿಂದ! ಮತ್ತೆ ಏನೂ ಇಲ್ಲ !

ಒಂದು ನೀರಿನ, ಮತ್ತು ಕೆಸರಿನ ಕುಂಡವನ್ನು ನಿರ್ಮಿಸಿಟ್ಟಿದ್ದಾರೆ. ಅದರ ಕೆಳಗಿನಿಂದ ನೀರಿನ ಗುಳ್ಳೆಗಳು ಏಳುತ್ತವೆ. ಮೂಢರು ಅದನ್ನು **'ಯಾತ್ರಾಸಾಫಲ್ಯ'**, ಎಂದು ತಿಳಿಯುತ್ತಾರೆ!

**'ಯೋನಿಯಂತ್ರ'**ವನ್ನು ಪೋಪ ಮಹಾಶಯರು ಧನವನ್ನು ಸೆಳೆಯಲು ಮಾಡಿಟ್ಟಿದ್ದಾರೆ!

ಮತ್ತು **'ಹವಳದ ಸರಗಳೂ'** ಕೂಡ ಅದೇ ರೀತಿ ಪೋಪ–ಲೀಲೆಯದಾಗಿವೆ. ಅದರಿಂದ, ಮಹಾಪುರುಷನಾಗುವುದಾದರೆ, ಒಂದು ಪಶುವಿನ ಮೇಲೆ ಹವಳದ ಹೊರೆಯನ್ನು ಹೊರೆಸಿದರೆ, ಅದು ಮಹಾಪುರುಷನಾಗಿ ಹೋಗುತ್ತದೇನು?

**ಮಹಾಪುರುಷನಂತೂ, ಅತ್ಯುತ್ತಮವಾದ ಧರ್ಮಯುಕ್ತ ಪುರುಷಾರ್ಥದಿಂದ ಮಾತ್ರ ಆಗುತ್ತಾನೆ.**

## (ಅಮೃತಸರ, ರೇವಾಲಸರ, ಅಮರನಾಥ ಮೊದಲಾದ ಚಮತ್ಕಾರಗಳ ಖಂಡನೆ)

ಪ್ರಶ್ನೆ:—

(16) ಅಮೃತಸರದ ಕೊಳವು ಅಮೃತರೂಪವಾಗಿದೆ!

(17) ಒಂದು ರೀತೆಯ* ಫಲ ಅರ್ಧ ಸಿಹಿಯಾಗಿರುತ್ತದೆ! ಮತ್ತು

(18) ಒಂದು ಗೋಡೆ ಓಲಿದೆ; ಆದರೆ, ಬೀಳುವುದಿಲ್ಲ!†

(19) 'ರೇವಾಲಸರ'ದಲ್ಲಿ ದೋಣಿಗಳು ತೇಲುತ್ತವೆ!

(20) 'ಅಮರನಾಥ'ದಲ್ಲಿ ತನ್ನಷ್ಟಕ್ಕೆ ತಾವೇ ಲಿಂಗಗಳು ಉದ್ಭವಿಸುತ್ತವೆ!

(21) 'ಹಿಮಾಲಯ'ದಿಂದ ಪಾರಿವಾಳಗಳ ಜೋಡಿಗಳು ಬಂದು, ಎಲ್ಲರಿಗೂ ದರ್ಶನವಿತ್ತು, ಹೊರಟುಹೊಗುತ್ತವೆ!

ಏನು ? ಇದೂ ಕೂಡ ಒಪ್ಪಲು ಯೋಗ್ಯವಾದುದಲ್ಲವೇ ?

ಉತ್ತರ:—ಅಲ್ಲ ! ಆ ಕೊಳವು ಹೆಸರಿಗೆ ಮಾತ್ರ 'ಅಮೃತಸರ'ವಾಗಿದೆ. ಯಾವಾಗಲೋ ಕಾಡಿನಲ್ಲಿ ಅದು ಇದ್ದಾಗ, ಅದರ ನೀರು ಸ್ವಚ್ಛವಾಗಿದ್ದಿರಬಹುದು! ಅಮೃತವಾಗಿದ್ದಿದ್ದರೆ, ಪೌರಾಣಿಕರ ಗ್ರಹಿಕೆಯಂತೆ, ಯಾವನಾದರೂ ಸಾಯುತ್ತಾನೆ ಏತಕ್ಕೆ ?

ಗೋಡೆಯ ರಚನೆಯೇ ಓಲಿರುವಂತೆ; ಆದರೂ ಬೀಳದಂತೆ ಆಗಿರಬಹುದು!

ಅಂಟವಾಳದ ಹಣ್ಣುಗಳು ಅರ್ಧ ಸಿಹಿಯಾಗಿರುವುದು ಕಸಿಮಾಡಿರುವುದರ ಪರಿಣಾಮವಾಗಿರಬಹುದು! ಇಲ್ಲವೇ ಬುರುಡೆಯಾಗಿರಬಹುದು !

---

*ಅಂಟವಾಳ.—ಸಂ.

†ಇಂತಹ ಗೋಡೆ ಪಂಜಾಬಿನ ಗುರುದಾಸಪುರದಲ್ಲಿದೆ. ಇದರ ಮೇಲೆ ಕುಳಿತು, ಅಲ್ಲಾಡಿಸಿದರೆ ಬಾಗುತ್ತದೆ.—ಯು.ಮೀ.

ಹೀಗೆಯೇ ಅಹಮದಾಬಾದಿನಲ್ಲಿ ಮಸೀದಿಯೊಂದರ 'ಮೀನಾರ'ನ್ನು (ಒಳಗೆ ಮೆಟ್ಟಿಲುಗಳಿರುವ ಕಂಬ) ಹತ್ತಿ, ಜಗ್ಗಿಸಿದರೆ, ಅಲ್ಲಾಡುತ್ತದೆ. ಇದೇ ರೀತಿ, ಎಲ್ಲ RCCಯ ಉಚ್ಚ ಭವನಗಳೂ ಅಲ್ಲಾಡುತ್ತವೆ. ಇವುಗಳ ಸ್ಪಂದನದ ಅನುಭವ ತಜ್ಞರಾದ ಇಂಜಿನಿಯರುಗಳಿಗೆ ಮಾತ್ರ ಆಗುತ್ತದೆ; ಎಲ್ಲರಿಗಲ್ಲ. ಆದ್ದರಿಂದಲೇ, ಇಂತಹ ಭವನಗಳು ಬಿರುಗಾಳಿ, ಭೂಕಂಪಗಳನ್ನು ತಡೆದುಕೊಳ್ಳುತ್ತವೆ.—ಸಂ.

ರೇವಾಲಸರದಲ್ಲಿ ದೋಣಿಗಳ ತೇಲುವಿಕೆಯಲ್ಲಿ ಏನಾದರೂ ರಚನಾಕೌಶಲವಿರಬಹುದು !

ಅಮರನಾಥದಲ್ಲಿ ಮಂಜಿನಗಡ್ಡೆಯ ಪರ್ವತಗಳೇ ರೂಪುಗೊಳ್ಳುವಾಗ, ಜಲವು ಘನೀಭೂತವಾಗಿ, ಚಿಕ್ಕ ಲಿಂಗವಾಗುವುದು ಯಾವ ಆಶ್ಚರ್ಯ ?

ಪಾರಿವಾಳಗಳ ಜೋಡಿಗಳು ಪಾಲಿಸಲ್ಪಟ್ಟುದಿರಬಹುದು ! ಪರ್ವತದ ಮರೆಯಿಂದ ಮನುಷ್ಯರು ಹಾರಿಸಿಬಿಡುತ್ತಿರಬಹುದು ! ತೋರಿಸಿ, ದುಡ್ಡು ಕಸಿಯುತ್ತಿರಬಹುದು !

## (‘ಹರ ಕೀ ಪೈಡೀ’ ದೇವಪ್ರಯಾಗ, ಬದರೀನಾರಾಯಣ ಮೊದಲಾದುವುಗಳ ಸಮೀಕ್ಷೆ)

ಪ್ರಶ್ನೆ:—

(22) ‘ಹರದ್ವಾರ’* ಸ್ವರ್ಗದ ದ್ವಾರವಾಗಿದೆ!

(23) ‘ಹರನ ಸೋಪಾನ’ದಲ್ಲಿ ಮಿಂದರೆ, ಪಾಪಗಳು ತೊಲಗಿ ಹೋಗುತ್ತವೆ!

(24) ಮತ್ತು ‘ತಪೋವನ’ದಲ್ಲಿರುವುದರಿಂದ, [ಮಾನವನು] ತಪಸ್ವಿಯಾಗುತ್ತಾನೆ!

(25) ‘ದೇವಪ್ರಯಾಗ’,

(26) ಗಂಗೋತ್ರಿಯಲ್ಲಿ ‘ಗೋಮುಖ’,

(27) ಉತ್ತರ ಕಾಶಿಯಲ್ಲಿ ‘ಗುಪ್ತಕಾಶಿ’,

(28) ತ್ರಿಯುಗೀ–ನಾರಾಯಣ, ಎಲ್ಲೆಡೆಯೂ ದರ್ಶನವಾಗುತ್ತದೆ!

(29) ‘ಕೇದಾರ’,

(30) ಮತ್ತು ಬದರೀನಾರಾಯಣನ ಪೂಜೆಯನ್ನು ಆರು ತಿಂಗಳುಗಳವರೆಗೆ ಮಾನವರೂ, ಮತ್ತು ಆರು ತಿಂಗಳುಗಳವರೆಗೆ ದೇವತೆಗಳೂ ಮಾಡುತ್ತಾರೆ!

*ಇದನ್ನು ‘ಹರಿದ್ವಾರ’, ಎಂದೂ ಕರೆಯುತ್ತಾರೆ. ‘ಹರನ’ದ್ವಾರವೂ, ‘ಹರಿ’ಯ ದ್ವಾರವೂ ಒಂದೇ ಹೇಗಾಯಿತು?—ಸಂ.

(31) ಮಹಾದೇವನ ಮುಖವು ನೇಪಾಳದಲ್ಲಿ 'ಪಶುಪತಿ' [ನಾಥಮಂದಿರ] ದಲ್ಲಿಯೂ,

(32) ಪೃಷ್ಠಗಳು 'ಕೇದಾರದ'ಲ್ಲಿಯೂ,

(33) ಮೊಣಕಾಲುಗಳು 'ತುಂಗನಾಥ'ದಲ್ಲಿಯೂ, ಮತ್ತು ಪಾದಗಳು

(34) 'ಅಮರನಾಥ'ದಲ್ಲಿಯೂ ಇವೆ !

ಇವುಗಳ ದರ್ಶನ, ಸ್ಪರ್ಶನ; ಮತ್ತು ಸ್ನಾನ ಮಾಡುವುದರಿಂದ ಮುಕ್ತಿ ಪ್ರಾಪ್ತವಾಗುತ್ತದೆ !

(35) ಅಲ್ಲಿ 'ಕೇದಾರ' ಮತ್ತು 'ಬದರಿ'ಯಿಂದ ಸ್ವರ್ಗಕ್ಕೆ ಹೋಗಬಹುದು !

ಈ ಮೊದಲಾದ ಮಾತುಗಳು ಹೇಗಿವೆ ?

ಉತ್ತರ:—'ಹರದ್ವಾರ'ವು ಉತ್ತರದಿಂದ ಪರ್ವತಗಳಿಗೆ ಹೋಗುವ ಒಂದು ಮಾರ್ಗದ ಪ್ರಾರಂಭವಾಗಿದೆ.

'ಹರನ ಸೋಪಾನ'ಗಳು ಸ್ನಾನದ ಸಲುವಾಗಿ ನಿರ್ಮಿಸಿರುವ, ಒಂದು ಕುಂಡದ ಮೆಟ್ಟಲುಗಳಾಗಿವೆ. ನಿಜವಾಗಿ ಹೇಳುವಿರಾದರೆ, 'ಹಾಡ್ ಪೈಡೀ'* ಆಗಿದೆ. ಏಕೆಂದರೆ, ದೇಶ-ದೇಶಾಂತರಗಳ ಮೃತಕರ ಮೂಳೆಗಳು ಅದರಲ್ಲಿ ಬೀಳುತ್ತಾ ಇರುತ್ತವೆ. ಫಲಗಳನ್ನು ಅನುಭವಿಸದೇ, ಪಾಪಗಳು ಎಂದಿಗೂ, ಎಲ್ಲಿಯೂ ತೀರಲಾರವು; ಅಥವಾ ಕಳೆದು ಹೋಗುವುದಿಲ್ಲ!

'ತಪೋವನ' ಯಾವಾಗ ಆಗಿದ್ದಿತೋ, ಆಗ ಆಗಿದ್ದಿರಬಹುದು. ಈಗಲಂತೂ ಅದು 'ಭಿಕ್ಷುಕವನ'ವಾಗಿದೆ. ತಪೋವನಕ್ಕೆ ಹೋಗುವುದರಿಂದ, ಅಲ್ಲಿ ಇರುವುದರಿಂದ, ತಪಸ್ಸಾಗುವುದಿಲ್ಲ. ಏಕೆಂದರೆ, ತಪಸ್ಸಂತೂ ಅನುಷ್ಠಾನದಿಂದ ಆಗುತ್ತದೆ. ಏಕೆಂದರೆ, ಅಲ್ಲಿ ಸುಳ್ಳನ್ನಾಡುವ ವ್ಯಾಪಾರಿಗಳೂ ಬಹುಮಂದಿಗಳಿದ್ದಾರೆ.

"ಹಿಮವತಃ ಪ್ರಭವತಿ ಗಂಗಾ". ಪರ್ವತದ ಮೇಲಿನಿಂದ ನೀರು ಬೀಳುತ್ತದೆ.

'ಗೋಮುಖ'ದ ಆಕಾರವನ್ನು ದುಡ್ಡನ್ನು ಸೆಳೆಯುವವರು ನಿರ್ಮಿಸಿರಬಹುದು! ಮತ್ತು ಆ ಪರ್ವತವೇ ಪೋಪರ ಸ್ವರ್ಗವಾಗಿದೆ!

*ಮೂಳೆಯ ಸೋಪಾನ—ಅನು.

ಅಲ್ಲಿ **'ಉತ್ತರಕಾಶಿ'** ಮೊದಲಾದ ಸ್ಥಾನಗಳು ಧ್ಯಾನ ಮಾಡುವವರಿಗೆ ಒಳ್ಳೆಯವಾಗಿವೆ. ಆದರೆ, ಅಂಗಡಿಯವರಿಗೆ ಅಲ್ಲಿಯೂ ಅಂಗಡಿಕಾರತನವೇ ಇದೆ!

**'ದೇವಪ್ರಯಾಗ'** ಪುರಾಣದ ಬುರುಡೆಗಳ ಲೀಲೆಯಾಗಿದೆ. ಎಂದರೆ—"ಎಲ್ಲಿ **ಅಲಖನಂದಾ** ಮತ್ತು **ಗಂಗಾ** ಸೇರುತ್ತವೋ, ಅಲ್ಲಿ. ಅದೇ ಕಾರಣದಿಂದ, ದೇವತೆಗಳು ವಾಸಿಸುತ್ತಾರೆ !", ಎಂದು ಇಂತಹ ಬುರುಡೆಗಳನ್ನು ಹೊಡೆಯದಿದ್ದರೆ, ಅಲ್ಲಿ ಹೋಗುವವನಾವನು ? ಮತ್ತು ದುಡ್ಡನ್ನು ಯಾವನು ಕೊಡಬೇಕು ?

**'ಗುಪ್ತಕಾಶಿ'**ಯಂತೂ ಅಲ್ಲ ; ಅದು ಪ್ರಸಿದ್ಧಕಾಶಿಯೇ ಆಗಿದೆ!

**ಮೂರು ಯುಗಗಳ*** **ಯಜ್ಞಾಗ್ನಿ**ಯೇನೋ ಕಾಣಿಸುವುದಿಲ್ಲ. ಆದರೆ, ಖಾಖಿಗಳ ಉರಿಯುವ ಕೊಳ್ಳಿ, ಮತ್ತು ಪಾರ್ಸಿಗಳ **'ಅಗ್ಯಾರಿ'** ಸರ್ವದಾ ಉರಿಯುತ್ತಿರುವಂತೆ, ಪೋಪರುಗಳ ಹತ್ತು-ಇಪ್ಪತ್ತು ಪೀಳಿಗೆಗಳದಿರಬಹುದು!

ಪರ್ವತಗಳ ಒಳಗೆ **ಊಷ್ಮಾ** ಎಂದರೆ ಕಾವು ಇರುತ್ತದೆ. ಅದರಲ್ಲಿ ಕಾದು ನೀರು ಬರುತ್ತದೆ. **'ತಪ್ತ ಕುಂಡವೂ'** ಇದೆ! ಅದರ ಬಳಿ, ಇನ್ನೊಂದು ಕುಂಡದಲ್ಲಿ ಮೇಲಣ ನೀರು, ಅಥವಾ ಎಲ್ಲಿ ಕಾವಿಲ್ಲವೋ, ಅಲ್ಲಿನದು ಬರುತ್ತದೆ. ಈ ಕಾರಣದಿಂದ, ಅದು ತಣ್ಣಗಿರುತ್ತದೆ.

**'ಕೇದಾರ'**ದ **ಸ್ಥಳ—ಆ ಭೂಮಿ ಬಹಳ ಉತ್ತಮವಾಗಿದೆ.** ಆದರೆ, ಅಲ್ಲಿಯೂ ಕೂಡ, ಗಟ್ಟಿಯಾಗಿರುವ ಒಂದು ಕಲ್ಲಿನ ಮೇಲೆ ಪೂಜಾರಿಗಳು ಅಥವಾ ಅವರ ಶಿಷ್ಯರು ದೇವಾಲಯವನ್ನು ನಿರ್ಮಿಸಿದ್ದಾರೆ. ಅಲ್ಲಿ ಮಹಂತರೂ, ಪೂಜಾರಿಗಳೂ, ಪಂಡಾಗಳೂ **'ಕಣ್ಣಿದ್ದೂ ಕುರುಡರೂ ; ಹಣದ ಗಂಟಿನ ಬಂಟರೂ'** ಆದವರಿಂದ ಪದಾರ್ಥಗಳನ್ನು ಕಸಿದು, ವಿಷಯಸುಖವನ್ನು ಸವಿಯುತ್ತಾರೆ.

ಹಾಗೆಯೇ, **'ಬದರೀನಾರಾಯಣ'**ದಲ್ಲಿ ಠಕ್ಕ ವಿದ್ಯೆಯವರು ಬಹುಮಂದಿ ಕುಳಿತಿದ್ದಾರೆ. **'ರಾವಲ್‌ಜೀ'** ಅಲ್ಲಿನ ಪ್ರಮುಖರಾಗಿರುತ್ತಾರೆ. ಒಬ್ಬಳು ಸ್ತ್ರೀಯನ್ನುಳಿದು, ಅನೇಕ ಸ್ತ್ರೀಯರನ್ನು ಗಂಟು ಹಾಕಿಕೊಂಡಿದ್ದಾರೆ!

**'ಪಶುಪತಿ'** ಒಂದು ದೇವಾಲಯ. [ಅಲ್ಲಿ ಐದು ಮುಖಗಳ] ಒಂದು ಪ್ರತಿಮೆಗೆ **'ಪಂಚಮುಖಿ'**, ಎಂದು ಹೆಸರಿಟ್ಟಿದ್ದಾರೆ.

---

*ತ್ರಿಯುಗೀ-ನಾರಾಯಣದಲ್ಲಿ—ಯು. ಮೀ.

ಯಾವಾಗ ಯಾವನೂ ಕೇಳುವುದಿಲ್ಲವೋ, ಆಗಲೇ ಇಂತಹ ಲೀಲೆ ಪ್ರಬಲ ವಾಗುತ್ತದೆ. ಆದರೆ, ತೀರ್ಥದ ಧೂರ್ತ ಜನರಂತೆ, ಪಾರ್ವತ್ಯ ಜನರು ಧನಾಪಹಾರಿ ಗಳಾಗಿರುವುದಿಲ್ಲ! ಅಲ್ಲಿನ ಭೂಮಿ ಬಹಳ ರಮ್ಯ ಮತ್ತು ಪವಿತ್ರವಾಗಿರುತ್ತದೆ.

## (ವಿಂಧ್ಯಾಚಲ-ಪ್ರಯಾಗ-
## ಅಯೋಧ್ಯಾ-ಮಥುರಾಗಳ ಮಾಹಾತ್ಮ್ಯೆಯ ಖಂಡನೆ)

ಪ್ರಶ್ನೆ:—

(36) ವಿಂಧ್ಯಾಚಲದಲ್ಲಿ 'ವಿಂಧ್ಯೇಶ್ವರೀ ಅಷ್ಟಭುಜಾ ಕಾಳಿಯು' ಸತ್ಯವಾಗಿ ದ್ದಾಳೆ!

ವಿಂಧ್ಯೇಶ್ವರೀ ಮೂರು ಕಾಲದಲ್ಲಿ ಮೂರು ರೂಪಗಳನ್ನು ಪರಿವರ್ತಿಸುತ್ತಾಳೆ!

ಮತ್ತು ಅವಳ ಅಂಗಳದಲ್ಲಿ ಒಂದೇ ಒಂದು ನೊಣವೂ ಕೂಡ ಇರುವುದಿಲ್ಲ!

(37) 'ಪ್ರಯಾಗ'ವು ತೀರ್ಥರಾಜ ! ಅಲ್ಲಿ ತಲೆ ಬೋಳಿಸಿಕೊಂಡರೆ, ಸಿದ್ಧಿ ಯಾಗುತ್ತದೆ!

(38) 'ಗಂಗಾ-ಯಮುನಾ ಸಂಗಮ'ದಲ್ಲಿ ಸ್ನಾನ ಮಾಡುವುದರಿಂದ, ಇಷ್ಟ ಸಿದ್ಧಿಯಾಗುತ್ತದೆ!

(39) ಹಾಗೆಯೇ, 'ಅಯೋಧ್ಯೆ' ಅನೇಕ ಸಾರಿ ಹಾರಿ, ಸಮಸ್ತ ವಸತಿ ಯೊಂದಿಗೆ ಸ್ವರ್ಗಕ್ಕೆ ಹೋಗಿ ಬಂದಿದೆ!

(40) 'ಮಥುರೆ' ಎಲ್ಲ ತೀರ್ಥಗಳಿಂತ ಹೆಚ್ಚು !

(41) 'ವೃಂದಾವನ' ಲೀಲಾಸ್ಥಾನ ! ಮತ್ತು—

(42) 'ಗೋವರ್ಧನ-ವ್ರಜಯಾತ್ರೆ' ಮಹಾಭಾಗ್ಯದಿಂದ ಲಭಿಸುತ್ತದೆ!

(43) ಸೂರ್ಯಗ್ರಹಣದ ಕಾಲದಲ್ಲಿ 'ಕುರುಕ್ಷೇತ್ರ'ದಲ್ಲಿ ಲಕ್ಷಾಂತರ ಮಾನವರ ಜಾತ್ರೆ ಸೇರುತ್ತದೆ!

ಈ ಎಲ್ಲ ಮಾತುಗಳೂ ಸುಳ್ಳೇನು ?

ಉತ್ತರ:—ಪ್ರತ್ಯಕ್ಷವಾಗಿ ಕಣ್ಣಿಗೆ ಮೂರು ಪ್ರತಿಮೆಗಳು ಕಾಣಿಸುತ್ತವೆ; ಏಕೆಂದರೆ, [ಅವು] ಕಲ್ಲಿನ ಪ್ರತಿಮೆಗಳು ಎಂಬುದೇ !

ಮತ್ತು ಮೂರು ಕಾಲಗಳಲ್ಲಿ ಮೂರು ಬಗೆಯ ರೂಪಗಳಾಗಲು, ಪೂಜಾರೀ ಮಹಾಶಯರು ವಸ್ತ್ರ-ಪಡವೆಗಳನ್ನು ತೊಡಿಸುವ ಚಾತುರ್ಯವೇ ಕಾರಣವಾಗಿದೆ.

ಮತ್ತು ಸೊಣಗಳು ಸಾವಿರಾರು, ಲಕ್ಷಗಟ್ಟಲೆ ಇರುತ್ತವೆ. **ನಾನು ನನ್ನ ಕಣ್ಣುಗಳಿಂದಲೇ ನೋಡಿದ್ದೇನೆ!**

**'ಪ್ರಯಾಗ'**ದಲ್ಲಿ ಶ್ಲೋಕರಚಿಸುವ ಪಜಾಮುನಾವನೋ, ಮುಂಡನ ಮಾಡಿಸುವುದರ ಮಾಹಾತ್ಮ್ಯವನ್ನು ಬರೆದಿರಬಹುದು! ಅಥವಾ ಪೋಪರಿಗೆ ಸ್ವಲ್ಪ ಹಣವಿತ್ತು, ಬರೆಯಿಸಿರಬಹುದು!

**'ಪ್ರಯಾಗ'**ದಲ್ಲಿ ಸ್ನಾನಮಾಡಿ ಸ್ವರ್ಗಕ್ಕೆ ಹೋಗುತ್ತಿದ್ದಲ್ಲಿ, ಮನೆಗೆ ಹಿಂದಿರುಗಿ ಬರುವವನಾವನೂ ಕೂಡ ಕಾಣಿಸುತ್ತಿರಲಿಲ್ಲ. ಆದರೆ, ಎಲ್ಲರೂ ಮನೆಗೆ ಹಿಂದಿರುಗುವುದೇ ಕಾಣಿಸುತ್ತದೆ.

ಅಥವಾ, ಯಾವನಾದರೂ ಅಲ್ಲಿ ಮುಳುಗಿ ಸಾಯುವುದಾದರೆ, ಅವನ ಜೀವಾತ್ಮನೂ ಕೂಡ ಆಕಾಶದಲ್ಲಿ ವಾಯುವಿನೊಂದಿಗೆ ತಿರುಗಾಡಿ, ಜನ್ಮವೆತ್ತುತ್ತಿರಬಹುದು!

ದುಡ್ಡು ಕಸಿಯುವ ಜನರೇ **'ತೀರ್ಥರಾಜ'**ನೆಂದು ಹೆಸರಿಟ್ಟಿದ್ದಾರೆ. ಜಡದಲ್ಲಿ ರಾಜ-ಪ್ರಜಾ-ಭಾವನೆ ಎಂದಿಗೂ ಸಲ್ಲಲಾರದು.

**'ಅಯೋಧ್ಯಾ ನಗರೀ'**—ನಿವಾಸಿಗಳು, ನಾಯಿಗಳು, ಕತ್ತೆಗಳು, ಜಲಗಾರರು–ಚಮ್ಮಾರರು, ಚರಂಡಿಗಳು–ಎಲ್ಲರೊಂದಿಗೆ ಮೂರು ಸಾರಿ ಸ್ವರ್ಗಕ್ಕೆ ಹೋಯಿತು, ಎನ್ನುವುದು ಮಹಾ ಅಸಂಭವವಾದ ಮಾತಾಗಿದೆ. ಸ್ವರ್ಗಕ್ಕಂತೂ ಹೋಗಲಿಲ್ಲ, ಎಲ್ಲಿದ್ದಿತೋ, ಅಲ್ಲಿಯೇ ಇದೆ ! ಆದರೆ, ಪೋಪ ಮಹಾಶಯರ ಬಾಯಿನ ಬುರುಡೆಗಳಲ್ಲಿ ಅಯೋಧ್ಯೆ ಸ್ವರ್ಗಕ್ಕೆ ಹಾರಿ ಹೋಯಿತು ! ಈ ಬುರುಡೆಯು ಶಬ್ದರೂಪದಲ್ಲಿ ಹಾರುತ್ತಾ-ಅಲೆಯುತ್ತಾ ಇರುತ್ತದೆ!

**'ನೈಮಿಷಾರಣ್ಯ'**ವೇ ಮೊದಲಾದುದರ ಪೋಪ-ಲೀಲೆಯನ್ನೂ ಹೀಗೆಯೇ, ಎಂದು ತಿಳಿಯಬೇಕು.

**'ಮಥುರಾ ತೀನ್ ಲೋಕ್ ಸೇ ನಿರಾಲೀ'*** ಅಂತೂ ಅಲ್ಲ. ಆದರೆ, ಯಾರ ಕಾಟದಿಂದ ಜಲ, ನೆಲ ಮತ್ತು ಆಗಸದಲ್ಲಿ ಯಾವನಿಗಾದರೂ ಸುಖ ಸಿಕ್ಕುವುದು

---

*ಮಥುರೆ ಮೂರು ಲೋಕಗಳಲ್ಲಿ **'ಅನುಪಮ'**ವೇನೂ ಅಲ್ಲ. **—ಅನು.**

ಕಠಿಣವಾಗಿದೆಯೋ, ಅಂತಹ ಮೂರು ಪ್ರಾಣಿಗಳು ಅಲ್ಲಿ ದೊಡ್ಡ ಲೀಲಾಧಾರಿಗಳಾಗಿವೆ.

**ಒಂದನೆಯದಾಗಿ, ಚೌಬೆಗಳು**—ಯಾವನಾದರೂ ಸ್ನಾನ ಮಾಡಲು ಹೋದರೆ, ತಮ್ಮ 'ಸುಂಕ' ಸುಲಿದುಕೊಳ್ಳಲು ನಿಂತು—"ಬನ್ನಿ, **ಯಜಮಾನರೇ! ಭಂಗೀರಸ, ಖಾರ, ಉಂಡೆ ತಿನ್ನೋಣ-ಕುಡಿಯೋಣ. ಯಜಮಾನರಿಗೆ ಜಯಘೋಷ ಹಾಕೋಣ."**, ಎಂದು ಅರಚುತ್ತಿರುತ್ತಾರೆ.

**ಎರಡನೆಯದಾಗಿ, ನೀರಿನಲ್ಲಿ ಆಮೆಗಳು**—ಕಚ್ಚಿ ತಿಂದೇ ಬಿಡುತ್ತವೆ. ಇವುಗಳ ದೆಸೆಯಿಂದ ಘಟ್ಟದಲ್ಲಿ ಸ್ನಾನ ಮಾಡುವುದೂ ಕೂಡ ಕಷ್ಟವಾಗುತ್ತದೆ.

**ಮೂರನೆಯದಾಗಿ, ಆಕಾಶದಲ್ಲಿ ಕೆಂಪು ಮೂತಿಯ ಕೋತಿಗಳು**—ಪೇಟ, ಟೋಪಿ, ಒಡವೆ ಮತ್ತು ಪಾದರಕ್ಷೆಗಳನ್ನೂ ಕೂಡ ಬಿಡುವುದಿಲ್ಲ! ಕಚ್ಚಿ ತಿಂದು ಬಿಡುತ್ತವೆ. ತಳ್ಳಿ ಹಾಕಿ, ಕೆಡಹಿ, ಸಾಯಿಸುತ್ತವೆ!

**ಮತ್ತು ಈ ಮೂರೂ, ಪೋಪರಿಗೂ, ಹಾಗೂ ಪೋಪರುಗಳ ಶಿಷ್ಯರಿಗೂ ಪೂಜನೀಯವಾಗಿವೆ!**

ಮಣಗಟ್ಟಲೆ ಕಡಲೆ, ಮೊದಲಾದ ಖಾದ್ಯಗಳನ್ನು ಆಮೆಗಳಿಗೂ, ಮತ್ತು ಕಡಲೆ-ಬೆಲ್ಲ ಮೊದಲಾದುವನ್ನೂ ಮಂಗಗಳಿಗೂ; ಮತ್ತು ಚೌಬೆಗಳಿಗೆ ದಕ್ಷಿಣೆ ಮತ್ತು ಲಾಡುಗಳನ್ನೂ ಅರ್ಪಿಸಿ, ಅವರ ಸೇವಕರು ಸೇವೆ ಮಾಡುತ್ತಾರೆ!

ಮತ್ತು ಅದು ಯಾವಾಗ **'ವೃಂದಾವನ'**ವಾಗಿದ್ದಿತೋ, ಆಗಿದ್ದಿತು! ಈಗ **'ವೇಶ್ಯೋದ್ಯಾನ'**ದಂತೆ ಪ್ರಣಯ-ಪ್ರಣಯಿನಿಯರು, ಮತ್ತು ಗುರು-ಶಿಷ್ಯೆಯರು ಮೊದಲಾದವರ ಲೀಲೆಯನ್ನು ಪ್ರಸರಿಸುತ್ತಿದೆ.

ಹಾಗೆಯೇ, ದೀಪಮಾಲಿಕೆಯ ಜಾತ್ರೆ, **ಗೋವರ್ಧನ** ಮತ್ತು ವ್ರಜಯಾತ್ರೆಯಲ್ಲಿಯೂ ಕೂಡ ಪೋಪರುಗಳಿಗೇ ಇಷ್ಟಸಿದ್ಧಿಯಾಗುತ್ತದೆ.

'ಕುರುಕ್ಷೇತ್ರ'ದಲ್ಲಿಯೂ ಇರುವುದು ಇದೇ ಹೊಟ್ಟೆಪಾಡಿನ ಲೀಲೆಯೆಂದು ತಿಳಿಯಿರಿ!

ಅವರಲ್ಲಿಯೂ ಯಾವನು ಧಾರ್ಮಿಕ, ಪರೋಪಕಾರೀ ಪುರುಷನಾಗಿರುತ್ತಾನೋ, ಅವನು ಈ ಪೋಪಲೀಲೆಯಿಂದ ದೂರವಾಗಿ ಹೋಗುತ್ತಾನೆ.*

## (ಮೂರ್ತಿಪೂಜೆ ಮತ್ತು ತೀರ್ಥಗಳು ಬಹಳ ಪುರಾತನವಲ್ಲ)

ಪ್ರಶ್ನೆ :—ಈ ಪ್ರತಿಮಾಪೂಜನ ಮತ್ತು ತೀರ್ಥ[ಯಾತ್ರೆ] ಸನಾತನ ಕಾಲದಿಂದ ನಡೆದು ಬರುತ್ತಿವೆ. ಹೇಗೆ ತಾನೇ ಸುಳ್ಳಾಗಬಲ್ಲವು ?

ಉತ್ತರ :—ನೀವು ಯಾವುದನ್ನು **'ಸನಾತನ'**ವೆನ್ನುತ್ತೀರಿ ?

ಪ್ರಶ್ನೆ :—ಯಾವುದು ಸದಾಕಾಲದಿಂದ ನಡೆದುಬರುತ್ತದೋ, ಅದನ್ನು.

ಉತ್ತರ :— ಇವು ಸದಾಕಾಲದಿಂದ ನಡೆದುಬರುತ್ತಿರುವುದಾದರೆ, **ವೇದಗಳಲ್ಲಿ** ಮತ್ತು ಋಷಿ-ಮುನಿಕೃತ **ಬ್ರಾಹ್ಮಣಗಳೇ** ಮೊದಲಾದ ಗ್ರಂಥಗಳಲ್ಲಿ ಇವುಗಳ ಹೆಸರೇತಕ್ಕೆ ಬರುವುದಿಲ್ಲ ?

**ಈ ಪ್ರತಿಮಾಪೂಜನ ಎರಡೂವರೆ-ಮೂರು ಸಾವಿರ ವರ್ಷಗಳ ಇತ್ತೀಚಿನದಾಗಿದ್ದು, ವಾಮಮಾರ್ಗಿಗಳಿಂದ, ಮತ್ತು ಜೈನರಿಂದ ಪ್ರಚಲಿತವಾಗಿದೆ. ಮೊದಲು ಆರ್ಯಾವರ್ತದಲ್ಲಿರಲಿಲ್ಲ!**

**ಮತ್ತು ಈ 'ತೀರ್ಥ'ಗಳೂ ಇರಲಿಲ್ಲ !**

ಯಾವಾಗ ಜೈನರು **'ಗಿರನಾರ,' 'ಪಾಲಿಟಾನಾ', 'ಶಿಖರ-ಶತ್ರುಂಜಯ'** ಮತ್ತು **'ಆಬೂ'** ಮೊದಲಾದ ತೀರ್ಥಗಳನ್ನು ನಿರ್ಮಿಸಿದರೋ, ಆಗ, ಅವಕ್ಕೆ ಸರಿಯಾಗಿ ಈ ಜನರೂ† ಕೂಡ ನಿರ್ಮಿಸಿಕೊಂಡರು. ಯಾರಾದರೂ ಇವುಗಳ ಆರಂಭವನ್ನು ಪರೀಕ್ಷಿಸಲು ಬಯಸಿದರೆ, ಅವರು ಪಂಡಾಗಳ ಪುರಾತನವಾದುದಕ್ಕಿಂತ

---

*ಈ ರೀತಿಯಾಗಿ, ಕೆಲವು ಪೌರಾಣಿಕ ತೀರ್ಥಸ್ಥಾನಗಳಲ್ಲಿನ ಪೋಪಲೀಲೆ ಮತ್ತು ಚಮತ್ಕಾರಗಳನ್ನು ಮಹರ್ಷಿ ದಯಾನಂದರು ಸಂಕೇತಮಾತ್ರವಾಗಿ ತೋರಿಸಿದ್ದಾರೆ. ಒಂದೆರಡು ತೀರ್ಥಸ್ಥಾನಗಳನ್ನು ಬಿಟ್ಟು, ಮಿಕ್ಕೆಲ್ಲಾ ಉತ್ತರ ಭಾರತದಲ್ಲೇ ಇವೆ. ಇದಕ್ಕೆ ಕಾರಣವೇನೆಂದರೆ, ಪುರಾಣಗಳಲ್ಲಿ ಗಂಗಾ, ಯಮುನಾ, ಮತ್ತು ನರ್ಮದಾ ನದಿಯ ತೀರದ ತೀರ್ಥಗಳ ವರ್ಣನೆಯೇ ಅಧಿಕವಾಗಿದೆ. ದಕ್ಷಿಣ ಭಾರತದ ತೀರ್ಥಗಳ ವರ್ಣನೆ ಅಷ್ಟಿಲ್ಲ. ಉತ್ತರ ಭಾರತದಲ್ಲಿಯೇ ಲಕ್ಷಾಂತರ ನಿರಕ್ಷರ-ಕುಕ್ಷಿ ಸಾಧುಗಳೂ, ಸಂನ್ಯಾಸಿಗಳೂ, ಧೂರ್ತ ಪೂಜಾರಿಗಳೂ ಇರುವುದರಿಂದಲೂ, ಮತ್ತು ಅಲ್ಲಿನ ಜನಸಾಧಾರಣರು ಮುಗ್ಧರಾಗಿರುವುದರಿಂದಲೂ, ಮತ್ತು ದಕ್ಷಿಣ ಭಾರತೀಯರೂ ಕೂಡ ಉತ್ತರಭಾರತದ ತೀರ್ಥಸ್ಥಾನಗಳಿಗೇ ಯಾತ್ರೆ ಮಾಡುವುದರಿಂದ, ಜನ್ಮ ಸಾಫಲ್ಯವೆಂದು ತಿಳಿಯುವುದರಿಂದಲೂ ಈ ಪೋಪಲೀಲೆ-ಚಮತ್ಕಾರಗಳು ಅಲ್ಲೇ ಬೇರುಬಿಟ್ಟಿವೆ. ಎಲ್ಲಿ ಅಜ್ಞರೋ, ಅಲ್ಲಿ ವಂಚಕರು !—ಸಂ.

†ಎಂದರೆ, ಪೌರಾಣಿಕ ಪೋಪರು.—ಸಂ.

ಪುರಾತನವಾದ ದಾಖಲೆಗಳನ್ನೂ, ಮತ್ತು ತಾಮ್ರ-ಪತ್ರ* ಮೊದಲಾದ ಬರಹಗಳನ್ನೂ ನೋಡಲಿ! ಆಗ ಈ ಎಲ್ಲಾ ತೀರ್ಥಗಳೂ ಐನೂರು ಅಥವಾ ಸಾವಿರ ವರ್ಷಗಳಿಗಿಂತ ಈಚೆಗೇ ನಿರ್ಮಿತವಾಗಿವೆ, ಎನ್ನುವುದು ನಿಶ್ಚಯವಾಗಿ ಹೋಗುವುದು. ಸಾವಿರ ವರ್ಷಗಳಿಗಿಂತ ಹಿಂದಿನ ಬರಹ ಯಾವನ ಬಳಿಯಿಂದಲೂ ಹೊರ ಬರುವುದಿಲ್ಲ.† ಆದುದರಿಂದ, ಆಧುನಿಕವಾಗಿವೆ.

## (ತೀರ್ಥ, ನಾಮಸ್ಮರಣೆ ಮತ್ತು ದರ್ಶನದ ಮಾಹಾತ್ಮ್ಯೆಯ ಖಂಡನೆ)

ಪ್ರಶ್ನೆ :—ಯಾವ ಯಾವ ತೀರ್ಥದ, ಅಥವಾ ಹೆಸರಿನ ಮಾಹಾತ್ಮ್ಯೆ ಇತ್ಯಾದಿ ಮಾತುಗಳಿವೆಯೋ, ಎಂದರೆ—

"ಅನ್ಯಕ್ಷೇತ್ರೇ ಕೃತಂ ಪಾಪಂ ಕಾಶೀಕ್ಷೇತ್ರೇ ವಿನಶ್ಯತಿ‡

ಎನ್ನುವಂತಹ ಅವು ಸತ್ಯವಾಗಿವೆಯೋ, ಅಥವಾ ಇಲ್ಲವೋ ?

ಉತ್ತರ: —ಇಲ್ಲ! ಏಕೆಂದರೆ, ಪಾಪಗಳು ಬಿಟ್ಟು ಹೋಗುತ್ತಿದ್ದರೆ, ದರಿದ್ರರಿಗೆ ಧನ, ರಾಜ್ಯಾಧಿಕಾರ, [ಮತ್ತು] ಅಂಧರಿಗೆ ಕಣ್ಣು ಸಿಕ್ಕಿ ಬಿಡುತ್ತಿದ್ದವು. ಕುಷ್ಠರೋಗಿಗಳ ಕುಷ್ಠ ಮೊದಲಾದ ರೋಗಗಳು ವಾಸಿಯಾಗುತ್ತಿದ್ದವು. ಹೀಗೆ ಆಗುವುದಿಲ್ಲ ! ಆದುದರಿಂದ, ಯಾವನ ಪಾಪ–ಪುಣ್ಯವೂ ಹರಿದುಹೋಗುವುದಿಲ್ಲ !$

ಪ್ರಶ್ನೆ :—

**ಗಂಗಾಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥1॥**

[ಬ್ರಹ್ಮಪುರಾಣ :—175.82]

**ಹರಿರ್ಹರತಿ ಪಾಪಾನಿ ಹರಿರಿತ್ಯಕ್ಷರದ್ವಯಮ್ ॥2॥**

[ಪದ್ಮಪುರಾಣ :—22.84]

---

*ಈ ತಾಮ್ರಪತ್ರಗಳು ಪ್ರಾಯಶಃ ದಾನಗಳ ಸಂಬಂಧದಲ್ಲಿವೆ.—ಯು.ಮೀ.

†ಈ ಪರೀಕ್ಷೆಯನ್ನು ಮಹರ್ಷಿ ದಯಾನಂದರೇ ಮಾಡಬೇಕಾಯಿತು. ಅನ್ಯ ವಿದ್ವಾಂಸ–ಅವಿದ್ವಾಂಸ ಜನರು ಕಣ್ಣು ಮುಚ್ಚಿಕೊಂಡು, ತೀರ್ಥಯಾತ್ರೆಯನ್ನು ಮಾಡುತ್ತಲೇ ಹೋಗುತ್ತಿದ್ದಾರೆ!—ಸಂ.

‡ಪದ್ಮಪುರಾಣ, ಕಾಶೀಮಾಹಾತ್ಮ್ಯ, ಕಾಶೀಖಂಡ ಇತ್ಯಾದಿ. - ಯು.ಮೀ.

$ಫಲಭೋಗಾನಂತರವೇ ಅವುಗಳಿಂದ ಬಿಡುಗಡೆ, ಎಂದೇ ತಾತ್ಪರ್ಯ.—ಅನು.

**ಪ್ರಾತಃಕಾಲೇ ಶಿವಂ ದೃಷ್ಟ್ವಾ ನಿಶಿ ಪಾಪಂ ವಿನಶ್ಯತಿ ।**
**ಆಜನ್ಮಕೃತಂ ಮಧ್ಯಾಹ್ನೇ ಸಾಯಾಹ್ನೇ ಸಪ್ತಜನ್ಮನಾಮ್ ॥3॥***

ಈ ಮೊದಲಾದ ಶ್ಲೋಕಗಳು **ಪೋಪಪುರಾಣ**ದವಾಗಿವೆ.

ನೂರಾರು, ಸಾವಿರಾರು ಯೋಜನಗಳಿಂದಲಾದರೂ **'ಗಂಗಾ, ಗಂಗಾ'**, ಎಂದು ಹೇಳಿದರೆ, ಅವನ ಪಾಪಗಳು ನಿವಾರಿತವಾಗಿ, ಅವನು ವಿಷ್ಣುಲೋಕಕ್ಕೆ, ಎಂದರೆ, ವೈಕುಂಠಕ್ಕೆ ಹೋಗುತ್ತಾನೆ! [1]

**'ಹರಿ'**, ಎಂಬ ಈ ಎರಡು ಅಕ್ಷರಗಳ ಹೆಸರಿನ ಉಚ್ಚಾರಣೆಯು ಸರ್ವಪಾಪಗಳನ್ನೂ ನಿವಾರಿಸಿ ಬಿಡುತ್ತದೆ. ಹಾಗೆಯೇ **'ರಾಮ'**, **'ಕೃಷ್ಣ'**, **'ಶಿವ'**, **'ಭಗವತೀ'** ಮೊದಲಾದ ನಾಮಗಳಿಗೂ ಮಾಹಾತ್ಮ್ಯವಿದೆ! [2]

ಮತ್ತು ಮಾನವನು ಪ್ರಾತಃಕಾಲದಲ್ಲಿ **ಶಿವನ**, ಎಂದರೆ **ಲಿಂಗದ** ಅಥವಾ ಅವನ ಪ್ರತಿಮೆಯ ದರ್ಶನ ಮಾಡುವನಾದರೆ, ರಾತ್ರಿಯಲ್ಲಿ ಮಾಡಿದ ; ಮಧ್ಯಾಹ್ನದಲ್ಲಿ ದರ್ಶನ ಮಾಡುವುದರಿಂದ, ಜನ್ಮಪೂರ್ತದ ; [ಮತ್ತು] ಸಾಯಂಕಾಲದಲ್ಲಿ ದರ್ಶನ ಮಾಡುವುದರಿಂದ, ಏಳು ಜನ್ಮಗಳ ಪಾಪ ಬಿಟ್ಟು ಹೋಗುತ್ತವೆ! [3]

**ಇದು ದರ್ಶನದ ಮಾಹಾತ್ಮ್ಯವಾಗಿದೆ.**

[ಇದೆಲ್ಲಾ] ಸುಳ್ಳಾಗಿ ಹೋಗುವುದೇನೂ ?

**ಉತ್ತರ :—ಸುಳ್ಳಾಗಿರುವುದರಲ್ಲಿ ಸಂದೇಹವೇನು ?**

ಏಕೆಂದರೆ, ಗಂಗಾ-ಗಂಗಾ ಎನ್ನುವುದರಿಂದ, ಅಥವಾ ಹರಿ, ರಾಮ, ಕೃಷ್ಣ, ನಾರಾಯಣ, ಶಿವ ಮತ್ತು ಭಗವತಿಯ ನಾಮ ಸ್ಮರಣದಿಂದ, ಪಾಪವೆಂದಿಗೂ ಬಿಟ್ಟು ಹೋಗುವುದಿಲ್ಲ. ಬಿಟ್ಟು ಹೋಗುವುದಾದಲ್ಲಿ, ಯಾವನೂ ದುಃಖಿತನಾಗಿರಲಾರನು. ಮತ್ತು ಪಾಪ ಮಾಡುವುದಕ್ಕೆ ಯಾವನೂ ಹೆದರುವುದಿಲ್ಲ. ಉದಾಹರಣೆಗೆ—

ಈ ದಿನಗಳಲ್ಲಿ ಪೋಪಲೀಲೆಯಲ್ಲಿ ಪಾಪಗಳು ಹೆಚ್ಚು ಹೆಚ್ಚಾಗಿ ನಡೆಯುತ್ತಿವೆ. ಮೂಢರಿಗೆ—

"ನಾವು ಪಾಪಮಾಡಿ, ನಾಮಸ್ಮರಣೆಯನ್ನು ಅಥವಾ ತೀರ್ಥಯಾತ್ರೆಯನ್ನು ಮಾಡುವೆವಾದರೆ, ಪಾಪಗಳ ನಿವೃತ್ತಿಯಾಗಿ ಹೋಗುವುದು.", ಎಂಬ ನಂಬಿಕೆ ಇರುತ್ತದೆ. ಇದೇ ನಂಬಿಕೆಯಿಂದ ಪಾಪಗಳನ್ನು ಮಾಡಿ, ಈ ಲೋಕದ ಮತ್ತು ಪರಲೋಕದ ನಾಶವನ್ನು ಮಾಡಿಕೊಳ್ಳುತ್ತಾರೆ.

**ಆದರೆ, ಮಾಡಿದ ಪಾಪವನ್ನು ಅನುಭವಿಸಲೇ ಬೇಕಾಗುತ್ತದೆ !**

---

*ನೋಡಿ–'ತೀರ್ಥದರ್ಪಣ ಪಂಡಾ ಅರ್ಪಣ'—ಪರಿಚ್ಛೇದ 8—ಸಂ.

**(ನಿಜವಾದ ತೀರ್ಥ ಮತ್ತು ನಾಮಸ್ಮರಣೆ ಯಾವುದು ?)**

ಪ್ರಶ್ನೆ :—ಹಾಗಾದರೆ, ಯಾವುದಾದರೂ ತೀರ್ಥ, ನಾಮಸ್ಮರಣ ಸತ್ಯವಾದುದು ಇದೆಯೋ, ಅಥವಾ ಇಲ್ಲವೋ ?

**ಉತ್ತರ :—ಇದೆ ! ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಅಧ್ಯಯನ-ಅಧ್ಯಾಪನ ; ಧಾರ್ಮಿಕ ವಿದ್ವಾಂಸರ ಸಂಗ ; ಪರೋಪಕಾರ, ಧರ್ಮಾನುಷ್ಠಾನ, ಯೋಗಾಭ್ಯಾಸ, ನಿರ್ವೈರತ್ವ, ನಿಷ್ಕಪಟತ್ವ, ಸತ್ಯಭಾಷಣ, ಸತ್ಯದ ಅಂಗೀಕಾರ, ಸತ್ಯಾಚರಣ, ಬ್ರಹ್ಮಚರ್ಯ, ಆಚಾರ್ಯ-ಅತಿಥಿ-ಮಾತಾಪಿತೃಗಳ ಸೇವೆ, ಪರಮೇಶ್ವರನ ಸ್ತುತಿ-ಪ್ರಾರ್ಥನೋಪಾಸನೆಗಳು, ಶಾಂತಿ, ಜಿತೇಂದ್ರಿಯತ್ವ, ಸುಶೀಲತ್ವ, ಧರ್ಮಯುಕ್ತವಾದ ಪುರುಷಾರ್ಥ, ಜ್ಞಾನ, ವಿಜ್ಞಾನ ಮೊದಲಾದ ಶುಭ ಗುಣ-ಕರ್ಮಗಳು ದುಃಖದಿಂದ ಪಾರುಗಾಣಿಸುವವಾಗಿರುವುದರಿಂದ, 'ತೀರ್ಥ' ಗಳಾಗಿವೆ.**

ಮತ್ತು ಯಾವವು ಜಲಮಯ-ಸ್ಥಳಮಯಗಳಾಗಿವೆಯೋ, ಅವು ಎಂದಿಗೂ 'ತೀರ್ಥ'ವಾಗಲಾರವು. ಏಕೆಂದರೆ—

**"ಜನಾ ಯೈಸ್ತರಂತಿ ತಾನಿ ತೀರ್ಥಾನಿ."**

—"ಯಾವವುಗಳ ನೆರವಿನಿಂದ, ಮಾನವರು ದುಃಖಗಳಿಂದ ಪಾರಾಗುವರೋ, ಅವಕ್ಕೇ "**ತೀರ್ಥ**"ಗಳೆಂಬ ಹೆಸರಿದೆ.

ಜಲ-ಸ್ಥಳಗಳು ದಡ ಹಾಯಿಸುವವಲ್ಲ ; ಮುಳುಗಿಸಿ ಸಾಯಿಸುವವಾಗಿವೆ !

ಪ್ರತಿಯಾಗಿ, ಹಡಗು ಮೊದಲಾದುವಕ್ಕೆ '**ತೀರ್ಥ**', ಎಂಬ ಹೆಸರಿಡಬಹುದು. ಏಕೆಂದರೆ, ಅವುಗಳಿಂದ ಸಮುದ್ರ ಮೊದಲಾದುವನ್ನು ದಾಟುತ್ತಾರೆ.

**ಸಮಾನತೀರ್ಥೇ ವಾಸೀ ॥1॥**

**[ಅಷ್ಟಾಧ್ಯಾಯೀ :– 4.4.107]**

**ನಮಸ್ತೀರ್ಥ್ಯಾಯ ಚ ॥2॥**

**[ಯಜುರ್ವೇದ :—16.42]**

ಯಾವ ಬ್ರಹ್ಮಚಾರಿಗಳು ಒಬ್ಬ ಆಚಾರ್ಯನ ಬಳಿ, ಒಂದು ಶಾಸ್ತ್ರವನ್ನು ಒಟ್ಟಿಗೇ ಓದುತ್ತಾರೋ, ಅವರೆಲ್ಲರೂ '**ಸತೀರ್ಥ್ಯ**'ರು, ಎಂದರೆ ಸಮಾನ ತೀರ್ಥ ಸೇವಿಗಳು ಆಗಿರುತ್ತಾರೆ. [1]

ಯಾವನು ವೇದಗಳೇ ಮೊದಲಾದ ಶಾಸ್ತ್ರಗಳು ಮತ್ತು ಸತ್ಯಭಾಷಣ ಮೊದಲಾದ ಧರ್ಮಲಕ್ಷಣಗಳಲ್ಲಿ ಸ್ಥಿತನಾದ ಸಾಧುವಾಗಿರುವನೋ, ಅವನಿಗೆ ಆಹಾರ ಮೊದಲಾದ ಪದಾರ್ಥಗಳನ್ನು ಕೊಡುವುದು ಮತ್ತು ಅವನಿಂದ ವಿದ್ಯೆ ಗ್ರಹಿಸುವುದು—ಈ ಮೊದಲಾದುವು '**ತೀರ್ಥ**'ಗಳೆನಿಸುತ್ತವೆ.

**ನಾಮಸ್ಮರಣ**ವೆಂದು ಈ ಕೆಳಗಿನದನ್ನು ಹೇಳುತ್ತಾರೆ :—

**ಯಸ್ಯ ನಾಮ ಮಹದ್ಯಶಃ ॥**

[ಯಜು :—32.3]

ಪರಮೇಶ್ವರನ ಹೆಸರು ದೊಡ್ಡ ಯಶಸ್ಸಿಗೆ, ಎಂದರೆ, ಧರ್ಮಯುಕ್ತ ಕಾರ್ಯಗಳನ್ನು ಮಾಡುವುದಕ್ಕೆ [ಕಾರಣವಾಗಿದೆ].*

ಉದಾಹರಣೆಗೆ:—

ಬ್ರಹ್ಮ, **ಪರಮೇಶ್ವರ**, **ಈಶ್ವರ**, **ನ್ಯಾಯಕಾರೀ**, **ದಯಾಳು**, **ಸರ್ವಶಕ್ತಿಮಾನ್** ಮೊದಲಾದ ಹೆಸರುಗಳು ಪರಮೇಶ್ವರನ ಗುಣ-ಕರ್ಮ-ಸ್ವಭಾವಗಳ ದೆಸೆಯಿಂದಲೇ ಆಗಿವೆ. ಹೇಗೆಂದರೆ—

ಬ್ರಹ್ಮ=ಎಲ್ಲರಿಗಿಂತ ದೊಡ್ಡವನು;

**ಪರಮೇಶ್ವರ**=ಈಶ್ವರರಿಗೆಲ್ಲಾ ಈಶ್ವರನು;

**ಈಶ್ವರ**=ಸಾಮರ್ಥ್ಯಸಂಪನ್ನನು;

**ನ್ಯಾಯಕಾರಿ**=ಎಂದಿಗೂ ಅನ್ಯಾಯವನ್ನು ಮಾಡದವನು;

**ದಯಾಳು**=ಎಲ್ಲರ ಮೇಲೆಯೂ ಕೃಪಾದೃಷ್ಟಿಯನ್ನಿಡುವವನು;

**ಸರ್ವಶಕ್ತಿಮಾನ್**=ತನ್ನ ಸಾಮರ್ಥ್ಯದಿಂದಲೇ ಸಮಸ್ತ ಜಗತ್ತಿನ ಉತ್ಪತ್ತಿ-ಸ್ಥಿತಿ-ಪ್ರಳಯಗಳನ್ನು ಮಾಡುವವನು; ಯಾವನ ಸಹಾಯವನ್ನೂ ತೆಗೆದುಕೊಳ್ಳುವುದಿಲ್ಲ;

---

*ಪರಮೇಶ್ವರನ ನಾಮಸ್ಮರಣದಿಂದ, ಮಹಾ ಯಶಸ್ಸು ಪ್ರಾಪ್ತವಾಗುತ್ತದೆ. ಎಂದರೆ, ಮಾನವನು ಧರ್ಮಯುಕ್ತವಾದ ಕರ್ಮಗಳನ್ನು ಮಾಡಿ, ಭಗವಂತನಂತೆಯೇ ಮಹಾ ಯಶಸ್ವಿಯಾಗುತ್ತಾನೆ. ಇದೇ ನಿಜವಾದ ನಾಮಸ್ಮರಣ.—ಅನು.

ಬ್ರಹ್ಮಾ=ವಿವಿಧ ಜಗತ್ತಿನ ಪದಾರ್ಥಗಳನ್ನು ನಿರ್ಮಿಸುವವನು ;

ವಿಷ್ಣು=ಎಲ್ಲವರಲ್ಲಿಯೂ ವ್ಯಾಪಕನಾಗಿ, ರಕ್ಷಣೆ ಮಾಡುವವನಾಗಿದ್ದಾನೆ;

**ಮಹಾದೇವ**=ಸಮಸ್ತ ದೇವತೆಗಳಿಗೂ ದೇವನು ;

**ರುದ್ರ**=ಪ್ರಳಯಮಾಡುವವನು.

ಈ ಮೊದಲಾದ ಹೆಸರುಗಳ ಅರ್ಥವನ್ನು ತನ್ನಲ್ಲಿ ಧಾರಣ ಮಾಡಿಕೊಳ್ಳಬೇಕು.* ಎಂದರೆ, ಮಹತ್ಕಾರ್ಯಗಳಿಂದ ದೊಡ್ಡವನಾಗಬೇಕು,; ಸಮರ್ಥರಲ್ಲಿ ಸಮರ್ಥನಾಗಬೇಕು. ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೋಗಬೇಕು.

ಅಧರ್ಮವನ್ನೆಂದಿಗೂ ಮಾಡಬಾರದು. ಎಲ್ಲರ ಮೇಲೆಯೂ ದಯೆಯಿಡಬೇಕು. ಎಲ್ಲ ಬಗೆಯ ಸಾಧನಗಳನ್ನೂ ಶಕ್ತಿಸಂಪನ್ನವಾಗಿ ಮಾಡಬೇಕು.

ಶಿಲ್ಪ ವಿದ್ಯೆಯಿಂದ, ನಾನಾಪ್ರಕಾರದ ಪದಾರ್ಥಗಳನ್ನು ನಿರ್ಮಿಸಬೇಕು.

ತನ್ನ ಆತ್ಮನಿಗೆ ಸಮನಾಗಿಯೇ ಜಗತ್ತಿನಲ್ಲಿ [ಎಲ್ಲರಿಗೂ] ಸುಖ-ದುಃಖಗಳಿವೆ, ಎಂದು ತಿಳಿಯಬೇಕು. ಸರ್ವರನ್ನೂ ರಕ್ಷಿಸಬೇಕು.

ವಿದ್ವಾಂಸರಲ್ಲಿ ವಿದ್ವಾಂಸನಾಗಿರಬೇಕು. ದುಷ್ಕರ್ಮ ಮಾಡುವವರಿಗೆ ಮತ್ತು ಮಾಡಿಸುವವರಿಗೆ ಪ್ರಯತ್ನಪೂರ್ವಕವಾಗಿ† ಶಿಕ್ಷೆಯನ್ನು ಕೊಡಬೇಕು. ಮತ್ತು ಸಜ್ಜನರಿಗೆ ರಕ್ಷಣೆಯನ್ನು ಕೊಡಿಸಬೇಕು.

**ಹೀಗೆ, ಪರಮೇಶ್ವರನ ಹೆಸರುಗಳ ಅರ್ಥವನ್ನು ಅರಿತು ಪರಮೇಶ್ವರನ ಗುಣ-ಕರ್ಮ-ಸ್ವಭಾವಗಳಿಗೆ ಅನುಕೂಲವಾಗಿ, ತನ್ನ ಗುಣ-ಕರ್ಮ-ಸ್ವಭಾವಗಳನ್ನು ಮಾಡಿಕೊಳ್ಳುತ್ತಾ ಹೋಗುವುದೇ ಪರಮೇಶ್ವರನ ಯಥಾರ್ಥವಾದ ನಾಮಸ್ಮರಣ ವಾಗಿದೆ.**

### (ಕಲ್ಪಿತ ಗುರು-ಮಾಹಾತ್ಮ್ಯ ಮತ್ತು ಗುರು-ಗೀತಾದ ಖಂಡನೆ)

**ಪ್ರಶ್ನೆ:—**

ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥‡

*ಎಂದರೆ ಅರ್ಥಗಳನ್ನು ಗ್ರಹಿಸಿ, ಅದಕ್ಕನುಗುಣವಾದ ಗುಣಗಳನ್ನೇ ತನ್ನಲ್ಲಿ ಅರಳಿಸಿಕೊಳ್ಳಬೇಕು.—ಅನು.

†ರಾಜ್ಯಶಾಸನದ ಮೂಲಕ.—ಅನು.

‡ಗುರು-ಗೀತಾ; ಗುರುಮಾಹಾತ್ಮ್ಯ 16.—ಯು. ಮೀ.

ಈ ಮೊದಲಾದ **'ಗುರುಮಾಹಾತ್ಮ್ಯ'**ವಾದರೂ ಸತ್ಯವಲ್ಲವೇನು ?

ಗುರುವಿನ ಚರಣಗಳನ್ನು ತೊಳೆದು, ಆ ನೀರನ್ನು ಕುಡಿಯಬೇಕು. ಹೇಗೆ ಆಜ್ಞಾಪಿಸುವನೋ, ಹಾಗೆ ವರ್ತಿಸಬೇಕು!

ಗುರುವು ಲೋಭಿಯಾಗಿದ್ದರೆ, ವಾಮನನಿಗೆ ಸಮನೆಂದೂ ; ಕ್ರೋಧಿಯಾಗಿದ್ದರೆ, ನರಸಿಂಹನಿಗೆ ಸಮನೆಂದೂ ; ಮೋಹಿಯಾಗಿದ್ದರೆ, ರಾಮನಿಗೆ ಸಮನೆಂದೂ ; ಕಾಮಿಯಾಗಿದ್ದರೆ, ಕೃಷ್ಣನಿಗೆ ಸಮನೆಂದೂ ; ಗುರುವಿನ ಬಗೆಗೆ ತಿಳಿದುಕೊಳ್ಳಬೇಕು!

ಗುರುವು ಎಂತಹ ಪಾಪವನ್ನು ಬೇಕಾದರೂ ಮಾಡಲೀ, ಆದರೂ ಅಶ್ರದ್ಧೆಯನ್ನು ಮಾಡಬಾರದು! ಸಂತನ ಅಥವಾ ಗುರುವಿನ ದರ್ಶನಕ್ಕೆ ಹೋಗುವಲ್ಲಿ ಹೆಜ್ಜೆ-ಹೆಜ್ಜೆಗೆ ಅಶ್ವಮೇಧದ ಫಲ ಸಿಕ್ಕುತ್ತದೆ! ಈ ಮಾತು ಸರಿಯೋ ಅಥವಾ ಅಲ್ಲವೋ ?

**ಉತ್ತರ:—ಸರಿಯಲ್ಲ!** ಬ್ರಹ್ಮಾ, ವಿಷ್ಣು, ಮಹೇಶ್ವರ ಮತ್ತು ಪರಬ್ರಹ್ಮ–ಇವು ಪರಮೇಶ್ವರನ ಹೆಸರುಗಳಾಗಿವೆ. **ಗುರುವು ಆವನಿಗೆ ಎಂದಿಗೂ ಸಮನಾಗಲಾರನು!** ಈ **'ಗುರುಮಾಹಾತ್ಮ್ಯ'**, **'ಗುರುಗೀತೆ'**ಯೂ ಕೂಡ ಒಂದು ದೊಡ್ಡ **ಪೋಪಲೀಲೆಯಾಗಿದೆ.**

ಮಾತೆ, ಪಿತೃ, ಆಚಾರ್ಯ, ಹಾಗೂ ಅತಿಥಿಗಳು **'ಗುರು'**ಗಳಾಗಿರುತ್ತಾರೆ. ಅವರ ಸೇವೆಯನ್ನು ಮಾಡುವುದು, ಅವರಿಂದ ವಿದ್ಯೆಯನ್ನು ಗ್ರಹಿಸುವುದು, ಹಾಗೂ ಕೊಡುವುದು ಶಿಷ್ಯನ, ಮತ್ತು ಗುರುವಿನ ಕೆಲಸವಾಗಿರುತ್ತದೆ.

**ಆದರೆ, ಗುರುವು ಲೋಭಿಯೂ, ಕ್ರೋಧಿಯೂ, ಮೋಹಿಯೂ, ಮತ್ತು ಕಾಮಿಯೂ ಆಗಿದ್ದರೆ, ಅವನನ್ನು ಸರ್ವಥಾ ವರ್ಜಿಸಿ ಬಿಡಬೇಕು. ಭರ್ತ್ಸನೆ ಮಾಡಬೇಕು. ಸಹಜ ಭರ್ತ್ಸನೆಯಿಂದ ಒಪ್ಪದಿದ್ದರೆ, 'ಅರ್ಘ್ಯ–ಪಾದ್ಯ', ಎಂದರೆ ಒದೆ, ಹೊಡೆತ ; ಪ್ರಾಣ ತೆಗೆಯುವುದರಲ್ಲೂ ದೋಷವಿಲ್ಲ !***

ಯಾರು ವಿದ್ಯೆ ಮೊದಲಾದ ಸದ್ಗುಣಗಳಲ್ಲಿ ಹಿರಿತನವಿಲ್ಲ, ಎಂದು ಹೇಳುವರೋ; ಯಾರು ಸುಳ್ಳು-ಸುಳ್ಳೇ ಮಾಲೆ, ನಾಮ, ವೇದವಿರುದ್ಧವಾದ ಮಂತ್ರೋಪದೇಶಗಳನ್ನು ಮಾಡುವವರಾಗಿದ್ದಾರೋ, ಅವರು ಗುರುಗಳೇ ಅಲ್ಲ! ಆದರೆ, ಕುರುಬರಂತೆ

---

*ಸರಿಯಾದ ಮಾರ್ಗಕ್ಕೆ ಬರುವಂತೆ ತಿಳುವಳಿಕೆಯನ್ನು ಗುರುನಾಮಧಾರಿಗೆ ಹೇಳಬೇಕು. ಆದಕ್ಕೆ ಒಪ್ಪದಿದ್ದರೆ, ಅಂತಹ ಜನವಂಚಕರನ್ನು ರಾಜ್ಯದ ಶಾಸನದ ಕಡೆಯಿಂದ ದಂಡಿಸಬೇಕು. ಪ್ರಜಾಹಿತಸಾಧನೆಗಾಗಿ ಅಂತಹ ಗುರುವೇಷಧಾರಿಗಳಿಗೆ ಮೃತ್ಯುದಂಡವನ್ನಿತ್ತರೂ ದೋಷವಿಲ್ಲ. – **ಅನು.**

ಇರುತ್ತಾರೆ! ಹೇಗೆ ಕುರುಬರು ತಮ್ಮ ಕುರಿ-ಮೇಕೆಗಳಿಂದ, ಹಾಲು ಮೊದಲಾ ದುವುಗಳಿಂದ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೋ, ಹಾಗೆಯೇ [ಈ ಗುರುಗಳು] ಶಿಷ್ಯರ—ಅನುಯಾಯೀ-ಅನುಯಾಯಿನಿಯರ ಧನವನ್ನು ಕಸಿದು, ತಮ್ಮ ಸ್ವಾರ್ಥ ವನ್ನು ಪೂರ್ಣ ಮಾಡಿಕೊಳ್ಳುತ್ತಾರೆ. ಅವರು—

**ದೋಹಾ:—**

**ಗುರು ಲೋಭೀ ಚೇಲಾ ಲಾಲಚೀ ದೋನೋಂ ಖೇಲೇಂ ದಾವ್ ।**

**ಭವಸಾಗರಮೇಂ ಡೂಬತೇ, ಬೈಠ್ ಪತ್ಥರ್ ಕೀ ನಾವ್ ॥**

ಗುರುಗಳು—'ಶಿಷ್ಯೆ-ಶಿಷ್ಯೆಯರು ಏನನ್ನಾದರೂ ಕೊಟ್ಟೇ ಕೊಟ್ಟಾರು', ಎಂದು ನಿರೀಕ್ಷಿಸುವರು.



ಶಿಷ್ಯರು—'ಸರಿ ! ಗುರುಗಳು ಸುಳ್ಳು ಆಣೆಯಿಡುವುದು, ಪಾಪದಿಂದ ಬಿಡಿಸು ವುದು ಮೊದಲಾದ [ಈ ಕೆಲಸಕ್ಕೆ ಬರುತ್ತಾರೆ]', ಎಂಬ ಲೋಭದಿಂದ, [ಅವರ ಬಳಿ ಸಾರುವರು].

ಈ ಕಪಟ ಮುನಿಗಳಿಬ್ಬರೂ; ಕಲ್ಲಿನ ಹಡಗಿನಲ್ಲಿ ಕುಳಿತುಕೊಳ್ಳುವವರು ಹೇಗೆ ಸಮುದ್ರದಲ್ಲಿ ಮುಳುಗಿ ಸಾಯುವರೋ ; ಹಾಗೆ ಭವಸಾಗರದ ದುಃಖದಲ್ಲಿ ಮುಳುಗುತ್ತಾರೆ.

**ಇಂತಹ ಗುರು ಮತ್ತು ಶಿಷ್ಯರ ಬಾಯಿಗೆ ಮಣ್ಣು—ಬೂದಿ ಬೀಳಲಿ!**

ಅವರ ಬಳಿ ಯಾವನೂ ನಿಲ್ಲಬಾರದು. ಯಾವನು ಬಳಿ ಇರುವನೋ, ಅವನು ದುಃಖಸಾಗರದಲ್ಲಿ ಬೀಳುವನು.

ಪೂಜಾರೀ—ಪೌರಾಣಿಕರು ಎಂತಹ ಪೋಪಲೀಲೆಯನ್ನು ನಡೆಯಿಸಿದ್ದಾರೋ, ಅಂತಹ ಲೀಲೆಯನ್ನು ಈ ಕುರುಬ ಗುರುಗಳೂ ಕೂಡ ಮೆರೆಯಿಸಿದ್ದಾರೆ. ಈ ಕೆಲಸವೆಲ್ಲಾ ಸ್ವಾರ್ಥಿಗಳದಾಗಿದೆ.

**ಯಾರು ಪರಮಾರ್ಥಿಗಳಾದ ಜನರಾಗಿರುತ್ತಾರೋ, ಅವರು, ತಾವು ದುಃಖ ಗಳನ್ನು ಅನುಭವಿಸಿದರೂ ಕೂಡ, ಜಗತ್ತಿಗೆ ಉಪಕಾರ ಮಾಡುವುದನ್ನು ಬಿಡು ವುದಿಲ್ಲ.**

ಗುರುಮಾಹಾತ್ಮ್ಯ ಮತ್ತು ಗುರುಗೀತಾ ಮೊದಲಾದುವನ್ನೂ ಕೂಡ ಈ [ಲೋಭಿಗಳೂ]. ಕುಕರ್ಮಿಗಳೂ ಆದ ಗುರುಜನರು ರಚಿಸಿದ್ದಾರೆ.

## (18 ಕಲ್ಪಿತ ಪುರಾಣಗಳು ಮತ್ತು ಬ್ರಾಹ್ಮಣ ಗ್ರಂಥಗಳು)

ಪ್ರಶ್ನೆ :—

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ॥1॥**

**ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ॥2॥***

[ಮಹಾಭಾರತ]

**ಪುರಾಣಾನಿ ಖಿಲಾನಿ ಚ ......... .... ॥3॥**

[ಮನು:– 3.232]

**ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ॥4॥**

[ಛಾಂದೋಗ್ಯ:—7.14]

**ದಶಮೇಽಹನಿ ಕಿಂಚಿತ್ಪುರಾಣಮಾಚಕ್ಷೀತ ॥5॥†**

**ಪುರಾಣವಿದ್ಯಾ ವೇದಃ ॥6॥**

[ಸೂತ್ರಮ್]

ಹದಿನೆಂಟು ಪುರಾಣಗಳ ಕರ್ತೃವು ವ್ಯಾಸರಾಗಿದ್ದಾರೆ. ವ್ಯಾಸವಚನವನ್ನು ಅವಶ್ಯವಾಗಿ ಪ್ರಮಾಣೀಕರಿಸಬೇಕು. [1]

**ಇತಿಹಾಸ**=ಮಹಾಭಾರತ, [ಮತ್ತು] ಹದಿನೆಂಟು ಪುರಾಣಗಳಿಂದ, ವೇದಗಳ ಅರ್ಥವನ್ನು ಓದಬೇಕು–ಓದಿಸಬೇಕು. ಏಕೆಂದರೆ, ಇತಿಹಾಸ ಮತ್ತು ಪುರಾಣಗಳು ವೇದಗಳ ಅರ್ಥಗಳಿಗೇ ಅನುಕೂಲವಾಗಿವೆ. [2]

ಪಿತೃಕರ್ಮದಲ್ಲಿ ಪುರಾಣಗಳನ್ನು. ಮತ್ತು [**ಖಿಲ**, ಎಂದರೆ] **ಹರಿವಂಶದ** ಕಥೆಯನ್ನು ಆಲಿಸಬೇಕು. [3]

ಇತಿಹಾಸ ಮತ್ತು ಪುರಾಣಗಳು **ಐದನೆಯ ವೇದ**, ಎನಿಸುತ್ತವೆ. [4]

ಅಶ್ವಮೇಧದ ಸಮಾಪ್ತಿಯಲ್ಲಿ, ಹತ್ತನೆಯ ದಿನ ಸ್ವಲ್ಪ ಪುರಾಣದ ಕಥೆಯನ್ನು ಆಲಿಸಬೇಕು. [5]

ಪುರಾಣ-ವಿದ್ಯೆಯು ವೇದಾರ್ಥವನ್ನು ತಿಳುಹಿಸುವ ಕಾರಣದಿಂದಲೇ ವೇದಗಳಾಗಿವೆ. [6]

---

*ಆದಿಪರ್ವ (3/267)—ಯು.ಮೀ.

†ತುಲನೆ ಮಾಡಿ, ಶತಪಥ ಬ್ರಾಹ್ಮಣ (13.4.3.13)—ಯು.ಮೀ.

ಈ ಮೊದಲಾದ ಪ್ರಮಾಣಗಳಿಂದ, ಪುರಾಣಗಳ ಪ್ರಾಮಾಣ್ಯ, ಮತ್ತು ಇವುಗಳ* ಪ್ರಮಾಣದಿಂದ, ಪ್ರತಿಮಾಪೂಜನ, ಮತ್ತು ತೀರ್ಥಗಳ ಪ್ರಮಾಣವೂ ಸಿದ್ಧವಾಗುತ್ತದೆ. ಏಕೆಂದರೆ, ಪುರಾಣಗಳಲ್ಲಿ ಮೂರ್ತಿಪೂಜೆಯು ಮತ್ತು ತೀರ್ಥದ ವಿಧಾನವಿದೆ.

**ಉತ್ತರ:—ಹದಿನೆಂಟು ಪುರಾಣಗಳ ಕರ್ತೃಗಳು ವ್ಯಾಸರಾಗಿದ್ದಿದ್ದರೆ, ಅವುಗಳಲ್ಲಿ ಇಷ್ಟು ಬುರುಡೆಗಳು ಇರುತ್ತಿರಲಿಲ್ಲ.**

**ಏಕೆಂದರೆ, ಶಾರೀರಕ ಸೂತ್ರಗಳು, ಯೋಗಶಾಸ್ತ್ರದ ಭಾಷ್ಯ ಮೊದಲಾದ ವ್ಯಾಸೋಕ್ತ ಗ್ರಂಥಗಳನ್ನು ನೋಡುವುದರಿಂದ, ವ್ಯಾಸರು ಮಹಾ ವಿದ್ವಾಂಸರೂ, ಸತ್ಯವಾದಿಗಳೂ, ಧಾರ್ಮಿಕರೂ, ಯೋಗಿಗಳೂ ಆಗಿದ್ದರೆಂದು ವಿದಿತವಾಗುತ್ತದೆ.** ಅವರು ಇಂತಹ ಸುಳ್ಳು ಕಥೆಗಳನ್ನು ಎಂದಿಗೂ ಬರೆಯುತ್ತಿರಲಿಲ್ಲ.

ಮತ್ತು ಇದರಿಂದ—

"ಯಾವ ಸಾಂಪ್ರದಾಯಿಕ ಪರಸ್ಪರ ವಿರೋಧೀ ಜನರು **ಭಾಗವತವೇ** ಮೊದಲಾದ ನವೀನ ಕಪೋಲಕಲ್ಪಿತ ಗ್ರಂಥಗಳನ್ನು ರಚಿಸಿದ್ದಾರೋ, ಅವರಲ್ಲಿ ವ್ಯಾಸರಲ್ಲಿದ್ದ ಗುಣಗಳ ಲೇಶಮಾತ್ರವೂ ಇರಲಿಲ್ಲ. ಮತ್ತು ವೇದಶಾಸ್ತ್ರಗಳಿಗೆ ವಿರುದ್ಧವಾದ ಅಸತ್ಯವಾದಗಳನ್ನು ಬರೆಯುವುದು ವ್ಯಾಸರಂತಹ ವಿದ್ವಾಂಸರ ಕಾರ್ಯವಲ್ಲ; ಆದರೆ, ಈ ಕೆಲಸ [ವೇದಶಾಸ್ತ್ರ] ವಿರೋಧಿಗಳೂ, ಸ್ವಾರ್ಥಿಗಳೂ, ಅವಿದ್ವಾಂಸರೂ ಆದ ಜನರದ್ದಾಗಿದೆ", ಎಂಬುದು ಸಿದ್ಧವಾಗುತ್ತದೆ.

**'ಇತಿಹಾಸ'** ಮತ್ತು **'ಪುರಾಣ'**, ಎನ್ನುವುದು **ಶಿವಪುರಾಣ** ಮೊದಲಾದುದರ ಹೆಸರಲ್ಲ. ಆದರೆ —

**'ಬ್ರಾಹ್ಮಣಾನೀತಿಹಾಸಾನ್ ಪುರಾಣಾನಿ ಕಲ್ಪಾನ್ ಗಾಥಾ ನಾರಾಶಂಸೀರಿತಿ'** ।

ಇದು **ಬ್ರಾಹ್ಮಣ** ಮತ್ತು **ಸೂತ್ರಗಳ** ವಚನವಾಗಿದೆ.

ಐತರೇಯ, **ಶತಪಥ, ಸಾಮ** ಮತ್ತು **ಗೋಪಥ** ಬ್ರಾಹ್ಮಣ ಗ್ರಂಥಗಳಿಗೇ **ಇತಿಹಾಸ, ಪುರಾಣ, ಕಲ್ಪ, ಗಾಥಾ,** ಮತ್ತು **ನಾರಾಶಂಸೀ**—ಈ ಐದು ಹೆಸರುಗಳೂ ಇವೆ. ಉದಾಹರಣೆಗೆ—

**ಇತಿಹಾಸ:**—ದೃಷ್ಟಾಂತಕ್ಕಾಗಿ, ಜನಕ-ಯಾಜ್ಞವಲ್ಕ್ಯರ ಸಂವಾದ;

**ಪುರಾಣ:**—ಜಗದುತ್ಪತ್ತಿ ಮೊದಲಾದುದರ ವರ್ಣನೆ;

---

*ಎಂದರೆ, ಪುರಾಣಗಳ.—ಸಂ.

**ಕಲ್ಪ** :–ವೇದ ಶಬ್ದಗಳ ಸಾಮರ್ಥ್ಯದ ವರ್ಣನೆ; ಅರ್ಥ ನಿರೂಪಣೆ ಮಾಡುವುದು ;

**ಗಾಥಾ** :–ಯಾವನಾದರೊಬ್ಬನ ದೃಷ್ಟಾಂತ ಕೊಟ್ಟು, ಅದಕ್ಕೆ ಅನುರೂಪವಾಗಿ ಕಥಾ-ಪ್ರಸಂಗವನ್ನು ಹೇಳುವುದು;

**ನಾರಾಶಂಸೀ** :–ಮಾನವರ ಪ್ರಶಂಸನೀಯವಾದ ಅಥವಾ ಅಪ್ರಶಂಸನೀಯವಾದ, ಕರ್ಮಗಳ ಕಥನವನ್ನು ಮಾಡುವುದು.

**ಇವುಗಳಿಂದಲೇ, ವೇದಾರ್ಥದ ಅರಿವು ಉಂಟಾಗುತ್ತದೆ!**

**ಪಿತೃಕರ್ಮ**,* ಎಂದರೆ, ಜ್ಞಾನಿಗಳ ಪ್ರಶಂಸೆಯಲ್ಲಿ ಸ್ವಲ್ಪ ಆಲಿಸುವುದು. **ಅಶ್ವಮೇಧ**ದ ಕೊನೆಯಲ್ಲಿಯೂ ಇವುಗಳನ್ನೇ ಆಲಿಸಬೇಕು, ಎಂದು ಬರೆದಿದೆ.

ಏಕೆಂದರೆ, **ವ್ಯಾಸರಚಿತ**ವಾದ ಯಾವ ಗ್ರಂಥಗಳಿವೆಯೋ, ಅವುಗಳನ್ನು ಕೇಳುವುದು–ಹೇಳುವುದು ವ್ಯಾಸರ ಜನ್ಮದ, ಹಾಗೂ ಅವರು [ಗ್ರಂಥ] ರಚಿಸಿದ ನಂತರ, ಆಗಬಲ್ಲದೇ ಹೊರತು, ಅದಕ್ಕಿಂತ ಮೊದಲಲ್ಲ! ಯಾವಾಗ ವ್ಯಾಸರ ಜನ್ಮವೂ ಕೂಡ ಆಗಿರಲಿಲ್ಲವೋ, ಆಗಲೂ [ಕೂಡ] ವೇದಾರ್ಥದ ಅಧ್ಯಯನ–ಅಧ್ಯಾಪನಗಳನ್ನೂ, ಶ್ರವಣ-ಬೋಧನಗಳನ್ನೂ ಮಾಡುತ್ತಿದ್ದರು. ಆದುದರಿಂದ, ಎಲ್ಲಕ್ಕಿಂತ **ಪ್ರಾಚೀನವಾದ ಬ್ರಾಹ್ಮಣ**† **ಗ್ರಂಥ**ಗಳಿಗೆ ಮಾತ್ರ ಈ ಎಲ್ಲವೂ ಅನ್ವಯಿಸಬಲ್ಲದು. ಈ ನವೀನವೂ, ತಾವೇ ಕಲ್ಪಿಸಿಕೊಂಡುದೂ, ಆದ **ಶ್ರೀಮದ್ಭಾಗವತ, ಶಿವಪುರಾಣ** ಮೊದಲಾದ ಸುಳ್ಳಾದ ಅಥವಾ ದೂಷಿತವಾದ ಗ್ರಂಥಗಳಿಗೆ ಅನ್ವಯಿಸಲಾರದು.

### (ವ್ಯಾಸರಿಗೆ 'ವೇದವ್ಯಾಸ' ಎಂಬ ಹೆಸರು ಹೇಗೆ ಬಂದಿತು ?)

ವ್ಯಾಸರು ವೇದಗಳನ್ನೋದಿದರು; ಮತ್ತು ಓದಿಸಿ, ವೇದಾರ್ಥವನ್ನು ಪ್ರಸರಿಸಿದರು. ಆದುದರಿಂದ, ಅವರಿಗೆ **'ವೇದವ್ಯಾಸ'**, ಎಂದು ಹೆಸರಾಯಿತು.

ಏಕೆಂದರೆ, [ಯಾವುದೇ ವಸ್ತುವಿನ] ನಡುವಿನಿಂದ, ಅತ್ತಿಂದ-ಇತ್ತ ಹಾದು ಹೋಗುವ ಮಧ್ಯರೇಖೆಯನ್ನು **'ವ್ಯಾಸ'**, ಎನ್ನುತ್ತಾರೆ. ಎಂದರೆ, **ಋಗ್ವೇದ**ದ ಪ್ರಾರಂಭದಿಂದ ಹಿಡಿದು, **ಅಥರ್ವವೇದ**ದ ಕೊನೆಯವರೆಗೆ ನಾಲ್ಕು ವೇದಗಳನ್ನೂ

---

*ವೇದವಿರುದ್ಧವಾದ ಮೃತಕ ಶ್ರಾದ್ಧ ಅಲ್ಲ.—ಅನು.

†ಸಂಪ್ರತಿ ದೊರೆಯುವ ಬ್ರಾಹ್ಮಣ ಗ್ರಂಥಗಳಲ್ಲಿ, ವೇದದ ಶಾಖೆಗಳಲ್ಲಿ ಐತರೇಯ ಬ್ರಾಹ್ಮಣವನ್ನು ಬಿಟ್ಟರೆ, ಉಳಿದವು ಪ್ರಾಚೀನ ಗ್ರಂಥಗಳಲ್ಲ. ಎಂದರೆ, ಇವೆಲ್ಲಾ ಕೃಷ್ಣದ್ವೈಪಾಯನ ವ್ಯಾಸರ ಶಿಷ್ಯ-ಪ್ರಶಿಷ್ಯರಿಂದ ಪ್ರೋಕ್ತವಾಗಿವೆ. –ಯು.ಮೀ.

ಓದಿದ್ದರು. ಮತ್ತು ಶುಕದೇವ, ಹಾಗೂ ಜೈಮಿನಿ ಮೊದಲಾದ ಶಿಷ್ಯರಿಗೆ ಓದಿಸಿಯೂ ಇದ್ದರು. ಹಾಗಲ್ಲದಿದ್ದರೆ, ಅವರ ಜನ್ಮ-ನಾಮ 'ಕೃಷ್ಣ ದ್ವೈಪಾಯನ' ಎಂದಿದ್ದಿತು.

'ವೇದಗಳನ್ನು ವ್ಯಾಸರು ಒಂದುಗೂಡಿಸಿದರು', ಎಂದು ಹಲವರು ಹೇಳುವುದೂ ಕೂಡ ಸುಳ್ಳು ಮಾತೇ ಸರಿ! **ಏಕೆಂದರೆ, ವ್ಯಾಸರ ತಂದೆ, ತಾತ, ಮುತ್ತಾತ, ಪರಾಶರ, ಶಕ್ತಿ, ವಸಿಷ್ಠ ಮತ್ತು** ಬ್ರಹ್ಮಾ-**ಮೊದಲಾದವರೂ ಕೂಡ ನಾಲ್ಕೂ ವೇದಗಳನ್ನೂ ಓದಿದ್ದರು.** ಎಂದ ಮೇಲೆ, ಈ ಮಾತು ಹೇಗೆ ತಾನೇ ಅನ್ವಯಿಸಬಲ್ಲದು ?

## (ಶಿವಪುರಾಣ ಮೊದಲಾದುವು ಅಧಿಕಾಂಶ ಸುಳ್ಳಾಗಿವೆ)

**ಪ್ರಶ್ನೆ:**—ಪುರಾಣಗಳಲ್ಲಿ ಎಲ್ಲ ಮಾತುಗಳೂ ಸುಳ್ಳೇ ಆಗಿವೆಯೋ, ಅಥವಾ ಯಾವುದಾದರೂ ಸತ್ಯವಾಗಿಯೂ ಇದೆಯೋ ?

**ಉತ್ತರ:—ಬಹಳ ಮಾತುಗಳು ಸುಳ್ಳಾಗಿವೆ !** ಮತ್ತು ಯಾವ ಯಾವುದೋ ಒಂದು, **'ಘುಣಾಕ್ಷರನ್ಯಾಯ'***ದಿಂದ ಸತ್ಯವೂ ಆಗಿದೆ. **ಯಾವುವು ಸತ್ಯವಾಗಿವೆಯೋ, ಅವು ವೇದಗಳೇ ಮೊದಲಾದ ಸತ್ಯಶಾಸ್ತ್ರಗಳವು ! ಮತ್ತು ಯಾವುವು ಸುಳ್ಳಾಗಿವೆಯೋ, ಅವು ಈ ಪೋಪರುಗಳ ಪುರಾಣಗಳೆಂಬ ಮನೆಯುವಾಗಿವೆ !**

ಉದಾಹರಣೆಗಾಗಿ—

**ಶಿವಪುರಾಣದಲ್ಲಿ ಶಿವನನ್ನು ಪರಮೇಶ್ವರನೆಂದು** ಅಂಗೀಕರಿಸಿ, **ವಿಷ್ಣು, ಬ್ರಹ್ಮಾ, ಇಂದ್ರ, ಗಣೇಶ** ಮತ್ತು **ಸೂರ್ಯ** ಮೊದಲಾದವರನ್ನು ಅವನ ದಾಸರೆಂದು ನಿರ್ಣಯಿಸಿದರು.

ವೈಷ್ಣವರು **ವಿಷ್ಣುಪುರಾಣ** ಮೊದಲಾದುದರಲ್ಲಿ **ವಿಷ್ಣುವನ್ನು ಪರಮಾತ್ಮ**ನೆಂದು ಅಂಗೀಕರಿಸಿದರು ; ಮತ್ತು **ಶಿವ** ಮೊದಲಾದವರನ್ನು ವಿಷ್ಣುವಿನ ದಾಸರೆಂದು [ನಿರ್ಧರಿಸಿದರು].

**'ದೇವೀಭಾಗವತ'**ದಲ್ಲಿ **ದೇವಿಯನ್ನು ಪರಮೇಶ್ವರಿಯನ್ನಾಗಿ** [ಮಾಡಿದರು]; ಮತ್ತು **ಶಿವ, ವಿಷ್ಣು** ಮೊದಲಾದವರನ್ನು ಅವಳ ಕಿಂಕರರನ್ನಾಗಿ ಮಾಡಿದರು.

---

***ಸಮುದ್ರದ ತಟದ ಮರಳಿನ ಮೇಲೆ ಹುಳುವು ಹರಿದಾಗ ಅಕ್ಷರದ ಆಕಾರವು ಉದ್ದೇಶ್ಯವಿಲ್ಲದೆಯೇ ಮೂಡುವಂತೆ—ಅನು.**

ಯಾವುದೋ ಮರದ ಹುಳುವು ಮರವನ್ನು ಕೊರೆದು ತಿಂದಾಗ, ಆ ಕೊರೆದ ಭಾಗವು 'ಕ' ಎಂಬ ಅಕ್ಷರದಂತಾಯಿತು. ವಿದ್ಯೆಯಿಲ್ಲದ ಹುಳು ಹೇಗೆ ಅಕ್ಷರವನ್ನು ಕೊರೆಯಿತೋ ಹಾಗೆ, ಮೂರ್ಖರ ಮಾತೂ ಒಂದೊಂದು ಸಲ ಯಥಾರ್ಥವಾಗಿರುತ್ತದೆ, ಎಂದು ಅರ್ಥ.—ಸಂ.

**'ಗಣೇಶ ಖಂಡ'**ದಲ್ಲಿ ಗಣೇಶನನ್ನು ಈಶ್ವರನನ್ನಾಗಿಯೂ, ಮತ್ತು ಉಳಿದ ಸರ್ವರನ್ನೂ ದಾಸರನ್ನಾಗಿ ಮಾಡಿದರು.

ಭಲೇ! ಈ ಮಾತು ಈ ಸಾಂಪ್ರದಾಯಿಕ ಜನರದಲ್ಲವಾದರೆ, ಮತ್ತೆ ಯಾರದು?

ಒಬ್ಬ [ಸಾಧಾರಣ] ವಿಚಾರಶೀಲ ಮಾನವನ ಕೃತಿಯಲ್ಲಿಯೂ ಇಂತಹ ಪರಸ್ಪರ ವಿರುದ್ಧವಾದ ಮಾತುಗಳು ಇರುವುದಿಲ್ಲವೆಂದಮೇಲೆ, ವಿದ್ವಾಂಸನ ರಚನೆಯಲ್ಲಿ ಎಂದಿಗೂ ಇರಲಾರವು. ಇದರಲ್ಲಿ ಒಂದು ಮಾತನ್ನು ಸತ್ಯವೆಂದು ಒಪ್ಪಿದರೆ, ಇನ್ನೊಂದು ಸುಳ್ಳಾಗುತ್ತದೆ. ಮತ್ತು ಎರಡನೆಯದನ್ನು ಸತ್ಯವೆಂದು ಒಪ್ಪಿದರೆ, ಮೂರನೆಯದು ಸುಳ್ಳು. ಮತ್ತು ಮೂರನೆಯದನ್ನು ಸತ್ಯವೆಂದು ಒಪ್ಪಿದರೆ, ಬೇರೆ ಎಲ್ಲವೂ ಸುಳ್ಳಾಗುತ್ತವೆ.

**ಶಿವಪುರಾಣ**ದವರು ಶಿವನಿಂದ ; **ವಿಷ್ಣುಪುರಾಣ**ದವರು ವಿಷ್ಣುವಿನಿಂದ ; **ದೇವೀ ಪುರಾಣ**ದವರು ದೇವಿಯಿಂದ ; **ಗಣೇಶಖಂಡ**ದವರು ಗಣೇಶನಿಂದ; **ಸೂರ್ಯಪುರಾಣ**ದವರು ಸೂರ್ಯನಿಂದ; ಮತ್ತು **ವಾಯುಪುರಾಣ**ದವರು ವಾಯುವಿನಿಂದ ಸೃಷ್ಟಿಯ ಉತ್ಪತ್ತಿ, ಪ್ರಳಯಗಳನ್ನು ಬರೆದು, ಮತ್ತೆ ಯಾವ ಒಬ್ಬ ಒಬ್ಬನಿಂದ ಒಂದೊಂದು ಜಗತ್ತು ಉತ್ಪನ್ನವಾಯಿತೆಂದು ಬರೆದರೋ, ಅವನ ಉತ್ಪತ್ತಿಗೂ ಒಂದೊಂದು ಕಾರಣವನ್ನು ಬರೆದಿಟ್ಟರು !

ಯಾವನಾದರೂ ಇವರನ್ನು—

"ಜಗತ್ತಿನ ಉತ್ಪತ್ತಿ–ಸ್ಥಿತಿ–ಪ್ರಳಯಗಳನ್ನುಮಾಡುವವನು ಉತ್ಪನ್ನನಾಗುತ್ತಾನೇನು ? ಮತ್ತು ಯಾವನು ಉತ್ಪನ್ನನಾಗುತ್ತಾನೋ, ಅವನು ಸೃಷ್ಟಿಯ ಕಾರಣವೆಂದಾದರೂ ಆಗಬಲ್ಲನೋ, ಅಥವಾ ಇಲ್ಲವೋ ?", ಎಂದು ಪ್ರಶ್ನಿಸಬೇಕು.

ಆಗ, ಕೇವಲ ಸುಮ್ಮನಿರುವುದರ ಹೊರತು, ಮತ್ತೇನನ್ನೂ ಹೇಳಲಾರರು.

ಮತ್ತು ಇವರೆಲ್ಲರ* ಶರೀರಗಳ ಉತ್ಪತ್ತಿಯೂ ಕೂಡ ಇದರಿಂದಲೇ† ಆಗಿರಬಹುದು. ಮತ್ತೆ, ಅವರು ಸ್ವತಃ ಜಗತ್ತಿನ ರಚಿತ ವಸ್ತುಗಳೂ, ಹಾಗೂ ಪರಿಚ್ಛಿನ್ನರೂ‡ ಆಗಿ, ಜಗದುತ್ಪಾದಕರಾಗಬಲ್ಲರಾದರೂ ಎಂತು ?

ಮತ್ತು [ಜಗತ್ತಿನ] ಉತ್ಪತ್ತಿಯನ್ನೂ ಕೂಡ, ಸರ್ವಥಾ ಅಸಂಭವವಾದ ವಿಲಕ್ಷಣ–ವಿಲಕ್ಷಣವಾದ ರೀತಿಯಲ್ಲಿ ಅಂಗೀಕರಿಸಿದ್ದಾರೆ. ಉದಾಹರಣೆಗಾಗಿ :—

---

*ಶಿವ, ವಿಷ್ಣು ಮೊದಲಾದವರ—ಅನು.

†ಈ ಪ್ರಕೃತಿಯಿಂದ—ಅನು.

‡ಏಕದೇಶೀಯರೂ—ಅನು.

## (ಶಿವಪುರಾಣೋಕ್ತ ಸೃಷ್ಟಿರಚನೆಯ ವಿವೇಚನೆ)

**ಶಿವಪುರಾಣದಲ್ಲಿ—**

**ಶಿವ**ನು 'ನಾನು ಸೃಷ್ಟಿ ಮಾಡುವೆ', ಎಂದು ಇಚ್ಛಿಸಿದನು. ಆಗ **ನಾರಾಯಣ** ಜಲಾಶಯವನ್ನು* ಉತ್ಪನ್ನ ಮಾಡಿದನು. ಅದರ ನಾಭಿಯಿಂದ† **ಕಮಲವೂ**, ಕಮಲದಿಂದ ಬ್ರಹ್ಮನೂ ಉತ್ಪನ್ನನಾದನು.

ಎಲ್ಲವೂ ಜಲಮಯವಾಗಿದೆ, ಎಂಬುದನ್ನು ಅವನು‡ ನೋಡಿದನು. ಅಂಜಲಿಯಲ್ಲಿ ಜಲವನ್ನೆತ್ತಿ, ನೋಡಿ, ಜಲದಲ್ಲಿಯೇ ಸುರಿದುಬಿಟ್ಟನು. ಅದರಿಂದ, ಒಂದು **ನೀರ್ಗುಳ್ಳೆ** ಉದ್ಭವಿಸಿತು. ಮತ್ತು ನೀರ್ಗುಳ್ಳೆಯಿಂದ ಒಬ್ಬ **ಪುರುಷ**ನು ಉತ್ಪನ್ನನಾದನು.

ಅವನು ಬ್ರಹ್ಮನಿಗೆ —"ಓ ಮಗನೇ! ಸೃಷ್ಟಿಯನ್ನು ಉತ್ಪನ್ನಮಾಡು.", ಎಂದನು.

ಬ್ರಹ್ಮನು ಅವನಿಗೆ—"ನಾನು ನಿನ್ನ ಮಗನಲ್ಲ; ಆದರೆ, ನೀನು ನನ್ನ ಮಗನಾಗಿದ್ದೀಯೆ.", ಎಂದು ಹೇಳಿದನು.

ಅವರಲ್ಲಿ ವಿವಾದ ಉಂಟಾಯಿತು. ಮತ್ತು ದಿವ್ಯ ಸಹಸ್ರ ವರ್ಷಗಳವರೆಗೆ ಇಬ್ಬರೂ ನೀರಿನ ಮೇಲೆ ಕಾದಾಡುತ್ತಿದ್ದರು.

ಆಗ, **ಮಹಾದೇವನು**—'ಯಾರನ್ನು ನಾನು ಸೃಷ್ಟಿಮಾಡಲು ಕಳುಹಿಸಿದ್ದೆನೋ, ಅವರಿಬ್ಬರೂ ಪರಸ್ಪರ ಹೋರಾಡುತ್ತಾ-ಜಗಳ ಮಾಡುತ್ತಾ ಇದ್ದಾರಲ್ಲ!', ಎಂದು ಆಲೋಚಿಸಿದನು.

ಆಗ, ಅವರಿಬ್ಬರ ನಡುವೆ ಒಂದು **ತೇಜೋಮಯವಾದ** ಲಿಂಗವು ಉತ್ಪನ್ನವಾಯಿತು. ಮತ್ತು ಅದು ಶೀಘ್ರವಾಗಿ ಆಕಾಶಕ್ಕೆ ಏರಿಬಿಟ್ಟಿತು. ಅದನ್ನು ನೋಡಿ, ಇಬ್ಬರೂ ಆಶ್ಚರ್ಯಯುಕ್ತರಾದರು.

---

*ಎಂದರೆ, ನಾರಾಯಣ ಎಂಬ ಹೆಸರಿನ ಜಲಾಶಯ. 'ನಾರಾಯಣ ತೀರ್ಥ'ದ ನಿರ್ದೇಶ ಶಿವಪುರಾಣದಲ್ಲಿದೆ. ಇದರಿಂದಲೇ ಶಿವನು ಸೃಷ್ಟಿರಚನೆ ಮಾಡಿದನು. —ಯು.ಮೀ.

†ಎಂದರೆ, ಮಧ್ಯದಿಂದ. ವಿಷ್ಣುವಿನ ನಾಭಿಯಿಂದ ಬ್ರಹ್ಮನು ಹುಟ್ಟಿದನೆಂಬ ಸಂಗತಿಯು ಶಿವಪುರಾಣದ ಮತವಲ್ಲ. ಬ್ರಹ್ಮನೇ ಪುರುಷನನ್ನು, ಎಂದರೆ ವಿಷ್ಣುವನ್ನು ಉತ್ಪನ್ನ ಮಾಡಿದನು, ಎಂದು ಮುಂದೆ ಹೇಳಲಾಗಿದೆ —ಸಂ.

‡ಎಂದರೆ, ಬ್ರಹ್ಮನು.—ಸಂ.

'ಇದರ ಆದಿ-ಅಂತಗಳನ್ನು ತಿಳಿಯಬೇಕು. ಯಾವನು ಆದಿ-ಅಂತಗಳನ್ನರಿತು, ಬೇಗ ಬರುವನೋ, ಅವನು **ತಂದೆ** ! ಮತ್ತು ಯಾವನು ಆ ಮೇಲೆ ತಿಳಿದುಕೊಂಡು, ಅಥವಾ ಅಳತೆಯರಿಯದೇ ಬರುವನೋ, ಅವನು **ಪುತ್ರ**, ಎನ್ನಿಸಿಕೊಳ್ಳಲಿ.', ಎಂದು ನಿರ್ಧರಿಸಿಕೊಂಡರು.

**ವಿಷ್ಣುವು ಆಮೆಯ ರೂಪ ತಾಳಿ**, ಕೆಳಕ್ಕೆ ನಡೆದನು. ಮತ್ತು **ಬ್ರಹ್ಮನು ಹಂಸದ ಶರೀರವನ್ನು ಧರಿಸಿ**, ಮೇಲಕ್ಕೆ ಹಾರಿದನು. ಇಬ್ಬರೂ ಮನೋವೇಗದಿಂದ ನಡೆದರು. ದಿವ್ಯಸಹಸ್ರವರ್ಷಪರ್ಯಂತ ಇಬ್ಬರೂ ನಡೆಯುತ್ತಲೇ ಇದ್ದರು. ಆದರೂ, ಅದರ ಅಂತವನ್ನು **ಕಾಣಲಿಲ್ಲ** !

ಆಗ, ಕೆಳಗಿನಿಂದ ಮೇಲಕ್ಕೆ ವಿಷ್ಣುವೂ, ಮತ್ತು ಮೇಲಿನಿಂದ ಕೆಳಕ್ಕೆ ಬ್ರಹ್ಮನೂ ನಡೆದರು.

[ಬ್ರಹ್ಮನು]—'ಮತ್ತೊಬ್ಬನು ಕೊನೆಯನ್ನು ಕಂಡು ಬಂದಿರುವುದಾದರೆ, ನಾನು ಪುತ್ರನಾಗಬೇಕಾದೀತಲ್ಲ !', ಎಂದು ಯೋಚಿಸಿದನು.

ಬ್ರಹ್ಮನು ಹೀಗೆ ಯೋಚಿಸುತ್ತಿರುವಾಗಲೇ, ಒಂದು **ಹಸು** ಮತ್ತು ಒಂದು **ಕೇತಕೀವೃಕ್ಷ** ಮೇಲಿನಿಂದ ಇಳಿದು ಬಂದುವು.

ಅವುಗಳನ್ನು ಬ್ರಹ್ಮನು—"ನೀವು ಎಲ್ಲಿಂದ ಬಂದಿರಿ?", ಎಂದು ಕೇಳಿದನು.

ಅವು—"ನಾವು ಸಹಸ್ರವರ್ಷಗಳಿಂದ ಈ ಲಿಂಗದ ಆಧಾರದಿಂದ ನಡೆದು ಬರುತ್ತಿದ್ದೇವೆ.", ಎಂದುವು.

ಬ್ರಹ್ಮನು—"ಈ ಲಿಂಗಕ್ಕೆ ಕೊನೆಯಿದೆಯೋ, ಅಥವಾ ಇಲ್ಲವೋ ?, ಎಂದು ಕೇಳಿದನು.

ಅವು—"ಇಲ್ಲ", ಎಂದುವು.

ಬ್ರಹ್ಮನು ಅವಕ್ಕೆ—"ನೀವು ನಮ್ಮೊಂದಿಗೆ ನಡೆಯಿರಿ; ಮತ್ತು [ಹಸುವು]—'ನಾನು ಈ ಲಿಂಗದ ಮಸ್ತಕದ ಮೇಲೆ ಹಾಲಿನ ಧಾರೆಯನ್ನು ಕರೆಯುತ್ತಿದ್ದೆನು', ಎಂದೂ, ಹಾಗೂ ವೃಕ್ಷವು—'ನಾನು ಹೂಗಳನ್ನು ಸುರಿಸುತ್ತಿದ್ದೆನು', ಎಂದೂ ಸಾಕ್ಷ್ಯವನ್ನು ಕೊಡಿರಿ. ಹೀಗೆ ಸಾಕ್ಷ್ಯಕೊಡುವುದಾದರೆ, ನಾನು ನಿಮ್ಮನ್ನು ನೆಲೆಗೆ ಮುಟ್ಟಿಸುವೆನು.", ಎಂದು ಹೇಳಿದನು.

ಅವು—"ನಾವು ಸುಳ್ಳು ಸಾಕ್ಷ್ಯವನ್ನು ಕೊಡುವುದಿಲ್ಲ.", ಎಂದವು.

ಆಗ ಬ್ರಹ್ಮನು ಕ್ರುದ್ಧನಾಗಿ—"ನೀವು ಸಾಕ್ಷ್ಯ ಕೊಡದಿದ್ದರೆ, ನಾನು ನಿಮ್ಮನ್ನು ಈಗಲೇ ಭಸ್ಮಮಾಡಿಯೇ ಬಿಡುತ್ತೇನೆ", ಎಂದನು.

ಆಗ ಎರಡೂ ಹೆದರಿ—"ನೀವು ಹೇಗೆ ಹೇಳುತ್ತೀರೋ, ಹಾಗೆ ನಾವು ಸಾಕ್ಷ್ಯ ಕೊಡುವೆವು.", ಎಂದವು.

ಆಗ ಮೂವರೂ ಕೆಳಕ್ಕೆ ನಡೆದರು.

ವಿಷ್ಣುವು ಮೊದಲೇ ಬಂದಿದ್ದನು. ಬ್ರಹ್ಮನೂ ಬಂದು ಸೇರಿದನು.

ಬ್ರಹ್ಮನು ವಿಷ್ಣುವನ್ನು—"ನೀನು '**ಅಂತ**'ವನ್ನು ತಿಳಿದು ಬಂದೆಯೋ, ಅಥವಾ ಇಲ್ಲವೋ ?", ಎಂದು ಕೇಳಿದನು.

ಆಗ ವಿಷ್ಣುವು—"ನನಗೆ ಇದರ **ಅಂತ** ಸಿಕ್ಕಲಿಲ್ಲ.", ಎಂದನು,

ಬ್ರಹ್ಮನು—"ನಾನು ಕಂಡು ಬಂದಿದ್ದೇನೆ.", ಎಂದನು.

ವಿಷ್ಣುವು—"ಏನಾದರೂ ಸಾಕ್ಷ್ಯವನ್ನು ಕೊಡು.", ಎಂದನು.

ಆಗ ಹಸು ಮತ್ತು ವೃಕ್ಷ—"ನಾವು ಇಬ್ಬರೂ ಲಿಂಗದ ಮಸ್ತಕದ ಮೇಲೆ ಇದ್ದೆವು.", ಎಂದು ಸಾಕ್ಷ್ಯವನ್ನು ಕೊಟ್ಟವು.

ಆಗ ಲಿಂಗದೊಳಗಿನಿಂದ ಶಬ್ದ ಹೊರಟಿತು! ಮತ್ತು [ವೃಕ್ಷಕ್ಕೆ]—

"ನೀನು ಸುಳ್ಳು ಹೇಳಿದೆಯಾದ ಕಾರಣ, ನಿನ್ನ ಹೂವು ಬಾಡಿ ಹೋಗುವುದು; ಅಥವಾ ಬೇರಾವ ದೇವತೆಯ ಮೇಲೆಯೂ ಜಗತ್ತಿನಲ್ಲಿ ಏರುವುದಿಲ್ಲ. ಮತ್ತು ಯಾವ ನಾದರೂ ಏರಿಸಿದಲ್ಲಿ, ಅವನಿಗೆ ಸರ್ವನಾಶವಾದೀತು!", ಎಂದು ಶಾಪವಿತ್ತಿತು.

ಮತ್ತು ಹಸುವಿಗೆ—

"ಯಾವ ಬಾಯಿಯಿಂದ ನೀನು ಸುಳ್ಳಾಡಿದೆಯೋ, ಅದರಿಂದಲೇ ಮಲವನ್ನು ತಿನ್ನುತ್ತಾ ಹೋಗುವೆ. ನಿನ್ನ ಮುಖಕ್ಕೆ ಯಾವನೂ ಪೂಜೆ ಮಾಡುವುದಿಲ್ಲ; ಆದರೆ, ಬಾಲವನ್ನು ಪೂಜಿಸುವರು.", ಎಂದು ಶಾಪ ಕೊಟ್ಟಿತು.

ಮತ್ತು ಬ್ರಹ್ಮನಿಗೆ—

"ನೀನು ಸುಳ್ಳನ್ನು ಹೇಳಿದೆಯಾದುದರಿಂದ, ನಿನ್ನ ಪೂಜೆ ಜಗತ್ತಿನಲ್ಲಿ ಎಲ್ಲಿಯೂ ನಡೆಯುವುದಿಲ್ಲ.", ಎಂದು ಶಾಪವಿತ್ತಿತು.

ಮತ್ತು ವಿಷ್ಣುವಿಗೆ—

"ನೀನು ಸತ್ಯವನ್ನಾಡಿದುದರಿಂದ, ನಿನ್ನ ಪೂಜೆ ಸರ್ವತ್ರ ನಡೆಯುವುದು.", ಎಂದು ವರವನ್ನು ಕೊಟ್ಟಿತು.

ಮತ್ತೆ, ಇಬ್ಬರೂ ಲಿಂಗವನ್ನು ಸ್ತುತಿಸಿದರು. ಅದರಿಂದ ಪ್ರಸನ್ನನಾಗಿ, ಆ ಲಿಂಗದೊಳಗಿನಿಂದ, ಜಟಾಜೂಟವಾದ ಮೂರ್ತಿಯೊಂದು ಹೊರಬಂದಿತು. ಮತ್ತು—

"ನಿಮ್ಮನ್ನು ನಾನು ಸೃಷ್ಟಿಮಾಡುವುದಕ್ಕಾಗಿ ಕಳುಹಿಸಿದ್ದೆನು. ಜಗಳದಲ್ಲಿ ಏಕೆ ಸಿಕ್ಕಿಕೊಂಡಿದ್ದಿರಿ ?", ಎಂದು ಕೇಳಿತು.

ಬ್ರಹ್ಮನು ಮತ್ತು ವಿಷ್ಣುವು—"ಸಾಮಗ್ರಿಯಿಲ್ಲದೇ ನಾವು ಸೃಷ್ಟಿಯನ್ನು ಎಲ್ಲಿಂದ ಮಾಡೋಣ ?", ಎಂದು ಕೇಳಿದರು.

ಆಗ ಮಹಾದೇವನು ತನ್ನ ಜಡೆಯೊಳಗಿನಿಂದ **ಭಸ್ಮದ ಗೋಳ** ಒಂದನ್ನು ತೆಗೆದುಕೊಟ್ಟನು. [ಮತ್ತು]—

"ಹೋಗಿ! ಇದರಿಂದ ಸಮಸ್ತ ಸೃಷ್ಟಿಯನ್ನೂ ಮಾಡಿರಿ.", [ಎಂದನು.]

ಈ ಮೊದಲಾದುವನ್ನು [ಬರೆದಿದೆ].

ಭಲೇ! ಯಾರಾದರೂ ಈ ಪುರಾಣಗಳನ್ನು ರಚಿಸಿದವರನ್ನು—

**'ಯಾವಾಗ ಸೃಷ್ಟಿ ತತ್ತ್ವಗಳು ಮತ್ತು ಪಂಚ ಮಹಾಭೂತಗಳೂ ಕೂಡ ಇರಲಿಲ್ಲವೋ; ಆಗ ಬ್ರಹ್ಮ, ವಿಷ್ಣು, ಮಹಾದೇವ-ಇವರ ಶರೀರಗಳು; ಜಲ, ಕಮಲ, ಲಿಂಗ, ಹಸು ಮತ್ತು ಕೇತಕೀ ವೃಕ್ಷ ಮತ್ತು ಭಸ್ಮದ ಗೋಳ-ಇವೆಲ್ಲಾ ನಿಮ್ಮ ಅಜ್ಜನ ಮನೆಯಿಂದ ಬಂದು ಬಿದ್ದವೋ ?"**, ಎಂದು ಕೇಳಬೇಕು.

### (ಭಾಗವತಪುರಾಣೋಕ್ತ ಸೃಷ್ಟಿರಚನೆಯ ವಿವೇಚನೆ)

ಹಾಗೆಯೇ, **ಭಾಗವತ***ದಲ್ಲಿ—

**'ವಿಷ್ಣುವಿನ ನಾಭಿಯಿಂದ ಕಮಲವೂ, ಕಮಲದಿಂದ ಬ್ರಹ್ಮನೂ, ಮತ್ತು ಬ್ರಹ್ಮನ ಬಲಗಾಲಿನ ಹೆಬ್ಬೆರಳಿನಿಂದ ಸ್ವಾಯಂಭುವನೂ, ಮತ್ತು ಎಡ ಬೆರಳಿನಿಂದ**

*'ಭಾಗವತ-ಖಂಡನಮ್', ಎಂಬ ಸಂಸ್ಕೃತದ ಕಿರುಹೊತ್ತಿಗೆ ಸ್ವಾಮೀ ದಯಾನಂದರ ಮೊದಲ ಕೃತಿ.—ಸಂ.

ಶತರೂಪಾ ರಾಣಿಯೂ; ಹಣೆಯಿಂದ ರುದ್ರ ಮತ್ತು ಮರೀಚಿ ಮೊದಲಾದ ಹತ್ತು ಜನ ಪುತ್ರರೂ: ಅವರಿಂದ ಹತ್ತು ಮಂದಿ ಪ್ರಜಾಪತಿಗಳೂ [ಉದ್ಭವಿಸಿದರು].

ಅವರ ಹದಿಮೂರು ಮಂದಿ ಪುತ್ರಿಯರ ವಿವಾಹ ಕಶ್ಯಪನೊಂದಿಗಾಯಿತು.

ಅವರಲ್ಲಿ, ದಿತಿಯಿಂದ ದೈತ್ಯರೂ, ದನುವಿನಿಂದ ದಾನವರೂ, ಅದಿತಿಯಿಂದ ಆದಿತ್ಯರೂ, ವಿನತೆಯಿಂದ ಪಕ್ಷಿಗಳೂ, ಕದ್ರುವಿನಿಂದ ಸರ್ಪಗಳೂ, ಸರಮೆಯಿಂದ ನಾಯಿಗಳೂ, ನರಿಗಳೂ ಮೊದಲಾದುವೂ, ಮತ್ತು ಬೇರೆ ಸ್ತ್ರೀಯರಿಂದ ಆನೆಗಳು, ಕುದುರೆಗಳು, ಒಂಟೆಗಳು, ಕತ್ತೆ, ಕೋಣ, ಹುಲ್ಲು-ಮೇವು ಮತ್ತು ನೆಗ್ಗಿಲು ಮೊದಲಾದ, ಮುಳ್ಳುಗಳನ್ನುಳ್ಳ ವೃಕ್ಷಗಳೂ ಉತ್ಪನ್ನವಾದುವು!'

ಧನ್ಯ! ಧನ್ಯ!! ಭಾಗವತವನ್ನು ನಿರ್ಮಿಸಿದ ಮೊಂಡು ಮುಂಡೆಯ ಗುಂಡಪ್ಪ!* ಏನೆನ್ನೋಣ ನಿನಗೆ!! ಇಂತಹ-ಇಂತಹ ಸುಳ್ಳು ಮಾತುಗಳನ್ನು ಬರೆಯುವಲ್ಲಿ ಎಳ್ಳಿನಷ್ಟಾದರೂ ಲಜ್ಜೆ, ನಾಚಿಕೆ ಬರಲಿಲ್ಲವಲ್ಲ! ತೀರ ಕುರುಡನೇ ಆಗಿಹೋದೆಯಲ್ಲ!

ಅಲ್ಲಾ! ಸ್ತ್ರೀ-ಪುರುಷರ ರಜೋವೀರ್ಯ ಸಂಯೋಗದಿಂದ, ಮನುಷ್ಯರಂತೂ ಹುಟ್ಟಿಯೇ ಹುಟ್ಟುತ್ತಾರೆ. ಆದರೆ, ಪರಮೇಶ್ವರನ ಸೃಷ್ಟಿಕ್ರಮಕ್ಕೆ ವಿರುದ್ಧವಾಗಿ ಪಶು, ಪಕ್ಷಿ, ಸರ್ಪ ಮೊದಲಾದುವು ಎಂದಿಗೂ ಉತ್ಪನ್ನವಾಗಲಾರವು. ಮತ್ತು ಆನೆ, ಒಂಟೆ, ಸಿಂಹ, ನಾಯಿ, ಕತ್ತೆ ಮತ್ತು ಮರ ಮೊದಲಾದುವು ನಾರಿಯ ಗರ್ಭಾಶಯದಲ್ಲಿ ಸ್ಥಿತವಾಗಲು ಅವಕಾಶವಾದರೂ ಎಲ್ಲಿಂದ ಉಂಟಾಗಬಲ್ಲದು ? ಮತ್ತು ಸಿಂಹ ಮೊದಲಾದುವು ಉತ್ಪನ್ನವಾಗಿ, ತಮ್ಮ ತಾಯಿ ತಂದೆಗಳನ್ನೇಕೆ ತಿಂದುಹಾಕಲಿಲ್ಲ? ಮತ್ತು ಮಾನವಶರೀರದಿಂದ ಪಶು, ಪಕ್ಷಿ, ವೃಕ್ಷ ಮೊದಲಾದವುಗಳ ಉತ್ಪಾದನೆ ಅದೆಂತು ಸಂಭವವಾಗಬಲ್ಲದು ?

ಯಾವುದು ಈವರೆಗೂ ಜಗತ್ತನ್ನು ಭ್ರಾಂತವಾಗಿಟ್ಟಿದೆಯೋ, ಅಂತಹ, ಈ ಜನರ ರಚನೆಯಾದ ಈ ಮಹಾ ಅಸಂಭವ ಲೀಲೆಗಳ ಮೇಲೆ ಶೋಕ ಉಂಟಾಗುತ್ತದೆ!

ಅಲ್ಲಾ! ಈ ಮಹಾ ಅಸತ್ಯವಾದ ಮಾತುಗಳನ್ನು ಆ ಕುರುಡ ಪೋಪರೂ, ಹಾಗೂ ಒಳಗಣ–ಹೊರಗಣ ಕಣ್ಣುಗಳನ್ನು ಕಳೆದುಕೊಂಡಿರುವ ಅವರ ಅನುಯಾಯಿಗಳೂ ಆಲಿಸುತ್ತಾರೆ; ಮತ್ತು ಅಂಗೀಕರಿಸುತ್ತಾರೆ !!

ಇವರು ಮನುಷ್ಯರೋ, ಅಥವಾ ಬೇರೆ ಇನ್ನಾರೋ, ಎಂಬುದು ಮಹದಾಶ್ಚರ್ಯಕರವೇ ಆದ ವಿಷಯವಾಗಿದೆ!!!

---

*ಹಿಂದಿಯಲ್ಲಿ ಇದಕ್ಕೆ –'ಲಾಲ್ ಬುಝಕ್ಕಡ್', ಎಂಬ ಶಬ್ದದ ಪ್ರಯೋಗ ಮಾಡಲಾಗಿದೆ.—ಸಂ.

ಈ ಭಾಗವತ* ಮೊದಲಾದ ಪುರಾಣಗಳನ್ನು ರಚಿಸಿದವರು ಗರ್ಭಕ್ಕೆ ಬಂದ ಕೂಡಲೇ ಗರ್ಭದಲ್ಲಿಯೋ ಏಕೆ ನಾಶವಾಗಿ ಹೋಗಲಿಲ್ಲ ?† ಅಥವಾ ಹುಟ್ಟುವ ಸಮಯದಲ್ಲೇ ಏಕೆ ಸತ್ತು ಹೋಗಲಿಲ್ಲ !‡

ಏಕೆಂದರೆ, ಈ ಪೋಪರುಗಳಿಂದ ದೂರವಿದ್ದಿದ್ದರೆ, ಆರ್ಯಾವರ್ತದೇಶ ದುಃಖಗಳಿಂದ ದೂರವಿರುತ್ತಿದ್ದಿತು.

## (ಸೃಷ್ಟಿಕ್ರಮಕ್ಕೆ ವಿರುದ್ಧವಾಗಿ ರಚನೆಯಾಗಲಾರದು)

ಪ್ರಶ್ನೆ :—ಈ ಮಾತುಗಳಿಂದ ವಿರೋಧ ಬರಲಾರದು. ಏಕೆಂದರೆ, 'ಯಾವನ ಮದುವೆಯೋ, ಅವನದೇ ಸ್ತುತಿಪಾಠ'!

---

*ಭಾಗವತ-ರಚನಾಕಾರನು ಬೋಪದೇವ, ಎಂಬುದನ್ನು ಮುಂದೆ ಓದುವಿರಿ.—ಸಂ.

†ಎಂದರೆ, ಈ ಜಗತ್ತಿನಲ್ಲಿ ಜನ್ಮವನ್ನೇ ಎತ್ತದೇ ಹೋಗಿದ್ದರೆ, ಅಥವಾ ಜನ್ಮವೆತ್ತಿದ ಮೇಲೆ ಇಂತಹ ವಿಕೃತ ಕೃತಿಗಳನ್ನು ರಚಿಸುವ ಯೋಚನೆಯೇ ಬಾರದಿದ್ದರೆ, ಎಷ್ಟೋ ಒಳ್ಳೆಯದಾಗು ತ್ತಿದ್ದಿತು.—ಅನು.

‡ಸಂಪ್ರದಾಯಸ್ಥ ವೈಷ್ಣವರಿಗೆ ಈ ಮಾತು ಅತಿ ಕಠೋರವಾಗಿ ತೋರಿರಬಹುದು. ಆದರೆ, ಮಹರ್ಷಿ ದಯಾನಂದರು ಈ ಮಾತನ್ನು ಅತಿ ನೊಂದು, ಬಹಳ ದುಃಖದಿಂದ, ವ್ಯಕ್ತ ಮಾಡಿದ್ದಾರೆ. ಭಾಗವತದ ಪ್ರಚಾರದಿಂದ ದೇಶದಲ್ಲಿ ಎಷ್ಟು ಭ್ರಮೆ ಹರಡಿ, ಜನರು ನಿಷ್ಕ್ರಿಯ ರಾಗಿ, ಉತ್ಸವಪ್ರಿಯರಾಗಿ, ದುರಾಚಾರಗಳಿಗೀಡಾಗಿ, ದೇಶದ ಸ್ವಾತಂತ್ರ್ಯವನ್ನೂ ಕೂಡ ಕಳೆದು ಕೊಂಡ ವಿಷಾದಕರ ಪರಿಸ್ಥಿತಿಯನ್ನು ದಯಾನಂದರು ಕಣ್ಣಾರೆ ನೋಡಿದ್ದರು. ಆಗ ಅವರಿಗೆ 33 ವರ್ಷ.

1857ನೆಯ ಇಸವಿಯ 'ಭಾರತದ ಪ್ರಥಮ ಸ್ವಾತಂತ್ರ್ಯ ಸಮರ'ದಲ್ಲಿ ಝಾನ್ಸೀ ರಾಣಿಯಾದ ಲಕ್ಷ್ಮೀಬಾಯಿಯು ತಾಂತ್ಯಾಟೋಪೇ, ನಾನಾರಾವ್ ಮೊದಲಾದ ಸ್ವಾತಂತ್ರ್ಯ ವೀರರ ನೆರವಿನಿಂದ, ಆಂಗ್ಲರ ಪಕ್ಷಪಾತಿಯೂ ಮಹಾಸೈನ್ಯಶಕ್ತಿಯುತನೂ ಆದ ಗ್ವಾಲಿಯರ್ ಸಿಂಧ್ಯನ ರಾಜಧಾನಿಯನ್ನು ಕೇವಲ ಎರಡೇ ದಿನಗಳ ಯುದ್ಧಮಾಡಿ, ವಶಪಡಿಸಿಕೊಂಡಳು. ಆಗ ಸದಾಶಿವರಾವ್ ಸಿಂಧ್ಯನು ಆಂಗ್ಲರ ನೆರವನ್ನು ಪಡೆಯಲು ಆಗ್ರಾಕ್ಕೆ ಓಡಿಹೋದನು.

ಇಂತಹ ಸಂದರ್ಭದಲ್ಲಿ ಕ್ರಾಂತಿವೀರರು ಎಷ್ಟು ಜಾಗರೂಕತೆಯಿಂದಿರಬೇಕಾಗಿತ್ತು! ಆದರೆ, ವಿಜಯೋನ್ಮಾದದಲ್ಲಿ ಭಾಗವತ ಸಪ್ತಾಹವನ್ನೂ, ಬ್ರಹ್ಮಭೋಜನವನ್ನೂ ಏರ್ಪಡಿಸುವ ಆಗ್ರಹ ವನ್ನು ಬ್ರಾಹ್ಮಣರು, ಮಾಡಿದರು. ಲಕ್ಷ್ಮೀಬಾಯಿ ಮೊದಲು ಒಪ್ಪಲಿಲ್ಲ. ಬಹಳ ಒತ್ತಾಯ ಮಾಡಿದ ಮೇಲೆ, ಒಪ್ಪಿದಳು. ಈ ಒಪ್ಪಿಗೆಯೇ 'ಸ್ವಾತಂತ್ರ್ಯ ಸಮರ'ದ ಅಂತ್ಯೇಷ್ಟಿಗೆ ಕಾರಣ ವಾಯಿತು. ಸ್ವಾತಂತ್ರ್ಯವೀರರ ಬಾಯಿಯಲ್ಲಿ, ಕೈಯಲ್ಲಿ, ಚಿರೋಟಿ-ಲಾಡುಗಳಿರುವಾಗಲೇ, ಆಂಗ್ಲರು ಗ್ವಾಲಿಯರ್ ಕೋಟೆಗೆ ಮುತ್ತಿಗೆ ಹಾಕಿ, ಅವರಿಗೆ ಸೀಸದ ಲಾಡುಗಳನ್ನು ತಿನ್ನಿಸಿದರು. ಲಕ್ಷ್ಮೀಬಾಯಿಯು ಹೋರಾಡುತ್ತಾ ಸತ್ತಳು. ತಾಂತ್ಯಾಟೋಪೆಯು ಅರಣ್ಯದಲ್ಲಿ ಕಣ್ಮರೆ ಯಾದನು. ನಾನಾರಾಯನು ನೇಪಾಳಕ್ಕೆ ಓಡಿದನು. ಸೈನ್ಯವೆಲ್ಲಾ ದಿಕ್ಕಾಪಾಲಾಯಿತು.—ಸಂ.

ಯಾವಾಗ **ವಿಷ್ಣು**ವಿನ ಸ್ತುತಿ ಮಾಡತೊಡಗಿವರೋ, ಆಗ **ವಿಷ್ಣು**ವನ್ನು **ಪರಮೇಶ್ವರ**ನೆಂದೂ, ಅನ್ಯರನ್ನು ದಾಸರೆಂದೂ ಹೇಳಿದರು.

ಯಾವಾಗ **ಶಿವ**ನ ಗುಣವನ್ನು ಹಾಡತೊಡಗಿದರೋ, ಆಗ **ಶಿವ**ನನ್ನು **ಪರಮಾತ್ಮ**ನನ್ನಾಗಿಯೂ, ಬೇರೆಯವರನ್ನು ಕಿಂಕರರನ್ನಾಗಿಯೂ ಮಾಡಿದರು.

ಮತ್ತು ಪರಮೇಶ್ವರನ ಮಾಯೆಯಲ್ಲಿ ಎಲ್ಲವೂ ಆಗಬಲ್ಲದು! ಮನುಷ್ಯರಿಂದ, [ಪಶು ಮೊದಲಾದವುಗಳ, ಮತ್ತು ಪಶುವಿನಿಂದ, ಮನುಷ್ಯ ಮೊದಲಾದವರ ಉತ್ಪತ್ತಿಯನ್ನು] ಪರಮೇಶ್ವರನು ಮಾಡಬಲ್ಲನು!

ನೋಡಿರಿ ! ಕಾರಣವಿಲ್ಲದೇ, ತನ್ನ ಮಾಯೆಯಿಂದ, ಸಮಸ್ತ ಸೃಷ್ಟಿಯನ್ನೂ ಸೃಜಿಸಿಬಿಟ್ಟಿದ್ದಾನೆ ! ಅವನಲ್ಲಿ ಸಂಭವಿಸದ ವಿಷಯವಾವುದಿದೆ ? ಏನು ಮಾಡಬಯಸುತ್ತಾನೋ, ಅದೆಲ್ಲವನ್ನೂ ಮಾಡಬಲ್ಲನು !

**ಉತ್ತರ** :—ಓ ಮುಗ್ಧ ಮಂದಿಗಳೇ ! ವಿವಾಹದಲ್ಲಿ ಯಾವನ ಹಾಡನ್ನು ಹಾಡುತ್ತಾರೋ, ಅವನನ್ನು ಎಲ್ಲರಿಗಿಂತ ದೊಡ್ಡವನನ್ನಾಗಿ, ಮತ್ತು ಅನ್ಯರನ್ನು ಚಿಕ್ಕವರೆಂದು ; ಇಲ್ಲವೇ ನಿಂದೆಯನ್ನು [ಮಾಡುವುದಿಲ್ಲ !] ಅಥವಾ ಅವನನ್ನು ಎಲ್ಲರ '**ಅಪ್ಪ**'ನನ್ನಾಗಿ ಮಾಡಿ ಕೂಡಿಸುವುದಿಲ್ಲವಲ್ಲ !

ಹೇಳಿರಿ, ಪೋಪರೇ ! ನೀವು ಸ್ತುತಿಪಾಠಕರೂ ಮತ್ತು ಹೊಗಳು ಭಟ್ಟರೂ ಆದ ಚಾರಣರನ್ನೂ ಮೀರಿಸುವ ಹರಟೆಮಲ್ಲರಾಗಿದ್ದೀರೋ, ಅಥವಾ ಇಲ್ಲವೋ ? ಯಾವನ ಬೆನ್ನು ಹತ್ತುವಿರೋ, ಅವನನ್ನು ಎಲ್ಲರಿಗಿಂತ ದೊಡ್ಡವನನ್ನಾಗಿ ಮಾಡುವಿರಿ! ಮತ್ತು ಯಾವನನ್ನು ವಿರೋಧಿಸುವಿರೋ, ಅವನನ್ನು ಎಲ್ಲರಿಗಿಂತ ನೀಚನನ್ನಾಗಿ ಮಾಡಿ ಕೂಡಿಸುವಿರಿ.

ನಿಮಗೆ ಸತ್ಯದಿಂದ ಮತ್ತು ಧರ್ಮದಿಂದ ಪ್ರಯೋಜನವೇನು ? ಆದರೆ, ನಿಮಗಂತೂ ನಿಮ್ಮ ಸ್ವಾರ್ಥದೊಂದಿಗೆ ಮಾತ್ರ ನಂಟಲ್ಲವೇ !

ಮಾಯೆ ಮನುಷ್ಯನಲ್ಲಿಯೇ ಇರಬಲ್ಲದು. ಯಾರು ಛಲ-ಕಪಟಯುಕ್ತರೋ, ಅವರನ್ನೇ '**ಮಾಯಾವೀ**'ಗಳೆನ್ನುತ್ತಾರೆ. ಪರಮೇಶ್ವರನಲ್ಲಿ ಛಲ, ಕಪಟ ಮೊದಲಾದ ದೋಷಗಳು ಇಲ್ಲದಿರುವುದರಿಂದ, ಅವನನ್ನು '**ಮಾಯಾವೀ**', ಎನ್ನಲಾರಿರಿ.

ಆದಿಸೃಷ್ಟಿಯಲ್ಲಿ ಕಶ್ಯಪ ಮತ್ತು ಕಶ್ಯಪನ ಹೆಂಡತಿಯರಿಂದ ಪಶು, ಪಕ್ಷಿ, ಸರ್ಪ, ವೃಕ್ಷ ಮೊದಲಾದುವು ಉತ್ಪನ್ನವಾಗಿದ್ದಿದ್ದರೆ, ಇಂದೂ ಕೂಡ ಅಂತಹ ಸಂತತಿ ಯಾಗುವುದಿಲ್ಲವೇಕೆ ?

ನಾವು ಮೊದಲೇ ಯಾವ ಸೃಷ್ಟಿಕ್ರಮವನ್ನು ಬರೆದಿದ್ದೇವೋ*, ಅದೇ ಸರಿಯಾಗಿದೆ.

### (ಭಾಗವತ ರಚನಾಕಾರನು ಮೋಸ ಹೋಗಿದ್ದಾನೆ)

ಮತ್ತು ಪೋಪ ಮಹಾಶಯರು ಈ ಕೆಳಗಿನ ವಚನದಿಂದಲೇ ಮೋಸ ಹೋಗಿ, ದಾರಿ ತಪ್ಪಿದ್ದಾರೆಂದು ತೋರುತ್ತದೆ:—

**'ತಸ್ಮಾತ್ ಕಾಶ್ಯಪ್ಯ ಇಮಾಃ ಪ್ರಜಾಃ ॥'**

[**ಶತಪಥ :—7.5.1.5**]

**ಶತಪಥ**ದಲ್ಲಿ 'ಈ ಸಮಸ್ತ ಸೃಷ್ಟಿಯೂ ಕಶ್ಯಪನಿಂದ ರಚಿತವಾಗಿದೆ', ಎಂದು ಬರೆದಿದೆ.

**'ಕಶ್ಯಪಃ ಕಸ್ಮಾತ್ ಪಶ್ಯಕೋ ಭವತೀತಿ' ॥**

[ನಿರುಕ್ತ **:—2.2**]

**ಪಶ್ಯಕ,** ಎಂದರೆ—

**"ಪಶ್ಯತೀತಿ ಪಶ್ಯಃ;, ಪಶ್ಯ ಏವ ಪಶ್ಯಕಃ",**

ಭ್ರಮರಹಿತನಾಗಿ ಚರಾಚರಜಗತ್ತನ್ನೂ, ಸರ್ವ ಜೀವರನ್ನೂ, ಇವರ ಕರ್ಮಗಳನ್ನೂ, ಸಕಲ ವಿದ್ಯೆಗಳನ್ನೂ ಯಥಾವತ್ತಾಗಿ ನೋಡುವವನಾದ ಕಾರಣ, ಆ ಸೃಷ್ಟಿಕರ್ತೃವಾದ ಪರಮಾತ್ಮನ ಹೆಸರು '**ಕಶ್ಯಪ**', ಎಂದಾಗಿರುತ್ತದೆ. ಮತ್ತು—

**"ಆದ್ಯಂತವಿಪರ್ಯಯಶ್ಚ"**—

ಈ **ಮಹಾಭಾಷ್ಯ**ದ ವಚನದಂತೆ,ಮೊದಲ ಅಕ್ಷರ ಕೊನೆಗೆ, ಮತ್ತು ಕೊನೆಯ ವರ್ಣ ಮೊದಲಿಗೆ ಬರುವುದರಿಂದ, '**ಪಶ್ಯಕ**', ಎಂಬುದರಿಂದ, '**ಕಶ್ಯಪ**', ಎಂದಾಗಿದೆ. ಇದರ ಅರ್ಥವನ್ನು ತಿಳಿಯದೇ, [ಪೋಪರು] ಭಂಗೀರಸದ ಪಾತ್ರೆಯನ್ನೇರಿಸಿ, ತಮ್ಮ ಜನ್ಮವನ್ನು ಸೃಷ್ಟಿವಿರುದ್ಧವಾದ ಕಥನಗಳಲ್ಲಿ ನಾಶಮಾಡಿಕೊಂಡರು! ಉದಾಹರಣೆಗಾಗಿ—

### (ಮಾರ್ಕಂಡೇಯ ಪುರಾಣಪ್ರೋಕ್ತ 'ರಕ್ತಬೀಜ'ನ ಆಲೋಚನೆ)

**ಮಾರ್ಕಂಡೇಯ ಪುರಾಣದ ದುರ್ಗಾಪಾಠ**ದಲ್ಲಿ [ಹೀಗೆ ಹೇಳಿದೆ]—

'ದೇವತೆಗಳ ಶರೀರಗಳಿಂದ ತೇಜಸ್ಸು ಹೊರಬಂದು, ಒಬ್ಬಳು ದೇವಿ ಉದ್ಭವಿಸಿದಳು! ಅವಳು **ಮಹಿಷಾಸುರ**ನನ್ನು ಸಂಹರಿಸಿದಳು.

---

***ಅಷ್ಟಮ ಸಮುಲ್ಲಾಸವನ್ನು ನೋಡಿ. ಪುಟ 391-424—ಸಂ.**

'ರಕ್ತಬೀಜನ ಶರೀರದಿಂದ ಒಂದು ತೊಟ್ಟು ರಕ್ತ ನೆಲದ ಮೇಲೆ ಬೀಳುವುದರಿಂದ, ಅವನಂತಹ ರಕ್ತಬೀಜರು ಉತ್ಪನ್ನವಾದುದರಿಂದ, ಸಮಸ್ತ ಜಗತ್ತಿನಲ್ಲಿಯೂ ರಕ್ತಬೀಜರೇ ತುಂಬಿಹೋಗುವುದು; [ಮತ್ತು] ರಕ್ತದ ನದಿ ಉದಿಸಿ ಹರಿಯುವುದು' ಮೊದಲಾದ ಬುರುಡೆಗಳನ್ನು ಬಹಳವಾಗಿ ಬರೆದಿಟ್ಟಿದ್ದಾರೆ.

ರಕ್ತಬೀಜರಿಂದ ಸಮಸ್ತ ಜಗತ್ತೂ ತುಂಬಿ ಹೋಗಿದ್ದಿತಾದರೆ, ದೇವಿ ಮತ್ತು ದೇವಿಯ ಸಿಂಹ, ಹಾಗೂ ಅವಳ ಸೈನ್ಯ ಎಲ್ಲಿ ಬೀಡುಬಿಟ್ಟಿದ್ದಿತು ?

'ದೇವಿಯಿಂದ ದೂರ ದೂರಕ್ಕೆ ರಕ್ತಬೀಜರಿದ್ದರು', ಎನ್ನುವಿರಾದರೆ, ಜಗತ್ತೆಲ್ಲಾ ರಕ್ತಬೀಜರಿಂದ ತುಂಬಿರಲಿಲ್ಲ.

ತುಂಬಿದ್ದ ಪಕ್ಷದಲ್ಲಿ ಪಶುಗಳು, ಪಕ್ಷಿಗಳು, ಮನುಷ್ಯರೇ ಮೊದಲಾದ ಪ್ರಾಣಧಾರಿಗಳು, ಹಾಗೂ ಜಲದಲ್ಲಿ ವಾಸಿಸುವ ಮೊಸಳೆಗಳು, ತಿಮಿಂಗಿಲಗಳು, ಆಮೆಗಳು, ಮತ್ಸ್ಯಗಳು ಮೊದಲಾದುವೂ; ವನಸ್ಪತಿ ಮೊದಲಾದ ವೃಕ್ಷಗಳೂ ಎಲ್ಲಿರುತ್ತಿದ್ದುವು?

ದುರ್ಗಾಪಾಠವನ್ನು ರಚಿಸಿದ [ಪೋಪನ] ಮನೆಯೊಳಕ್ಕೇ ಓಡಿ ಹೋಗಿ, ಸೇರಿಕೊಂಡಿರಬಹುದು, ಎಂದೇ ಇಲ್ಲಿ ನಿಶ್ಚಯವಾಗಿ ತಿಳಿಯಿರಿ.

ನೋಡಿರಿ! ಭಂಗಿಯ ಅಮಲಿನ ಅಲೆಯಲ್ಲಿ ತೂರಾಡುತ್ತಾ ಗೊತ್ತು-ಗುರಿಯಿಲ್ಲದ ಎಂತಹ ಅಸಂಭವವಾದ ಕಥೆಯ ಬುರುಡೆಯನ್ನು ಹೊಡೆದಿದ್ದಾರೆ !

## (ಶ್ರೀಮದ್ಭಾಗವತ ಪುರಾಣದ ಆಲೋಚನೆ)

ಯಾವುದನ್ನು ಶ್ರೀಮದ್ಭಾಗವತವೆನ್ನುತ್ತಾರೋ, ಅದರ ಲೀಲೆಯನ್ನು ಈಗ ಕೇಳಿರಿ—

ಬ್ರಹ್ಮನಿಗೆ ನಾರಾಯಣನು **'ಚತುಶ್ಶ್ಲೋಕೀ ಭಾಗವತ'***ದ ಉಪದೇಶವನ್ನು ಕೊಟ್ಟನು :—

**ಜ್ಞಾನಂ ಪರಮಗುಹ್ಯಂ ಮೇ ಯದ್ವಿಜ್ಞಾನಸಮನ್ವಿತಮ್ ।**
**ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ ॥**

[ಭಾಗವತ :—2.9.30]

ಹೇ ಬ್ರಹ್ಮದೇವ! ಯಾವುದು ವಿಜ್ಞಾನ ಮತ್ತು ರಹಸ್ಯದಿಂದ ಯುಕ್ತವಾಗಿದೆಯೋ, ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷಗಳ

*ನಾಲ್ಕು ಶ್ಲೋಕಗಳ ಭಾಗವತದ—ಅನು.

ಅಂಗವಾಗಿದೆಯೋ, ನನ್ನ ಆ ಪರಮಗುಹ್ಯವಾದ ಜ್ಞಾನವನ್ನೇ ನನ್ನಿಂದ ನೀನು ಗ್ರಹಿಸು.

**[ಸಮೀಕ್ಷೆ]**—ವಿಜ್ಞಾನಯುಕ್ತವಾದ ಜ್ಞಾನವೆಂದು ಹೇಳಿದ ಮೇಲೆ **'ಪರಮ'**, ಎಂಬ ಜ್ಞಾನಕ್ಕೆ ವಿಶೇಷಣವನ್ನು ಹಚ್ಚುವುದು ವ್ಯರ್ಥವಾಗಿದೆ. ಮತ್ತು **'ಗುಹ್ಯ'**, ಎಂಬ ವಿಶೇಷಣದ ಕಾರಣದಿಂದ, **'ರಹಸ್ಯ'** ಎಂಬುದೂ ಪುನರುಕ್ತವಾಗಿದೆ.

ಮೂಲಶ್ಲೋಕವೇ ಅನರ್ಥಕವಾಗಿರುವಾಗ, ಬೇರೆಯವು ಅನರ್ಥಕವೇಕಲ್ಲ? **[ಭಾಗವತದ ಮೂಲವೇ ಸುಳ್ಳಾಗಿರುವಾಗ, ಅದರ ವೃಕ್ಷ ಸುಳ್ಳೇತಕ್ಕೆ ಆಗದಿದ್ದೀತು?]**

ಬ್ರಹ್ಮದೇವರಿಗೆ ವರವನ್ನು ಕೊಟ್ಟನು—

**'ಭವಾನ್ ಕಲ್ಪವಿಕಲ್ಪೇಷು ನ ವಿಮುಹ್ಯತಿ ಕರ್ಹಿಚಿತ್ ॥**

**[ಭಾಗವತ:–2.9.36.]**

'ನೀವು ಕಲ್ಪ=ಸೃಷ್ಟಿಯಲ್ಲಿ, ಮತ್ತು ವಿಕಲ್ಪ=ಪ್ರಳಯದಲ್ಲಿ ಮೋಹವನ್ನು ಎಂದಿಗೂ ಹೊಂದುವುದಿಲ್ಲ'. ಹೀಗೆ ಬರೆದು, ಮತ್ತೆ ದಶಮಸ್ಕಂಧದಲ್ಲಿ—

'ಮೋಹಿತನಾಗಿ ಕರುವನ್ನು ಅಪಹರಿಸಿದನು'*, ಎಂದು ಬರೆದಿದೆ.

ಈ ಎರಡರಲ್ಲಿ ಒಂದು ಮಾತು ಸತ್ಯ; ಎರಡನೆಯದು ಸುಳ್ಳು! ಹೀಗಾಗಿ, ಎರಡು ಮಾತುಗಳೂ ಸುಳ್ಳಾದವು!

### (ಸ್ವರ್ಗದ ದ್ವಾರಪಾಲಕರಾದ ಜಯ–ವಿಜಯರಿಗೆ ಶಾಪ)

ವೈಕುಂಠದಲ್ಲಿ ರಾಗ, ದ್ವೇಷ, ಕ್ರೋಧ, ಈರ್ಷ್ಯೆ, ದುಃಖ ಇಲ್ಲವಾದರೆ, ಸನಕಾದಿಗಳಿಗೆ ವೈಕುಂಠದ ದ್ವಾರದಲ್ಲಿ ಕ್ರೋಧವೇಕೆ ಉಂಟಾಯಿತು? **ಕ್ರೋಧ ಉಂಟಾದರೆ, ಅದು ಸ್ವರ್ಗವೇ ಅಲ್ಲ!**

ಆಗ, **ಜಯ-ವಿಜಯರು** ದ್ವಾರಪಾಲಕರಾಗಿದ್ದರು. ಸ್ವಾಮಿಯ ಆಜ್ಞಾಪಾಲನೆ ಆವಶ್ಯಕವೇ ಆಗಿದ್ದಿತು! ಅವರು ಸನಕಾದಿಗಳನ್ನು ತಡೆದರೆ, ಅಪರಾಧವೇನಾಯಿತು? ಅಂದ ಮೇಲೆ, ಅಪರಾಧವಿಲ್ಲದೇ ಶಾಪವೇ ತಗಲಲಾರದು.

"ನೀವು ಭೂಮಿಗೆ ಬೀಳಿರಿ.", ಎಂದು ಶಾಪ ಬಿದ್ದುದರಿಂದ, ಅಲ್ಲಿ ಭೂಮಿ ಇರಲಾರದು, ಎಂಬುದು ಸಿದ್ಧವಾಗುತ್ತದೆ. ಆಕಾಶ, ವಾಯು, ಅಗ್ನಿ ಮತ್ತು

---

***ಭಾಗವತ 10.13–14—ಯು. ಮೀ.**

ಜಲ ಮಾತ್ರ ಇದ್ದಿರಬಹುದು! ಇಂತಹ ದ್ವಾರ, ಮಂದಿರ ಮತ್ತು ನೀರು ಯಾವುದರ ಆಧಾರದ ಮೇಲೆ ಇದ್ದುವು?

ಮತ್ತೆ, ಜಯ-ವಿಜಯರು—

"ಮಹಾಸ್ವಾಮಿಗಳೇ! ಪುನಃ ನಾವು ವೈಕುಂಠಕ್ಕೆ ಯಾವಾಗ ಬರುವೆವು"?, ಎಂದು ಸನಕಾದಿಗಳನ್ನು ಕೇಳಿಕೊಂಡರು. ಅವರು—

"ಪ್ರೇಮದಿಂದ ನಾರಾಯಣನ ಭಕ್ತಿ ಮಾಡುವಿರಾದರೆ, ಏಳನೆಯ ಜನ್ಮದಲ್ಲಿ; ಮತ್ತು ವಿರೋಧದಿಂದ ಭಕ್ತಿ ಮಾಡುವಿರಾದರೆ, ಮೂರನೆಯ ಜನ್ಮದಲ್ಲಿ ವೈಕುಂಠವನ್ನು ಸೇರುವಿರಿ.", ಎಂದು ಅವರಿಗೆ ಹೇಳಿದರು.*

[ಸಮೀಕ್ಷೆ]—ಇದರಲ್ಲಿ ಆಲೋಚಿಸಬೇಕಾದುದು ಏನೆಂದರೆ—ಜಯ-ವಿಜಯರು ನಾರಾಯಣನ ಸೇವಕರಾಗಿದ್ದರು. ಅವರ ರಕ್ಷಣೆಯನ್ನೂ ಮತ್ತು ಸಹಾಯವನ್ನೂ ಮಾಡುವುದು ನಾರಾಯಣನ ಕರ್ತವ್ಯಕರ್ಮವಾಗಿದ್ದಿತು.

ಯಾರು ತನ್ನ ಸೇವಕರಿಗೆ ಅಪರಾಧವಿಲ್ಲದೆಯೇ ದುಃಖ ಕೊಡುವರೋ, ಅವರಿಗೆ ಆ ಸೇವಕರ ಒಡೆಯನು ಶಿಕ್ಷೆಕೊಡದಿದ್ದರೆ, ಅವನ ಸೇವಕರಿಗೆ ಯಾರು ಬೇಕಾದರೂ ದುರ್ಗತಿಯನ್ನು ಉಂಟುಮಾಡಾರು!

ಜಯ-ವಿಜಯರ ಸತ್ಕಾರವನ್ನೂ, ಮತ್ತು ಸನಕಾದಿಗಳಿಗೆ ಚೆನ್ನಾಗಿ ಶಿಕ್ಷೆಯನ್ನೂ ಕೊಡುವುದು ನಾರಾಯಣನಿಗೆ ಉಚಿತವಾಗಿದ್ದಿತು!

ಏಕೆಂದರೆ, ಅವರು ಒಳಬರಲು ಹಠವನ್ನೇಕೆ ಮಾಡಿದರು? ಮತ್ತು ಸೇವಕರೊಂದಿಗೆ ಜಗಳವಾಡಿದರೇಕೆ? ಶಾಪವನ್ನು ಕೊಟ್ಟರೇಕೆ?

ಅವರಿಗೆ ಪ್ರತಿಯಾಗಿ ಸನಕಾದಿಗಳನ್ನು ಭೂಮಿಗೆ ಕಳುಹಿಸುವುದು ನಾರಾಯಣನಿಗೆ ಯುಕ್ತವಾಗಿತ್ತು!

ನಾರಾಯಣನ ಮನೆಯಲ್ಲಿಯೇ ಇಂತಹ ಅನ್ಯಾಯವಿದ್ದಲ್ಲಿ, ವೈಷ್ಣವರೆಂದು ಕರೆಯಲ್ಪಡುವ ಅವನ ಸೇವಕರಿಗೆ ಎಷ್ಟು ದುರ್ಗತಿಯಾದರೂ, ಅದು ಕಡಿಮೆಯೇ ಸರಿ!

---

*ಭಾಗವತ 3.15-16—ಯು. ಮೀ.

## (ವರಾಹನಿಂದ ಹಿರಣ್ಯಕಶಿಪುವಿನ ವಧೆ)

ಪುನಃ ಅವರು ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುಗಳಾಗಿ ಹುಟ್ಟಿದರು.* ಅವರಲ್ಲಿ ಹಿರಣ್ಯಾಕ್ಷನನ್ನು ವರಾಹನು ಸಂಹರಿಸಿದನು. ಅವನ ಕಥೆಯನ್ನು ಹೀಗೆ ಬರೆದಿದ್ದಾರೆ :—

'ಅವನು ಭೂಮಿಯನ್ನು ಚಾಪೆಯಂತೆ ಸುತ್ತಿ, ತಲೆಯ ಕೆಳಗಿಟ್ಟುಕೊಂಡು, ನಿದ್ರಿಸಿದನು. ವಿಷ್ಣುವು ವರಾಹನ ರೂಪವನ್ನು ಧರಿಸಿ, ಅವನ ತಲೆಯ ಕೆಳಗಿನಿಂದ, ಪೃಥಿವಿಯನ್ನು [ತೆಗೆದು] ಬಾಯಿಯಲ್ಲಿಟ್ಟುಕೊಂಡನು.† ಅವನು ಎದ್ದನು ! ಇಬ್ಬರಿಗೂ ಯುದ್ಧವಾಯಿತು. ವರಾಹನು ಹಿರಣ್ಯಾಕ್ಷನನ್ನು ಸಂಹರಿಸಿದನು'.

[ಸಮೀಕ್ಷೆ]—ಯಾರಾದರೂ ಇವರನ್ನು—

"ಭೂಮಿ ಗುಂಡಾಗಿದೆಯೋ, ಅಥವಾ ಚಾಪೆಯ ಹಾಗಿದೆಯೋ ?, ಎಂದು ಕೇಳಬೇಕು.

ಆಗ ಏನನ್ನೂ ಹೇಳಲಾರರು. ಏಕೆಂದರೆ, **ಪೌರಾಣಿಕರು ಭೂಗೋಳವಿದ್ಯೆಯ ಶತ್ರುಗಳಾಗಿದ್ದಾರೆ!**

ಒಳ್ಳಿತು! ಸುತ್ತಿ, ತಲೆಯ ಕೆಳಗೆ ಇಟ್ಟುಕೊಂಡುಬಿಟ್ಟಾಗ, ಹಿರಣ್ಯಾಕ್ಷನು ತಾನು ಏತರ ಮೇಲೆ ಮಲಗಿದನು? ಮತ್ತು ವರಾಹದೇವರು ಯಾವುದರ ಮೇಲೆ ಕಾಲಿಟ್ಟು ಓಡಿಬಂದರು ?

ಪೃಥಿವಿಯನ್ನಂತೂ ವರಾಹದೇವರು ಬಾಯಿಯಲ್ಲಿಟ್ಟುಕೊಂಡರು ! ಮತ್ತೆ ಇಬ್ಬರೂ ಯಾವುದರ ಮೇಲೆ ನಿಂತು ಕಾದಾಡಿದರು ? ಅಲ್ಲಿಯಂತೂ ನಿಲ್ಲಲು ಬೇರೆ ಯಾವ ಸ್ಥಳವೂ ಇರಲಿಲ್ಲ. ಆದರೆ, **ಭಾಗವತ** ಮೊದಲಾದ ಈ ಪುರಾಣಗಳನ್ನು ರಚಿಸಿದ ಪೋಪಮಹಾಶಯರ ಎದೆಯ ಮೇಲೆ ನಿಂತು, ಕಾದಾಡಿರಬಹುದೋ ? ಹಾಗಾದರೆ, ಪೋಪಮಹಾಶಯರು ಯಾವುದರ ಮೇಲೆ ನಿದ್ರಿಸಿರಬಹುದು ?

ಈ ಮಾತು ಹೇಗಿದೆಯೆಂದರೆ, **'ಹರಟೆಮಲ್ಲನ ಮನೆಗೆ ಹರಟೆಮಲ್ಲ ಬಂದನು. ಹರಟೆದರು ಹರಟೆಮಲ್ಲರು.'**‡

---

*ಭಾಗವತ 3.17–18—ಯು.ಮೀ.

†ಭಾಗವತ 3.18–19—ಯು.ಮೀ.

‡ಹಿಂದಿಯಲ್ಲಿ ಇದಕ್ಕೆ—'ಗಪ್ಪೀ ಕೆ ಘರ್ ಗಪ್ಪೀ ಆಯೇ; ಬೋಲೇ ಗಪ್ಪೀ ಜೀ', ಎಂಬ ಪ್ರಯೋಗ ಮಾಡಲಾಗಿದೆ.—ಸಂ.

ಎನ್ನುವ ಹಾಗೆ, ಮಿಥ್ಯಾವಾದಿಗಳ ಮನೆಗೆ ಬೇರೆ ಪರಟೆಮಲ್ಲರು ಬರುತ್ತಾರೆಂದ ಮೇಲೆ, ಇನ್ನು ಬಿರುಡೆ ಹೊಡೆಯುವುದಕ್ಕೆ ಕಡಿಮೆ ಏನು ?

## (ನೃಸಿಂಹನಿಂದ ಹಿರಣ್ಯಕಶಿಪುವಿನ ವಧೆ)

ಇನ್ನು ಉಳಿದವನು **ಹಿರಣ್ಯಕಶಿಪು**.* ಅವನ ಮಗ **ಪ್ರಹ್ಲಾದನು** ಭಕ್ತನಾಗಿದ್ದನು. ಅವನ ತಂದೆಯು ಓದಿಸುವುದಕ್ಕಾಗಿ ಪಾಠಶಾಲೆಗೆ ಕಳುಹಿಸುತ್ತಿದ್ದನು.

ಆಗ, ಅವನು ಅಧ್ಯಾಪಕರಿಗೆ—

"ನನ್ನ ಕರಿಹಲಗೆಯ ಮೇಲೆ '**ರಾಮ-ರಾಮ**' ಎಂದು ಬರೆದು ಕೊಡಿರಿ",† ಎಂದು ಹೇಳುತ್ತಿದ್ದನು.

ಅವನ ತಂದೆ ಯಾವಾಗ ಅದನ್ನು ಕೇಳಿದನೋ, ಆಗ—

"ನೀನು ನಮ್ಮ ಶತ್ರುವಿನ ಭಜನವನ್ನೇಕೆ ಮಾಡುತ್ತೀಯೆ"?, ಎಂದು ಪ್ರಶ್ನಿಸಿದನು.

ಹುಡುಗನು ಒಪ್ಪಲಿಲ್ಲ. ಆಗ ಅವನ ತಂದೆಯು ಅವನನ್ನು ಬಂಧಿಸಿ, ಪರ್ವತದ ಮೇಲಿನಿಂದ ಕೆಡಹಿಸಿದನು! ಭಾವಿಯಲ್ಲಿ ಹಾಕಿದನು! ಆದರೆ, ಅವನಿಗೇನೂ ಆಗಲಿಲ್ಲ!

ಆಗ ಅವನು ಕಬ್ಬಿಣದ ಕಂಬ ಒಂದನ್ನು ಬೆಂಕಿಯಲ್ಲಿ ಕಾಯಿಸಿ, ಅವನಿಗೆ—

"ನಿನ್ನ ಇಷ್ಟದೇವನಾದ ರಾಮನು ಸತ್ಯವಾಗಿರುವುದಾದರೆ, ನೀನು ಇದನ್ನು ಹಿಡಿದುಕೊಳ್ಳುವುದರಿಂದ, ಸುಟ್ಟುಹೋಗುವುದಿಲ್ಲ", ಎಂದು ಹೇಳಿದನು.

ಪ್ರಹ್ಲಾದನು ಹಿಡಿಯ ಹೊರಟನು. ಮನಸ್ಸಿನಲ್ಲಿ 'ಸುಟ್ಟು ಹೋಗುವುದರಿಂದ, ದೂರ ಉಳಿದೇನೋ ಅಥವಾ ಇಲ್ಲವೋ', ಎಂಬ ಸಂಶಯ ಮೂಡಿತು.

ನಾರಾಯಣನು ಆ ಕುಂಭದ ಮೇಲೆ ಸಣ್ಣ-ಸಣ್ಣ ಇರುವೆಗಳ ಸಾಲನ್ನು ಹರಿಯಬಿಟ್ಟನು! ಪ್ರಹ್ಲಾದನಿಗೆ ನಂಬಿಕೆಹುಟ್ಟಿತು! ಸರ್ರನೆ ಹೋಗಿ ಕಂಭವನ್ನು ಹಿಡಿದನು, ಅದು ಸೀಳಿ ಹೋಯಿತು!

---

*ಮೂಲ ಗ್ರಂಥದಲ್ಲಿ 'ಹಿರಣ್ಯಕಶ್ಯಪ', ಎಂಬ ಪಾಠವಿದೆ.—ಸಂ.

†'ಭಕ್ತಮಾಲ'ದಲ್ಲಿ ಈ ಪ್ರಕರಣವಿದೆ.—ಯು.ಮೀ.

ಭಾಗವತಪುರಾಣದಲ್ಲಿ ಈ ಪ್ರಸಂಗ ಸ್ವಲ್ಪ ವ್ಯತ್ಯಾಸದಿಂದ ಬರೆಯಲ್ಪಟ್ಟಿದೆ.—ಸಂ.

ಅದರ ಒಳಗಿನಿಂದ ನರಸಿಂಹ*ನು ಹೊರಬಂದನು! ಮತ್ತು ಅವನ ತಂದೆಯನ್ನು ಹಿಡಿದು, ಹೊಟ್ಟೆಯನ್ನು ಬಗೆದುಹಾಕಿದನು. ಆ ಮೇಲೆ ಪ್ರಹ್ಲಾದನನ್ನು ಮುದ್ದಿನಿಂದ ನೆಕ್ಕತೊಡಗಿದನು.

ಪ್ರಹ್ಲಾದನಿಗೆ—

"ವರವನ್ನು ಬೇಡು", ಎಂದನು.

ಅವನು ತನ್ನ ತಂದೆಗೆ ಸದ್ಗತಿಯ ಪ್ರಾಪ್ತಿಯನ್ನು ಕೇಳಿಕೊಂಡನು.

ನರಸಿಂಹನು—

"ನಿನ್ನ ಇಪ್ಪತ್ತೊಂದು ಹಿಂದಣ ಪೀಳಿಗೆಗಳವರು ಸದ್ಗತಿಹೊಂದಿದರು." ಎಂದನು.†

[ಸಮೀಕ್ಷೆ]—ಈಗ ನೋಡಿರಿ! ಇದೂ ಕೂಡ ಬೇರೆ ಬುರುಡೆಗಳ ಸೋದರನಾದ ಭಾರೀ ಬುರುಡೆಯಾಗಿದೆ. ಯಾವನಾದರೂ ಭಾಗವತ ಕೇಳುವವನನ್ನು ಅಥವಾ ಹೇಳುವವನನ್ನು ಹಿಡಿದು, ಪರ್ವತದ ಮೇಲಿನಿಂದ ಬೀಳಿಸುವುದಾದರೆ, ಯಾವನೂ ರಕ್ಷಿಸುವುದಿಲ್ಲ; ಚೂರು ಚೂರಾಗಿ ಮೃತನೇ ಆಗಿ ಹೋಗುವನು !

ಪ್ರಹ್ಲಾದನನ್ನು ಅವನ ತಂದೆ ಓದುವುದಕ್ಕಾಗಿ ಕಳುಹಿಸುತ್ತಿದ್ದನು. ಕೆಟ್ಟ ಕೆಲಸವನ್ನೇನು ಮಾಡಿದ್ದನು ? ಮತ್ತು ಆ ಪ್ರಹ್ಲಾದನೆಂತಹ ಮೂರ್ಖ ? ಓದುವುದನ್ನು ಬಿಟ್ಟು, ವೈರಾಗಿಯಾಗಬಯಸುತ್ತಿದ್ದನು !

'ಉರಿಯುತ್ತಿರುವ ಕಂಭದ ಮೇಲೆ ಇರುವೆ ಏರಲಾರಂಭಿಸಿತು. ಮತ್ತು ಸ್ಪರ್ಶಮಾಡುವುದರಿಂದ, ಪ್ರಹ್ಲಾದನು ಸುಟ್ಟು ಹೋಗಲಿಲ್ಲ', ಎಂಬ ಈ ಮಾತನ್ನು ಸತ್ಯವೆಂದು ಒಪ್ಪಿಕೊಳ್ಳುವವನನ್ನೂ ಕೂಡ ಕಂಬಕ್ಕೇ ಕಟ್ಟಿಹಾಕಬೇಕು. ಇವನು ಸುಟ್ಟು ಹೋಗದೇ ಇದ್ದಲ್ಲಿ, ಅವನೂ ಸುಟ್ಟು ಹೋಗದಿದ್ದಿರಬಹುದೆಂದು ಭಾವಿಸಿರಿ.

ಮತ್ತು ನರಸಿಂಹನೂ ಸುಟ್ಟು ಹೋಗಲಿಲ್ಲವೇಕೆ ?

ಮೊದಲು, ಮೂರನೆಯ ಜನ್ಮದಲ್ಲಿ ವೈಕುಂಠಕ್ಕೆ ಬರುವಂತಹ ವರ ಸನಕಾದಿಗಳದಾಗಿದ್ದಿತು. ಅದನ್ನು ನಿಮ್ಮ ನಾರಾಯಣನು ಮರೆತನೇನು ? ಭಾಗವತದ

---

*ಮೂಲಗ್ರಂಥದಲ್ಲಿ 'ನೃಸಿಂಹ', ಎಂಬ ಪಾಠವಿದೆ.—ಸಂ.

†ಭಾಗವತ 7.10.18.—ಯು. ಮೀ.

ಕ್ರಮದಿಂದ ಬ್ರಹ್ಮಾ, ಪ್ರಜಾಪತಿ, ಕಶ್ಯಪ; ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು-ಹೀಗೆ [ಕೊನೆಯುವರಿಬ್ಬರು] ನಾಲ್ಕನೆಯ ಪೀಳಿಗೆಯುವರಾಗುತ್ತಾರೆ.

ಪ್ರಹ್ಲಾದನ ಇಪ್ಪತ್ತೊಂದು ಪೀಳಿಗೆ ಆಗಿಯೂ ಕೂಡ ಇರಲಿಲ್ಲ! ಮತ್ತೆ 21 ತಲೆಮಾರಿನ ಪೂರ್ವಜರು ಸದ್ಗತಿ ಪಡೆದರು', ಎನ್ನುವುದು ಎಷ್ಟು ಪ್ರಮಾದ!

ಮತ್ತು ಅವರುಗಳೇ ಹಿರಣ್ಯಾಕ್ಷ-ಹಿರಣ್ಯಕಶಿಪು, ರಾವಣ-ಕುಂಭಕರ್ಣ, ಪುನಃ ಶಿಶುಪಾಲ-ದಂತವಕ್ರರಾಗಿ ಉತ್ಪನ್ನರಾದರೆ, ನರಸಿಂಹನ **'ವರ'** ಎಲ್ಲಿಗೆ ಹಾರಿ ಹೋಯಿತು ?*

ಇಂತಹ ಮಾತುಗಳನ್ನು ಪ್ರಮಾದಿಗಳು ಆಡುತ್ತಾರೆ ; ಆಲಿಸುತ್ತಾರೆ; ಒಪ್ಪುತ್ತಾರೆ. ವಿದ್ವಾಂಸರೊಪ್ಪರು!

### (ಪೂತನಾ ಮತ್ತು ಅಕ್ರೂರರ ವಿಷಯವಾಗಿ ಬರುಡೆ)

**ಪೂತನಾ ಮತ್ತು ಅಕ್ರೂರರ ವಿಷಯದಲ್ಲಿ ನೋಡಿರಿ:—**

**'ರಥೇನ ವಾಯುವೇಗೇನ'**

**[ಭಾಗವತ:—10.39.38]**

**'ಜಗಾಮ ಗೋಕುಲಂ ಪ್ರತಿ'**

**[ಭಾಗವತ:—10.38.24]**

**'ಅಕ್ರೂರ ಮಹಾಶಯರು,** ಕಂಸನು ಕಳುಹಿಸಿದುದರಿಂದ, ವಾಯುವೇಗಕ್ಕೆ ಸಮನಾಗಿ ಓಡುವ ಕುದುರೆಗಳ ರಥದಲ್ಲಿ ಕುಳಿತು, ಸೂರ್ಯೋದಯ ಕಾಲಕ್ಕೆ ಹೊರಟರು. ಮತ್ತು ನಾಲ್ಕು ಮೈಲಿ ದೂರದ **ಗೋಕುಲಕ್ಕೆ** ಸೂರ್ಯಾಸ್ತದ ಕಾಲಕ್ಕೆ ಮುಟ್ಟಿದರು!'

ಅಂದರೆ, ಕುದುರೆಗಳು ಭಾಗವತ ಬರೆದವನ ಸುತ್ತ ಪ್ರದಕ್ಷಿಣೆ ಮಾಡುತ್ತಿದ್ದಿರಬಹುದೇನೋ ? ಅಥವಾ ಮಾರ್ಗವನ್ನು ಮರೆತು, ಕುದುರೆಗಳನ್ನೋಡಿಸುವವರೂ, ಮತ್ತು ಅಕ್ರೂರ ಮಹಾಶಯರೂ, ಭಾಗವತ ಬರೆದವರ ಮನೆಗೆ ಬಂದು, ನಿದ್ರಿಸಿಬಿಟ್ಟಿರಬೇಕೋ, ಏನೋ !

*ಪ್ರಹ್ಲಾದನ ಹಿಂದಿನ ಪೀಳಿಗೆಯ ಹಿರಣ್ಯಕಶಿಪು, ಕುಂಭಕರ್ಣ-ದಂತವಕ್ರರಾಗಿ ಹುಟ್ಟಬರಬೇಕಾಗಿದ್ದಾಗ, 'ಸದ್ಗತಿಗೆ ಸಂದ'ನೆಂಬ ನರಸಿಂಹನ ವರದಾನಕ್ಕೇನು ಬೆಲೆ ?—ಅನು.

**ಪೂತನಾಳ ಶರೀರ** 6 **ಕೋಶ*** ಅಗಲ, ಮತ್ತು ಬಹಳ ಉದ್ದವಿದ್ದಿತೆಂದು ಬರೆದಿದ್ದಾರೆ.† ಮಥುರಾ, ಹಾಗೂ ಗೋಕುಲದ ನಡುವೆ **ಶ್ರೀಕೃಷ್ಣರು** ಅವಳನ್ನು ಸಾಯಿಸಿ ಕೆಡಹಿದರು.

ಹೀಗೇ ಆಗಿದ್ದಲ್ಲಿ, ಮಥುರೆ ಮತ್ತು ಗೋಕುಲ ಎರಡೂ ನೆಲಸಮವಾಗಿ, ಈ ಪೋಪಮಹಾಶಯರ ಮನೆಯೂ ಕೂಡ ಅಪ್ಪಚ್ಚಿಯಾಗಿ ಹೋಗುತ್ತಿತ್ತಲ್ಲವೇ!

## (ಅಜಾಮಿಳನ ಸಿಕ್ಕಾಪಟ್ಟೆ ಕಥೆ)

ಮತ್ತು **ಅಜಾಮಿಳನ**‡ ಕಥೆಯನ್ನು ಸಿಕ್ಕಾಪಟ್ಟೆ ಬರೆದಿದ್ದಾರೆ.—

ಅವನು, ನಾರದರ ಹೇಳಿಕೆಯಂತೆ ತನ್ನ ಮಗನಿಗೆ **'ನಾರಾಯಣ'**, ಎಂದು ಹೆಸರಿಟ್ಟಿದ್ದನು. ಮೃತನಾಗುವ ಸಮಯದಲ್ಲಿ ತನ್ನ ಮಗನನ್ನು ಕರೆದನು. ನಡುವೆ ನಾರಾಯಣದೇವರು ಧುಮುಕಿಬಿಟ್ಟರು!$

"ಅವನು ನನ್ನನ್ನಲ್ಲ; ತನ್ನ ಮಗನನ್ನು ಕರೆಯುತ್ತಾನೆ.", ಎಂದು ಅವನ ಅಂತಃಕರಣದ ಭಾವನೆಯನ್ನು ನಾರಾಯಣದೇವರು ತಿಳಿದಿರಲಿಲ್ಲವೇನು ?

**'ನಾಮ-ಮಾಹಾತ್ಮ್ಯ'** ಹೀಗೆಯೇ ಇರುವುದಾದರೆ, ಇಂದೂ ಕೂಡ ನಾರಾಯಣ ಸ್ಮರಣ ಮಾಡುವವರ ದುಃಖಗಳನ್ನು ಪರಿಹರಿಸುವುದಕ್ಕಾಗಿ [ಅವರು] ಏಕೆ ಬರುವುದಿಲ್ಲ ?

ಈ ಮಾತು ಸತ್ಯವಾಗಿದ್ದರೆ, ಕೈದಿಗಳು—"**ನಾರಾಯಣ ! ನಾರಾಯಣ !**", ಎನ್ನುತ್ತಾ ಬಿಡುಗಡೆಯನ್ನೇತಕ್ಕೆ ಹೊಂದುವುದಿಲ್ಲ ?

## (ಭಾಗವತದ ಹಲವು ಇತರ ಖಂಡನೆಗಳು)

ಇದೇ ರೀತಿ, ಜ್ಯೋತಿಷಶಾಸ್ತ್ರಕ್ಕೆ ವಿರುದ್ಧವಾಗಿ **ಸುಮೇರು ಪರ್ವತದ ಪರಿಮಾಣವನ್ನು** ಬರೆದಿದ್ದಾರೆ ![1]

ಮತ್ತು, 'ಪ್ರಿಯವ್ರತ ರಾಜನ ರಥದ ಚಕ್ರದ ಜಾಡಿನಿಂದ **ಸಮುದ್ರಗಳಾದುವು**'![2]

---

*12 ಮೈಲಿ.—ಅನು.

†ಭಾಗವತ 10.6.14.—ಯು. ಮೀ.

‡ಮೂಲಗ್ರಂಥದಲ್ಲಿ 'ಅಜಾಮೇಲ', ಎಂಬ ಪಾಠವಿದೆ. –ಸಂ.

$ಭಾಗವತ 6.1.29–30 – ಯು. ಮೀ.

1. ಭಾಗವತ 5.16.7—ಯು. ಮೀ.

2. ಭಾಗವತ 5.16.2—ಯು. ಮೀ.

'ಪೃಥಿವೀ' ನಾಲ್ವತ್ತೊಂಬತ್ತು ಕೋಟಿ ಯೋಜನೆಯಿದೆ'![1]

—ಈ ಮೊದಲಾದ ಸುಳ್ಳು ಮಾತುಗಳ ಬುರುಡೆಯನ್ನು ಭಾಗವತದಲ್ಲಿ ಬರೆದಿದ್ದಾರೆ; ಅವಕ್ಕೆ ಏನೂ ತುದಿ-ಮೊದಲಿಲ್ಲ!

## (ಭಾಗವತದ ರಚನೆ ಬೋಪದೇವನಿಂದ)

"ಗೀತಗೋವಿಂದ"ವನ್ನು ಬರೆದಿರುವ ಜಯದೇವನ ಸೋದರನಾದ **ಬೋಪದೇವನು*** ಈ ಭಾಗವತವನ್ನು ಬರೆದಿದ್ದಾನೆ.† ನೋಡಿರಿ—

ಅವನು ತನ್ನಿಂದ ರಚಿತವಾದ '**ಹಿಮಾದ್ರಿ**'‡ ಎಂಬ ಗ್ರಂಥದಲ್ಲಿ—

"**ಶ್ರೀಮದ್ಭಾಗವತಪುರಾಣವನ್ನು ನಾನು ರಚಿಸಿದ್ದೇನೆ,**" ಎಂದು ಈ [ಕೆಳಗಿನ] ಶ್ಲೋಕವನ್ನು ಬರೆದಿದ್ದಾನೆ.

ಆ ಲೇಖನದ ಮೂರು ಪತ್ರಗಳು ನಮ್ಮ ಹತ್ತಿರವಿದ್ದವು. ಅವುಗಳಲ್ಲಿ ಒಂದು ಪತ್ರ ಕಳೆದು ಹೋಗಿದೆ. ಆ ಪತ್ರದಲ್ಲಿನ ಶ್ಲೋಕಗಳ ಆಶಯವೇನಿದ್ದಿತೋ, ಆ ಆಶಯದ ಎರಡು ಶ್ಲೋಕಗಳನ್ನು ನಾವು ರಚಿಸಿ, ಕೆಳಗೆ ಬರೆದಿದ್ದೇವೆ. ನೋಡಬೇಕೆಂದು ಯಾವನಿಗೆ ಇಚ್ಛೆಯುಂಟೋ, ಅವನು '**ಹಿಮಾದ್ರಿ**' ಗ್ರಂಥದಲ್ಲಿ ನೋಡಿಕೊಳ್ಳಲಿ:—

**'ಹಿಮಾದ್ರೇಃ ಸಚಿವಸ್ಯಾರ್ಥೇ ಸೂಚನಾ ಕ್ರಿಯತೇಽಧುನಾ ।**
**ಸ್ಕಂಧಾಧ್ಯಾಯಕಥಾನಾಂ ಚ ಯತ್ಪ್ರಮಾಣಂ ಸಮಾಸತಃ ॥1॥**
**ಶ್ರೀಮದ್ಭಾಗವತಂ ನಾಮ ಪುರಾಣಂ ಚ ಮಯೇರಿತಮ್ ।**
**ವಿದುಷಾ ಬೋಬದೇವೇನ ಶ್ರೀಕೃಷ್ಣಸ್ಯ ಯಶೋಽನ್ವಿತಮ್' ॥2॥**

---

1. ಭಾಗವತ 5.20.38—ಯು. ಮೀ.

*ಮೂಲಗ್ರಂಥದಲ್ಲಿ 'ಬೋಬದೇವ', ಎಂಬ ಪಾಠವಿದೆ.—ಸಂ.

†ನೋಡಿರಿ, ನೀಲಕಂಠರಚಿತ ದೇವೀಭಾಗವತದ ಟೀಕೆಯ ಉಪೋದ್ಘಾತವನ್ನು —
'ವಿಷ್ಣುಭಾಗವತಂ ಬೋಪದೇವಕೃತಮಿತಿ ವದನ್ತಿ' !
ಶಾಹಜಹಾನನ ಸಮಕಾಲೀನನಾದ ಕವೀಂದ್ರಾಚಾರ್ಯನ ಪುಸ್ತಕಾಲಯದ ಸೂಚೀಪತ್ರ (ಬಡೋದೆಯಲ್ಲಿ ಮುದ್ರಿತವಾದದ್ದು) ದಲ್ಲಿ ಭಾಗವತವು ಬೋಪದೇವನಿಂದ ರಚಿತವಾಗಿದೆಯೆಂದು ಬರೆಯಲಾಗಿದೆ.—ಯು. ಮೀ.

‡ಇದರ ಹೆಸರು 'ಹರಿಲೀಲಾಮೃತ' ಎಂದೂ ಕೂಡ ಇದೆ.—ಯು. ಮೀ.

ಕಳೆದು ಹೋದ ಪತ್ರದಲ್ಲಿ ಇದೇ ಪ್ರಕಾರದ ಶ್ಲೋಕಗಳಿದ್ದವು.

ಅಂದರೆ, ರಾಜನ ಸಚಿವನಾದ **ಹಿಮಾದ್ರಿಯು ಬೋಪದೇವ** ಪಂಡಿತನಿಗೆ—

"ನನಗೆ ನೀನು ರಚಿಸಿದ **ಶ್ರೀಮದ್ಭಾಗವತವನ್ನು** ಸಂಪೂರ್ಣವಾಗಿ ಕೇಳಲು ಅವಕಾಶವಿಲ್ಲ. ಆದುದರಿಂದ, ಯಾವುದನ್ನು ನೋಡಿ, ನಾನು ಶ್ರೀಮದ್ಭಾಗವತದ ಕಥೆಯನ್ನು ಸಂಕ್ಷೇಪವಾಗಿ ತಿಳಿಯಲಾಗುವುದೋ, ಅಂತಹ ಸಂಕ್ಷಿಪ್ತವಾದ ಶ್ಲೋಕಬದ್ಧ ಸೂಚೀಪತ್ರವನ್ನು ನೀನು ರಚಿಸು.", ಎಂದು ಹೇಳಿದನು.

ಹೀಗಾಗಿ, ಕೆಳಗೆ ಬರೆದಿರುವ ಸೂಚೀಪತ್ರವನ್ನು ಆ **ಬೋಪದೇವನು** ರಚಿಸಿದನು. ಅದರಲ್ಲಿ, ಆ ಕಳೆದುಹೋದ ಪತ್ರದಲ್ಲಿದ್ದ ಹತ್ತು ಶ್ಲೋಕಗಳು ಕಳೆದು ಹೋಗಿವೆ. ಹನ್ನೊಂದನೆಯ ಶ್ಲೋಕದಿಂದ ಬರೆಯುತ್ತೇವೆ. ಈ ಕೆಳಗೆ ಬರೆದ ಶ್ಲೋಕಗಳೆಲ್ಲವನ್ನೂ **ಬೋಪದೇವನೇ** ಬರೆದಿದ್ದಾನೆ. ಅವು :—

**ಬೋಧಯಂತೀತಿ ಹಿ ಪ್ರಾಹುಃ ಶ್ರೀಮದ್ಭಾಗವತಂ ಪುನಃ ।**
**ಪಂಚ ಪ್ರಶ್ನಾಃ ಶೌನಕಸ್ಯ ಸೂತಸ್ಯಾತ್ರೋತ್ತರಂ ತ್ರಿಷು ॥11॥**
**ಪ್ರಶ್ನಾವತಾರಯೋಶ್ಚೈವ ವ್ಯಾಸಸ್ಯಾನಿರ್ವೃತಿಃ ಕೃತಾತ್ ।**
**ನಾರದಸ್ಯಾತ್ರ ಹೇತೂಕ್ತಿಃ ಪ್ರತೀತ್ಯರ್ಥಂ ಸ್ವಜನ್ಮ ಚ ॥12॥**
**ಸುಪ್ತಘ್ನಂ ದ್ರೌಣ್ಯಭಿಭವಸ್ತದಸ್ತ್ರಾತ್ಪಾಂಡವಾ ವನಮ್ ।**
**ಭೀಷ್ಮಸ್ಯ ಸ್ವಪದಪ್ರಾಪ್ತಿಃ ಕೃಷ್ಣಸ್ಯ ದ್ವಾರಿಕಾಗಮಃ ॥13॥**
**ಶ್ರೋತುಃ ಪರೀಕ್ಷಿತೋ ಜನ್ಮ ಧೃತರಾಷ್ಟ್ರಸ್ಯ ನಿರ್ಗಮಃ ।**
**ಕೃಷ್ಣಮರ್ತ್ಯತ್ಯಾಗಸೂಚಾ ತತಃ ಪಾರ್ಥಮಹಾಪಥಃ ॥14॥**
**ಇತ್ಯಷ್ಟಾದಶಭಿಃ ಪಾದೈರಧ್ಯಾಯಾರ್ಥಃ ಕ್ರಮಾತ್ ಸ್ಮೃತಃ ।**
**ಸ್ವಪರಪ್ರತಿಬಂಧೋನಂ ಸ್ಫೀತಂ ರಾಜ್ಯಂ ಜಹೌ ನೃಪಃ ॥15॥**
**ಇತಿ ವೈರಾಜ್ಞೋ ದಾರ್ಢ್ಯೋಕ್ತ್ಯೌ ಪ್ರೋಕ್ತಾ ದ್ರೌಣಿಜಯಾದಯಃ ॥[16]॥**
**ಇತಿ ಪ್ರಥಮಃ ಸ್ಕಂಧಃ ॥1॥**

ಈ ಮೊದಲಾಗಿ, ಹನ್ನೆರಡು ಸ್ಕಂಧಗಳ ಸೂಚೀಪತ್ರವನ್ನು ಇದೇ ರೀತಿ ಬೋಪದೇವ ಪಂಡಿತನು ರಚಿಸಿ, ಹಿಮಾದ್ರಿ ಸಚಿವನಿಗೆ ಕೊಟ್ಟನು. ಯಾವನು ವಿಸ್ತಾರವನ್ನು ನೋಡಬಯಸುತ್ತಾನೋ, ಅವನು ಬೋಪದೇವನಿಂದ ರಚಿತವಾದ **ಹಿಮಾದ್ರಿ** ಗ್ರಂಥದಲ್ಲಿ ನೋಡಿಕೊಳ್ಳಲಿ!

ಇದೇ ರೀತಿ, ಬೇರೆ ಪುರಾಣಗಳ ಲೀಲೆಯನ್ನೂ ಕೂಡ ತಿಳಿದುಕೊಳ್ಳಬೇಕು! ಆದರೆ, ಹತ್ತೊಂಬತ್ತು, ಇಪ್ಪತ್ತು, ಇಪ್ಪತ್ತೊಂದು-ಒಂದನ್ನೊಂದು ಮೀರಿಸುತ್ತವೆ.*

### (ಶ್ರೀಕೃಷ್ಣರ ಚರಿತ್ರದ ಬಗ್ಗೆ ಪ್ರಮಾಣ ಪತ್ರ)

ನೋಡಿರಿ! ಶ್ರೀಕೃಷ್ಣರ ಇತಿಹಾಸ ಮಹಾಭಾರತದಲ್ಲಿ ಅತ್ಯುತ್ತಮವಾಗಿದೆ. ಅವರ ಗುಣ-ಕರ್ಮ-ಸ್ವಭಾವಗಳು ಮತ್ತು ಚಾರಿತ್ರ್ಯ ಆಪ್ತ ಪುರುಷರದರ ಹಾಗೆ ಇವೆ. ಶ್ರೀಕೃಷ್ಣರು, ಜನ್ಮದಿಂದ ಹಿಡಿದು ಮರಣ ಪರ್ಯಂತ, ಅಧರ್ಮದ ಆಚರಣವನ್ನು, ಕೆಟ್ಟಕೆಲಸವನ್ನು ಸ್ವಲ್ಪವೂ ಕೂಡ ಮಾಡಿದ್ದಿರಬಹುದೋ, ಎಂದು ಬರೆದಿಲ್ಲ.†

### (ಭಾಗವತರಚನಾಕಾರನಿಂದ ಶ್ರೀಕೃಷ್ಣರ ಮೇಲೆ ಇಚ್ಛೆ ಬಂದಂತೆ ದೋಷಾರೋಪಣೆ)

ಮತ್ತು ಈ ಭಾಗವತದವನು ಅನುಚಿತವಾದ, ಮನಸ್ಸಿಗೆ ಬಂದಂತಹ ದೋಷಗಳನ್ನು ಹೊರೆಸಿದ್ದಾನೆ. ಹಾಲು, ಮೊಸರು, ಬೆಣ್ಣೆ ಮೊದಲಾದುವುಗಳ ಕಳವುಗಳನ್ನು ಮೆತ್ತಿದನು.

ಮತ್ತು ಕುಬ್ಜೆಯೆಂಬ ದಾಸಿಯೊಂದಿಗೆ ಸಮಾಗಮ, ಪರನಾರಿಯರೊಂದಿಗೆ ರಾಸ-ಮಂಡಲ, ಕ್ರೀಡೆ ಮೊದಲಾದ ಮಿಥ್ಯಾ ದೋಷಗಳನ್ನು ಶ್ರೀಕೃಷ್ಣರ ಮೇಲೆ ಆರೋಪಿಸಿದ್ದಾನೆ.‡

ಇದನ್ನು ಓದಿ-ಓದಿಸಿ, ಕೇಳಿ-ಕೇಳಿಸಿ, ಅನ್ಯ ಮತೀಯರು ಶ್ರೀಕೃಷ್ಣರ ನಿಂದೆಯನ್ನು ಬಹಳವಾಗಿ ಮಾಡುತ್ತಾರೆ.

**ಈ ಭಾಗವತವಿಲ್ಲದಿದ್ದರೆ, ಶ್ರೀಕೃಷ್ಣರಂತಹ ಮಹಾತ್ಮರುಗಳ ಸುಳ್ಳು ನಿಂದೆ ಆಗುತ್ತಿದ್ದಿತಾದರೂ ಹೇಗೆ ?**

---

*ಒಂದಕ್ಕಿಂತ ಮತ್ತೊಂದು ದೊಡ್ಡ ಬುರುಡೆ, ಎಂದರ್ಥ.—ಅನು.

†ಮಹಾಭಾರತದಲ್ಲಿ ಶ್ರೀಕೃಷ್ಣನ ಚರಿತ್ರೆಯು ವಿಭಿನ್ನ ಸ್ಥಳಗಳಲ್ಲಿ ವರ್ಣಿತವಾಗಿದೆ. ಭಾಗವತದಲ್ಲಿ ಬರೆದಂತೆ, ಶ್ರೀಕೃಷ್ಣನು ದುಷ್ಕರ್ಮಗಳನ್ನೇನಾದರೂ ಮಾಡಿದ್ದಲ್ಲಿ, ರಾಜಸೂಯ ಯಾಗದ ಸಂದರ್ಭದಲ್ಲಿ (ಸಭಾಪರ್ವದ ಶಿಶುಪಾಲವಧ) ಶಿಶುಪಾಲನು ಕೃಷ್ಣನ ದೋಷಗಳನ್ನೆಣಿಸುವಾಗ, ಈ ದುಷ್ಕರ್ಮಗಳ ಉಲ್ಲೇಖವನ್ನು ಅವಶ್ಯವಾಗಿ ಮಾಡುತ್ತಿದ್ದನು. ಆದರೆ, ಹೀಗಾಗಿಲ್ಲ! ಆದ್ದರಿಂದ, ಶ್ರೀಕೃಷ್ಣನ ಚರಿತ್ರವು ನಿರ್ಮಲವಾಗಿತ್ತೆಂಬುದು ಸ್ಪಷ್ಟವಾಗಿದೆ.— ಯು.ಮೀ.

‡ಭಾಗವತದ ರಚನೆಯು ಮಹಾಭಾರತದ ನಂತರ, ಪೌರಾಣಿಕ ಭ್ರಷ್ಟಕಾಲದಲ್ಲಿ ಆಯಿತೆಂಬುದಕ್ಕೆ ಬೇರೆ ಪ್ರಮಾಣ ಬೇಕಿಲ್ಲ.—ಸಂ.

## (ಶಿವಪುರಾಣದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳ ಚರ್ಚೆ)

**ಶಿವಪುರಾಣದಲ್ಲಿ** ಹನ್ನೆರಡು ಜ್ಯೋತಿರ್ಲಿಂಗಗಳನ್ನು ವರ್ಣಿಸಿದ್ದಾರೆ. ಅದರ ಕಥೆಯು ಸರ್ವಥಾ ಅಸಂಭವವಾಗಿದೆ.

ಹೆಸರೇನೋ ಇಟ್ಟಿದ್ದಾರೆ 'ಜ್ಯೋತಿರ್ಲಿಂಗ', ಎಂದು. ಮತ್ತು ಅವುಗಳಲ್ಲಿ ಪ್ರಕಾಶದ ಲೇಶವೂ ಇಲ್ಲ. ರಾತ್ರಿಯಲ್ಲಿ ದೀಪ ಹೊತ್ತಿಸದೇ, ಲಿಂಗಗಳೂ ಕೂಡ ಕತ್ತಲಿನಲ್ಲಿ ಕಾಣಿಸುವುದಿಲ್ಲ. ಈ ಎಲ್ಲ ಲೀಲೆಗಳೂ ಪೋಪಮಹಾಶಯರದು !

## (ಪುರಾಣರಚನೆ-ಪ್ರಯೋಜನದ ಸಮೀಕ್ಷೆ)

**ಪ್ರಶ್ನೆ** :—ಯಾವಾಗ ವೇದಗಳನ್ನೋದುವ ಸಾಮರ್ಥ್ಯವಿರದಾಯಿತೋ, ಆಗ ಸ್ಮೃತಿಗಳನ್ನೂ, ಯಾವಾಗ ಸ್ಮೃತಿಯನ್ನೋದುವ ಬುದ್ಧಿಯಿಲ್ಲವಾಯಿತೋ, ಆಗ ಶಾಸ್ತ್ರಗಳನ್ನೂ, ಯಾವಾಗ ಶಾಸ್ತ್ರವನ್ನೋದುವ ಸಾಮರ್ಥ್ಯವಿಲ್ಲದೇ ಹೋಯಿತೋ, ಆಗ ಪುರಾಣಗಳನ್ನೂ ರಚಿಸಿದರು.* ಕೇವಲ ಸ್ತ್ರೀಯರ ಮತ್ತು ಶೂದ್ರರ ಸಲುವಾಗಿ ! ಏಕೆಂದರೆ, ಇವರಿಗೆ ವೇದಗಳನ್ನೋದುವ-ಕೇಳುವ ಅಧಿಕಾರವಿಲ್ಲ!

**ಉತ್ತರ :—ಇದು ಸುಳ್ಳು ಮಾತು! ಏಕೆಂದರೆ, ಸಾಮರ್ಥ್ಯವು ಓದುವುದರಿಂದ-ಓದಿಸುವುದರಿಂದಲೇ ಉಂಟಾಗುತ್ತದೆ. ಮತ್ತು ವೇದಗಳನ್ನು ಓದುವ-ಕೇಳುವ ಅಧಿಕಾರ ಎಲ್ಲರಿಗೂ ಇದೆ!**

ನೋಡಿರಿ ! **ಗಾರ್ಗೀ**† ಮೊದಲಾದ ಸ್ತ್ರೀಯರು! ಮತ್ತು

**ಛಾಂದೋಗ್ಯ**ದಲ್ಲಿ ಹೇಳಿರುವಂತೆ, **ಜಾನಶ್ರುತಿ** ಎಂಬ ಶೂದ್ರನೂ ಕೂಡ, ವೇದವನ್ನು ರೈಕ್ವಮುನಿಯ ಬಳಿ, ಓದಿದ್ದರು.

ಮತ್ತು **ಯಜುರ್ವೇದ**ದ 26ನೆಯ ಅಧ್ಯಾಯದ ಎರಡನೆಯ ಮಂತ್ರದಲ್ಲಿ ಸ್ಪಷ್ಟವಾಗಿ—

---

*ಅತ್ರಿಸ್ಮೃತಿಯ ಈ ಪ್ರಮಾಣವನ್ನು ನೋಡಿ—

ವೇದೈರ್ವಿಹೀನಾಃ ಪಠಂತಿ ಶಾಸ್ತ್ರಂ ಶಾಸ್ತ್ರೈರ್ವಿಹೀನಾಃ ಪುರಾಣಪಾಠಾಃ ।
ಪುರಾಣೈರ್ವಿಹೀನಾಃ ಕೃಷಿಣೋ ಭವನ್ತಿ ಭ್ರಷ್ಟಾಸ್ತತೋ ಭಾಗವತಾ ಭವನ್ತಿ ॥

—ಸಂ.

†ಈಕೆ ಜನಕನ ಸಭೆಯಲ್ಲಿ ಯಾಜ್ಞವಲ್ಕ್ಯರೊಂದಿಗೆ ಶಾಸ್ತ್ರಾರ್ಥ ಮಾಡಿದ್ದಳು. ನೋಡಿ, ಶತಪಥ ಬ್ರಾಹ್ಮಣ (14.6.6.8)—ಯು.ಮೀ.

ಶತಪಥ ಬ್ರಾಹ್ಮಣದ ಹದಿನಾಲ್ಕನೆಯ ಕಾಂಡಕ್ಕೆ ಬೃಹದಾರಣ್ಯಕೋಪನಿಷತ್, ಎಂದು ಹೆಸರು. –ಸಂ.

'ವೇದಗಳನ್ನು ಓದುವ ಮತ್ತು ಕೇಳುವ ಅಧಿಕಾರ ಮಾನವಮಾತ್ರರಿಗಿದೆ', ಎಂದು ಬರೆದಿದೆ.

ಎಂದ ಮೇಲೆ, ಯಾರು ಈ ಬಗೆಯ ಮಿಥ್ಯಾಗ್ರಂಥಗಳನ್ನು ರಚಿಸಿ, ಜನರನ್ನು ಸತ್ಯಗ್ರಂಥಗಳಿಂದ ವಿಮುಖರನ್ನಾಗಿ [ಮಾಡಿ], ಬಲೆಯಲ್ಲಿ ಸಿಕ್ಕಿಸಿಕೊಂಡು, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೋ, ಅವರು ಮಹಾ ಪಾಪಿಗಳೇತಕ್ಕಲ್ಲ ?

## (ನವಗ್ರಹ-ವಿಷಯಕ ಮಂತ್ರಗಳು ಮತ್ತು ಅವುಗಳ ಸಮೀಕ್ಷೆ)

ನೋಡಿರಿ! ವಿದ್ಯಾಹೀನ ಮಾನವರನ್ನು ಕಚ್ಚಿ ಹಿಡಿಯುವಂತೆ, ಗ್ರಹಗಳ ಚಕ್ರವನ್ನು ಹೇಗೆ ಪ್ರಚಲಿತವಾಗಿ ಮಾಡಿದ್ದಾರೆ !—

| | | |
|---|---|---|
| ಆ ಕೃಷ್ಣೇನ ರಜಸಾ. | ॥1॥[1] | ಸೂರ್ಯನ ಮಂತ್ರ. |
| ಇಮಂ ದೇವಾ ಅಸಪತ್ನಂ ಸುವಧ್ವಮ್. | ॥2॥[2] | ಚಂದ್ರನ ಮಂತ್ರ. |
| ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ. | ॥3॥[3] | ಮಂಗಳನ ಮಂತ್ರ. |
| ಉದ್ಬುಧ್ಯಸ್ವಾಗ್ನೇ. | ॥4॥[4] | ಬುಧನ ಮಂತ್ರ. |
| ಬೃಹಸ್ಪತೇ ಅತಿ ಯದರ್ಯೋ. | ॥5॥[5] | ಬೃಹಸ್ಪತಿಯ ಮಂತ್ರ. |
| ಶುಕ್ರಮಂಧಸಃ. | ॥6॥[6] | ಶುಕ್ರನ ಮಂತ್ರ. |
| ಶನ್ನೋ ದೇವೀರಭಿಷ್ಟಯ. | ॥7॥[7] | ಶನಿಯ ಮಂತ್ರ. |
| ಕಯಾ ನಶ್ಚಿತ್ರ ಆ ಭುವತ್. | ॥8॥[8] | ರಾಹುವಿನ ಮಂತ್ರ. |

1. [ಯಜುಃ-33.43]
2. [ಯಜುಃ-9.40]
3. [ಯಜುಃ-3.12]
4. [ಯಜುಃ-15.54]
5. [ಯಜುಃ-26.3]
6. [ಯಜುಃ-19.75]
7. [ಯಜುಃ-36.12]
8. [ಯಜುಃ-27.39]

ಮತ್ತು—

**ಕೇತುಂ ಕೃಣ್ವನ್ನಕೇತವೇ.** ॥9॥[9] ಇದನ್ನು **'ಕೇತು'**ವಿನ ಕಂಡಿಕೆಯೆನ್ನುತ್ತಾರೆ.

[ಇವುಗಳ ಸತ್ಯಾರ್ಥ]—**'ಆಕೃಷ್ಣೇನ'** [ಎಂಬ ಈ ಮಂತ್ರ] ಸೂರ್ಯ ಮತ್ತು ಭೂಮಿಯ ಆಕರ್ಷಣದ ವಿಷಯಬೋಧಕ]. [1]

ಎರಡನೆಯದು, ರಾಜಗುಣವಿಧಾಯಕ[ವಾದುದು]. [2]

ಮೂರನೆಯದು, ಅಗ್ನಿ[ಯ ವರ್ಣನೆ ಮಾಡುವಂತಹುದು]. [3]

ಮತ್ತು ನಾಲ್ಕನೆಯದು, ಯಜಮಾನ[ಸೂಚಕವಾದುದು]. [4]

ಐದನೆಯದು, ವಿದ್ವಾಂಸ[ವಿಷಯಕವಾದುದು]. [5]

ಆರನೆಯದು, ವೀರ್ಯ, ಅನ್ನ[ಸಂಬಂಧವಾದುದು]. [6]

ಏಳನೆಯದು, ಜಲ, ಪ್ರಾಣ ಮತ್ತು ಪರಮೇಶ್ವರ[ವಿಷಯವಾದುದು]. [7]

ಎಂಟನೆಯದು, ಮಿತ್ರ[ಸೂಚಕ]. [8]

ಒಂಬತ್ತನೆಯದು, ಜ್ಞಾನಸಂಪಾದನದ ವಿಧಾಯಕ ಮಂತ್ರವಾಗಿದೆ. [9]

[ಇವು] **ಗ್ರಹಗಳ ವಾಚಕಗಳಲ್ಲ.**

ಅರ್ಥವನ್ನು ತಿಳಿಯದಿರುವುದರಿಂದ, ಭ್ರಮಜಾಲದಲ್ಲಿ ಬಿದ್ದಿದ್ದಾರೆ.

## (ಪೋಪರ ಗ್ರಹಫಲ-ವಿಷಯಕ ಲೀಲೆ)

**ಪ್ರಶ್ನೆ:**—ಗ್ರಹಗಳ ಫಲ ಸಿಕ್ಕುತ್ತದೋ, ಅಥವಾ ಇಲ್ಲವೋ?

**ಉತ್ತರ:—ಪೋಪಲೀಲೆಯಲ್ಲಿ ಹೇಳಿರುವಂತಹದ್ದೇನೂ ಇಲ್ಲ!** ಆದರೆ, ಸೂರ್ಯ, ಚಂದ್ರರ ಕಿರಣಗಳ ಮೂಲಕ ಉಷ್ಣತ್ವ, ಶೀತತ್ವ ಅಥವಾ ಋತುವಿನ ಅನುಗುಣವಾದ ಕಾಲಚಕ್ರದ ಸಂಬಂಧಮಾತ್ರದಿಂದ, ತನ್ನ ಪ್ರಕೃತಿಗೆ ಅನುಕೂಲವಾಗಿ–ಪ್ರತಿಕೂಲವಾಗಿ ಸುಖ-ದುಃಖಗಳಿಗೆ ನಿಮಿತ್ತವಾಗಿ ಆಗುತ್ತದೆ.

ಆದರೆ, ಪೋಪಲೀಲೆಯವರು—

"ಕೇಳಿರಿ, ಸ್ವಾಮಿಯವರೇ! ಸೇಠರೇ! ಯಜಮಾನರೇ! ಇಂದು ನಿಮಗೆ ಚಂದ್ರ, ಸೂರ್ಯ ಮೊದಲಾದವರು ಎಂಟನೆಯವರಾಗಿದ್ದು, ಕ್ರೂರ [ಗ್ರಹಗಳು]

9. [ಯಜುಃ-29.37]

ಮನೆಗೆ ಬಂದಿದ್ದಾರೆ. ಎರಡೂವರೆ ವರ್ಷಗಳ ಕಾಲ ಶನಿ ಪಾದಸ್ಥಾನಕ್ಕೆ ಬಂದಿದ್ದಾನೆ. ನಿಮಗೆ ಭಾರೀ ವಿಘ್ನವಿದೆ! ಮನೆ-ಬಾಗಿಲು ಬಿಡಿಸಿ, ಪರದೇಶದಲ್ಲಿ ಅಲೆದಾಡಿಸುವನು!

"ಆದರೆ, ನೀವು ಗ್ರಹಗಳ [ಶಾಂತಿಗಾಗಿ] ದಾನವನ್ನೂ, ಜಪವನ್ನೂ, ಪಾಠವನ್ನೂ, ಪೂಜೆಯನ್ನೂ ಮಾಡಿಸುವಿರಾದರೆ, ದುಃಖದಿಂದ ಪಾರಾಗುವಿರಿ.", ಎಂದು ಹೇಳುತ್ತಾರೆ.

ಇವರಿಗೆ—"ಪೋಪ ಮಹೋದಯರೇ! ನಿಮಗೆ ಮತ್ತು ಗ್ರಹಗಳಿಗೆ ಸಂಬಂಧವೇನಿದೆ? ಗ್ರಹ ಎಂತಹ ಪದಾರ್ಥ?", ಎಂದು ಪ್ರಶ್ನೆ ಹಾಕಬೇಕು.

**(ಮಂತ್ರಗಳಿಂದ ದೇವತೆಗಳನ್ನು ವಶಪಡಿಸಿಕೊಳ್ಳುವ ಛಲ-ನಟನೆ)**

**ಪೋಪರು:—**

**ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಾಶ್ಚ ದೇವತಾಃ ।**
**ತೇ ಮಂತ್ರಾ ಬ್ರಾಹ್ಮಣಾಧೀನಾಸ್ತಸ್ಮಾದ್ಬ್ರಾಹ್ಮಣದೈವತಮ್ ॥**

"ನೋಡಿರಿ, ಎಂತಹ ಪ್ರಮಾಣವಿದೆ! ಎಲ್ಲಾ ಜಗತ್ತೂ ದೇವತೆಗಳಿಗೆ ಆಧೀನವಾಗಿದೆ. ಸರ್ವದೇವತೆಗಳೂ ಮಂತ್ರಗಳಿಗೆ ಆಧೀನರಾಗಿರುತ್ತಾರೆ. ಮತ್ತು ಆ ಮಂತ್ರಗಳು ಬ್ರಾಹ್ಮಣರಿಗೆ ಆಧೀನವಾಗಿರುತ್ತವೆ. ಆದುದರಿಂದ, ಬ್ರಾಹ್ಮಣರು ದೇವತೆಗಳೆನಿಸುತ್ತಾರೆ.

"ಏಕೆಂದರೆ, [ಯಾವ] ದೇವತೆಯನ್ನು ಬೇಕಾದರೂ ಮಂತ್ರದ ಬಲದಿಂದ ಬರಮಾಡಿಕೊಂಡು, ಪ್ರಸನ್ನರನ್ನಾಗಿ ಮಾಡಿ, ಕಾರ್ಯವನ್ನು ಸಾಧಿಸಿಕೊಡುವ ಅಧಿಕಾರ ನಮ್ಮದೇ ಆಗಿರುತ್ತದೆ! ನಮ್ಮಲ್ಲಿ ಮಂತ್ರಶಕ್ತಿಯೇ ಇಲ್ಲವಾಗಿದ್ದಿದ್ದರೆ, ನಿಮ್ಮಂತಹ ನಾಸ್ತಿಕರು* ನಮ್ಮನ್ನು ಜಗತ್ತಿನಲ್ಲಿ ಇರುವುದಕ್ಕೇ ಬಿಡುತ್ತಿರಲಿಲ್ಲ!"

**ಸತ್ಯವಾದೀ:—**ಯಾರು ಕಳ್ಳರೂ, ಡಕಾಯಿತರೂ, ಕುಕರ್ಮಿಗಳೂ ಆದ ಜನರಿರುತ್ತಾರೋ, ಅವರೂ ಕೂಡಾ ನಿಮ್ಮ ದೇವತೆಗಳಿಗೆ ಆಧೀನರಾಗಿರುತ್ತಾರೇನು?

---

*ಮೂರ್ತಿಪೂಜೆ, ಮೃತಕ ಶ್ರಾದ್ಧ ಮತ್ತು ಫಲಿತಜ್ಯೋತಿಷ್ಯದಲ್ಲಿ ನಂಬಿಕೆ—ಇವು ಮೂರು ಪೌರಾಣಿಕರ ಪರಿಚಾಯಕ-ಸ್ತಂಭಗಳು! ಯಾರು ಇವನ್ನು ಖಂಡಿಸುತ್ತಾರೋ, ಅವರೆಲ್ಲಾ ಇವರ ದೃಷ್ಟಿಯಲ್ಲಿ ನಾಸ್ತಿಕರು. ಸೃಷ್ಟಿಕರ್ತೃವೂ, ನಿರಾಕಾರನೂ ಆದ ಪರಮೇಶ್ವರನ ಅನನ್ಯ ಭಕ್ತರೂ, ಅವನ ವೇದಾದೇಶವನ್ನು ಅಂಗೀಕರಿಸುವವರೂ ಆದ ಸ್ವಾಮೀ ದಯಾನಂದರನ್ನು ಆ ಕಾಲದ ಪೌರಾಣಿಕ ವಿದ್ವಾಂಸರು ನಾಸ್ತಿಕರೂ, ಕಿರಸ್ತಾನರೂ, ಎಂದು ಘೋಷಿಸಿ, ಅವರ ಮುಖ ನೋಡಿದರೆ, ಪ್ರಾಯಶ್ಚಿತ್ತಮಾಡಿಕೊಳ್ಳಬೇಕೆಂದು, ಜನರಿಗೆ ಹೆದರಿಸುತ್ತಿದ್ದರು.—ಸಂ.

ದೇವತೆಗಳೇ ಅವರಿಂದ ದುಷ್ಕಾರ್ಯ ಮಾಡಿಸುತ್ತಾ ಇರಬಹುದು ! ಹಾಗಿದ್ದಲ್ಲಿ, ನಿಮ್ಮ ದೇವತೆಗಳಿಗೂ ಮತ್ತು ರಾಕ್ಷಸರಿಗೂ ಸ್ವಲ್ಪವಾದರೂ ವ್ಯತ್ಯಾಸವಿರುವುದಿಲ್ಲ.

ಮಂತ್ರಗಳು ನಿಮ್ಮ ಆಧೀನದಲ್ಲಿರುವುವಾದರೆ, [ಮತ್ತು] ಅವುಗಳಿಂದ ನೀವು ಏನು ಬೇಕಾದುದನ್ನು ಮಾಡಿಸಬಲ್ಲಿರಾದರೆ, ಆ ಮಂತ್ರಗಳಿಂದ ದೇವತೆಗಳನ್ನು ವಶ ಪಡಿಸಿಕೊಂಡು, ರಾಜರುಗಳ ಕೋಶವನ್ನೆತ್ತಿ, ನಿಮ್ಮ ಮನೆಯಲ್ಲಿ ತುಂಬಿಸಿಕೊಂಡು, ಕುಳಿತು, ಆನಂದವನ್ನೇತಕ್ಕೆ ಅನುಭವಿಸುವುದಿಲ್ಲ ?

ಶನಿ ಮೊದಲಾದವರ ಹೆಸರಿನಲ್ಲಿ ಎಣ್ಣೆ ಮೊದಲಾದುದರ **ಛಾಯಾದಾನ***ವನ್ನು ತೆಗೆದುಕೊಳ್ಳುವುದಕ್ಕಾಗಿ, ಮನೆ–ಮನೆಗೆ ಅಲೆದಾಡುವಿರೇಕೆ ?

ಮತ್ತು ಯಾವನನ್ನು ನೀವು ಕುಬೇರ ಎಂದು ತಿಳಿದಿದ್ದೀರೋ, ಅವನನ್ನು ವಶೀಕರಿಸಿಕೊಂಡು, ಬೇಕಾದಷ್ಟು ಧನವನ್ನು ತೆಗೆದುಕೊಳ್ಳುತ್ತಾ ಹೋಗಿರಿ!

**ಬಡಪಾಯಿಗಳಾದ ಬಡವರನ್ನೇಕೆ ಸುಲಿಯುತ್ತೀರಿ !**

### (ಗ್ರಹಗಳು ಯಾರ ಮೇಲೂ ಪ್ರಸನ್ನ ಅಥವಾ ಅಪ್ರಸನ್ನವಾಗುವುದಿಲ್ಲ)

ನಿಮಗೆ ದಾನ ಕೊಡುವುದರಿಂದ, ಗ್ರಹಗಳು ಪ್ರಸನ್ನವೂ, ಮತ್ತು ಕೊಡ ದಿರುವುದರಿಂದ, ಅಪ್ರಸನ್ನವೂ ಆಗುವುವಾದರೆ, ನಮಗೆ ಸೂರ್ಯ ಮೊದಲಾದ ಗ್ರಹಗಳ ಪ್ರಸನ್ನತ್ವ-ಅಪ್ರಸನ್ನತ್ವಗಳನ್ನು ಪ್ರತ್ಯಕ್ಷವಾಗಿ ತೋರಿಸಿರಿ !

ಯಾವನ ಕುಂಡಲಿಯಲ್ಲಿ ಸೂರ್ಯ–ಚಂದ್ರರು ಎಂಟನೆಯ ಮನೆಯಲ್ಲಿರು ತ್ತಾರೋ, ಮತ್ತು ಯಾವನ ಕುಂಡಲಿಯಲ್ಲಿ ಮೂರನೆಯದರಲ್ಲಿರುತ್ತಾರೋ, ಅವರಿಬ್ಬರನ್ನೂ ಜ್ಯೇಷ್ಠಮಾಸದಲ್ಲಿ, ಪಾದರಕ್ಷೆಗಳಿಲ್ಲದೇ, ಕಾದಿರುವ ಭೂಮಿಯ ಮೇಲೆ ನಡೆಯಿಸಿರಿ! ಯಾವನ ಮೇಲೆ [ಸೂರ್ಯ-ಚಂದ್ರರು] ಪ್ರಸನ್ನರಾಗಿದ್ದಾರೋ, ಅವನ ಪಾದಗಳೂ, ಶರೀರವೂ ಸುಟ್ಟು ಹೋಗಬಾರದು! ಮತ್ತು ಯಾವನ ಮೇಲೆ ಕ್ರುದ್ಧರಾಗಿದ್ದಾರೋ, ಅವನ ಪಾದ, ಶರೀರಗಳು ಸುಟ್ಟು ಹೋಗಬೇಕು!

ಮತ್ತು ಪುಷ್ಯಮಾಸದಲ್ಲಿ ಇಬ್ಬರನ್ನೂ ಬೆತ್ತಲೆಮಾಡಿ, ಪೂರ್ಣಿಮಾ ರಾತ್ರಿಯ ಪೂರ್ತ ಬಯಲಿನಲ್ಲಿ ಇಡಬೇಕು! ಒಬ್ಬನಿಗೆ ಶೀತವಾಗಿ, ಇನ್ನೊಬ್ಬನಿಗೆ ಆಗದಿದ್ದರೆ, ಗ್ರಹಗಳು ಕ್ರೂರದೃಷ್ಟಿಯುವು; ಮತ್ತು ಸೌಮ್ಯದೃಷ್ಟಿಯುವು ಆಗಿವೆ, ಎಂದು ತಿಳಿಯಬೇಕು!

---

*ಗ್ರಹಕೋಪನಿವಾರಕದಾನ—ಅನು.

ಗ್ರಹಗಳು ನಿಮ್ಮ ಸಂಬಂಧಿಕರೇನು ? ಮತ್ತು ನಿಮ್ಮ ಅಂಚೆ ಅಥವಾ ತಂತಿ ಅವುಗಳ ಬಳಿ ಹೋಗುತ್ತವೇನು ? ಅಥವಾ ನೀವು ಅವುಗಳ ಹತ್ತಿರ ಬಂದು-ಹೋಗಿ ಮಾಡುವುದುಂಟೋ ?

ನಿಮ್ಮಲ್ಲಿ ಮಂತ್ರಶಕ್ತಿಯಿದ್ದರೆ, ನೀವು ಸ್ವತಃ ರಾಜರು ಅಥವಾ ಧನಾಢ್ಯರು ಆಗಲೊಲ್ಲರೇಕೆ ? ಅಥವಾ ಶತ್ರುಗಳನ್ನು ನಿಮ್ಮ ವಶೀಭೂತರನ್ನಾಗಿ ಮಾಡಿ ಕೊಳ್ಳುವುದಿಲ್ಲವೇಕೆ ?

**(ಗ್ರಹದಾನೋಪಜೀವಿಗಳೇ ಗ್ರಹಗಳ ಮೂರ್ತಿಗಳಾಗಿದ್ದಾರೆ)**

ಯಾವನು ಈಶ್ವರನ ಆಜ್ಞೆಗೆ, ವೇದಗಳಿಗೆ, ವಿರುದ್ಧವಾಗಿ ಪೋಪಲೀಲೆ ಯನ್ನು ನಡೆಯಿಸುತ್ತಾನೋ, ಅವನು **'ನಾಸ್ತಿಕ'**ನಾಗಿರುತ್ತಾನೆ.

ನಿಮಗೆ ಗ್ರಹದಾನವನ್ನು ಕೊಡದೇ, ಯಾವನ ಮೇಲೆ ಗ್ರಹ ಏರಿದೆಯೋ, ಅವನೇ ಗ್ರಹದಾನವನ್ನು ಅನುಭವಿಸಿದರೆ, ಚಿಂತೆ ಏನು ? ನೀವು—

"ಹಾಗಲ್ಲ, ಕೇವಲ ನಮಗೆ ಕೊಡುವುದರಿಂದ ಮಾತ್ರ ಪ್ರಸನ್ನವಾಗುತ್ತವೆ; ಬೇರೆಯವರಿಗೆ ಕೊಡುವುದರಿಂದ ಅಲ್ಲ," ಎನ್ನುವಿರಾದರೆ, ನೀವು ಗ್ರಹಗಳ ಗುತ್ತಿಗೆ ಯನ್ನು ತೆಗೆದುಕೊಂಡಿದ್ದೀರೇನು ? ಗುತ್ತಿಗೆ ತೆಗೆದುಕೊಂಡಿರುವಿರಾದರೆ, **ಸೂರ್ಯ ಮೊದಲಾದವರನ್ನು ನಿಮ್ಮ ಮನೆಗೆ ಕರೆಯಿಸಿಕೊಂಡು, ಸುಟ್ಟುಹೋಗಿ, ಸಾಯಿರಿ!***

ಸೂರ್ಯನೇ ಮೊದಲಾದ ಲೋಕಗಳು ಜಡವಾಗಿವೆ. ಅವು ಯಾವನಿಗೂ ದುಃಖವನ್ನು ಕೊಡುವ ಕ್ರಿಯೆಯನ್ನೂ ಮಾಡಲಾರವು; ಸುಖವನ್ನೂ ಕೊಡುವ ಕ್ರಿಯೆಯನ್ನೂ ಮಾಡಲಾರವು, ಎನ್ನುವುದೇ ಸತ್ಯವಾಗಿದೆ.

**ಆದರೆ, ಗ್ರಹದಾನದಿಂದ ಜೀವನ-ನಿರ್ವಾಹ ಮಾಡುವ ನೀವು ಎಷ್ಟು ಜನರಿದ್ದೀರೋ, ಆ ನೀವೆಲ್ಲರೂ 'ಗ್ರಹಗಳ ಮೂರ್ತಿ'ಗಳಾಗಿದ್ದೀರಿ !** ಏಕೆಂದರೆ, **'ಗ್ರಹ'**, ಎಂಬ ಶಬ್ದದ ಅರ್ಥವೂ ಕೂಡ ನಿಮಗೇ ಅನ್ವಯಿಸುತ್ತದೆ!

**"ಯೇ ಗೃಹ್ಣಂತಿ ತೇ ಗ್ರಹಾಃ",**

ಯಾರು ಗ್ರಹಿಸುತ್ತಾರೋ, ಅವರ ಹೆಸರೇ **'ಗ್ರಹ'**, ಎಂದಾಗಿರುತ್ತದೆ.

ಯಾವ ಕಾಲದವರೆಗೆ ನಿಮ್ಮ ಚರಣಗಳು ರಾಜರು, ಜಮೀನುದಾರರು, ಸೇಠರು, ಸಾಹುಕಾರರು ಮತ್ತು ಬಡವರ ಬಳಿಗೆ ತಲುಪುವುದಿಲ್ಲವೋ, ಆ ವರೆಗೆ

---

*ಎಂದರೆ, ಅದರ ಪರಿಣಾಮವನ್ನಾದರೂ ಪರೀಕ್ಷಿಸಿ ನೋಡಿರಿ.—ಅನು.

ಯಾವನಿಗೂ ನವಗ್ರಹಗಳ ಸ್ಮರಣವೂ ಕೂಡಾ ಆಗುವುದಿಲ್ಲ. ಯಾವಾಗ ನೀವು ಸಾಕ್ಷಾತ್ ಸೂರ್ಯ, ಶನೈಶ್ಚರ ಮೊದಲಾದ ಮೂರ್ತಿಮಂತ [ಕ್ರೂರರೂಪ ಧರಿಸಿ], ಅವರ ಮೇಲೆ ಹೋಗಿ ಏರುತ್ತೀರೋ, ಆಗ, 'ಗ್ರಹಣ' ಮಾಡದೇ, ಅವರನ್ನು ಎಂದಿಗೂ ಬಿಡುವುದಿಲ್ಲ. ಮತ್ತು ಯಾವನಾದರೂ ನಿಮ್ಮ ತುತ್ತಿಗೆ ಸಿಕ್ಕದೇ ಇದ್ದರೆ, **ನಾಸ್ತಿಕ** ಮೊದಲಾದ ಶಬ್ದಗಳಿಂದ, ಅವನ ನಿಂದೆಯನ್ನು ಮಾಡುತ್ತಾ ತಿರುಗುತ್ತೀರಿ!

## (ಸೂರ್ಯ ಮತ್ತು ಚಂದ್ರ ಗ್ರಹಣಗಳ ಮೇಲೆ ವಿಚಾರ)

**ಪೋಪಮಹಾಶಯರು:**—ನೋಡಿರಿ, ಜ್ಯೋತಿಷದ ಪ್ರತ್ಯಕ್ಷ ಫಲವನ್ನು! ಆಕಾಶದಲ್ಲಿರುವ ಸೂರ್ಯ-ಚಂದ್ರ, ಹಾಗೂ ರಾಹು-ಕೇತುಗಳ ಸಂಯೋಗರೂಪವಾದ ಗ್ರಹಣವನ್ನು ನಾವು ಮೊದಲೇ ಹೇಳಿಬಿಡುತ್ತೇವೆ. ಹೇಗೆ ಇದು ಪ್ರತ್ಯಕ್ಷವಾಗುತ್ತದೋ, ಹಾಗೆ ಗ್ರಹಗಳ ಫಲವೂ ಕೂಡ ಪ್ರತ್ಯಕ್ಷವಾಗಿ ಹೋಗುತ್ತದೆ!

ನೋಡಿರಿ! ಧನಾಢ್ಯರು, ದರಿದ್ರರು, ರಾಜರು, ನಿರ್ಗತಿಕರು, ಸುಖಿಗಳು, ದುಃಖಿಗಳು–ಎಲ್ಲರೂ ಗ್ರಹಗಳ ಕಾರಣದಿಂದಲೇ ಆಗುತ್ತಾರೆ!

**ಸತ್ಯವಾದೀ:**—ಗ್ರಹಣ, ಎಂಬ ಯಾವ ಈ ಪ್ರತ್ಯಕ್ಷ ಫಲವಿದೆಯೋ, ಅದು ಫಲಿತದ್ದಲ್ಲ; ಗಣಿತವಿದ್ಯೆಯದು!

**ಯಾವುದು ಗಣಿತವಿದ್ಯೆಯಾಗಿದೆಯೋ. ಅದು ಸತ್ಯ; ಮತ್ತು ಫಲಿತವಿದ್ಯೆಯು ಸ್ವಾಭಾವಿಕ** ಸಂಬಂಧಜನ್ಯವನ್ನು **ಬಿಟ್ಟು ಅಸತ್ಯವಾಗಿದೆ!**

ಅನುಲೋಮ–ಪ್ರತಿಲೋಮ ಕ್ರಮದಲ್ಲಿ ತಿರುಗುವ ಪೃಥಿವೀ, ಮತ್ತು ಚಂದ್ರನ ಗಣಿತದಿಂದ, ಯಾವ ಕಾಲದಲ್ಲಿ, ಯಾವ ದೇಶದಲ್ಲಿ, ಯಾವ ಅವಯವದಲ್ಲಿ, ಸೂರ್ಯನ ಅಥವಾ ಚಂದ್ರನ ಗ್ರಹಣವಾಗುವುದೆಂದು ಸ್ಪಷ್ಟವಾಗಿ ವಿದಿತವಾಗುತ್ತದೆ. ಉದಾಹರಣೆಗೆ:—

**ಛಾದಯತ್ಯರ್ಕಮಿಂದುರ್ವಿಧುಂ ಭೂಮಿಭಾಃ ॥**

ಇದು ಸಿದ್ಧಾಂತ ಶಿರೋಮಣಿಯ ವಚನವಾಗಿದೆ*.

ಮತ್ತು ಇದೇ ರೀತಿ, **ಸೂರ್ಯಸಿದ್ಧಾಂತ** ಮೊದಲಾದುವುಗಳಲ್ಲಿಯೂ ಇದೆ.

---

*ಗ್ರಹಲಾಘವ, **ಚಂದ್ರಗ್ರಹಣಾಧಿಕಾರ 5.4—ಅನು.**

ಎಂದರೆ, ಯಾವಾಗ ಸೂರ್ಯ [ಮತ್ತು] ಭೂಮಿಗಳ ನಡುವೆ ಚಂದ್ರನು ಬರುತ್ತಾನೋ, ಆಗ **ಸೂರ್ಯಗ್ರಹಣ**; ಮತ್ತು ಯಾವಾಗ ಸೂರ್ಯ [ಮತ್ತು] ಚಂದ್ರರ ನಡುವೆ ಭೂಮಿ ಬರುತ್ತದೋ, ಆಗ **ಚಂದ್ರಗ್ರಹಣವಾಗುತ್ತದೆ**. ಎಂದರೆ, ಚಂದ್ರನ ಛಾಯೆ ಭೂಮಿಯ ಮೇಲೆ,ಮತ್ತು ಭೂಮಿಯ ಛಾಯೆ ಚಂದ್ರನ ಮೇಲೆ ಬೀಳುತ್ತದೆ.

ಸೂರ್ಯನು ಪ್ರಕಾಶರೂಪವಾಗಿರುವುದರಿಂದ, ಅವನ ಸಮ್ಮುಖ ಯಾವುದರ ಛಾಯೆಯೂ ಬೀಳುವುದಿಲ್ಲ. ಆದರೆ, ಹೇಗೆ ಪ್ರಕಾಶಮಾನ ಸೂರ್ಯನ, ಅಥವಾ ದೀಪದ ಕಾರಣದಿಂದ, ದೇಹ ಮೊದಲಾದುದರ ಛಾಯೆ ವಿರುದ್ಧ ದಿಕ್ಕಿನಲ್ಲಿ ಬೀಳುವುದೋ, ಹಾಗೆಯೇ ಗ್ರಹಣದಲ್ಲಿಯೂ [ಆಗುವುದೆಂದು] ತಿಳಿಯಿರಿ!

**(ಗ್ರಹಗಳ ದೆಸೆಯಿಂದ ಯಾರೂ ಧನಿಕ ಅಥವಾ ದರಿದ್ರರಾಗುವುದಿಲ್ಲ)**

**ಯಾರು ಧನಾಢ್ಯರೂ, ದರಿದ್ರರೂ, ಪ್ರಜೆಗಳೂ, ರಾಜರೂ, ನಿರ್ಗತಿಕರೂ ಆಗುತ್ತಾರೋ, ಅವರು ತಮ್ಮ ಕರ್ಮಗಳಿಂದ ಆಗುತ್ತಾರೆ: ಗ್ರಹಗಳಿಂದಲ್ಲ!**

ಅನೇಕ ಮಂದಿ ಜ್ಯೋತಿಷಿಗಳು ತಮ್ಮ ಪುತ್ರ-ಪುತ್ರಿಯರ ವಿವಾಹವನ್ನು ಗಣಿತವಿದ್ಯೆಗನುಸಾರವಾಗಿ ಮಾಡುತ್ತಾರೆ. ಆದರೂ, ಅವರಲ್ಲಿ ವಿರೋಧ [ಉಂಟಾಗುತ್ತದೆ]. [ಹಲವರು] ವಿಧವೆಯರು ಅಥವಾ ವಿಧುರರು ಆಗಿಹೋಗುತ್ತಾರೆ.

ಅಥವಾ ಫಲ ಸತ್ಯವಾಗುವುದಾದರೆ, ಹೀಗೇತಕ್ಕೆ ಆಗುತ್ತದೆ ?

**ಆದುದರಿಂದ, ಕರ್ಮಗತಿಯು ಸತ್ಯ! ಮತ್ತು ಗ್ರಹಗಳ ಗತಿಯು ಸುಖ-ದುಃಖ ಭೋಗದಲ್ಲಿ ಕಾರಣವಲ್ಲ.***

ಅಲ್ಲಾ ! ಗ್ರಹಗಳು ಆಕಾಶದಲ್ಲಿವೆ. ಮತ್ತು ಪೃಥಿವಿಯೂ ಕೂಡ ಆಕಾಶದಲ್ಲಿ ಬಹಳ ದೂರದಲ್ಲಿದೆ. ಕರ್ತೃ ಮತ್ತು ಕರ್ಮಗಳೊಂದಿಗೆ ಇವುಗಳ ಸಾಕ್ಷಾತ್ ಸಂಬಂಧವಿಲ್ಲ. ಕರ್ಮದ ಕರ್ತೃವೂ ಮತ್ತು ಕರ್ಮಫಲದ ಭೋಕ್ತೃವೂ ಜೀವಾತ್ಮನಾಗಿದ್ದಾನೆ ; ಮತ್ತು ಕರ್ಮಗಳ ಫಲವನ್ನು ಉಣಿಸುವವನು ಪರಮಾತ್ಮನಾಗಿದ್ದಾನೆ.

ನೀವು ಗ್ರಹಗಳ ಫಲವನ್ನು ಒಪ್ಪುವಿರಾದರೆ—ಯಾವುದನ್ನು ನೀವು **ಧ್ರುವಾ ತ್ರುಟಿ**, ಎಂದು ಅಂಗೀಕರಿಸಿ, ಜನ್ಮಪತ್ರವನ್ನು ಬರೆಯುತ್ತೀರೋ, ಆ ಕ್ಷಣದಲ್ಲಿ ಒಬ್ಬ ಮಾನವನ ಜನನವಾಗುತ್ತದೆ. ಅದೇ ಸಮಯದಲ್ಲಿ ಭೂಮಂಡಲದಲ್ಲಿ ಮತ್ತೊಬ್ಬನ ಜನನವಾಗುತ್ತದೋ ಅಥವಾ ಇಲ್ಲವೋ, ಎಂಬುದಕ್ಕೆ ಉತ್ತರವನ್ನು ಕೊಡಿರಿ.

---

*ಇವುಗಳ ಚಲನೆಯಿಂದ ಆಗುವ ಪರಿಣಾಮ ಸರ್ವಸಾಮಾನ್ಯ—ಅನು.

'ಇಲ್ಲ', ಎನ್ನುವಿರಾದರೆ. [ಅದು] ಸುಳ್ಳು ! ಮತ್ತು 'ಆಗುತ್ತದೆ', ಎನ್ನುವಿರಾದರೆ, ಒಬ್ಬನು ಭೂಮಂಡಲದಲ್ಲಿ ಚಕ್ರವರ್ತಿಯಂತೆ ಆಗುವ ಹಾಗೆ, ಇನ್ನೊಬ್ಬನು ಚಕ್ರವರ್ತೀ ರಾಜನಾಗುವುದಿಲ್ಲವೇಕೆ ?

ಅಹುದು ! "ಈ ಲೀಲೆ ನಮ್ಮ ಹೊಟ್ಟೆಪಾಡಿನದು", ಎಂದಿಷ್ಟು ಮಾತು ನೀವು ಹೇಳಬಹುದಾದರೆ, ಯಾವನಾದರೂ ಅದನ್ನು ಒಪ್ಪಿಕೊಳ್ಳಲೂ ಬಹುದು!

## (ಗರುಡಪುರಾಣದ ಆಲೋಚನೆ)

**ಪ್ರಶ್ನೆ :—ಗರುಡಪುರಾಣವೂ** ಕೂಡ ಸುಳ್ಳೇನು ?

**ಉತ್ತರ :—ಅಹುದು. ಸುಳ್ಳಾಗಿದೆ!**

**ಪ್ರಶ್ನೆ :—**ಹಾಗಾದರೆ, ಮೃತನಾದ ಜೀವನ ಗತಿ ಏನಾಗುತ್ತದೆ ?

**ಉತ್ತರ :—**ಅವನ ಕರ್ಮಗಳು ಹೇಗಿವೆಯೋ, ಹಾಗೆ !

## (ಪರ್ವತಾಕಾರ ಯಮಗಣ, ಶ್ರಾದ್ಧ–ತರ್ಪಣ, ಗೋದಾನಾದಿಗಳ ಕಲ್ಪನೆ)

**ಪ್ರಶ್ನೆ :—ಯಮರಾಜನು ಶಾಸಕ ; ಚಿತ್ರ-ಗುಪ್ತರು ಮಂತ್ರಿಗಳು !** ಅವನ ಬಹು ದೊಡ್ಡ ಕಾಡಿಗೆಯ ಪರ್ವತಕ್ಕೆ ಸಮನಾದ ಶರೀರಗಳನ್ನುಳ್ಳ, ಭಯಂಕರ ಭಟರು ಜೀವನನ್ನು ಹಿಡಿದುಕೊಂಡು ಹೋಗುತ್ತಾರೆ! ಪಾಪ-ಪುಣ್ಯಾನುಸಾರವಾಗಿ, ನರಕ–ಸ್ವರ್ಗಗಳಲ್ಲಿ ಹಾಕುತ್ತಾರೆ! ಅವನಿಗಾಗಿ ದಾನ, ಪುಣ್ಯ, ಶ್ರಾದ್ಧ, ತರ್ಪಣ, ಗೋದಾನ ಮೊದಲಾದುವನ್ನು **ವೈತರಿಣೀ** ನದಿಯನ್ನು ದಾಟುವ ಸಲುವಾಗಿ ಮಾಡುತ್ತಾರೆ!

ಈ ಎಲ್ಲ ಮಾತುಗಳೂ ಹೇಗೆ ತಾನೇ ಸುಳ್ಳಾಗಬಲ್ಲವು ?

**ಉತ್ತರ :—ಈ ಎಲ್ಲ ಮಾತುಗಳೂ ಪೋಪಲೀಲೆಯ ಬುರುಡೆಗಳಾಗಿವೆ !**

ಬೇರೆಡೆಯ ಜೀವರು ಅಲ್ಲಿ ಹೋಗುವವರಾದರೆ, ಧರ್ಮರಾಜ, ಚಿತ್ರಗುಪ್ತ ಮೊದಲಾದವರು ಅವರ ನ್ಯಾಯವನ್ನು ಮಾಡುವವರಾದರೆ ; ಯಮಲೋಕದ ಆ ಜೀವರು ಪಾಪ ಮಾಡಿದಲ್ಲಿ, ನ್ಯಾಯಾಧೀಶರು ಅವರ ನ್ಯಾಯವನ್ನು ಮಾಡುವ ಸಲುವಾಗಿ, ಎರಡನೆಯ ಯಮಲೋಕವನ್ನೂ ಒಪ್ಪಿಕೊಳ್ಳಬೇಕಾದೀತು !

ಮತ್ತು ಯಮದೂತರ ಶರೀರಗಳು ಪರ್ವತಗಳಿಗೆ ಸಮಾನವಾಗಿದ್ದರೆ, ಕಾಣಿಸುವುದಿಲ್ಲವೇಕೆ ? ಮತ್ತು ಸಾಯುವ ಜೀವನನ್ನು ಹಿಡಿದುಕೊಳ್ಳುವಾಗ, ಚಿಕ್ಕ ಬಾಗಿಲಿನಲ್ಲಿ ಅವರ ಒಂದು ಬೆರಳೂ ಕೂಡ ತೂರಲಾರದು. ಮತ್ತು ದಾರಿ-ಸಂದಿಗಳಲ್ಲಿ ತಡೆದು ಹೋಗುವುದಿಲ್ಲವೇಕೆ ?

'ಅವರು ಸೂಕ್ಷ್ಮ ದೇಹವನ್ನೂ ಕೂಡ ಧರಿಸಿಕೊಳ್ಳುತ್ತಾರೆ', ಎನ್ನುವಿರಾದರೆ, ಮೊದಲು ಪರ್ವತದಂತಹ ಶರೀರದ ದೊಡ್ಡ-ದೊಡ್ಡ ಮೂಳೆಗಳನ್ನು ಪೋಪ ಮಹಾಶಯರು ತಮ್ಮ ಮನೆಯಲ್ಲಲ್ಲದೇ, ಬೇರೆಲ್ಲಿಡುವರು ?

ಯಾವಾಗ ಕಾಡಿನಲ್ಲಿ ಕಿಚ್ಚು ಹೊತ್ತಿಕೊಳ್ಳುತ್ತದೋ, ಆಗ ಒಂದೇ ಸಲಕ್ಕೆ ಇರುವೆಗಳೇ ಮೊದಲಾದ ಜೀವರ ಶರೀರಗಳು ಕಳಚಿಹೋಗುತ್ತವೆ. ಅವರುಗಳನ್ನು ಹಿಡಿಯಲು ಯಮನ ಅಸಂಖ್ಯ ದೂತರು ಬರುವರಾದರೆ, ಅಲ್ಲಿ ಕತ್ತಲೆ ಹರಡಿಕೊಳ್ಳಬೇಕು !

ಮತ್ತು ಯಾವಾಗ ಪರಸ್ಪರ ಜೀವರುಗಳನ್ನು ಹಿಡಿಯಲು ಓಡುವರೋ, ಆಗ ಯಾವಾಗಲಾದರೂ ಅವರ ಶರೀರಗಳು ಮುಗ್ಗರಿಸಿದರೆ, ಡಿಕ್ಕಿ ಹೊಡೆದರೆ, ಹೇಗೆ ಪರ್ವತದ ದೊಡ್ಡ ದೊಡ್ಡ ಶಿಖರಗಳು ಮುರಿದು, ಭೂಮಿಯ ಮೇಲೆ ಬೀಳುತ್ತವೋ, ಹಾಗೆ, ಅವರ ದೊಡ್ಡ ದೊಡ್ಡ ಅವಯವಗಳು ಗರುಡಪುರಾಣವನ್ನು ಓದುವವರ-ಕೇಳುವವರ ಅಂಗಳದಲ್ಲಿ ಬಿದ್ದುಬಿಟ್ಟರೆ?

ಆಗ ಅವರು ಜಜ್ಜಿಹೋಗಿ, ಸಾಯುವರು!

ಅಥವಾ ಮನೆಯ ಬಾಗಿಲು, ಇಲ್ಲವೇ ದಾರಿ ಮುಚ್ಚಿ ಹೋಗುವುದು. ಆಗ ಅವರು ಹೇಗೆ ಹೊರ ಹೊರಡಬಲ್ಲರು ? ಮತ್ತು ಹೇಗೆ ನಡೆಯಬಲ್ಲರು ?

ಶ್ರಾದ್ಧ, ತರ್ಪಣ, ಪಿಂಡಪ್ರದಾನ, ಆ ಮೃತರಾದ ಜೀವರಿಗೇನೋ ತಲುಪುವುದಿಲ್ಲ ; ಆದರೆ, ಮೃತರ ಪ್ರತಿನಿಧಿಯಾದ ಪೋಪಮಹಾಶಯರ ಮನೆಗೆ, ಉದರಕ್ಕೆ, ಮತ್ತು ಕೈಗೆ ಸೇರುತ್ತದೆ!

ವೈತರಿಣಿಯನ್ನು ದಾಟುವುದಕ್ಕಾಗಿ ಯಾವ ಗೋದಾನವನ್ನು ತೆಗೆದುಕೊಳ್ಳುತ್ತಾರೋ, ಅದಂತೂ ಪೋಪಮಹಾಶಯರ ಮನೆಯಲ್ಲಿ, ಅಥವಾ ಕಟುಕರೇ ಮೊದಲಾದವರ ಮನೆಯಲ್ಲಿ ಹೋಗಿ ಮುಟ್ಟುತ್ತದೆ. ವೈತರಿಣಿಗೆ ಹಸುವು ಹೋಗುವುದಿಲ್ಲ! ಮತ್ತೆ, ಯಾವುದರ ಬಾಲವನ್ನು ಹಿಡಿದು, [ಮೃತನ ಆತ್ಮನು] ವೈತರಿಣಿಯನ್ನು ದಾಟುವನು ?

ಮತ್ತು ಕೈ ಕೂಡ ಇಲ್ಲಿಯೇ ಸುಡಲ್ಪಟ್ಟಿತು ; ಅಥವಾ ಹೂಳಲ್ಪಟ್ಟಿತು. ಮತ್ತೆ, ಬಾಲವನ್ನು ಹೇಗೆ ಹಿಡಿದುಕೊಳ್ಳುವನು?

### (ಒಬ್ಬ ಜಾಟನ ರೋಚಕ ದೃಷ್ಟಾಂತ)

ಈ ಸ್ಥಳದಲ್ಲಿ, ಈ ವಿಷಯಕ್ಕೆ ಒಂದು ದೃಷ್ಟಾಂತ ಉಪಯುಕ್ತವಾಗಿರುತ್ತದೆ. ಅದು ಹೀಗಿದೆ :—

ಒಬ್ಬ ಜಾಟನು* ಇದ್ದನು. ಅವನ ಮನೆಯಲ್ಲಿ ಬಹಳ ಒಳ್ಳೆಯ, ಮತ್ತು 20 ಸೇರು ಹಾಲನ್ನು ಕೊಡುವ ಒಂದು ಹಸುವಿದ್ದಿತು. ಅದರ ಹಾಲು ಬಹಳ ರುಚಿಕರವಾಗಿತ್ತು. ಆಗಾಗ, ಪೋಪರ ಬಾಯಿಗೂ ಅಷ್ಟಿಷ್ಟು ಬೀಳುತ್ತಿತ್ತು.

ಅವನ ಪುರೋಹಿತನು, 'ಯಾವಾಗ ಜಾಟನ ಮುದುಕನಾದ ತಂದೆಯು ಮೃತನಾಗತೊಡಗುವನೋ, ಆಗ ಅವನಿಂದ ಇದೇ ಹಸುವಿನ [ದಾನದ] ಸಂಕಲ್ಪ ಮಾಡಿಸಿಕೊಳ್ಳುವೆನು.', ಎಂದೇ ಆಲೋಚಿಸುತ್ತಾ ಇದ್ದನು.

ಹಲ ದಿನಗಳ ನಂತರ, ದೈವಯೋಗದಿಂದ, ಅವನ ತಂದೆಯ ಮರಣ ಸಮಯ ಬಂದು, ನಾಲಗೆ ಸೆಳೆತುಕೊಂಡಿತು. ಮತ್ತು ಮಂಚದಿಂದ ನೆಲದ ಮೇಲಕ್ಕೆ ಇಳಿಸಿಕೊಂಡರು. ಎಂದರೆ, ಪ್ರಾಣ ಬಿಡುವ ಸಮಯ ಸನ್ನಿಹಿತವಾಯಿತು. ಆಗ ಜಾಟನ ಇಷ್ಟ ಮಿತ್ರರೂ ಮತ್ತು ನಂಟರೂ ಕೂಡ ಬಂದು ಸೇರಿದ್ದರು.

ಆಗ ಪೋಪಜೀ—"ಯಜಮಾನನೇ! ಈಗ ನೀನು ಇವನ ಕೈಯಿಂದ ಗೋದಾನ ಮಾಡಿಸು.", ಎಂದನು.

ಜಾಟನು ಹತ್ತು ರೂಪಾಯಿಗಳನ್ನು ತೆಗೆದು, ತಂದೆಯ ಕೈಯಲ್ಲಿತ್ತು— "ಸಂಕಲ್ಪವನ್ನು ಹೇಳು.", ಎಂದನು.

ಪೋಪಜೀ—

"ಭಲೇ! ಭಲೇ ! ತಂದೆ ಮತ್ತೆ-ಮತ್ತೆ ಸಾಯುತ್ತಾನೇನು ? ಈಗಲಾದರೂ, ಯಾವುದು ಹಾಲನ್ನು ಕೊಡುತ್ತದೋ, ಯಾವುದು ಮುದಿಯಲ್ಲವೋ, ಯಾವುದು ಎಲ್ಲ ರೀತಿಯಲ್ಲಿಯೂ ಉತ್ತಮವಾಗಿರುತ್ತದೋ, ಅಂತಹ ಸಾಕ್ಷಾತ್ ಆಕಳನ್ನು ತೆಗೆದುಕೊಂಡು ಬಾ. ಇಂತಹ ಗೋವಿನ ದಾನವನ್ನೇ ಮಾಡಬೇಕು", ಎಂದನು.

---

*ಒಕ್ಕಲಿಗ ಅಥವಾ ಬಂಟ—ಅನು.

ಹರಯಾಣಾದ ರೈತರು, ಸೈನಿಕರು 'ಜಾಟ' ಎಂಬ ದೇಹದಾರ್ಢ್ಯವುಳ್ಳ ಜನಾಂಗಕ್ಕೆ ಸೇರಿದ್ದಾರೆ. ಇವರು ಶಾಕಾಹಾರಿಗಳು. ಈ ದೃಷ್ಟಾಂತ ಅವರಿಗೆ ಸಂಬಂಧಿಸಿದ್ದು.—ಸಂ.

**ಜಾಟಜೀ** :—ನಮ್ಮ ಬಳಿಯಂತೂ ಒಂದೇ ಹಸುವಿದೆ. ಅದರ ಹೊರತು, ನಮ್ಮ ಮಕ್ಕಳು-ಮರಿಗಳ ನಿರ್ವಾಹವಾಗಲಾರದು. ಆದುದರಿಂದ, ಅದನ್ನು ಕೊಡುವುದಿಲ್ಲ. ತೆಗೆದುಕೊಳ್ಳಿ! 20 ರೂಪಾಯಿಗಳ ಸಂಕಲ್ಪ ಮಾಡಿಸಿಬಿಡಿರಿ. ಮತ್ತು ಈ ರೂಪಾಯಿಗಳಿಂದ ಬೇರೆಯ ಹಾಲನ್ನು ಕರೆಯುವ ಹಸುವನ್ನು ತೆಗೆದುಕೊಳ್ಳಿರಿ.

**ಪೋಪಜೀ** :—ಓಹೋ! ಏನು ಹೇಳೋಣ! ನೀನು ಹಸುವನ್ನು ನಿನ್ನ ತಂದೆಗಿಂತ ಹೆಚ್ಚೆಂದು ತಿಳಿಯುತ್ತೀಯೋ? ನಿನ್ನ ತಂದೆಯನ್ನು ವೈತರಣೀ ನದಿಯಲ್ಲಿ ಮುಳುಗಿಸಿ, ದುಃಖವನ್ನು ಕೊಡಬಯುಸುತ್ತೀಯೇನು? ನೀನು ಒಳ್ಳೆಯ ಸುಪುತ್ರನಾದೆ!

ಆಗ, ಪರಿವಾರದವರೆಲ್ಲಾ ಪೋಪಜೀ ಕಡೆಗೇ ಹೊರಳಿದರು. ಏಕೆಂದರೆ, ಎಲ್ಲರನ್ನೂ ಪೋಪಜೀ ಮೊದಲೇ ಪುಸಲಾಯಿಸಿಬಿಟ್ಟಿದ್ದನು. ಮತ್ತು ಆಗಲೂ ಸಂಕೇತ ಮಾಡಿದನು ಎಲ್ಲರೂ ಸೇರಿ ಹಠದಿಂದ,ಅದೇ ಹಸುವಿನ ದಾನವನ್ನು ಅದೇ ಪೋಪಜೀಗೆ ಕೊಡಿಸಿಬಿಟ್ಟರು. ಆಗ ಜಾಟನು ಏನನ್ನೂ ಹೇಳಲಿಲ್ಲ.

ಅವನ ತಂದೆಯು ಮೃತನಾದನು. ಮತ್ತು ಪೋಪಜೀ ಕರುವಿನೊಂದಿಗೆ ಹಸುವನ್ನು, ಹಾಲನ್ನು ಕರೆಯುವ ಪಾತ್ರೆ ಸಮೇತ ತನ್ನ ಮನೆಗೆ ಒಯ್ದನು. ತನ್ನ ಮನೆಯಲ್ಲಿ ಹಸುವನ್ನು ಕಟ್ಟಿ, ಪಾತ್ರೆಯನ್ನೂ ಇಟ್ಟು, ಮರಳಿ ಜಾಟನ ಮನೆಗೆ ಬಂದನು. ಮೃತನ ಶವದೊಂದಿಗೆ ಸ್ಮಶಾನಭೂಮಿಗೆ ಹೋಗಿ, ದಾಹಕರ್ಮವನ್ನು ಮಾಡಿಸಿದನು. ಅಲ್ಲಿಯೂ ಅಲ್ಪ-ಸ್ವಲ್ಪ ಪೋಪಲೀಲೆಯನ್ನು ನಡೆಯಿಸಿದನು.

ಆಮೇಲೆ, ದಶಗಾತ್ರ-ಸಪಿಂಡೀಕರಣ* ಮೊದಲಾದುದರಲ್ಲಿಯೂ ಅವನಿಗೆ ತಲೆ ಬೋಳಿಸಿದನು. **ಮಹಾಬ್ರಾಹ್ಮಣ**†ರೂ ಕೂಡಾ ಸುಲಿಗೆ ಮಾಡಿದರು. ಮತ್ತು **ತಿಂಡಿಪೋತರಾದ ಹೊಟ್ಟೆಬಾಕರೂ ಕೂಡಾ ಚೆನ್ನಾಗಿ ಹೊಟ್ಟೆ ತುಂಬಿಸಿಕೊಂಡರು.**

ಎಂದರೆ, ಸಮಸ್ತ ಕ್ರಿಯೆಗಳೂ ಪೂರ್ಣವಾದ ಮೇಲೆ, ಜಾಟನು ಅವರಿವರ ಮನೆಯಿಂದ ಹಾಲನ್ನು ಬೇಡಿ ತಂದು, ಹೇಗೋ ನಿರ್ವಾಹ ಮಾಡಿದನು.

ಹದಿನಾಲ್ಕನೆಯ ದಿನ ಪ್ರಾತಃಕಾಲ ಪೋಪಜೀಯ ಮನೆಗೆ ಹೋದನು. ನೋಡಿದರೆ, ಹಸುವಿನಿಂದ ಹಾಲನ್ನು ಕರೆದು, ಪಾತ್ರೆ ತುಂಬಿಸಿ, ಪೋಪಜೀ ಮೇಲೇಳುವ ಸನ್ನಾಹದಲ್ಲಿದ್ದನು! ಇಷ್ಟರಲ್ಲಿಯೇ ಜಾಟಜೀ ತಲುಪಿದರು!

---

*ಭಸ್ಮೀಭೂತ ದೇಹಕ್ಕೆ ಪ್ರತಿಯಾಗಿ, ಬೇರಾವುದೋ ಬಗೆಯ ದೇಹವನ್ನು ಒದಗಿಸುವುದೆಂದು, ನಂಬಿ, ಮಾಡಲ್ಪಡುವ ಕ್ರಿಯೆಗಳು—ಅನು.

†ಕೇವಲ ಪ್ರೇತಕರ್ಮವೃತ್ತಿಯವರು—ಅನು.

ಅವನನ್ನು ಕಂಡು, ಪೋಪಜೀ—"ದಯಮಾಡಿಸಿರಿ, ಯಜಮಾನರೇ ! ಕುಳಿತು ಕೊಳ್ಳಿರಿ.", ಎಂದು ಹೇಳಿದನು.

**ಜಾಟಜೀ :**—ಪುರೋಹಿತಜೀ ! ನೀವು ಕೂಡಾ ಇತ್ತ ಬನ್ನಿರಿ !

**ಪೋಪಜೀ:**—ಒಳ್ಳೆಯದು ! ಹಾಲನ್ನಿಟ್ಟು ಬರುವೆನು.

**ಜಾಟಜೀ :**—ಇಲ್ಲ, ಇಲ್ಲ! ಹಾಲಿನ ಪಾತ್ರೆಯನ್ನೂ ಇತ್ತ ತೆಗೆದುಕೊಂಡು ಬನ್ನಿರಿ.

ಬಡಪಾಯಿ ಪೋಪಜೀ ಹೋಗಿ ಕುಳಿತರು. ಮತ್ತು ಪಾತ್ರೆಯನ್ನು ಮುಂದೆ ಇಟ್ಟು ಬಿಟ್ಟರು.

**ಜಾಟಜೀ :**—ನೀವು ದೊಡ್ಡ ಸುಳ್ಳುಗಾರರಾಗಿದ್ದೀರಿ !

**ಪೋಪಜೀ :**—ನಾನೇನು ಸುಳ್ಳು ಹೇಳಿದೆ ?

**ಜಾಟಜೀ :**—ಹೇಳಿರಿ! ನೀವು ಹಸುವನ್ನು ಯಾವುದಕ್ಕಾಗಿ ತೆಗೆದುಕೊಂಡಿದ್ದಿರಿ?

**ಪೋಪಜೀ:**—ನಿಮ್ಮ ತಂದೆಯು ವೈತರಣೀ ನದಿಯನ್ನು ದಾಟುವುದಕ್ಕಾಗಿ.

**ಜಾಟಜೀ :**—ಸರಿ ! ಹಾಗಾದರೆ ನೀವು ಅಲ್ಲಿ ವೈತರಣೀ ನದಿಯ ತೀರಕ್ಕೆ ಹಸುವನ್ನು ಏಕೆ ತಲುಪಿಸಲಿಲ್ಲ ? ನಾವೇನೋ ನಿಮ್ಮ ಭರವಸೆಯ ಮೇಲೆ ಇದ್ದೆವು. ಆದರೆ, ನೀವು ನಿಮ್ಮ ಮನೆಯಲ್ಲಿ ಕಟ್ಟಿಕೊಂಡು ಕುಳಿತಿರಿ ! ನನ್ನ ತಂದೆಯು ವೈತರಣಿಯಲ್ಲಿ ಎಷ್ಟು ಸಾರಿ ಮುಳುಗಿರಬಹುದೋ, ಏನೋ, ತಿಳಿಯದು !

**ಪೋಪಜೀ:**—ಇಲ್ಲ, ಇಲ್ಲ ! ಅಲ್ಲಿ ಈ ದಾನದ ಪುಣ್ಯದ ಪ್ರಭಾವದಿಂದ, ಬೇರೆ ಒಂದು ಹಸುವು, ನಿರ್ಮಿತವಾಗಿ ಅವನನ್ನು ಕಡೆಹಾಯಿಸಿರಬೇಕು.

**ಜಾಟಜೀ :**—ವೈತರಣೀ ನದಿ ಇಲ್ಲಿಂದ ಎಷ್ಟು ದೂರವಿದೆ ? ಮತ್ತು ಯಾವ ಕಡೆಗೆ ಇದೆ ?

**ಪೋಪಜೀ :**—ಅಂದಾಜಿನಿಂದ ಮೂವತ್ತು ಕೋಟಿ ಕ್ರೋಶ* ದೂರವಿದೆ. ಏಕೆಂದರೆ, ಸಲವತ್ತೊಂಬತ್ತು ಕೋಟಿ ಯೋಜನ† ಪೃಥಿವಿಯಿದೆ. ಮತ್ತು ದಕ್ಷಿಣ-ನೈಋತ್ಯ ದಿಕ್ಕಿನಲ್ಲಿ ವೈತರಣೀ ನದಿಯಿದೆ.

---

*ಎಂದರೆ, ಅರವತ್ತು ಕೋಟಿ ಮೈಲಿ.—ಅನು.

†ಎಂದರೆ, ಸುಮಾರು 150 ಕೋಟಿ ಮೈಲಿ.—ಸಂ.

**ಜಾಟಜೀ:**—ಇಷ್ಟು ದೂರದಿಂದ ನಿಮ್ಮ ಪತ್ರವಾಗಲೀ, ತಂತಿಯು ಸಮಾಚಾರ ವಾಗಲೀ ಹೋಗಿದ್ದು—'ಇಲ್ಲಿ ಪುಣ್ಯದ ಹಸು ಉದ್ಭವಿಸಿತು; ಇಂತಹವನ ತಂದೆ ಯನ್ನು ಪಾರುಗಾಣಿಸಿತು', ಎಂದು ಅದಕ್ಕೆ ಉತ್ತರ ಬಂದಿದ್ದರೆ, ತೋರಿಸಿರಿ.

**ಪೋಪಜೀ:**—ನಮ್ಮ ಬಳಿ **ಗರುಡಪುರಾಣದ** ಬರೆಹದ ಹೊರತು, ಅಂಚೆಯು ಅಥವಾ ತಂತಿಯ ಬೇರೆ ಯಾವ ವ್ಯವಸ್ಥೆಯೂ ಇಲ್ಲ.

**ಜಾಟಜೀ:**—ಈ **ಗರುಡಪುರಾಣವನ್ನು** ನಾವು ಸತ್ಯವೆಂದು ಹೇಗೆ ಒಪ್ಪಿ ಕೊಳ್ಳೋಣ?

**ಪೋಪಜೀ:**—ಎಲ್ಲರೂ ಒಪ್ಪಿಕೊಳ್ಳುವಂತೆ!

**ಜಾಟಜೀ:**—ಈ ಪುಸ್ತಕವನ್ನು ನಿಮ್ಮ ಪೂರ್ವಜರು ನಿಮ್ಮ ಹೊಟ್ಟೆಪಾಡಿಗಾಗಿ ರಚಿಸಿದ್ದಾರೆ. ಏಕೆಂದರೆ, ತಂದೆಗೆ ತನ್ನ ಪುತ್ರರಿಗಿಂತ ಹೆಚ್ಚಾಗಿ ಯಾರೂ ಪ್ರಿಯರಲ್ಲ. ಯಾವಾಗ ನನ್ನ ತಂದೆ ನನ್ನ ಬಳಿಗೆ ಕಾಗದ-ಪತ್ರವನ್ನು ಅಥವಾ ತಂತಿಯನ್ನು ಕಳುಹಿಸುವನೋ, ಆಗಲೇ ನಾನು ವೈತರಣೀ ನದಿಯ ತಟಕ್ಕೆ ಹಸುವನ್ನು ತಲು ಪಿಸುವೆನು. ಮತ್ತು ಅವರನ್ನು ಕಡೆಹಾಯಿಸಿ, ಹಸುವನ್ನು ಪುನಃ ಮನೆಗೆ ಕರೆತಂದು, ಹಾಲನ್ನು ನಾನು ಮತ್ತು ನನ್ನ ಮಕ್ಕಳು-ಮರಿಗಳು ಕುಡಿಯುತ್ತಾ ಹೋಗುವೆವು. **ತನ್ನಿರಿ!**

ಎಂದು ಹಾಲಿನಿಂದ ತುಂಬಿದ ಪಾತ್ರೆಯನ್ನೂ, ಹಸುವನ್ನೂ, ಕರುವನ್ನೂ ಕರೆದುಕೊಂಡು, ಜಾಟಜೀ ತನ್ನ ಮನೆಗೆ ಹೊರಟನು.

**ಪೋಪಜೀ:**—ನೀನು ದಾನಕೊಟ್ಟು, ಹಿಂದಕ್ಕೆ ತೆಗೆದುಕೊಳ್ಳುತ್ತಿದ್ದೀಯೇ! ನಿನಗೆ ಸರ್ವನಾಶವಾಗುವುದು!

**ಜಾಟಜೀ:**—**ಬಾಯಿ ಮುಚ್ಚು!** ಇಲ್ಲವಾದರೆ, ಹದಿಮೂರು ದಿನಗಳವರೆಗೆ ಹಾಲಿಲ್ಲದೇ, ನಾವು ಎಷ್ಟು ಕಷ್ಟಪಟ್ಟಿದ್ದೇವೋ, ಅದೆಲ್ಲದರ ಬಾಕಿಯನ್ನೂ ಕಕ್ಕಿಸಿ ಬಿಟ್ಟೇನು!

ಆಗ ಪೋಪರು ಸುಮ್ಮನಾದರು. ಮತ್ತು ಜಾಟಜೀ ಹಸುವನ್ನೂ, ಕರುವನ್ನೂ ಕರೆದುಕೊಂಡು, ತನ್ನ ಮನೆಗೆ ಸೇರಿದನು. **ಈ ಜಾಟಜೀ ಅಂತಹ ಪುರುಷರೇ ಇದ್ದರೆ, ಪೋಪಲೀಲೆ ಜಗತ್ತಿನಲ್ಲಿ ನಡೆಯುವುದಿಲ್ಲ!**

## (ದಶಗಾತ್ರ-ಸಪಿಂಡೀಕರಣದ ಸಮೀಕ್ಷೆ)

ಈ ಜನರು ಏನು ಹೇಳುತ್ತಾರೆಂದರೆ—'**ದಶಗಾತ್ರ**'ದ ಪಿಂಡಗಳಿಂದ ಪತ್ತು ಅಂಗಗಳು; '**ಸಪಿಂಡೀಕರಣ**'ದಿಂದ ಶರೀರದೊಂದಿಗೆ ಆತ್ಮನ ಸೇರಿಕೆಯಾಗಿ, ಹೆಬ್ಬೆಟ್ಟಿನ ಗಾತ್ರದ ಶರೀರ ಉದ್ಭವಿಸಿ, ಆಮೇಲೆ ಯಮಲೋಕಕ್ಕೆ ಹೋಗುತ್ತಾನೆ', ಎಂದು.

ಹಾಗೆ ಆದಲ್ಲಿ, ಮರಣ ಕಾಲದಲ್ಲಿ ಯಮದೂತರ ಆಗಮನ ವ್ಯರ್ಥವಾಗುತ್ತದೆ. '**ತ್ರಯೋದಶಾಹ**'ದ ನಂತರ [ದೂತರು] ಬರಬೇಕು ! ಶರೀರ ಉದ್ಭವಿಸುವುದಾದರೆ, ತನ್ನ ಪತ್ನಿ, ಸಂತತಿ ಮತ್ತು ಇಷ್ಟ-ಮಿತ್ರರ ಮೋಹದಿಂದ, ಹಿಂದಿರುಗಿ ಬರುವುದಿಲ್ಲವೇಕೆ ?

## (ಪೋಪರ ಸ್ವರ್ಗ)

**ಪ್ರಶ್ನೆ:**—ಸ್ವರ್ಗದಲ್ಲಿ ಏನೂ ಸಿಕ್ಕುವುದಿಲ್ಲ. ಏನು ದಾನಮಾಡಲ್ಪಡುತ್ತದೋ, ಅದೇ ಅಲ್ಲಿ ಸಿಕ್ಕುತ್ತದೆ. ಆದುದರಿಂದ, ಎಲ್ಲ ದಾನಗಳನ್ನೂ ಮಾಡಬೇಕು.

**ಉತ್ತರ:**—ಯಾವುದರಲ್ಲಿ ಧರ್ಮಶಾಲೆಗಳಿವೆಯೋ, ಜನರು ದಾನ ಕೊಡುತ್ತಾರೋ, ಇಷ್ಟಮಿತ್ರರ ಮತ್ತು ಜಾತಿ-ಬಾಂಧವರ ಔತಣಗಳು ಭರ್ಜರಿಯಾಗಿ ನಡೆಯುತ್ತವೋ, ಒಳ್ಳೆ-ಒಳ್ಳೆಯ ವಸ್ತುಗಳು ಸಿಕ್ಕುತ್ತವೋ, ಅಂತಹ ಈ ಲೋಕವೇ ನಿಮ್ಮ ಆ ಸ್ವರ್ಗಕ್ಕಿಂತ ಒಳ್ಳೆಯದಾಗಿದೆ!

ನೀವು ಹೇಳುವುದಕ್ಕೆ ಅನುಸಾರವಾಗಿ ಸ್ವರ್ಗದಲ್ಲಿ ಏನೂ ಸಿಕ್ಕುವುದಿಲ್ಲ ! ಇಂತಹ ನಿರ್ದಯವೂ, ಕೃಪಣವೂ ನಿರ್ಗತಿಕವೂ ಆದ ಸ್ವರ್ಗಕ್ಕೆ ಪೋಪಮಹಾಶಯರೇ ಹೋಗಿ, ಕೆಡಲಿ! ಅಲ್ಲಿ ಒಳ್ಳೆ-ಒಳ್ಳೆಯ ಮನುಷ್ಯರಿಗೇನು ಕೆಲಸ ?

## (ಯಮ-ಯಮಲೋಕ-ಧರ್ಮರಾಜ ಎಂದರೇನು ?

**ಪ್ರಶ್ನೆ:**—ನಿಮ್ಮ ಹೇಳಿಕೆಯಂತೆ, **ಯಮಲೋಕ** ಮತ್ತು **ಯಮ** ಇಲ್ಲವಾದರೆ, ಮೃತನಾಗಿ ಜೀವನು ಎಲ್ಲಿ ಹೋಗುತ್ತಾನೆ ? ಮತ್ತು ಇವರ ನ್ಯಾಯವನ್ನು ಯಾವನು ಮಾಡುತ್ತಾನೆ ?

**ಉತ್ತರ:**—ನಿಮ್ಮ ಗರುಡಪುರಾಣದ ಹೇಳಿಕೆಯಂತೂ ಅಪ್ರಮಾಣವಾಗಿದೆ. ಆದರೆ, ವೇದೋಕ್ತವಾದುದು ಹೀಗೆ ಇದೆ—

ಯಮೇನ॥[1]

[ಋಗ್ವೇದ:-10.14.8]

ವಾಯುನಾ॥[2]

[ಅಥರ್ವ:-20.141.2]

ಸತ್ಯರಾಜನ್ ॥[3]

[ಯಜುರ್ವೇದ:-20.4]

ಈ ಮೊದಲಾದ ವೇದವಚನಗಳಿಂದ*, 'ಯಮ', ಎಂಬುದು ವಾಯುವಿನ ಹೆಸರು, ಎಂದು ನಿಶ್ಚಯವಾಗುತ್ತದೆ.

---

1. ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್ ॥
[ಋಗ್ವೇದ:-10.14.8]

ಓ ಜೀವ ! [ಪರಮೇ ವ್ಯೋಮನ್] ಸರ್ವೋಚ್ಚ ಪ್ರಭುವಿನಲ್ಲಿ, ಆಕಾಶದಲ್ಲಿ, [ಪಿತೃಭಿಃ ಸಮ್] ಪಾಲಕ ತತ್ತ್ವಗಳಿಂದ ಯುಕ್ತನಾಗಿ, [ಇಷ್ಟಾಪೂರ್ತೇನ ಸಮ್] ಉಪಲಬ್ಧ ವಾಗಿರುವ, ಆಗಬೇಕಾಗಿರುವ ಕಾಮನೆಗಳಿಂದ ಯುಕ್ತನಾಗಿ [ಗಚ್ಛಸ್ವ] ವಿಹರಿಸು. —ಅನು.

2. ಯದಿಂದ್ರೇಣ ಸರಥಂ ಯಾಥೋ ಅಶ್ವಿನಾ

ಯದ್ವಾ ವಾಯುನಾ ಭವಥಃ ಸಮೋಕಸಾ ॥

[ಅಥರ್ವ:-20.141.2]

[ಸಮೋಕಸಾ ಅಶ್ವಿನಾ] ಸಮಾನಗೃಹನಿವಾಸೀ ದಂಪತಿಗಳೇ ! [ಇಂದ್ರೇಣ ಸರಥಮ್] ಸೂರ್ಯನ ಶಕ್ತಿಯಿಂದ ಯುಕ್ತರಾಗಿ, [ವಾ] ಮತ್ತು, [ವಾಯುನಾ ಸರಥಮ್] ವಾಯುವಿನಿಂದ ಯುಕ್ತರಾಗಿ, [ಯತ್ ಯತ್ ಭವಥಃ] ಏನೇನು ಬೇಕೋ, ಪಡೆದುಕೊಳ್ಳಿರಿ. —ಅನು.

3. ಕೋಽಸಿ ಕತಮೋಽಸಿ ಕಸ್ಮೈ ತ್ವಾ ಕಾಯ ತ್ವಾ

ಸುಶ್ಲೋಕ ಸುಮಂಗಲ ಸತ್ಯರಾಜನ್ ॥

[ಯಜುರ್ವೇದ:- 20.4]

[ಸುಶ್ಲೋಕ ಸುಮಂಗಲ ಸತ್ಯರಾಜನ್] ಉತ್ತಮ ಯಶಸ್ವೀ, ಸಜ್ಜನರಿಗೆ ಮಂಗಳಕರ, ಸತ್ಯ ಪ್ರಕಾಶಕ ಭಗವನ್ ! [ಕಃ ಅಸಿ, ಕತಮಃ ಅಸಿ] ಆನಂದಮಯನಾಗಿರುವೆ ; ಆನಂದಮಯ ರಲ್ಲಿಯೂ ಶ್ರೇಷ್ಠನಾಗಿರುವೆ. [ಕಸ್ಮೈ ತ್ವಾ ಕಾಯ ತ್ವಾ] ಆನಂದಕ್ಕಾಗಿ ಸುಖಮಯ ನಾಗಲಿಕ್ಕಾಗಿ, ನಿನ್ನನ್ನು ಆಶ್ರಯಿಸುವೆನು. —ಅನು.

*'ಸಂಸ್ಕಾರವಿಧಿ'ಯ ಅಂತ್ಯೇಷ್ಟಿ ಪ್ರಕರಣದಲ್ಲಿ ಇನ್ನೂ ಹಲವು ಪ್ರಮಾಣಗಳಿವೆ. —ಸಂ.

ಮತ್ತು ಯಾವ **ಸತ್ಯಕಾರಿಯೂ, ಪಕ್ಷಪಾತರಹಿತನೂ ಆದ ಪರಮಾತ್ಮ ಧರ್ಮರಾಜನಿದ್ದಾನೋ, ಆವನೇ ಸರ್ವರ ನ್ಯಾಯಕರ್ತೃವು ಆಗಿದ್ದಾನೆ.**

**(ದಾನಕ್ಕೆ ಪಾತ್ರ-ಅಪಾತ್ರರು)**

**ಪ್ರಶ್ನೆ :**—ನೀವು ಹೇಳುವುದರಂತೆ, ಗೋದಾನ ಮೊದಲಾದ ದಾನಗಳನ್ನು ಯಾವನಿಗೂ ಕೊಡಬಾರದು ; ಮತ್ತು ಯಾವುದೇ ದಾನ-ಪುಣ್ಯಗಳನ್ನು ಮಾಡಬಾರದು, ಎಂದು ಸಿದ್ಧವಾಗುತ್ತದೆ.

**ಉತ್ತರ:**—ಈ ನಿಮ್ಮ ಹೇಳಿಕೆಯು ಸರ್ವಥಾ ವ್ಯರ್ಥವಾಗಿದೆ. ಏಕೆಂದರೆ, ಸುಪಾತ್ರರಿಗೆ, ಪರೋಪಕಾರಿಗಳಿಗೆ, ಪರೋಪಕಾರಕ್ಕಾಗಿ ಚಿನ್ನ, ಬೆಳ್ಳಿ, ವಜ್ರ, ಮುತ್ತು, ಮಾಣಿಕ್ಯ, ಆಹಾರ, ಜಲ, ಭೂಮಿ, ವಸ್ತ್ರ ಮೊದಲಾದುದರ ದಾನವನ್ನು ಅವಶ್ಯವಾಗಿ ಮಾಡುವುದು ಉಚಿತವಾಗಿದೆ. **ಆದರೆ, ಕುಪಾತ್ರರಿಗೆ ಎಂದಿಗೂ ಕೊಡಬಾರದು.**

**ಪ್ರಶ್ನೆ:**—'**ಕುಪಾತ್ರ**'ರ ಮತ್ತು '**ಸುಪಾತ್ರ**'ರ ಲಕ್ಷಣವೇನು ?

**(ದಾನಕ್ಕೆ ಕುಪಾತ್ರರ ಲಕ್ಷಣಗಳು)**

**ಉತ್ತರ:**—ಯಾರು ಛಲಯುಕ್ತರೂ, ಕಪಟಯುಕ್ತರೂ, ಸ್ವಾರ್ಥಿಗಳೂ, ವಿಷಯಾಸಕ್ತರೂ, ಕಾಮ-ಕ್ರೋಧ-ಲೋಭ-ಮೋಹಯುಕ್ತರೂ, ಪರಹಾನಿ ಮಾಡುವವರೂ, ಲಂಪಟರೂ, ಮಿಥ್ಯಾವಾದಿಗಳೂ ,ಅವಿದ್ವಾಂಸರೂ, ಕುಸಂಗಿಗಳೂ, ಆಲಸ್ಯಯುಕ್ತರೂ ಆಗಿರುತ್ತಾರೋ, ಅವರುಗಳು ;

ಮತ್ತು ಯಾವನಾದರೂ ದಾನಿಯಿದ್ದರೆ, ಅವನ ಬಳಿ ಮತ್ತೆ-ಮತ್ತೆ ಬೇಡುವುದು, ಮುಷ್ಕರ ಹೂಡುವುದು, 'ಇಲ್ಲ', ಎಂದಮೇಲೆಯೂ ಹಠ ಹಿಡಿದು, ಬೇಡುತ್ತಲೇ ಹೋಗುವುದು, ತೃಪ್ತನಾಗದಿರುವುದು;

ಯಾವನು ಕೊಡುವುದಿಲ್ಲವೋ, ಅವನನ್ನು ನಿಂದಿಸುವುದು, ಶಾಪ ಹಾಕುವುದು, ಬೈಯುವುದು ಮೊದಲಾದುದದರಲ್ಲಿ ತೊಡಗುವುದು ;

ಯಾವನಾದರೂ, ಅನೇಕ ಸಾರಿ ಸೇವೆ ಸಲ್ಲಿಸಿ, ಒಂದು ಸಾರಿ ಸಲ್ಲಿಸದಿದ್ದರೆ, ಅವನ ಶತ್ರುವಾಗಿ ಹೋಗುವುದು ;

ಮೇಲಿನಿಂದ ಸಾಧುವೇಷ ಹಾಕಿಕೊಂಡು, ಜನರನ್ನು ಪಥಭ್ರಷ್ಟರನ್ನಾಗಿ ಮಾಡಿ, ವಂಚಿಸುವುದು, ಮತ್ತು ತನ್ನ ಹತ್ತಿರ ವಸ್ತುವಿದ್ದರೂ ಕೂಡ, 'ನನ್ನ ಬಳಿ ಏನೂ ಇಲ್ಲ', ಎನ್ನುವುದು ;

ಎಲ್ಲರನ್ನೂ ಉಬ್ಬಿಸಿ-ಏರಿಸಿ, ಸ್ವಾರ್ಥವನ್ನು ಸಾಧಿಸಿಕೊಳ್ಳುವುದು ;

ಇರುಳೂ-ಹಗಲೂ ಭಿಕ್ಷೆ ಬೇಡುವುದರಲ್ಲಿಯೇ ಪ್ರವೃತ್ತನಾಗಿರುವುದು ;

ಆಹ್ವಾನ ಬಂದ ಮೇಲೆ ಯಥೇಷ್ಟವಾಗಿ ಭಂಗಿ ಮೊದಲಾದ ಮಾದಕ ದ್ರವ್ಯಗಳನ್ನು ತಿಂದು–ಕುಡಿದು, ಬಹಳವಾಗಿ ಪರವಸ್ತುಗಳನ್ನು ನುಂಗಿಹಾಕುವುದು, ಪುನಃ ಉನ್ಮತ್ತವಾಗಿ ಪ್ರಮಾದಯುಕ್ತನಾಗುವುದು ;

ಸತ್ಯದ ಮಾರ್ಗವನ್ನು ವಿರೋಧಿಸುವುದು, ಮತ್ತು ಸುಳ್ಳಿನ ದಾರಿಯಲ್ಲಿ ತನ್ನ ಸ್ವಾರ್ಥಕ್ಕಾಗಿ ನಡೆಯುವುದು ;

ಅದೇ ರೀತಿ ತನ್ನ ಅನುಯಾಯಿಗಳಿಗೆ ಬೇರೆಯ ಯೋಗ್ಯ ಪುರುಷರ ಸೇವೆ ಮಾಡುವುದಕ್ಕೆ ಉಪದೇಶ ಮಾಡದೇ, ಕೇವಲ ತನ್ನ ಸೇವೆಯನ್ನೇ ಮಾಡಬೇಕೆಂದು ಉಪದೇಶಿಸುವುದು ;

ಸದ್ವಿದ್ಯೆ ಮೊದಲಾದ ಪ್ರವೃತ್ತಿಗಳಿಗೆ ವಿರೋಧಿಯಾಗಿರುವುದು ;

ಜಗತ್ತಿನ ವ್ಯವಹಾರಗಳಲ್ಲಿ, ಎಂದರೆ, ಸ್ತ್ರೀಯರು, ಪುರುಷರು, ತಾಯಿ, ತಂದೆ, ಸಂತತಿ, ರಾಜ–ಪ್ರಜೆ, ಇಷ್ಟ-ಮಿತ್ರರುಗಳಲ್ಲಿ––"ಇದೆಲ್ಲವೂ ಅಸತ್ಯವಾಗಿದೆ; ಮತ್ತು ಜಗತ್ತೂ ಕೂಡ ಮಿಥ್ಯೆಯಾಗಿದೆ", ಎಂದು ಬೋಧಿಸಿ, ಅಪ್ರೀತಿಯನ್ನುಂಟು ಮಾಡುವುದು.

ಈ ಮೊದಲಾದ ರೀತಿಯ ದುಷ್ಟ ಉಪದೇಶಗಳನ್ನು ಮಾಡುವುದು–ಈ ಮೊದಲಾದುವು '**ಕುಪಾತ್ರ**'ರ ಲಕ್ಷಣಗಳಾಗಿವೆ!

## (ದಾನಕ್ಕೆ ಸುಪಾತ್ರರ ಲಕ್ಷಣಗಳು)

ಮತ್ತು ಯಾರು ಬ್ರಹ್ಮಚಾರಿಗಳು, ಜಿತೇಂದ್ರಿಯರು, ವೇದಗಳೇ ಮೊದಲಾದ ವಿದ್ಯೆಯನ್ನು ಓದುವವರು-ಓದಿಸುವವರು ;

ಸುಶೀಲರು, ಸತ್ಯವಾದಿಗಳು, ಪರೋಪಕಾರಪ್ರಿಯರು, ಪುರುಷಾರ್ಥಿಗಳು, ಉದಾರರು ;

ವಿದ್ಯೆಯ ಮತ್ತು ಧರ್ಮದ ಉನ್ನತಿಯನ್ನು ನಿರಂತರವಾಗಿ ಸಾಧಿಸುವವರು ;

ಧರ್ಮಾತ್ಮರು, ಶಾಂತರು, ನಿಂದಾ-ಸ್ತುತಿಗಳಲ್ಲಿ ಹರ್ಷ-ಶೋಕರಹಿತರು ;

ನಿರ್ಭಯರು, ಉತ್ಸಾಹಿಗಳು, ಯೋಗಿಗಳು, ಜ್ಞಾನಿಗಳು ;

ಸೃಷ್ಟಿಕ್ರಮಕ್ಕೆ, ವೇದಗಳ ಆಜ್ಞೆಗೆ, ಈಶ್ವರನ ಗುಣ-ಕರ್ಮ-ಸ್ವಭಾವಕ್ಕೆ ಅನುಕೂಲವಾಗಿ ವರ್ತಿಸುವವರು ;

ನ್ಯಾಯರೀತಿಯುಕ್ತರು, ಪಕ್ಷಪಾತರಹಿತರು, ಸತ್ಯೋಪದೇಶವನ್ನು ಮಾಡುವವರು, ಮತ್ತು ಸತ್ಯಶಾಸ್ತ್ರಗಳನ್ನು ಓದುವವನ–ಓದಿಸುವವನ ಪರೀಕ್ಷಕರು ;

ಯಾವನನ್ನೂ ಅತಿಯಾಗಿ ಪ್ರಶಂಸೆಮಾಡದವರು ;

ಪ್ರಶ್ನೆಗಳಿಗೆ ಯಥಾರ್ಥವಾದ ಸಮಾಧಾನ ಕೊಡುವವರು ;

ತಮ್ಮ ಆತ್ಮನ ಹಾಗೆಯೇ ಬೇರೆಯವರ ಆತ್ಮಗಳಿಗೂ ಸುಖ-ದುಃಖ, ಹಾನಿ–ಲಾಭಗಳಿವೆ, ಎಂದು ತಿಳಿದುಕೊಳ್ಳುವವರು ;

ಅವಿದ್ಯೆ ಮೊದಲಾದ ಕ್ಲೇಶ, ಹಠ-ದುರಾಗ್ರಹ-ದುರಭಿಮಾನಗಳಿಂದ ರಹಿತರಾದವರು ;

**'ಸಂತೋಷ'**ಯುಕ್ತರು=ಯಾವನಾದರೂ ಪ್ರೀತಿಯಿಂದ, ಎಷ್ಟನ್ನು ಕೊಡುವನೋ, ಅಷ್ಟರಿಂದಲೇ ತೃಪ್ತರಾಗುವವರು ;

**ಒಂದು ಸಾರಿ ಆಪತ್ಕಾಲದಲ್ಲಿಯೇ ಬೇಡಿದರೂ ಕೂಡ, ಯಾವನಾದರೂ ಕೊಡದಿದ್ದರೂ, ಅಥವಾ ನಿಷೇಧಿಸಿದರೂ ಕೂಡ ದುಃಖವನ್ನು, ಅಥವಾ ಕೆಟ್ಟ ವ್ಯವಹಾರವನ್ನು ಮಾಡದವರು** ; ಆ ಕೂಡಲೇ ಅಲ್ಲಿಂದ ಹೊರಟು ಬರುವವರು; ಅವನನ್ನು ನಿಂದಿಸದವರು ;

**ಸುಖೀ ಪುರುಷರೊಂದಿಗೆ ಮೈತ್ರಿಯನ್ನೂ, ದುಃಖಿಗಳ ಮೇಲೆ ಕರುಣೆಯನ್ನೂ, ಪುಣ್ಯಾತ್ಮರ ಬಗೆಗೆ ಆನಂದವನ್ನೂ, ಮತ್ತು ಪಾಪಿಗಳ ಬಗೆಗೆ ಉಪೇಕ್ಷೆಯನ್ನೂ ತಾಳುವವರು!*** ಎಂದರೆ ರಾಗ-ದ್ವೇಷಭಾವನೆಯಿಂದ ರಹಿತರು ;

ಸತ್ಯವನ್ನು ಅಂಗೀಕರಿಸುವವರು, ಸತ್ಯವನ್ನಾಡುವವರು, ಸತ್ಯಾಚರಣಯುಕ್ತರು, ನಿಷ್ಕಪಟರು, ಈರ್ಷ್ಯಾದ್ವೇಷರಹಿತರು, ಗಂಭೀರಾಶಯ ಸತ್ಪುರುಷರು ;

ಧರ್ಮಯುಕ್ತರು, ಮತ್ತು ದುಷ್ಟಾಚಾರರಹಿತರು;

ತಮ್ಮ ತನು-ಮನ-ಧನಗಳನ್ನು ಪರೋಪಕಾರ ಮಾಡುವುದರಲ್ಲಿ ವಿನಿಯೋಗಿಸುವವರು;

---

*"ಮೈತ್ರೀ–ಕರುಣಾ–ಮುದಿತೋಪೇಕ್ಷಾಣಾಂ ಸುಖ–ದುಃಖ–ಪುಣ್ಯಾಪುಣ್ಯ–ವಿಷಯಾಣಾಂ ಭಾವನಾತಶ್ಚಿತ್ತಪ್ರಸಾದನಮ್"—ಯೋಗದರ್ಶನ(1.33)—ಯು.ಮೀ.

**ಪರರ ಸುಖಕ್ಕಾಗಿ ತಮ್ಮ ಪ್ರಾಣಗಳನ್ನೂ ಕೂಡ ಸಮರ್ಪಣ ಮಾಡು ವವರು.**

ಈ ಮೊದಲಾದ **ಶುಭಲಕ್ಷಣಯುಕ್ತರು, 'ಸುಪಾತ್ರ'** ಪಾತ್ರರಾಗಿರುತ್ತಾರೆ.

**ಆದರೆ, ದುರ್ಭಿಕ್ಷ ಮೊದಲಾದ ಆಪತ್ಕಾಲದಲ್ಲಿ ಆಹಾರ, ಜಲ, ವಸ್ತ್ರ ಮತ್ತು ಔಷಧ, ಪಥ್ಯ ಮತ್ತು ಆಶ್ರಯಕ್ಕೆ ಪ್ರಾಣಿಮಾತ್ರರೆಲ್ಲರೂ ಅಧಿಕಾರಿಗ**[ಳಾಗ ಬಲ್ಲರು !]

**(ದಾನದಾತೃಗಳ ಮೂರು ಭೇದ)**

ಪ್ರಶ್ನೆ:—ದಾತೃಗಳು ಎಷ್ಟು ವಿಧದವರಿರುತ್ತಾರೆ ?

**ಉತ್ತರ:—ಮೂರು** ವಿಧದವರು—**ಉತ್ತಮರು, ಮಧ್ಯಮರು** ಮತ್ತು ನಿಕೃಷ್ಟರು, ಎಂದು.

**ಉತ್ತಮ ದಾತೃ**ವೆಂದು ಯಾವನಿಗೆ ಹೇಳುತ್ತಾರೆಂದರೆ—ಯಾವನು ದೇಶ, ಕಾಲ ಮತ್ತು ಪಾತ್ರವನ್ನರಿತು, ಸತ್ಯವಿದ್ಯಾ-ಧರ್ಮದ ಉನ್ನತಿಯೆಂಬ ಪರೋಪ ಕಾರಕ್ಕಾಗಿ ದಾನವನ್ನು ಕೊಡುತ್ತಾನೋ, ಅವನು.

**'ಮಧ್ಯಮ'**ನು ಯಾರೆಂದರೆ—ಯಾವನು ಕೀರ್ತಿಗಾಗಿ ಅಥವಾ ಸ್ವಾರ್ಥ ಕ್ಕಾಗಿ ದಾನವನ್ನು ಮಾಡುತ್ತಾನೋ, ಅವನು.

**'ನೀಚ'**ನು ಯಾವನೆಂದರೆ—ಯಾವನು ತನಗಾಗಲೀ, ಅಥವಾ ಬೇರೆಯವರಿ ಗಾಗಲೀ ಸ್ವಲ್ಪವೂ ಉಪಕಾರ ಮಾಡಲಾರನೋ, ಆದರೆ, ವೇಶ್ಯಾಗಮನ ಮೊದಲಾದುವಕ್ಕಾಗಿ, ಅಥವಾ ಭಂಡರು-ಹೊಗಳುಭಟ್ಟರು ಮೊದಲಾದವರಿಗೆ ಕೊಡುತ್ತಾನೋ; ಕೊಡುವಾಗ ತಿರಸ್ಕಾರ, ಅಪಮಾನ ಮೊದಲಾದ [ದುರ್ವ್ಯವಹಾರ ವನ್ನೂ ಕೂಡ ಮಾಡುತ್ತಾನೋ, ಅವನು].

ಯಾವನು ಪಾತ್ರ-ಅಪಾತ್ರರ ಭೇದವನ್ನು ಸ್ವಲ್ಪವೂ ತಿಳಿಯುವುದಿಲ್ಲವೋ, ಆದರೆ, **"ಯಾವುದೇ ಖಾದ್ಯಕೊಳ್ಳಿರಿ; ಎಲ್ಲಕ್ಕೂ ಕ್ರಯ ಒಂದೇ"***, ಎಂಬ ವ್ಯಾಪಾರಿಗಳಂತೆ† ವಿವಾದ-ಹೋರಾಟಗಳಿಗಾಗಿ, ಅನ್ಯಧರ್ಮಾತ್ಮನಿಗೆ ದುಃಖವನ್ನಿತ್ತು ತಾನು ಸುಖಿಯಾಗಬೇಕೆಂದು ದಾನ ಕೊಡುತ್ತಾನೋ, ಅವನು **ಅಧಮ ದಾತೃ** ವಾಗಿದ್ದಾನೆ. ಎಂದರೆ—

*ಹಿಂದಿಯಲ್ಲಿ ಇದಕ್ಕೆ-'ಸಬ್ ಅನ್ನ ಬಾರಹ್ ಪಸೇರೀ', ಎಂಬ ವಾಗ್ಧೋರಣೆಯನು ಪ್ರಯೋಗಿಸಲಾಗಿದೆ.—ಸಂ.

†ಎಂದರೆ, ವಿವೇಕಶೂನ್ಯನಾಗಿ.—ಅನು.

ಯಾವನು ಪರೀಕ್ಷಾಪೂರ್ವಕವಾಗಿ, ವಿದ್ವಾಂಸರಾದ ಧರ್ಮಾತ್ಮರ ಸತ್ಕಾರ ಮಾಡುವನೋ, ಅವನು **ಉತ್ತಮನು.**

ಮತ್ತು ಯಾವನು ಪರೀಕ್ಷೆ ಮಾಡಲೀ, ಅಥವಾ ಬಿಡಲೀ, 'ತನ್ನ ಪ್ರಶಂಸೆ ಯಾಗಬೇಕು', ಎಂದು ಕೊಡುತ್ತಾನೋ, ಅವನು **ಮಧ್ಯಮನು.**

ಮತ್ತು ಯಾವನು ಸಿಕ್ಕಾಪಟ್ಟೆ, ಪರೀಕ್ಷೆಯನ್ನು ಮಾಡದೇ, ನಿಷ್ಫಲವಾದ ದಾನವನ್ನು ಕೊಡುತ್ತಾ ಹೋಗುತ್ತಾನೋ, ಅವನು '**ನೀಚದಾತೃ**' ಎನಿಸುತ್ತಾನೆ.

### (ದಾನಗಳ ಫಲ ಯಾವಾಗ, ಎಲ್ಲಿ ಮತ್ತು ಯಾರಿಂದ ?)

**ಪ್ರಶ್ನೆ:**—ದಾನದ ಫಲಗಳು ಇಲ್ಲಿ ಸಿಕ್ಕುತ್ತವೋ ಅಥವಾ ಪರಲೋಕ ದಲ್ಲಿಯೋ ?

**ಉತ್ತರ:—ಎಲ್ಲೆಡೆಯೂ ಸಿಕ್ಕುತ್ತವೆ !**

**ಪ್ರಶ್ನೆ:**—ಸ್ವತಃ ಸಿಕ್ಕುತ್ತವೋ, ಅಥವಾ ಯಾವನಾದರೂ ಫಲಕೊಡುವ ವನಿದ್ದಾನೆಯೋ ?

**ಉತ್ತರ:—ಫಲಗಳನ್ನು ಕೊಡುವವನು ಈಶ್ವರನು!** ಹೇಗೆ ಕಳ್ಳನೂ, ದರೋಡೆ ಕೋರನೂ ಸ್ವತಃ ಕಾರಾಗೃಹಕ್ಕೆ ಹೋಗಲು ಬಯಸುವುದಿಲ್ಲವೋ, ಆದರೆ, ಹೇಗೆ ರಾಜನು ಅವರನ್ನು ಅವಶ್ಯವಾಗಿ ಕಳುಹಿಸುತ್ತಾನೋ; ಧರ್ಮಾತ್ಮರುಗಳ ಸುಖ ವನ್ನು ರಕ್ಷಿಸುತ್ತಾನೋ, ಮತ್ತು ಸವಿಯಿಸುತ್ತಾನೋ, ಡಕಾಯಿತರೇ ಮೊದಲಾದ ವರಿಂದ ಕಾಪಾಡಿ, ಅವರನ್ನು ಸುಖದಲ್ಲಿಡುತ್ತಾನೋ; ಹಾಗೆಯೇ ಪರಮಾತ್ಮನು ಎಲ್ಲರಿಗೂ ಪಾಪ-ಪುಣ್ಯಗಳ ದುಃಖಗಳು-ಸುಖಗಳು ಎಂಬ ಫಲಗಳನ್ನು ಯಥಾ ವತ್ತಾಗಿ ಕೊಡುತ್ತಾನೆ.

### (ಪುರಾಣಗಳು ಮತ್ತು ತಂತ್ರಗಳು ವೇದ-ವಿರೋಧಿಗಳಾಗಿವೆ)

**ಪ್ರಶ್ನೆ:**—ಗರುಡಪುರಾಣ ಮೊದಲಾದ ಯಾವ ಈ ಗ್ರಂಥಗಳಿವೆಯೋ, [ಅವು] ವೇದಾರ್ಥವನ್ನು ಅಥವಾ ವೇದವನ್ನು ಪುಷ್ಟೀಕರಿಸುವಂತಹವೋ, ಅಥವಾ ಅಲ್ಲವೋ ?

**ಉತ್ತರ:**—ಅಲ್ಲ! **ಆದರೆ, ವೇದಗಳ ವಿರೋಧಿಗಳಾಗಿವೆ! ಮತ್ತು ವಿಪರೀತ ದಿಕ್ಕಿನಲ್ಲಿ ನಡೆಯುತ್ತವೆ. ಮತ್ತು ತಂತ್ರಗಳೂ ಕೂಡ ಹಾಗೆಯೇ ಇವೆ.**

ಹೇಗೆ ಯಾವನಾದರೂ ಒಬ್ಬ ಮಾನವನು ಒಬ್ಬನ ಮಿತ್ರನೂ; [ಆದರೆ], ಸಮಸ್ತ ಜಗತ್ತಿನ ಶತ್ರುವೂ ಆಗಿರುವನೋ,* ಹಾಗೆಯೇ ಪುರಾಣಗಳನ್ನು ಮತ್ತು ತಂತ್ರವನ್ನು ಅಂಗೀಕರಿಸುವ ಪುರುಷನು ಆಗಿರುತ್ತಾನೆ. ಏಕೆಂದರೆ, ಇವು ಒಬ್ಬನಿಂದ ಮತ್ತೊಬ್ಬನಿಗೆ ವಿರೋಧ ಹುಟ್ಟಿಸುವ ಗ್ರಂಥಗಳಾಗಿವೆ. ಇವನ್ನು ಅಂಗೀಕರಿಸುವುದು ಯಾವನೇ ವಿದ್ವಾಂಸನಿಗೂ ಅರ್ಹವಾದ ಕಾರ್ಯವಲ್ಲ. ಮತ್ತು ಇವುಗಳನ್ನು ಅಂಗೀಕರಿಸುವುದು ತಿಳಿವಳಿಕೆ ಇಲ್ಲದ ಮಾತಾಗಿದೆ.

### (ಏಕಾದಶಿ ಮೊದಲಾದ ವ್ರತ-ಉಪವಾಸಗಳ ಸಮೀಕ್ಷೆ)

ನೋಡಿರಿ! **ಶಿವಪುರಾಣದಲ್ಲಿ ತ್ರಯೋದಶೀ ಸೋಮವಾರ; ಆದಿತ್ಯಪುರಾಣ**ದಲ್ಲಿ **ರವಿವಾರ; ಚಂದ್ರಖಂಡದಲ್ಲಿ ಗ್ರಹಯುಕ್ತ ಸೋಮವಾರ; ಮಂಗಳವಾರ, ಬುಧವಾರ, ಬೃಹಸ್ಪತಿವಾರ, ಶುಕ್ರವಾರ; ರಾಹು-ಕೇತುಗಳಿಗೆ ಶನಿವಾರ;**

**ವೈಷ್ಣವ** ಏಕಾದಶೀ, ವಾಮನನ **ದ್ವಾದಶೀ**, ನೃಸಿಂಹನ ಅಥವಾ ಅನಂತನ **ಚತುರ್ದಶೀ**, ಚಂದ್ರನ **ಪೂರ್ಣಿಮಾ**, ದಿಕ್ಪಾಲಕರ **ದಶಮೀ**, ದುರ್ಗೆಯ **ನವಮೀ**, ವಸುಗಳ **ಅಷ್ಟಮೀ**, ಮುನಿಗಳ **ಸಪ್ತಮೀ**, ಕಾರ್ತಿಕೆಯಸ್ವಾಮಿಯ **ಷಷ್ಠೀ**, ನಾಗನ **ಪಂಚಮೀ**, ಗಣೇಶನ **ಚತುರ್ಥೀ**, ಗೌರಿಯ **ತೃತೀಯಾ**, ಅಶ್ವಿನೀಕುಮಾರರ **ದ್ವಿತೀಯಾ**, ಆದ್ಯಾದೇವಿಯ **ಪ್ರತಿಪದಾ** ಮತ್ತು ಪಿತೃಗಳ **ಅಮಾವಾಸ್ಯೆ**—

**ಪುರಾಣರೀತಿಯಿಂದ ಈ ದಿನಗಳು ಉಪವಾಸ ಮಾಡಲು ಗೊತ್ತು ಮಾಡಲ್ಪಟ್ಟಿವೆ.**

ಮತ್ತು ಎಲ್ಲೆಡೆಯೂ—"ಈ ವಾರಗಳಲ್ಲಿ ಮತ್ತು ತಿಥಿಗಳಲ್ಲಿ ಯಾವ ಮಾನವನು ಭೋಜನ-ಪಾನೀಯಗಳನ್ನು ತೆಗೆದುಕೊಳ್ಳುವನೋ; ಅವನು ನರಕಗಾಮಿಯಾಗುವನು!", ಎಂದೇ ಬರೆದಿದೆ.

ಈಗ, ಪೋಪರೂ ಮತ್ತು ಪೋಪರ ಅನುಯಾಯಿಗಳೂ ಏನು ಮಾಡಬೇಕೆಂದರೆ—

ಯಾವ ವಾರವೂ, ಅಥವಾ ಯಾವ ತಿಥಿಯಂದೂ ಭೋಜನವನ್ನು ಮಾಡಬಾರದು. ಏಕೆಂದರೆ, ಭೋಜನವನ್ನು ಅಥವಾ ಪಾನವನ್ನು ಮಾಡಿದರೆ, ನರಕಗಾಮಿಗಳಾಗುವರು!

---

*ಪುರಾಣಗಳಿಗೆ ಮತ್ತು ತಂತ್ರಗ್ರಂಥಗಳಿಗೆ ಇದಕ್ಕಿಂತ ಯಥಾರ್ಥವಾದ ಉಪಮೆ ಎಲ್ಲಿ ಸಿಕ್ಕುತ್ತದೆ? – ಸಂ.

ಈಗ 'ನಿರ್ಣಯಸಿಂಧು' 'ಧರ್ಮಸಿಂಧು', 'ವ್ರತಾರ್ಕ' ಮೊದಲಾದ ಪ್ರಮಾದೀ ಜನರಿಂದ ರಚಿತವಾದ ಗ್ರಂಥಗಳಲ್ಲಿಯೇ ಒಂದೊಂದು ವ್ರತಕ್ಕೂ ಎಂತಹ ದುರ್ಗತಿಯನ್ನು ತಂದು ಒಡ್ಡಿದ್ದಾರೆಂದರೆ, ಶೈವರು ದಶಮೀವಿದ್ಧದಲ್ಲಿ ಏಕಾದಶಿಯನ್ನೂ, ಹಲವರು ದ್ವಾದಶಿಯಂದು ಏಕಾದಶೀ ವ್ರತವನ್ನೂ ಆಚರಿಸುತ್ತಾರೆ ! ಎಂದರೆ, ಇದು ಯಾವ ದೊಡ್ಡ ವಿಚಿತ್ರವಾದ ಪೋಪಲೀಲೆಯಾಗಿದೆಯೆಂದರೆ, ಹಸಿವಿನಿಂದ ಸಾಯುವುದರಲ್ಲಿಯೂ ಕೂಡ ವಾದ-ವಿವಾದಗಳನ್ನೇ ಮಾಡುತ್ತಾರೆ !

ಯಾವನು **ಏಕಾದಶೀ ವ್ರತ**ವನ್ನು ಪ್ರಚಲಿತವಾಗಿ ಮಾಡಿದ್ದಾನೋ, ಅವನು ಅದರಲ್ಲಿ ತನ್ನ ಸ್ವಾರ್ಥವನ್ನೇ ಒಡ್ಡಿದ್ದಾನೆ. ಮತ್ತು ದಯೆ ಸ್ವಲ್ಪವೂ ಇಲ್ಲ ! ಅವರೆನ್ನುತ್ತಾರೆ:—

**'ಏಕಾದಶ್ಯಾಮನ್ನೇ ಪಾಪಾನಿ ವಸಂತಿ'.**

ಎಷ್ಟು ಪಾಪಗಳಿವೆಯೋ, ಅವೆಲ್ಲವೂ ಏಕಾದಶಿಯಂದು ಆಹಾರದಲ್ಲಿ ನೆಲೆಸುತ್ತವೆ !

ಇದರ ಮೇಲೆ,ಪೋಪಮಹಾಶಯನನ್ನು ಪ್ರಶ್ನಿಸಬೇಕು—

"ಯಾವನ ಪಾಪಗಳು ಅದರಲ್ಲಿ ಬಂದು ನೆಲೆಸುತ್ತವೆ ? ನಿನ್ನವೋ ; ಅಥವಾ ನಿನ್ನ ತಂದೆ ಮೊದಲಾದವರವೋ?", ಎಂದು.

ಎಲ್ಲರ ಸಮಸ್ತಪಾಪಗಳೂ ಏಕಾದಶಿಯ ಅನ್ನದಲ್ಲಿ ಹೋಗಿ ನೆಲೆಸುವುದಾದರೆ, ಏಕಾದಶಿಯಂದು ಯಾರಿಗೂ ದುಃಖವಿರಬಾರದು. ಹೀಗೇನೂ ಆಗುವುದಿಲ್ಲ ! ಪ್ರತಿಯಾಗಿ ಹಸಿವು ಮೊದಲಾದುದರಿಂದ ದುಃಖ ಉಂಟಾಗುತ್ತದೆ.

**ದುಃಖವು ಪಾಪದ ಫಲವಾಗಿದೆ! ಆದುದರಿಂದ, ಹಸಿದು ಸಾಯುವುದು ಪಾಪವಾಗಿದೆ!**

## (ಏಕಾದಶೀ ವ್ರತ ಮಾಹಾತ್ಮ್ಯದ ಸಮೀಕ್ಷೆ)

ಇದರ ಮಾಹಾತ್ಮ್ಯವನ್ನು ದೊಡ್ಡದಾಗಿ ಮಾಡಿಟ್ಟಿದ್ದಾರೆ. ಅದರ ಕಥೆಯನ್ನೋದಿ, ಬಹುಮಂದಿ ಮೋಸ ಹೋಗುತ್ತಾರೆ. ಅದರಲ್ಲಿ ಈ ಒಂದು ಕಥೆಯಿದೆ*—

ಬ್ರಹ್ಮಲೋಕದಲ್ಲಿ ಒಬ್ಬಳು ವೇಶ್ಯೆಯಿದ್ದಳು. ಅವಳು ಏನೋ ಅಪರಾಧ ಮಾಡಿದಳು. ಅವಳಿಗೆ—

---

*ಈ ತರಹದ ಒಂದು ಕಥೆ 'ಭಕ್ತಮಾಲ'ದ ತಿಲಕ ಟೀಕಾದಲ್ಲಿದೆ. ಪುಟ 162, 168 —ಯು.ಮೀ.

"ನೀನು ಭೂಲೋಕದ ಮೇಲೆ ಬೀಳು", ಎಂಬ ಶಾಪ ಸಿಕ್ಕಿತು.

ಅವಳು—"ನಾನು ಪುನಃ ಸ್ವರ್ಗಕ್ಕೆ ಹೇಗೆ ಬರಬಲ್ಲೆನು?", ಎಂದು ಸ್ತುತಿ ಪೂರ್ವಕವಾಗಿ ಕೇಳಿಕೊಂಡಳು.

ಆಗ ಅವನು—"ಯಾವಾಗ ಯಾವನಾದರೂ ಒಬ್ಬನು ಏಕಾದಶೀ ವ್ರತದ ಫಲ ವನ್ನು ನಿನಗೆ ಕೊಡುವನೋ, ಆಗಲೇ ನೀನು ಸ್ವರ್ಗಕ್ಕೆ ಬಂದುಬಿಡುವೆ.", ಎಂದು ಹೇಳಿದನು.

ಅವಳು ವಿಮಾನಸಹಿತ ಯಾವುದೋ ನಗರದಲ್ಲಿ ಬಂದು ಬಿದ್ದಳು. ಅಲ್ಲಿನ ರಾಜನು ಅವಳನ್ನು—

"ನೀನು ಯಾವಳು?", ಎಂದು ಕೇಳಿದನು.

ಆಗ ಅವಳು ಸಮಸ್ತ ವೃತ್ತಾಂತವನ್ನೂ ಹೇಳಿ, ತಿಳಿಸಿದಳು. ಮತ್ತು—

"ಯಾವನಾದರೂ ತನ್ನ ಏಕಾದಶೀ ಫಲವನ್ನು ನನಗೆ ಅರ್ಪಿಸಿದರೇನೇ, ಮರಳಿ ಸ್ವರ್ಗಕ್ಕೆ ಹೋಗಬಲ್ಲೆನು", ಎಂದು ಹೇಳಿದಳು.

ರಾಜನು ನಗರದಲ್ಲಿ ಹುಡುಕಿಸಿದನು. ಏಕಾದಶೀ ವ್ರತ ಮಾಡುವವನು ಯಾವನೂ ಸಿಕ್ಕಲಿಲ್ಲ!

ಆದರೆ, ಒಂದು ದಿನ ಯಾರೋ ಶೂದ್ರ ದಂಪತಿಗಳಲ್ಲಿ ಜಗಳವಾಗಿದ್ದಿತು. ಕೋಪದಿಂದ ಸ್ತ್ರೀಯು ಹಗಲೂ, ರಾತ್ರಿ ಹಸಿದೇ ಇದ್ದಳು. ದೈವಯೋಗದಿಂದ ಅಂದು ಏಕಾದಶಿ ಆಗಿದ್ದಿತು!

ಅವಳು—"ನಾನು ಏಕಾದಶಿಯನ್ನು ತಿಳಿದೇನೋ ಮಾಡಿರಲಿಲ್ಲ*. ಅಕಸ್ಮಾತ್ತಾಗಿ ಆ ದಿನ ಹಸಿವಿನಿಂದಿದ್ದೆನು", ಎಂದು ರಾಜನ ಸೈನಿಕರಿಗೆ ಹೇಳಿದಳು.

ಆಗ ಅವರು ಅವಳನ್ನು ರಾಜನೆದುರಿಗೆ ಕೊಂಡೊಯ್ದರು. ಅವಳಿಗೆ ರಾಜನು—

"ನೀನು ಈ ವಿಮಾನವನ್ನು ಮುಟ್ಟು", ಎಂದನು.

ಅವಳು ಮುಟ್ಟಿದಳು. ಅದೇ ಕ್ಷಣ ವಿಮಾನ ಮೇಲಕ್ಕೆ ಹಾರಿ ಹೋಯಿತು!

---

*ಎಂದರೆ, ಉಪವಾಸವಿರಲಿಲ್ಲ, ಎಂದರ್ಥ.—ಅನು.

ಇದಾದರೋ ತಿಳಿಯದೆಯೇ ಮಾಡಿದ ಏಕಾದಶಿಯ ವ್ರತದ ಫಲವಾಗಿದೆ! ಇನ್ನು ತಿಳಿದುಕೊಂಡು ಮಾಡುವುದಾದರೆ. ಅದರ ಫಲದ ಇತಿ–ಮಿತಿ ಏನಿದ್ದೀತು!!

ಭಲೇ ರೇ! ಕಣ್ಣುಗಳಿದ್ದೂ ನೋಡಲಾರದ ಜನರೇ! ಈ ಮಾತು ಸತ್ಯವಾಗಿದ್ದರೆ, ನಾವು ಸ್ವರ್ಗದಲ್ಲಿಲ್ಲದ ವೀಳೆಯದೆಲೆಯ ಸುರುಳಿಯೊಂದನ್ನು ಕಳುಹಿಸಲಪೇಕ್ಷಿಸುತ್ತೇವೆ. ಏಕಾದಶಿಯವರೆಲ್ಲಾ ನಿಮ್ಮ ನಿಮ್ಮ ಫಲವನ್ನು ಕೊಟ್ಟುಬಿಡಿರಿ. ಒಂದು ವೀಳೆಯದೆಲೆಯ ಸುರುಳಿ ಮೇಲಕ್ಕೆ ಹೊರಟುಹೋಗುವುದಾದರೆ, ಮತ್ತೆ ಲಕ್ಷಾಂತರ, ಕೋಟ್ಯಂತರ ಸುರುಳಿಗಳನ್ನು ಅಲ್ಲಿಗೆ ಕಳುಹಿಸುವೆವು. ಮತ್ತು ನಾವೂ ಕೂಡ ಏಕಾದಶಿಯ ಆಚರಣೆ ಮಾಡುತ್ತಾ ಹೋಗುವೆವು!

**ಮತ್ತು ಹೀಗೆ ಆಗದಿದ್ದರೆ, ನಿಮ್ಮಗಳನ್ನು ಹಸಿದು ಸಾಯುವುದೆಂಬ ಈ ಆಪತ್ಕಾಲದಿಂದ ಉಳಿಸಿ, ರಕ್ಷಿಸುವೆವು!**

## (ಇಪ್ಪತ್ತನಾಲ್ಕು ಏಕಾದಶಿಗಳಿಗೆ ವಿಚಿತ್ರ ಹೆಸರುಗಳು)

**ಈ ಇಪ್ಪತ್ತನಾಲ್ಕು ಏಕಾದಶಿಗಳಿಗೆ ಬೇರೆ ಬೇರೆ ಹೆಸರುಗಳನ್ನಿಟ್ಟಿದ್ದಾರೆ.***

---

| | | | | |
|---|---|---|---|---|
| * 1. | ಮಾರ್ಗಶಿರ | ಕೃಷ್ಣ ಪಕ್ಷ | — | ಸಂವತ್ಸರ ದೀಪವ್ರತಾ ; |
| 2. | ,, | ಶುಕ್ಲ ಪಕ್ಷ | — | ಮೋಕ್ಷದಾ ; |
| 3. | ಪುಷ್ಯ | ಕೃ. | — | ಸಫಲಾ ; |
| 4. | ,, | ಶು. | — | ಪುತ್ರದಾ ; |
| 5. | ಮಾಘ | ಕೃ. | — | ಷಟ್‌ತಿಲಾ ; |
| 6. | ,, | ಶು. | — | ಜಯಾ ; |
| 7. | ಫಾಲ್ಗುಣ | ಕೃ. | — | ವಿಜಯಾ ; |
| 8. | ,, | ಶು. | — | ಆಮಲಕೀ ; |
| 9. | ಚೈತ್ರ | ಕೃ. | — | ಪಾಪಮೋಚನೀ ; |
| 10. | ,, | ಶು. | — | ಕಾಮದಾ : |
| 11. | ವೈಶಾಖ | ಕೃ. | — | ರೂಪಿಣೀ ; |
| 12. | ,, | ಶು. | — | ಮೋಹಿನೀ ; |
| 13. | ಜ್ಯೇಷ್ಠ | ಕೃ. | — | ಅಪರಾ ; |
| 14. | ,, | ಶು. | — | ನಿರ್ಜಲಾ ; |
| 15. | ಆಷಾಢ | ಕೃ. | — | ಯೋಗಿನೀ ; |
| 16. | ,, | ಶು. | — | ಶಾಯಿನೀ ; |
| 17. | ಶ್ರಾವಣ | ಕೃ. | — | ಕಾಮಿಕಾ ; |
| 18. | ,, | ಶು. | — | ಪುತ್ರದಾ ; |

→

ಒಂದಕ್ಕೆ 'ಧನದಾ' ಎಂದೂ, ಇನ್ನೊಂದಕ್ಕೆ 'ಕಾಮದಾ' ಎಂದೂ, ಮತ್ತೊಂದಕ್ಕೆ 'ಪುತ್ರದಾ' ಎಂದೂ, ಮಗದೊಂದಕ್ಕೆ 'ನಿರ್ಜಲಾ' ಎಂದೂ ಹೆಸರು !

ಬಹುಮಂದಿ ದರಿದ್ರರು, ಬಹಳ ಜನ ಕಾಮಿಗಳು, ಮತ್ತು ಬಹಳ ಜನ ನಿಃಸಂತಾನರಾದವರು ಏಕಾದಶೀ ಮಾಡಿ ವೃದ್ಧರಾಗಿ ಹೋದರು ; ಮತ್ತು ಮೃತರೂ ಆದರು! ಆದರೆ, [ಅವರಿಗೆ] ಧನ, ಕಾಮನೆ, ಮತ್ತು ಪುತ್ರರು ಸಿಕ್ಕಲಿಲ್ಲ!

ಮತ್ತು ಯಾವಾಗ ಘಟಿಕಾ ಮಾತ್ರಕ್ಕೂ ನೀರು ಸಿಕ್ಕದಾದರೆ, ಮಾನವನು ವ್ಯಾಕುಲನಾಗಿ ಹೋಗುತ್ತಾನೋ, ಆ ಜ್ಯೇಷ್ಠ ಮಾಸದ ಶುಕ್ಲ ಪಕ್ಷದಲ್ಲಿ ವ್ರತಮಾಡುವವರಿಗೆ ಮಹಾ ದುಃಖವು ಪ್ರಾಪ್ತವಾಗುತ್ತದೆ. **ವಿಶೇಷವಾಗಿ ಬಂಗಾಳದಲ್ಲಿ ವಿಧವಾ ಸ್ತ್ರೀಯರೆಲ್ಲರಿಗೂ ಏಕಾದಶಿಯಂದು ಮಹಾ ದುರ್ದಶೆಯುಂಟಾಗುತ್ತದೆ.**

ಈ ನಿರ್ದಯನಾದ ಕಟುಕನಿಗೆ ಬರೆಯುವ ಕಾಲದಲ್ಲಿ, ಮನದಲ್ಲಿ ಸ್ವಲ್ಪವೂ ದಯೆ ಬಾರಲಿಲ್ಲ! ಇಲ್ಲದಿದ್ದರೆ, ನಿರ್ಜಲಾ ಏಕಾದಶಿಗೆ '**ಸಜಲಾ**' ಎಂದು ಹೆಸರಿಟ್ಟು, ಪುಷ್ಯಮಾಸದ ಶುಕ್ಲ ಪಕ್ಷದ ಏಕಾದಶಿಗೆ '**ನಿರ್ಜಲಾ**' ಎಂದು ಹೆಸರಿಟ್ಟಿದ್ದರೂ ಸ್ವಲ್ಪ ಸರಿಯಾಗುತ್ತಿತ್ತು!

**ಆದರೆ, ಈ ಪೋಪರಿಗೆ ದಯೆಯಿಂದ** ಏನು ಕೆಲಸ ?

**'ಯಾರಾದರೂ ಜೀವಿಸಿರಿ ಅಥವಾ ಸಾಯಿರಿ ; ಪೋಪರ ಹೊಟ್ಟೆಯನ್ನಂತೂ ಪೂರ್ಣವಾಗಿ ತುಂಬಿಸಿರಿ !'**

**ಈ ಪ್ರಮಾದಿಗಳ ಕಥನ-ಲೇಖನವನ್ನು ಯಾವನೂ ಕೂಡ ಪ್ರಮಾಣೀಕರಿಸಬಾರದು.**

### (ಸ್ವಾಸ್ಥ್ಯದ ದೃಷ್ಟಿಯಿಂದ ಉಪವಾಸದ ವಿಧಿ-ನಿಷೇಧ)

**ಗರ್ಭವತಿಯು, ಅಥವಾ ನವವಿವಾಹಿತೆಯಾದ ನಾರಿ, ಹುಡುಗರು ಅಥವಾ ಯುವಕರಾದ ಪುರುಷರಂತೂ, ಎಂದೂ ಉಪವಾಸ ಮಾಡಬಾರದು.**



---

→ 19. ಭಾದ್ರಪದ ಕೃ. — ಅಜಾ ;
20. ,, ಶು. — ಪದ್ಮಾ ;
21. ಆಶ್ವಯುಜ ಕೃ. — ಇಂದ್ರಾ ;
22. ,, ಶು. — ಪಾಪಾಂಕುಶಾ ;
23. ಕಾರ್ತಿಕ ಕೃ. — ರಮಾ ;
24. ,, ಶು. — ಪ್ರಬೋಧಿನೀ ;

—'ಸತ್ಯಾರ್ಥಪ್ರಕಾಶ', ಸ್ವಾಮೀ ವೇದಾನಂದ ಸಂಸ್ಕರಣ, ಪುಟ 812.—ಯು.ಮೀ.

ಆದರೆ, ಯಾರಾದರೂ ಮಾಡಬೇಕಾದರೂ ಕೂಡ, ಎಂದು ಅಜೀರ್ಣವಾಗಿರುವುದೋ, ಹಸಿವಾಗದೋ, ಆ ದಿನ ಶರಬತ್ತನ್ನು ಅಥವಾ ಹಾಲನ್ನು ಕುಡಿದು, ನಿರ್ವಹಿಸಬೇಕು.

ಯಾರು ಹಸಿವೆಯಿರುವಾಗ ಉಣ್ಣುವುದಿಲ್ಲವೋ, ಮತ್ತು ಯಾರು ಹಸಿವೆಯಿಲ್ಲದಾಗ ಭೋಜನ ಮಾಡುತ್ತಾರೋ, ಅವರಿಬ್ಬರೂ ರೋಗಸಾಗರದಲ್ಲಿ ಮುಳುಗಿ, ದುಃಖಪಡುತ್ತಾರೆ.

ಈಗ ಗುರು-ಶಿಷ್ಯ-ಮಂತ್ರೋಪದೇಶ ಮತ್ತು ಮತ-ಮತಾಂತರಗಳ ಚರಿತ್ರೆಗಳ ಸಮಾಚಾರವನ್ನು ಹೇಳುತ್ತೇವೆ—

## (ಲುಪ್ತ ವೇದ ಶಾಖೆಗಳಲ್ಲಿ ಮೂರ್ತಿಪೂಜೆ ಅಥವಾ ತೀರ್ಥಗಳಿರುವ ಕಲ್ಪನೆ)

ಪ್ರತಿಮಾಪೂಜಕರಾದ ಸಾಂಪ್ರದಾಯಿಕರು ಏನು ಪ್ರಶ್ನೆ ಮಾಡುತ್ತಾರೆಂದರೆ—

"ವೇದಗಳು ಅನಂತವಾಗಿವೆ*. ಋಗ್ವೇದಕ್ಕೆ 21, ಯಜುರ್ವೇದಕ್ಕೆ 100, ಸಾಮವೇದಕ್ಕೆ 1,000, ಮತ್ತು ಅಥರ್ವವೇದಕ್ಕೆ 9 ಶಾಖೆಗಳಿವೆ.† ಇವುಗಳಲ್ಲಿ ಸ್ವಲ್ಪ ಶಾಖೆಗಳು ಸಿಕ್ಕುತ್ತವೆ.‡ ಉಳಿದವು ಲುಪ್ತವಾಗಿ ಹೋಗಿವೆ. ಅವುಗಳಲ್ಲಿಯೇ

---

*'ಅನಂತಾ ವೈ ವೇದಾಃ'—ತೈತ್ತಿರೀಯ ಬ್ರಾಹ್ಮಣ (3.10.11.5)—ಯು. ಮೀ.

†ಮಹಾಭಾಷ್ಯ (1.1.1.) ವನ್ನು ನೋಡಿ. ಇಲ್ಲಿ ಎಣಿಸಿರುವುದು ಕೃಷ್ಣದ್ವೈಪಾಯನ ವ್ಯಾಸರ ಶಿಷ್ಯ-ಪ್ರಶಿಷ್ಯರಿಂದ ಪ್ರವಚನ ಮಾಡಲ್ಪಟ್ಟ ಶಾಖೆಗಳದು. ವ್ಯಾಸರಿಗಿಂತ ಪ್ರಾಚೀನವಾದ ಶಾಖೆಗಳು ಲುಪ್ತವಾಗಿ ಹೋದವು. ಉಪಲಬ್ಧ ಐತರೇಯ ಬ್ರಾಹ್ಮಣದ ಸಂಬಂಧ ಪ್ರಾಚೀನ ಐತರೇಯ ಶಾಖೆಯೊಂದಿಗಿತ್ತು. ಈ ಶಾಖೆ ಲುಪ್ತವಾಗಿಹೋಯಿತು. ಶಾಖೆಗಳ ಮತ್ತು ಬ್ರಾಹ್ಮಣಗಳ ಪ್ರವಚನವು ಬ್ರಹ್ಮಾನ ಸಮಯದಿಂದಲೇ ಆರಂಭವಾಗಿ, ಕೃಷ್ಣದ್ವೈಪಾಯನ ವ್ಯಾಸರ ಶಿಷ್ಯ-ಪ್ರಶಿಷ್ಯರ ತನಕ ನಡೆದು ಬಂದಿತು. ನೋಡಿರಿ, 'ಸಂಸ್ಕೃತ ವ್ಯಾಕರಣ ಶಾಸ್ತ್ರ ಕಾ ಇತಿಹಾಸ್', ಭಾಗ 1, ಪುಟ 250.—ಯು. ಮೀ.

‡ಉಪಲಬ್ಧ ಶಾಖೆಗಳು ಈ ರೀತಿ ಇವೆ—
ಋಗ್ವೇದದ—ಶಾಕಲ ಮತ್ತು ಶಾಂಖಾಯನ;
ಶುಕ್ಲಯಜುರ್ವೇದದ—ಮಾಧ್ಯಂದಿನ ಮತ್ತು ಕಾಣ್ವ;
ಕೃಷ್ಣಯಜುರ್ವೇದದ—ತೈತ್ತಿರೀಯ (=ಆಪಸ್ತಂಬೀ), ಮೈತ್ರಾಯಣೀ, ಕಾಠಕ, ಕಠ, ಕಪಿಷ್ಠಲ;
ಸಾಮವೇದದ—ಕೌಥುಮೀ ಮತ್ತು ರಾಣಾಯನೀ;
ಅಥರ್ವವೇದದ—ಶೌನಕ ಮತ್ತು ಪಿಪ್ಪಲಾದ.—ಯು. ಮೀ.

ಪ್ರತಿಮಾರ್ಚನೆಯು ಮತ್ತು ತೀರ್ಥಗಳ ಪ್ರಮಾಣವಿರಬಹುದು. ಇಲ್ಲದೆಯೇ ಇದ್ದಿದ್ದರೆ, ಪುರಾಣಗಳಲ್ಲಿ ಎಲ್ಲಿಂದ ಬರುತ್ತಿದ್ದಿತು ? ಯಾವಾಗ ಕಾರ್ಯವನ್ನು ನೋಡಿ, ಕಾರಣದ ಅನುಮಾನ ಉಂಟಾಗುತ್ತದೋ, ಆಗ ಪುರಾಣಗಳನ್ನು ನೋಡಿ, ಪ್ರತಿಮಾಪೂಜನದ ವಿಷಯ[1]ದಲ್ಲಿ ಸಂದೇಹವಾದರೂ ಏತಕ್ಕೆ ?"

## (ವೇದವೃಕ್ಷಕ್ಕೆ ವಿರುದ್ಧವಾಗಿ ಅದರ ಶಾಖೆ ಇರದು)

**ಉತ್ತರ:—ಶಾಖೆ ಯಾವ ವೃಕ್ಷದ್ದಾಗಿರುತ್ತದೋ, ಅದರಂತಯೇ ಇರುತ್ತದೆ; ವಿರುದ್ಧವಾಗಿ ಅಲ್ಲ. ಶಾಖೆ, ಬೇಕಾದರೆ ಚಿಕ್ಕದಾಗಿರಲೀ, ದೊಡ್ಡದಾಗಿರಲೀ, ಆದರೆ, ಅವುಗಳಲ್ಲಿ ವಿರೋಧವಿರಲಾರದು.**

ಹಾಗೆಯೇ, ಎಷ್ಟು ಶಾಖೆಗಳು ಸಿಕ್ಕುತ್ತವೋ, ಅವುಗಳಲ್ಲಿ ಯಾವಾಗ ಪಾಷಾಣ ಮೊದಲಾದುದರ ಪ್ರತಿಮೆಯು, ಮತ್ತು ಜಲ-ಸ್ಥಳ-ವಿಶೇಷ ತೀರ್ಥಗಳ ಪ್ರಮಾಣ ಸಿಕ್ಕುವುದಿಲ್ಲವೋ, ಆಗ ಆ ಲುಪ್ತಶಾಖೆಗಳಲ್ಲಿಯೂ ಕೂಡ ಇದ್ದಿರಲಾರದು.

**ಮತ್ತು ನಾಲ್ಕು ವೇದಗಳೂ ಪೂರ್ಣವಾಗಿ ಸಿಕ್ಕುತ್ತವೆ! ಅವುಗಳಿಗೆ ವಿರುದ್ಧವಾಗಿ ಶಾಖೆಗಳು ಎಂದಿಗೂ ಇರಲಾರವು.** ಮತ್ತು ಯಾವುವು ವಿರುದ್ಧವಾಗಿವೆಯೋ, ಅವುಗಳನ್ನು ಯಾವನೂ ಶಾಖೆಗಳೆಂದು ಸಿದ್ಧಪಡಿಸಲಾರನು. **ವಸ್ತುಸ್ಥಿತಿ ಹೀಗಿರುವಾಗ, ಪುರಾಣಗಳು ವೇದಗಳ [ಲುಪ್ತ] ಶಾಖೆಗಳಿಗೆ [ಅನುಸಾರವಾಗಿ] ಅಲ್ಲ! ಆದರೆ, ಸಾಂಪ್ರದಾಯಿಕ ಜನರು ಪರಸ್ಪರ ವಿರುದ್ಧವಾದ ರೂಪದಲ್ಲಿ ಗ್ರಂಥಗಳನ್ನು ರಚಿಸಿಟ್ಟಿದ್ದಾರೆ.**

ವೇದಗಳನ್ನು ನೀವು ಪರಮೇಶ್ವರಕೃತವೆಂದು ಒಪ್ಪುವಿರಾದರೆ, **ಆಶ್ವಲಾಯನರೇ ಮೊದಲಾದ** ಋಷಿ-ಮುನಿಗಳ ಹೆಸರಿನಿಂದ ಪ್ರಸಿದ್ಧವಾದ ಗ್ರಂಥಗಳನ್ನು ವೇದಗಳೆಂದೇಕೆ ಗ್ರಹಿಸುತ್ತೀರಿ ?

ಹೇಗೆ ಕೊಂಬೆಗಳನ್ನು ಮತ್ತು ಎಲೆಗಳನ್ನು ನೋಡುವುದರಿಂದ ಆರಳಿ, ಆಲ ಮತ್ತು ಮಾವು ಮೊದಲಾದ ಮರಗಳ ಗುರುತು ಸಿಕ್ಕುವುದೋ, ಹಾಗೆಯೇ ಋಷಿ-ಮುನಿಗಳಿಂದ ರಚಿತವಾದ ವೇದಾಂಗಗಳು, ನಾಲ್ಕು ಬ್ರಾಹ್ಮಣಗಳು, ಅಂಗಗಳು, ಉಪಾಂಗಗಳು ಮತ್ತು ಉಪವೇದಗಳು ಮೊದಲಾದುವುಗಳಿಂದ ವೇದಾರ್ಥವು ಗುರುತಿಸಲ್ಪಡುತ್ತದೆ. ಇದೇ ಕಾರಣದಿಂದ, ಈ ಗ್ರಂಥಗಳನ್ನು ಶಾಖೆಗಳೆಂದು ಅಂಗೀಕರಿಸಿದ್ದಾರೆ.

---

1. ಬಗೆಗೆ ಇರಬಹುದಾದ ಆದೇಶದಲ್ಲಿ.—ಅನು.

**ಯಾವುದು ವೇದವಿರುದ್ಧವಾಗಿದೆಯೋ, ಅದರ ಪ್ರಮಾಣ; ಮತ್ತು ಅನುಕೂಲವಾದುದರ ಅಪ್ರಮಾಣ, ಸಿದ್ಧವಾಗಲಾರದು.**[1]

ನೀವು ಅದೃಷ್ಟವಾದ[2] ಶಾಖೆಗಳಲ್ಲಿ ಪ್ರತಿಮೆ ಮೊದಲಾದುದರ ಪ್ರಮಾಣದ ಕಲ್ಪನೆಯನ್ನು ಮಾಡಿಕೊಳ್ಳುವಿರಾದರೆ, ಯಾವನಾದರೂ—

"ಲುಪ್ತವಾದ ಶಾಖೆಗಳಲ್ಲಿ ವರ್ಣಾಶ್ರಮಗಳ ವ್ಯವಸ್ಥೆ ತಲೆಕೆಳಗಾಗಿದ್ದಿತು. ಎಂದರೆ, ಅಂತ್ಯಜ ಮತ್ತು ಶೂದ್ರರ ಹೆಸರು ಬ್ರಾಹ್ಮಣರೆಂದೂ, ಮತ್ತು ಬ್ರಾಹ್ಮಣ ಮೊದಲಾದವರ ಹೆಸರು ಶೂದ್ರ, ಅಂತ್ಯಜ ಮೊದಲಾದವರೆಂದೂ;* ಹೋಗಬಾರದವಳ ಬಳಿ ಹೋಗುವುದು, ಮಾಡಬಾರದುದನ್ನು ಮಾಡುವುದು, ಸುಳ್ಳನ್ನಾಡುವುದು ಮೊದಲಾದುದು ಧರ್ಮವೆಂದೂ ; ಸತ್ಯಭಾಷಣ ಮೊದಲಾದುದು ಅಧರ್ಮವೆಂದೂ, ಬರೆದಿರಬಹುದು.", ಎಂಬ ಪಕ್ಷವನ್ನು ಹಿಡಿದಲ್ಲಿ, ನೀವು ಕೂಡ ನಾವು ಉತ್ತರ ಕೊಟ್ಟಂತೆಯೇ. ಎಂದರೆ—

'ವೇದಗಳಲ್ಲಿ ಮತ್ತು ಪ್ರಸಿದ್ಧವಾದ ಶಾಖೆಗಳಲ್ಲಿ ಬ್ರಾಹ್ಮಣ ಮೊದಲಾದವರನ್ನು† ಬ್ರಾಹ್ಮಣರೆಂದೂ, ಶೂದ್ರ ಮೊದಲಾದವರನ್ನು‡ ಶೂದ್ರರು ಮೊದಲಾದವರೆಂದೂ, ಬರೆದಿರುವಂತೆಯೇ, ಅದೃಷ್ಟವಾದ§ ಶಾಖೆಗಳಲ್ಲಿಯೂ ಬರೆದಿದೆ, ಎಂದು ಗ್ರಹಿಸಬೇಕು. ಇಲ್ಲವಾದರೆ, ವರ್ಣಾಶ್ರಮ ವ್ಯವಸ್ಥೆ ಮೊದಲಾದುವೆಲ್ಲಾ ವಿಕೃತವಾಗಿ ಹೋಗುವುವು', ಎಂದೇ ಉತ್ತರ ಕೊಡುವಿರಿ.

## (ಋಷಿಕೃತ ಗ್ರಂಥಗಳಲ್ಲೂ ಮೂರ್ತಿಪೂಜೆಯ ವಿಧಾನವಿಲ್ಲ)

ಒಳ್ಳೆಯದು ! ಜೈಮಿನಿ, ವ್ಯಾಸ, ಪತಂಜಲಿಗಳ ಕಾಲದವರೆಗಾದರೂ ಎಲ್ಲ ಶಾಖೆಗಳೂ ಇದ್ದುವೋ, ಅಥವಾ ಇಲ್ಲವೋ ? ಇದ್ದುವಾದರೆ, ನೀವು ಎಂದಿಗೂ

---

1. ಇದಕ್ಕೆ ಜೈಮಿನಿ ಆಚಾರ್ಯರ ಪ್ರಸಿದ್ಧ ನ್ಯಾಯವೇನೆಂದರೆ—'ವಿರೋಧೇ ತ್ವನಪೇಕ್ಷ್ಯಂ ಸ್ಯಾದಸತಿಹ್ಯನುಮಾನಮ್,' ಎಂದು. ಮೀಮಾಂಸಾ (1.3.2)—ಯು. ಮೀ.

2. ಎಂದರೆ, ಕಾಣಿಸದಿರುವ—ಅನು.

*ಅತ್ಯಂತ ಕೀಳು ಮಟ್ಟದವರ ಮತ್ತು, ಜ್ಞಾನವಿಮುಖರಾದವರ ಹೆಸರು ಬ್ರಾಹ್ಮಣರೆಂದೂ, ಬ್ರಹ್ಮಜ್ಞಾನಯುಕ್ತರು, ಕ್ಷಾತ್ರತೇಜೋಯುಕ್ತರು, ಕೃಷಿ–ವಾಣಿಜ್ಯ ಮೊದಲಾದ ವೃತ್ತಿಗಳಲ್ಲಿ ನಿರತರಾದವರು ಕೀಳು ಮಟ್ಟದವರು ಮತ್ತು ಮಂದಮತಿಗಳು, ಎಂದೂ ಅಭಿಪ್ರಾಯ.—ಅನು.

†ಬ್ರಹ್ಮಜ್ಞಾನ ಮೊದಲಾದುದನ್ನುಳ್ಳವರನ್ನು.—ಅನು.

‡ಜ್ಞಾನಹೀನರನ್ನು—ಅನು.

§ಎಂದರೆ, ಲುಪ್ತವಾದ—ಅನು.

ನಿಷೇಧ ಮಾಡಲಾರಿರಿ. ಮತ್ತು 'ಇರಲಿಲ್ಲ', ಎನ್ನುವಿರಾದರೆ, ಆ ಶಾಖೆಗಳ ಇರುವಿಕೆಗೆ ಪ್ರಮಾಣವೇನಿದೆ ?

ನೋಡಿರಿ ! ಜೈಮಿನಿಯು ಮೀಮಾಂಸಾಶಾಸ್ತ್ರದಲ್ಲಿ ಸಮಸ್ತ ಕರ್ಮಕಾಂಡ ವನ್ನೂ, ಪತಂಜಲಿಮುನಿಯು ಯೋಗಶಾಸ್ತ್ರದಲ್ಲಿ ಸಮಸ್ತ ಉಪಾಸನಾಕಾಂಡವನ್ನೂ, ಮತ್ತು ವ್ಯಾಸಮುನಿಯು ಶಾರೀರಕಸೂತ್ರಗಳಲ್ಲಿ ಸಮಸ್ತ ಜ್ಞಾನಕಾಂಡವನ್ನೂ ವೇದಾನುಕೂಲವಾಗಿ ಬರೆದಿದ್ದಾರೆ. ಅವುಗಳಲ್ಲಿ ಪಾಷಾಣ ಮೊದಲಾದುವುಗಳ ಪ್ರತಿಮೆಗಳ ಪೂಜನದ, ಅಥವಾ ಪ್ರಯಾಗ ಮೊದಲಾದ ತೀರ್ಥಗಳ ಹೆಸರುಗಳನ್ನು ಕೂಡ ಬರೆದಿಲ್ಲ!

ಬರೆಯುವರಾದರೂ ಎಲ್ಲಿಂದ ? ವೇದಗಳಲ್ಲಿ ಎಲ್ಲಿಯಾದರೂ ಇದ್ದಿದ್ದರೆ, ಎಂದಿಗೂ ಬರೆಯದೇ ಬಿಡುತ್ತಿರಲಿಲ್ಲ! ಆದುದರಿಂದ, ಲುಪ್ತಶಾಖೆಗಳಲ್ಲಿಯೂ ಕೂಡ ಈ ಪ್ರತಿಮಾಪೂಜನಾದಿಗಳ ಪ್ರಮಾಣವಿರಲಿಲ್ಲ.

### (ಎಲ್ಲ ಶಾಖೆಗಳೂ ವೇದಗಳಲ್ಲ)

ಈ ಎಲ್ಲಾ ಶಾಖೆಗಳೂ ವೇದಗಳಲ್ಲ! ಏಕೆಂದರೆ, ಇವುಗಳಲ್ಲಿ ಈಶ್ವರ ಕೃತವಾದ ವೇದಗಳ ಪ್ರತೀಕವನ್ನು* ಉದ್ಧರಿಸಿ, ವ್ಯಾಖ್ಯಾನವನ್ನೂ, ಮತ್ತು ಸಾಂಸಾರಿಕ ಜನರ ಇತಿಹಾಸ ಮೊದಲಾದುವನ್ನೂ ಬರೆದಿದ್ದಾರೆ. ಆದುದರಿಂದ, [ಈ ಶಾಖೆಗಳನ್ನು] ಎಂದಿಗೂ ವೇದಗಳಲ್ಲಿ [ಎಣಿಸಲು] ಸಾಧ್ಯವಿಲ್ಲ.

ವೇದಗಳಲ್ಲಿಯಾದರೋ, ಮಾನವರಿಗಾಗಿ ಕೇವಲ ವಿದ್ಯೆಯ ಉಪದೇಶವನ್ನು ಮಾಡಲಾಗಿದೆ! ಯಾವನೇ ಮಾನವನ ಹೆಸರು ಕೂಡ ಇಲ್ಲ.† ಆದುದರಿಂದ, ಪ್ರತಿಮಾಪೂಜನದ ಖಂಡನ ಎಲ್ಲ ರೀತಿಯಲ್ಲೂ ಸಿದ್ಧವಾಗಿದೆ.

---

*ವ್ಯಾಖ್ಯಾನಕ್ಕಾಗಿ ಪ್ರಸ್ತುತಪಡಿಸುವ ಯಾವುದೋ ವೇದಮಂತ್ರದ ಪ್ರಾರಂಭದ ಶಬ್ದಗಳ ಉದ್ಧರಣವನ್ನು 'ಪ್ರತೀಕ' ಎನ್ನುತ್ತಾರೆ.—ಅನು.

‡ಈ ಲಕ್ಷಣಗಳಿರುವ ಋಗ್ವೇದದ ಶಾಕಲ ಶಾಖೆಯನ್ನು, ಯಜುರ್ವೇದದ ಮಾಧ್ಯಂದಿನ ಶಾಖೆಯನ್ನು, ಸಾಮವೇದದ ಕೌಥುಮೀ ಶಾಖೆಯನ್ನು ಮತ್ತು ಅಥರ್ವವೇದದ ಶೌನಕ ಶಾಖೆಯನ್ನು ಮಾತ್ರ ಮೂಲವೇದವೆಂದು ಅಂಗೀಕರಿಸಲಾಗಿದೆ. ಮೂಲವೇದಕ್ಕೂ, ಶಾಖೆಗೂ ಇರುವ ವ್ಯತ್ಯಾಸವನ್ನು 'ಸಂಸ್ಕಾರವಿಧಿ' (ಕನ್ನಡ ಸಂಸ್ಕರಣ 1989)ಯ ಪರಿಶಿಷ್ಟ-೨ರಲ್ಲಿ ವಿಶದವಾಗಿ ತೋರಿಸಲಾಗಿದೆ.—ಸಂ.

## (ಮೂರ್ತಿ ಪೂಜೆಯಿಂದ ಶ್ರೀರಾಮಚಂದ್ರ ಮೊದಲಾದವರ ನಿಂದೆ ಮತ್ತು ಉಪಹಾಸ)

ನೋಡಿರಿ! ಪ್ರತಿಮಾಪೂಜನದಿಂದ ಶ್ರೀರಾಮಚಂದ್ರ, ಶ್ರೀಕೃಷ್ಣ, ನಾರಾಯಣ ಮತ್ತು ಶಿವ ಮೊದಲಾದವರ ಮಹಾನಿಂದೆ ಮತ್ತು ಅಪಹಾಸ್ಯವಾಗುತ್ತದೆ.* ಅವರು ಮಹಾರಾಜಾಧಿರಾಜರಾಗಿದ್ದರು. ಮತ್ತು ಅವರ ಪತ್ನಿಯರಾದ ಸೀತಾ ಮತ್ತು ರುಕ್ಮಿಣೀ, ಲಕ್ಷ್ಮೀ ಮತ್ತು ಪಾರ್ವತೀ ಮೊದಲಾದವರು ಮಹಾರಾಣಿಯರಾಗಿದ್ದರು, ಎಂಬುದನ್ನು ಎಲ್ಲರೂ ಬಲ್ಲರು.

ಆದರೆ, ಅವರ ಪ್ರತಿಮೆಗಳನ್ನು ದೇವಾಲಯ ಮೊದಲಾದೆಡೆ ಸ್ಥಾಪಿಸಿ, ಪೂಜಾರಿಗಳು ಅವರುಗಳ ಹೆಸರಿನ ಮೇಲೆ ಭಿಕ್ಷೆ ಬೇಡುತ್ತಾರೆ. ಎಂದರೆ, ಅವರನ್ನು ಭಿಕ್ಷುಕರನ್ನಾಗಿ ಮಾಡುತ್ತಾರೆ. ಹೇಗೆಂದರೆ—

"ಬನ್ನಿ ಮಹಾರಾಜರೇ! ಮಹಾಮಾನಸೀಯರೇ ! ಸೇಠರೇ ! ಸಾಹುಕಾರರೇ ! ದರ್ಶನಮಾಡಿರಿ. ಕುಳಿತುಕೊಳ್ಳಿರಿ. ಚರಣಾಮೃತವನ್ನು ತೆಗೆದುಕೊಳ್ಳಿರಿ. ಏನಾದರೂ ಕಾಣಿಕೆಯನ್ನು ಅರ್ಪಿಸಿರಿ.

"ಮಹೋದಯರೇ! ಸೀತಾ-ರಾಮರಿಗೆ, ರುಕ್ಮಿಣೀ-ಕೃಷ್ಣರಿಗೆ, ಅಥವಾ ರಾಧಾ-ಕೃಷ್ಣರಿಗೆ, ಲಕ್ಷ್ಮೀ-ನಾರಾಯಣರಿಗೆ, ಮತ್ತು ಪಾರ್ವತೀ-ಪರಮೇಶ್ವರರಿಗೆ ಮೂರು ದಿನಗಳಿಂದ ಬಾಲಭೋಗವಾಗಲೀ. ರಾಜಭೋಜನವಾಗಲೀ, ಎಂದರೆ ಉಪಹಾರವಾಗಲೀ, ಭೋಜನ-ಪಾನವಾಗಲೀ ಸಿಕ್ಕಿಲ್ಲ. ಇಂದು ಇವರುಗಳ ಹತ್ತಿರ ಏನೂ ಇಲ್ಲ!

"ರಾಣೀಸಾಹಿಬಾರವರೇ! ಸೇಠಾನಿಯವರೇ! ಸೀತೆ ಮೊದಲಾದವರಿಗೆ ಮೂಗು-ಬೊಟ್ಟು ಮೊದಲಾದುವನ್ನು ಮಾಡಿಸಿಕೊಡಿರಿ. ಖಾದ್ಯ-ಮೊದಲಾದುವನ್ನು ಕಳುಹಿಸುವಿರಾದರೆ, ರಾಮ, ಕೃಷ್ಣ ಮೊದಲಾದವರಿಗೆ ನೈವೇದ್ಯವನ್ನು ಸಮರ್ಪಿಸುವೆವು.

"ವಸ್ತ್ರಗಳೆಲ್ಲಾ ಹರಿದು ಹೋಗಿವೆ. ದೇವಾಲಯದ ಮೂಲೆಗಳು ಬಿದ್ದು ಹೋಗಿವೆ. ಮೇಲಿನಿಂದ ಸೋರುತ್ತದೆ. ಮತ್ತು ಏನು ಸ್ವಲ್ಪವಿತ್ತೋ, ಅದನ್ನು ದುಷ್ಟರಾದ ಕಳ್ಳರು ಎತ್ತಿಕೊಂಡು ಹೋದರು! ಸ್ವಲ್ಪವನ್ನು ಇಲಿಗಳು ಕಚ್ಚಿ-ಕಡಿದು ಹಾಕಿವೆ. ನೋಡಿರಿ! ಒಂದು ದಿನ ಇಲಿಗಳು ಎಂತಹ ಅನರ್ಥವನ್ನು ಮಾಡಿವೆಯೆಂದರೆ, ಇವರ ಕಣ್ಣುಗಳನ್ನೂ ಕೂಡ ಕಿತ್ತುಕೊಂಡು ಓಡಿಹೋದವು! ಈಗ

---

*ಇಲ್ಲಿ ಐತಿಹಾಸಿಕ ಮಹಾಪುರುಷರ ನಿರ್ದೇಶ ಮಾಡಲಾಗಿದೆ. ಕಲಿತ ಪೌರಾಣಿಕ ಪಾತ್ರಧಾರಿಗಳದ್ದಲ್ಲ.—ಸಂ.

ನಾವು ಬೆಳ್ಳಿಯ ಕಣ್ಣನ್ನು ಮಾಡಿಸಲಾರದೇ ಹೋದೆವು. ಆದುದರಿಂದ, ಕವಡೆಯ [ಕಣ್ಣನ್ನು] ಹೊಂದಿಸಿದ್ದೇವೆ", ಎಂದು ಹೇಳುತ್ತಾರೆ.

ರಾಮಲೀಲಾ* ಮತ್ತು ರಾಸಮಂಡಲದ [ವ್ಯವಸ್ಥೆಯನ್ನೂ] ಮಾಡಿಸುತ್ತಾರೆ. ಸೀತಾ–ರಾಮರು, ರಾಧಾ–ಕೃಷ್ಣರು ನರ್ತಿಸುತ್ತಿದ್ದಾರೆ! ರಾಜರು, ಮಹಂತರು ಮೊದಲಾದವರು, ಅವರ ಸೇವಕರು ಸುಖದಿಂದ ಕುಳಿತಿದ್ದಾರೆ. ದೇವಾಲಯದಲ್ಲಿ ಸೀತಾ, ರಾಮ ಮೊದಲಾದವರು ನಿಂತಿದ್ದಾರೆ. ಮತ್ತು ಪೂಜಾರಿಗಳು ಅಥವಾ ಮಹಂತರು ಆಸನಗಳಲ್ಲಿ ಅಥವಾ ಗದ್ದುಗೆಯ ಮೇಲೆ, ಒರಗುದಿಂಬನ್ನಿಟ್ಟುಕೊಂಡು, ಕುಳಿತುಕೊಳ್ಳುತ್ತಾರೆ.

ಅತ್ಯುಷ್ಣಕಾಲದಲ್ಲಿಯೂ ಕೂಡ ಬೀಗಹಾಕಿ, ಒಳಗಡೆ ಕೂಡಿಡುತ್ತಾರೆ. ಮತ್ತು ತಾವು ಹಿತಕರವಾದ ವಾಯುವಿನಲ್ಲಿ ಮಂಚ ಹಾಕಿ, ನಿದ್ರಿಸುತ್ತಾರೆ.

ಬಹಳ ಜನ ಪೂಜಾರಿಗಳು ತಮ್ಮ ನಾರಾಯಣನನ್ನು ಡಬ್ಬಿಯಲ್ಲಿ† ಮುಚ್ಚಿಟ್ಟು, ಮೇಲಿನಿಂದ ಬಟ್ಟೆ ಮೊದಲಾದುವನ್ನು ಸುತ್ತಿ, ಕೊರಳಿಗೆ ತಗುಲಿಹಾಕಿಕೊಳ್ಳುತ್ತಾರೆ. ಹೇಗೆ ತಾಯಿ ಕೋತಿ ತನ್ನ ಮರಿಯನ್ನು ಎದೆಗೆ ತಗುಲುಹಾಕಿಕೊಳ್ಳುತ್ತದೋ, ಹಾಗೆ ಪೂಜಾರಿಗಳ ಕೊರಳಿನಲ್ಲೂ ನೇತುಬಿದ್ದಿರುತ್ತವೆ.

ಯಾವಾಗ ಯಾವನಾದರೂ ಪ್ರತಿಮೆಯನ್ನು ಮುರಿದು ಹಾಕುತ್ತಾನೋ, ಆಗ ಹಾಹಾಕಾರ ಮಾಡುತ್ತಾ, ಎದೆ ಚಚ್ಚಿಕೊಂಡು—

"ಸೀತಾರಾಮರನ್ನು, ರಾಧಾಕೃಷ್ಣರನ್ನು, ಮತ್ತು ಶಿವಪಾರ್ವತಿಯರನ್ನು ದುಷ್ಟರು ಒಡೆದು ಹಾಕಿಬಿಟ್ಟರು", ಎಂದು ಅರಚುತ್ತಾರೆ.

"ಒಳ್ಳೆಯ ಶಿಲ್ಪಿಯಿಂದ ನಿರ್ಮಿಸಿದ ಅಮೃತಶಿಲೆಯ ಮತ್ತೊಂದು ಪ್ರತಿಮೆಯನ್ನು ಈಗ ತರಿಸಿ, ಸ್ಥಾಪನೆ ಮಾಡಿ. ಪೂಜಿಸಬೇಕು. ತುಪ್ಪವಿಲ್ಲದೇ, ನಾರಾಯಣನಿಗೆ ನೈವೇದ್ಯ ಅರ್ಪಿತವಾಗಲಾರದು. ಹೆಚ್ಚು ಸಾಧ್ಯವಾಗದಿದ್ದರೂ ಸ್ವಲ್ಪವನ್ನಾದರೂ

---

*ಉತ್ತರಭಾರತದಲ್ಲಿ ವಿಶೇಷವಾಗಿ ಉತ್ತರ ಪ್ರದೇಶದಲ್ಲಿ, ರಾಮ, ಲಕ್ಷ್ಮಣ, ಸೀತೆಯ ಪಾತ್ರಧಾರಿಗಳಾದ ಹುಡುಗರು-ಯುವಕರು ಬೈಲು ನಾಟಕದಲ್ಲಿ ಆಡುವ ಆಟಕ್ಕೆ, ನೃತ್ಯಕ್ಕೆ 'ರಾಮಲೀಲೆ', ಎಂದು ಹೆಸರು. ಬೇರೆಡೆಗಳಲ್ಲಿ ವಿಜಯದಶಮಿಯ ದಿನ ವಿಶಾಲಕಾಯ ರಾವಣನ ಕಾಗದ-ಬೊಂಬುಗಳ ಪ್ರತಿಮೆಯನ್ನು ನಿರ್ಮಿಸಿ, ಅದರ ದಹನ ಮಾಡುವುದಕ್ಕೂ 'ರಾಮಲೀಲೆ', ಎನ್ನುತ್ತಾರೆ.—ಸಂ.

†ಸಾಲಿಗ್ರಾಮ—ಅನು.

ಅವಶ್ಯವಾಗಿ ಕಳುಹಿಸಬೇಕು." ಈ ಮೊದಲಾದ ಕೆಲಸಗಳನ್ನು ಇವರ ಮೇಲೆ ಹಾಕುತ್ತಾರೆ.

ಮತ್ತು ರಾಸಕ್ರೀಡೆ ಅಥವಾ ರಾಮಲೀಲೆಯ ಕೊನೆಯಲ್ಲಿ ಸೀತಾರಾಮರಿಂದ ಅಥವಾ ರಾಧಾಕೃಷ್ಣರಿಂದ ಭಿಕ್ಷೆ ಬೇಡಿಸುತ್ತಾರೆ. ಎಲ್ಲಿ ಸಂತೆ–ಜಾತ್ರೆ ನಡೆಯುತ್ತದೋ, ಅಲ್ಲಿ ಹುಡುಗನ ತಲೆಯ ಮೇಲೆ ಕಿರೀಟವನ್ನಿಟ್ಟು, 'ಕೃಷ್ಣ'ನನ್ನಾಗಿ ಮಾಡಿ, ಮಾರ್ಗದಲ್ಲಿ ಕೂಡಿಸಿ, ಭಿಕ್ಷೆ ಬೇಡಿಸುತ್ತಾರೆ. ಈ ಮೊದಲಾದ ಪದ್ಧತಿಗಳು ಅದೆಷ್ಟು ಶೋಕದ ವಿಷಯವೆಂದು ತಾವುಗಳು ಆಲೋಚಿಸಿ ನೋಡಿರಿ !

ಅಲ್ಲಾ ! ಸೀತಾರಾಮರೇ ಮೊದಲಾದವರು ಇಂತಹ ದರಿದ್ರರು, ಮತ್ತು ಭಿಕ್ಷುಕರು ಆಗಿದ್ದರೋ, ಹೇಳಿ ! ಇದು ಅವರ ಅಪಹಾಸ್ಯ, ಹಾಗೂ ನಿಂದೆಯಲ್ಲವಾದರೆ, ಮತ್ತೇನು ? **ಇದರಿಂದ, ನಮ್ಮ ಮಾನನೀಯ ಪುರುಷರ ಮಹಾನಿಂದೆಯಾಗುತ್ತದೆ!**

ಯಾವಾಗ ಇವರುಗಳು ಇದ್ದರೋ, ಆಗ ಸೀತೆ, ರುಕ್ಮಿಣೀ, ಲಕ್ಷ್ಮೀ ಮತ್ತು ಪಾರ್ವತಿಯರನ್ನು, ದಾರಿಯಲ್ಲಿ ಅಥವಾ ಯಾವುದಾದರೂ ಮನೆಯಲ್ಲಿ ನಿಲ್ಲಿಸಿ, ಪೂಜಾರಿಗಳು—

'ಬನ್ನಿರಿ, ಇವರ ದರ್ಶನಮಾಡಿರಿ; ಮತ್ತು ಸ್ವಲ್ಪ ಕಾಣಿಕೆ-ಪೂಜೆಯನ್ನು ಸಲ್ಲಿಸಿರಿ.', ಎಂದು ಹೇಳಿದ್ದಿದ್ದರೆ, ಸೀತಾರಾಮರೇ ಮೊದಲಾದವರು ಈ ಮೂರ್ಖರ ಕಥನದಂತೆ ಇಂತಹ ಕೆಲಸವನ್ನೆಂದೂ ಮಾಡುತ್ತಿರಲಿಲ್ಲ; ಮತ್ತು ಮಾಡಲು ಬಿಡುತ್ತಲೂ ಇರಲಿಲ್ಲ! **ಯಾವನಾದರೂ ಅವರಿಗೆ ಇಂತಹ ಅಪಹಾಸ್ಯವನ್ನು ಮಾಡುತ್ತಿದ್ದಲ್ಲಿ, ಅವನಿಗೆ ಶಿಕ್ಷೆ ಕೊಡದೇ ಬಿಡುತ್ತಿದ್ದರೇನು ?**

ಅಹುದು ! ಅವರಿಂದಲೇನೋ, ಶಿಕ್ಷೆ ಪಡೆಯಲಿಲ್ಲ! **ಆದರೆ, ಇವರ ಕರ್ಮಗಳೇ ಈ ಪೂಜಾರಿಗಳಿಗೆ ಬಹು ಮಂದಿ ಪ್ರತಿಮಾವಿರೋಧಿಗಳಿಂದ* 'ಪ್ರಸಾದ' ವನ್ನು ಕೊಡಿಸಿಯೇ ತೀರಿದುವು! ಮತ್ತು ಈಗಲೂ ಕೂಡ ಸಿಕ್ಕುತ್ತಲಿದೆ !**

**ಮತ್ತು ಯಾವ ಕಾಲದವರೆಗೆ ಈ ಕುಕರ್ಮವನ್ನು ಬಿಡುವುದಿಲ್ಲವೋ, ಅವರೆಗೂ ಸಿಕ್ಕುತ್ತಲೇ ಇರುವುದು!**

---

*ಮುಸಲ್ಮಾನರು ತಮ್ಮನ್ನು 'ಬುತ್‌ಶಿಕನ್', ಎಂದರೆ ಮೂರ್ತಿಭಂಜಕರೆಂದೂ, ಹಿಂದುಗಳನ್ನು 'ಬುತ್‌ಪರಸ್ತ್', ಎಂದರೆ ಮೂರ್ತಿಪೂಜಕರೆಂದೂ ಕರೆಯುತ್ತಾರೆ.—ಸಂ.

ಆರ್ಯಾವರ್ತಕ್ಕೆ ಪ್ರತಿದಿನವೂ ಮಹಾಹಾನಿ ; ಶಿಲೆ ಮೊದಲಾದುದರ ಪ್ರತಿಮೆಗಳ ಪೂಜಕರಿಗೆ ಪರಾಜಯು ಈ ಕರ್ಮಗಳ ಪರಿಣಾಮವಾಗಿಯೇ ಆಗುತ್ತಿದೆ,* ಎನ್ನುವುದರಲ್ಲಿ ಸಂದೇಹವೇನಿದೆ ?

ಏಕೆಂದರೆ, ಪಾಪದ ಫಲ ದುಃಖವಾಗಿದೆ!

ಇದೇ ಶಿಲೆ ಮೊದಲಾದ ಪ್ರತಿಮೆಗಳ ಮೇಲಿನ ನಂಬಿಕೆಯಿಂದ, ಬಹಳ ಹಾನಿಯುಂಟಾಗಿಬಿಟ್ಟಿದೆ. ಬಿಡುವುದಿಲ್ಲವಾದರೆ, ಪ್ರತಿ ದಿನವೂ ಹೆಚ್ಚು-ಹೆಚ್ಚಾಗಿಯೇ ಆಗುತ್ತಾ ಹೋಗುವುದು !

## (ವಾಮಮಾರ್ಗಿಗಳ ಮಂತ್ರ ಮತ್ತು ಮಾರಣ-ಮೋಹನ ಮೊದಲಾದುವುಗಳ ಸಮೀಕ್ಷೆ)

ಇವರುಗಳಲ್ಲಿ† 'ವಾಮಮಾರ್ಗಿ'ಗಳು ಬಹುದೊಡ್ಡ ಅಪರಾಧಿಗಳು! ಯಾವಾಗ ಇವರು ಶಿಷ್ಯನನ್ನು ದೀಕ್ಷಿತನನ್ನಾಗಿ ಮಾಡುತ್ತಾರೋ, ಆಗ ಸಾಧಾರಣನಾದವನಿಗೆ—

"ದಂ ದುರ್ಗಾಯೈ ನಮಃ । ಭಂ ಭೈರವಾಯ ನಮಃ ।
ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ ॥"

ಈ ಮೊದಲಾದ ಉಪದೇಶಗಳನ್ನು ಮಾಡಿಬಿಡುತ್ತಾರೆ. ಮತ್ತು ಬಂಗಾಳದಲ್ಲಿ,‡ ವಿಶೇಷವಾಗಿ 'ಏಕಾಕ್ಷರೀ ಮಂತ್ರೋಪದೇಶ'ವನ್ನು ಮಾಡುತ್ತಾರೆ.

---

*ಈ ಬಗ್ಗೆ ಮುಸ್ಲಿಮರಿಂದ ಸಿಂಧು ಪ್ರದೇಶದ ಪ್ರವೇಶದೊಂದಿಗೆ ಆರಂಭವಾದ ಭಾರತದ ಇತಿಹಾಸದ ಅಧ್ಯಯನ ಮಾಡಿ.—ಸಂ.

†ಎಂದರೆ, ಮೂರ್ತಿಪೂಜಕರಲ್ಲಿ.—ಸಂ.

‡ಭಾರತದಲ್ಲಿ ವಾಮಮಾರ್ಗಿಗಳ ಪ್ರಧಾನಕೇಂದ್ರ ಬಂಗಾಳವಾಗಿದ್ದಿತು. ಶಾಕ್ತರು ಈಗಲೂ ಅಲ್ಲಿಯೇ ಪ್ರಬಲರಾಗಿದ್ದಾರೆ. ಈ ಶಾಕ್ತ ಸಂಸ್ಕೃತಿಯೇ ಅಲ್ಲಿ ಈಗಲೂ ಪ್ರಚಲಿತವಾಗಿದೆ. ನಂತರ, ವೈಷ್ಣವ ಸಂಸ್ಕೃತಿಯು ಅದರೊಡನೆ ಬೆರೆತು, ಅದನ್ನು ಸ್ವಲ್ಪ ಸೌಮ್ಯವನ್ನಾಗಿ ಮಾಡಿತು.

ವಾಮಮಾರ್ಗದ ಉಗಮ ಸ್ಥಾನ ಟಿಬೆಟ್! ಬಂಗಾಳದಿಂದ ಹರಡಿದ ವಾಮಮಾರ್ಗವು ತನ್ನ ವಿವಿಧ ರೂಪಗಳಲ್ಲಿ ಅಸ್ಸಾಂ ಮುಂತಾದ ಪೂರ್ವೀ ಭಾರತವನ್ನು ವ್ಯಾಪಿಸಿ, ಉತ್ತರ ಪ್ರದೇಶ,-ಕಾಶ್ಮೀರಗಳಲ್ಲಿನ ಹಿಮಾಲಯದ ಪರ್ವತೀಯ ಕೇಂದ್ರಗಳಲ್ಲಿ ಮನೆಮಾಡಿ, ರಾಜಸ್ಥಾನದ ಒಳಭಾಗಗಳಲ್ಲಿ ಅಲ್ಲಲ್ಲಿ ನೆಲೆ ಬಿಟ್ಟು, ಮಹಾರಾಷ್ಟ್ರ, ಉತ್ತರ ಕರ್ನಾಟಕ, ಆಂಧ್ರ, ಒರಿಸ್ಸಾ ಮತ್ತು ಮಧ್ಯ ಪ್ರದೇಶದ ನರ್ಮದಾತೀರ ಇವುಗಳಲ್ಲಿ ಅಲ್ಲಲ್ಲಿ ಕೇಂದ್ರಗಳನ್ನು ಸ್ಥಾಪಿಸಿ, ಈಗ ತೆರೆಮರೆಯಲ್ಲಿ ನಿಂತಿದೆ. —ಸಂ.

ಉದಾಹರಣೆಗಾಗಿ—

**'ಹ್ರೀಂ ಶ್ರೀಂ, ಕ್ಲೀಂ".*** ಈ ಮೊದಲಾದುವು!

ಮತ್ತು ಧನಾಢ್ಯರಿಗೆ ಪೂರ್ಣಾಭಿಷೇಕ ಮಾಡುತ್ತಾರೆ. ಇದೇ ರೀತಿ, ದಶ ಮಹಾ ವಿದ್ಯೆಗಳ ಮಂತ್ರವಿದೆ :—

**'ಹ್ರಾಂ ಹ್ರೀಂ ಹ್ರೂಂ ಬಗುಲಾಮುಖ್ಯೈ ಫಟ್ ಸ್ವಾಹಾ' ॥**[1]

ಒಂದೊಂದೆಡೆ—

**'ಹ್ರೂಂ ಫಟ್ ಸ್ವಾಹಾ' ॥**[2]

ಮತ್ತು ಮಾರಣ, ಮೋಹನ, ಉಚ್ಚಾಟನ, ವಿದ್ವೇಷಣ, ವಶೀಕರಣ ಮೊದಲಾದ ಪ್ರಯೋಗಗಳನ್ನು ಮಾಡುತ್ತಾರೆ.

ಆದರೆ, ಮಂತ್ರದಿಂದಲಂತೂ ಏನೂ ಆಗುವುದಿಲ್ಲ! ಆದುದರಿಂದ, ಕ್ರಿಯೆಯಿಂದ ಎಲ್ಲವನ್ನೂ ಮಾಡುತ್ತಾರೆ!

ಯಾವಾಗ ಯಾವನನ್ನಾದರೂ ಕೊಲ್ಲುವ ಪ್ರಯೋಗವನ್ನು ಮಾಡುತ್ತಾರೋ, ಆಗ ಇತ್ತ ಮಾಡಿಸುವವನಿಂದ ಧನವನ್ನು ತೆಗೆದುಕೊಂಡು, ಯಾವನನ್ನು ಕೊಲ್ಲಬಯಸುತ್ತಾರೋ, ಅವನ ಬೊಂಬೆಯನ್ನು ಹಿಟ್ಟಿನಿಂದ ಅಥವಾ ಮಣ್ಣಿನಿಂದ ರಚಿಸಿಕೊಳ್ಳುತ್ತಾರೆ. ಅದರ ಎದೆಯಲ್ಲಿ, ಹೊಕ್ಕಳಿನಲ್ಲಿ, ಕೊರಳಿನಲ್ಲಿ ಚೂರಿಗಳನ್ನು ತೂರಿಸುತ್ತಾರೆ. ಕಣ್ಣುಗಳು, ಕೈಗಳು, ಪಾದಗಳಲ್ಲಿ ಮೊಳೆಗಳನ್ನು ಬಡಿಯುತ್ತಾರೆ.

ಆ ಮೇಲೆ, ಭೈರವನ ಅಥವಾ ದುರ್ಗೆಯ ಪ್ರತಿಮೆಯನ್ನು ನಿರ್ಮಿಸಿ, ಕೈಯಲ್ಲಿ ತ್ರಿಶೂಲವನ್ನು ಕೊಟ್ಟು, ಅದರ ಹೃದಯದ ಮೇಲೆ ಚುಚ್ಚುತ್ತಾರೆ.

ಒಂದು ವೇದಿಯನ್ನು ರಚಿಸಿ, ಮಾಂಸ ಮೊದಲಾದುದರ ಹೋಮವನ್ನು ಮಾಡತೊಡಗುತ್ತಾರೆ.

---

*ಶಾವರ ತಂತ್ರ, ಬಂ. ಪ್ರಕೀ, ಅ.-44—ಅನು.

1. ಶಾವರ ತಂತ್ರ ; ಪ್ರ. 41—ಅನು.

2. ಕಾಮರತ್ನ ತಂತ್ರ; ಬೀಜ ಮಂತ್ರ 4.—ಅನು.

ಮತ್ತು ಆ ಕಡೆ, ದೂತರು ಮೊದಲಾದವರನ್ನು ಕಳುಹಿಸಿ, ಅವನನ್ನು ವಿಷ ಮೊದಲಾದುವರಿಂದ ಕೊಲ್ಲುವ ಉಪಾಯವನ್ನು ಮಾಡುತ್ತಾರೆ.*

ತಮ್ಮ ಪುರಶ್ಚರಣದ ಮಧ್ಯೆಯೇ ಅವನನ್ನು ಕೊಂದುಬಿಟ್ಟರೆ, ತಾವು ಭೈರವ-ದೇವಿಯರ ಸಿದ್ಧಿ ಪಡೆದವರು, ಎಂದು ಹೇಳಿಕೊಳ್ಳುತ್ತಾರೆ.

'ಭೈರವೋ ಭೂತನಾಥಶ್ಚ'—ಈ ಮೊದಲಾದ ಪಾಠಗಳನ್ನು ಪಠಿಸುತ್ತಾರೆ!

'ಮಾರಯ-ಮಾರಯ, ಉಚ್ಚಾಟಯ-ಉಚ್ಚಾಟಯ, ವಿದ್ವೇಷಯ-ವಿದ್ವೇಷಯ, ಛಿಂಧಿ-ಛಿಂಧಿ, ಭಿಂಧಿ-ಭಿಂಧಿ, ವಶೀಕುರು-ವಶೀಕುರು, ಖಾದಯ-ಖಾದಯ, ಭಕ್ಷಯ-ಭಕ್ಷಯ, ತ್ರೋಟಯ-ತ್ರೋಟಯ, ನಾಶಯ-ನಾಶಯ, ಮಮ ಶತ್ರೂನ್ ವಶೀಕುರು-ವಶೀಕುರು, ಹುಂ ಫಟ್ ಸ್ವಾಹಾ॥†

ಈ ಮೊದಲಾದ ಮಂತ್ರಗಳನ್ನು‡ ಜಪಿಸುತ್ತಾರೆ.

---

*ಸುಮಾರು 40 ವರ್ಷಗಳ ಹಿಂದೆ, ಬೆಂಗಳೂರನ್ನೇ ನಡುಗಿಸುವಂತಹ ಘಟನೆ ನಡೆಯಿತು. ರಿಜರ್ವ್ ಬ್ಯಾಂಕಿನ ಗುಮಾಸ್ತೆಯಾಗಿದ್ದ ಬಿ.ಎನ್. ಗೋಪಾಲರಾಯನು ಲೇವಾದೇವಿ ವ್ಯವಹಾರಗಳಲ್ಲಿ ಚಾತುರ್ಯವನ್ನು ಗಳಿಸಿ, ಬ್ಯಾಂಕಿಗೆ ರಾಜೀನಾಮೆಯಿತ್ತು, ಸ್ವಂತ ವ್ಯವಹಾರವನ್ನು ಆರಂಭಿಸಿ, ಹೆಚ್ಚು-ಹೆಚ್ಚು ಬಡ್ಡಿ ಕೊಡುತ್ತಾ, 7ಕೋಟಿ ರೂಪಾಯಿಗಳ ವ್ಯವಹಾರವನ್ನು ಸಾಧಿಸಿದನು. ಬಡ್ಡಿಯ ದುರಾಸೆಗೀಡಾಗಿ, ಮೈಸೂರು ರಾಜ್ಯದ ದೊಡ್ಡ-ದೊಡ್ಡ ಆಸಾಮಿಗಳು ಗೋಪಾಲರಾಯನ ಬಲೆಗೆ ಸಿಕ್ಕಿಹಾಕಿಕೊಂಡರು. ಕೊನೆಗೆ ಗೋಪಾಲರಾಯನು ದಿವಾಳಿಯಾಗಿ, ಎಲ್ಲರನ್ನೂ ಮುಳುಗಿಸಿಬಿಟ್ಟನು!

ಈ ಬಗ್ಗೆ ತನಿಖೆ ಮಾಡಲು ಮೈಸೂರು ಸರ್ಕಾರವು ಸಮಿತಿಯೊಂದನ್ನು ನೇಮಿಸಿತು. ಆದಕ್ಕೆ ಅಧ್ಯಕ್ಷರಾಗಿ ಜಸ್ಟಿಸ್ ಮೇದಪ್ಪ ನಿಯುಕ್ತರಾದರು. ಈ ತನಿಖೆಯ ಕಾರ್ಯಕಲಾಪಗಳ ರೀತಿಯನ್ನು ಬೆಂಗಳೂರಿನ ಪ್ರಸಿದ್ಧ ವಕೀಲರಾದ ಶ್ರೀ ಎಲ್. ಎಸ್. ರಾಜು ಟೀಕಿಸಿದರು. ನ್ಯಾಯಾಲಯದ ಅಪಮಾನ ಮಾಡಿದುದಕ್ಕಾಗಿ ರಾಜು ಅವರಿಗೆ ಶಿಕ್ಷೆಯಾಯಿತು. ಅದಲ್ಲದೇ, ಒಬ್ಬ ದೊಡ್ಡ ಮನುಷ್ಯರ ಸಂಬಂಧದಲ್ಲಿ 'ಉಯಿಲು' (Will) ರಚಿಸಿ, ಅವರ ಚರಾಸ್ತಿಯಲ್ಲಿ ಸಾವಿರಾರು ರೂಪಾಯಿಗಳಷ್ಟು ಹಣವನ್ನು ಲಪಟಾಯಿಸಿದ್ದನ್ನು ತಿಳಿದ ಜಸ್ಟಿಸ್ ಮೇದಪ್ಪನವರು ಹಿಂದಿನ ಲೆಕ್ಕಪತ್ರಗಳನ್ನು ತೆಗೆಸಿ ತನಿಖೆ ಮಾಡಿಸುತ್ತಿದ್ದರು. ಇದನ್ನು ತಿಳಿದ ರಾಜು ಕ್ರುದ್ಧರಾಗಿ, ಮೇದಪ್ಪನವರನ್ನು ಕೊಲ್ಲಲು ಮೇಲೆ ಹೇಳಿದಂತೆ ತಾಂತ್ರಿಕ ಪ್ರಯೋಗವನ್ನು ಮಾಡಿಸಿದರು. ಜೊತೆಗೆ ಜಸ್ಟಿಸ್ ಮೇದಪ್ಪನವರ ಕೆಲಸಗಾರರ ಮುಖಾಂತರ ಅವರು ಕುಡಿಯುವ ಚಹಾಗೆ ವಿಷ ಪ್ರಯೋಗವನ್ನು ಮಾಡಿಸಿದರು. ಆದರೆ, ಚಹಾಪಾನಕ್ಕೆ ಮೊದಲೇ ಅಡಿಗೆಯವನು ಇದನ್ನು ಕಂಡುಹಿಡಿದು, ಮೇದಪ್ಪನವರಿಗೆ ತಿಳಿಸಿಬಿಟ್ಟನು. ಮತ್ತೆ, ರಾಜು ಅವರಿಗೆ ಕಠಿಣ ಶಿಕ್ಷೆಯಾಯಿತು. ಅಲ್ಲಿಗೆ ರಾಜು ಅವರ ಭಾಗ್ಯಸೂರ್ಯನ ಅಸ್ತವಾಯಿತು.—ಸಂ.

†ಕಾಮರತ್ನ ತಂತ್ರ, ಉಚ್ಚಾಟನ ಪ್ರಕರಣ 5-7—ಅನು

‡ವಸ್ತುತಃ ಇವು ಮಂತ್ರಗಳೇ ಅಲ್ಲ ; ಸ್ವಂತ ಉದ್ಗಾರಗಳು. ಅನು.

ಮದ್ಯ–ಮಾಂಸ ಮೊದಲಾದುವನ್ನು ಯಥೇಷ್ಟವಾಗಿ ಕುಡಿಯುತ್ತಾರೆ–ತಿನ್ನುತ್ತಾರೆ! ಹುಬ್ಬುಗಳ ನಡುವೆ ಕುಂಕುಮದ ರೇಖೆಯನ್ನಿಡುತ್ತಾರೆ!

ಆಗಾಗ ಕಾಳೀ ಮೊದಲಾದವರಿಗಾಗಿ ಯಾವನಾದರೂ ಮಾನವನನ್ನು ಹಿಡಿದು, ಕೊಂದು, ಹೋಮ ಮಾಡಿ, ಅವನ ಮಾಂಸವನ್ನು ಸ್ವಲ್ಪ-ಸ್ವಲ್ಪ ತಿಂದುಬಿಡುತ್ತಾರೆ!*

---

*ಈ ಸಂದರ್ಭದಲ್ಲೇ, ಉತ್ತರ ಪ್ರದೇಶದ ಶಾಹಜಹಾಂಪುರದ ಜಿಲ್ಲೆಯ ಚಂದಾಪುರ್ ಮೇಳದಲ್ಲಿ (1877 ಇಸವಿ) ಭಾಗವಹಿಸಿದ ನಂತರ, ಒಂದು ದಿನ ಸ್ವಾಮೀ ದಯಾನಂದರು ತಮ್ಮ ಸ್ವಂತ ಅನುಭವವನ್ನು ಮಿತ್ರರೊಡನೆ ಈ ರೀತಿ ವರ್ಣಿಸುತ್ತಾರೆ.—

"ಒಂದು ಸಲ, ನಾನು ಯಾವಾಗ ಏಕಾಂಗಿಯಾಗಿ ಸಂಚರಿಸುತ್ತಿದ್ದೆನೋ, ಆಗ ಶಾಕ್ತರು ವಾಸಿಸುವ ಒಂದು ಸ್ಥಾನಕ್ಕೆ ಬಂದೆ. ಅವರು ನನಗೆ ಬಹಳ ಸೇವೆ–ಸತ್ಕಾರ ಮಾಡಿದರು. ಕೆಲವು ದಿನಗಳ ನಂತರ, ನಾನು ಅಲ್ಲಿಂದ ಹೊರಡಲು ಸಿದ್ಧನಾದಾಗ ಅವರು ಅತ್ಯಾಗ್ರಹದಿಂದ ನನ್ನನ್ನು ಇನ್ನಷ್ಟು ದಿನ ಅಲ್ಲಿ ಉಳಿಸಿಕೊಂಡರು. ಭಕ್ತಿಭಾವದಿಂದ, ಅವರು ಹೀಗೆ ಮಾಡಿದ್ದಾರೇನೋ, ಎಂದು ನಾನು ಭಾವಿಸಿದೆ. ನಂತರ, ಅವರ ಉತ್ಸವದ ದಿನ ಬಂದಿತು. ಅವರು ನನ್ನನ್ನು ದೇವಿಯ ಮಂದಿರಕ್ಕೆ ಬರಲು ಆಹ್ವಾನಿಸಿದರು. ನಾನು ಒಲ್ಲೆನೆಂದೆ. ಅವರು ನನ್ನ ಕಾಲುಗಳನ್ನು ಹಿಡಿದು ಕೊಂಡು, 'ನಾನು ಬರಲೇಬೇಕೆಂದೂ, ಇಲ್ಲದಿದ್ದರೆ, ಎಲ್ಲರ ಉತ್ಸಾಹ ಭಂಗವಾಗುವುದೆಂದೂ ; ಬೇಕಾದರೆ, ನಾನು ಮೂರ್ತಿಗೆ ನಮಸ್ಕರಿಸುವುದು ಅವಶ್ಯಕವಲ್ಲವೆಂದೂ', ಗೋಗರೆದರು. ವಿವಶನಾಗಿ ನಾನು ದೇವಿಯ ಮಂದಿರಕ್ಕೆ ಹೋಗಬೇಕಾಯಿತು.

ಮಂದಿರದ ಅಂಗಳದಲ್ಲಿ ಹೋಮ ನಡೆಯುತ್ತಿತ್ತು. ನನಗೆ ದುರ್ಗಾಪ್ರತಿಮೆಯನ್ನು ತೋರಿಸುವ ನೆವದಿಂದ, ನನ್ನನ್ನು ಕರೆದೊಯ್ದರು. ವಿಗ್ರಹದ ಬಳಿಯೇ ನಗ್ನ ಖಡ್ಗವನ್ನು ಕೈಯಲ್ಲಿ ಹಿಡಿದ ಬಲಿಷ್ಠ ವ್ಯಕ್ತಿಯೊಬ್ಬನು ನಿಂತಿದ್ದನು. ಜನರು—'ಮಹಾತ್ಮರೇ! ಮಾತೆಯ ಮುಂದೆ ಬಗ್ಗಿ ಅವಶ್ಯವಾಗಿ ನಮಸ್ಕಾರ ಮಾಡಿರಿ', ಎಂದು, ಹೇಳತೊಡಗಿದರು. "ಈ ದುರಾಶೆಯ ಅಪೇಕ್ಷೆಯನ್ನು ನನ್ನಲ್ಲಿಡಬೇಡಿ", ಎಂದು ನಾನು ಸ್ಪಷ್ಟವಾಗಿ ಹೇಳಿದೆ. ನನ್ನ ಈ ಮಾತಿನಿಂದ ಪೂಜಾರಿಗೆ ಕೋಪ ಬಂದಿತು. ಅವನು ಹತ್ತಿರ ಬಂದು, ನನ್ನ ಕುತ್ತಿಗೆಯನ್ನು ಹಿಡಿದು, ಬಲಾತ್ಕಾರವಾಗಿ ಬಗ್ಗಿಸತೊಡಗಿದನು. ಈ ವರ್ತನೆಯಿಂದ ವಿಸ್ಮಿತನಾಗಿ, ನಾನು ಕಣ್ಣೆತ್ತಿ ನೋಡುವಲ್ಲಿಯೇ, ಖಡ್ಗಧಾರಿಯು ನನ್ನ ಬಳಿ ಬಂದು ಖಡ್ಗದ ಪ್ರಯೋಗವನ್ನು ನನ್ನ ಕುತ್ತಿಗೆಯ ಮೇಲೆ ಮಾಡುವುದರಲ್ಲಿದ್ದುದನ್ನು ಕಂಡೆನು.

ತತ್‌ಕ್ಷಣ ಸಾವಧಾನನಾಗಿ ನಾನು ಮೇಲೆಗರಿ, ಅವನ ಕೈಯಿಂದ ಖಡ್ಗವನ್ನು ಕಸಿದುಕೊಂಡೆನು. ನನ್ನ ಎಡಗೈಯ ಹೊಡೆತದಿಂದಲೇ ಪೂಜಾರಿಯು ಮಂದಿರದ ಗೋಡೆಗೆ ಡಿಕ್ಕಿ ಹೊಡೆದನು. ಖಡ್ಗವನ್ನು ಕೈಯಲ್ಲಿ ಹಿಡಿದುಕೊಂಡೇ ನಾನು ಅಂಗಳಕ್ಕೆ ಬಂದೆ. ಆಗ ಅಂಗಳದಲ್ಲಿ ನೆರೆದಿದ್ದವರೆಲ್ಲರೂ ಕೊಡಲಿ, ಚೂರಿ ಮೊದಲಾದ ಶಸ್ತ್ರಗಳನ್ನು ತೆಗೆದುಕೊಂಡು ನನ್ನನ್ನು ಮುತ್ತಿದರು. ಬಾಗಿಲಿನ ಕಡೆ ನೋಡಿದಾಗ, ಅದಕ್ಕೆ ಬೀಗ ಬಿದ್ದಿತ್ತು. ಈ ಬಲಿದಾನದಿಂದ ನನ್ನನ್ನು ರಕ್ಷಿಸಿಕೊಳ್ಳಲು, ನಾನು ಕೂಡಲೇ ಮೇಲೆಗರಿ, ಗೋಡೆಯನ್ನು ಹತ್ತಿಬಿಟ್ಟೆ. ಮತ್ತು ಆಚೆಗೆ ಜಿಗಿದು ಓಡಿಬಿಟ್ಟೆ. ಹತ್ತಿರದ ಕಾಡೊಂದರಲ್ಲಿ ಹಗಲೆಲ್ಲಾ ಬಚ್ಚಿಟ್ಟುಕೊಂಡಿದ್ದು ಕೂತಿದ್ದೆ. ಕತ್ತಲಾದೊಡನೆಯೇ, ರಾತ್ರಿಯಲ್ಲೇ ಬೇರೆ ಗ್ರಾಮವನ್ನು ಸೇರಿಬಿಟ್ಟೆ. ಅಂದಿನಿಂದ, ನಾನು ಶಾಕ್ತರನ್ನೂ ಎಂದಿಗೂ ನಂಬಲಿಲ್ಲ".

—'ಶ್ರೀ ಮದ್ದಯಾನಂದ ಪ್ರಕಾಶ' ; ಸ್ವಾಮೀ ಸತ್ಯಾನಂದ (ಪುಟ–241)

ಯಾವನಾದರೂ ಭೈರವೀಚಕ್ರದಲ್ಲಿ ಪ್ರವೇಶಿಸಿ. ಮದ್ಯ ಮಾಂಸಗಳನ್ನು ಕುಡಿಯದಿದ್ದರೆ, ತಿನ್ನದಿದ್ದರೆ, ಅವನನ್ನು ಕೊಂದು, ಹೋಮ ಮಾಡಿಬಿಡುತ್ತಾರೆ.*

ಅವರಲ್ಲಿ ಯಾವನು **'ಅಘೋರಿ'**ಯಾಗಿರುತ್ತಾನೋ, ಅವನು ಮೃತನಾದ ಮಾನವನ ಮಾಂಸವನ್ನೂ ಕೂಡ ತಿನ್ನುತ್ತಾನೆ. **'ಅಜರೀ-ಬಜರೀ'** ಮಾಡುವವರು[1] ಮಲ-ಮೂತ್ರಗಳನ್ನೂ ಕೂಡ ತಿನ್ನುತ್ತಾರೆ-ಕುಡಿಯುತ್ತಾರೆ!

## (ಚೋಲೀಮಾರ್ಗಿ ಮತ್ತು ಬೀಜಮಾರ್ಗಿಗಳ ಲೀಲೆ)

[ಈ ವಾಮಮಾರ್ಗಿಗಳಲ್ಲಿ] **'ಚೋಲೀ[2] ಮಾರ್ಗದವರು** ಮತ್ತು **'ಬೀಜ[3] ಮಾರ್ಗದವರು**, ಎಂದು ಎರಡು ವಿಧದವರಿರುತ್ತಾರೆ.

**ಚೋಲೀ ಮಾರ್ಗದವರು** ಒಂದು ಗುಪ್ತ ಸ್ಥಾನದಲ್ಲಿ, ಅಥವಾ [ನೆಲವನ್ನು ಅಗೆದು ಮಾಡಿದ] ನೆಲಮಾಳಿಗೆಯಲ್ಲಿ ಸೇರುತ್ತಾರೆ. ಅಲ್ಲಿ ಎಲ್ಲರ ಪತ್ನಿಯರೂ, ಪುರುಷರೂ, ಹುಡುಗರೂ, ಹುಡುಗಿಯರೂ, ಸೋದರಿಯರೂ, ತಾಯಂದಿರೂ, ಸೊಸೆಯರೂ-ಈ ಮೊದಲಾದವರೆಲ್ಲರೂ ಒಂದುಗೂಡಿ, ಎಲ್ಲರೂ ಕಲಸಿ-ಬೆರಸಿ, ಮಾಂಸ ತಿನ್ನುತ್ತಾರೆ ; ಮದ್ಯ ಕುಡಿಯುತ್ತಾರೆ!

ಒಬ್ಬಳು ಸ್ತ್ರೀಯನ್ನು ಬೆತ್ತಲೆ ಮಾಡಿ, ಅವಳ ಗುಪ್ತೇಂದ್ರಿಯದ ಪೂಜೆಯನ್ನು ಪುರುಷರೆಲ್ಲರೂ ಮಾಡುತ್ತಾರೆ. ಮತ್ತು ಅವಳಿಗೆ **'ದುರ್ಗಾದೇವಿ'**, ಎಂದು ಹೆಸರಿಡುತ್ತಾರೆ. ಒಬ್ಬ ಪುರುಷನನ್ನು ನಗ್ನನನ್ನಾಗಿ ಮಾಡಿ, ಅವನ ಗುಪ್ತೇಂದ್ರಿಯದ ಪೂಜೆಯನ್ನು ಸ್ತ್ರೀಯರೆಲ್ಲರೂ ಮಾಡುತ್ತಾರೆ.

ಯಾವಾಗ ಮದ್ಯ ಕುಡಿದು-ಕುಡಿದು ಉನ್ಮತ್ತರಾಗಿ ಹೋಗುತ್ತಾರೋ, ಆಗ ಸ್ತ್ರೀಯರೆಲ್ಲರೂ **'ಚೋಲೀ'** ಎಂದು ಕರೆಯಲ್ಪಡುವ ಎದೆಯ ವಸ್ತ್ರವನ್ನು ತೆಗೆದು, ಮಣ್ಣಿನದೊಂದು ದೊಡ್ಡ ಗುಡಾಣದಲ್ಲಿ ಒಟ್ಟಾಗಿ ಬೆರೆಸಿಡುತ್ತಾರೆ. ಒಬ್ಬೊಬ್ಬ ಪುರುಷನೂ ಅದಕ್ಕೆ ಕೈ ಹಾಕಿ ತೆಗೆದಾಗ, ಯಾವನ ಕೈಗೆ ಯಾವಳ ರವಿಕೆ ಬರುವುದೋ,

---

*ಸಂಸ್ಕೃತದ ಪ್ರಸಿದ್ಧ ಕವಿ ದಂಡಿಯಿಂದ ವಿರಚಿತವಾದ ಗದ್ಯಾತ್ಮಕ ಗ್ರಂಥ 'ದಶಕುಮಾರಚರಿತಮ್'ನಲ್ಲಿ ವಾಮಮಾರ್ಗಿಗಳ ಸಂಪೂರ್ಣ ಕಲೆಗಳ ವರ್ಣನೆಗಳನ್ನೊಳಗೊಂಡ ಹತ್ತು ಕಥಾನಕಗಳಿವೆ. ಸ್ತ್ರೀ-ಪುರುಷರನ್ನು ಎಲ್ಲಾ ವಿಧದ ದುಶ್ಚರಿತ್ರಗಳಿಗೀಡಾಗಿಸಿ, ಭ್ರಷ್ಟ ಮಾಡಲು ಪ್ರೇರಣೆ ಕೊಡುವಂತಹ ದುಷ್ಟ ಸಂಸ್ಕೃತ ಗ್ರಂಥ ಬೇರಿಲ್ಲ.—ಸಂ.

1. ಸಿದ್ಧಪುರುಷನಿಗೆ ಎಲ್ಲವೂ, ಭಕ್ಷಣೀಯವೆಂದು ತಿಳಿಯುವವರು—ಅನು.

2. ಚೋಲೀ, ಎಂದರೆ ರವಿಕೆ ಅಥವಾ ಕುಪ್ಪುಸ.—ಅನು.

3. ಪುರುಷನ ವೀರ್ಯಬಿಂದುವೇ ಬೀಜ.—ಅನು.

ಅವಳು ತಾಯಿ, ಸೋದರಿ, ಮಗಳು ಮತ್ತು ಸೊಸೆಯೇ ಆಗಿರಲೊಲ್ಲಳೇಕೆ, ಆ ಸಮಯದಪೂರ್ತಿಗೆ ಅವಳು ಅವನ ಹೆಂಡತಿಯಾಗಿ ಹೋಗುತ್ತಾಳೆ ! !

ಪರಸ್ಪರ ಕುಕರ್ಮ ಮಾಡುವಾಗ, ಮತ್ತು ಬಹಳ ಮದವೇರಿದಾಗ, ಪಾದರಕ್ಷೆ ಮೊದಲಾದುವುಗಳಿಂದ ಹೊಡೆದಾಡುತ್ತಾರೆ–ಕಡಿದಾಡುತ್ತಾರೆ!

ಪ್ರಾತಃಕಾಲದಲ್ಲಿ ನಸುಕತ್ತಲಿರುವಾಗ, ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗುತ್ತಾರೆ. ಆಗ ತಾಯಿಯು ತಾಯಿಯೂ, ಮಗಳು ಮಗಳೂ, ಸೋದರಿಯು ಸೋದರಿಯೂ ಮತ್ತು ಸೊಸೆಯು ಸೊಸೆಯೂ ಆಗಿ ಹೋಗುತ್ತಾರೆ.

ಮತ್ತು **'ಬೀಜಮಾರ್ಗೀ'** ಸ್ತ್ರೀ–ಪುರುಷರು ಸಂಭೋಗ ಮಾಡಿ, ನೀರಿನಲ್ಲಿ ವೀರ್ಯವನ್ನು ಹಾಕಿ, ಬೆರಸಿ ಕುಡಿಯುತ್ತಾರೆ.

ಈ ಪಾಮರರು* ಇಂತಹ ಕರ್ಮಗಳನ್ನು ಮುಕ್ತಿಯ ಸಾಧನಗಳೆಂದು ಅಂಗೀಕರಿಸುತ್ತಾರೆ! ವಿದ್ಯೆ. ವಿವೇಕ, ಸೌಜನ್ಯ ಮೊದಲಾದುವುಗಳಿಂದ ರಹಿತರಾಗಿರುತ್ತಾರೆ!!

## (ಶೈವಮತದ ಖಂಡನೆ)

**ಪ್ರಶ್ನೆ :—**'ಶೈವಮತ'ದವರಂತೂ ಉತ್ತಮರಾಗಿರುತ್ತಾರಲ್ಲವೇ ?

**ಉತ್ತರ :—**ಉತ್ತಮರಾಗಿರುವುದೆಲ್ಲಿಂದ ?

**"ಹೇಗೆ ಪ್ರೇತನಾಥನೋ, ಹಾಗೆ ಭೂತನಾಥ"** !

ಹೇಗೆ ವಾಮಮಾರ್ಗಿಗಳು ಮಂತ್ರೋಪದೇಶ ಮೊದಲಾದುದರಿಂದ ಜನರ ಧನವನ್ನು ಕಸಿದುಕೊಳ್ಳುತ್ತಾರೋ, ಹಾಗೆ ಶೈವರೂ ಕೂಡ—

**'ಓಂ ನಮಃ ಶಿವಾಯ'** ಈ ಮೊದಲಾದ; **'ಪಂಚಾಕ್ಷರೀ'** ಮೊದಲಾದ ಮಂತ್ರಗಳ ಉಪದೇಶ ಮಾಡುತ್ತಾರೆ. ರುದ್ರಾಕ್ಷ–ಭಸ್ಮ ಧಾರಣ ಮಾಡುತ್ತಾರೆ ; ಮಣ್ಣಿನ, ಮತ್ತು ಶಿಲೆ ಮೊದಲಾದುದರ ಲಿಂಗಗಳನ್ನು ನಿರ್ಮಿಸಿ ಪೂಜಿಸುತ್ತಾರೆ.

ಮತ್ತು **'ಹರ ಹರ'** ;, **'ಬಂ ಬಂ'**; ಮತ್ತು ಮೇಕೆಯ ಶಬ್ದದಂತೆ ಬಾಯಿಯಿಂದ **ಬಡ**–ಬಡ–ಬಡ ಶಬ್ದವನ್ನೂ ಮಾಡುತ್ತಾರೆ. ಇದಕ್ಕೆ ಕಾರಣವನ್ನು ಹೀಗೆ ಕೊಡುತ್ತಾರೆ—

---

*ಎಂದರೆ, ನೀಚರು, ದುಷ್ಟರು. ಕನ್ನಡದಲ್ಲಿ, ಬಳಕೆಯಲ್ಲಿರುವ 'ತಿಳಿವಳಿಕೆ ಇಲ್ಲದವರು' ಎಂಬರ್ಥ ಸರಿಯಲ್ಲ.—ಸಂ.

'ಚಪ್ಪಾಳೆ ತಟ್ಟುವುದರಿಂದ, ಮತ್ತು 'ಬಂ ಬಂ' ಶಬ್ದವನ್ನು ಮಾಡುವುದರಿಂದ, ಪಾರ್ವತಿಯು ಪ್ರಸನ್ನಳಾಗುತ್ತಾಳೆ. ಮತ್ತು ಮಹಾದೇವನು ಅಪ್ರಸನ್ನನಾಗುತ್ತಾನೆ. ಏಕೆಂದರೆ, ಯಾವಾಗ ಭಸ್ಮಾಸುರನ ಮುಂದಿನಿಂದ ಮಹಾದೇವನು ಓಡಿಹೋಗಿದ್ದನೋ, ಆಗ 'ಬಂ ಬಂ', ಮತ್ತು ಹಾಸ್ಯಪೂರ್ವಕವಾಗಿ ಚಪ್ಪಾಳೆಗಳು ತಟ್ಟಲ್ಪಟ್ಟಿದ್ದವು. ಮತ್ತು ಕೆನ್ನೆ ಬಡಿದುಕೊಳ್ಳುವುದರಿಂದ, ಪಾರ್ವತಿಯು ಅಪ್ರಸನ್ನಳೂ, ಮಹಾದೇವನು ಪ್ರಸನ್ನನೂ ಆಗುತ್ತಾರೆ. ಏಕೆಂದರೆ, ಪಾರ್ವತಿಯ ತಂದೆ ದಕ್ಷಪ್ರಜಾಪತಿಯ ತಲೆಯನ್ನು ಕತ್ತರಿಸಿ, ಅಗ್ನಿಯಲ್ಲಿ ಹಾಕಿ, ಅವನ ಮುಂಡದ ಮೇಲೆ ಟಗರಿನ ತಲೆಯನ್ನು ಕೂಡಿಸಿದ್ದರು. ಅದರ ಅನುಕರಣಕ್ಕೆ ಸಮನಾಗಿ ಕೆನ್ನೆಗಳನ್ನು ಬಡಿದುಕೊಳ್ಳುವ ಶಬ್ದವಿರುತ್ತದೆ', ಎಂದು ಕಾರಣವನ್ನು ಹೇಳುತ್ತಾರೆ.

ಶಿವರಾತ್ರಿಯ ದಿನ ಪ್ರದೋಷದ ವ್ರತವನ್ನಾಚರಿಸುತ್ತಾರೆ. ಈ ಮೊದಲಾದ ಕಾರಣಗಳಿಂದಲೂ ಮುಕ್ತಿಯಾಗುವುದೆಂದು ಒಪ್ಪುತ್ತಾರೆ.

ಆದುದರಿಂದ, ವಾಮಮಾರ್ಗಿಗಳು ಭ್ರಾಂತರಾಗಿರುವ ಹಾಗೆ, ಶೈವರೂ ಕೂಡ ಭ್ರಾಂತರೇ ಆಗಿದ್ದಾರೆ. ಇವರಲ್ಲಿ ವಿಶೇಷತಃ ಕಿವಿಹರಕರು, ನಾಥರು, ಗಿರಿ, ಪುರಿ, ವನ, ಅರಣ್ಯ, ಪರ್ವತ, ಮತ್ತು ಸಾಗರ—ಈ ಸಂಪ್ರದಾಯಗಳ ಸಾಧೂಗಳೂ ಮತ್ತು ಗೃಹಸ್ಥರೂ ಕೂಡ ಶೈವರಾಗಿರುತ್ತಾರೆ. ಒಬ್ಬೊಬ್ಬರು 'ಎರಡು ಕುದುರೆಗಳ ಮೇಲೆಯೂ ಏರುತ್ತಾರೆ.', ಎಂದರೆ, ವಾಮ ಮತ್ತು ಶೈವ—ಎರಡು ಮತಗಳನ್ನೂ ಅಂಗೀಕರಿಸುತ್ತಾರೆ.

ಮತ್ತು ಎಷ್ಟೋ ಮಂದಿ ವೈಷ್ಣವರೂ ಆಗಿರುತ್ತಾರೆ! ಅವರ ನುಡಿಯಿದು—

**ಅಂತಃ ಶಾಕ್ತಾ ಬಹಿಃ ಶೈವಾಃ ಸಭಾಮಧ್ಯೇ ಚ ವೈಷ್ಣವಾಃ ।**
**ನಾನಾರೂಪಧರಾಃ ಕೌಲಾ ವಿಚರಂತಿ ಮಹೀತಲೇ॥**

ಇದು ತಂತ್ರದ ಶ್ಲೋಕವಾಗಿದೆ.*

ಒಳಗಿನಿಂದ ಶಾಕ್ತರು, ಎಂದರೆ ವಾಮಮಾರ್ಗಿಗಳೂ; ಹೊರಗಿನಿಂದ ಶೈವರು, ಎಂದರೆ ರುದ್ರಾಕ್ಷ-ಭಸ್ಮ ಧಾರಣೆಮಾಡುವವರೂ; ಮತ್ತು ಸಭೆಯಲ್ಲಿ 'ನಾವು ವಿಷ್ಣುವಿನ ಉಪಾಸಕರಾದವರು'; ಎಂದು ಸಾರುವ ವೈಷ್ಣವರೂ ಆಗಿ ಇರುತ್ತಾರೆ. ಹೀಗೆ, ನಾನಾ ವಿಧದ ರೂಪಗಳನ್ನು ಧಾರಣಮಾಡಿಕೊಂಡು, ವಾಮಮಾರ್ಗೀ ಜನರು ಭೂಮಿಯಲ್ಲಿ ವಿಚರಿಸುತ್ತಾರೆ.

*ಕೌಲೋಪನಿಷತ್ ; ಕುಲಾರ್ಣವ ತಂತ್ರ, ಉಲ್ಲಾಸ 11.—ಸಂ.

## (ವೈಷ್ಣವ ಮತದ ಖಂಡನೆ)

ಪ್ರಶ್ನೆ:—'ವೈಷ್ಣವ'ರಾದರೂ ಉತ್ತಮರಾಗಿದ್ದಾರಲ್ಲವೇ ?

**ಉತ್ತರ:** ಏನು ಮಣ್ಣು ಉತ್ತಮರಾಗಿರುವುದು ? ಅವರು ಹೇಗೋ, ಇವರೂ ಹಾಗೆಯೇ ! ನೋಡಿರಿಲ್ಲಿ, ವೈಷ್ಣವರ ಲೀಲೆಯನ್ನು—

ತಮ್ಮನ್ನು ವಿಷ್ಣುವಿನ ದಾಸರೆಂದು ಹೇಳಿಕೊಳ್ಳುತ್ತಾರೆ. ಅವರಲ್ಲಿ, ಯಾರು **'ಚಕ್ರಾಂಕಿತ'**ರಾಗಿರುತ್ತಾರೋ, ಆ **'ಶ್ರೀವೈಷ್ಣವರು'** ತಮ್ಮನ್ನು ಸರ್ವಶ್ರೇಷ್ಠರೆಂದು ತಿಳಿದುಕೊಂಡಿರುತ್ತಾರೆ. ಆದರೆ, ಅಂತಹುದೇನೇನೂ ಇಲ್ಲ !

## (ಹಣೆಯ ಮೇಲೆ ವಿಷ್ಣುಪಾದ ಚಿಹ್ನೆ ಎಲ್ಲಿಂದ ಬಂದಿತು ?)

ಪ್ರಶ್ನೆ:—ಏನೇನೂ ಇಲ್ಲ ಎನ್ನುವುದೇಕೆ ? ಎಲ್ಲವೂ ಇದೆ ! ನೋಡಿರಿ! ಹಣೆಯ ಮೇಲೆ ನಾರಾಯಣನ ಚರಣಾರವಿಂದವಂತಿರುವ **ನಾಮವಿದೆ!** ಮತ್ತು ನಡುವಣ ಹಳದಿಯ ರೇಖೆ **'ಶ್ರೀ'** ಆಗಿದೆ! ಆದುದರಿಂದ, ನಾವು **'ಶ್ರೀವೈಷ್ಣವ'**, ಎನಿಸುತ್ತೇವೆ.

ನಾರಾಯಣನೊಬ್ಬನನ್ನುಳಿದು ಬೇರೆ ಯಾವನನ್ನು ಅಂಗೀಕರಿಸುವುದಿಲ್ಲ. ಮಹಾದೇವನ ಲಿಂಗದ ದರ್ಶನವನ್ನೂ ಮಾಡುವುದಿಲ್ಲ. ಏಕೆಂದರೆ, ನಮ್ಮ ಹಣೆಯ ಮೇಲೆ 'ಶ್ರೀ' ವಿರಾಜಿಸುತ್ತಿದ್ದಾಳೆ! ಅವಳು ಲಜ್ಜಿತಳಾಗುತ್ತಾಳೆ!*

**ಆಳವಂದಾರ್**† ಮೊದಲಾದವರ ಸ್ತೋತ್ರಗಳನ್ನು ಉಚ್ಚರಿಸುತ್ತೇವೆ. ನಾರಾಯಣನ ಪೂಜೆಯನ್ನು ಮಂತ್ರಪೂರ್ವಕವಾಗಿ ಮಾಡುತ್ತೇವೆ.

ಮಾಂಸ ತಿನ್ನುವುದಿಲ್ಲ! ಮದ್ಯವನ್ನೂ ಕುಡಿಯುವುದಿಲ್ಲ! ಮತ್ತೆ, ಶ್ರೇಷ್ಠರೇತಕ್ಕಲ್ಲ?

---

*ಶೈವರು ಶಿವಲಿಂಗದ ಬಗ್ಗೆ ಏನೇನೋ ಕಲ್ಪನೆಗಳನ್ನು ಮಾಡಿಕೊಂಡು, ಅದರ ಉಚ್ಚ ಭಾವನೆಯನ್ನು ವ್ಯಕ್ತಮಾಡುತ್ತಾರೆ. ಆದರೆ, ಶಿವಪುರಾಣದ 'ದಾರುವನ'ದಲ್ಲಿ ಶಿವನು ಋಷಿಪತ್ನಿಯರೊಂದಿಗೆ ಮಾಡಿದ ಕಾಮುಕ ಚೇಷ್ಟೆಗಳ ಕಾರಣದಿಂದ, ಮತ್ತು ವೈಷ್ಣವರು ಶಿವಲಿಂಗವನ್ನು ಕಂಡು ಲಜ್ಜೆ ಪಡುವುದರಿಂದ, ಈ ಶಿವಲಿಂಗವು ಪುರುಷನ ಜನನೇಂದ್ರಿಯದ ಪ್ರತೀಕವೆಂದೇ ಸಿದ್ಧವಾಗುತ್ತದೆ.—ಸಂ.

†ಮೂಲಗ್ರಂಥದಲ್ಲಿ 'ಆಲಮಂದಾರಾದಿ', ಎಂಬ ಪಾಠವಿದೆ. ಇದು ತಮಿಳಿನ ಸ್ತೋತ್ರಗಳು.—ಸಂ.

**ಉತ್ತರ:**—ಈ ನಿಮ್ಮ ನಾಮವನ್ನು 'ಹರಿಪದಾಕೃತಿ' ಎನ್ನುವುದೂ, ಈ ಹಳದಿಯ ರೇಖೆಯನ್ನು 'ಶ್ರೀ', ಎಂದು ಅಂಗೀಕರಿಸುವುದೂ ವ್ಯರ್ಥವಾಗಿದೆ. ಏಕೆಂದರೆ, ಇದಂತೂ ನಿಮ್ಮ ಕೈಯಿಂದ ರಚನಾಚಾತುರ್ಯ, ಎಂದರೆ ಯಾವ ರೀತಿ ಆನೆಯ ಹಣೆಯನ್ನು ಚಿತ್ರ-ವಿಚಿತ್ರವಾಗಿ ಮಾಡುತ್ತಾರೋ; ಅದೇರೀತಿ ಹಣೆ ಚಿತ್ರಿತವಾಗಿದೆ.

ನಿಮ್ಮ ಹಣೆಯಲ್ಲಿ ವಿಷ್ಣುವಿನ ಪಾದದ ಚಿಹ್ನೆ ಎಲ್ಲಿಂದ ಬಂದಿತು ? ಯಾವನಾದರೂ ವೈಕುಂಠಕ್ಕೆ ಹೋಗಿ, ವಿಷ್ಣುವಿನ ಪಾದದ ಚಿಹ್ನೆಯನ್ನು ಹಣೆಯಮೇಲೆ ಮಾಡಿಸಿಕೊಂಡು, ಬಂದಿದ್ದಾನೇನು ?

## (ಹಣೆಯ ಮೇಲೆ 'ಶ್ರೀ' ; ಆದರೆ, ಕೆಲಸ ಮಹಾದರಿದ್ರರದು !)

**ವಿವೇಕಿ:**—ಮತ್ತು 'ಶ್ರೀ' ಜಡವೋ, ಅಥವಾ ಚೇತನವೋ ?

**ವೈಷ್ಣವ:**—ಚೇತನಳಾಗಿದ್ದಾಳೆ.

**ವಿವೇಕಿ:**—ಹಾಗಾದರೆ, ಈ ರೇಖೆ ಜಡವಾಗಿರುವುದರಿಂದ, **'ಶ್ರೀ'** ಅಲ್ಲ! ನಾವು—"ಶ್ರೀ ರಚಿತವಾದುದೋ ಅಥವಾ ಅರಚಿತವೋ ?", ಎಂದು ಕೇಳುತ್ತೇವೆ.

ಅರಚಿತವಾಗಿದ್ದರೆ, ಇದು **ಶ್ರೀ** ಅಲ್ಲ. ಏಕೆಂದರೆ, ಇದನ್ನಂತೂ ನೀವು ದಿನವೂ ನಿಮ್ಮ ಕೈಯಿಂದ ರಚಿಸುತ್ತೀರಿ ! ಮತ್ತೆ, ಇದು **ಶ್ರೀ** ಆಗಲಾರದು!

**ನಿಮ್ಮ ಹಣೆಯಲ್ಲಿ 'ಶ್ರೀ' ಇರುವುದಾದರೆ, ಅದೆಷ್ಟೋ ಜನ ವೈಷ್ಣವರ ಮುಖವು ಕುರೂಪವಾಗಿ, ಅಂದರೆ ಶೋಭಾರಹಿತವಾಗಿ ಏತಕ್ಕೆ ಕಾಣಿಸುತ್ತದೆ ?**

ಲಲಾಟದಲ್ಲಿಯೇ **ಶ್ರೀ** ಇದ್ದರೂ ಮನೆ ಮನೆಗೆ ಭಿಕ್ಷೆಬೇಡುತ್ತಾ, ಮತ್ತು ತಿರುಪೆ ಗೂಳನ್ನು ತೆಗೆದುಕೊಳ್ಳುತ್ತಾ ಏಕೆ ತಿರುಗುತ್ತೀರಿ ? ಇದು ಮೂಢರ ಮತ್ತು ನಿರ್ಲಜ್ಜರ ವ್ಯವಹಾರವಾಗಿದೆ. ಎಂದರೆ—

**'ಲಲಾಟದಲ್ಲಿ ಶ್ರೀ; ಮತ್ತು ಕಾರ್ಯ ಮಹಾದರಿದ್ರರದು !'**

## (ಪರಕಾಲನೆಂಬ ವೈಷ್ಣವಭಕ್ತ ದರೋಡೆಕೋರನ ಕಥೆ)

ಇವರಲ್ಲಿ ಪರಕಾಲ* ನೆಂಬ ಒಬ್ಬ ವೈಷ್ಣವ ಭಕ್ತನಿದ್ದನು. ಅವನು ಕಳ್ಳತನ, ದರೋಡೆಮಾಡಿ, ಛಲ-ಕಪಟಮಾಡಿ, ಪರರ ಧನವನ್ನು ಕಸಿದುತಂದು, ವೈಷ್ಣವರ ಬಳಿಯಿಟ್ಟು, ಪ್ರಸನ್ನನಾಗುತ್ತಿದ್ದನು!

---

*ಮೂಲಗ್ರಂಥದಲ್ಲಿ 'ಪರಿಕಾಲ' ಎಂಬ ಪಾಠವಿದೆ—ಸಂ.

ಒಂದು ಸಲ, ಯಾವುದನ್ನು ಸೂರೆಮಾಡಬಹುದೋ, ಅಂತಹ ಯಾವ ಪದಾರ್ಥವೂ ಅವನಿಗೆ ಕಳ್ಳತನದಲ್ಲಿ ಸಿಕ್ಕಲಿಲ್ಲ. ವ್ಯಾಕುಲನಾಗಿ ಅಲೆದಾಡುತ್ತಿದ್ದನು.

'ನಮ್ಮ ಭಕ್ತ ದುಃಖ ಪಡುತ್ತಿದ್ದಾನೆ', ಎಂದು ನಾರಾಯಣನು ತಿಳಿದು ಕೊಂಡನು. ಸೇಠಮಹಾಶಯರ ಸ್ವರೂಪವನ್ನು ತಳೆದು, ಉಂಗುರ ಮೊದಲಾದ ಒಡವೆಗಳನ್ನು ತೊಟ್ಟು, ರಥದಲ್ಲಿ ಕುಳಿತು, ಎದುರಿಗೆ ಬಂದರು. ಆಗ, [ಹೇಳುವುದೇನು] ? ಪರಕಾಲನು ರಥದ ಬಳಿ ಹೋದನು.

"ಎಲ್ಲ ವಸ್ತುಗಳನ್ನೂ ಬೇಗ ತೆಗೆದುಕೊಡು. ಇಲ್ಲದಿದ್ದರೆ, ಕೊಂದುಹಾಕುವೆನು", ಎಂದು ಸೇಠರಿಗೆ ಹೇಳಿದನು.

ತೆಗೆದು-ತೆಗೆದು ಕೊಡುವಲ್ಲಿ, ಉಂಗುರವನ್ನು ಕಳಚುವಾಗ ತಡವಾಯಿತು. ಪರಕಾಲನು ನಾರಾಯಣ*ನ ಬೆರಳನ್ನು ಕತ್ತರಿಸಿ, ಉಂಗುರವನ್ನು ತೆಗೆದುಕೊಂಡನು. ನಾರಾಯಣನು ಬಹಳ ಪ್ರಸನ್ನನಾಗಿ ಚತುರ್ಭುಜ ಶರೀರರೂಪತಾಳಿ, ದರ್ಶನ ವಿತ್ತನು!

"ನೀನು ನನ್ನ ಬಹುಪ್ರಿಯನಾದ ಭಕ್ತನು. ಏಕೆಂದರೆ, ಎಲ್ಲ ಹಣವನ್ನೂ ಕೊಲೆ–ಸುಲಿಗೆ–ಕಳುವುಮಾಡಿ, ವೈಷ್ಣವರ ಸೇವೆಮಾಡುತ್ತೀಯೆ. ಆದುದರಿಂದ, ನೀನು ಧನ್ಯನಾಗಿದ್ದೀಯೋ", ಎಂದನು,

ಮತ್ತೆ, ಅವನು ಹೋಗಿ, ವೈಷ್ಣವರ ಹತ್ತಿರ ಎಲ್ಲ ಒಡವೆಗಳನ್ನೂ ಇಟ್ಟು ಬಿಟ್ಟನು!

ಒಂದು ಸಲ, ಪರಕಾಲನನ್ನು ಯಾವನೋ ಸಾಹುಕಾರನು ನೌಕರನನ್ನಾಗಿ ಮಾಡಿಕೊಂಡು. ಜಹಜಿನಲ್ಲಿ ಕೂಡಿಸಿಕೊಂಡು, ದೇಶಾಂತರಕ್ಕೆ ಕರೆದೊಯ್ದನು. ಅಲ್ಲಿಂದ ಹಡಗಿನಲ್ಲಿ ಅಡಿಕೆಯನ್ನು ತುಂಬಿಸಿದನು. ಪರಕಾಲನು ಒಂದು ಅಡಿಕೆಯನ್ನು ಮುರಿದು, ಅರ್ಧ ತುಂಡು ಮಾಡಿ, ವ್ಯಾಪಾರಿಗೆ—

"ಈ ನನ್ನ ಅರ್ಧ ಅಡಿಕೆಯನ್ನು ಹಡಗಿನಲ್ಲಿಟ್ಟುಬಿಡು. ಮತ್ತು ಹಡಗಿನಲ್ಲಿ 'ಅರ್ಧ ಅಡಿಕೆ ಪರಕಾಲನದು', ಎಂದು ಬರೆದುಕೊಂಡು", ಎಂದು ಹೇಳಿದನು.

ವ್ಯಾಪಾರಿಯು—"ಬೇಕಾದರೆ. ನೀನು ಒಂದು ಸಾವಿರ ಅಡಿಕೆಗಳನ್ನು ತೆಗೆದು ಕೊಂಡು ಬಿಡು.", ಎಂದನು.

ಪರಕಾಲನು—"ಇಲ್ಲ ; ಸುಳ್ಳು–ಸುಳ್ಳೇ ತೆಗೆದುಕೊಳ್ಳಲು ನಾವು ಅಧಾರ್ಮಿಕರಲ್ಲ. ನಮಗಂತೂ ಅರ್ಧವೇ ಬೇಕು", ಎಂದು ಹೇಳಿದನು.

---

*ಸೇಠರ ರೂಪದಲ್ಲಿದ್ದ—ಅನು.

ಬಡಪಾಯಿಯಾದ ವ್ಯಾಪಾರಿಯು ಮುಗ್ಧನಾಗಿದ್ದನು. ಅವನು ಬರೆದು ಕೊಟ್ಟನು!

ಯಾವಾಗ ತನ್ನ ದೇಶದ ರೇವು ಪಟ್ಟಣಕ್ಕೆ ಹಡಗು ಸೇರಿತೋ, ಮತ್ತು ಅಡಿಕೆಯನ್ನು ಇಳಿಸುವ ಸನ್ನಾಹವಾಯಿತೋ, ಆಗ ಪರಕಾಲನು—

"ನಮ್ಮ ಅರ್ಧ ಅಡಿಕೆಯನ್ನು ಕೊಟ್ಟುಬಿಡಿರಿ.", ಎಂದನು.

ವ್ಯಾಪಾರಿಯು ಅದೇ ಅರ್ಧ ಅಡಿಕೆಯನ್ನು ಕೊಡಲಾರಂಭಿಸಿದನು. ಆಗ ಪರಕಾಲನು—

"ಜಹಜಿನಲ್ಲಿ ಅರ್ಧ ಅಡಿಕೆ ನನ್ನದಾಗಿದೆ. ಅರ್ಧ ಹಂಚಿಕೊಳ್ಳುವೆನು.", ಎಂದು ಜಗಳವಾಡತೊಡಗಿದನು.

ಕಲಹ ರಾಜಪುರುಷರವರೆಗೆ ಹೋಯಿತು. ಪರಕಾಲನು—

"ಇವನು ಅರ್ಧ ಅಡಿಕೆ ಕೊಡುವುದಾಗಿ ಬರೆದುಕೊಟ್ಟಿದ್ದಾನೆ", ಎಂದು ವ್ಯಾಪಾರಿಯ ಪತ್ರವನ್ನು ತೋರಿಸಿದನು.

ವ್ಯಾಪಾರಿಯು ಬಹಳ ಬಹಳ ಹೇಳುತ್ತಲೇ ಇದ್ದನು. ಆದರೆ, ಅವನು ಒಪ್ಪಲಿಲ್ಲ! ಅರ್ಧ [ಭಾಗ] ಅಡಿಕೆ ತೆಗೆದುಕೊಂಡು, ವೈಷ್ಣವರಿಗೆ ಅರ್ಪಿಸಿಬಿಟ್ಟನು! ಆಗಂತೂ ವೈಷ್ಣವರು ಬಹಳ ಪ್ರಸನ್ನರಾದರು!

ಈವರೆಗೂ, ಆ 'ಸೂರೆಗಳ್ಳ ಪರಕಾಲ'ನ ವಿಗ್ರಹವನ್ನು ದೇವಾಲಯಗಳಲ್ಲಿಡುತ್ತಾರೆ!

ಈ ಕಥೆಯನ್ನು "ಭಕ್ತಮಾಲ"ದಲ್ಲಿ ಬರೆದಿದ್ದಾರೆ. **ವೈಷ್ಣವರು, ಅವರ ಸೇವಕರು, ಮತ್ತು ನಾರಾಯಣ—ಈ ಮೂವರದ್ದು 'ಚೋರಮಂಡಲಿ'** ಅಹುದೋ ಅಥವಾ ಅಲ್ಲವೋ, ಎಂಬುದನ್ನು ಬುದ್ಧಿವಂತರು ನೋಡಿಕೊಳ್ಳಲಿ!

**ಮತ-ಮತಾಂತರಗಳಲ್ಲಿ ಯಾವನಾದರೂ ಸ್ವಲ್ಪ ಒಳ್ಳೆಯವನೂ ಇರುತ್ತಾನೆ,** [ನಿಜ] **! ಆದರೆ, ಆ ಮತದಲ್ಲಿದ್ದು ಯಾವನೂ ಸರ್ವಥಾ ಒಳ್ಳೆಯವನಾಗಲಾರನು!**

## (ವೈಷ್ಣವರಲ್ಲಿ ಅನೇಕ ಭೇದ)

ಈಗ, ವೈಷ್ಣವರಲ್ಲಿ ಎಂತಹ ಒಡಕು-ಕಲಹ ; ಬೇರೆ ಬೇರೆ ಬಗೆಯ ನಾಮಗಳನ್ನೂ, ಕಂಠಸೂತ್ರಗಳನ್ನೂ ಧರಿಸುತ್ತಾರೆ. [ನೋಡಿರಿ] !

**'ರಾಮಾನಂದಿ'**ಗಳು ಅಕ್ಕ ಪಕ್ಕದಲ್ಲಿ ಗೋಪೀಚಂದನದ, ಮತ್ತು ನಡುವೆ ಕೆಂಪು ನಾಮವನ್ನೂ; **'ನೀಮಾವತರು'** ಎರಡು ತೆಳ್ಳನೆಯ ರೇಖೆಗಳನ್ನೂ; ನಡುವೆ ಕರಿಯ ಚುಕ್ಕೆಯನ್ನೂ ; **'ಮಾಧ್ವ'**ರು ಕಪ್ಪುರೇಖೆಯನ್ನೂ; ಮತ್ತು **'ಗೌಡಬಂಗಾಳಿ'ಗಳು** ಕಟಾರಿಯಂತಹದನ್ನೂ ; **'ರಾಮಪ್ರಸಾದನ ಗುಂಪಿನವರು'** ಎರಡು ಚಂದ ರೇಖೆಗಳ ನಡುವೆ ಒಂದು ಬಿಳಿಯ ಗುಂಡು ಬೊಟ್ಟನ್ನೂ ಇಟ್ಟುಕೊಳ್ಳುತ್ತಾರೆ. [ಈ ಮೊದಲಾಗಿವೆ].

ಇವರ **ಕಥನಗಳು* ವಿಲಕ್ಷಣ–ವಿಲಕ್ಷಣವಾಗಿವೆ! ರಾಮಾನಂದಿಗಳು** ಕೆಂಪು ರೇಖೆಯನ್ನು ಲಕ್ಷ್ಮಿಯ ಚಿಹ್ನೆ ಎಂದೂ ; ಮತ್ತು ನಾರಾಯಣನ ಹೃದಯದಲ್ಲಿ ಶ್ರೀ ; [ಮತ್ತು] ಕೃಷ್ಣಚಂದ್ರರ ಹೃದಯದಲ್ಲಿ ರಾಧೆ ವಿರಾಜಿಸುತ್ತಿದ್ದಾಳೆ", ಎಂದೂ ಮೊದಲಾದ ಹೇಳಿಕೆಗಳನ್ನು ಕೊಡುತ್ತಾರೆ.

## (ತಿಲಕ ಮಾಹಾತ್ಮ್ಯ ಮತ್ತು ಅದರ ಸಮೀಕ್ಷೆ)

ಒಂದು ಕಥೆಯನ್ನು **"ಭಕ್ತಮಾಲ"**ದಲ್ಲಿ ಬರೆದಿದ್ದಾರೆ—

'ಯಾವನೋ ಒಬ್ಬ ಪುರುಷನು ಮರದ ಕೆಳಗೆ ನಿದ್ರಿಸುತ್ತಿದ್ದನು. ನಿದ್ರಿಸುತ್ತಾ ಹಾಗೆಯೇ ಮೃತನಾಗಿ ಹೋದನು. ಮೇಲಿನಿಂದ ಕಾಗೆ ಮಲವಿಸರ್ಜನೆ ಮಾಡಿತು. ಅದು ಲಲಾಟದ ಮೇಲೆ ತಿಲಕಾಕಾರವಾಗಿ ಬಿಟ್ಟಿತು! ಅಲ್ಲಿ ಯಮನ ದೂತರು ಅವನನ್ನು ಕರೆದೊಯ್ಯಲು ಬಂದರು. ಇಷ್ಟರಲ್ಲಿ ವಿಷ್ಣುವಿನ ದೂತರೂ ಬಂದು ಸೇರಿದರು. ಎರಡು ಗುಂಪುಗಳ ಜನರೂ ವಿವಾದ ಮಾಡತೊಡಗಿದರು.

"ಇದು ನಮ್ಮ ಒಡೆಯನ ಅಜ್ಞೆ ; ನಾವು ಇವನನ್ನು ಯಮಲೋಕಕ್ಕೆ ಕರೆದೊಯ್ಯುವೆವು.", ಎಂದು [ಯಮನ ದೂತರು ಹೇಳಿದರು].

'ವಿಷ್ಣುವಿನ ದೂತರು—"ನಮ್ಮ ಒಡೆಯನ ಆಜ್ಞೆಯಾಗಿದೆ, ವೈಕುಂಠಕ್ಕೆ ಕರೆದೊಯ್ಯಬೇಕೆಂದು. ನೋಡಿರಿ! ಇವನ ಲಲಾಟದಲ್ಲಿ ವೈಷ್ಣವೀ ತಿಲಕವಿದೆ! ನೀವು ಹೇಗೆ ಕರೆದೊಯ್ಯುವಿರಿ ?", ಎಂದು ಪ್ರಶ್ನಿಸಿದರು.

'ಆಗಂತೂ ಯಮದೂತರು ಸುಮ್ಮನಾಗಿ ಹೊರಟುಹೋದರು. ವಿಷ್ಣುವಿನ ದೂತರು ಸುಖದಿಂದ ಅವನನ್ನು ವೈಕುಂಠಕ್ಕೆ ಕರೆದುಕೊಂಡು ಹೋದರು. ನಾರಾಯಣನು ಅವನನ್ನು ವೈಕುಂಠದಲ್ಲಿಟ್ಟನು'!

ನೋಡಿರಿ! ಅಕಸ್ಮಾತ್ತಾಗಿ ತಿಲಕರೂಪಗೊಳ್ಳುವುದರ ಇಷ್ಟು ಮಾಹಾತ್ಮ್ಯವಿದ್ದರೆ, ಯಾರು ಸ್ವತಃ ಪ್ರೀತಿಯಿಂದ, ಮತ್ತು ತಮ್ಮ ಕೈಯಿಂದಲೇ ತಿಲಕವನ್ನು

---

*ಎಂದರೆ, **ಬೇರೆ–ಬೇರೆ ಬಗೆಯ ತಿಲಕಗಳ ಪ್ರಯೋಜನ–ಕಥನಗಳು**—ಯು.ಮೀ.

ಹಾಕಿಕೊಳ್ಳುತ್ತಾರೋ. ಅವರು ನರಕದಿಂದ ಹೊರಗಾಗಿ, ವೈಕುಂಠಕ್ಕೆ ತೆರಳಿದರೆ, ಇದರಲ್ಲಿ ಆಶ್ಚರ್ಯವಾದರೂ ಏನಿದೆ !

ನಾವು ಕೇಳುತ್ತೇವೇನೆಂದರೆ—

'ಚಿಕ್ಕ ನಾಮವನ್ನು ತಿದ್ದಿಕೊಳ್ಳುವುದರಿಂದ, ವೈಕುಂಠಕ್ಕೆ ಹೋಗುವುದಾದರೆ, ಸಮಸ್ತ ಮುಖದ ಮೇಲೆ ಲೇಪನಮಾಡಿಕೊಳ್ಳುವುದರಿಂದ, ಅಥವಾ ಮುಖವನ್ನು ಕಪ್ಪಗೆ ಮಾಡಿಕೊಳ್ಳುವುದರಿಂದ, ಇಲ್ಲವೇ ಶರೀರದ ಮೇಲೆ ಲೇಪನಮಾಡಿಕೊಳ್ಳುವುದರಿಂದ, ವೈಕುಂಠಕ್ಕಿಂತಲೂ ಮುಂದಕ್ಕೆ ಪಾದಬೆಳೆಸುವರೋ, ಅಥವಾ ಇಲ್ಲವೋ ?', ಎಂದು.

ಹೀಗೆ, ಈ ಮಾತುಗಳೆಲ್ಲವೂ ವ್ಯರ್ಥವಾಗಿವೆ!

## (ಖಾಖಿಗಳ ಲೀಲೆ)

ಇನ್ನು, ಇವರಲ್ಲಿ* ಬಹುಮಂದಿ 'ಖಾಖಿ'†ಗಳಿದ್ದಾರೆ. ಅವರು ಲಂಗೋಟಿ ಧರಿಸುತ್ತಾರೆ. ಬೆಂಕಿಯ ಕೊರಡಿನ ಬಳಿ ಕಾಯಿಸಿಕೊಳ್ಳುತ್ತಾ ಕೂತಿರುತ್ತಾರೆ. ಜಡೆಗಳನ್ನು ಬೆಳೆಯಿಸಿಕೊಳ್ಳುತ್ತಾರೆ. ಸಿದ್ಧನ ವೇಷವನ್ನು ಹಾಕಿಕೊಳ್ಳುತ್ತಾರೆ. ಕೊಕ್ಕರೆಯಂತೆ ಧ್ಯಾನಾವಸ್ಥಿತರಾಗುತ್ತಾರೆ. ಗಾಂಜಾ, ಭಂಗೀ, ಚರಸ್ಸನ್ನು ಸೇದುತ್ತಾರೆ. ಕೆಂಪು ಕಣ್ಣುಗಳನ್ನು ಹೊಂದಿರುತ್ತಾರೆ. ಎಲ್ಲರಿಂದಲೂ ಚುಟುಕಿ–ಚುಟುಕಿ ಅನ್ನ, ಹಿಟ್ಟು, ಕವಡೆ, ಕಾಸು ಬೇಡಿ, ತೆಗೆದುಕೊಳ್ಳುತ್ತಾರೆ. **ಗೃಹಸ್ಥರ ಮಕ್ಕಳನ್ನು ದಾರಿ ತಪ್ಪಿಸಿ, ಅನುಯಾಯಿಗಳನ್ನಾಗಿ ಮಾಡಿಕೊಳ್ಳುತ್ತಾರೆ.** ವಿಶೇಷವಾಗಿ, ಕೂಲಿಗಾರರು ಅವರಲ್ಲಿರುತ್ತಾರೆ.

ಯಾವನಾದರೂ ವಿದ್ಯೆಯನ್ನು ಕಲಿಯುತ್ತಿದ್ದರೆ, ಅವನನ್ನು ಓದಲು ಬಿಡುವುದಿಲ್ಲ. ಪ್ರತಿಯಾಗಿ ಹೀಗೆ ಹೇಳುತ್ತಾರೆ—

'ಪಠಿತವ್ಯಂ ತದಪಿ ಮರ್ತವ್ಯಂ ದಂತಕಟಾಕಟೇತಿ ಕಿಂ ಕರ್ತವ್ಯಮ್?'

'ಸಂತರಿಗೆ ವಿದ್ಯಾಭ್ಯಾಸದ ಕೆಲಸವಾದರೂ ಏನು ? ಏಕೆಂದರೆ, ವಿದ್ಯೆಯನ್ನು ಓದುವವರೂ ಕೂಡ ಸತ್ತು ಹೋಗುತ್ತಾರೆ! ಮತ್ತೆ, ಹಲ್ಲನ್ನು ಕಟಕಟ ಕಡಿಯುವುದೇತಕ್ಕಾಗಿ ? ಸಾಧುಗಳು ನಾಲ್ಕು ಧಾಮಗಳಿಗೆ ಯಾತ್ರೆ ಮಾಡಿಬರಬೇಕು. ಸಂತರ ಸೇವೆ ಮಾಡಬೇಕು. ರಾಮ ದೇವರ ಭಜನೆ ಮಾಡಬೇಕು. [ಇಷ್ಟು ಸಾಕು] !

---

*ಎಂದರೆ, ವೈಷ್ಣವರಲ್ಲಿ.—ಸಂ.

†ಬೂದಿಬಡುಕ ಸಾಧುಗಳು.—ಅನು.

ಯಾವನಾದರೂ ಅಪ್ಪಟ ಮೂರ್ಖನನ್ನು, ಎಂದರೆ, **'ಅವಿದ್ಯೆಯ ಪ್ರತಿಮೆ'**ಯನ್ನು ನೋಡಿಲ್ಲವಾದರೆ, ಖಾಖೀ ಮಹಾರಾಜರ ದರ್ಶನ ಮಾಡಿ ಬರಬೇಕು !

ಅವರ ಹತ್ತಿರ ಯಾರೇ ಹೋಗಲೀ, ಹೋಗುವವರು ಖಾಖೀ ಮಹಾರಾಜರ ತಂದೆಗೆ, ತಾಯಿಗೆ ಸಮಾನರೇ ಆಗಿರಲೊಲ್ಲರೇಕೆ, ಅವರನ್ನು—**'ಮಗನೇ! ಮಗಳೇ!'** ಎಂದೇ ಅವರು ಕರೆಯುತ್ತಾರೆ !

ಖಾಖೀ ಮಹಾರಾಜರು ಹೇಗೋ, ಹಾಗೆಯೇ **ಮರದವರು*, ಒಣ ಮರದವರು*, ಚಿಂದಿ ಬಟ್ಟೆಯವರು*, ಹಾಗೂ ಗುಂಪುಗುಳಿಗಳು*, ಶುಷ್ಕಪ್ರಾಣರು*, ಅಕಾಲಿಗಳು, ಕಿವಿ ಹರುಕರು*, ಜೋಗಿಗಳು*, ಅವಘಡದವರು* ಮೊದಲಾದವರೆಲ್ಲರೂ ಒಂದೇ ವಿಧದವರಾಗಿರುತ್ತಾರೆ.**

### (ಒಬ್ಬ ಖಾಖಿಯ ರೋಚಕ ದೃಷ್ಟಾಂತ)

ಖಾಖಿಯ ಶಿಷ್ಯನೊಬ್ಬನು "**ಶ್ರೀಗಣೇಶಾಯ ನಮಃ**", ಎಂದು ಬಾಯಿ ಪಾಠ ಮಾಡುತ್ತಾ ಮಾಡುತ್ತಾ, ನೀರನ್ನು ತರಲು ಭಾವಿಗೆ ಹೋದನು. ಅಲ್ಲಿ [ಒಬ್ಬ] ಪಂಡಿತನು ಕುಳಿತಿದ್ದನು. ಅವನು 'ಸ್ರೀಗನೇಸಾಜನಮೋ .' ಎಂದು ಜಪಿಸುತ್ತಿದ್ದ ಅವನನ್ನು ನೋಡಿ—

"ಓ ಸಾಧು ! ಅಶುದ್ಧವಾಗಿ ಪಠಿಸುತ್ತಿದ್ದೀಯೆ ! **'ಶ್ರೀಗಣೇಶಾಯ ನಮಃ'**, ಎಂದು ಬಾಯಿಪಾಠ ಮಾಡು.". ಎಂದನು.

ಅವನು ಕೂಡಲೇ ಪಾತ್ರೆಯನ್ನು ತುಂಬಿಸಿಕೊಂಡು, ಗುರುವರ್ಯರ ಸಮೀಪಕ್ಕೆ ಹೋಗಿ–

"ಒಬ್ಬ ಬಮ್ಮನ್† ನನ್ನ ಉಚ್ಚಾರಣವನ್ನು ಅಸುದ್ಧ ಎನ್ನುತ್ತಾನೆ", ಎಂದನು.

ಅದನ್ನು ಕೇಳಿ, ಕೂಡಲೇ ಖಾಖೀಜೀ ಎದ್ದ ! ಭಾವಿಯ ಬಳಿ ಹೋದ. ಮತ್ತು ಪಂಡಿತನಿಗೆ—

"ನೀನು ನನ್ನ ಶಿಷ್ಯನಿಗೆ ದಾರಿ ತಪ್ಪಿಸುತ್ತೀಯಾ ? ನೀನು ಗುರುವಿನ ಪುಟ್ಟ ಗೋಸಿ !‡ ಓದಿರುವುದಾದರೂ ಏನು ?

---

*ಈ ಚಿಹ್ನೆಗಳ ನಡುವೆ ಕಾಣಿಸಿರುವ ಹೆಸರುಗಳೆಲ್ಲಾ ಇದೇ ವಿಧದ ಅವಿದ್ಯಾವಂತ ಬೈರಾಗಿಗಳ ಮತಗಳ ಹೆಸರುಗಳು.—ಅನು.

†ಹಾರುವಯ್ಯ—ಅನು.

‡ಇಲ್ಲಿ, ಹಿಂದೀಭಾಷೀ ಜನಸಾಮಾನ್ಯರು ಪ್ರಯೋಗಿಸುವ ಅಶ್ಲೀಲ ಶಬ್ದವಿದೆ.—ಸಂ.

"ನೋಡು! ನೀನು ಒಂದು ಬಗೆಯ ಪಾಠವನ್ನು ಬಲ್ಲೆ. ನಾವು ಮೂರು ಬಗೆಯುದನ್ನು ತಿಳಿದಿದ್ದೇವೆ.—

"ಸ್ರೀಗನೇಸಾಜನ್ನಮೋ॰, ಸ್ರೀಗನೇಸಾಯನ್ನಮೋ॰; ಶ್ರೀಗನೇಸಾಯನಮೋ॰."

**ಪಂಡಿತ** :—ಕೇಳಿರಿ. ಸಾಧುಗಳೇ! ವಿದ್ಯೆಯ ವಿಷಯ ಬಹು ಕಠಿನವಾಗಿದೆ. ಓದದೇ ಬರುವುದಿಲ್ಲ.

**ಖಾಖೀ** :— ಹೋಗೋ, ಲೋ! ಎಲ್ಲ ವಿದ್ವಾಂಸರನ್ನೂ ನಾವು ತೀಡಿ ಹಾಕಿಬಿಟ್ಟಿದ್ದೇವೆ! ಭಂಗೀರಸದ ಒಂದೇ ಸೆಳೆತದಲ್ಲಿ, ಒಂದೇ ಉಸಿರಿಗೆ ಎಲ್ಲರನ್ನೂ ಹಾರಿಸಿಬಿಟ್ಟಿದ್ದೇವೆ! ಸಂತರ ಬಿಡಾರ ದೊಡ್ಡದು. ಬರೇ ಹಾರುವ ನೀನೇನು ತಿಳಿದಿದ್ದೀಯೆ?

**ಪಂಡಿತ** :—ನೋಡಿರಿ! ನೀವು ವಿದ್ಯೆಯನ್ನು ಕಲಿತಿದ್ದರೆ, ಇಂತಹ ಅಪಶಬ್ದಗಳನ್ನು ಏಕೆ ಆಡುತ್ತಿದ್ದಿರಿ? ನಿಮಗೆ ಎಲ್ಲ ಬಗೆಯ ಜ್ಞಾನವೂ ಇರುತ್ತಿದ್ದಿತು.

**ಖಾಖೀ** :—ಎಲೋ, ನೀನು ನಮ್ಮ ಗುರುವಾಗುತ್ತೀಯೇನು? ನಿನ್ನ ಉಪದೇಶವನ್ನು ನಾವು ಕೇಳುವುದಿಲ್ಲ!

**ಪಂಡಿತ** :—ಆಲಿಸುವಿರಿ ಎಲ್ಲಿಂದ? ಬುದ್ಧಿಯೇ ಇಲ್ಲ! **ಉಪದೇಶವನ್ನು ಕೇಳುವುದಕ್ಕೂ, ತಿಳಿದುಕೊಳ್ಳುವುದಕ್ಕೂ ವಿದ್ಯೆ ಬೇಕು.**

**ಖಾಖೀ** :—ಸಮಸ್ತ ವೇದಶಾಸ್ತ್ರಗಳನ್ನು ಓದಿದ್ದರೂ, ಸಂತರನ್ನು ಮಾನಿಸದಿದ್ದರೆ, ಅವನು ಏನನ್ನೂ ಓದಿಲ್ಲವೆಂದು ತಿಳಿಯಬೇಕು.*

**ಪಂಡಿತ** :— ಅಹುದು. ನಾವು ಸಂತರ ಸೇವೆಯನ್ನು ಮಾಡುತ್ತೇವೆ. ಆದರೆ, ನಿಮ್ಮಂತಹ ಉಪದ್ರವಿಗಳ ಸೇವೆಯನ್ನು ಮಾಡುವುದಿಲ್ಲ.

**ಏಕೆಂದರೆ, ಸಜ್ಜನರೂ, ವಿದ್ವಾಂಸರೂ, ಧಾರ್ಮಿಕರೂ, ಪರೋಪಕಾರಿಗಳೂ ಆದ ಪುರುಷರನ್ನು 'ಸಂತರು' ಎನ್ನುತ್ತಾರೆ.**

**ಖಾಖೀ**:—ನೋಡು! ನಾವು ಇರುಳೂ-ಹಗಲೂ ಬೆತ್ತಲೆಯಾಗಿರುತ್ತೇವೆ! ಅಗ್ನಿಯನ್ನು ಹೊತ್ತಿಸಿಕೊಂಡಿರುತ್ತೇವೆ! ಗಾಂಜಾ-ಚರಸ್ಸುಗಳ ನೂರಾರು ಸೆಳೆತಗಳನ್ನು ಎಳೆಯುತ್ತಾ ಇರುತ್ತೇವೆ! ಮೂರು-ಮೂರು ತಂಬಿಗೆ ಭಂಗೀರಸ ಕುಡಿಯುತ್ತೇವೆ!

---

*ಓದಿಲ್ಲದಂತೆಯೇ ಸರಿ. —ಅನು.

ಗಾಂಜಾ, ಭಂಗೀ, ಧತೂರೀ ಎಲೆಗಳ ಶಾಕವನ್ನು ಮಾಡಿ ಭಕ್ಷಿಸುತ್ತೇವೆ! ಶಂಖ ಪಾಷಾಣ ಮತ್ತು ಅಫೀಮನ್ನೂ ಕೂಡ ಲೀಲಾಜಾಲವಾಗಿ ನುಂಗಿಬಿಡುತ್ತೇವೆ!

ಮದದಲ್ಲಿ ಮೈ ಮರೆತು, ರಾತ್ರಿ - ಹಗಲು ದುಃಖರಹಿತರಾಗುತ್ತೇವೆ ! ಪ್ರಪಂಚವನ್ನು ಏನೆಂದೂ ಗಣಿಸುವುದಿಲ್ಲ! ಭಿಕ್ಷೆಬೇಡಿ, ರೊಟ್ಟಿ ಮಾಡಿಕೊಂಡು, ತಿನ್ನು ತ್ತೇವೆ ! ರಾತ್ರಿಯೆಲ್ಲಾ ಎಂತಹ ಕೆಮ್ಮು ಬರುತ್ತದೆಂದರೆ, ಯಾವನು ಪಕ್ಕದಲ್ಲಿ ಮಲ ಗುತ್ತಾನೋ, ಅವನಿಗೂ ಕೂಡ ಎಂದಿಗೂ ನಿದ್ರೆ ಬಾರದಂತೆ, ಇರುತ್ತದೆ!

ಈ ಮೊದಲಾದ '**ಸಿದ್ಧಿ**'ಗಳು ಮತ್ತು '**ಸಾಧುತ್ವ**' ನಮ್ಮಲ್ಲಿವೆ!

ಮತ್ತೆ, ನೀನು ನಮ್ಮ ನಿಂದೆಯನ್ನೇಕೆ ಮಾಡುತ್ತೀಯೆ?

ಎಚ್ಚೆತ್ತುಕೋ, ಅಯ್ಯ! ನೀನು ನಮ್ಮನ್ನು ಬೇಸರಪಡಿಸುವೆಯಾದರೆ, ನಾವು ನಿನ್ನನ್ನು ಬೂದಿ ಮಾಡಿಬಿಡುತ್ತೇವೆ!

**ಪಂಡಿತ:—ಈ ಸಮಸ್ತವೂ ಅಸಾಧುಗಳೂ, ಮೂರ್ಖರೂ, ಮತಿಹೀನರೂ ಆದವರ ಲಕ್ಷಣಗಳು ! ಸಾಧುಗಳದಲ್ಲ!** ಕೇಳಿರಿ—

"**ಸಾಧ್ನೋತಿ ಪರಾಣಿ ಧರ್ಮಕಾರ್ಯಾಣಿ ಸ ಸಾಧುಃ**".

—ಯಾವನು ಧರ್ಮಯುಕ್ತವಾದ ಉತ್ತಮ ಕರ್ಮಗಳನ್ನು ಮಾಡುವನೋ; ಸದಾ ಪರೋಪಕಾರದಲ್ಲಿಯೇ ಪ್ರವೃತ್ತನಾಗಿರುವನೋ, ಯಾವ ದುರ್ಗುಣಗಳೂ ಅವನಲ್ಲಿ ಇರುವುದಿಲ್ಲವೋ, ವಿದ್ವಾಂಸನಾಗಿ, ಸತ್ಯೋಪದೇಶದಿಂದ ಸರ್ವರಿಗೂ ಉಪ ಕಾರ ಮಾಡುವನೋ, ಅವನನ್ನು '**ಸಾಧು**' ಎನ್ನುತ್ತಾರೆ.

**ಖಾಖೀ:**—ಹೋಗೋ, ಲೋ! ನೀನು ಸಾಧುವಿನ ಕಾರ್ಯಗಳನ್ನೇನು ಬಲ್ಲೆ? ಸಂತರ ಒಕ್ಕಲು ಬಹು ದೊಡ್ಡದು ! ಯಾವ ಸಂತನನ್ನೂ ಅಡ್ಡ ಹಾಯಬೇಡ. ಇಲ್ಲ ದಿದ್ದರೆ, ನೋಡು ! ಇಕ್ಕಳವನ್ನೆತ್ತಿ ಒಂದು ಬಿಗಿದೆನೆಂದರೆ, ಬುರುಡೆ ಒಡೆಸಿ ಕೊಂಡೀಯೇ !

**ಪಂಡಿತ** :— ಒಳ್ಳೆಯದು, ಖಾಖೀ ! ಹೋಗಿ ನಿಮ್ಮ ಆಸನಕ್ಕೆ. ನಮ್ಮೊಂದಿಗೆ ಹೆಚ್ಚು ಕೋಪಿಸಿಕೊಳ್ಳಬೇಡಿ. ರಾಜ್ಯ ಹೇಗಿದೆ, ಎಂಬುದು ಗೊತ್ತಿದೆಯೇ ? ಯಾರ ನ್ನಾದರೂ ಹೊಡೆದರೆ, ಹಿಡಿಯಲ್ಪಡುವಿರಿ! ಸೆರೆಯಾಳಾಗುವಿರಿ! ಬೆತ್ತದ ಏಟು ತಿನ್ನುವಿರಿ! ಅಥವಾ ಯಾವನಾದರೂ ನಿಮ್ಮನ್ನೂ ಕೂಡ ಬಡೆದು ಹಾಕಿದರೆ, ಮತ್ತೇನು ಮಾಡುವಿರಿ ? ಇದು ಸಾಧುವಿನ ಲಕ್ಷಣವಲ್ಲ!

**ಖಾಖೀ**:— ನಡೆಹೋ ಲೋ, ಶಿಷ್ಯ! ಯಾವ ರಾಕ್ಷಸನ ಮುಖವನ್ನು ತೋರಿಸಿದೆ?

**ಪಂಡಿತ** :—ನೀವು ಯಾವಾಗಲೂ ಯಾವ ಮಹಾತ್ಮನ ಸಂಗವನ್ನೂ ಮಾಡಿಲ್ಲ. ಇಲ್ಲದಿದ್ದರೆ, ಇಂತಹ ಜಡ ಮೂರ್ಖರಾಗಿರುತ್ತಿರಲಿಲ್ಲ !

**ಖಾಖೀ** :—ನಾವು ಸ್ವತಃ ಮಹಾತ್ಮರಾಗಿದ್ದೇವೆ! ನಮಗೆ ಬೇರೆ ಇನ್ನಾರ ಅಪೇಕ್ಷೆಯೂ ಇಲ್ಲ!

**ಪಂಡಿತ**:—ಯಾರ ಭಾಗ್ಯ ಮಣ್ಣು ಗೂಡಿರುತ್ತದೋ, ಅವರಿಗೆ ನಿಮ್ಮದರಂತಹ ಬುದ್ಧಿ ಮತ್ತು ಅಭಿಮಾನ ಉಂಟಾಗುತ್ತದೆ!

ಖಾಖೀ [ತನ್ನ ಬಿಡಾರಕ್ಕೆ] ತೆರಳಿದನು. ಮತ್ತು ಪಂಡಿತರು ಮನೆಗೆ ಹೋದರು.

## (ವೃದ್ಧ ಖಾಖಿ ಮತ್ತು ಶಿಷ್ಯ)

"ಯಾವಾಗ ಸಂಧ್ಯಾಕಾಲದ ಆರತಿಯಾಯಿತೋ, ಆಗ ಆ ಖಾಖಿಯನ್ನು ವೃದ್ಧನೆಂದು ತಿಳಿದು, ಬಹು ಮಂದಿ ಖಾಖಿಗಳು—**'ಡಂಡೋತ್, ಡಂಡೋತ್'*** ಎನ್ನುತ್ತಾ ಸಾಷ್ಟಾಂಗ ಪ್ರಣಾಮ ಮಾಡಿ, ಕುಳಿತರು. ಆ ಖಾಖೀ ಕೇಳಿದನು—

"ಎಲೋ, ರಾಮದಾಸ್ಯಾ ! ನೀನು ಏನನ್ನು ಓದಿರುವೆ ?"

**ರಾಮದಾಸ**—ಮಹಾರಾಜ್! ನಾನು **'ಬೇಸ್ನುಸಹಸರನಾಮ'**† ಓದಿದ್ದೇನೆ.

**ಖಾಖೀ** :—ಲೋ! ಗೋವಿಂದದಾಸ್ಯಾ ! ನೀನು ಏನನ್ನು ಓದಿದ್ದೀಯೋ ?

**ಗೋವಿಂದದಾಸ** :—ನಾನು **'ರಾಮಸತವರಾಜ'**‡ ಓದಿದ್ದೇನೆ. ಇಂತಹ ಖಾಖೀ ಮಹಾರಾಜರ ಹತ್ತಿರ.

ಆಗ ರಾಮದಾಸನು ಕೇಳಿದನು.—

"ಮಹಾರಾಜ್ ! ತಾವು ಏನನ್ನು ಓದಿದ್ದೀರಿ?"

**ಖಾಖೀ**:—ನಾವು ಗೀತೆಯನ್ನು ಓದಿದ್ದೇವೆ!

---

*ಎಂದರೆ, ದಂಡವತ್ ಸಾಷ್ಟಾಂಗ ನಮಸ್ಕಾರ, ಎಂದರ್ಥ.—ಸಂ.

†ಎಂದರೆ, 'ವಿಷ್ಣುಸಹಸ್ರನಾಮ'—ಸಂ.

‡ಎಂದರೆ, 'ರಾಮಸ್ತವರಾಜ'—ಸಂ.

**ರಾಮದಾಸ** :—ಯಾರ ಹತ್ತಿರ ?

**ಖಾಖೀ** :—ಹೋಗೋ, ಲೋ! ಹುಡುಗ! ನಾವು ಯಾರನ್ನೂ ಗುರುವನ್ನಾಗಿ ಮಾಡಿಕೊಳ್ಳುವುದಿಲ್ಲ! ನೋಡು! ನಾವು 'ಪರಾಗರಾಜ'*ದಲ್ಲಿ ಇರುತ್ತಿದ್ದೆವು. ನಮಗೆ ಅಕ್ಖರ† ಬರುತ್ತಿರಲಿಲ್ಲ. ಯಾವಾಗ ಯಾವನಾದರೂ ಉದ್ದವಾದ ಪಂಚೆಯ ಪಂಡಿತನನ್ನು ನೋಡುತ್ತಿದ್ದೆವೋ, ಆಗ ಗೀತೆಯ ಕಿರುಹೊತ್ತಿಗೆಯಲ್ಲಿ—

"ಈ ಕಿರೀಟವನ್ನುಳ್ಳ‡ ಅಕ್ಖರದ ಹೆಸರೇನು ?", ಎಂದು ಕೇಳುತ್ತಿದ್ದೆವು.

"ಹೀಗೆ ಕೇಳುತ್ತಾ–ಕೇಳುತ್ತಾ 18 ಅಧ್ಯಾಯದ ಗೀತೆಯನ್ನು ತೀಡಿ ಹಾಕಿದೆವು! **ಗುರುವನ್ನಾಗಿ** ಒಬ್ಬನನ್ನೂ ಮಾಡಿಕೊಳ್ಳಲಿಲ್ಲ !"

**ಅಲ್ಲಾ! ಇಂತಹ ವಿದ್ಯಾಶತ್ರುಗಳಲ್ಲಿ ಅವಿದ್ಯೆಯು ಮನೆಮಾಡಿಕೊಳ್ಳದಿದ್ದರೆ, ಇನ್ನೆಲ್ಲಿಗೆ ಹೋಗಬೇಕು ?**

### (ಖಾಖಿಗಳು ಯಾವ ಒಳ್ಳೆಯ ಕೆಲಸವನ್ನೂ ಮಾಡುವುದಿಲ್ಲ)

ಈ ಜನರು ಮದ, ಪ್ರಮಾದ, ಕಾದಾಟ, ತಿನ್ನುವುದು, ನಿದ್ರಿಸುವುದು, ಜಾಗಟೆ ಬಾರಿಸುವುದು, ಘಂಟೆ–ತಮ್ಮಟೆ–ಶಂಖ ಬಾರಿಸುವುದು, ಅಗ್ನಿಯನ್ನು ಪ್ರದೀಪ್ತವಾಗಿಟ್ಟುಕೊಂಡಿರುವುದು, ಸ್ನಾನ ಮಾಡುವುದು-ಒಗೆಯುವುದು, ಎಲ್ಲ ದಿಕ್ಕುಗಳಲ್ಲಿಯೂ ವ್ಯರ್ಥವಾಗಿ ಅಲೆಯುವುದು–ತಿರುಗುವುದು, ಇವನ್ನು ಬಿಟ್ಟರೆ, ಬೇರೆ ಯಾವುದೇ ಒಳ್ಳೆಯ ಕೆಲಸವನ್ನೂ ಮಾಡುವುದಿಲ್ಲ!

ಯಾವನಾದರೂ ಬೇಕಾದರೆ, ಕಲ್ಲನ್ನೂ ಕೂಡ ಕರಗಿಸಬಹುದು ! ಆದರೆ, ಈ ಖಾಖಿಗಳ ಆತ್ಮಗಳಿಗೆ ಜ್ಞಾನವನ್ನುಂಟುಮಾಡುವುದು ಕಠಿಣವಾಗಿರುತ್ತದೆ!

ಏಕೆಂದರೆ, ಬಹುಭಾಗವಲ್ಲಿ ಅವರು ಶೂದ್ರವರ್ಣಸ್ಥ§ ಕೂಲಿಗಾರರು, ಬೇಸಾಯಗಾರರು, ಬೋಯಿಗಳು ಮೊದಲಾದವರಾಗಿದ್ದು, ತಮ್ಮ ವೃತ್ತಿಯನ್ನು ಬಿಟ್ಟು, ಕೇವಲ ಬೂದಿ ಬಳಿದುಕೊಂಡು, ಬೈರಾಗಿಗಳು, ಖಾಖಿಗಳು ಮೊದಲಾದವರಾಗಿ ಹೋಗುತ್ತಾರೆ. ಅವರಿಗೆ ವಿದ್ಯೆಯ ಅಥವಾ ಸತ್ಸಂಗ ಮೊದಲಾದುವರ ಮಾಹಾತ್ಮ್ಯವು ತಿಳಿದುಬರಲಾರದು !

---

*ಎಂದರೆ, 'ಪ್ರಯಾಗರಾಜ'—ಸಂ.

†ಎಂದರೆ, 'ಅಕ್ಷರ'—ಸಂ.

‡ದೇವನಾಗರೀ ವರ್ಣಮಾಲೆಯ ಏ, ಐ, ಓ, ಔ ಮಾತ್ರೆಗಳು ವ್ಯಂಜನದ ಅಕ್ಷರದ ಮೇಲೆ, ಕಿರೀಟದ ಮೇಲೆ ನವಿಲುಗರಿಯನ್ನು ಸಿಕ್ಕಿಸುವಂತೆ, ಹಾಕಲ್ಪಡುತ್ತವೆ.—ಸಂ.

§ವಿದ್ಯಾಜ್ಞಾನಶೂನ್ಯರಾದ—ಅನು.

**(ಬೇರೆ ಬೇರೆ 'ಮಂತ್ರಗಳು'; ಮತ್ತು ಅವುಗಳ ಉಪದೇಶ)**

ಇವರುಗಳಲ್ಲಿ **ಸಾಧರುಗಳ** ಮಂತ್ರ—"**ನಮಃ ಶಿವಾಯ**";

**ಖಾಖಿಗಳದು— "ನೃಸಿಂಹಾಯ ನಮಃ"**;

**ರಾಮಾವತರದು**— "ಶ್ರೀರಾಮಚಂದ್ರಾಯ ನಮಃ";, ಅಥವಾ ["**ಸೀತಾರಾಮಾಭ್ಯಾಂ ನಮಃ**";]

**ಕೃಷ್ಣೋಪಾಸಕರದು**— "ಶ್ರೀರಾಧಾಕೃಷ್ಣಾಭ್ಯಾಂ ನಮಃ"; "**ನಮೋ ಭಗವತೇ ವಾಸುದೇವಾಯ**";

ಮತ್ತು **ಬಂಗಾಳಿಗಳದು—"ಗೋವಿಂದಾಯ ನಮಃ"**.

ಈ ಮಂತ್ರಗಳನ್ನು ಕಿವಿಯಲ್ಲಿ ಊದಿ ಬಿಡುವುದರಮಾತ್ರದಿಂದ, ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಾರೆ!

ಮತ್ತು ಈ ಎಂತೆಂತಹ ಶಿಕ್ಷಣವನ್ನು ಕೊಡುತ್ತಾರೆಂದರೆ—

"ಮಗನೇ ! ತಂಬಿಗೆಯ* ಮಂತ್ರವನ್ನು ಪಠಿಸು—

**"ಜಲ ಪವಿತರ ಸಥಲ ಪವಿತರ ಔರ್ ಪವಿತರ್ ಕುಆ ।**
**ಶಿವ ಕಹೇ ಸುನ ಪಾರ್ವತೀ ತೂಂಬಾ ಪವಿತರ್ ಹುಆ"** ॥†

ಅಲ್ಲಾ ! ಇಂತಹವರಿಗೆ ಸಾಧುವಾಗಲು ಅಥವಾ ವಿದ್ವಾಂಸರಾಗಲು ಅಥವಾ ಜಗತ್ತಿಗೆ ಉಪಕಾರಮಾಡಲು ಎಂದಿಗಾದರೂ ಯೋಗ್ಯತೆಯುಂಟಾದೀತೇ?

ಖಾಖಿಗಳು ರಾತ್ರಿ-ಹಗಲು ಕಟ್ಟಿಗೆಗಳನ್ನೂ, ಬೆರಣೆಗಳನ್ನೂ ಸುಡುತ್ತಾ ಇರುತ್ತಾರೆ. ಒಂದು ತಿಂಗಳಲ್ಲಿ ಎಷ್ಟೋ ರೂಪಾಯಿಗಳ ಕಟ್ಟಿಗೆಯನ್ನು ಉರಿಸಿ ಬೂದಿಮಾಡಿ ಬಿಡುತ್ತಾರೆ. ಒಂದು ತಿಂಗಳಿನ ಕಟ್ಟಿಗೆಯ ಬೆಲೆಗೆ, ಕಂಬಳಿ ಮೊದಲಾದ ವಸ್ತ್ರಗಳನ್ನು ತೆಗೆದುಕೊಂಡರೆ, ನೂರನೆಯ ಒಂದಂಶದ ಹಣದಲ್ಲಿ ಸುಖದಿಂದ ಇರಬಹುದಿತ್ತು. ಅವರಿಗೆ ಇಷ್ಟು ಬುದ್ಧಿ ಎಲ್ಲಿಂದ ಬರಬೇಕು ?

---

*ಮೂಲಗ್ರಂಥದಲ್ಲಿ 'ತೂಂಬಾ' ಎಂಬ ಶಬ್ದವಿದೆ. ಇದು ಸೋರೆ ಬುರುಡೆಯ ಕಮಂಡಲಿನಂತಿರುತ್ತದೆ. ಇದರಲ್ಲಿ ನೀರಿನ ದೋಷ ದೂರವಾಗುತ್ತಿತ್ತು.—ಸಂ.

†ರಾಮಸ್ನೇಹೀ ಧರ್ಮಪ್ರಕಾಶ, ರಾಮಪಟಲ.—ಯು. ಮೀ.

ಮತ್ತು ಆ ಉರಿಯುವ ಕೊರಡಿನಿಂದ, ತಾಪ ಪಡೆಯುತ್ತಾ ಹೋಗುವುದರಿಂದಲೇ, ತಮಗೆ **'ತಪಸ್ವಿಗಳು'**, ಎಂಬ ಹೆಸರನ್ನಿಟ್ಟುಕೊಂಡಿರುತ್ತಾರೆ. ಈ ರೀತಿ ತಪಸ್ವಿಗಳಾಗಬಲ್ಲರಾದರೆ, ಕಾಡುಜನರು ಇವರಿಗಿಂತ ಹೆಚ್ಚು ತಪಸ್ವಿಗಳಾದಾರು! ಉದ್ದವಾಗಿ ಜಡೆಬಿಡುವುದರಿಂದ, ನಾಮಗಳನ್ನೆಳೆದುಕೊಳ್ಳುವುದರಿಂದ, ತಪಸ್ವಿಯಾಗುವುದಾದರೆ, ಎಲ್ಲರೂ ಹಾಗೆ ಮಾಡಬಲ್ಲರು!

ಇವರು ಮೇಲಿನಿಂದ ತ್ಯಾಗಸ್ವರೂಪರೂ, ಮತ್ತು ಒಳಗಿನಿಂದ ಮಹಾಸಂಗ್ರಹಿಗಳೂ ಆಗಿರುತ್ತಾರೆ!

## (ಕಬೀರಪಂಥದ ಸಮೀಕ್ಷೆ)

**ಪ್ರಶ್ನೆ:**—**'ಕಬೀರಪಂಥಿ'**ಗಳಾದವರು ಉತ್ತಮರಲ್ಲವೇ ?

**ಉತ್ತರ:**—ಇಲ್ಲ!

**ಪ್ರಶ್ನೆ :**—ಉತ್ತಮರೇತಕ್ಕಲ್ಲ ? ಪಾಷಾಣ ಮೊದಲಾದುದರ ಪ್ರತಿಮೆಗಳ ಪೂಜೆಯನ್ನು ಖಂಡಿಸುತ್ತಾರೆ!

ಕಬೀರ ಸಾಹೇಬರು ಹೂವುಗಳಿಂದ ಉತ್ಪನ್ನರಾಗಿದ್ದರು! ಮತ್ತು ಕೊನೆಗೂ ಹೂವೇ ಆಗಿ ಹೋದರು!

ಬ್ರಹ್ಮಾ, ವಿಷ್ಣು, ಮಹಾದೇವರ ಜನ್ಮ ಯಾವಾಗ ಆಗಿರಲಿಲ್ಲವೋ, ಆಗಲೂ ಕಬೀರ ಸಾಹೇಬರೇ ಇದ್ದರು!

ಮಹಾಸಿದ್ಧರು ! ಎಷ್ಟೆಂದರೆ, ಯಾವ ವಿಷಯವನ್ನು ವೇದ–ಪುರಾಣಗಳೂ ಕೂಡ ತಿಳಿಯಲಾರವೋ, ಅದನ್ನು ಕಬೀರರು ತಿಳಿದಿರುತ್ತಾರೆ!

ಸತ್ಯಮಾರ್ಗವಾವುದಿದೆಯೋ, ಅದನ್ನು ಕಬೀರರು ಮಾತ್ರವೇ ತೋರಿಸಿದ್ದಾರೆ! **"ಸತ್ಯನಾಮ ಕಬೀರ"** ಮೊದಲಾದುದು ಇವರ ಮಂತ್ರವಾಗಿದೆ.

**ಉತ್ತರ:**—ಪಾಷಾಣ ಮೊದಲಾದುವನ್ನು ಬಿಟ್ಟು, ಮಂಚ, ಗದ್ದುಗೆ, ದಿಂಬು, ಹಾವುಗೆ, ಬೆಳಕು, ಎಂದರೆ, ದೀಪ ಮೊದಲಾದುವನ್ನು ಪೂಜಿಸುವುದು ಪಾಷಾಣ-ಮೂರ್ತಿ [ಪೂಜೆ]ಗಿಂತ ಕಡಿಮೆಯೇನಲ್ಲ !

ಹೂವುಗಳಿಂದ ಹುಟ್ಟಿ, ಮತ್ತು ಕೊನೆಗೆ ಹೂವಾಗಿ ಹೋಗಲು, **ಕಬೀರ ಸಾಹೇಬರು** ಜೀರುಜಿಂಬೆ ಅಥವಾ ಮೊಗ್ಗುಗಳಾಗಿದ್ದರೇನು ?

## (ಕಬೀರ ಸಾಹೇಬರ ಜನ್ಮ ಮತ್ತು ಅವರ ಸಿದ್ಧಾಂತ)

ಈ ಪ್ರಕರಣದಲ್ಲಿ, ಆಲಿಸಲ್ಪಡುವ ಕೆಳಕಂಡ ವಿಷಯವೇ ಸತ್ಯವಿರಬಹುದು.—

"ಯಾವನೋ ಒಬ್ಬ ನೇಕಾರನು ಕಾಶಿಯಲ್ಲಿರುತ್ತಿದ್ದನು. ಅವನಿಗೆ ಮಕ್ಕಳು-ಮರಿಗಳಿರಲಿಲ್ಲ. ಒಂದು ಸಮಯದಲ್ಲಿ, ರಾತ್ರಿ ಸ್ವಲ್ಪವಿತ್ತು. ಒಂದು ಓಣಿಯಲ್ಲಿ ಹೋಗುತ್ತಾ ಇದ್ದನು. ದಾರಿಯ ಅಂಚಿನಲ್ಲಿ, ಒಂದು ಬುಟ್ಟಿಯಲ್ಲಿ, ಹೂವುಗಳ ನಡುವೆ, ಅದೇ ರಾತ್ರಿ ಜನಿಸಿದ್ದ ಗಂಡು ಮಗುವಿದ್ದಿತು. ಅದನ್ನು ನೋಡಿದನು. ಅವನು ಅದನ್ನು ಎತ್ತಿಕೊಂಡು ಹೋದನು. ತನ್ನ ಹೆಂಡತಿಗೆ ಕೊಟ್ಟನು. ಅವಳು ಪಾಲಿಸಿದಳು.

ಯಾವಾಗ ಅವನು ದೊಡ್ಡವನಾದನೋ, ಆಗ ನೇಕಾರನ ಕೆಲಸವನ್ನು ಮಾಡುತ್ತಿದ್ದನು. ಯಾವನೋ ಪಂಡಿತನ ಬಳಿ ಸಂಸ್ಕೃತವನ್ನು ಕಲಿಯಲು ಹೋದನು. ಅವನು* ಅವನಿಗೆ ಅಪಮಾನವನ್ನು ಮಾಡಿದನು.—

"ನೇಕಾರನಿಗೆ ನಾವು ಕಲಿಸುವುದಿಲ್ಲ.", ಎಂದು ಹೇಳಿದನು.

ಹೀಗೆಯೇ, ಅನೇಕ ಪಂಡಿತರ ಬಳಿ ತಿರುಗಾಡಿದನು. ಆದರೆ, ಯಾವನೂ ಓದಿಸಲಿಲ್ಲ.

ಆಗ, ಸಿಕ್ಕಾಪಟ್ಟೆ ಭಾಷಾಕೃತಿಗಳನ್ನು ರಚಿಸಿ, ನೇಕಾರರೇ ಮೊದಲಾದ ಕೆಳಗಣ ಮಟ್ಟದ ಜನರಿಗೆ ಬೋಧಿಸತೊಡಗಿದನು. ತಂಬೂರಿ ಹಿಡಿದು ಹಾಡುತ್ತಿದ್ದನು. ಭಜನೆಗಳನ್ನು ರಚಿಸುತ್ತಿದ್ದನು. **ವಿಶೇಷವಾಗಿ ಪಂಡಿತರ, ಶಾಸ್ತ್ರಗಳ, ಮತ್ತು ವೇದಗಳ ನಿಂದೆಯನ್ನು ಮಾಡುತ್ತಿದ್ದನು.**

ಕೆಲ ಮೂರ್ಖಮಂದಿಗಳು ಅವನ ಬಲೆಯಲ್ಲಿ ಸಿಕ್ಕಿಕೊಂಡರು!

ಯಾವಾಗ ಮೃತನಾದನೋ, ಆಗ ಜನರು ಅವನನ್ನು ಸಿದ್ಧನನ್ನಾಗಿ ಮಾಡಿಟ್ಟರು. ಯಾವ ಯಾವುದನ್ನು ಅವನು ತನ್ನ ಜೀವಿತ ಕಾಲದಲ್ಲಿ ರಚಿಸಿದ್ದನೋ, ಅದನ್ನು ಅವನ ಶಿಷ್ಯರು ಓದುತ್ತಾ ಬಂದರು".

ಕಿವಿಗಳನ್ನು ಮುಚ್ಚಿಕೊಂಡಾಗ ಯಾವ ಶಬ್ದ ಕೇಳಲ್ಪಡುತ್ತದೋ, ಅದನ್ನು "**ಅನಹತಶಬ್ದ**", ಎಂದು ಕರೆಯುವ ಸಿದ್ಧಾಂತವನ್ನು ಸ್ಥಾಪಿಸಿದರು.

---

*ಪಂಡಿತನು—ಅನು.

ಮನದ ವೃತ್ತಿಯನ್ನು **'ಸುರತಿ'** ಎನ್ನುತ್ತಾರೆ. ಅದನ್ನು ಆ ಶಬ್ದವನ್ನಾಲಿಸುವುದರಲ್ಲಿ ತೊಡಗಿಸುವುದನ್ನೇ ಸಂತರ ಮತ್ತು ಪರಮೇಶ್ವರನ ಧ್ಯಾನವೆಂದು **ಹೇಳುತ್ತಾರೆ!**

**ಅಲ್ಲಿ ಕಾಲ ತಲುಪಲಾರದಂತೆ !**

ಭರ್ಜಿಯಂತೆ **ತಿಲಕವನ್ನೂ**, ಮತ್ತು ಚಂದನ ಮೊದಲಾದ ಮರದ **ಮಣಿಸರವನ್ನೂ** ಧರಿಸುತ್ತಾರೆ.

ಒಳ್ಳೆಯದು ! ಆಲೋಚಿಸಿ ನೋಡಿರಿ ! ಇವರಲ್ಲಿ ಆತ್ಮನ ಉನ್ನತಿ ಮತ್ತು ಜ್ಞಾನ ವರ್ಧಿಸಬಲ್ಲದೇನು ? ಇದು ಕೇವಲ ಬಾಲಕರ ಆಟಕ್ಕೆ ಸಮಾನವಾದ ಲೀಲೆ **ಯಾಗಿದೆ!**

## (ನಾನಕಜೀ ಅವರ ಮತದ ಸಮೀಕ್ಷೆ)

**ಪ್ರಶ್ನೆ** :—ಪಂಜಾಬ ಪ್ರಾಂತದಲ್ಲಿ **ನಾನಕಜೀ 'ಒಂದು ಮಾರ್ಗ'**ವನ್ನು ಪ್ರಚಲಿತವಾಗಿ ಮಾಡಿದ್ದಾರೆ. ಏಕೆಂದರೆ, ಅವರೂ ಕೂಡ ಪ್ರತಿಮಾ [ಪೂಜೆಯ] ಖಂಡನವನ್ನು ಮಾಡುತ್ತಿದ್ದರು. ಮುಸಲ್ಮಾನರಾಗುವುದನ್ನು ತಡೆಗಟ್ಟಿದರು. ಅವರು ಸಾಧುಗಳೂ ಆಗಲಿಲ್ಲ. ಆದರೆ, ಗೃಹಸ್ಥರಾಗಿದ್ದರು.

ನೋಡಿರಿ ! ಅವರು ಈ 'ಮಂತ್ರ'ವನ್ನು ಉಪದೇಶಿಸಿದ್ದಾರೆ. ಇದರಿಂದಲೇ ಅವರ ಆಶಯ ಒಳ್ಳೆಯದಾಗಿದ್ದಿತೆಂದು ವಿದಿತವಾಗುತ್ತದೆ :—

**'ಓಂ ಸತ್ಯನಾಮ ಕರ್ತಾ ಪುರುಷ ನಿರ್ಭೋ ನಿರ್ವೈರ ಅಕಾಲಮೂರ್ತ**
**ಅಜೋನಿ ಸಹಭಂ ಗುರುಪ್ರಸಾದ ಜಪ ।**
**ಆದಿ ಸಚ್, ಜುಗಾದಿ ಸಚ್, ಹೈ ಭೀ ಸಚ್, ನಾನಕ ಹೋಸೀ ಭೀ ಸಚ್'॥**

[ಜಪ ಜೀ ಪೌಡೀ-1]

**"ಓಂ"** ಯಾವನ ಸತ್ಯವಾದ ಹೆಸರೋ, ಆ ಕರ್ತೃವಾದ ಪುರುಷನು ಭಯದಿಂದ ಮತ್ತು ವೈರದಿಂದ ರಹಿತನಾಗಿದ್ದಾನೆ. **"ಅಕಾಲಮೂರ್ತಿ"**, ಎಂದರೆ, ಕಾಲದ ಹಿಡಿತದಲ್ಲಿ ಮತ್ತು ಯೋನಿಯಲ್ಲಿ ಬಾರದವನೂ ಪ್ರಕಾಶಮಾನನೂ ಆಗಿದ್ದಾನೆ. ಅವನದೇ ಜಪವನ್ನು ಗುರುವಿನ ಕೃಪೆಯಿಂದ ಮಾಡು.

ಆ ಪರಮಾತ್ಮನು ಆದಿಯಲ್ಲಿ ಸತ್ಯನಾಗಿದ್ದನು; ಯುಗಗಳ ಆದಿಯಲ್ಲಿ ಸತ್ಯನು; ವರ್ತಮಾನ ಕಾಲದಲ್ಲಿ ಸತ್ಯನು, ಮತ್ತು ಮುಂದಕ್ಕೆ ಆಗುವುದೂ ಸತ್ಯಸ್ವರೂಪನೇ !

ಉತ್ತರ :—ನಾನಕಜೀಯವರ ಆಶಯವೇನೋ ಒಳ್ಳೆಯದೇ ಆಗಿದ್ದಿತು. ಆದರೆ, ವಿದ್ಯೆ ಸ್ವಲ್ಪವೂ ಇರಲಿಲ್ಲ! ಅಹುದು! ಗ್ರಾಮೀಣ ಭಾಷೆಯಾಗಿರುವ ಆ ದೇಶದ ಭಾಷೆಯನ್ನು ಮಾತ್ರ ತಿಳಿದಿದ್ದರು. ವೇದಗಳೇ ಮೊದಲಾದ ಶಾಸ್ತ್ರಗಳನ್ನೂ ಮತ್ತು ಸಂಸ್ಕೃತವನ್ನೂ ಸ್ವಲ್ಪವೂ ಅರಿತಿರಲಿಲ್ಲ. ಅರಿತಿದ್ದ ಪಕ್ಷದಲ್ಲಿ 'ನಿರ್ಭಯ', ಎಂಬ ಶಬ್ದವನ್ನು 'ನಿರ್ಭೋ' ಎಂದೇಕೆ ಬರೆಯುತ್ತಿದ್ದರು? ಮತ್ತು, ಇದಕ್ಕೆ ಅವರು ರಚಿಸಿರುವ 'ಸಂಸ್ಕೃತೀ ಸ್ತೋತ್ರ'ವು ದೃಷ್ಟಾಂತವಾಗಿದೆ.

'ನಾನು ಸಂಸ್ಕೃತದಲ್ಲಿಯೂ ಹೆಜ್ಜೆಯನ್ನು ಹಾಕಬೇಕು', ಎಂದು ಬಯಸುತ್ತಿದ್ದರು. ಆದರೆ, ಓದದೇ ಸಂಸ್ಕೃತ ಬರಬಲ್ಲದಾದರೂ ಹೇಗೆ? ಅಹುದು! ಯಾರು ಸಂಸ್ಕೃತವನ್ನು ಎಂದೂ ಕೇಳಿಯೂ ಕೂಡ ಇರಲಿಲ್ಲವೋ, ಆ ಗ್ರಾಮೀಣರೆದುರಿಗೆ "ಸಂಸ್ಕೃತೀ"-[ಸ್ತೋತ್ರ] ರಚಿಸಿ, ಸಂಸ್ಕೃತದಲ್ಲಿಯೂ ಪಂಡಿತರಾಗಿ ಹೋಗಿರಬಹುದು!*

ನಿಜವಾಗಿಯೂ ತಮ್ಮ ಗೌರವ-ಪ್ರತಿಷ್ಠೆ ಮತ್ತು ತಮ್ಮ ಪ್ರಖ್ಯಾತಿಯ ಇಚ್ಛೆ ಇಲ್ಲದಿದ್ದಲ್ಲಿ, ಈ ವ್ಯವಹಾರವನ್ನೆಂದಿಗೂ ಮಾಡುತ್ತಿರಲಿಲ್ಲ. ಅವರಿಗೆ ತಮ್ಮ ಪ್ರತಿಷ್ಠೆಯ ಇಚ್ಛೆ ಅವಶ್ಯವಾಗಿಯೂ ಇದ್ದಿತು.† ಇಲ್ಲದಿದ್ದಲ್ಲಿ, ಎಂತಹ ಭಾಷೆಯನ್ನು ತಿಳಿದಿದ್ದರೋ, ಅದರಲ್ಲಿಯೇ ಮಾತನಾಡಿಕೊಂಡು ಹೋಗುತ್ತಿದ್ದರು. ಮತ್ತು—"ನಾನು ಸಂಸ್ಕೃತವನ್ನು ಓದಿಲ್ಲ.", ಎಂದೂ ಕೂಡ ಹೇಳಿಬಿಡುತ್ತಿದ್ದರು.

ಸ್ವಲ್ಪ ಅಭಿಮಾನವಿದ್ದಿತೆಂದಾಗ, ಮಾನ-ಪ್ರತಿಷ್ಠೆಗಾಗಿ ಸ್ವಲ್ಪ ದಂಭವನ್ನೂ ಮಾಡಿರಬಹುದು! ಇದೇ ಕಾರಣದಿಂದ, ಅವರ ಗ್ರಂಥದಲ್ಲಿ ಅಲ್ಲಲ್ಲಿ ವೇದಗಳ ನಿಂದೆಯೂ, ಮತ್ತು ಸ್ತುತಿಯೂ ಕೂಡ ಇದೆ. ಏಕೆಂದರೆ, ಹೀಗೆ ಮಾಡದೇ ಹೋಗಿದ್ದರೆ, ಅವರನ್ನೂ ಕೂಡ ಯಾವನಾದರೂ ವೇದದ ಅರ್ಥವನ್ನು ಕೇಳಿಬಿಡುತ್ತಿದ್ದನು!

---

*ನಾನಕಜೀ ಅವರ ಸಂಸ್ಕೃತವಿಷಯಕ ಅಜ್ಞಾನವನ್ನು ಬಚ್ಚಿಡಲು, ಕನಖಲ್ (ಹರಿದ್ವಾರ)ನ ವಿದ್ವಾಂಸರಾದ ಸ್ವಾಮೀ ಕೇಶವಾನಂದಜೀ ಉದಾಸೀನರು ನಾನಕಜೀ ಅವರ ಹೆಸರಿನಲ್ಲಿ ಎರಡು ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಂದು, "ಅದ್ಭುತ ಗೀತಾ" ಎಂಬುದು. ಇನ್ನೊಂದು, 'ನಿರಾಕಾರ ಮೀಮಾಂಸಾ'

—'ಸತ್ಯಾರ್ಥಪ್ರಕಾಶ'-ವೇದಾನಂದ ಸಂಸ್ಕರಣದ ಟಿಪ್ಪಣಿ.

†ಈ ರೋಗ ಎಲ್ಲರಿಗೂ ಇದೆ. ಇಂಗ್ಲಿಷ್ ಬಾರದವರು ಇಂಗ್ಲಿಷಿನಲ್ಲಿ ಮಾತನಾಡುವುದಕ್ಕೂ, ಸಂಸ್ಕೃತ ಬಾರದವರು ಸಂಸ್ಕೃತದಲ್ಲಿ ಮಾತನಾಡುವುದಕ್ಕೂ ಪ್ರಯತ್ನಿಸುತ್ತಾರಲ್ಲವೇ! ಇದೇ ರೀತಿ, ಪೌರಾಣಿಕ ವಿದ್ವಾಂಸರು ಜನರು ತಿಳಿಯದ (ಸಂಸ್ಕೃತ-ಇಂಗ್ಲಿಷ್) ಭಾಷೆಗಳಲ್ಲಿ ಮಾತನಾಡುವುದು; ಶಾಸ್ತ್ರಾರ್ಥ ವಾದ ವಿವಾದಗಳಲ್ಲಿ ವಿಪಕ್ಷಿಯು ನಿಷ್ಣಾತನಲ್ಲದ (ಸಂಸ್ಕೃತ-ಇಂಗ್ಲಿಷ್) ಭಾಷೆಗಳ ಪ್ರಯೋಗವೇ ಆಗಬೇಕೆಂದು ಹಠ ಮಾಡುವುದು, ವ್ಯಾಕರಣದ ಶುದ್ಧಾಶುದ್ಧತೆಯ ಬಗ್ಗೆ ವಿವಾದ ಮಾಡುವುದು, ಇವೆಲ್ಲಾ ಮುಖ್ಯ ವಿಷಯವನ್ನು ಮುಟ್ಟುವ ಕಾರ್ಯಕ್ಕೆ ಹೋಗದೆಯೇ, ಪ್ರತಿಷ್ಠೆ ಮಾನ ಗಳಿಸಲು ಹೂಡುವ ಉಪಾಯಗಳು.—ಸಂ.

ಯಾವಾಗ [ಅರ್ಥ ಹೇಳಲು] ಬರುತ್ತಿರಲಿಲ್ಲವೋ, ಆಗ ಪ್ರತಿಷ್ಠೆಗೆ ಭಂಗ ಬರುತ್ತಿದ್ದಿತು. ಆದ ಕಾರಣ, ಮೊದಲೇ ತಮ್ಮ ಶಿಷ್ಯರ ಮುಂದೆ ಅಲ್ಲಲ್ಲಿ ವೇದಗಳಿಗೆ ವಿರುದ್ಧವಾಗಿ ಮಾತನಾಡುತ್ತಿದ್ದರು. ಮತ್ತು ಒಂದೊಂದೆಡೆ ವೇದಗಳ ಬಗೆಗೆ ಒಳಿತನ್ನೂ ಕೂಡ ಹೇಳಿದ್ದಾರೆ. ಏಕೆಂದರೆ, ಎಲ್ಲಿಯೂ ಒಳ್ಳೆಯದನ್ನು ಹೇಳದೆಯೇ ಇದ್ದರೆ, ಜನರು ಅವರನ್ನು ನಾಸ್ತಿಕರೆಂದೇ ನಿರ್ಣಯಿಸುತ್ತಿದ್ದರು.* ಉದಾಹರಣೆಗೆ:—

**ವೇದ ಪಢತ ಬ್ರಹ್ಮಾ ಮರೇ । ಚಾರೋಂ ವೇದ ಕಹಾನಿ ।†**
**ಸಂತ ಕೀ ಮಹಿಮಾ ವೇದ ನ ಜಾನೀ ॥**

**[ಸುಖಮನೀ, ಪೌಡೀ-7. ಪದ-8]**

**[ನಾನಕ] ಬ್ರಹ್ಮಜ್ಞಾನೀ ಆಪ ಪರಮೇಶ್ವರ ॥**

**[ಸುಖಮನೀ, ಪೌಡೀ-8. ಪದ-6]**

ವೇದ ಓದುವವರು ಸತ್ತು ಹೋದರೇನು ? ಹಾಗಾದರೆ, ನಾನಕಜೀ ಮೊದಲಾದವರು ತಮ್ಮನ್ನು ಅಮರರೆಂದು ತಿಳಿದಿದ್ದರೇನು ? ಅವರು ಮೃತರಾಗಲಿಲ್ಲವೇನು ?

**ವೇದಗಳಂತೂ ಸರ್ವವಿದ್ಯೆಗಳ ಭಂಡಾರಗಳು.** ಆದರೆ, ಯಾವನು ನಾಲ್ಕೂ ವೇದಗಳನ್ನು **'ಕಥೆ'**, ಎನ್ನುವನೋ, ಅವನ ಮಾತುಗಳೆಲ್ಲವೂ ಕಥೆಯಾಗಿರುತ್ತವೆ!

ಅಜ್ಞಾನಿಗಳಿಗೆ 'ಸಂತ'ರೆಂದು ಹೆಸರಾದರೂ [ಕೂಡ], ಆ ಬಡಪಾಯಿಗಳು ವೇದಗಳ ಮಹಿಮೆಯನ್ನು ಎಂದೂ ತಿಳಿಯಲಾರರು. **ನಾನಕಜೀ ವೇದಗಳ ಸಮ್ಮಾನವನ್ನೇ ಮಾಡಿದ್ದಿದ್ದರೆ, ಅವರ ಸಂಪ್ರದಾಯ ಪ್ರಚಲಿತವಾಗುತ್ತಿರಲಿಲ್ಲ!‡**

**ಅವರು ಗುರುಗಳು ಆಗಲೂ ಶಕ್ಯವಾಗುತ್ತಿರಲಿಲ್ಲ !** ಏಕೆಂದರೆ, ಸಂಸ್ಕೃತ ವಿದ್ಯೆಯನ್ನಂತೂ ಓದಿಯೇ ಇರಲಿಲ್ಲ! ಹಾಗಿರುವಾಗ, ಬೇರೆಯವರಿಗೆ ಓದಿಸಿ, ಹೇಗೆ ಶಿಷ್ಯರನ್ನಾಗಿ ಮಾಡಿಕೊಳ್ಳಲಾಗುತ್ತಿತ್ತು ?

---

*ನಾಸ್ತಿಕೋ ವೇದನಿಂದಕಃ ॥—ಮನುಸ್ಮೃತಿ (2.11)—ಸಂ.

†ಮೂಲ ಸಿಕ್ಕಿಲ್ಲ—ಯು.ಮೀ.

‡ಈ ಯಥಾರ್ಥದ ಕಾರಣದಿಂದಲೇ, ಯಾವ ಸಂಪ್ರದಾಯ-ಪ್ರವರ್ತಕರೂ ವೇದವನ್ನು ಮುಟ್ಟುವ ಪ್ರಯತ್ನಕ್ಕೇ ಹೋಗದೇ, ಅವರಿಗೆ ಅಮೃತಸಿಂಧುವಿನಂತಿರುವ ಪುರಾಣಗಳನ್ನೇ ಉಸಿರು-ಉಸಿರಿಗೂ ಜಪಿಸತೊಡಗಿದರು. ಸಂಪ್ರದಾಯ-ಪ್ರವರ್ತನಕ್ಕೆ ವಿರುದ್ಧರಾದ ಮಹರ್ಷಿ ದಯಾನಂದರು ಮಾತ್ರ ಕೇವಲ ವೇದಗಳನ್ನು ಎತ್ತಿ ಹಿಡಿದರು.—ಸಂ.

## (ನಾನಕಜೀ ಅವರು ಜನರನ್ನು ಮುಸಲ್ಮಾನರಾಗದಂತೆ ಉಳಿಸಿದರು)

**ಯಾವ ಕಾಲವಲ್ಲಿ ನಾನಕಜೀ ಪಂಜಾಬಿನಲ್ಲಿ ಹುಟ್ಟಿದರೋ, ಆಗ ಪಂಜಾಬು ಸಂಸ್ಕೃತ ವಿದ್ಯೆಯಿಂದ ಪೂರ್ಣತಃ ರಹಿತವೂ, ಮುಸಲ್ಮಾನರಿಂದ ಪೀಡಿತವೂ ಆಗಿದ್ದಿತು.** ಎನ್ನುವುದು ಸತ್ಯವಾಗಿದೆ. ಆ ಕಾಲವಲ್ಲಿ ಅವರು ಕೆಲ ಮಂದಿಗಳನ್ನು ರಕ್ಷಿಸಿದರು.*

ನಾನಕಜೀಯವರ ಸಮ್ಮುಖದಲ್ಲಿ ಅವರ ಸ್ವಲ್ಪ ಸಂಪ್ರದಾಯ, ಅಥವಾ ಬಹು ಮಂದಿ ಶಿಷ್ಯರು ಆಗಿರಲಿಲ್ಲ. ಏಕೆಂದರೆ—

**ಅವಿದ್ವಾಂಸರಲ್ಲಿ, ಮರಣಾನಂತರ ಅವರನ್ನು† 'ಸಿದ್ಧ'ರನ್ನಾಗಿ ಮಾಡಿಬಿಡುವ ನಡತೆಯಿರುತ್ತದೆ. ಆ ಮೇಲೆ, ಬಹಳ ಮಾಹಾತ್ಮ್ಯವನ್ನು ಹಬ್ಬಿಸಿ, ಈಶ್ವರನಿಗೆ ಸಮಾನರೆಂದು ಅಂಗೀಕರಿಸುತ್ತಾರೆ!‡**

## (ನಾನಕಜೀ ಅವರ ಸಂಬಂಧವಾಗಿ ಬುರುಡೆಗಳು ; ಉದಾಸಿ ಮತ್ತು ನಿರ್ಮಲೀ)

ಅಹುದು ! ನಾನಕಜೀ ದೊಡ್ಡ ಧನಾಢ್ಯರು ಮತ್ತು ಶ್ರೀಮಂತರು ಕೂಡ ಆಗಿರಲಿಲ್ಲ. ಆದರೆ, ಅವರ ಅನುಯಾಯಿಗಳು **"ನಾನಕ ಚಂದ್ರೋದಯ"** ಮತ್ತು **"ಜನ್ಮಶಾಖೀ"** ಮೊದಲಾದುದರಲ್ಲಿ—

"ಅವರು ಮಹಾಸಿದ್ಧರು. ಮತ್ತು ಅತಿ ದೊಡ್ಡ ಐಶ್ವರ್ಯವಂತರಾಗಿದ್ದರು. ನಾನಕಜೀ ಬ್ರಹ್ಮನೇ ಮೊದಲಾದವರನ್ನು ಸಂಧಿಸಿದರು ! ದೊಡ್ಡ ಸಂವಾದವನ್ನು ನಡೆಯಿಸಿದರು. ಎಲ್ಲರೂ ಇವರನ್ನು ಸನ್ಮಾನಿಸಿದರು.

"ನಾನಕಜೀ ಅವರ ವಿವಾಹದಲ್ಲಿ ಬಹು ಸಂಖ್ಯೆಯಲ್ಲಿ ಕುದುರೆಗಳು, ರಥಗಳು, ಆನೆಗಳು; ಚಿನ್ನ, ಬೆಳ್ಳಿ, ಮುತ್ತು, ಪನ್ನ ಮೊದಲಾದ ರತ್ನಗಳಿಂದ ಜಟಿತವಾದುವು; ಮತ್ತು ಅಮೂಲ್ಯ ರತ್ನಗಳಿಗೆ ಇತಿ-ಮಿತಿಗಳಿರಲಿಲ್ಲ.", ಎಂದು ಬರೆದಿದ್ದಾರೆ.

ಇವು ಕಗ್ಗಗಳಲ್ಲವಾದರೆ, ಮತ್ತೇನು ? **ಇದರಲ್ಲಿ ಇವರ ಅನುಯಾಯಿಗಳ ದೋಷವಿದೆ ; ನಾನಕಜೀ ಅವರದಲ್ಲ !**

---

***ಎಂದರೆ, ಮುಸಲ್ಮಾನರಾಗದಂತೆ.—ಯು. ಮೀ.**

**†ಎಂದರೆ, ಗುರುಜನರನ್ನು—ಸಂ.**

**‡ಇದಕ್ಕೆ, ಭಾರತೀಯರಿಗಿಂತ ದೊಡ್ಡ ಉದಾಹರಣೆ ಜಗತ್ತಿನಲ್ಲಿಲ್ಲ.—ಸಂ.**

ಎರಡನೆಯದಾಗಿ—ಅವರಾದ ನಂತರ, ಅವರ ಪುತ್ರನಿಂದ, ‘ಉದಾಸೀ’ [ಸಂಪ್ರದಾಯದ ಶಿಷ್ಯರೂ]; ಮತ್ತು ರಾಮದಾಸ ಮೊದಲಾದವರಿಂದ, ‘ನಿರ್ಮಲೇ’ [ಸಂಪ್ರದಾಯಸ್ಥರೂ] ಪ್ರಚಲಿತರಾದರು.

## (‘ಗುರುಗ್ರಂಥ ಸಾಹಬ್’ನಲ್ಲಿ ಬೇರೆ ಬೇರೆ ಜನರ ವಚನಗಳು)

ಎಷ್ಟೋ ಜನ ಗದ್ದುಗೆಗೆ ಏರಿದವರು ಪ್ರಾಂತದ ಭಾಷೆಯಲ್ಲಿ ರಚನೆ ಮಾಡಿ, “ಗ್ರಂಥ”*ದಲ್ಲಿ ಸೇರಿಸಿದ್ದಾರೆ. ಎಂದರೆ, ಇವರ ಹತ್ತನೆಯ ಗುರು ‘ಗೋವಿಂದಸಿಂಹ’ರಾದರು. ಅವರಾದ ನಂತರ, ಆ ಗ್ರಂಥದಲ್ಲಿ ಯಾವನದೇ ಭಾಷೆಯೂ ಸೇರಿಸಲ್ಪಡಲಿಲ್ಲ. ಆದರೆ, ಆ ಕಾಲದವರೆಗೆ ಎಷ್ಟು ಚಿಕ್ಕ-ಚಿಕ್ಕ ಪುಸ್ತಕಗಳಿದ್ದವೋ, ಅವೆಲ್ಲವನ್ನೂ ಒಂದುಗೂಡಿಸಿ, ರಟ್ಟನ್ನು ಹಾಕಿಸಿದರು.

ಈ ಜನರೂ ಕೂಡ ನಾನಕಜೀಯಾದ ನಂತರ, ಬಹಳ ಭಾಷಾಗ್ರಂಥಗಳನ್ನು ರಚಿಸಿದರು. ಎಷ್ಟೋ ಜನರು ಪುರಾಣಗಳ ಸುಳ್ಳು ಕಥೆಗಳಿಗೆ ಸಮವಾಗಿ ನಾನಾ ಪ್ರಕಾರದ ರಚನೆ ಮಾಡಿದರು.

ಆದರೆ, “ಬ್ರಹ್ಮಜ್ಞಾನಿಯು ತಾನೇ ಪರಮೇಶ್ವರನಾಗಿದ್ದಾನೆ”—ಈ ಮಾತಿನ ಮೇಲೆ, ಕರ್ಮಗಳನ್ನೂ, ಉಪಾಸನೆಯನ್ನೂ ಬಿಟ್ಟು, ಇವರ ಶಿಷ್ಯರುಗಳು ಬಾಗುತ್ತಾ ಬಂದರು. ಇದು ಮಹಾಪ್ರಮಾದವನ್ನುಂಟುಮಾಡಿತು. ಇಲ್ಲದಿದ್ದರೆ, ನಾನಕಜೀ ಈಶ್ವರನ ಬಗೆಗೆ ಭಕ್ತಿವಿಶೇಷವಾಗಿ ಏನನ್ನು ಬರೆದಿದ್ದರೋ, ಅದನ್ನಾಚರಿಸುತ್ತಾ ಬಂದಿದ್ದರೆ, ಒಳ್ಳೆಯದಾಗುತ್ತಿತ್ತು!

ಈಗ ‘ಉದಾಸಿ’ಗಳು ಹೇಳುತ್ತಾರೆ—‘ನಾವು ದೊಡ್ಡವರು!’

‘ನಿರ್ಮಲ’ಗಳು ಹೇಳುತ್ತಾರೆ—‘ನಾವು ದೊಡ್ಡವರು!’

‘ಅಕಾಲಿ’ಗಳು ಮತ್ತು ‘ಸುಥರೇಶಾಹಿ’ಗಳು ಹೇಳುತ್ತಾರೆ—“ನಾವು ಎಲ್ಲರಿಗಿಂತ ಉಚ್ಚರಾಗಿದ್ದೇವೆ!”†

---

*ಎಂದರೆ, ಸಿಕ್ಖರ ಮಾನನೀಯ ಪವಿತ್ರ ಗ್ರಂಥ ‘ಗ್ರಂಥಸಾಹಬ್’. ಇದರಲ್ಲಿ ಉತ್ತರ ಭಾರತದ ಗ್ರಾಮೀಣ ಭಾಷೆಗಳಲ್ಲಿ ಸಂತರ ವಾಣಿಗಳು ಸಂಗೃಹೀತವಾಗಿವೆ. ರಾಮನಾಮ ಮಹಿಮೆಯೂ ಇದೆ.—ಸಂ.

†ಈ ಪಂಥಗಳಲ್ಲದೇ, ಗಂಜಬಕ್ಷೀ, ರಾಮುಪಹುಸ್, ಸೂತ್ರಶಾಹೀ, ಗೋವಿಂದಸಿಂಘೀ, ಮತ್ತು ನಿಹಂಗ ಮೊದಲಾದ ಪಂಥಗಳೂ ಸಿಕ್ಖರ ಮತದಲ್ಲಿ ಹುಟ್ಟಿಕೊಂಡವು. ಇವರಲ್ಲಿ ಅನೇಕ ಕಲಹಗಳಿವೆ. ಸಶಸ್ತ್ರ ಹೋರಾಟವೂ ಆಗಾಗ ನಡೆಯುತ್ತಿರುತ್ತದೆ. ಇದಕ್ಕೆ ಗುರುದ್ವಾರಗಳಲ್ಲಿನ ಅಪಾರ ಸಂಪತ್ತೇ ಕಾರಣ. ವರ್ತಮಾನದ ‘ಪಂಜಾಬ್-ಖಾಲಿಸ್ತಾನ್’ ಸಮಸ್ಯೆಯು ಉದ್ಭವಕ್ಕೂ, ಅದರ ಪರಿಹಾರವಾಗದಿರುವುದಕ್ಕೂ ಈ ಪಂಥಗಳೇ ಕಾರಣ.—ಸಂ.

**(ಗುರು ಗೋವಿಂದಸಿಂಹರಿಂದ 'ಪಂಚ ಕಕಾರ'ಗಳ ಪ್ರಚಾರ)**

ಇವರಲ್ಲಿ **ಗೋವಿಂದಸಿಂಹಜೀ ಶೂರ-ವೀರರಾಗಿದ್ದರು.** ಮುಸಲ್ಮಾನರು ಅವರ ಪೂರ್ವಜರಿಗೆ ಮಹಾದುಃಖವನ್ನುಂಟುಮಾಡಿದ್ದರು. ಅದಕ್ಕೆ ಮುಯ್ಯಿ ತೀರಿಸಿ ಕೊಳ್ಳಬಯಸುತ್ತಿದ್ದರು. ಆದರೆ, ಇವರ ಬಳಿ ಸಲಕರಣೆ ಯಾವುದೂ ಇರಲಿಲ್ಲ. ಮತ್ತು ಅತ್ತ ಮುಸಲ್ಮಾನರ ಸಾಮ್ರಾಜ್ಯ ಪ್ರಜ್ವಲಿತವಾಗುತ್ತಿದ್ದಿತು.

ಇವರು ಒಂದು **'ಪುರಶ್ಚರಣ'*** ಮಾಡಿಸಿದರು—"ನೀನು ಮುಸಲ್ಮಾನ ರೊಂದಿಗೆ ಹೋರಾಡು. ನಿನಗೆ ವಿಜಯವಾಗುವುದು, ಎಂದು ನನಗೆ ದೇವಿಯು ವರ ವನ್ನು ಮತ್ತು ಖಡ್ಗವನ್ನು ಕೊಟ್ಟಿದ್ದಾಳೆ!", ಎಂದು ಪ್ರಸಿದ್ಧಿ ಪಡಿಸಿದರು. ಬಹಳ ಮಂದಿಗಳು ಅವರ ಸಂಗಾತಿಗಳಾದರು!

ಮತ್ತು, ಅವರು ಹೇಗೆ ವಾಮಮಾರ್ಗಿಗಳು **'ಪಂಚ ಮಕಾರ'**ಗಳನ್ನೂ, ಚಕ್ರಾಂಕಿತರು **'ಪಂಚ ಸಂಸ್ಕಾರ'**ಗಳನ್ನೂ ಪ್ರಚಲಿತವಾಗಿ ಮಾಡಿದ್ದರೋ, ಹಾಗೆ **'ಪಂಚ ಕಕಾರ'**ಗಳನ್ನು [ಪ್ರಚಲಿತಗೊಳಿಸಿದರು]. ಎಂದರೆ, ಇವರ ಐದು ಕಕಾರಗಳು ಯುದ್ಧಕ್ಕೆ ಉಪಯುಕ್ತವಾಗಿದ್ದವು!

**ಒಂದನೆಯದು, ಕೇಶ**—ಯಾವುದನ್ನು ಬೆಳೆಯಿಸಿಕೊಳ್ಳುವುದರಿಂದ, ಯುದ್ಧದಲ್ಲಿ ದಂಡದಿಂದ ಮತ್ತು ಖಡ್ಗದಿಂದ ಸ್ವಲ್ಪ ಮಟ್ಟಿನ ರಕ್ಷಣೆ ಸಿಕ್ಕುವುದೋ, [ಆ **ಕೇಶ**].

**ಎರಡನೆಯದು, ಕಂಕಣ**—ಅಕಾಲಿಗಳು ಯಾವುದನ್ನು ತಲೆಯ ಮೇಲೆ, ಪೇಟ ದೊಳಗೆ ಇಟ್ಟುಕೊಳ್ಳುತ್ತಾರೋ. ಮತ್ತು ಯಾವುದರಿಂದ ಕೈಗೆ ಮತ್ತು ತಲೆಗೆ ರಕ್ಷಣೆ ಸಿಕ್ಕುತ್ತದೋ, ಆ **ಕಂಕಣ ಮತ್ತು ಕಡಾ.** †

**ಮೂರನೆಯದು, ಕಾಛ**—ಯಾವುದು ಓಡುವುದಕ್ಕೂ ಮತ್ತು ಧುಮುಕುವು ದಕ್ಕೂ ನೆರವಾಗುವುದೋ, ಅಂತಹ ಮೊಣಕಾಲುಗಳ ಮೇಲಕ್ಕಿರುವ **'ಕಾಛ'**.‡ ಬಹು ತರವಾಗಿ ಮಲ್ಲರಂಗದಲ್ಲಿ ಮಲ್ಲರೂ ಮತ್ತು ದೊಂಬರೂ ಕೂಡ, ಶರೀರದ ಮರ್ಮ ಸ್ಥಾನ ಸುರಕ್ಷಿತವಾಗಿರಲಿ, ಮತ್ತು ಅಡ್ಡಿಯಾಗದಿರಲಿ, ಎಂದು ಇದನ್ನು ಧರಿಸುತ್ತಾರೆ.

**ನಾಲ್ಕನೆಯದು, ಕಂಘಾ**—ಕೂದಲನ್ನು ಯಾವುದರಿಂದ ಬಾಚಿಕೊಳ್ಳು ತ್ತಾರೋ, [ಆ **'ಕಂಘಾ'**].$

---

*ಎಂದರೆ, **'ದುರ್ಗಾಪುರಶ್ಚರಣ'**—ಯು.ಮೀ.

†ಎಂದರೆ, **ಕಬ್ಬಿಣದ ಬಳೆ**—ಸಂ.

‡ಎಂದರೆ, **ವೀರಕಚ್ಚೆ**—ಸಂ.

$ಎಂದರೆ, **ಬಾಚಣಿಗೆ**—ಸಂ.

"ನಮಗೆ ಖಂಡನ-ಮಂಡನದಿಂದೇನು ಪ್ರಯೋಜನ? ನಾವಂತೂ ಮಹಾತ್ಮರಾಗಿದ್ದೇವೆ!", ಎಂದು ತಿಳಿದುಕೊಂಡಿರುತ್ತಾರೆ.

ಇಂತಹ ಜನರೂ ಕೂಡ ಜಗತ್ತಿನಲ್ಲಿ ಭಾರರೂಪರಾಗಿರುತ್ತಾರೆ!

**(ವೇದಾನುಯಾಯಿಗಳ ಹ್ರಾಸವಾಗಿದ್ದರೂ ಕೂಡ, ಆಕಡೆಗೆ ಗಮನವಿಲ್ಲ)**

ಹೀಗೆ ಇರುವುದರಿಂದಲೇ, ವೇದಮಾರ್ಗವಿರೋಧಿಗಳಾದ ವಾಮಮಾರ್ಗಿಗಳೇ ಮೊದಲಾದ ಸಾಂಪ್ರದಾಯಿಕರೂ, ಕ್ರೈಸ್ತರೂ, ಮುಸಲ್ಮಾನರೂ, ಜೈನರೇ ಮೊದಲಾದವರೂ ಹೆಚ್ಚಿಕೊಂಡರು! ಈಗಲೂ ಹೆಚ್ಚುತ್ತಲೇ ಹೋಗುತ್ತಿದ್ದಾರೆ!

ಮತ್ತು ಈ ಜನರ* ನಾಶವಾಗುತ್ತಾ ಹೋಗುತ್ತಿದ್ದರೂ ಕೂಡ, ಇವರ ಕಣ್ಣುಗಳು ತೆರೆದುಕೊಳ್ಳುವುದಿಲ್ಲ!

ತೆರೆಯುವುದಾದರೂ ಎಲ್ಲಿಂದ? ಮನಸ್ಸಿನಲ್ಲಿ ಸ್ವಲ್ಪವಾದರೂ ಪರೋಪಕಾರಬುದ್ಧಿ ಮತ್ತು ಕರ್ತವ್ಯಕರ್ಮಗಳನ್ನು ಮಾಡುವುದರಲ್ಲಿ ಉತ್ಸಾಹವಿದ್ದರೆ ತಾನೇ?

ಆದರೆ, ಈ ಮಂದಿ ತಮ್ಮ ಪ್ರತಿಷ್ಠೆ, ಮತ್ತು ಭೋಜನ-ಪಾನಗಳ ಮುಂದೆ, ಇನ್ನು ಹೆಚ್ಚಾದುದು ಏನನ್ನೂ ತಿಳಿಯರು!

ಮತ್ತು ಜಗತ್ತಿನ ನಿಂದೆಗೆ ಬಹಳ ಹೆದರುತ್ತಾರೆ!†

---

*ಎಂದರೆ, ವೇದಮತಾನುಯಾಯೀ ಭಾರತೀಯರ=ಹಿಂದುಗಳ.—ಸಂ.

†ಈ ಕಾರಣದಿಂದಲೇ, ಪೌರಾಣಿಕ ವಿದ್ವಾಂಸರು, ಸಂನ್ಯಾಸಿಗಳು, ಅಧಿಕಾರಿಗಳು ಮೊದಲಾದವರು ಅಸತ್ಯವನ್ನು, ಕುರೀತಿಗಳನ್ನು, ದಾಂಭಿಕತೆಯನ್ನು, ಛಲ-ಕಪಟ-ಧೂರ್ತತನ-ವಂಚಕತೆಯನ್ನು ಖಂಡಿಸಲು ಹೆದರಿ, ಅವುಗಳೊಡನೆ ಒಪ್ಪಂದ ಮಾಡಿಕೊಂಡು, ಹಿಂದೀ ಭಾಷೆಯ ಲೋಕೋಕ್ತಿಯಂತೆ—

**"ಬಹತೀ ಗಂಗಾ ಮೇಂ ಹಾಥ್ ಧೋನಾ".**

ಎಂದರೆ, ಎಲ್ಲರ ಜೊತೆ ತಾವೂ ವಂಚಕರೆಂಬಂತೆ, ವರ್ತಿಸಿ, ಅವಿದ್ಯೆಯನ್ನು ವರ್ಧಿಸಿ, ಭಾರತದೇಶದ ಅವನತಿಗೆ, ಅಪ್ರತಿಷ್ಠೆಗೆ ಕಾರಣರಾದರು!

ಸ್ವಾಮೀ ದಯಾನಂದರು 1867ನೆಯ ಇಸವಿಯಲ್ಲಿ (ಆಗ ಅವರಿಗೆ 43ವರ್ಷ ವಯಸ್ಸು) ಹರಿದ್ವಾರದ ಕುಂಭಮೇಳದಲ್ಲಿ "ಪಾಖಂಡಖಂಡಿನೀ" ಪತಾಕೆಯನ್ನು ತಮ್ಮ ಕುಟಿಯ ಮುಂದೆ ಹಾರಿಸಿ, ಮೂರ್ತಿಪೂಜೆ, ಅವತಾರವಾದ, ಪುರಾಣೋಕ್ತ ಪಾಖಂಡ ಮೊದಲಾದ ಕುರೀತಿಗಳನ್ನು ಖಂಡಿಸಲಾರಂಭಿಸಿದಾಗಲೇ 4000 ವರ್ಷದ ಮಿಥ್ಯಾಯುಗ ಮರಣಾವಸ್ಥೆಯನ್ನು ಹೊಂದಿ, ಸತ್ಯಯುಗದ ಪುನರ್ಜನ್ಮವಾಯಿತು! —ಸಂ.

## (ತ್ರಿವಿಧ ಏಷಣಾ-ಪರಿತ್ಯಾಗವಿಲ್ಲದೇ ಸಂನ್ಯಾಸ ವ್ಯರ್ಥ)

ಮತ್ತು [ಲೋಕೈಷಣಾ] ಲೋಕದಲ್ಲಿ ಪ್ರತಿಷ್ಠೆ, [ವಿತ್ತೈಷಣಾ] ಧನವನ್ನು ಹೆಚ್ಚಿಸುವುದರಲ್ಲಿ ತತ್ಪರರಾಗಿ ವಿಷಯಭೋಗ, [ಪುತ್ರೈಷಣಾ] ಪುತ್ರರಿಗೆ ಸಮಾನವಾಗಿ ಶಿಷ್ಯರ ಮೇಲೆ ಮೋಹಿತರಾಗಿರುವುದು-ಈ ಮೂರು ಬಗೆಯ 'ಏಷಣಾ', ಎಂದರೆ ಇಚ್ಛೆಗಳನ್ನು ತ್ಯಾಗಮಾಡುವುದು ಉಚಿತವಾಗಿರುತ್ತದೆ. ಏಷಣೆಯೇ ಬಿಟ್ಟು ಹೋಗಲಿಲ್ಲವೆಂದಾಗ, ಸಂನ್ಯಾಸ ಉದಿಸಬಲ್ಲದಾದರೂ ಹೇಗೆ ?

ಎಂದರೆ, ಪಕ್ಷಪಾತ ರಹಿತರಾಗಿ, ವೇದಮಾರ್ಗೋಪದೇಶದಿಂದ ಜಗತ್ತಿನ ಕಲ್ಯಾಣವನ್ನು ಮಾಡುವುದರಲ್ಲಿ ಅಹರ್ನಿಶಿ ಪ್ರವೃತ್ತರಾಗಿರುವುದು ಸಂನ್ಯಾಸಿಗಳ ಮುಖ್ಯ ಕಾರ್ಯವಾಗಿರುತ್ತದೆ. ತಮ್ಮ ತಮ್ಮ ಅಧಿಕಾರದ ಕರ್ಮಗಳನ್ನು ಮಾಡದಿರುವಾಗ, ಮತ್ತೆ ಸಂನ್ಯಾಸ ಮೊದಲಾದ ಹೆಸರುಗಳನ್ನು ಇಡಿಸಿಕೊಳ್ಳುವುದು ವ್ಯರ್ಥವಾಗಿದೆ!

ಆದ್ದರಿಂದ, ಹೇಗೆ ಗೃಹಸ್ಥರು ವ್ಯವಹಾರ, ಹಾಗೂ ಸ್ವಾರ್ಥಕ್ಕಾಗಿ ಪರಿಶ್ರಮ ಮಾಡುತ್ತಾರೋ, ಹಾಗೆ, ಸಂನ್ಯಾಸಿಗಳು ಅದಕ್ಕಿಂತ ಹೆಚ್ಚು ಪರಿಶ್ರಮದಿಂದ ಪರೋಪಕಾರ ಮಾಡುವುದರಲ್ಲಿ ತತ್ಪರರಾದಾಗ ಮಾತ್ರ, ಎಲ್ಲಾ ಆಶ್ರಮಗಳೂ ಉನ್ನತಿ ಹೊಂದುತ್ತಾ ಹೋಗುತ್ತವೆ!

## (ಸಂನ್ಯಾಸಿಗಳೇ ! ನಿಮ್ಮ ಹಾಳಾಗುತ್ತಿರುವ ಮನೆಯನ್ನು ಉಳಿಸಿಕೊಳ್ಳಿ)

ನೋಡಿರಿ ! ನಿಮ್ಮ ಮುಂದೆ ಪಾಖಂಡಮತಗಳು ಹೆಚ್ಚುತ್ತಾ ಹೋಗುತ್ತಿವೆ ! ನಿಮ್ಮವರು ಕ್ರೈಸ್ತರು, ಮುಸಲ್ಮಾನರು ಕೂಡ, ಆಗುತ್ತಾ ಹೋಗುತ್ತಿದ್ದಾರೆ! ನಿಮ್ಮಿಂದ ಕೊಂಚವಾದರೂ ನಿಮ್ಮ ಮನೆಯ ರಕ್ಷಣೆ, ಮತ್ತು ಬೇರೆಯವರನ್ನು ಸೇರಿಸಿಕೊಳ್ಳುವುದು ಸಾಧ್ಯವಾಗುತ್ತಿಲ್ಲ !

ಆಗುವುದು ಯಾವಾಗ ? ನೀವು ಮಾಡಲು ಬಯಸಿದಾಗ ತಾನೇ !

ಎಂದಿನವರೆಗೆ ವರ್ತಮಾನದಲ್ಲಿ ಮತ್ತು ಭವಿಷ್ಯತ್ತಿನಲ್ಲಿ ನೀವು ಉನ್ನತಿಶೀಲರಾಗುವುದಿಲ್ಲವೋ, ಅಂದಿನವರೆಗೆ ಆರ್ಯಾವರ್ತದ, ಮತ್ತು ಅನ್ಯದೇಶಸ್ಥರಾದ ಮಾನವರ ಉನ್ನತಿಯಾಗುವುದಿಲ್ಲ. ಯಾವಾಗ ಉನ್ನತಿಗೆ ಕಾರಣಗಳಾದ ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಪಠನ-ಪಾಠನಗಳೂ,* ಬ್ರಹ್ಮಚರ್ಯವೇ ಮೊದಲಾದ

*ಆರ್ಯ ಸಮಾಜದ ಶಿಕ್ಷಣ ಸಂಸ್ಥೆಗಳಲ್ಲಿ ವೇದಾದಿ ಪಠನ-ಪಾಠನಗಳ ಪದ್ಧತಿ ಈಗ ಬಹಳ ಕಡಿಮೆಯಾಗಿಬಿಟ್ಟಿದೆ. ಆರ್ಯಸಮಾಜದ ನೇತಾರರು ವೇದಾದಿ ಸತ್ಯಶಾಸ್ತ್ರಗಳ ಪಠನ-ಪಾಠನದ ವ್ಯವಸ್ಥೆ ಮಾಡುವುದರ ಬದಲು, 'ಅವಿದ್ಯಾ'ಪ್ರಸಾರಕವೂ, ದಾಸಮನೋವೃತ್ತಿ ಉತ್ಪನ್ನಕಾರಕವೂ ಆದ ಸ್ಕೂಲು ಕಾಲೇಜುಗಳನ್ನು ನಡೆಸುವುದರಲ್ಲಿ ತಮ್ಮ ಪರಮ ಪುರುಷಾರ್ಥವೆಂದು ತಿಳಿದುಕೊಂಡಿದ್ದಾರೆ. ಮತ್ತೆ, ಆರ್ಯಸಮಾಜದ ಉನ್ನತಿ, ಮತ್ತು ದಯಾನಂದರ ಮಂತವ್ಯ ಹೇಗೆ ಪೂರೈಸಬೇಕು. ?—ಯು.ಮೀ.

ಆಶ್ರಮಗಳ ಯಥಾವತ್ತಾದ ಅನುಷ್ಠಾನವೂ, [ಮತ್ತು] ಸತ್ಯೋಪದೇಶಗಳೂ ಆಗುತ್ತವೋ, ಆಗಲೇ ದೇಶದ ಉನ್ನತಿಯಾಗುತ್ತದೆ.

## (ನಿಮ್ಮ ಕಣ್ಣೆದುರಿಗೇ ಪಾಖಂಡ ವರ್ಧಿಸುತ್ತಿದೆ)

ಎಚ್ಚರಗೊಳ್ಳಿರಿ! ಬಹುಬಗೆಯ ಪಾಖಂಡದ ಘಟನೆಗಳು ನಿಮಗೆ ನಿಜವಾಗಿಯೂ ಕಂಡುಬರುತ್ತಿವೆ! ಉದಾಹರಣೆಗೆ—

ಯಾವನಾದರೂ ಸಾಧು—'ಅಂಗಡಿಕಾರ'ನು* ಮಕ್ಕಳು ಮೊದಲಾದುವನ್ನು ಕೊಡುವ ಸಿದ್ಧಿಗಳನ್ನು ತೋರ್ಪಡಿಸಿದಾಗ, ಅವನ ಹತ್ತಿರ ಬಹಳ ಮಂದಿ ಸ್ತ್ರೀಯರು ಹೋಗುತ್ತಾರೆ. ಮತ್ತು ಕೈಮುಗಿದು, ಪುತ್ರರನ್ನು ಬೇಡಿಕೊಳ್ಳುತ್ತಾರೆ. ಆಗ ಬಾಬಾಜೀ ಎಲ್ಲರಿಗೂ—'ಪುತ್ರರಾಗಲಿ', ಎಂದು ಆಶೀರ್ವಾದ ಮಾಡುತ್ತಾನೆ.

ಅವರಲ್ಲಿ ಯಾವ-ಯಾವಳಿಗೆ ಪುತ್ರನು ಹುಟ್ಟುತ್ತಾನೋ, ಆಯಾ ಸ್ತ್ರೀಯು ಬಾಬಾಜೀಯ ವಚನದಿಂದ ಮಗನು ಹುಟ್ಟಿದನು, ಎಂದು ತಿಳಿಯುತ್ತಾಳೆ. ಯಾವಾಗ ಯಾವನಾದರೂ—

"ಹೆಣ್ಣು ಹಂದಿ, ಹೆಣ್ಣು ನಾಯಿ, ಹೆಣ್ಣು ಕತ್ತೆ ಮತ್ತು ಕೋಳಿ ಮೊದಲಾದುವಕ್ಕೆ ಮಕ್ಕಳು-ಮರಿಗಳು ಯಾವ ಬಾಬಾಜೀಯ ವಚನದಿಂದ ಆಗುತ್ತವೆ?", ಎಂದು ಅವರನ್ನು† ಕೇಳುತ್ತಾನೋ, ಆಗ ಅವರು‡ ಯಾವ ಉತ್ತರವನ್ನೂ ಕೊಡಲಾರರು.

ಯಾವನಾದರೂ—"ನಾನು ಬಾಲಕನನ್ನು ಜೀವಿತನಾಗಿಡಬಲ್ಲೆ.", ಎಂದು ಹೇಳುವನಾದರೆ, ಸ್ವತಃ ಅವನೇ ಏಕೆ ಸತ್ತು ಹೋಗುತ್ತಾನೆ?

## (ಧನ ದೋಚುವ ಠಕ್ಕರು=ಸಿದ್ಧ-ಸಾಧುಗಳ ಲೀಲೆ)

ಎಷ್ಟೋ ಜನ ಧೂರ್ತರು, ಠಕ್ಕರಂತೆ, ದೊಡ್ಡ ದೊಡ್ಡ ಬುದ್ಧಿವಂತರೂ ಕೂಡ ಮೋಸ ಹೋಗುವ ಹಾಗೆ, ಮಾಯೆಯನ್ನು ರಚಿಸುತ್ತಾರೆ! ಉದಾಹರಣೆಗಾಗಿ—ಧನದೋಚುವ ಠಕ್ಕರು!

---

*ಎಂದರೆ, ಅಂಗಡಿಕಾರನ ವೃತ್ತಿಯುಳ್ಳ ಸಾಧು, ಎಂದರ್ಥ.—ಸಂ.

†ಸ್ತ್ರೀಯರನ್ನು.—ಸಂ.

‡ಸ್ತ್ರೀಯರು.—ಸಂ.

ಈ ಜನರು ಐವರೋ, ಏಳು ಮಂದಿಯೋ, ಒಂದಾಗಿ, ದೂರ–ದೂರದ ದೇಶಗಳಿಗೆ ಹೋಗುತ್ತಾರೆ. ಯಾವನು ಶರೀರದಿಂದ ದಷ್ಟಪುಷ್ಟನಾಗಿ ಭಾರಿಯಾಗಿರುತ್ತಾನೋ, ಅವನನ್ನು 'ಸಿದ್ಧ'ನನ್ನಾಗಿ ಮಾಡಿಕೊಳ್ಳುತ್ತಾರೆ. ಯಾವ ನಗರದಲ್ಲಿ ಅಥವಾ ಗ್ರಾಮದಲ್ಲಿ ಧನಾಢ್ಯರಿರುತ್ತಾರೋ, ಅದರ ಹತ್ತಿರ, ವನದಲ್ಲಿ ಆ ಸಿದ್ಧನನ್ನು ಕೂಡಿಸುತ್ತಾರೆ.

ಅವನ [ನಾಲ್ಕು] ಸಾಧಕರು ನಗರದೊಳಕ್ಕೆ ಹೋಗಿ, ಅಪರಿಚಿತರಂತಾಗಿ, ಸಿಕ್ಕಿದವರು ಯಾರನ್ನಾದರೂ—

"ನೀವು ಇಂತಹ ಮಹಾತ್ಮನನ್ನು ಇಲ್ಲಿ ಎಲ್ಲಿಯಾದರೂ ನೋಡಿದ್ದೀರೋ, ಅಥವಾ ಇಲ್ಲವೋ ?", ಎಂದು ಕೇಳುತ್ತಾರೆ. ಅವರು ಇದನ್ನು ಕೇಳಿ––

"ಆ ಮಹಾತ್ಮನಾವನು ? ಮತ್ತು ಹೇಗಿದ್ದಾನೆ ?", ಎಂದು ಕೇಳುತ್ತಾರೆ.

"ದೊಡ್ಡ ಸಿದ್ಧಪುರುಷನು! ಮನಸ್ಸಿನ ಮಾತುಗಳನ್ನು ಹೇಳಿಬಿಡುತ್ತಾನೆ ! ಬಾಯಿನಿಂದ ಏನನ್ನು ಹೇಳುತ್ತಾನೋ, ಅದು ಆಗಿಯೇ ತೀರುತ್ತದೆ! **ಮಹಾಯೋಗಿರಾಜನು!** ಅವನ ದರ್ಶನಕ್ಕಾಗಿ ನಾವು ಮನೆ-ಬಾಗಿಲು ಬಿಟ್ಟು ಹುಡುಕುತ್ತಾ ತಿರುಗುತ್ತಿದ್ದೇವೆ. ಆ ಮಹಾತ್ಮನು ಈ ಕಡೆ ಬಂದಿದ್ದಾನೆ, ಎಂದು ನಾನು ಕೇಳಿದ್ದೇನೆ.", ಎಂದು **ಸಾಧಕನು ಹೇಳುತ್ತಾನೆ.**

"ಯಾವಾಗ ಆ ಮಹಾತ್ಮನು ನಿಮಗೆ ಸಿಕ್ಕುವನೋ, ಆಗ ನಮಗೂ ಹೇಳಿರಿ. ನಾವು ದರ್ಶನಮಾಡುವೆವು. ಮತ್ತು ಮನಸ್ಸಿನ ಮಾತುಗಳನ್ನು ಕೇಳುವೆವು.", ಎಂದು, **ಗೃಹಸ್ಥರು ಹೇಳುತ್ತಾರೆ.**

ಇದೇ ರೀತಿ, ಹಗಲೆಲ್ಲಾ ನಗರದಲ್ಲಿ ತಿರುಗುತ್ತಾರೆ. ಮತ್ತು ಪ್ರತಿಯೊಬ್ಬನಿಗೂ ಆ ಸಿದ್ಧನ ಮಾತುಗಳನ್ನು ತಿಳಿಸಿ, ರಾತ್ರಿಗೆ ಸಿದ್ಧರು–ಸಾಧಕರು ಒಂದುಗೂಡಿ ತಿನ್ನುತ್ತಾರೆ, ಕುಡಿಯುತ್ತಾರೆ! ಮತ್ತು ನಿದ್ರಿಸುತ್ತಾರೆ! ಪುನಃ ಪ್ರಾತಃಕಾಲ ನಗರಕ್ಕೆ ಅಥವಾ ಗ್ರಾಮಕ್ಕೆ ಹೋಗಿ, ಅದೇ ರೀತಿ, ಎರಡು-ಮೂರು ದಿನ ಹೇಳಿ : ಮತ್ತೆ, ನಾಲ್ವರು ಸಾಧಕರು ಯಾವನಾದರೂ ಒಬ್ಬೊಬ್ಬ ಧನಾಢ್ಯನಿಗೆ—

"ಆ ಮಹಾತ್ಮರು ಸಿಕ್ಕಿಬಿಟ್ಟರು ! ನೀವು ದರ್ಶನ ಮಾಡಬೇಕಾಗಿದ್ದರೆ, ನಡೆಯಿರಿ", ಎಂದು ಹೇಳುತ್ತಾರೆ.

ಅವರು ಯಾವಾಗ ಸನ್ನದ್ಧರಾಗುತ್ತಾರೋ, ಆಗ ಅವರನ್ನು—

"ನೀವು ಯಾವ ಮಾತನ್ನು ಕೇಳಬಯಸುತ್ತೀರಿ ? ನಮಗೆ ಹೇಳಿರಿ.", ಎಂದು ಕೇಳುತ್ತಾರೆ.

ಒಬ್ಬನು ಪುತ್ರನನ್ನು ಬಯಸುತ್ತಾನೆ! ಇನ್ನೊಬ್ಬನು ಧನವನ್ನಿಚ್ಛಿಸುತ್ತಾನೆ! ಮತ್ತೊಬ್ಬನು ರೋಗದ ನಿವಾರಣವನ್ನು ಬಯಸುತ್ತಾನೆ! ಮತ್ತೆ, ಮಗದೊಬ್ಬನು ಶತ್ರುವನ್ನು ಜಯಿಸುವ ಇಚ್ಛೆಯನ್ನು ಹೇಳುತ್ತಾನೆ!

ಅವರನ್ನು ಆ ಸಾಧಕರು ಕರೆದೊಯ್ಯುತ್ತಾರೆ. ಸಿದ್ಧನೂ, ಸಾಧಕರೂ ಹೇಗೆ ಸಂಕೇತ ಮಾಡಿಕೊಂಡಿರುತ್ತಾರೋ, ಹಾಗೆ; ಎಂದರೆ ಯಾವನಿಗೆ ಹಣದ ಬಯಕೆಯಿದೆಯೋ, ಅವನನ್ನು ಬಲಗಡೆಗೆ ; ಯಾವನಿಗೆ ಪುತ್ರನ ಇಚ್ಛೆ ಇರುತ್ತದೋ, ಅವನನ್ನು ಎದುರಿಗೆ; ಯಾವನಿಗೆ ರೋಗನಿವಾರಣದ ಇಚ್ಛೆಯಿರುತ್ತದೋ, ಅವನನ್ನು ಎಡಗಡೆಗೆ; ಮತ್ತು ಯಾವನಿಗೆ ಶತ್ರುವನ್ನು ಗೆಲ್ಲುವ ಇಚ್ಛೆಯಿರುತ್ತದೋ, ಅವನನ್ನು ಹಿಂದಿನಿಂದ ಕರೆದೊಯ್ದು, ಎದುರಿನವರ ನಡುವೆ ಕೂಡಿಸುತ್ತಾರೆ.

ಯಾವಾಗ ನಮಸ್ಕಾರ ಮಾಡುತ್ತಾರೋ, ಅದೇ ಸಮಯದಲ್ಲಿ ಆ ಸಿದ್ಧನು ತನ್ನ ಸಿದ್ಧತ್ವದ ಉಗ್ಗಡಣೆಯಿಂದ, ಉಚ್ಚಧ್ವನಿಯಿಂದ—

"ನೀನು ಪುತ್ರನ ಬಯಕೆ ಹೊತ್ತು ಇಲ್ಲಿ ಬರಲು, ಇಲ್ಲಿ ನಮ್ಮ ಬಳಿ ಪುತ್ರರನ್ನಿಟ್ಟಿದ್ದಾರೋ ?"*, ಎಂದು ಕೇಳುತ್ತಾನೆ.

ಹೀಗೆಯೇ ಧನದ ಇಚ್ಛೆಯನ್ನಿಟ್ಟುಕೊಳ್ಳುವವನನ್ನು—

"ನೀನು ಹಣವನ್ನು ಬಯಸಿ ಬರಲು ಇಲ್ಲಿ ಚೀಲಗಳನ್ನಿಟ್ಟಿದ್ದಾರೇನು ? ಫಕೀರರ ಹತ್ತಿರ ಹಣವೆಲ್ಲಿರುತ್ತದೆ ?", ಎಂದು ಪ್ರಶ್ನಿಸುತ್ತಾನೆ.

---

*ಹಲವು ವರ್ಷಗಳ ಹಿಂದೆ, ಪಂಜಾಬ್ ಪ್ರಾಂತದ 'ಜಹಾಂಗೀರ್ ಶಾಹ್', ಎಂಬ ದುಶ್ಚರಿತ್ರ ದುಷ್ಟನು ಸಂನ್ಯಾಸಿಯ ವೇಷದಲ್ಲಿ ಬೆಂಗಳೂರಿನ ಹತ್ತಿರ, ಮೈಸೂರು ರೋಡಿನ ಬಳಿ ಇರುವ ಬ್ಯಾಟರಾಯನಪುರ ಎಂಬ ಗ್ರಾಮದ ಗುಹೆಯೊಂದರಲ್ಲಿ ಬೀಡುಬಿಟ್ಟು, ಇದೇ ರೀತಿ ಛಲ-ಕಪಟದಿಂದ ಬೆಂಗಳೂರಿನಲ್ಲಿ ನೆಲಸಿದ್ದ ಪಶ್ಚಿಮೋತ್ತರ-ಭಾರತೀಯರ ಮುಗ್ಧಮಹಿಳೆಯರನ್ನು ವಂಚಿಸುತ್ತಿದ್ದನು. ಕೊನೆಗೆ ಪೋಲಿಸರಿಗೆ ತಿಳಿದು ಬಂದಾಗ, ಅವರ ಆಕ್ರಮಣವಾಗುವ ಮೊದಲೇ, ಪಂಜಾಬಿಗೆ ಓಡಿಹೋದನು.—ಸಂ.

ರೋಗವನ್ನುಳ್ಳವನಿಗೆ—

"ನೀನು ರೋಗಮುಕ್ತಿ ಬಯಸಿರಲು ನಾವು ವೈದ್ಯರೇನು ? ನಿನ್ನ ರೋಗವನ್ನು ನಿವಾರಿಸಲು, ನಾವು ವೈದ್ಯರಲ್ಲ! ಹೋಗು! ಯಾವನಾದರೂ ವೈದ್ಯನ ಬಳಿಗೆ!", ಎಂದು ಹೇಳುತ್ತಾನೆ.

ಆದರೆ, ಅವನ ತಂದೆ ರೋಗಿಯಾದರೆ, ಅವನ ಸಾಧಕನು ಹೆಬ್ಬೆರಳನ್ನೂ; ತಾಯಿ ರುಗ್ಣೆಯಾಗಿದ್ದರೆ, ತರ್ಜನಿಯನ್ನೂ ; ಸೋದರನು ರೋಗಿಯಾಗಿದ್ದರೆ, ನಡುಬೆರಳನ್ನೂ ; ಪತ್ನಿಯು ರೋಗಿಣಿಯಾಗಿದ್ದರೆ, ಉಂಗುರದ ಬೆರಳನ್ನೂ ; ಮಗಳು ರೋಗಿಣಿಯಾಗಿದ್ದರೆ, ಕಿರುಬೆರಳನ್ನೂ ಸೂಚಿಸಿಬಿಡುತ್ತಾನೆ! ಅದನ್ನು ನೋಡಿ, ಆ ಸಿದ್ಧನು—

"ನಿನ್ನ ತಂದೆ ಖಾಯಿಲೆ ಬಿದ್ದಿದ್ದಾನೆ. ನಿನ್ನ ತಾಯಿ, ನಿನ್ನ ಸೋದರ, ನಿನ್ನ ಪತ್ನಿ, ಮತ್ತು ನಿನ್ನ ಮಗಳು ರೋಗಿಯಾಗಿದ್ದಾರೆ!", ಎನ್ನುತ್ತಾನೆ.

ಆಗಲಂತೂ ಆ ನಾಲ್ಕಕ್ಕೆ ನಾಲ್ಕೂ ಜನ ಬಹಳ ಮುಗ್ಧರಾಗಿ ಹೋಗುತ್ತಾರೆ.

**ಸಾಧಕರು—**

"ನೋಡಿ ! ನಾವು ಹೇಗೆ ಹೇಳಿದ್ದೆವೋ, ಹಾಗೆಯೇ ಇದ್ದಾರೋ, ಅಥವಾ ಇಲ್ಲವೋ ?", ಎಂದು ಅವರಿಗೆ ಹೇಳುತ್ತಾರೆ.

**ಗೃಹಸ್ಥರು—**

"ಹೌದು! ಹೇಗೆ ನೀವು ಹೇಳಿದ್ದಿರೋ, ಹಾಗೆ ಇದ್ದಾರೆ. ನೀವು ನಮಗೆ ಬಹಳ ಉಪಕಾರ ಮಾಡಿದಿರಿ ! ಮತ್ತು ಯಾರ ದರ್ಶನಮಾಡಿ, ನಾವು ಕೃತಾರ್ಥರಾದೆವೋ, ಅಂತಹ ಮಹಾತ್ಮರು ಸಿಕ್ಕಿದುದು ನಮ್ಮ ಮಹಾಭಾಗ್ಯೋದಯವೇ ಸರಿ!", ಎನ್ನುತ್ತಾರೆ.

**ಸಾಧಕ:**—"ನೋಡಿ, ಸೋದರರೇ ! ಈ ಮಹಾತ್ಮರು ಮನೋಗಾಮಿಗಳಾಗಿದ್ದಾರೆ. ಇಲ್ಲಿ ಬಹುದಿನ ಇರುವವರಲ್ಲ. ಇವರ ಆಶೀರ್ವಾದವನ್ನೇನಾದರೂ ತೆಗೆದುಕೊಳ್ಳಬೇಕಾದರೆ, ನಿಮ್ಮ-ನಿಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ, ತನು-ಮನ-ಧನಗಳಿಂದ ಇವರ ಸೇವೆಮಾಡಿರಿ! ಏಕೆಂದರೆ—

**'ಸೇವೆಯಿಂದಲೇ ಶಾವಿಗೆ ಸಿಕ್ಕುತ್ತದೆ.'**

"ಯಾರ ಮೇಲಾದರೂ ಪ್ರಸನ್ನರಾಗಿಹೋದಲ್ಲಿ, ಏನು ವರಗಳನ್ನು ಕೊಟ್ಟುಬಿಡುವರೋ, ಹೇಳಲಾಗುವುದಿಲ್ಲ ! **'ಸಂತರ ಗತಿ ಅಪಾರವಾಗಿದೆ!'**", ಎನ್ನುತ್ತಾನೆ.

ಗೃಹಸ್ಥರು ಇಂತಹ ಉಪ್ಪು-ಖಾರ ಹಚ್ಚಿದ ಮಾತುಗಳನ್ನು ಕೇಳಿ, ಬಹಳ ಹರ್ಷದಿಂದ ಅವರನ್ನು ಪ್ರಶಂಸಿಸುತ್ತಾ, ಮನೆಯ ಕಡೆಗೆ ಹೋಗುತ್ತಾರೆ. ಸಾಧಕರೂ ಕೂಡ ಅವರೊಂದಿಗೇ ಹೋಗುತ್ತಾರೆ. ಏಕೆಂದರೆ, ಯಾರೂ ಅವರ ಪಾಖಂಡವನ್ನು ಹೊರಗೆಡಹದಿರಲಿ, ಎಂದು!

ಆ ಧನಾಢ್ಯರ ಮಿತ್ರನು ಯಾವನಾದರೂ ಸಿಕ್ಕಿದರೆ, ಅವನ ಮುಂದೆಯೂ ಪ್ರಶಂಸೆ ಮಾಡುತ್ತಾರೆ. ಈ ರೀತಿ ಯಾರು ಯಾರು ಸಾಧಕರೊಂದಿಗೆ ಹೋಗುತ್ತಾರೋ, [ಅವರು] ಅವರವರ ವೃತ್ತಾಂತಗಳನ್ನೆಲ್ಲಾ [ಅವರಿಗೆ] ಹೇಳಿಬಿಡುತ್ತಾರೆ. ಯಾವಾಗ ನಗರದಲ್ಲಿ—

“ಇಂತಹ ಕಡೆಗೆ ಒಬ್ಬ ಬಹಳ ಭಾರೀ ಸಿದ್ಧಪುರುಷರು ಬಂದಿದ್ದಾರೆ! ನಡೆಯಿರಿ, ಅವರ ಬಳಿಗೆ!”, ಎಂಬ ಕೋಲಾಹಲವೇಳುತ್ತದೋ, ಆಗ ಜಾತ್ರೆಗೆ ಜಾತ್ರೆಯೇ ಬಳಿಹೋಗಿ, ಬಹಳ ಜನರು—

“ಮಹಾರಾಜ್! ನನ್ನ ಮನಸ್ಸಿನ ಸ್ಥಿತಿಯನ್ನು ಹೇಳಿರಿ”, ಎಂದು ಕೇಳುತ್ತಾರೆ.

ಆಗಲಂತೂ ವ್ಯವಸ್ಥೆಯೇ ಕೆಟ್ಟುಹೋಗುವುದರಿಂದ, [ಸಿದ್ಧಪುರುಷನು] ತೆಪ್ಪಗಾಗಿ ಮೌನ ಧರಿಸಿಬಿಡುತ್ತಾನೆ. ಮತ್ತು—

“ನಮ್ಮನ್ನು ತುಂಬಾ ಪೀಡಿಸಬೇಡಿರಿ”, ಎನ್ನುತ್ತಾನೆ.

ಆ ಕ್ಷಣದಲ್ಲಿಯೇ ಥಟ್ಟನೇ ಅವನ ಸಾಧಕರೂ ಕೂಡ—

“ನೀವು ಇವರನ್ನು ಬಹಳ ಪೀಡಿಸುವುದಾದರೆ, ಇವರು ಹೊರಟು ಹೋಗುವರು!”, ಎಂದು ಹೇಳಲಾರಂಭಿಸುತ್ತಾರೆ.

ಮತ್ತು ಯಾವನಾದರೂ ದೊಡ್ಡ ಧನಾಢ್ಯನಾಗಿರುತ್ತಾನೋ, ಅವನು ಸಾಧಕನನ್ನು ಬೇರೆಡೆಗೆ ಕರೆದು—

“ನಮ್ಮ ಮನಸ್ಸಿನ ಮಾತನ್ನು ಹೇಳಿಸಿ ಬಿಡುವಿರಾದರೆ, ನಾವು ಸತ್ಯವೆಂದು ಸ್ವೀಕರಿಸುತ್ತೇವೆ.”, ಎನ್ನುತ್ತಾನೆ.

ಸಾಧಕನು—“ವಿಷಯವೇನು ?”, ಎಂದು ಕೇಳುತ್ತಾನೆ.

ಧನಾಢ್ಯನು ಅವನಿಗೆ ಹೇಳಿಬಿಡುತ್ತಾನೆ! ಆಗ, ಅವನನ್ನು ಅದೇ ರೀತಿಯ ಸಂಕೇತದಂತೆ, ಕರೆದೊಯ್ದು ಕೂಡಿಸಿಬಿಡುತ್ತಾನೆ. ಆ ಸಿದ್ಧನು ತಿಳಿದುಕೊಂಡು, ಸರ್ರನೇ ಹೇಳಿಬಿಡುತ್ತಾನೆ! ಆಗಲಂತೂ, ಸಂಪೂರ್ಣ ಜನಜಾತ್ರೆಯೇ—

"ಓಹೋ! ಬಹು ದೊಡ್ಡ ಸಿದ್ಧಪುರುಷರು!", ಎಂಬ ಕೂಗನ್ನು ಆಲಿಸಿ ಬಿಡುತ್ತದೆ.

ಯಾವನೋ ಮಿಠಾಯಿಯನ್ನೂ, ಯಾವನೋ ಕಾಸನ್ನೂ, ಯಾವನೋ ರೂಪಾಯಿಯನ್ನೂ, ಯಾವನೋ ಸ್ವರ್ಣಮುದ್ರೆಯನ್ನೂ, ಯಾವನೋ ವಸ್ತ್ರವನ್ನೂ, ಮತ್ತು ಯಾವನೋ ಖಾದ್ಯವಸ್ತುಗಳನ್ನೂ ಅರ್ಪಿಸುತ್ತಾನೆ!

ಮತ್ತು ಎಲ್ಲಿಯವರೆಗೆ ಮಾನ್ಯತೆ ಬಹಳವಿರುವುದೋ, ಅಲ್ಲಿಯವರೆಗೆ ಯಥೇಷ್ಟವಾಗಿ ಸೂರೆಮಾಡುತ್ತಾರೆ!

ಮತ್ತು ಯಾರಾದರೂ **'ಕಣ್ಣಿದ್ದ ಕುರುಡರೂ, ದುಡ್ಡಿದ್ದ ದೊಡ್ಡಪ್ಪಂದಿರೂ'** ಆದ ಒಬ್ಬರಿಬ್ಬರಿಗೆ--'ಪುತ್ರರಾಗಲಿ', ಎಂಬ ಆಶೀರ್ವಾದವನ್ನಾಗಲೀ, ಅಥವಾ ಬೂದಿಯನ್ನಾಗಲೀ ಎತ್ತಿ ಕೊಟ್ಟುಬಿಡುತ್ತಾನೆ! ಮತ್ತು ಅವನಿಂದ ಸಾವಿರ ರೂಪಾಯಿಗಳನ್ನು ತೆಗೆದುಕೊಂಡು.—

"ನಿನ್ನ ಭಕ್ತಿ ಸತ್ಯವಾಗಿದ್ದರೆ, ಪುತ್ರನು ಹುಟ್ಟುವನು", ಎಂದು ಹೇಳಿ ಬಿಡುತ್ತಾನೆ.

### (ವಂಚಕರಿಂದ ತಪ್ಪಿಸಿಕೊಳ್ಳುವ ಉಪಾಯ—ವೇದಾಧ್ಯಯನ ಮತ್ತು ಸತ್ಸಂಗ)

**ಯಾರನ್ನು ವಿದ್ವಾಂಸರು ಮಾತ್ರ ಪರೀಕ್ಷಿಸಬಲ್ಲರೋ, ಅನ್ಯರಿಗೆ ಸಾಧ್ಯವಿಲ್ಲವೋ, ಅಂತಹ ಈ ಬಗೆಯ ಬಹುಮಂದಿ ಠಕ್ಕರಿರುತ್ತಾರೆ ! ಆದುದರಿಂದ, ಯಾವನೂ ತನ್ನನ್ನು ಠಕ್ಕುತನದಲ್ಲಿ ಸಿಕ್ಕಿಸಲು ಆಗದಂತೆ, [ಮತ್ತು] ಬೇರೆಯವರನ್ನೂ ಕೂಡ, ವಂಚನೆಯಿಂದ ದೂರವಿಡಲಾಗುವಂತೆ, ವೇದಗಳೇ ಮೊದಲಾದ ಶಾಸ್ತ್ರಗಳ ಪಠನವನ್ನೂ ಮತ್ತು ಸತ್ಸಂಗವನ್ನೂ ಮಾಡುವುದು ಅಗತ್ಯವಾಗಿರುತ್ತದೆ!**

ಏಕೆಂದರೆ, ವಿದ್ಯೆಯೇ ಮಾನವನ ನೇತ್ರವಾಗಿರುತ್ತದೆ! ವಿದ್ಯಾ-ಶಿಕ್ಷಣಗಳಿಲ್ಲದೇ, ಜ್ಞಾನ ಉಂಟಾಗಲಾರದು!

ಯಾರು ಬಾಲ್ಯಾವಸ್ಥೆಯಿಂದ ಉತ್ತಮ ಶಿಕ್ಷಣ ಪಡೆಯುತ್ತಾರೋ, ಅವರೇ ಮಾನವರೂ ಮತ್ತು ವಿದ್ವಾಂಸರೂ ಆಗಿರುತ್ತಾರೆ. ಯಾರಿಗೆ ದುಸ್ಸಂಗ ಪ್ರಾಪ್ತವಾಗುತ್ತದೋ, ಅವರು ದುಷ್ಟರೂ, ಪಾಪಿಗಳೂ, ಮಹಾಮೂರ್ಖರೂ ಆಗಿ, ಬಹು ದುಃಖವನ್ನು ಅನುಭವಿಸುತ್ತಾರೆ!

ಆದುದರಿಂದ,

**'ಯಾವನು ಬಲ್ಲನೋ, ಅವನೇ ಅಂಗೀಕರಿಸುತ್ತಾನೆ'.**

ಎಂಬ ಜ್ಞಾನವನ್ನು ವಿಶೇಷವೆಂದು ಹೇಳಿದ್ದಾರೆ.

### (ಇಹ-ಪರ ಜನ್ಮದಲ್ಲಿ ಆನಂದಕ್ಕೆ ಕಾರಣ)

**'ನ ವೇತ್ತಿ ಯೋ ಯಸ್ಯ ಗುಣಪ್ರಕರ್ಷಂ**

**ಸ ತಸ್ಯ ನಿಂದಾಂ ಸತತಂ ಕರೋತಿ ।**

**ಯಥಾ ಕಿರಾತೀ ಕರಿಕುಂಭಜಾತಾ**

**ಮುಕ್ತಾಃ ಪರಿತ್ಯಜ್ಯ ಬಿಭರ್ತಿ ಗುಂಜಾಃ ॥'**

ಇದು ಯಾವನೋ ಕವಿಯ ಶ್ಲೋಕವಾಗಿದೆ.*

ಯಾವನು ಯಾವುದರ ಗುಣವನ್ನು ಅರಿಯನೋ, ಅವನು, ಹೇಗೆ, ಕಾಡಿನ ಭಿಲ್ಲನು ಆನೆಯ ಮುತ್ತುಗಳನ್ನು ತ್ಯಜಿಸಿ, ಗುಲಗಂಜಿಯನ್ನು ಧರಿಸುತ್ತಾನೋ, ಹಾಗೆ ಅದರ ನಿಂದೆಯನ್ನು ನಿರಂತರವೂ ಮಾಡುತ್ತಾನೆ. ಹಾಗೆಯೇ—

**ಯಾವ ಪುರುಷನು ವಿದ್ವಾಂಸನೂ, ಜ್ಞಾನಿಯೂ, ಧಾರ್ಮಿಕನೂ, ಸತ್ಪುರುಷರ ಸಂಗಿಯೂ, ಯೋಗಿಯೂ, ಪುರುಷಾರ್ಥಿಯೂ, ಜಿತೇಂದ್ರಿಯನೂ, ಸುಶೀಲನೂ ಆಗಿರುತ್ತಾನೋ, ಅವನೇ ಧರ್ಮಾರ್ಥ-ಕಾಮ-ಮೋಕ್ಷಗಳನ್ನು ಗಳಿಸಿಕೊಂಡು ಈ ಜನ್ಮದಲ್ಲಿ ಮತ್ತು ಪರಜನ್ಮದಲ್ಲಿ ಸದಾ ಆನಂದದಲ್ಲಿರುತ್ತಾನೆ!**

### (ಉಪಸಂಹಾರ)

ಹೀಗೆ, ಆರ್ಯಾವರ್ತನಿವಾಸೀ ಜನರ ಮತದ ವಿಷಯದಲ್ಲಿ ಸಂಕ್ಷೇಪವಾಗಿ ಬರೆದಿದ್ದೇವೆ.

ಇದರ ನಂತರ, **ಆರ್ಯರಾಜರುಗಳ** ಯಾವ ಸ್ವಲ್ಪ ಇತಿಹಾಸ ಸಿಕ್ಕಿದೆಯೋ, ಅದನ್ನು ಸಮಸ್ತ ಸಜ್ಜನರಿಗೂ ತಿಳಿಸುವ ಸಲುವಾಗಿ ಪ್ರಕಾಶಿಸಲಾಗುತ್ತದೆ.

ಯಾವುದರಲ್ಲಿ ಶ್ರೀಮಾನ್ ಮಹಾರಾಜಾ **'ಯುಧಿಷ್ಠಿರ'**ನಿಂದಾರಂಭಿಸಿ, ಮಹಾರಾಜಾ **'ಯಶಪಾಲ'**ನ ಪರ್ಯಂತ ರಾಜರು ಆಗಿಹೋಗಿದ್ದಾರೋ, ಆ ಆರ್ಯಾವರ್ತ ದೇಶೀಯ ರಾಜವಂಶದ ಇತಿಹಾಸವನ್ನು ಈಗ ಬರೆಯುತ್ತೇವೆ.

---

*ವೃದ್ಧಚಾಣಕ್ಯ (11.12)—ಅನು.

ಮತ್ತು ಶ್ರೀಮನ್ಮಹಾರಾಜಾ 'ಸ್ವಾಯಂಭುವ ಮನು'ವಿನಿಂದ ಆರಂಭಿಸಿ, ಮಹಾರಾಜಾ ಯುಧಿಷ್ಠಿರನವರೆಗಿನ ಇತಿಹಾಸವು ಮಹಾಭಾರತ ಮೊದಲಾದುವುಗಳಲ್ಲಿ ಬರೆದೇ ಇದೆ!* ಮತ್ತು ಇದರಿಂದ, ಸಜ್ಜನರಿಗೆ ಈಚೆಗಿನ ಇತಿಹಾಸದ ವೃತ್ತವು ಸ್ವಲ್ಪ ವಿದಿತವಾಗುವುದು.

ಈ ವಿಷಯುವು "ವಿದ್ಯಾರ್ಥೀ"–ಸಮ್ಮಿಳಿತವಾದ, "ಹರಿಶ್ಚಂದ್ರ ಚಂದ್ರಿಕಾ"† ದಲ್ಲೂ ಮತ್ತು "ಮೋಹನ ಚಂದ್ರಿಕಾ" ಎಂಬ ಶ್ರೀನಾಥದ್ವಾರಾದಿಂದ ಹೊರಡುತ್ತಿದ್ದ ಪಾಕ್ಷಿಕ ಪತ್ರಗಳಲ್ಲೂ ಇದೆ. [ಇದು] ರಾಜಪುಟಾಣಾ ಪ್ರದೇಶದ ಮೇವಾಡರಾಜ್ಯದ ಉದಯಪುರ, ಚಿತ್ತೌಡಗಢದಲ್ಲಿ ಎಲ್ಲರಿಗೂ ವಿದಿತವಾಗಿದೆ. ನಾವು ಆದರಿಂದ, ಈ ಅನುವಾದವನ್ನು ಮಾಡಿದ್ದೇವೆ.

## (ಆರ್ಯ ಸಜ್ಜನರು ಇತಿಹಾಸದ ಅನ್ವೇಷಣ ಮಾಡಬೇಕು)

ಇದೇ ರೀತಿ ನಮ್ಮ ಆರ್ಯಸಜ್ಜನರು ಇತಿಹಾಸ ಮತ್ತು ವಿದ್ಯಾಪುಸ್ತಕಗಳ ಅನ್ವೇಷಣವನ್ನುಮಾಡಿ, ಪ್ರಕಾಶಪಡಿಸಿದರೆ, ದೇಶಕ್ಕೆ ಬಹಳ ಲಾಭವುಂಟಾಗುವುದು!‡

---

*ಈ ಬಗ್ಗೆ ಮಹರ್ಷಿ ದಯಾನಂದರು ಪೂನಾದಲ್ಲಿ ಕೊಟ್ಟ 15 ಪ್ರವಚನಗಳಲ್ಲಿ ಇತಿಹಾಸ ವಿಷಯಕವಾದ ಆರು ಪ್ರವಚನಗಳು ಮಹತ್ವದ್ದಾಗಿವೆ. ಈ 15 ಪ್ರವಚನಗಳ 'ಪೂನಾ ಪ್ರವಚನ', ಎಂಬ ಕನ್ನಡ-ಅನುವಾದದ ಪ್ರಕಾಶನ ಶೀಘ್ರವಾಗಿ ಆಗಲಿದೆ.—ಸಂ.

†ಈ ಪತ್ರಿಕೆಯನ್ನು ಭಾರತೇಂದು ಹರಿಶ್ಚಂದ್ರರು ಕಾಶಿಯಿಂದ ಪ್ರಕಟಿಸುತ್ತಿದ್ದರು. —ಯು.ಮೀ.

‡ಈ ನಿರ್ದೇಶವನ್ನು ಪಾಲಿಸಿದವರಲ್ಲಿ ಆರ್ಯಸಮಾಜದ ಪ್ರಸಿದ್ಧ ಇತಿಹಾಸಜ್ಞರಾದ ಪಂ. ಭಗವದ್ದತ್ತರು ಅಗ್ರಗಣ್ಯರು. ವೇದಗಳಲ್ಲಿ ಮಾನವರ, ಮತ್ತು ಭಾರತದ ಇತಿಹಾಸ ವಿದೆಯೆಂದು ಒಪ್ಪುವ, ಮತ್ತು ವಿಕಾಸವಾದದ ಕಲ್ಪಿತ ಸಿದ್ಧಾಂತದ ಆಧಾರದ ಮೇಲೆ ಕೋತಿಯಿಂದ ಮಾನವನ ವಿಕಾಸವಾಗಿದೆಯೆಂದು ತಿಳಿದು, ಕಪಿಚೇಷ್ಟಾರತರಾಗಿ, ಭಾರತದ ಅಯಥಾರ್ಥ ಇತಿಹಾಸವನ್ನು ಬರೆದ ಐರೋಪ್ಯ ಇತಿಹಾಸಜ್ಞರ ಉಚ್ಛಿಷ್ಟಭೋಜಿಗಳಾದ ಭಾರತೀಯ ಇತಿಹಾಸಜ್ಞರ ಎದುರಿಗೆ ಅವರ ದೇಶದ್ರೋಹವನ್ನು ತೀವ್ರವಾಗಿ ಖಂಡಿಸುತ್ತಾ, ಭಾರತೀಯ ಆರ್ಷ-ಸಂಸ್ಕೃತ ಸಾಹಿತ್ಯದ ಮೇರೆಗೆ ಸೃಷ್ಟಿಯ, ಈ ಜಗತ್ತಿನ, ಮತ್ತು ಭಾರತದ ಯಥಾರ್ಥ ಇತಿಹಾಸವನ್ನು ಪಂ. ಭಗವದ್ದತ್ತರು ಬರೆದು ವಿಖ್ಯಾತರಾದರು! ಅವರ "ಭಾರತವರ್ಷ ಕಾ ಬೃಹದ್ ಇತಿಹಾಸ್, ವೈದಿಕ ವಾಙ್ಮಯ ಕಾ ಇತಿಹಾಸ್, ಭಾಷಾ ಕಾ ಇತಿಹಾಸ್, ಭಾರತೀಯ ಸಂಸ್ಕೃತಿ ಕಾ ಇತಿಹಾಸ್, ವೇದವಿದ್ಯಾನಿದರ್ಶನ"; ಪಂ ಯುಧಿಷ್ಠಿರ ಮೀಮಾಂಸಕರ "ಸಂಸ್ಕೃತ ವ್ಯಾಕರಣಶಾಸ್ತ್ರ ಕಾ ಇತಿಹಾಸ್"; ಪಂ. ಉದಯವೀರಶಾಸ್ತ್ರಿಗಳ 'ಸಾಂಖ್ಯದರ್ಶನ ಕಾ ಇತಿಹಾಸ್' ಮತ್ತು ಪಂ. ಸತ್ಯಕೇತು ವಿದ್ಯಾಲಂಕಾರರ 'ಆರ್ಯಸಮಾಜ ಕಾ ಇತಿಹಾಸ್' ಉಲ್ಲೇಖನೀಯವಾಗಿವೆ !

ಆರ್ಯಸಮಾಜೀ ಇತಿಹಾಸಜ್ಞ ವಿದ್ವಾಂಸರು ಭಾರತೀಯ ಸಂಸ್ಕೃತಿ ಮತ್ತು ಇತಿಹಾಸದ ಬಗ್ಗೆ ಈಗಲೂ ಮಾರ್ಗದರ್ಶಕರಾಗಿ ಜಗತ್ತಿಗೆ ಬೆಳಕನ್ನು ನೀಡುತ್ತಿದ್ದಾರೆ. →

ಆ ಪತ್ರದ ಸಂಪಾದಕ ಮಹಾಶಯನು ತನ್ನ ಮಿತ್ರನಿಂದ ವಿಕ್ರಮಸಂವತ್ 1782 (ಸಾವಿರದ ಏಳನೂರ ಎಂಬತ್ತೆರಡು)ರಲ್ಲಿ* ಬರೆಯಲ್ಪಟ್ಟ ಒಂದು ಪ್ರಾಚೀನ ಪುಸ್ತಕದಿಂದ ಗ್ರಹಿಸಿ, ಸಂವತ್ 1939ರ ಮಾರ್ಗಶಿರ ಶುಕ್ಲಪಕ್ಷದ 19-20ರ ಕಿರಣಗಳಲ್ಲಿ, ಎಂದರೆ ಎರಡು ಪಾಕ್ಷಿಕಪತ್ರಗಳಲ್ಲಿ ಮುದ್ರಿಸಿದ್ದಾನೆ. ಅದು ಕೆಳಗೆ ಬರೆದಿರುವಂತಿದೆ, ಎಂದು ತಿಳಿದುಕೊಳ್ಳಿರಿ—

## ಆರ್ಯಾವರ್ತದೇಶೀಯ-ರಾಜವಂಶಾವಳಿ

ಇಂದ್ರಪ್ರಸ್ಥದಲ್ಲಿ ಆರ್ಯ ಜನರು ಶ್ರೀಮನ್ಮಹಾರಾಜಾ '**ಯಶಪಾಲ**'ನ ವರೆಗೆ ರಾಜ್ಯವಾಳಿದರು.

ಅವರಲ್ಲಿ ಶ್ರೀಮನ್ಮಹಾರಾಜಾ '**ಯುಧಿಷ್ಠಿರ**'ನಿಂದ ಆರಂಭಿಸಿ, ಮಹಾರಾಜಾ '**ಯಶಪಾಲ**'ನ ವರೆಗೆ ವಂಶ, ಎಂದರೆ ಪೀಳಿಗೆಗಳು ಸುಮಾರು 124 ರಾಜರುಗಳು, 4157 ವರ್ಷ, 9 ಮಾಸ, 14 ದಿವಸಗಳಷ್ಟು ಕಾಲ [ಶಾಸನ]ಮಾಡಿದ್ದಾರೆ.

ಇವರುಗಳ ವಿವರ—

| ರಾಜಾ | ಪೀಳಿಗೆ | ವರ್ಷ | ಮಾಸ | ದಿನ |
|---|---|---|---|---|
| ಆರ್ಯರಾಜರು | 124 | 4157 | 9 | 14 |

ಶ್ರೀಮನ್ಮಹಾರಾಜಾ **ಯುಧಿಷ್ಠಿರ** ಮೊದಲಾದವರ ವಂಶ ಸುಮಾರು ಪೀಳಿಗೆ 30 ; ವರ್ಷ 1770 ; ತಿಂಗಳು 11 ; ದಿನ 10. ಇವರುಗಳ ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ರಾಜಾ ಯುಧಿಷ್ಠಿರ | 36 | 8 | 25 |
| 2. | ರಾಜಾ ಪರೀಕ್ಷಿತ್ | 60 | 0 | 0 |
| 3. | ರಾಜಾ ಜನಮೇಜಯ | 84 | 7 | 23 |
| 4. | ರಾಜಾ ಅಶ್ವಮೇಧ | 82 | 8 | 22 |
| 5. | ದ್ವಿತೀಯ ರಾಮ | 88 | 2 | 8 |
| 6. | ಛತ್ರಮಲ್ಲ | 81 | 11 | 27 |

→ ಈ ವಿಷಯದಲ್ಲಿ ಶೂನ್ಯರಾದ ಮತಾಚಾರ್ಯರು ತಮ್ಮ ಅನುಯಾಯೀ ವಿದ್ವಾಂಸರನ್ನು ಶೂನ್ಯರಾಗಿಯೇ ಮಾಡಿಟ್ಟಿದ್ದಾರೆ.—ಸಂ.

*ಎಂದರೆ, ಇಸವಿ 1725ರಲ್ಲಿ. ವಿಕ್ರಮ ಸಂವತ್ತಿನಿಂದ 57 ನ್ನು ಕಳೆದರೆ, ಇಸವಿ ಬರುತ್ತದೆ. ಇಸವಿಯಿಂದ 78ನ್ನು ಕಳೆದರೆ, ಶಾಲೀವಾಹನ ಶಕ ಬರುತ್ತದೆ.—ಸಂ.

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 7. | ಚಿತ್ರರಥ | 75 | 3 | 18 |
| 8. | ದುಷ್ಟಶೈಲ್ಯ | 75 | 10 | 24 |
| 9. | ರಾಜಾ ಉಗ್ರಸೇನ | 78 | 7 | 21 |
| 10. | ರಾಜಾ ಶೂರಸೇನ | 78 | 7 | 21 |
| 11. | ಭುವನಪತಿ | 69 | 5 | 5 |
| 12. | ರಣಜಿತ್ | 65 | 10 | 4 |
| 13. | ಋಕ್ಷಕ | 64 | 7 | 4 |
| 14. | ಸುಖದೇವ | 62 | 0 | 24 |
| 15. | ನರಹರಿದೇವ | 51 | 10 | 2 |
| 16. | ಸುಚಿರಥ | 42 | 11 | 2 |
| 17. | ಶೂರಸೇನ (ದ್ವಿ.) | 58 | 10 | 8 |
| 18. | ಪರ್ವತಸೇನ | 55 | 8 | 10 |
| 19. | ಮೇಧಾವೀ | 52 | 10 | 10 |
| 20. | ಸೋನಚೀರ | 50 | 8 | 21 |
| 21. | ಭೀಮದೇವ | 47 | 9 | 20 |
| 22. | ನೃಹರಿದೇವ | 45 | 11 | 23 |
| 23. | ಪೂರ್ಣಮಲ್ಲ | 44 | 8 | 7 |
| 24. | ಕರದವೀ | 44 | 10 | 8 |
| 25. | ಅಲಂಮಿಕ | 50 | 11 | 8 |
| 26. | ಉದಯಪಾಲ | 38 | 9 | 0 |
| 27. | ದುವನಮಲ್ಲ | 40 | 10 | 26 |
| 28. | ದಮಾತ | 32 | 0 | 0 |
| 29. | ಭೀಮಪಾಲ | 58 | 5 | 8 |
| 30. | ಕ್ಷೇಮಕ | 48 | 11 | 21 |

ರಾಜಾ ಕ್ಷೇಮಕನ ಪ್ರಧಾನ ಸಚಿವನಾಗಿದ್ದ **ವಿಶ್ರವಾ**, ಎಂಬುವನು ಕ್ಷೇಮಕ ರಾಜನನ್ನು ಸಂಹರಿಸಿ, ರಾಜ್ಯವಾಳಿದನು. ಪೀಳಿಗೆ 14 ; ವರ್ಷಗಳು 500 ; ತಿಂಗಳು 3 ; ದಿನಗಳು 17. ಇವರುಗಳ ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ವಿಶ್ರವಾ | 17 | 3 | 29 |
| 2. | ಪುರಸೇನೀ | 42 | 8 | 21 |
| 3. | ವೀರಸೇನೀ | 52 | 10 | 7 |
| 4. | ಅನಂಗಶಾಯೀ | 47 | 8 | 23 |
| 5. | ಹರಿಜಿತ್ | 35 | 9 | 17 |
| 6. | ಪರಮಸೇನೀ | 44 | 2 | 23 |
| 7. | ಸುಖಪಾತಾಲ | 30 | 2 | 21 |
| 8. | ಕದ್ರುತ | 42 | 9 | 24 |
| 9. | ಸಜ್ಜ | 32 | 2 | 14 |
| 10. | ಅಮರಚೂಡ | 27 | 3 | 16 |
| 11. | ಅಮೀಪಾಲ | 22 | 11 | 25 |
| 12. | ದಶರಥ | 25 | 4 | 12 |
| 13. | ವೀರಸಾಲ | 31 | 8 | 11 |
| 14. | ವೀರಸಾಲಸೇನ | 47 | 0 | 14 |

ರಾಜಾ ವೀರಸಾಲಸೇನನನ್ನು ಪ್ರಧಾನನಾಗಿದ್ದ ವೀರಮಹಾ ಎಂಬುವನು ಕೊಂದು, ರಾಜ್ಯವಾಳಿದನು. ಪೀಳಿಗೆ 16 ; ವರ್ಷಗಳು 445 ; ಮಾಸಗಳು 5; ಮತ್ತು ದಿನಗಳು 3. ಇವರುಗಳ ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ರಾಜಾ ವೀರಮಹಾ | 35 | 10 | 8 |
| 2. | ಅಜಿತಸಿಂಹ | 27 | 7 | 19 |
| 3. | ಸರ್ವದತ್ತ | 28 | 3 | 10 |
| 4. | ಭುವನಪತಿ | 15 | 4 | 10 |
| 5. | ವೀರಸೇನ (ಪ್ರಥಮ) | 21 | 2 | 13 |
| 6. | ಮಹೀಪಾಲ | 40 | 8 | 7 |
| 7. | ಶತ್ರುಶಾಲ | 26 | 4 | 3 |
| 8. | ಸಂಘರಾಜ | 17 | 2 | 10 |
| 9. | ತೇಜಪಾಲ | 28 | 11 | 10 |
| 10. | ಮಾಣಿಕಚಂದ | 37 | 7 | 21 |
| 11. | ಕಾಮಸೇನೀ | 42 | 5 | 10 |

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 12. | ಶತ್ರುಮರ್ದನ | 8 | 11 | 13 |
| 13. | ಜೀವನಲೋಕ | 28 | 9 | 17 |
| 14. | ಹರಿರಾವ | 26 | 10 | 29 |
| 15. | ವೀರಸೇನ (ದ್ವಿತೀಯ) | 35 | 2 | 20 |
| 16. | ಆದಿತ್ಯಕೇತು | 23 | 11 | 13 |

ಮಗಧ ದೇಶದ ರಾಜನಾಗಿದ್ದ **ಆದಿತ್ಯಕೇತುವನ್ನು** ಪ್ರಯಾಗದ ರಾಜನಾದ **ಧಂಧರನೆಂಬುವನು** ಕೊಂದು, ರಾಜ್ಯವನ್ನಾಳಿದನು. ಪೀಳಿಗೆ 9 ; ವರ್ಷಗಳು 374 ; ಮಾಸಗಳು 11 ; ದಿನಗಳು 26. ಇವರ ವಿಸ್ತಾರ.—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ರಾಜಾ ಧಂಧರ | 42 | 7 | 24 |
| 2. | ಮಹರ್ಷಿ | 41 | 2 | 29 |
| 3. | ಸನರಚ್ಚೀ | 50 | 10 | 19 |
| 4, | ಮಹಾಯುದ್ಧ | 30 | 3 | 8 |
| 5. | ದುರನಾಥ | 28 | 5 | 25 |
| 6. | ಜೀವನರಾಜ | 45 | 2 | 5 |
| 7. | ರುದ್ರಸೇನ | 47 | 4 | 28 |
| 8. | ಆರೀಲಕ | 52 | 10 | 8 |
| 9. | ರಾಜಪಾಲ | 36 | 0 | 0 |

ರಾಜಾ **ರಾಜಪಾಲನನ್ನು** ಸಾಮಂತನಾಗಿದ್ದ **ಮಹಾನ್‌ಪಾಲನು** ವಧಿಸಿ, ರಾಜ್ಯವಾಳಿದನು. ಪೀಳಿಗೆ 1 ; ವರ್ಷ 14 ; ಮಾಸ 0 ; ದಿನ 0. ಇವನ ವಂಶ ವಿಸ್ತಾರವಾಗಲಿಲ್ಲ.

ರಾಜಾ **ಮಹಾನ್‌ಪಾಲನ** ರಾಜ್ಯದ ಮೇಲೆ **ರಾಜಾ ವಿಕ್ರಮಾದಿತ್ಯನು ಅವಂತಿಕಾನಗರಿ** (=ಉಜ್ಜಯಿನಿ)ಯಿಂದ ಮೇಲೇರಿ ಬಂದು, **ಮಹಾನ್‌ಪಾಲನನ್ನು** ಸಂಹರಿಸಿ, ರಾಜ್ಯವಾಳಿದನು. ಪೀಳಿಗೆ 1 ; ವರ್ಷ 29 ; ಮಾಸ 0 ; ದಿನ 0. ಇವನ ವಂಶ ವಿಸ್ತಾರವಾಗಲಿಲ್ಲ.

ಶಾಲಿವಾಹನನ ಸಾಮಂತನಾಗಿದ್ದ ಪೈಠಣದ **ಸಮುದ್ರಪಾಲಯೋಗಿಯು ರಾಜಾ ವಿಕ್ರಮಾದಿತ್ಯನನ್ನು** ಸಂಹರಿಸಿ, ರಾಜ್ಯವನ್ನಾಳಿದನು. ಪೀಳಿಗೆ 16 ; ವರ್ಷಗಳು 372 ; ಮಾಸಗಳು 4 ; ದಿನಗಳು 27. ಇವರ ವಿಸ್ತಾರ.—

| ಆರ್ಯರಾಜರು | | ವರ್ಷ | ಮಾಸ | ದಿನ |
|---|---|---|---|---|
| 1. | ಸಮುದ್ರಪಾಲ | 54 | 2 | 20 |
| 2. | ಚಂದ್ರಪಾಲ | 36 | 5 | 4 |
| 3. | ಸಹಾಯಪಾಲ | 11 | 4 | 11 |
| 4. | ದೇವಪಾಲ | 27 | 1 | 28 |
| 5. | ನರಸಿಂಹಪಾಲ | 18 | 0 | 20 |
| 6. | ಸಾಮಪಾಲ | 27 | 1 | 17 |
| 7. | ರಘುಪಾಲ | 22 | 3 | 25 |
| 8. | ಗೋವಿಂದಪಾಲ | 27 | 1 | 17 |
| 9. | ಅಮೃತಪಾಲ | 36 | 10 | 13 |
| 10. | ಬಲೀಪಾಲ | 12 | 5 | 27 |
| 11. | ಮಹೀಪಾಲ | 13 | 8 | 4 |
| 12. | ಹರೀಪಾಲ | 14 | 8 | 4 |
| 13. | ಸೀಸಪಾಲ | 11 | 10 | 13 |
| 14. | ಮದನಪಾಲ | 17 | 10 | 19 |
| 15. | ಕರ್ಮಪಾಲ | 16 | 2 | 2 |
| 16. | ವಿಕ್ರಮಪಾಲ | 24 | 11 | 13 |

ರಾಜಾ **ವಿಕ್ರಮಪಾಲನು** ಪಶ್ಚಿಮ ದಿಕ್ಕಿನ [ದೇಶದ] ರಾಜನಾದ **ಮಲುಖಚಂದ ಬೋಹರಾ** ಎಂಬುವನ ಮೇಲೆ ಏರಿಹೋಗಿ, ರಣರಂಗದಲ್ಲಿ ಹೋರಾಡಿದನು. ಈ ಯುದ್ಧದಲ್ಲಿ **ಮಲುಖಚಂದನು ವಿಕ್ರಮಪಾಲನನ್ನು** ಸಂಹರಿಸಿ, ಇಂದ್ರಪ್ರಸ್ಥದ ರಾಜ್ಯವನ್ನು ಆಳಿದನು. ಪೀಳಿಗೆ 10 ; ವರ್ಷ 191 : ತಿಂಗಳು 1 ; ದಿನಗಳು 16. ಇವರುಗಳ ವಿಸ್ತಾರ—

| ಆರ್ಯರಾಜರು | | ವರ್ಷ | ಮಾಸ | ದಿನ |
|---|---|---|---|---|
| 1. | ಮಲುಖಚಂದ | 54 | 2 | 10 |
| 2. | ವಿಕ್ರಮಚಂದ | 12 | 7 | 12 |
| 3. | ಅಮೀನಚಂದ* | 10 | 0 | 5 |
| 4. | ರಾಮಚಂದ | 13 | 11 | 8 |
| 5. | ಹರೀಚಂದ | 14 | 9 | 24 |

*ಇವನ ಹೆಸರನ್ನು ಒಂದೆಡೆ ಮಾನಕಚಂದ, ಎಂದೂ ಬರೆಯಲಾಗಿದೆ.—ದ.ಸ.

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 6. | ಕಲ್ಯಾಣಚಂದ | 10 | 5 | 4 |
| 7. | ಭೀಮಚಂದ | 16 | 2 | 9 |
| 8. | ಲೋವಚಂದ | 26 | 3 | 22 |
| 9. | ಗೋವಿಂದಚಂದ | 31 | 7 | 12 |
| 10. | ರಾಣೀ ಪದ್ಮಾವತೀ* | 1 | 0 | 0 |

ರಾಣೀ **ಪದ್ಮಾವತೀ** ಮೃತಳಾದಳು. ಅವಳಿಗೆ ಪುತ್ರನೂ ಕೂಡ ಯಾವನೂ ಇರಲಿಲ್ಲ. ಆದುದರಿಂದ, ಎಲ್ಲ ರಾಜ್ಯಧುರೀಣರೂ ಪರಸ್ಪರ ಸಮಾಲೋಚನೆಮಾಡಿ, **ಹರಿಪ್ರೇಮ** ವೈರಾಗಿಯನ್ನು ಸಿಂಹಾಸನದ ಮೇಲೆ ಕೂಡಿಸಿ, ಆ ರಾಜ್ಯಧುರೀಣರೇ ರಾಜ್ಯವನ್ನಾಳಲು ಆರಂಭಿಸಿದರು. ಪೀಳಿಗೆ 4 ; ವರ್ಷ 50 ; ಮಾಸ 21 ; ದಿನ 0. **ಹರಿಪ್ರೇಮನ** [ವಂಶ] ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ಹರಿಪ್ರೇಮ | 7 | 5 | 16 |
| 2. | ಗೋವಿಂದಪ್ರೇಮ | 20 | 2 | 8 |
| 3. | ಗೋಪಾಲಪ್ರೇಮ | 15 | 7 | 28 |
| 4. | ಮಹಾಬಾಹು | 6 | 8 | 29 |

ರಾಜಾ **ಮಹಾಬಾಹು** ರಾಜ್ಯವನ್ನು ತ್ಯಜಿಸಿ, ವನದಲ್ಲಿ ತಪಶ್ಚರ್ಯೆಯನ್ನು ಮಾಡಲು ಹೋದರು. ಬಂಗಾಳದ ರಾಜರಾದ **ಆಧೀಸೇನರು** ಇದನ್ನಾಲಿಸಿ, ಇಂದ್ರಪ್ರಸ್ಥಕ್ಕೆ ಬಂದು, ತಾವೇ ರಾಜ್ಯವಾಳತೊಡಗಿದರು. ಪೀಳಿಗೆ 12 ; ವರ್ಷ 151 ; ತಿಂಗಳು 11 ; ಮತ್ತು ದಿನ 2. ಇವರ [ವಂಶದ] ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ರಾಜಾ ಆಧೀಸೇನ | 18 | 5 | 21 |
| 2. | ವಿಲಾವಲಸೇನ | 12 | 4 | 2 |
| 3. | ಕೇಶವಸೇನ | 15 | 7 | 12 |
| 4. | ಮಾಘಸೇನ | 12 | 4 | 2 |
| 5. | ಮಯೂರಸೇನ | 20 | 11 | 27 |

*ಈ ಪದ್ಮಾವತಿಯು ಗೋವಿಂದಚಂದನ ರಾಣಿಯಾಗಿದ್ದಳು.—ದ.ಸ.

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 6. | ಭೀಮಸೇನ | 5 | 10 | 9 |
| 7. | ಕಲ್ಯಾಣಸೇನ | 4 | 8 | 21 |
| 8. | ಹರೀಸೇನ | 12 | 0 | 25 |
| 9. | ಕ್ಷೇಮಸೇನ | 8 | 11 | 15 |
| 10. | ನಾರಾಯಣಸೇನ | 2 | 2 | 29 |
| 11. | ಲಕ್ಷ್ಮೀಸೇನ | 26 | 10 | 0 |
| 12. | ದಾಮೋದರಸೇನ | 11 | 5 | 19 |

ರಾಜಾ **ದಾಮೋದರಸೇನ**ರು ತಮ್ಮ ಸಾಮಂತನಿಗೆ ಬಹಳ ದುಃಖವನ್ನಿತ್ತರು. ಆದುದರಿಂದ, ರಾಜರ ಸಾಮಂತ **ದೀಪಸಿಂಹ**ರು ಸೈನ್ಯವನ್ನು ತಮ್ಮ ಪರವಾಗಿ ಮಾಡಿಕೊಂಡು, ರಾಜನೊಂದಿಗೆ ಯುದ್ಧವನ್ನು ಮಾಡಿದರು. ಆ ಯುದ್ಧದಲ್ಲಿ **ದೀಪಸಿಂಹ**ರು ರಾಜನನ್ನು ಕೊಂದು, ತಾವೇ ರಾಜ್ಯವಾಳತೊಡಗಿದರು. ಪೀಳಿಗೆ 6; ವರ್ಷಗಳು 107 ; ತಿಂಗಳು 6 ; ಮತ್ತು ದಿನಗಳು 22. ಇವರುಗಳ ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ದೀಪಸಿಂಹ | 17 | 1 | 26 |
| 2. | ರಾಜಸಿಂಹ | 14 | 5 | 0 |
| 3, | ರಣಸಿಂಹ | 9 | 8 | 11 |
| 4. | ನರಸಿಂಹ | 45 | 0 | 15 |
| 5. | ಹರಿಸಿಂಹ | 13 | 2 | 29 |
| 6. | ಜೀವನಸಿಂಹ | 8 | 0 | 1 |

ರಾಜಾ **ಜೀವನಸಿಂಹ**ನು ಯಾವುದೋ ಕಾರಣದಿಂದ, ತನ್ನ ಸೈನ್ಯವನ್ನೆಲ್ಲಾ ಉತ್ತರದಿಕ್ಕಿಗೆ ಕಳುಹಿಸಿಬಿಟ್ಟನು. ವೈರಾಟದ ರಾಜನಾದ **ಪೃಥ್ವೀರಾಜ ಚೌಹಾನ**ರು ಈ ಸಮಾಚಾರವನ್ನು ಕೇಳಿ, **ಜೀವನಸಿಂಹ**ನ ಮೇಲೆ ದಂಡೆತ್ತಿ ಬಂದರು. ಮತ್ತು ಯುದ್ಧದಲ್ಲಿ **ಜೀವನಸಿಂಹ**ನನ್ನು ವಧಿಸಿ, ಇಂದ್ರಪ್ರಸ್ಥದಲ್ಲಿ ರಾಜ್ಯವನ್ನಾಳಿದರು. ಪೀಳಿಗೆ 5 ; ವರ್ಷಗಳು 86 ; ಮಾಸ 0 ; ದಿನಗಳು 20. ಇವರ ವಿಸ್ತಾರ—

| | ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|---|
| 1. | ಪೃಥ್ವೀರಾಜ | 12 | 2 | 19 |
| 2. | ಅಭಯಪಾಲ | 14 | 5 | 17 |
| 3, | ದುರ್ಜನಪಾಲ | 11 | 4 | 14 |

| ಆರ್ಯರಾಜರು | ವರ್ಷ | ಮಾಸ | ದಿನ |
|---|---|---|---|
| 4. ಉದಯಪಾಲ | 11 | 7 | 3 |
| 5. ಯಶಪಾಲ | 36 | 4 | 11 |

ಗಜನೀಗಢದಿಂದ **ಸುಲ್ತಾನ್ ಶಹಾಬುದ್ದೀನ ಗೋರಿಯು** ರಾಜಾ **ಯಶಪಾಲನ** ಮೇಲೆ ದಂಡೆತ್ತಿ ಬಂದನು. ಮತ್ತು ರಾಜಾ **ಯಶಪಾಲನನ್ನು** ಪ್ರಯಾಗದ ಕೋಟೆಯಲ್ಲಿ, ಸಂವತ್ 1249*ರಲ್ಲಿ ಹಿಡಿದು ಬಂಧಿಸಿದನು. ಆ ಮೇಲೆ, ಇಂದ್ರಪ್ರಸ್ಥದ, ಎಂದರೆ, ದಿಲ್ಲಿಯ ರಾಜ್ಯಶಾಸನವನ್ನು **ಸುಲ್ತಾನ್ ಶಹಾಬುದ್ದೀನನು** ತಾನೇ ಮಾಡತೊಡಗಿದನು.† ಪೀಳಿಗೆ 53 ; ವರ್ಷಗಳು 754 ; ತಿಂಗಳು 1 ; ದಿನಗಳು 17.

ಈ ವಂಶದವರ ವಿಸ್ತಾರವನ್ನು ಅನೇಕ ಇತಿಹಾಸ ಗ್ರಂಥಗಳಲ್ಲಿ ಬರೆಯಲಾಗಿದೆ. ಆದುದರಿಂದ, ಇಲ್ಲಿ ಬರೆಯಲಿಲ್ಲ.

ಇದರ ನಂತರ, ಬೌದ್ಧ-ಜೈನ ಮತಗಳ ವಿಷಯದಲ್ಲಿ ಬರೆಯಲ್ಪಡುವುದು.

**ಇತಿ ಶ್ರೀಮದ್ದಯಾನಂದಸರಸ್ವತೀಸ್ವಾಮಿನಿರ್ಮಿತೇ ಸತ್ಯಾರ್ಥಪ್ರಕಾಶೇ**

**ಸುಭಾಷಾವಿಭೂಷಿತ ಆರ್ಯಾವರ್ತೀಯಮತಖಂಡನ-ಮಂಡನವಿಷಯ**

**ಏಕಾದಶ ಸಮುಲ್ಲಾಸಃ ಸಂಪೂರ್ಣಃ ॥೧೧॥**





*ಎಂದರೆ 1192ನೆಯ ಇಸವಿ. ವಿಕ್ರಮ ಸಂವತ್ಸರವು ಕಲಿಸಂವತ್ಸರ 3044 ರ ನಂತರ, ಪ್ರಾರಂಭವಾಯಿತು.—ಸಂ.

†ಪ್ರಚಲಿತ ಇತಿಹಾಸಕ್ಕನುಸಾರವಾಗಿ ಸುಲ್ತಾನ್ ಶಹಾಬುದ್ದೀನ ಗೋರಿಯು ಪೃಥ್ವೀರಾಜನ ಮೇಲೆ ಆಕ್ರಮಣ ಮಾಡಿದನು. ಅನೇಕ ಬಾರಿ ಸೋತು, ವಾಪಸು ಹೊರಟು ಹೋದನು. ನಂತರ, ವಿಕ್ರಮ ಸಂವತ್ 1249(ಇಸವಿ 1192)ರಲ್ಲಿ ಭಾರತೀಯ ರಾಜರ ಪರಸ್ಪರ ಒಡಕಿನ ಕಾರಣದಿಂದ, ಪೃಥ್ವೀರಾಜನನ್ನು ಸೋಲಿಸಿ, ಅವನ ಕಣ್ಣುಗಳನ್ನು ಕೀಳಿಸಿ, ಅವನನ್ನು ತನ್ನ ದೇಶಕ್ಕೆ ಕರೆದುಕೊಂಡು ಹೋದನು. ನಂತರ, ತಾನೇ ದಿಲ್ಲಿಯಲ್ಲಿ ರಾಜ್ಯವಾಳತೊಡಗಿದನು.—ಸಂ.

# ಅನುಭೂಮಿಕಾ [೨]

## (ಜೈನಮತ ಪ್ರಾಚೀನಮತವಲ್ಲ)

ಆರ್ಯಾವರ್ತ ನಿವಾಸಿಗಳಾದ ಮಾನವರುಗಳಲ್ಲಿ ಸತ್ಯಾಸತ್ಯಗಳನ್ನು ಯಥಾವತ್ತಾಗಿ ನಿರ್ಣಯಮಾಡುವ ವೇದವಿದ್ಯೆ ಬಿಟ್ಟುಹೋಗಿ, ಅವಿದ್ಯೆಯು ಹರಡಿ, ಮತ-ಮತಾಂತರಗಳು ತಲೆಯೆತ್ತಿದವು! [ಆಗ] ಇದೇ **ಜೈನರೇ** ಮೊದಲಾದವರ ವಿದ್ಯಾ-ವಿರುದ್ಧವಾದ ಮತಗಳ ಪ್ರಚಾರಕ್ಕೆ ನಿಮಿತ್ತವಾಯಿತು.

ಏಕೆಂದರೆ, **ವಾಲ್ಮೀಕೀಯ ರಾಮಾಯಣ** ಮತ್ತು **ಮಹಾಭಾರತ** ಮೊದಲಾದುವುಗಳಲ್ಲಿ ಜೈನರ ಹೆಸರೂ ಕೂಡ ಬರೆದಿಲ್ಲ! ಮತ್ತು ಜೈನರ ಗ್ರಂಥಗಳಲ್ಲಿ, ವಾಲ್ಮೀಕೀಯ ರಾಮಾಯಣದಲ್ಲಿ ಮತ್ತು [ಮಹಾ] ಭಾರತದಲ್ಲಿ ಹೇಳಲ್ಪಟ್ಟಿರುವ ರಾಮ, ಕೃಷ್ಣ ಮೊದಲಾದವರ [ಯಶಃ]ಕಥನ ಬಹಳ ವಿಸ್ತಾರಪೂರ್ವಕವಾಗಿ ಬರೆಯಲ್ಪಟ್ಟಿದೆ! ಇದರಿಂದ, ಈ ಮತ ಇವರ ಕಾಲದ ನಂತರ ಹೊರಟಿತು, ಎಂದು ಸಿದ್ಧವಾಗುತ್ತದೆ. ಏಕೆಂದರೆ, ಜೈನರು ತಮ್ಮ ಮತವನ್ನು ಬಹಳ ಪ್ರಾಚೀನವೆಂದು ಬರೆಯುತ್ತಾರೆ! [ವಸ್ತುಸ್ಥಿತಿ] ಹಾಗೆಯೇ ಇದ್ದಲ್ಲಿ, ವಾಲ್ಮೀಕೀಯ [ರಾಮಾಯಣ] ಮೊದಲಾದ ಗ್ರಂಥಗಳಲ್ಲಿ ಅವರ ಕಥೆ ಅವಶ್ಯವಾಗಿ ಇರುತ್ತಿದ್ದಿತು! ಆದುದರಿಂದ, ಜೈನಮತ ಈ ಗ್ರಂಥಗಳ ನಂತರವೇ **ಹೊರಟಿದೆ,** ಎಂದು ಸಿದ್ಧವಾಗುತ್ತದೆ!

ಯಾವನಾದರೂ—"ಜೈನರ ಗ್ರಂಥಗಳಿಂದ ಕಥೆಗಳನ್ನು ತೆಗೆದುಕೊಂಡು ವಾಲ್ಮೀಕೀಯ [ರಾಮಾಯಣ] ಮೊದಲಾದ ಗ್ರಂಥಗಳು ರಚಿತವಾಗಿರಬಹುದು.", ಎನ್ನುವುದಾದರೆ—

"ವಾಲ್ಮೀಕೀಯ [ರಾಮಾಯಣ] ಮೊದಲಾದುವುಗಳಲ್ಲಿ ನಿಮ್ಮ ಗ್ರಂಥಗಳ ನಾಮೋಲ್ಲೇಖವೂ ಕೂಡ ಏತಕ್ಕಿಲ್ಲ ? ಮತ್ತು ನಿಮ್ಮ ಗ್ರಂಥಗಳಲ್ಲಿ [ಅವುಗಳ ಉಲ್ಲೇಖ] ಏಕಿದೆ ? ತಂದೆಯ ಜನನದ ದರ್ಶನವನ್ನು ಮಗನು ಮಾಡಬಲ್ಲನೇ ? ಎಂದಿಗೂ ಮಾಡಲಾರನು!", ಎಂದು ಅವನಿಗೆ ಹೇಳಬೇಕು.

ಇದರಿಂದ, ಜೈನ-ಬೌದ್ಧಮತಗಳು, **ಶೈವ-ಶಾಕ್ತ ಮೊದಲಾದ ಮತಗಳ ನಂತರವೇ ಹೊರಟಿವೆ,** ಎಂದು ಸಿದ್ಧವಾಗುತ್ತದೆ !

## (ಸತ್ಯಾಸತ್ಯದ ನಿರ್ಣಯಕ್ಕಾಗಿಯೇ ಈ ವಿವೇಚನೆ)

ಈಗ, ಈ ಹನ್ನೆರಡನೆಯ ಸಮುಲ್ಲಾಸದಲ್ಲಿ ಜೈನರ ಮತದ ವಿಷಯದಲ್ಲಿ ಏನೇನು ಬರೆಯಲ್ಪಟ್ಟಿದೆಯೋ, ಅದೆಲ್ಲವೂ ಅವರ ಗ್ರಂಥಗಳ ಸಂಕೇತಪೂರ್ವಕವಾಗಿ ಬರೆಯಲ್ಪಟ್ಟಿದೆ. ಈ ವಿಷಯದಲ್ಲಿ ಜೈನರು ಅಸಮಾಧಾನ ಪಡಬಾರದು! ಏಕೆಂದರೆ, ನಾವು ಇವರ ಮತದ ವಿಷಯದಲ್ಲಿ ಏನೇನು ಬರೆದಿದ್ದೇವೋ, ಅದು ಕೇವಲ ಸತ್ಯಾಸತ್ಯದ ನಿರ್ಣಯಕ್ಕಾಗಿ ಇದೆ! ವಿರೋಧವನ್ನಾಗಲೀ, ಹಾನಿಯನ್ನಾಗಲೀ ಉಂಟುಮಾಡುವ ಸಲುವಾಗಿ ಅಲ್ಲ!

ಯಾವಾಗ ಜೈನರು, ಬೌದ್ಧರು ಅಥವಾ ಬೇರೆಯ ಜನರು ಈ ಲೇಖನವನ್ನು ನೋಡುವರೋ, ಆಗ ಎಲ್ಲರಿಗೂ ಸತ್ಯಾಸತ್ಯದ ನಿರ್ಣಯದಲ್ಲಿ ಆಲೋಚನೆಯನ್ನು ಮಾಡುವ, ಮತ್ತು ಲೇಖನವನ್ನು ಬರೆಯುವ ಅವಕಾಶ ಸಿಕ್ಕುವುದು. ಜ್ಞಾನವೂ ಕೂಡ ಲಭಿಸುವುದು! ಯಾವತ್ತಿನವರೆಗೆ ವಾದಿ-ಪ್ರತಿವಾದಿಗಳಾಗಿ ಪ್ರೀತಿಯಿಂದ ವಾದವು ಮಾಡಲ್ಪಡುವುದಿಲ್ಲವೋ, ಅಥವಾ ಲೇಖನವು ಬರೆಯಲ್ಪಡುವುದಿಲ್ಲವೋ, ಅಪರೆಗೆ ಸತ್ಯಾಸತ್ಯ ನಿರ್ಣಯವಾಗಲಾರದು!

ಯಾವಾಗ ವಿದ್ವಜ್ಜನರಲ್ಲಿ ಸತ್ಯಾಸತ್ಯದ ನಿಶ್ಚಯವಾಗುವುದಿಲ್ಲವೋ, ಆಗಲೇ ಅವಿದ್ವಾಂಸರು ಮಹಾ ಅಂಧಕಾರದಲ್ಲಿ ಬಿದ್ದು, ಬಹಳ ದುಃಖವನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ, ಸತ್ಯದ ಜಯಕ್ಕಾಗಿ ಮತ್ತು ಅಸತ್ಯದ ಕ್ಷಯಕ್ಕಾಗಿ ಮೈತ್ರಿಯಿಂದ ವಾದ ಮಾಡುವುದು ಅಥವಾ ಲೇಖನವನ್ನು ಬರೆಯುವುದು ನಮ್ಮ ಮಾನವ ಜಾತಿಯ ಮುಖ್ಯ ಕಾರ್ಯವಾಗಿದೆ. ಹೀಗೆ ಆಗದೇ ಹೋದರೆ, ಮಾನವರ ಉನ್ನತಿ ಎಂದಿಗೂ ಆಗುವುದಿಲ್ಲ!

## (ಅತ್ಯಂತ ಪರಿಶ್ರಮದಿಂದ ಜೈನಗ್ರಂಥ-ಸಂಗ್ರಹ)

ಮತ್ತು ಈ ಬೌದ್ಧ-ಜೈನ ಮತದ ವಿಷಯವು, ಅವರನ್ನುಳಿದು ಬೇರೆ ಮತದವರಿಗೆ ಅಪೂರ್ವವಾದ ಲಾಭವನ್ನೂ ಮತ್ತು ಬೋಧವನ್ನೂ ಉಂಟುಮಾಡುವಂತಹದಾಗುವುದು. ಏಕೆಂದರೆ, ಈ ಜನರು ತಮ್ಮ, ಪುಸ್ತಕಗಳನ್ನು ಬೇರೆಯ ಯಾವ ಮತದವನಿಗೂ ನೋಡಲು, ಓದಲು ಮತ್ತು ಬರೆಯಲೂ ಕೂಡ ಕೊಡುವುದಿಲ್ಲ! ಅತ್ಯಂತ ಪರಿಶ್ರಮದಿಂದ, ನನ್ನ, ಮತ್ತು ವಿಶೇಷತಃ ಬೊಂಬಾಯಿ ಆರ್ಯ ಸಮಾಜದ ಮಂತ್ರಿಗಳಾದ **ಸೇಠ್ ಸೇವಕಲಾಲ್ ಕೃಷ್ಣದಾಸರ** ಪುರುಷಾರ್ಥದಿಂದ ಗ್ರಂಥಗಳು ಪ್ರಾಪ್ತವಾದುವು. ಮತ್ತು ಕಾಶಿಯಲ್ಲಿನ **"ಜೈನ ಪ್ರಭಾಕರ ಯಂತ್ರಾಲಯ"** ದಲ್ಲಿ ಮುದ್ರಿತವಾದುದರಿಂದಲೂ, ಹಾಗೂ ಬೊಂಬಾಯಿಯಲ್ಲಿ **"ಪ್ರಕರಣ ರತ್ನಾಕರ"** ಎಂಬ ಗ್ರಂಥವು ಮುದ್ರಿತವಾದುದರಿಂದಲೂ ಕೂಡ. ಎಲ್ಲ ಜನರಿಗೂ ಜೈನರ ಮತವನ್ನು ಅವಲೋಕಿಸುವುದು ಸಹಜವಾಯಿತು!

## (ಜೈನ ಗ್ರಂಥಗಳಲ್ಲಿ ಅಸಂಭವ ಮಾತುಗಳೇ ತುಂಬಿವೆ)

ಸರಿ! ತಮ್ಮ ಮತದ ಪುಸ್ತಕವನ್ನು ತಾವು ಮಾತ್ರ ನೋಡುವುದು, ಮತ್ತು ಬೇರೆಯವರಿಗೆ ತೋರಿಸದಿರುವುದು [ಮತ್ತು ಇತರ ಮತಗ್ರಂಥಗಳನ್ನು ನೋಡದಿರುವುದು] ಯಾವ ವಿದ್ವಾಂಸರ ನಡತೆಯಿದು? ಇದರಿಂದಲೇ, ಈ ಗ್ರಂಥಗಳನ್ನು ರಚಿಸಿದವರಿಗೆ, ಮೊದಲೇ—

"ಈ ಗ್ರಂಥಗಳಲ್ಲಿ ಅಸಂಭವವಾದ ಮಾತುಗಳು ತುಂಬಿವೆ! ಅನ್ಯಮತೀಯರು ನೋಡುವರಾದರೆ, ಖಂಡನಮಾಡುವರು! ಮತ್ತು ನಮ್ಮ ಮತದವರು ಅನ್ಯರ ಗ್ರಂಥಗಳನ್ನು ಅವಲೋಕಿಸುವರಾದರೆ, ಈ ಮತದಲ್ಲಿ ಶ್ರದ್ಧೆಯಿರುವುದಿಲ್ಲ.", ಎಂಬ ಸಂದೇಹವಿದ್ದಿತೆಂದು ವಿದಿತವಾಗುತ್ತದೆ.

ಆಯಿತು, ಹೇಗಾದರೂ ಇರಲಿ! ಆದರೆ, ಯಾರಿಗೆ ತಮ್ಮ ದೋಷಗಳಂತೂ ಕಾಣಿಸುವುದೇ ಇಲ್ಲವೋ; ಆದರೆ, ಬೇರೆಯವರ ದೋಷಗಳನ್ನು ನೋಡಲು ಉದ್ಯುಕ್ತರಾಗಿರುತ್ತಾರೋ, ಅಂತಹ ಮಾನವರೂ ಕೂಡ, ಬಹಳ ಇದ್ದಾರೆ! ಇದು ನ್ಯಾಯದ ಮಾತಲ್ಲ! ಏಕೆಂದರೆ, **ಮೊದಲು ತಮ್ಮ ದೋಷಗಳನ್ನು ಕಂಡುಕೊಂಡು, ದೂರೀಕರಿಸಬೇಕು! ಆ ಮೇಲೆಯೇ, ಅನ್ಯರ ದೋಷಗಳ ಕಡೆ ದೃಷ್ಟಿಬೀರಿ, ಅವುಗಳನ್ನು ನಿವಾರಿಸಬೇಕು!**

ಈಗ, ಈ ಬೌದ್ಧ-ಜೈನಮತದ ವಿಷಯವನ್ನು ಸಮಸ್ತ ಸಜ್ಜನರ ಸಮ್ಮುಖದಲ್ಲಿ ಮಂಡಿಸುತ್ತೇನೆ. ಅದು ಹೇಗೆ ಇದೆಯೋ, ಹಾಗೆಯೇ ಆಲೋಚಿಸಿರಿ!

**ಕಿಮಧಿಕಲೇಖೇನ ಬುದ್ಧಿಮದ್ವರ್ಯೇಷು॥**



# ಅಥ ದ್ವಾದಶಸಮುಲ್ಲಾಸಾರಂಭಃ

## ಅಥನಾಸ್ತಿಕಮತಾಂತರ್ಗತಚಾರವಾಕಬೌದ್ಧ*ಜೈನಮತ–ಖಂಡನಮಂಡನವಿಷಯಾನ್ ವ್ಯಾಖ್ಯಾಸ್ಯಾಮಃ ॥

**(ಚಾರವಾಕ ಮತದ**
**ಪ್ರಮುಖ ಸಿದ್ಧಾಂತಗಳು ಮತ್ತು ಅವುಗಳ ಆಲೋಚನೆ)**

[ಈಗ ನಾಸ್ತಿಕ ಮತಗಳಲ್ಲಿ ಚಾರವಾಕ, ಬೌದ್ಧ, ಮತ್ತು ಜೈನಮತಗಳ ಖಂಡನ–ಮಂಡನದ ವಿಷಯವಾಗಿ ಹೇಳುತ್ತೇವೆ.]

ಯಾವನು ವೇದಗಳು, ಈಶ್ವರ ಮತ್ತು ಯಜ್ಞವೇ ಮೊದಲಾದ ಉತ್ತಮ ಕರ್ಮಗಳನ್ನೂ ಕೂಡ, ಅಂಗೀಕರಿಸುತ್ತಿರಲಿಲ್ಲವೋ, ಅಂತಹ ಯಾವನೋ ಒಬ್ಬ **ಬೃಹಸ್ಪತಿ**, ಎಂಬ ಪುರುಷನು ಜನ್ಮವೆತ್ತಿದ್ದನು. **ನೋಡಿರಿ ! ಅವನ ಮತವನ್ನು**—

**"ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯೋರಗೋಚರಃ ।**
**ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ॥"**

**[ಸರ್ವದರ್ಶನಸಂಗ್ರಹ; ಚಾರವಾಕದರ್ಶನ]**

**"ಮನುಷ್ಯನೇ ಮೊದಲಾದ ಯಾವ ಪ್ರಾಣಿಯೂ ಮೃತ್ಯುವಿಗೆ ಕಣ್ಮರೆಯಾಗಿಲ್ಲ; ಏಂದರೆ, ಎಲ್ಲರೂ ಸಾಯಲೇಬೇಕಾಗಿದೆ. ಆದುದರಿಂದ, ಎಲ್ಲಿಯ ವರೆಗೆ ಶರೀರದಲ್ಲಿ ಜೀವನಿದ್ದಾನೋ, ಅಲ್ಲಿಯವರೆಗೆ ಸುಖದಿಂದ ಇರಬೇಕು."** ಯಾವನಾದರೂ—

'ಅಧರ್ಮಾಚರಣದಿಂದ. ಕಷ್ಟ ಉಂಟಾಗುತ್ತದೆ ; [ಆದರೆ], ಧರ್ಮವನ್ನು ಬಿಟ್ಟು ಬಿಟ್ಟರೆ, ಪುನರ್ಜನ್ಮದಲ್ಲಿ ಮಹಾದುಃಖವನ್ನು ಹೊಂದಬೇಕಾದೀತು'! ಎಂದು ಹೇಳಿದರೆ, **'ಚಾರವಾಕ'**ನು ಉತ್ತರಕೊಡುತ್ತಾನೆ—

---

*ಈ ಸಮುಲ್ಲಾಸದಲ್ಲಿ ಚಾರವಾಕ ಮತ್ತು ಬೌದ್ಧಮತಗಳ ಸಿದ್ಧಾಂತಗಳ ಉಲ್ಲೇಖವನ್ನು ಸಾಯಣಾಚಾರ್ಯವಿರಚಿತ "ಸರ್ವದರ್ಶನ–ಸಂಗ್ರಹ"ದ ಆಧಾರದ ಮೇಲೆ ಮುಖ್ಯವಾಗಿ ಬರೆಯಲಾಗಿದೆ. ಏಕೆಂದರೆ, ಆಗ, ಈ ಮತಗಳ ಗ್ರಂಥಗಳು ಸಿಕ್ಕಿರಲಿಲ್ಲ.—ಯು.ವಿ.

"ಲೋ ಮುಗ್ಧ ಸೋದರ ! ಸತ್ತಮೇಲೆ ಶರೀರ ಭಸ್ಮವಾಗಿ ಹೋಗುತ್ತದೆ. ಯಾವನು ತಿಂದಿದ್ದಾನೋ ಮತ್ತು ಕುಡಿದಿದ್ದಾನೋ, **ಅವನು ಪುನಃ ಜಗತ್ತಿಗೆ ಬರುವುದಿಲ್ಲ!** ಆದುದರಿಂದ, ಹೇಗೆ ಶಕ್ಯವೋ, ಹಾಗೆ ಆನಂದದಲ್ಲಿ ಇರು! ಲೋಕದಲ್ಲಿ **ನೀತಿ***ಯಿಂದ ನಡೆದುಕೋ! ಐಶ್ವರ್ಯವನ್ನು ಹೆಚ್ಚಿಸಿಕೋ! ಮತ್ತು ಅದರಿಂದ ಬೇಕಾದ ಭೋಗವನ್ನು ಅನುಭವಿಸು! ಇರುವುದು ಇದೇ ಲೋಕವೆಂದು ತಿಳಿದುಕೋ! ಪರಲೋಕವಾವುದೂ ಇಲ್ಲ!"†

"ನೋಡಿರಿ! ಪೃಥಿವೀ, ಜಲ, ಅಗ್ನಿ, ವಾಯು–ಈ ನಾಲ್ಕು ಭೂತಗಳ ಪರಿಣಾಮದಿಂದ ಈ ಶರೀರ ಉಂಟಾಗಿದೆ. ಇದರಲ್ಲಿ ಇವುಗಳ ಯೋಗದಿಂದ ಚೈತನ್ಯವು ಉತ್ಪನ್ನವಾಗಿದೆ. ಹೇಗೆ ಮಾದಕದ್ರವ್ಯವನ್ನು ತಿನ್ನುವುದರಿಂದ–ಕುಡಿಯುವುದರಿಂದ ಮದವು, ಎಂದರೆ ನಶೆಯು ಉತ್ಪನ್ನವಾಗುತ್ತದೋ, ಹಾಗೆಯೇ, **ಜೀವನು ಶರೀರದೊಂದಿಗೆ ಉತ್ಪನ್ನನಾಗಿ, ಶರೀರದ ನಾಶದೊಂದಿಗೆ ತಾನೂ ಕೂಡ, ನಾಶವಾಗಿ ಹೋಗುತ್ತಾನೆ!** ಮತ್ತು ಪಾಪ-ಪುಣ್ಯಗಳ ಫಲ ಮತ್ತೆ ಲಭಿಸುವುದು ಯಾವನಿಗೆ ?"

**'ತಚ್ಚೈತನ್ಯವಿಶಿಷ್ಟದೇಹ ಏವ ಆತ್ಮಾ, ದೇಹಾತಿರಿಕ್ತಆತ್ಮನಿ ಪ್ರಮಾಣಾಭಾವಾತ್'** ॥

[ಸರ್ವದರ್ಶನ ಸಂಗ್ರಹ; ಚಾರವಾಕ ದರ್ಶನ]

"ಈ ಶರೀರದಲ್ಲಿ ನಾಲ್ಕು ಭೂತಗಳ ಸಂಯೋಗದಿಂದ, ಜೀವಾತ್ಮನು ಉತ್ಪನ್ನನಾಗಿ, ಅವುಗಳ ವಿಯೋಗದೊಡನೆಯೇ ನಾಶವನ್ನು ಹೊಂದುತ್ತಾನೆ. ಏಕೆಂದರೆ, ಸತ್ತಮೇಲೆ ಯಾವ ಜೀವನೂ ಪ್ರತ್ಯಕ್ಷನಾಗುವುದಿಲ್ಲ.

"**ನಾವು, ಪ್ರತ್ಯಕ್ಷ [ಪ್ರಮಾಣ] ಒಂದನ್ನು ಮಾತ್ರ ಅಂಗೀಕರಿಸುತ್ತೇವೆ!** ಏಕೆಂದರೆ, ಪ್ರತ್ಯಕ್ಷವಿಲ್ಲದೇ ಅನುಮಾನ ಮೊದಲಾದುವು ಆಗುವುದೇ ಇಲ್ಲ. ಆದುದರಿಂದ, ಮುಖ್ಯವಾದ ಪ್ರತ್ಯಕ್ಷದ ಮುಂದೆ ಅನುಮಾನ ಮೊದಲಾದುವು ಗೌಣವಾಗಿರುವುದರಿಂದ, ಅವುಗಳನ್ನು ನಾವು ಗ್ರಹಿಸುವುದಿಲ್ಲ!

---

*ಇಲ್ಲಿ ನೀತಿ, ಎಂದರೆ, ವ್ಯಾವಹಾರಿಕ ಜ್ಞಾನ, ಎಂದರ್ಥ. ಚತುರತೆ, ಎಂದೂ ಅರ್ಥ. Moral ಎಂಬ ಅರ್ಥವಲ್ಲ. –ಸಂ.

†ಪಾಶ್ಚಿಮಾತ್ಯ ಸಂಸ್ಕೃತಿಯ ಧರ್ಮವೂ ಇದೇ ಆಗಿದೆ. ಈಗ ಅವರನ್ನು ಅನುಸರಿಸುತ್ತಿರುವ ಭಾರತೀಯರ ಧರ್ಮವೂ ಇದೇ ಆಗಿದೆ. ಆದರೆ, ವ್ಯತ್ಯಾಸವೇನೆಂದರೆ, ಮಾತು-ಮಾತಿಗೂ, ಹೆಜ್ಜೆ-ಹೆಜ್ಜೆಗೂ, ದೇವರ ಹೆಸರನ್ನು ಹೇಳುತ್ತಿರುವುದು ಭಾರತೀಯರ ವೈಶಿಷ್ಟ್ಯ !—ಸಂ.

"ಸುಂದರಿಯಾದ ಸ್ತ್ರೀಯ ಆಲಿಂಗನದಿಂದ, ಆನಂದವನ್ನು ಪಡೆದುಕೊಳ್ಳುವುದು ಪುರುಷಾರ್ಥದ ಫಲವಾಗಿರುತ್ತದೆ!"*

## (ಜಡದಿಂದ ಚೇತನದ ಉತ್ಪತ್ತಿ ಎಂದಿಗೂ ಆಗದು)

**ಉತ್ತರ:**—ಪೃಥಿವೀ ಮೊದಲಾದ ಈ ಭೂತಗಳು ಜಡವಾಗಿವೆ. ಅವುಗಳಿಂದ ಚೇತನನ ಉತ್ಪತ್ತಿ ಎಂದಿಗೂ ಆಗಲಾರದು. ಹೇಗೆ, ಈಗ ಮಾತಾಪಿತೃಗಳ ಸಂಯೋಗದಿಂದ ದೇಹದ ಉತ್ಪತ್ತಿಯಾಗುತ್ತದೋ, ಹಾಗೆಯೇ, ಆದಿಸೃಷ್ಟಿಯಲ್ಲಿ ಮನುಷ್ಯನೇ ಮೊದಲಾದವರ ಶರೀರಗಳ ಆಕೃತಿಯು† ಕರ್ತೃವಾದ ಪರಮೇಶ್ವರನಿಲ್ಲದೇ, ಎಂದಿಗೂ ಆಗಲಾರದು. ಚೇತನನ ಉತ್ಪತ್ತಿ ಮತ್ತು ವಿನಾಶವು ಮದದ ಹಾಗೆ ಆಗುವುದಿಲ್ಲ. ಏಕೆಂದರೆ, ಮದ ಉಂಟಾಗುವುದು ಚೇತನನಿಗೇ ಹೊರತು, ಜಡಕ್ಕಲ್ಲ!

## (ಪದಾರ್ಥಗಳು ಅದೃಶ್ಯವಾಗುತ್ತವೆ; ಅವುಗಳ ಅಭಾವವಾಗುವುದಿಲ್ಲ)

ವಸ್ತುಗಳು **ನಷ್ಟ**ವಾಗುತ್ತವೆ, ಎಂದರೆ **ಅದೃಶ್ಯ**ವಾಗುತ್ತವೆ. ಆದರೆ, ಅಭಾವವು ಯಾವುದೇ ವಸ್ತುವಿಗೂ ಆಗುವುದಿಲ್ಲ! ಇದೇ ರೀತಿ, ಅದೃಶ್ಯನಾಗುವ ಕಾರಣದಿಂದ, ಜೀವನ ಅಭಾವವನ್ನೂ ಅಂಗೀಕರಿಸಬಾರದು. ಜೀವಾತ್ಮನು ಯಾವಾಗ ಸದೇಹನಾಗುತ್ತಾನೋ, ಆಗಲೇ ಅವನ ಪ್ರಕಟಣೆಯಾಗುತ್ತದೆ. ಯಾವಾಗ [ಅವನು] ಶರೀರವನ್ನು ಬಿಟ್ಟುಬಿಡುತ್ತಾನೋ, ಆಗ, ಯಾವುದು ಸಾವಿಗೆ ಈಡಾಗಿದೆಯೋ, ಆ ಶರೀರವು, ಮೊದಲು ಹೇಗೆ ಚೈತನ್ಯಯುಕ್ತವಾಗಿತ್ತೋ, ಹಾಗೆ ಇರಲಾರದು.

ಇದೇ ಮಾತನ್ನು ಬೃಹದಾರಣ್ಯಕದಲ್ಲಿ ಹೇಳಿದ್ದಾರೆ—

**"ನ [ವಾ ಅರೇ] ಅಹಂ ಮೋಹಂ ಬ್ರವೀಮಿ. [ಅವಿನಾಶೀ ವಾ ಅರೇ] ಅನುಚ್ಛಿತ್ತಿಧರ್ಮಾಯಮಾತ್ಮೇತಿ"** [4.5.14]

ಯಾಜ್ಞವಲ್ಕ್ಯರು—"ಓ ಮೈತ್ರೇಯಿ! ನಾನು ಮೋಹದಿಂದ ಮಾತನ್ನಾಡುವುದಿಲ್ಲ. ಆದರೆ, ಯಾವನ ಸಂಯೋಗದಿಂದ ಶರೀರವು ಕ್ರಿಯೆಯನ್ನು ಮಾಡುತ್ತದೋ, ಆ ಆತ್ಮನು ಅವಿನಾಶಿಯಾಗಿದ್ದಾನೆ.", ಎಂದು ಹೇಳುತ್ತಾರೆ.

---

*ಈ ಮೇಲಿನ ಸಿದ್ಧಾಂತಗಳು ಚಾರವಾಕದರ್ಶನದ್ದೆಂದು ತಿಳಿಯಬೇಕು. ಇವುಗಳ ಟೀಕೆ ಮತ್ತು ಉತ್ತರವನ್ನು ಮುಂದೆ, ಗ್ರಂಥಕರ್ತರು ಕೊಟ್ಟಿದ್ದಾರೆ.—ಸಂ.

†ನಿರ್ಮಾಣವು.—ಅನು.

## (ಜೀವನು ಶರೀರದಿಂದ ಬೇರೆಯಾದ ತತ್ವ)

ಯಾವಾಗ ಜೀವನು ಶರೀರದಿಂದ ಬೇರೆಯಾಗಿ ಹೋಗುತ್ತಾನೋ, ಆಗ ಶರೀರದಲ್ಲಿ ಜ್ಞಾನವು ಸ್ವಲ್ಪವೂ ಇರುವುದಿಲ್ಲ. ದೇಹದಿಂದ ಬೇರೆಯಾದ ಆತ್ಮನು ಇಲ್ಲದೇ ಇದ್ದರೆ, [ಮರಣವಾದಮೇಲೆ ಶರೀರದಲ್ಲಿ ಜ್ಞಾನದ ಅಭಾವವಿಲ್ಲದಿರಬೇಕಿತ್ತು. ಆದ್ದರಿಂದ,] ಯಾವನ ಸಂಯೋಗದಿಂದ ಚೇತನತ್ವವೂ, ಮತ್ತು ವಿಯೋಗದಿಂದ ಜಡತ್ವವೂ ಉಂಟಾಗುತ್ತದೋ, ಅವನು ದೇಹದಿಂದ ಬೇರೆ, ಎಂಬುದು ಸ್ಪಷ್ಟವಾಗಿದೆ!

## (ಪ್ರತ್ಯಕ್ಷಮಾಡುವವನಿಗೆ ತನ್ನ ಇಂದ್ರಿಯಪ್ರತ್ಯಕ್ಷವಾಗುವುದಿಲ್ಲ)

ಹೇಗೆ ಕಣ್ಣು ಎಲ್ಲವನ್ನೂ ನೋಡುತ್ತದೋ, ಆದರೆ, ತನ್ನನ್ನು ತಾನು ನೋಡಿಕೊಳ್ಳಲಾರದೋ, ಹಾಗೆಯೇ, ಪ್ರತ್ಯಕ್ಷವಾಗಿ ನೋಡಬಲ್ಲವನು ತನ್ನನ್ನು "ಇಂದ್ರಿಯಪ್ರತ್ಯಕ್ಷ"ವಾಗಿ ಮಾಡಿಕೊಳ್ಳಲಾರನು!

ಹೇಗೆ, [ಮಾನವನು] ತನ್ನ ಕಣ್ಣಿನಿಂದ ಮಡಕೆ, ಬಟ್ಟೆ ಮೊದಲಾದ ಪದಾರ್ಥಗಳೆಲ್ಲವನ್ನೂ ನೋಡುತ್ತಾನೋ, ಹಾಗೆ, ಕಣ್ಣನ್ನು ತನ್ನ ಜ್ಞಾನದಿಂದ ನೋಡುತ್ತಾನೆ. ಯಾವನು ನೋಡುವವನಾಗಿದ್ದಾನೋ, ಅವನು ನೋಡುವವನಾಗಿಯೇ ಇರುತ್ತಾನೆ! ಎಂದಿಗೂ ದೃಶ್ಯನಾಗುವುದಿಲ್ಲ! ಹೇಗೆ, ಆಧಾರವಿಲ್ಲದೇ ಕಾರ್ಯವೂ, ಅವಯವೀ ಇಲ್ಲದೇ ಅವಯವಗಳೂ, ಮತ್ತು ಕರ್ತೃವಿಲ್ಲದೇ ಕರ್ಮಗಳೂ ಇರಲಾರವೋ, ಹಾಗೆಯೇ [ಪ್ರತ್ಯಕ್ಷದ] ಕರ್ತೃವಿಲ್ಲದೇ ಪ್ರತ್ಯಕ್ಷವಿರುವುದು ಹೇಗೆ ಶಕ್ಯ?

## (ಸ್ತ್ರೀ-ಸಮಾಗಮವನ್ನೇ ಪುರುಷಾರ್ಥದ ಫಲ, ಎಂದು ಅಂಗೀಕರಿಸುವುದು ಮೂರ್ಖತನ)

ಸುಂದರಿಯಾದ ನಾರಿಯ ಸಂಗಡ ಸಮಾಗಮ ಮಾಡುವುದನ್ನೇ ಪುರುಷಾರ್ಥದ ಫಲವೆಂದು ಅಂಗೀಕರಿಸುವಿರಾದರೆ, ಕ್ಷಣಿಕವಾದ ಸುಖ, ಮತ್ತು ಅದರಿಂದ ದುಃಖವೂ ಕೂಡ ಉಂಟಾಗುತ್ತದೆ. ಅದೂ ಕೂಡ ಪುರುಷಾರ್ಥದ ಫಲವೇ ಆದೀತು! ಹೀಗೆ ಇರುವುದಾದರೆ, ಸ್ವರ್ಗಕ್ಕೂ* ಹಾನಿಯುಂಟಾಗುವುದರಿಂದ, ದುಃಖವನ್ನು ಅನುಭವಿಸಬೇಕಾಗುವುದು.

'ದುಃಖದಿಂದ ಬಿಡುಗಡೆ ಹೊಂದುವುದಕ್ಕಾಗಿ ಮತ್ತು ಸುಖವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಯತ್ನಮಾಡಬೇಕು', ಎನ್ನುವಿರಾದರೆ, ಮುಕ್ತಿ-ಸುಖಕ್ಕೆ ಹಾನಿಯುಂಟಾಗುತ್ತದೆ.† ಆದುದರಿಂದ, ಅದು ಪುರುಷಾರ್ಥದ ಫಲವಲ್ಲ.

---

*ಎಂದರೆ, ಸುಖಕ್ಕೂ.—ಸಂ.

†ಭೌತಿಕ ಸುಖಾಪೇಕ್ಷೆ ಬೆಳೆದಲ್ಲಿ ಭೋಗವೇ ಹೆಚ್ಚಿ, ಆನಂದ ಸಿಕ್ಕದು, ಎಂದು ಭಾವನೆ. —ಅನು.

## (ಚಾರವಾಕ ಮತದ ಮತ್ತಿತರ ಮಾತುಗಳು)

**ಚಾರವಾಕ:**—ಯಾರು ದುಃಖಸಂಯುಕ್ತವಾದ ಸುಖದ ತ್ಯಾಗವನ್ನು ಮಾಡುತ್ತಾರೋ, ಅವರು ಮೂರ್ಖರಾಗಿರುತ್ತಾರೆ! ಹೇಗೆ ಧಾನ್ಯವನ್ನು ಬಯಸುವವನು ಧಾನ್ಯವನ್ನು ಗ್ರಹಿಸಿ, ಹೊಟ್ಟನ್ನು ತ್ಯಜಿಸುತ್ತಾನೋ, ಹಾಗೆ ಈ ಜಗತ್ತಿನಲ್ಲಿ ಬುದ್ಧಿವಂತರು ಸುಖವನ್ನು ಗ್ರಹಿಸಿ, ದುಃಖವನ್ನು ತ್ಯಜಿಸಿಬಿಡಬೇಕು. ಏಕೆಂದರೆ, [ಯಾರು] ಈ ಲೋಕದಲ್ಲಿ ಪ್ರಸ್ತುತವಾಗಿರುವ ಸುಖವನ್ನು ಪರಿತ್ಯಜಿಸಿ, ಅನುಪಸ್ಥಿತವಾದ ಸ್ವರ್ಗದ ಸುಖದ ಇಚ್ಛೆಯಿಂದ, ಧೂರ್ತರಿಂದ ಕಥಿತವಾದ, ವೇದೋಕ್ತವಾದ **ಅಗ್ನಿಹೋತ್ರವೇ ಮೊದಲಾದ ಕರ್ಮದ, ಉಪಾಸನೆಯ, ಮತ್ತು ಜ್ಞಾನ ಕಾಂಡದ ಅನುಷ್ಠಾನವನ್ನು ಪರಲೋಕಕ್ಕಾಗಿ ಮಾಡುತ್ತಾರೋ, ಅವರು ಅಜ್ಞಾನಿಗಳಾಗಿರುತ್ತಾರೆ! ಪರಲೋಕವು ಇಲ್ಲವೇ ಇಲ್ಲವಾದುದರಿಂದ,** ಅದನ್ನು ಆಶಿಸುವುದು ಮೂರ್ಖತನದ ಕೆಲಸವಾಗಿದೆ! ಏಕೆಂದರೆ—

**ಅಗ್ನಿಹೋತ್ರಂ ತ್ರಯೋ ವೇದಾಸ್ತ್ರಿದಂಡಂ ಭಸ್ಮಗುಂಠನಮ್ ।**

**ಬುದ್ಧಿಪೌರುಷಹೀನಾನಾಂ ಜೀವಿಕೇತಿ ಬೃಹಸ್ಪತಿಃ ॥**

[**ಸರ್ವದರ್ಶನಸಂಗ್ರಹ; ಚಾರವಾಕ**]

ಚಾರವಾಕಮತ–ಪ್ರಚಾರಕನಾದ ಬೃಹಸ್ಪತಿಯು ಏನು ಹೇಳುತ್ತಾನೆಂದರೆ—

"ಅಗ್ನಿ ಹೋತ್ರ, ಮೂರು ವೇದಗಳು, ಮೂರು ದಂಡಗಳು, ಹಾಗೂ ಭಸ್ಮಧಾರಣಮಾಡುವುದು, ಇವನ್ನು ಬುದ್ಧಿ ಮತ್ತು ಪುರುಷಾರ್ಥಗಳಿಂದ ರಹಿತರಾದ ಪುರುಷರು ಜೀವನನಿರ್ವಾಹಕ್ಕಾಗಿ ಮಾಡಿಕೊಂಡಿದ್ದಾರೆ!

"ಆದರೆ, ಮುಳ್ಳು ಚುಚ್ಚಿಕೊಳ್ಳುವುದು ಮೊದಲಾದುದರಿಂದ ಉತ್ಪನ್ನವಾದ ದುಃಖದ ಹೆಸರು **ನರಕ;** ಲೋಕದಲ್ಲಿ ಸಿದ್ಧನಾಗಿರುವ ರಾಜನೇ **ಪರಮೇಶ್ವರ;** ಮತ್ತು ದೇಹದ ನಾಶವಾಗುವಿಕೆಯೇ **ಮೋಕ್ಷ!** ಬೇರೆ ಏನೂ ಇಲ್ಲ!"

## (ಅಗ್ನಿಹೋತ್ರ ಮೊದಲಾದ ವೇದೋಕ್ತ ಧರ್ಮದ ನಿಂದೆ ಮಾಡುವುದು ಧೂರ್ತ ಕರ್ಮವಾಗಿದೆ)

**ಉತ್ತರ:**—ಕೇವಲ ವಿಷಯುವೆಂಬ ಸುಖವನ್ನೇ ಪುರುಷಾರ್ಥದ ಫಲವೆಂದು ಅಂಗೀಕರಿಸಿ, ವಿಷಯ-ದುಃಖನಿವಾರಣಮಾತ್ರದಲ್ಲಿ ಕೃತಕೃತ್ಯತೆ ಮತ್ತು ಸ್ವರ್ಗವಿದೆ, ಎಂದು ಒಪ್ಪಿಕೊಳ್ಳುವುದು ಮೂರ್ಖತನವಾಗಿದೆ!*

---

*ವೇದವಿರುದ್ಧ ಚಾರವಾಕಮತದ ಖಂಡನೆಯನ್ನು ಅತಿ ತೀವ್ರವಾಗಿ ಮಹರ್ಷಿದಯಾನಂದರು ಮಾಡುತ್ತಿದ್ದಾರೆ. ಪಾಶ್ಚಿಮಾತ್ಯ ಸಂಸ್ಕೃತಿಯು ಈ ಚಾರವಾಕನ ಇಂದ್ರಿಯಲೋಲುಪ, →

ಅಗ್ನಿಹೋತ್ರವೇ ಮೊದಲಾದ ಯಜ್ಞಗಳಿಂದ ವಾಯುವಿನ, ವೃಷ್ಟಿಯ, ಹಾಗೂ ಜಲದ ಶುದ್ಧಿಯ ಮೂಲಕ ಆರೋಗ್ಯ ಪ್ರಾಪ್ತವಾಗುವುದು. ಅದರಿಂದ, ಧರ್ಮ, ಅರ್ಥ, ಕಾಮ, ಹಾಗೂ ಮೋಕ್ಷದ ಸಿದ್ಧಿಯಾಗುವುದು. ಅದನ್ನು ತಿಳಿಯದೇ, ವೇದಗಳ, ಈಶ್ವರನ ಮತ್ತು ವೇದೋಕ್ತ ಧರ್ಮದ ನಿಂದೆಯನ್ನು ಮಾಡುವುದು ಧೂರ್ತರ ಕೆಲಸವಾಗಿದೆ!

'ತ್ರಿದಂಡ'ದ, ಮತ್ತು ಭಸ್ಮಧಾರಣದ ಖಂಡನವೇನೋ ಸರಿಯಾಗಿದೆ!

### (ಮುಳ್ಳಿನಿಂದಾದ ದುಃಖವನ್ನು ನರಕ, ಮತ್ತು ಮೃತ್ಯುವನ್ನು ಮುಕ್ತಿ, ಎಂದು ಹೇಳುವುದು ತಪ್ಪು)

ಮುಳ್ಳೇ ಮೊದಲಾದುದರಿಂದ ಉತ್ಪನ್ನವಾಗುವ ದುಃಖದ ಹೆಸರೇ ನರಕವಾದಲ್ಲಿ, ಅದಕ್ಕಿಂತ ಅಧಿಕವಾದ ಮಹಾರೋಗ ಮೊದಲಾದುವು ನರಕವೇತಕ್ಕಲ್ಲ ?

ರಾಜನು ಐಶ್ವರ್ಯವಂತನೂ ಮತ್ತು ಪ್ರಜಾಪಾಲನದಲ್ಲಿ ಸಮರ್ಥನೂ ಆಗಿರುವುದರಿಂದ, ಶ್ರೇಷ್ಠನು, ಎಂದು ಅಂಗೀಕರಿಸಿದರೆ, ಅದು ಸರಿಯೇ ! ಆದರೆ, ಯಾವ ರಾಜನು ಅನ್ಯಾಯಕಾರಿಯೂ, ಪಾಪಿಯೂ ಆಗಿರುತ್ತಾನೋ, ಅವನನ್ನೂ ಕೂಡ ಪರಮೇಶ್ವರನಂತೆ, ಎಂದು ಗ್ರಹಿಸುವಿರಾದರೆ, ನಿಮ್ಮಂತಹ ಮೂರ್ಖರು ಬೇರೆ ಯಾರೂ ಇಲ್ಲ !

ಶರೀರದ ವಿಚ್ಛೇದವಾಗುವುದೇ ಮೋಕ್ಷವಾದರೆ, ಕತ್ತೆಗಳು, ನಾಯಿಗಳು ಮೊದಲಾದುವಕ್ಕೂ, ಮತ್ತು ನಿಮಗೂ ಇರುವ ವ್ಯತ್ಯಾಸವೇನು ? ಅಹುದು ! ಆಕೃತಿಯೊಂದು ಮಾತ್ರ ಬೇರೆಯಾಯಿತು !

### (ಚಾರವಾಕ ಮತದ ಇತರ ಸತ್ಯಾಸತ್ಯ ಮಾತುಗಳು)

**ಚಾರವಾಕ:—**

**ಅಗ್ನಿರುಷ್ಣೋ ಜಲಂ ಶೀತಂ ಶೀತಸ್ಪರ್ಶಸ್ತಥಾಽನಿಲಃ ।**
**ಕೇನೇದಂ ಚಿತ್ರಿತಂ ತಸ್ಮಾತ್ ಸ್ವಭಾವಾತ್ತದ್ವ್ಯವಸ್ಥಿತಿಃ ॥1॥**

---

→ಭೌತಿಕ ಸುಖಾಪೇಕ್ಷೆಯಾದ ಸಂಸ್ಕೃತಿಯಾಗಿದೆ! ಇದು ಪಶ್ಚಿಮದಿಂದ ಆಮದಾಗುತ್ತಾ, ನಿಧಾನವಾಗಿ ಭಾರತವನ್ನೆಲ್ಲಾ ಆವರಿಸುತ್ತಿದೆ. ಪರಿಣಾಮವಾಗಿ, ಮನುಷ್ಯರು ಪಶುಗಳಿಗಿಂತ ನಿಕೃಷ್ಟ ಸ್ಥಿತಿಗಿಳಿಯುವರು! ಇದನ್ನು ತಪ್ಪಿಸಲೆಂದೇ, 'ಸತ್ಯಾರ್ಥ ಪ್ರಕಾಶ'ರೂಪವಾದ ನೌಕೆಯ ರಚನೆಯಾಗಿದೆ. ಈ ನೌಕೆಯನ್ನು ಹತ್ತುವವರು ಪಾರಾಗುವರು; ಬಿಟ್ಟುಬಿಡುವವರು ಮುಳುಗುವರು !—ಸಂ.

ನ ಸ್ವರ್ಗೋ ನಾಪವರ್ಗೋ ವಾ ನೈವಾತ್ಮಾ ಪಾರಲೌಕಿಕಃ ।
ನೈವ ವರ್ಣಾಶ್ರಮಾದೀನಾಂ ಕ್ರಿಯಾಶ್ಚ ಫಲದಾಯಿಕಾಃ ॥2॥

ಪಶುಶ್ಚೇನ್ನಿಹತಃ ಸ್ವರ್ಗಂ ಜ್ಯೋತಿಷ್ಟೋಮೇ ಗಮಿಷ್ಯತಿ ।
ಸ್ವಪಿತಾ ಯಜಮಾನೇನ ತತ್ರ ಕಸ್ಮಾನ್ನ ಹಿಂಸ್ಯತೇ ॥3॥

ಮೃತಾನಾಮಪಿ ಜಂತೂನಾಂ ಶ್ರಾದ್ಧಂ ಚೇತ್ತೃಪ್ತಿಕಾರಣಮ್ ।
ಗಚ್ಛತಾಮಿಹ ಜಂತೂನಾಂ ವ್ಯರ್ಥಂ ಪಾಥೇಯಕಲ್ಪನಮ್ ॥4॥

ಸ್ವರ್ಗಸ್ಥಿತಾ ಯದಾ ತೃಪ್ತಿಂ ಗಚ್ಛೇಯುಸ್ತತ್ರ ದಾನತಃ ।
ಪ್ರಾಸಾದಸ್ಯೋಪರಿಸ್ಥಾನಾಮತ್ರ ಕಸ್ಮಾನ್ನ ದೀಯತೇ ॥5॥

ಯಾವಜ್ಜೀವೇತ್ಸುಖಂ ಜೀವೇದೃಣಂ ಕೃತ್ವಾ ಘೃತಂ ಪಿಬೇತ್ ।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ॥6॥

ಯದಿ ಗಚ್ಛೇತ್ಪರಂ ಲೋಕಂ ದೇಹಾದೇಷ ವಿನಿರ್ಗತಃ ।
ಕಸ್ಮಾದ್ಭೂಯೋ ನ ಚಾಯಾತಿ ಬಂಧುಸ್ನೇಹಸಮಾಕುಲಃ ॥7॥

ತತಶ್ಚ ಜೀವನೋಪಾಯೋ ಬ್ರಾಹ್ಮಣೈರ್ವಿಹಿತಸ್ತ್ವಿಹ ।
ಮೃತಾನಾಂ ಪ್ರೇತಕಾರ್ಯಾಣಿ ನ ತ್ವನ್ಯದ್ವಿದ್ಯತೇ ಕ್ವಚಿತ್ ॥8॥

ತ್ರಯೋ ವೇದಸ್ಯ ಕರ್ತಾರೋ ಭಂಡಧೂರ್ತನಿಶಾಚರಾಃ ।
ಜರ್ಫರೀತುರ್ಫರೀತ್ಯಾದಿ ಪಂಡಿತಾನಾಂ ವಚಃಸ್ಮೃತಮ್ ॥9॥

ಅಶ್ವಸ್ಯಾತ್ರ ಹಿ ಶಿಶ್ನಂತು ಪತ್ನೀಗ್ರಾಹ್ಯಂ ಪ್ರಕೀರ್ತಿತಮ್ ।
ಭಂಡೈಸ್ತದ್ವತ್ಪರಂ ಚೈವ ಗ್ರಾಹ್ಯಜಾತಂ ಪ್ರಕೀರ್ತಿತಮ್ ॥10॥

ಮಾಂಸಾನಾಂ ಖಾದನಂ ತದ್ವನ್ನಿಶಾಚರಸಮೀರಿತಮ್ ॥11॥

[ಸರ್ವದರ್ಶನಸಂಗ್ರಹ ; ಚಾರವಾಕ]

ಚಾರವಾಕರು, ಆಭಾಣಕರು, ಬೌದ್ಧರು ಮತ್ತು ಜೈನರೂ ಕೂಡ, 'ಜಗತ್ತಿನ ಉತ್ಪತ್ತಿಯನ್ನು ಸ್ವಭಾವದಿಂದಾಗುತ್ತದೆ', ಎಂದು ಅಂಗೀಕರಿಸುತ್ತಾರೆ. 'ಯಾವ ಯಾವ ಸ್ವಾಭಾವಿಕ ಗುಣಗಳಿವೆಯೋ, ಆಯಾ ಗುಣದಿಂದ ದ್ರವ್ಯಗಳು ಸಂಯುಕ್ತವಾಗಿ, ಸಮಸ್ತ ವಸ್ತುಗಳೂ ಆಗುತ್ತವೆ ; ಜಗತ್ತಿನ ಕರ್ತೃವು ಯಾವನೂ ಇಲ್ಲ!'* [1]

*ಇಲ್ಲಿ ಭಾವಮಾತ್ರ ವ್ಯಕ್ತಪಡಿಸಲ್ಪಟ್ಟಿದೆ. ಶ್ಲೋಕದ ಶಬ್ದಾರ್ಥ ಹೀಗಿದೆ:—

'ಅಗ್ನಿಯು ಉಷ್ಣವಾಗಿದೆ. ಜಲವು ಶೀತಲವಾಗಿದೆ. ವಾಯುವು ಶೀತಲಸ್ಪರ್ಶವಾಗಿದೆ. ಈ ವೈಚಿತ್ರ್ಯವನ್ನು ಯಾವನು ರಚಿಸಿದ್ದಾನೆ? ಆದ್ದರಿಂದ, ಸ್ವಭಾವದಿಂದಲೇ, ಇವುಗಳ ಆಯಾಯಾ ಗುಣಗಳಿಂದ ಯುಕ್ತವಾದ ಸ್ಥಿತಿಯನ್ನು ತಿಳಿದುಕೊಳ್ಳಬೇಕು.'—ಯು.ಮೀ.

ಆದರೆ, ಇವರಲ್ಲಿ **ಚಾರವಾಕನೊಬ್ಬನು** ಇಷ್ಟನ್ನು* ಮಾತ್ರ ಒಪ್ಪಿಕೊಳ್ಳುತ್ತಾನೆ. ಆದರೆ, ಬೌದ್ಧರು ಮತ್ತು ಜೈನರು ಪರಲೋಕವನ್ನೂ, ಜೀವಾತ್ಮನನ್ನೂ ಅಂಗೀಕರಿಸುತ್ತಾರೆ ; ಚಾರವಾಕನು ಒಪ್ಪುವುದಿಲ್ಲ! ಉಳಿದ ವಿಷಯದಲ್ಲಿ ಒಂದೊಂದು ಮಾತುಗಳನ್ನುಳಿದು, ಇವರೆಲ್ಲರ ಮತಗಳೂ ಒಂದೇ ಬಗೆಯದಾಗಿವೆ!

ಸ್ವರ್ಗವಾವುದೂ ಇಲ್ಲ! ನರಕವೂ ಯಾವುದೂ ಇಲ್ಲ! ಮತ್ತು ಪರಲೋಕಕ್ಕೆ ತೆರಳುವ ಆತ್ಮನೂ ಕೂಡ ಯಾವನೂ ಇಲ್ಲ. ಮತ್ತು ವರ್ಣಾಶ್ರಮಗಳ ಕ್ರಿಯೆಯೂ ಕೂಡ ಫಲದಾಯಕವಲ್ಲ. [2]

ಯಜ್ಞದಲ್ಲಿ ಪಶುವನ್ನು ಕೊಂದು, ಹೋಮಮಾಡುವುದರಿಂದ, ಅದು ಸ್ವರ್ಗಕ್ಕೆ ಹೋಗುವುದಾದರೆ, ಯಜಮಾನನು ತನ್ನ ತಂದೆ ಮೊದಲಾದವರನ್ನು ಕೊಂದು, ಹೋಮಮಾಡಿ, ಸ್ವರ್ಗಕ್ಕೆ ಕಳುಹಿಸುವುದಿಲ್ಲವೇಕೆ ? [3]

ಶ್ರಾದ್ಧ ಮತ್ತು ತರ್ಪಣ ಮೃತರಾದ ಜೀವರಿಗೆ ತೃಪ್ತಿಕಾರಕವಾಗುವುದಾದರೆ, ಪರದೇಶಕ್ಕೆ ಹೋಗುವವರು ಮಾರ್ಗದಲ್ಲಿ ನಿರ್ವಾಹಕ್ಕೋಸ್ಕರ ಅನ್ನ, ವಸ್ತ್ರ ಮತ್ತು ಧನ ಮೊದಲಾದುವನ್ನು ತೆಗೆದುಕೊಂಡು ಏಕೆ ಹೋಗುತ್ತಾರೆ ?

ಏಕೆಂದರೆ, ಹೇಗೆ ಮೃತಕನ ಹೆಸರಿನಿಂದ ಅರ್ಪಣಮಾಡಿದ ಪದಾರ್ಥವು ಸ್ವರ್ಗಕ್ಕೆ ತಲುಪುವುದೋ, ಹಾಗೆ ಪರದೇಶಕ್ಕೆ ತೆರಳುವವರಿಗೆ, ಅವರ ಸಂಬಂಧಿಕರೂ ಕೂಡ, ಅವರ ಹೆಸರಿನಿಂದ ಅರ್ಪಣಮಾಡಿ, ದೇಶಾಂತರಕ್ಕೆ ತಲುಪಿಸಿಬಿಡಬಹುದಲ್ಲ! ಇದು ತಲುಪುವುದಿಲ್ಲವಾದರೆ, ಅದೂ ಹೇಗೆ ತಾನೇ ಸ್ವರ್ಗಕ್ಕೆ ತಲುಪಬಲ್ಲದು ?† [4]

ಮರ್ತ್ಯಲೋಕದಲ್ಲಿ ದಾನಮಾಡುವುದರಿಂದ, ಸ್ವರ್ಗವಾಸಿಗಳು ತೃಪ್ತರಾಗುವರಾದರೆ, ಕೆಳಗೆ ಕೊಡುವುದರಿಂದ, ಮನೆಯ ಮಾಳಿಗೆಯ ಮೇಲಿರುವ ಪುರುಷನು ತೃಪ್ತನಾಗುವುದಿಲ್ಲವೇಕೆ ? [5]

---

*ಎಂದರೆ, ಮೇಲಿನ ವಾಕ್ಯದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯವನ್ನು.—ಯು.ಮೀ.

†ಮೃತಕ-ಶ್ರಾದ್ಧ ಮತ್ತು ತರ್ಪಣಗಳ ವಿಧಾನ ವೇದಾದಿ ಸಚ್ಛಾಸ್ತ್ರಗಳಲ್ಲಿಲ್ಲ. ಯುಕ್ತಿ-ತರ್ಕಗಳಿಂದಲೂ ಅವು ಸಿದ್ಧವಾಗುವುದಿಲ್ಲ. ಆದರೂ ಕೂಡ, ಇವುಗಳ ತ್ಯಾಗವನ್ನು ಮಾಡದೇ, ಇವುಗಳ ಸಮರ್ಥನೆ ಮಾಡುವ ಸಲುವಾಗಿ ಪೌರಾಣಿಕ ವಿದ್ವಾಂಸರು ಈಗ ಹೊಸದಾಗಿ ಆವಿಷ್ಕೃತವಾಗುತ್ತಿರುವ ವೈಜ್ಞಾನಿಕ ಹಿನ್ನೆಲೆಯ ಮೇಲೆ ದೃಷ್ಟಾಂತಗಳನ್ನೂ, ಯುಕ್ತಿಗಳನ್ನೂ ಕೊಡಲಾರಂಭಿಸಿದ್ದಾರೆ. ಎಂದರೆ, ಟೀವೀ-ರಾಡಾರ್-ರಾಕೆಟ್-ಉಪಗ್ರಹ-ಕಂಪ್ಯೂಟರ್ ಯುಗದ ಬಾಲವನ್ನು ಈ ಮೃತಕ ಶ್ರಾದ್ಧ-ತರ್ಪಣಗಳು ಹಿಡಿದುಕೊಂಡು, ಜೀವಿತವಾಗಿರ ಬಯಸುತ್ತವೆ!—ಸಂ.

ಆದುದರಿಂದ, 'ಎಂದಿನವರೆಗೆ ಜೀವಿಸುತ್ತಾನೋ, ಅಂದಿನವರೆಗೆ ಸುಖದಿಂದ ಜೀವಿಸಬೇಕು!' ಮನೆಯಲ್ಲಿ ಪದಾರ್ಥಗಳಿಲ್ಲವಾದರೆ, ಸಾಲವನ್ನು ತೆಗೆದುಕೊಂಡು ಆನಂದವನ್ನು ಅನುಭವಿಸಬೇಕು ! ಸಾಲವನ್ನು ಹಿಂದಿರುಗಿಸಬೇಕಾಗುವುದಿಲ್ಲ ! ಏಕೆಂದರೆ, ಯಾವ ಶರೀರದಲ್ಲಿ ಜೀವನು ತಿಂದಿದ್ದಾನೋ-ಕುಡಿದಿದ್ದಾನೋ, ಅವೆರಡರ* ಪುನರಾಗಮನವಾಗುವುದಿಲ್ಲ. ಮತ್ತೆ ಯಾವನನ್ನು ಯಾವನು ಕೇಳುವನು ? ಮತ್ತು ಯಾವನು ಕೊಡುವನು ? [6]

ಜನರು—'ಸಾವಿನ ಸಮಯದಲ್ಲಿ ಜೀವನು ಹೊರಬಂದು ಪರಲೋಕಕ್ಕೆ ಹೋಗುತ್ತಾನೆ', ಎಂದು ಏನು ಹೇಳುತ್ತಾರೋ. ಅದು ಸುಳ್ಳಾದ ಮಾತು! ಏಕೆಂದರೆ, ಹೀಗೆ ಆಗಿದ್ದಲ್ಲಿ, ಕುಟುಂಬದ ಮೋಹದಿಂದ ಬದ್ಧನಾಗಿ, ಮರಳಿ ಮನೆಗೆ ಬಂದು ಬಿಡುವುದಿಲ್ಲವೇಕೆ ? [7]

ಆದುದರಿಂದ, ಈ ಎಲ್ಲವನ್ನೂ ಬ್ರಾಹ್ಮಣರು ತಮ್ಮ ನಿರ್ವಾಹಕ್ಕೆ ಉಪಾಯವಾಗಿ ಮಾಡಿಕೊಂಡಿದ್ದಾರೆ ! ದಶಗಾತ್ರ ಮೊದಲಾದ ಯಾವ ಉತ್ತರಕ್ರಿಯೆಯನ್ನು ಮಾಡುತ್ತಾ ಹೋಗುತ್ತಾರೋ, ಇದೆಲ್ಲವೂ ಅವರ ಆಜೀವಿಕೆಯ ಲೀಲೆಮಾತ್ರ ! [8]

ವೇದದ ನಿರ್ಮಾತೃಗಳು ಭಂಡರು, ಧೂರ್ತರು ಮತ್ತು ನಿಶಾಚರರು ; ಎಂದರೆ, ಈ ಮೂವರು ರಾಕ್ಷಸರು ! †

'ಜರ್ಫರೀ', 'ತುರ್ಫರೀ'‡ ಈ ಮೊದಲಾದುವು ಪಂಡಿತರುಗಳ ಧೂರ್ತತಾಯುಕ್ತವಾದ ವಚನಗಳಾಗಿವೆ. [9]

---

*ಎಂದರೆ, ಅದರ, ಮತ್ತು ಅವನ.—ಅನು.

†ವಾಮಮಾರ್ಗಿಗಳು ಬ್ರಾಹ್ಮಣಗ್ರಂಥ, ಶ್ರೌತಸೂತ್ರ ಮೊದಲಾದ ಕೃತಿಗಳಲ್ಲಿ, ಯಜ್ಞ-ಯಾಗಾದಿಗಳಲ್ಲಿ ಪಶುವಧೆ, ಸುರಾಪಾನ, ಮೈಥುನಾದಿ ನಿಷಿದ್ಧ ವ್ಯಾಪಾರಗಳನ್ನು ಪ್ರಕ್ಷೇಪ ಮಾಡಿದ್ದಾರೆ. ಪೌರಾಣಿಕ ವಿದ್ವಾಂಸರು ಇವನ್ನು ಒಪ್ಪಿಕೊಂಡು, ತದನುಸಾರವಾಗಿಯೇ ವೇದಗಳ ಭಾಷ್ಯ ಬರೆದಿದ್ದಾರೆ. ಅಲ್ಲದೇ, ಅವರು ವೇದ ಸಂಹಿತೆಗೂ, ಬ್ರಾಹ್ಮಣಗಳಿಗೂ 'ವೇದ'ಗಳೆಂದೇ ಹೆಸರಿಟ್ಟಿದ್ದಾರೆ ! ಆದ್ದರಿಂದ, ಚಾರವಾಕನು ವಾಮಮಾರ್ಗಿಗಳನ್ನೂ, ಪೌರಾಣಿಕ ವಿದ್ವಾಂಸರನ್ನೂ ನಿಂದಿಸುವ ಬದಲು, ವೇದಗಳನ್ನೂ, ವೇದಕರ್ತೃವನ್ನೂ ನಿಂದಿಸುತ್ತಿದ್ದಾನೆ.—ಸಂ.

‡ಈ ಶಬ್ದಗಳು ಅಥರ್ವವೇದದ ಆಯುರ್ವೇದ ಪ್ರಕರಣದಲ್ಲಿವೆ. ಇವುಗಳ ಅರ್ಥಕ್ಕಾಗಿ ಯಾಸ್ಕಾಚಾರ್ಯರ 'ನಿರುಕ್ತ'ವನ್ನು ನೋಡಿ.—ಸಂ.

ನೋಡಿರಿ, ಧೂರ್ತರ ರಚನೆಯನ್ನು ! 'ಕುದುರೆಯ ಜನನೇಂದ್ರಿಯವನ್ನು ಸ್ತ್ರೀ ಗ್ರಹಿಸಬೇಕು!' ಅದರೊಂದಿಗೆ ಯಜಮಾನನ ಸ್ತ್ರೀಯ ಸಮಾಗಮವನ್ನು ಮಾಡಿಸುವುದು, ಕನ್ಯೆಯೊಂದಿಗೆ ಅಶ್ಲೀಲವಾದ ಹಾಸ್ಯಮಾಡುವುದು ಮೊದಲಾದುವನ್ನು ಬರೆಯುವುದು ಧೂರ್ತರಿಗಲ್ಲದೇ ಅನ್ಯರಿಗೆ ಶಕ್ಯವಲ್ಲ!* [10]

ಮತ್ತು ಎಲ್ಲಿ ಮಾಂಸಭಕ್ಷಣವನ್ನು ಬರೆದಿದ್ದಾರೋ, ವೇದದ ಆ ಭಾಗ ರಾಕ್ಷಸನಿಂದ ರಚಿತವಾಗಿದೆ! [11]

## (ಪರಮೇಶ್ವರನಿಲ್ಲದೇ ಸೃಷ್ಟಿರಚನೆಯಾಗುವುದಿಲ್ಲ)

**ಉತ್ತರ:**—ಚೇತನನಾದ ಪರಮೇಶ್ವರನು ನಿರ್ಮಾಣಮಾಡದೇ, ಜಡಪದಾರ್ಥಗಳು ಸ್ವತಃ ಪರಸ್ಪರವಾಗಿ ಸ್ವಭಾವದಿಂದ, ನಿಯಮಪೂರ್ವಕವಾಗಿ ಸೇರಿ, ಉತ್ಪನ್ನವಾಗಲಾರವು. ಸ್ವಭಾವದಿಂದಲೇ ಆಗುವುದಾದರೆ, ಎರಡನೆಯ ಸೂರ್ಯ, ಚಂದ್ರ, ಪೃಥಿವೀ ಮತ್ತು ನಕ್ಷತ್ರಗಳೇ ಮೊದಲಾದ ಲೋಕಗಳು ತಮ್ಮಷ್ಟಕ್ಕೆ ತಾವೇ ನಿರ್ಮಿತವಾಗಿ ಹೋಗುವುದಿಲ್ಲವೇಕೆ ? [1]

## (ಜೀವಗಳೇ ಇಲ್ಲದಿದ್ದರೆ, ಸುಖ-ದುಃಖಗಳನ್ನು ಭೋಗಿಸುವವರು ಯಾರು ?)

'**ಸ್ವರ್ಗ**', ಎಂಬುದು ಸುಖಭೋಗದ, ಮತ್ತು '**ನರಕ**', ಎಂಬುದು ದುಃಖಭೋಗದ ಹೆಸರು. ಜೀವಾತ್ಮನು ಇಲ್ಲದೇ ಇದ್ದಿದ್ದರೆ, ಸುಖ-ದುಃಖಗಳ ಭೋಕ್ತೃವು ಯಾವನು ಆಗಬಲ್ಲನು ? ಹೇಗೆ, ಈಗ ಸುಖ-ದುಃಖಗಳ ಭೋಕ್ತೃವು ಜೀವನಾಗಿದ್ದಾನೋ, ಹಾಗೆಯೇ ಪರಜನ್ಮದಲ್ಲಿಯೂ ಆಗುತ್ತಾನೆ !

ವರ್ಣಾಶ್ರಮಿಗಳ ಸತ್ಯಭಾಷಣ ಮತ್ತು ಪರೋಪಕಾರ ಮೊದಲಾದ ಕ್ರಿಯೆಗಳೂ ಕೂಡ ನಿಷ್ಫಲವಾಗುವುವೇನು ? ಎಂದಿಗೂ ಇಲ್ಲ ! [2]

---

*ಮಹೀಧರನು ತನ್ನ ಯಜುರ್ವೇದ ಭಾಷ್ಯದಲ್ಲಿ 'ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ', ಎಂಬ ಮಂತ್ರದ ಪ್ರಕರಣದಲ್ಲಿ ಈ ರೀತಿ, ಮತ್ತು ಇನ್ನಷ್ಟು ಅಶ್ಲೀಲವಾಗಿ ವ್ಯಾಖ್ಯೆ ಮಾಡಿದ್ದಾನೆ. ಅವನ ಈ ವ್ಯಾಖ್ಯೆಯನ್ನು ಮಹರ್ಷಿ ದಯಾನಂದರು ತಮ್ಮ 'ಋಗ್ವೇದಾದಿಭಾಷ್ಯಭೂಮಿಕಾ'ದ 'ಭಾಷ್ಯಕರಣಶಂಕಾಸಮಾಧಾನಾದಿವಿಷಯ'ದ ಅಧ್ಯಾಯದಲ್ಲಿ ಖಂಡಿಸಿ, ಮಂತ್ರಗಳ ಸತ್ಯಾರ್ಥವನ್ನು ಶತಪಥಬ್ರಾಹ್ಮಣಾನುಸಾರವಾಗಿ ರಾಜ-ಪ್ರಜಾಧರ್ಮಕ್ಕೆ ಸಂಬಂಧಿಸಿದಂತೆ ಬರೆದಿದ್ದಾರೆ.—ಸಂ.

**(ಮೃತಕ ಶ್ರಾದ್ಧದ ಮತ್ತು ಯಜ್ಞದಲ್ಲಿ ಪಶುಬಲಿಯ ಖಂಡನೆ ಸರಿಯಾದುದೇ !)**

ಪಶುವನ್ನು ವಧಿಸಿ, ಹೋಮಮಾಡಬೇಕೆಂದು, ವೇದಗಳೇ ಮೊದಲಾದ ಸತ್ಯಶಾಸ್ತ್ರಗಳಲ್ಲಿ ಎಲ್ಲಿಯೂ ಬರೆದಿಲ್ಲ !

ಮತ್ತು ಮೃತರಾದವರ ಶ್ರಾದ್ಧ-ತರ್ಪಣಗಳನ್ನು ಮಾಡಬೇಕೆನ್ನುವುದು ಕಪೋಲಕಲ್ಪಿತವಾಗಿದೆ ! ಏಕೆಂದರೆ, ಇದು ವೇದಗಳೇ ಮೊದಲಾದ ಸತ್ಯಶಾಸ್ತ್ರಗಳಿಗೆ ವಿರುದ್ಧವಾಗಿರುವುದರಿಂದ, ಭಾಗವತವೇ ಮೊದಲಾದ ಪುರಾಣಮತಗಳವರ ಅಭಿಪ್ರಾಯವಾಗಿದೆ. ಆದ ಕಾರಣ, ಈ ಮಾತಿನ ಖಂಡನವು ಅಖಂಡನೀಯವಾಗಿದೆ. [3,4,5]

**(ಜೀವ ನಿತ್ಯವಾಗಿದೆ. ಅದು ಶರೀರದೊಡನೆ ನಾಶವಾಗುವುದಿಲ್ಲ)**

ಯಾವ ವಸ್ತುವಿದೆಯೋ, ಅದರ ಅಭಾವವೆಂದಿಗೂ ಆಗುವುದಿಲ್ಲ. ಅಸ್ತಿತ್ವಯುಕ್ತವಾದ ಜೀವನ ಅಭಾವ ಆಗಲಾರದು. ದೇಹವು ಭಸ್ಮವಾಗಿ ಹೋಗುತ್ತದೆ; ಜೀವನಲ್ಲ ! ಜೀವನಂತೂ, ಬೇರೆಯ ಶರೀರದಲ್ಲಿ ಪ್ರವೇಶಿಸುತ್ತಾನೆ!

ಆದುದರಿಂದ, **ಯಾರೇ ಆಗಿರಲೊಲ್ಲರೇಕೆ ? ಸಾಲ ಮೊದಲಾದ [ರೂಪ]ಗಳಲ್ಲಿ ಅನ್ಯರ ಪದಾರ್ಥಗಳನ್ನು ತೆಗೆದುಕೊಂಡು, ಈ ಲೋಕದಲ್ಲಿ ಅನುಭವಿಸಿ, ಹಿಂದಿರುಗಿಸುವುದಿಲ್ಲವೋ, ಅವರು ನಿಶ್ಚಯವಾಗಿ ಪಾಪಿಗಳಾಗಿ, ಮುಂದಿನ ಜನ್ಮದಲ್ಲಿ ದುಃಖವೆಂಬ ನರಕವನ್ನು ಅನುಭವಿಸುತ್ತಾರೆ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ!** [6]

**(ದೇಹದಿಂದ ಹೊರಟ ಜೀವನು ದೇಹಾಂತರವನ್ನು ಹೊಂದುತ್ತಾನೆ)**

**ಜೀವನು ದೇಹದಿಂದ ಹೊರಟು, ಬೇರೆಯ ಸ್ಥಾನಕ್ಕೆ, ಮತ್ತು ಬೇರೆಯ ಶರೀರಕ್ಕೆ ಪ್ರವೇಶಿಸುತ್ತಾನೆ. ಮತ್ತು ಅವನಿಗೆ ಪೂರ್ವಜನ್ಮದ ಮತ್ತು ಕುಟುಂಬ ಮೊದಲಾದುದರ ಜ್ಞಾನವು ಸ್ವಲ್ಪವೂ ಇರುವುದಿಲ್ಲ ! ಆದುದರಿಂದ, ಪುನಃ ಕುಟುಂಬಕ್ಕೆ ಬಂದು ಸಿಕ್ಕಿಕೊಳ್ಳುವುದಿಲ್ಲ !** [7]

ಅಹುದು ! ಬ್ರಾಹ್ಮಣರು ಪ್ರೇತಕರ್ಮವನ್ನು ತಮ್ಮ ಜೀವನ ನಿರ್ವಾಹಕ್ಕಾಗಿ ಮಾಡಿಕೊಂಡಿದ್ದಾರೆ ! ಆದರೆ, ವೇದೋಕ್ತವಲ್ಲದ ಕಾರಣ, [ಅದು] ಖಂಡನೀಯವಾಗಿದೆ. [8]

### (ವೇದಾದಿ ಸತ್ಯಶಾಸ್ತ್ರಗಳ ನಿಂದೆ ಸರಿಯಲ್ಲ)

ಈಗ ಹೇಳಿರಿ! ಚಾರವಾಕ ಮೊದಲಾದವರು ವೇದಗಳೇ ಮೊದಲಾದ ಸತ್ಯಶಾಸ್ತ್ರಗಳನ್ನು ನೋಡಿದ್ದರೆ, ಕೇಳಿದ್ದರೆ, ಅಥವಾ ಓದಿದ್ದರೆ, ವೇದಗಳ ನಿಂದೆಯನ್ನು ಎಂದಿಗೂ ಮಾಡುತ್ತಿರಲಿಲ್ಲ! [ಎಂದರೆ]. 'ವೇದಗಳನ್ನು ಭಂಡರು, ಧೂರ್ತರು, ಹಾಗೂ ನಿಶಾಚರರಂತಹ ಜನರು ಬರೆದಿದ್ದಾರೆ', ಎಂಬ ವಚನವನ್ನು ಎಂದಿಗೂ ಉಚ್ಚರಿಸುತ್ತಿರಲಿಲ್ಲ. ಹೌದು ! **ಭಂಡರು, ಧೂರ್ತರು, ನಿಶಾಚರರುಗಳಂತೆ ಮಹೀಧರನೇ ಮೊದಲಾದ ಟೀಕಾಕಾರರು ಆಗಿದ್ದಾರೆ! ಧೂರ್ತತನ ಅವರದು ; ವೇದಗಳದಲ್ಲ!**

### (ಚಾರವಾಕ, ಬೌದ್ಧ ಮತ್ತು ಜೈನರು ವೇದಗಳನ್ನು ಓದಲೂ ಇಲ್ಲ ; ಕೇಳಲೂ ಇಲ್ಲ)

ಆದರೆ, **ಚಾರವಾಕರು, ಆಭಾಣಕರು,** ಬೌದ್ಧರು ಮತ್ತು ಜೈನರುಗಳ ಮೇಲೆ---ಇವರು ನಾಲ್ಕು ಮೂಲ ವೇದ ಸಂಹಿತೆಗಳನ್ನೂ ಕೂಡ ಆಲಿಸಲಿಲ್ಲ ; ನೋಡಲೂ ಇಲ್ಲ; ಮತ್ತು ಯಾವನಾದರೂ ವಿದ್ವಾಂಸನ ಬಳಿ ಕಲಿಯಲೂ ಇಲ್ಲವಲ್ಲ, ಎಂದು ಮರುಕವುಂಟಾಗುತ್ತದೆ ! ಇದೇ ಕಾರಣದಿಂದ, ನಷ್ಟ-ಭ್ರಷ್ಟ-ಬುದ್ಧಿಯುಕ್ತರಾಗಿ, ಯದ್ವಾ ತದ್ವಾ ವೇದಗಳ ನಿಂದೆ ಮಾಡಲಾರಂಭಿಸಿಬಿಟ್ಟರು !

**ದುಷ್ಟ ವಾಮಮಾರ್ಗಿಗಳ ಪ್ರಮಾಣಶೂನ್ಯವೂ, ಕಪೋಲಕಲ್ಪಿತವೂ ಆದ ಭ್ರಷ್ಟ ಟೀಕೆಗಳನ್ನು ನೋಡಿ, ವೇದಗಳಿಗೆ ವಿರೋಧಿಗಳಾಗಿ, ಅವಿದ್ಯೆಯೆಂಬ ಅಗಾಧ ಸಮುದ್ರದಲ್ಲಿ ಹೋಗಿ ಬಿದ್ದರು !** [9]

ಅಲ್ಲಾ! ಆಲೋಚಿಸಬೇಕೇನೆಂದರೆ—

ಸ್ತ್ರೀಯಿಂದ ಕುದುರೆಯ ಜನನೇಂದ್ರಿಯವನ್ನು ಹಿಡಿಯಿಸಿ, ಅದರೊಂದಿಗೆ ಸಮಾಗಮ ಮಾಡಿಸುವುದು, ಮತ್ತು ಯಜಮಾನನ ಕನ್ಯೆಯೊಂದಿಗೆ ಅಶ್ಲೀಲವಾದ ಹಾಸ್ಯ ಮೊದಲಾದುವನ್ನು ಮಾಡುವುದು ವಾಮಮಾರ್ಗೀ ಜನರ ಹೊರತು, ಬೇರೆ ಮಾನವರ ಕಾರ್ಯವಲ್ಲ ! **ಈ ಮಹಾಪಾಪಿಗಳಾದ ವಾಮಮಾರ್ಗಿಗಳ ಹೊರತು, ಭ್ರಷ್ಟವೂ, ವೇದಾರ್ಥಕ್ಕೆ ವಿರುದ್ಧವೂ ಆದ ಅಶುದ್ಧ ವ್ಯಾಖ್ಯಾನವನ್ನು ಮತ್ತಾವನು ಮಾಡುತ್ತಿದ್ದನು ?***

---

*ಮಹೀಧರನು ತನ್ನ ಯಜುರ್ವೇದ ಭಾಷ್ಯದಲ್ಲಿ 'ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ' ಮೊದಲಾದ ಮಂತ್ರಗಳಿಗೆ ಹೀಗೆಯೇ ವ್ಯಾಖ್ಯೆ ಬರೆದಿದ್ದಾನೆ.—ಸಂ.

ಯಾರು ಆಲೋಚನೆ ಮಾಡದೇ, ವೇದಗಳ ನಿಂದೆಯನ್ನು ಮಾಡುವುದರಲ್ಲಿ ತತ್ಪರರಾದರೋ, ಅಂತಹ ಚಾರವಾಕ ಮೊದಲಾದವರ ಮೇಲೆಯೇ ಅತ್ಯಂತ ಪರಿತಾಪ ವುಂಟಾಗುವುದು ! ಸ್ವಲ್ಪವಾದರೂ ತಮ್ಮ ಬುದ್ಧಿಯನ್ನು ಉಪಯೋಗಿಸಬಹು ದಾಗಿತ್ತು ! ಏನು ತಾನೇ ಮಾಡಿಯಾರು ಈ ಬಡಾಪಾಯಿಗಳು ? ಸತ್ಯಾಸತ್ಯ ವಿಚಾರಮಾಡಿ, ಸತ್ಯದ ಮಂಡನವನ್ನೂ, ಮತ್ತು ಅಸತ್ಯದ ಖಂಡನವನ್ನೂ ಮಾಡುವುದಕ್ಕೆ ಅವರಲ್ಲಿ ಇಷ್ಟು ವಿದ್ಯೆಯೇ ಇರಲಿಲ್ಲ! [10]

### (ವಾಮಮಾರ್ಗೀ ಟೀಕಾಕಾರರಿಂದ ವೇದಗಳಲ್ಲಿ ಮಾಂಸ ಮೊದಲಾದುವುಗಳ ವಿಧಾನ)

ಮತ್ತು ಮಾಂಸಭಕ್ಷಣದ ವಿಷಯವೂ ಕೂಡ, ಅದೇ ವಾಮಮಾರ್ಗೀ ಟೀಕಾಕಾರರ ಲೀಲೆಯಾಗಿದೆ. ಆದುದರಿಂದ, ಅವರನ್ನು **'ರಾಕ್ಷಸ'**ರೆನ್ನುವುದು ಉಚಿತವಾಗಿದೆ !

ಆದರೆ, **ವೇದಗಳಲ್ಲಿ ಎಲ್ಲಿಯೂ ಮಾಂಸಭಕ್ಷಣದ ವಿಧಾನವನ್ನು ಬರೆದಿಲ್ಲ!** ಆದುದರಿಂದ, ಈ ಮೊದಲಾದ ಸುಳ್ಳು ಮಾತುಗಳ ಪಾಪವು ಆ ಟೀಕಾಕಾರರಿಗೂ ಮತ್ತು ಯಾರು ವೇದಗಳನ್ನು ಓದದೇ-ಕೇಳದೇ, ಮನ ಬಂದಂತೆ ನಿಂದಿಸಿದ್ದಾರೋ, ಅವರಿಗೂ ನಿಃಸಂದೇಹವಾಗಿ ತಟ್ಟುವುದು !

**ಯಾರು ವೇದಗಳನ್ನು ವಿರೋಧಿಸಿದರೋ, ವಿರೋಧಿಸುತ್ತಾರೋ, ಮತ್ತು ವಿರೋಧಿಸುವರೋ, ಅವರು ಅವಶ್ಯವಾಗಿ ಅವಿದ್ಯೆಯೆಂಬ ಅಂಧಕಾರದಲ್ಲಿ ಬಿದ್ದು, ಸುಖಕ್ಕೆ ಬದಲು ಎಷ್ಟು ದಾರುಣವಾದ ದುಃಖವನ್ನು ಹೊಂದಿದರೂ, ಅಷ್ಟೇ ಕಡಿಮೆ, ಎನ್ನುವುದೇ ಸತ್ಯವಾಗಿದೆ! ಆದುದರಿಂದ, ಮಾನವಮಾತ್ರರು ವೇದಾನು ಕೂಲವಾಗಿ ನಡೆದುಕೊಳ್ಳುವುದು ಸಮುಚಿತವಾಗಿದೆ!*** [11]

### (ಚಾರವಾಕ, ಬೌದ್ಧ, ಜೈನ ಮೊದಲಾದವರಿಂದ ವಿಚಾರ ಮಾಡದೆಯೇ ವೇದನಿಂದೆ)

ವಾಮಮಾರ್ಗಿಗಳು ಮಿಥ್ಯಾ ಕಪೋಲಕಲ್ಪನೆಯನ್ನು ಮಾಡಿಕೊಂಡು, ವೇದ ಗಳ ಹೆಸರಿನಲ್ಲಿ ತಮ್ಮ ಸ್ವಾರ್ಥವನ್ನು ಸಾಧಿಸುವುದಕ್ಕಾಗಿ, ಎಂದರೆ ಯಥೇಷ್ಟವಾಗಿ ಮದ್ಯಪಾನ, ಮಾಂಸಭಕ್ಷಣ, ಹಾಗೂ ಪರಸ್ತ್ರೀಗಮನ ಮೊದಲಾದ ದುಷ್ಕರ್ಮಗಳ

---

*ವೇದಗಳ ಹೆಸರನ್ನು ಹೇಳುತ್ತಾ, ಅವುಗಳ ಬಗೆಗೆ ಬಾಯಿಯಲ್ಲಿ ಶ್ರದ್ಧೆ ತೋರಿಸುತ್ತಾ, ವೇದವಿರುದ್ಧವಾದ ಪೌರಾಣಿಕ ಮಾನ್ಯತೆಗಳನ್ನು ಅಂಗೀಕರಿಸಿಕೊಂಡು, ಅವುಗಳಿಗನುಸಾರವಾಗಿ ತಮ್ಮ ಜೀವನ ವ್ಯವಹಾರಗಳನ್ನು ನಡೆಸಿಕೊಂಡು, ಬರುತ್ತಿರುವವರಿಗೆ ಮಹರ್ಷಿ ದಯಾ ನಂದರ ಈ ಬುದ್ಧಿವಾದ ಸಾಲದೇ ! ಕ್ರೈಸ್ತ-ಮುಸಲ್ಮಾನರಾದ ಮೇಲೆಯೇ, ಪೌರಾಣಿಕ ಸಿದ್ಧಾಂತ-ವ್ಯವಹಾರಗಳನ್ನು ಬಿಡಬೇಕೇನು ?—ಸಂ.

ಪ್ರವೃತ್ತಿಯನ್ನುಂಟುಮಾಡುವ ಉದ್ದೇಶ್ಯದಿಂದ, ವೇದಗಳಿಗೆ ಕಳಂಕವನ್ನುಂಟು ಮಾಡಿದರು. ಈ ಮಾತುಗಳನ್ನೇ ನೋಡಿ, ಚಾರವಾಕರು, ಬೌದ್ಧರು, ಮತ್ತು ಜೈನರು ವೇದಗಳ ನಿಂದೆಯನ್ನು ಮಾಡತೊಡಗಿದರು. ಮತ್ತು ಬೇರೆಯಾಗಿ ಒಂದು ವೇದವಿರುದ್ಧವೂ, ಅನೀಶ್ವರವಾದಿಯೂ, ನಾಸ್ತಿಕವೂ ಆದ ಮತವನ್ನು ಪ್ರಚಲಿತ ವಾಗಿ ಮಾಡಿಕೊಂಡರು !

ಚಾರವಾಕರೇ ಮೊದಲಾದವರು ವೇದಗಳ ಮೂಲಾರ್ಥವನ್ನು ಆಲೋಚಿಸಿ ನೋಡಿದ್ದರೆ, ಮಿಥ್ಯಾ ಟೀಕೆಗಳನ್ನು ನೋಡಿ, ಸತ್ಯವಾದ ವೇದೋಕ್ತಮತವನ್ನು ಕೈಯಿಂದ ನುಸುಳಿ ಹೋಗಲು ಬಿಡುತ್ತಿದ್ದರಾದರೂ ಏಕೆ? ಮಾಡುವುದಾದರೂ ಏನು ಒಡಪಾಯಿಗಳು ?

**"ವಿನಾಶಕಾಲೇ ವಿಪರೀತಬುದ್ಧಿಃ".**

ಯಾವಾಗ ನಷ್ಟಭ್ರಷ್ಟನಾಗುವ ಕಾಲ ಬರುತ್ತದೋ, ಆಗ ಮಾನವನ ಬುದ್ಧಿ ತಲೆಕೆಳಗಾಗಿ ಹೋಗುತ್ತದೆ !

## (ಬೌದ್ಧ ಮತ್ತು ಜೈನರೊಂದಿಗೆ ಚಾರವಾಕನ ಮತಭೇದ)

ಈಗ, **ಚಾರವಾಕ ಮೊದಲಾದವರಲ್ಲಿ ಭೇದವೇನಿದೆಯೋ,** ಅದನ್ನು ಬರೆಯುತ್ತೇವೆ.

ಈ ಚಾರವಾಕರೇ ಮೊದಲಾದವರು ಬಹಳ ವಿಷಯಗಳಲ್ಲಿ ಒಂದೇ ಆಗಿದ್ದಾರೆ! ಆದರೆ, **ಚಾರವಾಕನು—**

**ದೇಹದ ಉತ್ಪತ್ತಿಯೊಂದಿಗೆಯೇ ಜೀವೋತ್ಪತ್ತಿಯನ್ನೂ, ಮತ್ತು ಅದರ ನಾಶದೊಂದಿಗೆಯೇ ಜೀವನ ನಾಶವನ್ನೂ ಕೂಡ, ಅಂಗೀಕರಿಸುತ್ತಾನೆ. ಪುನರ್ಜನ್ಮ ಮತ್ತು ಪರಲೋಕವನ್ನು ಒಪ್ಪುವುದಿಲ್ಲ !**

**ಒಂದು ಪ್ರತ್ಯಕ್ಷಪ್ರಮಾಣವನ್ನು ಬಿಟ್ಟು, ಅನುಮಾನವೇ ಮೊದಲಾದ ಪ್ರಮಾಣಗಳನ್ನೂ ಕೂಡ, ಅಂಗೀಕರಿಸುವುದಿಲ್ಲ !**

**'ಚಾರವಾಕ', ಎಂಬ ಶಬ್ದಕ್ಕೆ 'ಪ್ರಗಲ್ಭನಾದ ವಾಗ್ಮಿಯೆಂದೂ, ಮತ್ತು ವಿಶೇಷಾರ್ಥದಲ್ಲಿ 'ವೈತಂಡಿಕ'ನೆಂದೂ ಅರ್ಥವಿದೆ !**

**ಮತ್ತು ಬೌದ್ಧರೂ, ಜೈನರೂ—**

**ಪ್ರತ್ಯಕ್ಷ ಮೊದಲಾದ ನಾಲ್ಕು ಪ್ರಮಾಣಗಳನ್ನೂ, ಅನಾದಿ ಜೀವನನ್ನೂ, ಪುನರ್ಜನ್ಮವನ್ನೂ, ಮತ್ತು ಮುಕ್ತಿಯನ್ನೂ ಕೂಡ, ಒಪ್ಪಿಕೊಳ್ಳುತ್ತಾರೆ !**

ಚಾರವಾಕ ಮತ್ತು ಬೌದ್ಧರ–ಜೈನರ ಮಧ್ಯೆ ಇರುವ ಭೇದವು ಇಷ್ಟೇ ಆಗಿದೆ !

ಆದರೆ, ನಾಸ್ತಿಕತ್ವ, ವೇದ–ಈಶ್ವರನಿಂದೆ, ಪರಮತದ್ವೇಷ, ಆರು ಕರ್ಮಗಳು, ಹಾಗೂ—'ಜಗತ್ಕರ್ತೃ ಯಾವನೂ ಇಲ್ಲ', ಈ ಮೊದಲಾದ ವಿಷಯಗಳಲ್ಲಿ ಎಲ್ಲರೂ ಏಕಮತರೇ ಆಗಿದ್ದಾರೆ!

ಹೀಗೆ, ಸಂಕ್ಷೇಪವಾಗಿ '**ಚಾರವಾಕ**'ಮತವನ್ನು ತೋರಿಸಿದ್ದೇವೆ.

## (ಬೌದ್ಧಮತದ ಆಲೋಚನೆ)

[ಈಗ], '**ಬೌದ್ಧಮತ**'ದ ವಿಷಯದಲ್ಲಿ ಸಂಕ್ಷೇಪವಾಗಿ ಬರೆಯುತ್ತೇವೆ—

**ಕಾರ್ಯಕಾರಣಭಾವಾದ್ವಾ ಸ್ವಭಾವಾದ್ವಾ ನಿಯಾಮಕಾತ್ ।**
**ಅವಿನಾಭಾವನಿಯಮೋ ದರ್ಶನಾಂತರದರ್ಶನಾತ್ ॥***

**ಕಾರ್ಯಕಾರಣಭಾವದಿಂದ**, ಎಂದರೆ ಕಾರ್ಯದ ದರ್ಶನದಿಂದ ಕಾರಣದ, ಮತ್ತು ಕಾರಣದ ದರ್ಶನದಿಂದ ಕಾರ್ಯ ಮೊದಲಾದುದರ, ಸಾಕ್ಷಾತ್ಕಾರವು ಪ್ರತ್ಯಕ್ಷದಿಂದ [ಆಗುತ್ತದೆ]. ಉಳಿದುದರ ಬಗೆಗೆ ಅನುಮಾನ ಮಾಡಲ್ಪಡುತ್ತದೆ. ಇದು ಇಲ್ಲದೇ ಹೋದರೆ, ಪ್ರಾಣಧಾರಿಗಳ ಸಂಪೂರ್ಣ ವ್ಯವಹಾರಗಳು ಪೂರ್ಣವಾಗಲಾರವು. ಈ ಮೊದಲಾದ ಲಕ್ಷಣಗಳಿಂದ, **ಅನುಮಾನವನ್ನು ಅಧಿಕವಾಗಿ ಅಂಗೀಕರಿಸಿ**, ಚಾರವಾಕರಿಂದ ಬೌದ್ಧರ ಬೇರೆ ಶಾಖೆ ಹೊರಟಿದೆ.

### (ಬೌದ್ಧರ ನಾಲ್ಕು ಭೇದಗಳು ಮತ್ತು ಅವರ ಸಿದ್ಧಾಂತಗಳು)

**ನಾಲ್ಕು ವಿಧದ ಬೌದ್ಧರಿದ್ದಾರೆ—**

ಮೊದಲನೆಯದು—'**ಮಾಧ್ಯಮಿಕ**';

ಎರಡನೆಯದು—'**ಯೋಗಾಚಾರ**';

ಮೂರನೆಯದು—'**ಸೌತ್ರಾಂತಿಕ**'; ಮತ್ತು

ನಾಲ್ಕನೆಯದು—'**ವೈಭಾಷಿಕ**'.

"ಬುದ್ಧ್ಯಾ ನಿರ್ವರ್ತತೇ ಸ ಬೌದ್ಧಃ".

---

*ಇದೇ, ಮತ್ತು ಮುಂದಿನ ಬೌದ್ಧ ಸಿದ್ಧಾಂತಗಳನ್ನು ಸಾಯಣಾಚಾರ್ಯರ 'ಸರ್ವದರ್ಶನಸಂಗ್ರಹ'ದ ಆಧಾರದ ಮೇಲೆ ಬರೆಯಲಾಗಿದೆ.—ಯು.ಮೀ.

ಯಾವುದು ಬುದ್ಧಿಯಿಂದ ಸಿದ್ಧವಾಗುತ್ತದೋ, ಎಂದರೆ ಯಾವ ಯಾವ ಮಾತು ತನ್ನ ಬುದ್ಧಿಗೆ ಅಂದುವುದೋ, ಆಯಾ ಮಾತನ್ನು ಒಪ್ಪಿಕೊಳ್ಳಬೇಕು.

ಮತ್ತು ಯಾವ ಯಾವುದು [ತನ್ನ] ಬುದ್ಧಿಗೆ ಅಂದುವುದಿಲ್ಲವೋ, ಆಯಾ ಮಾತನ್ನು ಒಪ್ಪಿಕೊಳ್ಳಬಾರದು.*

ಇವರಲ್ಲಿ, **ಮೊದಲನೆಯವನಾದ 'ಮಾಧ್ಯಮಿಕ'ನು—'ಸರ್ವಶೂನ್ಯ'ವನ್ನು** ಒಪ್ಪುತ್ತಾನೆ. ಎಂದರೆ, ಎಷ್ಟು ಪದಾರ್ಥಗಳಿವೆಯೋ, ಅವೆಲ್ಲವೂ **'ಶೂನ್ಯ'**, ಎಂದರೆ ಆದಿಯಲ್ಲಿ ಇರುವುದಿಲ್ಲ; ಅಂತದಲ್ಲಿಯೂ ಇರುವುದಿಲ್ಲ! ಮಧ್ಯದಲ್ಲಿ ಯಾವುದು ಪ್ರತೀತವಾಗುತ್ತದೋ, ಅದೂ ಕೂಡ, ಪ್ರತೀತವಾಗುವ ಸಮಯದಲ್ಲಿರುತ್ತದೆ! ಆನಂತರ, ಶೂನ್ಯದಲ್ಲಿ ಲೀನವಾಗುತ್ತದೆ.

ಹೇಗೆ ಗಡಿಗೆಯು ಉತ್ಪತ್ತಿಗಿಂತ ಮುನ್ನ ಇರುವುದಿಲ್ಲವೋ, ಪ್ರಧ್ವಂಸವಾದ ಮೇಲೆಯೂ ಇರುವುದಿಲ್ಲವೋ, ಮತ್ತು ಗಡಿಗೆಯ ಅರಿವಿನ ಸಮಯದಲ್ಲಿ ತೋರುತ್ತದೋ, ಮತ್ತು ಬೇರೆ ಒಂದು ಪದಾರ್ಥಕ್ಕೆ ಅರಿವು ಹೊರಳುವುದರಿಂದ, ಗಡಿಗೆಯ ಅರಿವು ಇರುವುದಿಲ್ಲವೋ, [ಹಾಗೆಯೇ ಎಲ್ಲವೂ]! ಆದುದರಿಂದ, **ಶೂನ್ಯವೇ ಏಕಮಾತ್ರ ತತ್ತ್ವವಾಗಿದೆ.**

**ಎರಡನೆಯ ವಿಧದವನು, 'ಯೋಗಾಚಾರ'**—ಇವನು **'ಬಾಹ್ಯಶೂನ್ಯ'ವನ್ನು** ಅಂಗೀಕರಿಸುತ್ತಾನೆ. ಎಂದರೆ, ಪದಾರ್ಥಗಳು ಒಳಗೆ ಜ್ಞಾನದಲ್ಲಿ ಭಾಸವಾಗುತ್ತವೆ; ಹೊರಗೆ ಅಲ್ಲ! ಉದಾಹರಣೆಗೆ—ಗಡಿಗೆಯ ಜ್ಞಾನ ಆತ್ಮನಲ್ಲಿದೆ. ಆಗಲೇ ಮಾನವನು—"ಇದು ಗಡಿಗೆ", ಎನ್ನುತ್ತಾನೆ. ಒಳಗೆ ಜ್ಞಾನದಲ್ಲಿಲ್ಲದಿದ್ದರೆ, ಹೇಳಲಾರನು, ಎಂದು ಒಪ್ಪುತ್ತಾನೆ.

**ಮೂರನೆಯ ವಿಧದವನು, 'ಸೌತ್ರಾಂತಿಕ'**—ಇವನು **'ಹೊರಗೆ ಪದಾರ್ಥದ ಅನುಮಾನವನ್ನು'** ಸ್ವೀಕರಿಸುತ್ತಾನೆ. ಏಕೆಂದರೆ, ಹೊರಗೆ ಯಾವ ಪದಾರ್ಥವೂ ಸಾಂಗೋಪಾಂಗವಾಗಿ ಪ್ರತ್ಯಕ್ಷವಾಗುವುದಿಲ್ಲ. ಆದರೆ, ಒಂದು ಭಾಗ ಪ್ರತ್ಯಕ್ಷವಾಗುವುದರಿಂದ, ಉಳಿದುದರ ಅನುಮಾನ ಮಾಡಿಕೊಳ್ಳಲ್ಪಡುತ್ತದೆ, ಎಂಬುದು ಇವನ ಮತವಾಗಿದೆ.

**ನಾಲ್ಕನೆಯ ವಿಧದವನು, 'ವೈಭಾಷಿಕ'—ಹೊರಗೆ ಪದಾರ್ಥ ಪ್ರತ್ಯಕ್ಷವಾಗುತ್ತದೆ; ಒಳಗೆ ಅಲ್ಲ,** ಎನ್ನುವುದು ಅವನ ಮತವಾಗಿದೆ. ಉದಾಹರಣೆಗೆ—

---

*ಬುದ್ಧಿಪೂರ್ವಕವಾಗಿ ಸಿದ್ಧವಾದುದನ್ನೊಪ್ಪುವವನೇ **ಬೌದ್ಧನು.—ಅನು.**

**"ಅಯಂ ನೀಲೋ ಘಟಃ".**

ಈ ಪ್ರತೀತಿಯಲ್ಲಿ, ನೀಲಿಯ ಬಣ್ಣದ ಗಡಿಗೆಯ ಆಕೃತಿ ಹೊರಗೆ ಕಂಡು ಬರುತ್ತವೆ. ಇವನು ಹೀಗೆ ಅಂಗೀಕರಿಸುತ್ತಾನೆ.

**(ಶಿಷ್ಯರ ಬುದ್ಧಿಭೇದದಿಂದ ನಾಲ್ಕು ಶಾಖೆಗಳು)**

**ಇವರ ಆಚಾರ್ಯನಾದ ಬುದ್ಧನು ಒಬ್ಬನೇ ಆದರೂ ಕೂಡ, ಶಿಷ್ಯರಲ್ಲಿ ಬುದ್ಧಿಭೇದದಿಂದ ನಾಲ್ಕು ಬಗೆಯ ಶಾಖೆಗಳಾಗಿಬಿಟ್ಟವೆ!**

'ಸೂರ್ಯಾಸ್ತವಾದಾಗ, ಜಾರಪುರುಷನು ಪರನಾರೀಗಮನವನ್ನೂ, ಮತ್ತು ವಿದ್ವಾಂಸನು ಸತ್ಯಭಾಷಣ ಮೊದಲಾದ ಶ್ರೇಷ್ಠಕರ್ಮಗಳನ್ನೂ ಮಾಡುತ್ತಾರೆ. ಸಮಯವೇನೋ ಒಂದೇ! ಆದರೆ, ತಮ್ಮ ತಮ್ಮ ಬುದ್ಧಿಗನುಸಾರವಾಗಿ, ಬೇರೆ ಬೇರೆ ಚಟುವಟಿಕೆಗಳನ್ನು ನಡೆಯಿಸುತ್ತಾರೆ.'*

ಈಗ, ಈ ಮೇಲೆ ಹೇಳಿದ ನಾಲ್ವರಲ್ಲಿ [ಮೊದಲನೆಯ] **'ಮಾಧ್ಯಮಿಕನು'—**

'ಎಲ್ಲವನ್ನೂ ಕ್ಷಣಿಕ', ಎಂದು ಒಪ್ಪುತ್ತಾನೆ. ಎಂದರೆ, 'ಕ್ಷಣಕ್ಷಣಕ್ಕೂ ಬುದ್ಧಿಯ ಪರಿಣಾಮಗಳಾಗುತ್ತಿರುವುದರಿಂದ, ಪೂರ್ವಕ್ಷಣದಲ್ಲಿ ತಿಳಿಯಲ್ಪಟ್ಟ ಯಾವ ವಸ್ತುವಿದ್ದಿತೋ, ಅದು ಹಾಗೆಯೇ ಎರಡನೆಯ ಕ್ಷಣದಲ್ಲಿರುವುದಿಲ್ಲ; ಆದುದರಿಂದ, ಎಲ್ಲವನ್ನೂ ಕ್ಷಣಿಕ, ಎಂದು ಒಪ್ಪಬೇಕು', ಎಂದು ಅಂಗೀಕರಿಸುತ್ತಾನೆ.

ಎರಡನೆಯ **"ಯೋಗಾಚಾರ"—**

'ಏನೇನು ಪ್ರವೃತ್ತಿಯಿದೆಯೋ, ಅದೆಲ್ಲವೂ ದುಃಖರೂಪವೇ ಆಗಿದೆ. ಏಕೆಂದರೆ, ಪ್ರಾಪ್ತಿಯಿಂದ ಸಂತುಷ್ಟನಾಗುವವನು ಯಾವನೂ ಇಲ್ಲ. ಒಂದರ ಪ್ರಾಪ್ತಿಯಾಗುವುದರಲ್ಲಿ, ಇನ್ನೊಂದರ ಇಚ್ಛೆ ಇದ್ದೇ ಇರುತ್ತದೆ', ಎಂದು ಅಂಗೀಕರಿಸುತ್ತಾನೆ.

ಮೂರನೆಯ **"ಸೌತ್ರಾಂತಿಕ"—**

'ಸಮಸ್ತ ಪದಾರ್ಥಗಳೂ ತಮ್ಮ ತಮ್ಮ ಲಕ್ಷಣಗಳಿಂದ ಗುರುತಿಸಲ್ಪಡುತ್ತವೆ. ಹೇಗೆ ಪಸುವಿನ ಚಿಹ್ನೆಗಳಿಂದ ಪಸುವೂ, ಮತ್ತು ಕುದುರೆಯ ಚಿಹ್ನೆಗಳಿಂದ ಕುದುರೆಯೂ ತಿಳಿದುಬರುತ್ತವೋ, ಹಾಗೆ ಲಕ್ಷಣಗಳು ಲಕ್ಷ್ಯದಲ್ಲಿ† ಸದಾ ಇರುತ್ತವೆ', ಎಂದು ಹೇಳುತ್ತಾನೆ.

---

*ಬೌದ್ಧದರ್ಶನ, ಪುಟ 19ರಲ್ಲಿ ಈ ಉಪಮೆ ಕೊಡಲಾಗಿದೆ. —ಯು.ಮೀ.

†ಎಂದರೆ, ಲಕ್ಷಣಗಳಿಂದ ತಿಳಿಯಲ್ಪಡುವ ವಸ್ತುವಿನಲ್ಲಿ. —ಅನು.

ನಾಲ್ಕನೆಯವನಾದ "**ವೈಭಾಷಿಕನು**"—

'ಶೂನ್ಯವನ್ನೇ ಏಕಮಾತ್ರ ಪದಾರ್ಥ,' ಎಂದು ಅಂಗೀಕರಿಸುತ್ತಾನೆ.

ಮೊದಲನೆಯವನಾದ **ಮಾಧ್ಯಮಿಕನು** 'ಎಲ್ಲವನ್ನೂ ಶೂನ್ಯ' ಎಂದು ಅಂಗೀಕರಿಸುತ್ತಿದ್ದನು. ಅವನ ಪಕ್ಷವೇ **ವೈಭಾಷಿಕನದೂ** ಆಗಿದೆ.

ಈ ಮೊದಲಾದ ಬಹಳ ವಿವಾದಗಳೂ, ಪಕ್ಷಗಳೂ ಬೌದ್ಧರಲ್ಲಿವೆ. ಈ ರೀತಿ, **ನಾಲ್ಕು ಬಗೆಯ ಭಾವನೆಗಳನ್ನು** ಅಂಗೀಕರಿಸುತ್ತಾರೆ.

## (ನಾಲ್ಕೂ ಬೌದ್ಧಶಾಖೆಗಳ ಸಿದ್ಧಾಂತಗಳ ಖಂಡನೆ)

**ಉತ್ತರ:**—ಎಲ್ಲವೂ ಶೂನ್ಯವಾಗಿದ್ದರೆ, ಶೂನ್ಯವನ್ನು **ತಿಳಿಯುವವನು ಶೂನ್ಯನಾಗಿರಲಾರನು.** ಮತ್ತು ಸರ್ವವೂ ಶೂನ್ಯವೇ ಆಗಿರುವುದಾದರೆ, ಶೂನ್ಯವು ಶೂನ್ಯವನ್ನು ತಿಳಿಯಲಾರದು. ಆದುದರಿಂದ, ಶೂನ್ಯವನ್ನು ತಿಳಿಯುವವನು, ಮತ್ತು ತಿಳಿಯಲ್ಪಡುವ ವಸ್ತು—ಈ ಎರಡು ಪದಾರ್ಥಗಳು ಸಿದ್ಧವಾಗುತ್ತವೆ !

ಮತ್ತು '**ಯೋಗಾಚಾರ**' [ಸಂಪ್ರದಾಯಸ್ಥ]ನು ಬಾಹ್ಯಶೂನ್ಯತ್ವವನ್ನು ಒಪ್ಪಿಕೊಳ್ಳುತ್ತಾನೆಯಾದರೆ, ಪರ್ವತ ಅವನೊಳಗೆ ಇರಬೇಕು ! 'ಪರ್ವತ ಒಳಗಿದೆ', ಎಂದು ಹೇಳುವನಾದರೆ, ಅವನ **ಹೃದಯದಲ್ಲಿ ಪರ್ವತಕ್ಕೆ ಸಮಾನವಾದ ಅವಕಾಶವೆಲ್ಲಿದೆ** ? ಆದುದರಿಂದ, ಪರ್ವತ ಹೊರಗಿದೆ; ಮತ್ತು ಪರ್ವತದ ಜ್ಞಾನ ಆತ್ಮನಲ್ಲಿರುತ್ತದೆ.

'**ಸೌತ್ರಾಂತಿಕ**' [ಸಂಪ್ರದಾಯಸ್ಥ]ನು ಯಾವ ಪದಾರ್ಥವನ್ನೂ ಪ್ರತ್ಯಕ್ಷವೆಂದು ಒಪ್ಪದಿರುವನಾದರೆ, ಸ್ವತಃ ಅವನೂ, ಮತ್ತು ಅವನ ವಚನವೂ ಕೂಡ, ಅನುಮೇಯ*ವಾಗಿರಬೇಕು; ಪ್ರತ್ಯಕ್ಷವಲ್ಲ ! **ಪ್ರತ್ಯಕ್ಷವಲ್ಲದಿರುವಾಗ**—

**"ಅಯಂ ಘಟಃ"**†

**ಎಂಬ ಪ್ರಯೋಗವೂ ಆಗಬಾರದು; ಆದರೆ**—

**"ಅಯಂ ಘಟೈಕ ದೇಶಃ"**—

"ಇದು ಗಡಿಗೆಯ ಒಂದು ಭಾಗ", [ಎಂಬ ಪ್ರಯೋಗವಾಗಬೇಕು.]

---

*ಎಂದರೆ, ಅನುಮಾನದಿಂದ ಗ್ರಾಹ್ಯವಾಗಿರಬೇಕು.—ಅನು.

†ಇದು ಗಡಿಗೆ.—ಅನು.

ಮತ್ತು ಒಂದು ಭಾಗದ ಹೆಸರು ಗಡಿಗೆಯಲ್ಲ! ಆದರೆ, ಸಮುದಾಯದ ಹೆಸರು ಗಡಿಗೆ, ಎಂದಾಗಿದೆ.

**"ಇದು ಗಡಿಗೆ"**, ಎನ್ನುವುದು ಪ್ರತ್ಯಕ್ಷ! ಅನುಮೇಯವಲ್ಲ. ಏಕೆಂದರೆ, ಸಮಸ್ತ ಅವಯವಗಳಲ್ಲಿರುವುದು ಒಂದು ಅವಯವೀ! ಅದರ ಪ್ರತ್ಯಕ್ಷವಾಗುವುದರಿಂದ, ಗಡಿಗೆಯ ಸಮಸ್ತ ಅವಯವಗಳೂ ಕೂಡ, ಪ್ರತ್ಯಕ್ಷವಾಗುತ್ತವೆ. ಎಂದರೆ, ಅವಯವಸಹಿತವಾದ [ಗಡಿಗೆ] ಪ್ರತ್ಯಕ್ಷವಾಗುತ್ತದೆ.

ನಾಲ್ಕನೆಯವನಾದ **'ವೈಭಾಷಿಕ'**ನು ಬಾಹ್ಯ ಪದಾರ್ಥಗಳನ್ನು ಪ್ರತ್ಯಕ್ಷವೆಂದು ಒಪ್ಪುತ್ತಾನೆ. ಅದೂ ಕೂಡ ಸರಿಯಲ್ಲ! ಏಕೆಂದರೆ, ಎಲ್ಲಿ ಜ್ಞಾತೃವೂ ಇರುತ್ತಾನೋ, ಮತ್ತು ಜ್ಞಾನವೂ ಇರುತ್ತದೋ, ಅಲ್ಲಿಯೇ ಪ್ರತ್ಯಕ್ಷವಾಗುತ್ತದೆ. **ಪ್ರತ್ಯಕ್ಷದ ವಿಷಯ ಹೊರಗೆ ಇರುತ್ತದೆ. [ಆದರೂ ಕೂಡ] ಅದರ ಆಕಾರದ ಜ್ಞಾನ ಆತ್ಮನಿಗಾಗುತ್ತದೆ.**

### (ಪೂರ್ವೋಕ್ತ ನಾಲ್ಕುವಿಧ ಭಾವನೆಗಳ ಸಮೀಕ್ಷೆ)

ಹಾಗೆಯೇ, ಪದಾರ್ಥ ಕ್ಷಣಿಕವಾಗಿದ್ದು, ಅದರ ಜ್ಞಾನವೂ ಕ್ಷಣಿಕವಾದರೆ, **"ಪ್ರತ್ಯಭಿಜ್ಞಾ"**, ಎಂದರೆ, 'ನಾನು ಆ ಮಾತನ್ನಾಡಿದ್ದೆನು', ಎಂಬ ಸ್ಮರಣ **ಆಗಬಾರದು !** ಆದರೆ, ಮೊದಲು ನೋಡಿದುದರ–ಆಲಿಸಿದುದರ ಸ್ಮರಣ ಉಂಟಾಗುತ್ತದೆ. ಆದುದರಿಂದ, **'ಕ್ಷಣಿಕವಾದ'ವೂ ಸರಿಯಲ್ಲ !**

[ಏಕೆಂದರೆ], ಎಲ್ಲವೂ ದುಃಖವೇ ಆಗಿದ್ದರೆ, ಮತ್ತು ಸುಖವು ಸ್ವಲ್ಪವೂ ಇಲ್ಲದೇ ಹೋಗಿದ್ದರೆ, **ಸುಖದ ಅಪೇಕ್ಷೆಯಿಲ್ಲದೇ, ದುಃಖವು ಸಿದ್ಧವಾಗುವುದಿಲ್ಲ !** ಉದಾಹರಣೆಗೆ—ರಾತ್ರಿಯ ಅಪೇಕ್ಷೆಯಿಂದ ಹಗಲು, ಮತ್ತು ಹಗಲಿನ ಅಪೇಕ್ಷೆಯಿಂದ ರಾತ್ರಿ ಉಂಟಾಗುತ್ತದೆ. ಆದುದರಿಂದ, **'ಎಲ್ಲವೂ ದುಃಖವೇ', ಎಂದು ಅಂಗೀಕರಿಸುವುದು ಸರಿಯಲ್ಲ.**

ಸ್ವಲಕ್ಷಣವನ್ನು ಮಾತ್ರವೇ ಅಂಗೀಕರಿಸುವಿರಾದರೆ, ನೇತ್ರವು ರೂಪದ ಲಕ್ಷಣವೆಂದಾದೀತು! ಮತ್ತು ರೂಪವು ಲಕ್ಷ್ಯವಾದೀತು! ಗಡಿಗೆಯ ರೂಪವು, ಗಡಿಗೆಯ ರೂಪದ ಲಕ್ಷಣವಾದ ಚಕ್ಷುವು ಲಕ್ಷ್ಯದಿಂದ ಬೇರೆಯಾಗಿದೆ. ಮತ್ತು ಗಂಧವು ಪೃಥಿವಿಯಿಂದ ಅಭಿನ್ನವಾಗಿದೆ. ಇದೇ ರೀತಿ, **ಬೇರೆಯಾದುದೂ, ಬೇರೆಯಲ್ಲದುದೂ ಆದ ಲಕ್ಷ್ಯ–ಲಕ್ಷಣಗಳನ್ನು ಅಂಗೀಕರಿಸಬೇಕು.**

ಶೂನ್ಯದ ವಿಷಯದಲ್ಲಿ ಮೊದಲು ಯಾವ ಉತ್ತರವನ್ನು ಕೊಟ್ಟಿದ್ದೇವೋ, ಅದೇ; ಎಂದರೆ, **ಶೂನ್ಯದ ಜ್ಞಾತೃವು ಶೂನ್ಯ[ದಿಂದ] ಭಿನ್ನನಾಗಿರುತ್ತಾನೆ.**

## (ಜೈನ-ಬೌದ್ಧಸಿದ್ಧಾಂತ— ಪ್ರಪಂಚ ದುಃಖರೂಪವಾಗಿದೆ)

"ಸರ್ವಸ್ಯ ಸಂಸಾರಸ್ಯ ದುಃಖಾತ್ಮಕತ್ವಂ ಸರ್ವತೀರ್ಥಂಕರಸಮ್ಮತಮ್" ॥

[ಸರ್ವದರ್ಶನ ಸಂಗ್ರಹ; ಬೌದ್ಧದರ್ಶನ]

ಬೌದ್ಧರು—'ಸಮಸ್ತ ಜಗತ್ತೂ ದುಃಖದ ಮನೆ; ದುಃಖದ ಸಾಧನ! ಈ ಭಾವನೆಯನ್ನು ಮಾಡಿಕೊಂಡು, ಜಗತ್ತಿನಿಂದ ಬಿಡುಗಡೆ ಹೊಂದಬೇಕು', ಎಂದು ಅಂಗೀಕರಿಸುತ್ತಾರೆ.

ಚಾರವಾಕರಲ್ಲಿ-'ಮುಕ್ತಿ [ಇಲ್ಲ] ಮತ್ತು ಅನುಮಾನ ಗ್ರಾಹ್ಯ [ವಲ್ಲ]; ಹಾಗೂ ಜೀವ ಇಲ್ಲ.', ಎಂದಿಷ್ಟು ವೈಶಿಷ್ಟ್ಯವಿದೆ.

ಯಾರನ್ನು ಬೌದ್ಧರು ತೀರ್ಥಂಕರರೆಂದು ಅಂಗೀಕರಿಸುತ್ತಾರೋ, ಅವರನ್ನೇ ಜೈನರೂ ಅಂಗೀಕರಿಸುತ್ತಾರೆ! ಅದೇ ಕಾರಣದಿಂದ, ಇವರಿಬ್ಬರೂ ಒಂದೇ ಆಗಿದ್ದಾರೆ.*

ಮತ್ತು ಮೊದಲು ಹೇಳಿದ **'ಭಾವನಾಚತುಷ್ಟಯು'**, ಎಂದರೆ ನಾಲ್ಕು ಭಾವನೆಗಳಿಂದ ಸಕಲ ವಾಸನೆಗಳ ನಿವೃತ್ತಿಯಾಗುವುದರಿಂದ, ಶೂನ್ಯವಾಗುವುದು **'ನಿರ್ವಾಣ'**; ಎಂದರೆ **'ಮುಕ್ತಿ'**, ಎಂದು ಅಂಗೀಕರಿಸುತ್ತಾರೆ.

## (ಪಂಚಸ್ಕಂಧ ಮತ್ತು ಅವುಗಳ ವ್ಯಾಖ್ಯೆ)

ತಮ್ಮ ಶಿಷ್ಯರಿಗೆ **ಯೋಗಾಚಾರದ** ಉಪದೇಶವನ್ನು ಮಾಡುತ್ತಾರೆ.—

'ಗುರುವಿನ ವಚನವನ್ನು ಪ್ರಮಾಣವೆಂದು ಗ್ರಹಿಸಬೇಕು. ಅನಾದಿಯಾದ ಬುದ್ಧಿಯಲ್ಲಿ ವಾಸನೆಯುಂಟಾಗುವುದರಿಂದ, ಬುದ್ಧಿಯೇ ಅನೇಕಾಕಾರವಾಗಿ ತೋರುತ್ತದೆ.'

**ಅವುಗಳಲ್ಲಿ** ಈ ಐದು ಸ್ಕಂಧಗಳಿವೆ.—

**'ರೂಪವಿಜ್ಞಾನವೇದನಾಸಂಜ್ಞಾಸಂಸ್ಕಾರಸಂಜ್ಞಕಃ'** ॥

[ಸರ್ವದರ್ಶನ ಸಂಗ್ರಹ; ಬೌದ್ಧ ದರ್ಶನ.]

**ಮೊದಲನೆಯದು**—ಇಂದ್ರಿಯಗಳಿಂದ ಯಾವ ರೂಪವೇ ಮೊದಲಾದ ವಿಷಯಗಳು ಗ್ರಹಿಸಲ್ಪಡುತ್ತವೋ, ಅದು **'ರೂಪಸ್ಕಂಧ.'**

---

*ಇಂತಹ ಅನೇಕ ಸಿದ್ಧಾಂತಗಳ ಐಕ್ಯತೆಯಿಂದ, ಮಹರ್ಷಿ ದಯಾನಂದರು ಜೈನ-ಬೌದ್ಧ ಮತಗಳನ್ನು ಒಂದೇ, ಎಂದಿದ್ದಾರೆ.—ಅನು.

ಎರಡನೆಯದು :—ಆಲಯವಿಜ್ಞಾನ, ಎಂದರೆ, ಪ್ರವೃತ್ತವಾದುದನ್ನು ತಿಳಿದುಕೊಳ್ಳುವುದು, ಎಂಬ ವ್ಯವಹಾರವನ್ನು **'ವಿಜ್ಞಾನಸ್ಕಂಧ'**, ಎಂದೂ ;

ಮೂರನೆಯದು—ರೂಪಸ್ಕಂಧ ಮತ್ತು ವಿಜ್ಞಾನಸ್ಕಂಧಗಳಿಂದ ಉತ್ಪನ್ನವಾದ ಸುಖ-ದುಃಖ ಮೊದಲಾದ ಪ್ರತೀತಿ, ಎಂಬ ವ್ಯವಹಾರವನ್ನು **'ವೇದನಾಸ್ಕಂಧ'**, ಎಂದೂ;

ನಾಲ್ಕನೆಯದು—ಗೋವು ಮೊದಲಾದ ಸಂಜ್ಞೆಗಳ ಸಂಬಂಧವನ್ನು ಆಯಾ ನಾಮಕಗಳೊಂದಿಗೆ ಅಂಗೀಕರಿಸುವುದೆಂಬ ವ್ಯವಹಾರವನ್ನು **'ಸಂಜ್ಞಾಸ್ಕಂಧ'**, ಎಂದೂ;

ಐದನೆಯದು—ವೇದನಾ ಸ್ಕಂಧದಿಂದ ಉದಿಸುವ ರಾಗ-ದ್ವೇಷ ಮೊದಲಾದ ಕ್ಲೇಶಗಳ ; ಹಾಗೂ ಹಸಿವು-ಬಾಯಾರಿಕೆ ಮೊದಲಾದ ಉಪಕ್ಲೇಶಗಳ ; ಮದ, ಪ್ರಮಾದ, ಅಭಿಮಾನ, ಧರ್ಮ ಮತ್ತು ಅಧರ್ಮ, ಎಂಬ ವ್ಯವಹಾರವನ್ನು **'ಸಂಸ್ಕಾರಸ್ಕಂಧ'**, ಎಂದೂ ಅಂಗೀಕರಿಸುತ್ತಾರೆ.

**(ತೀರ್ಥಂಕರರ ಮೇಲೆ ವಿಶ್ವಾಸ ಮತ್ತು ದ್ವಾದಶಾಯತನ ಪೂಜೆ)**

**ದೇಶನಾ ಲೋಕನಾಥಾನಾಂ ಸತ್ತ್ವಾಶಯವಶಾನುಗಾಃ ।**
**ಭಿದ್ಯಂತೇ ಬಹುಧಾ ಲೋಕೇ ಉಪಾಯೈರ್ಬಹುಭಿಃ ಕಿಲ ॥1॥**
**ಗಂಭೀರೋತ್ತಾನಭೇದೇನ ಕ್ವಚಿಚ್ಚೋಭಯಲಕ್ಷಣಾ ।**
**ಭಿನ್ನಾ ಹಿ ದೇಶನಾಭಿನ್ನಾ ಶೂನ್ಯತಾದ್ವಯಲಕ್ಷಣಾ ॥2॥**

**'ದ್ವಾದಶಾಯತನಪೂಜಾ ಶ್ರೇಯಸ್ಕರೀತಿ ಬೌದ್ಧಾ ಮನ್ಯನ್ತೇ'—**

**ಅರ್ಥಾನುಪಾರ್ಜ್ಯ ಬಹುಶೋ ದ್ವಾದಶಾಯತನಾನಿ ವೈ ।**
**ಪರಿತಃ ಪೂಜನೀಯಾನಿ ಕಿಮನ್ಯೈರಿಹ ಪೂಜಿತೈಃ ॥3॥**
**ಜ್ಞಾನೇಂದ್ರಿಯಾಣಿ ಪಂಚೈವ ತಥಾ ಕರ್ಮೇಂದ್ರಿಯಾಣಿ ಚ ।**
**ಮನೋ ಬುದ್ಧಿರಿತಿ ಪ್ರೋಕ್ತಂ ದ್ವಾದಶಾಯತನಂ ಬುಧೈಃ ॥4॥**

[ಸರ್ವದರ್ಶನ ಸಂಗ್ರಹ; ಬೌದ್ಧದರ್ಶನ]

ಎಂದರೆ—ಯಾರು ಜ್ಞಾನಿಗಳೂ, ವಿರಕ್ತರೂ, ಜೀವನ್ಮುಕ್ತರೂ, ಲೋಕಗಳಿಗೆ ನಾಥರೂ ಆಗಿರುತ್ತಾರೋ, ಅಂತಹ ಬುದ್ಧನೇ ಮೊದಲಾದ ತೀರ್ಥಂಕರರಿಂದ ಉಕ್ತವಾದ, ಪದಾರ್ಥಗಳ ಸ್ವರೂಪವನ್ನು ತಿಳಿದಿರುವ, ಬೇರೆ ಬೇರೆ

ವಸ್ತುಗಳ ಉಪದೇಶಕನು ಬಹು ವಿಧದ ಭೇದಗಳಿಂದಲೂ ಮತ್ತು ಬಹಳ ಉಪಾಯಗಳಿಂದಲೂ ಉಪದೇಶಿಸಿರುವುದನ್ನು ಅಂಗೀಕರಿಸಬೇಕು. [1]

ಬಹಳ ಗಂಭೀರವಾಗಿಯೂ, ಮತ್ತು ಪ್ರಸಿದ್ಧವಾದ ಭೇದದೊಂದಿಗೂ, ಒಂದೊಂದೆಡೆ ಗುಪ್ತವಾಗಿಯೂ, ಮತ್ತು ಪ್ರಕಟರೂಪದಲ್ಲಿಯೂ, ನಾವು ಈ ಮುನ್ನ ಹೇಳಿಬಿಟ್ಟಿರುವ, ಶೂನ್ಯವನ್ನೇ ಲಕ್ಷಣವಾಗಿ ಹೊಂದಿರುವ ಯಾವ ಉಪದೇಶಗಳು ಬೇರೆ-ಬೇರೆ ಗುರುಗಳದು ಇವೆಯೋ, ಅವುಗಳನ್ನು ಅಂಗೀಕರಿಸಬೇಕು. [2]

**'ದ್ವಾದಶಾಯತನ ಪೂಜೆ'** ಯಾವುದಿದೆಯೋ, ಅದೇ ಮೋಕ್ಷವನ್ನು ಸಾಧಿಸಿ ಕೊಡುವಂತಹುದಾಗಿದೆ. ಆ ಪೂಜೆಗಾಗಿ ಬಹಳ ದ್ರವ್ಯ ಮೊದಲಾದ ಪದಾರ್ಥಗಳನ್ನು ಸಂಪಾದಿಸಿ, **ದ್ವಾದಶಾಯತನ**ಗಳನ್ನು, ಎಂದರೆ ಹನ್ನೆರಡು ಬಗೆಯ ಸ್ಥಾನ–ವಿಶೇಷಗಳನ್ನು ನಿರ್ಮಿಸಿ, ಎಲ್ಲ ರೀತಿಯಿಂದಲೂ ಪೂಜಿಸಬೇಕು. ಬೇರೆಯದರ ಪೂಜೆ ಮಾಡುವುದರಿಂದ ಪ್ರಯೋಜನವೇನು ? [3]

ಇವರ **ದ್ವಾದಶಾಯತನ ಪೂಜೆ** ಇದು—

**ಐದು ಜ್ಞಾನೇಂದ್ರಿಯಗಳು**, ಎಂದರೆ ಶ್ರೋತ್ರ, ತ್ವಚಾ, ಚಕ್ಷು, ಜಿಹ್ವಾ ಮತ್ತು ನಾಸಿಕ ; **ಐದು ಕರ್ಮೇಂದ್ರಿಯಗಳು**, ಎಂದರೆ ವಾಣಿ, ಕೈ, ಕಾಲು, ಗುದಾ ಮತ್ತು ಉಪಸ್ಥ–ಈ ಹತ್ತು ಇಂದ್ರಿಯಗಳು ಮತ್ತು ಮನಸ್ಸು, ಹಾಗೂ ಬುದ್ಧಿ–ಇವುಗಳನ್ನೇ ಸತ್ಕರಿಸುವುದು, ಎಂದರೆ, ಇವುಗಳನ್ನು ಆನಂದದಲ್ಲಿ ಪ್ರವೃತ್ತವಾಗಿಟ್ಟುಕೊಳ್ಳುವುದು, ಮೊದಲಾದುದು ಬೌದ್ಧರ ಮತವಾಗಿದೆ. [4]

## (ಪ್ರಪಂಚ ದುಃಖರೂಪವಾಗಿದ್ದರೆ, ಅದರಲ್ಲಿ ಪ್ರವೃತ್ತಿ ಏಕೆ ?)

**ಉತ್ತರ:—ಸಮಸ್ತ ಜಗತ್ತೂ ದುಃಖರೂಪವೇ ಆಗಿದ್ದರೆ, ಯಾವ ಜೀವನಿಗೂ ಪ್ರವೃತ್ತಿಯೇ ಆಗಬಾರದು!** ಜಗತ್ತಿನಲ್ಲಿ ಜೀವಾತ್ಮನ ಪ್ರವೃತ್ತಿ ಪ್ರತ್ಯಕ್ಷವಾಗಿ ಕಾಣಿಸುತ್ತದೆ. ಆದುದರಿಂದ, **ಸಮಸ್ತ ಜಗತ್ತೂ ದುಃಖರೂಪವಾಗಿರಲಾರದು!** ಆದರೆ, ಇದರಲ್ಲಿ **ಸುಖ–ದುಃಖ** ಎರಡೂ ಇವೆ !

ಮತ್ತು ಬೌದ್ಧರು ಈ ವಿಧದ ಸಿದ್ಧಾಂತವನ್ನೇ ಒಪ್ಪುವರಾದರೆ, ಅನ್ನ-ಪಾನಗಳ ಸೇವನದಲ್ಲಿ, ಹಾಗೂ ಪಥ್ಯ ಮತ್ತು ಓಷಧಿಗಳನ್ನು ಸೇವಿಸಿ, ಶರೀರ ರಕ್ಷಣೆ ಮಾಡಿಕೊಳ್ಳುವುದರಲ್ಲಿ ಪ್ರವೃತ್ತರಾಗಿ, ಸುಖವನ್ನೇಕೆ ಅಂಗೀಕರಿಸುತ್ತಾರೆ ?

"ನಾವು ಪ್ರವೃತ್ತರೇನೋ ಆಗುತ್ತೇವೆ ! ಆದರೆ, ಅದನ್ನು ದುಃಖವೆಂದೇ ಗ್ರಹಿಸುತ್ತೇವೆ.", ಎನ್ನುವರಾದರೆ, ಈ ಕಥನ ಸಂಭವವೇ ಅಲ್ಲ! ಏಕೆಂದರೆ,

ಜೀವನು ಸುಖವೆಂದರಿತು ಪ್ರವೃತ್ತನೂ, ಮತ್ತು ದುಃಖವೆಂದರಿತು ನಿವೃತ್ತನೂ ಆಗುತ್ತಾನೆ !

ಜಗತ್ತಿನಲ್ಲಿ ಧರ್ಮ, ಕ್ರಿಯೆ, ವಿದ್ಯೆ, ಸತ್ಸಂಗ ಮೊದಲಾದ ಶ್ರೇಷ್ಠ ವ್ಯವಹಾರಗಳೆಲ್ಲವೂ ಸುಖಕಾರಕವಾಗಿರುತ್ತವೆ ! ಬೌದ್ಧರನು ಬಿಟ್ಟು ಯಾವನೇ ವಿದ್ವಾಂಸನೂ ಇದನ್ನು ದುಃಖದ ಕುರುಹೆಂದು ಒಪ್ಪಲಾರನು.

ಯಾವ ಐದು ಸ್ಕಂಧಗಳಿವೆಯೋ, ಅವೂ ಕೂಡ ಪೂರ್ಣತಃ ಅಪೂರ್ಣವಾಗಿವೆ ! ಏಕೆಂದರೆ, ಈ ಈ ಬಗೆಯ ಸ್ಕಂಧಗಳನ್ನು ಆಲೋಚಿಸತೊಡಗಿದರೆ, ಒಂದೊಂದರಲ್ಲಿಯೂ ಅನೇಕ ಭೇದಗಳು ಆಗಬಲ್ಲವು !

**(ತೀರ್ಥಂಕರರೇ ಉಪದೇಶಕರಾದರೆ, ಅವರಿಗೆ ಉಪದೇಶ ಯಾರಿಂದ ಸಿಕ್ಕಿತು ?)**

ತೀರ್ಥಂಕರರನ್ನು ಉಪದೇಶಕರು, ಹಾಗೂ 'ಲೋಕನಾಥ'ರು, ಎಂದು ಅಂಗೀಕರಿಸುತ್ತಾರೆ. ಮತ್ತು ಯಾವನು ನಾಥರಿಗೂ ನಾಥನಾಗಿದ್ದಾನೋ, ಆ ಅನಾದಿಯಾದ ಪರಮಾತ್ಮನನ್ನು ಅಂಗೀಕರಿಸುವುದಿಲ್ಲ ! ಹಾಗಾದರೆ, ಆ ತೀರ್ಥಂಕರರು ಉಪದೇಶವನ್ನು ಯಾವನಿಂದ ಪಡೆದರು ?

'ಸ್ವತಃ [ಉಪದೇಶ] ಪ್ರಾಪ್ತವಾಯಿತು', ಎನ್ನುವರಾದರೆ, ಇಂತಹ ಕಥನ ಸಂಭವವಲ್ಲ. ಏಕೆಂದರೆ, ಕಾರಣವಿಲ್ಲದೇ, ಕಾರ್ಯವಾಗಲಾರದು. ಅಥವಾ, ಅವರ ಹೇಳಿಕೆಗೆ ಅನುಸಾರವಾಗಿ, ಹೀಗೆಯೇ ಆಗುವುದಾಗಿದ್ದರೆ, ಈಗಲೂ ಕೂಡ ಅವರಲ್ಲಿ ಓದದೇ–ಓದಿಸದೇ, ಕೇಳದೇ-ಕೇಳಿಸದೇ ಮತ್ತು ಜ್ಞಾನಿಗಳ ಸತ್ಸಂಗವನ್ನು ಮಾಡದೇ, ಜ್ಞಾನಿಗಳಾಗಿ ಹೋಗುವುದಿಲ್ಲವೇಕೆ ?

[ಹೀಗೆ] ಆಗುವುದಿಲ್ಲವೆಂದಾಗ, ಇಂತಹ ಕಥನ ಸರ್ವಥಾ ನಿರ್ಮೂಲ ಮತ್ತು ಯುಕ್ತಿಶೂನ್ಯ ! ಸನ್ನಿಪಾತಜ್ವರಗ್ರಸ್ತನ ಅಸಂಗತ ಪ್ರಲಾಪದಂತಿದೆ !

**(ಇರುವ ವಸ್ತು ಶೂನ್ಯರೂಪವೆಂದಿಗೂ ಆಗಲಾರದು)**

ಬೌದ್ಧರ ಉಪದೇಶವು ಶೂನ್ಯರೂಪವೇ ಆದ **'ಅದ್ವೈತ'***ವಾಗಿದ್ದರೆ, **ಇರುವಂತಹ ವಸ್ತು ಶೂನ್ಯರೂಪವೆಂದಿಗೂ ಆಗಲಾರದು.** ಹೌದು ! ಸೂಕ್ಷ್ಮವಾದ ಕಾರಣರೂಪವೇನೋ ಆಗುತ್ತದೆ. ಆದುದರಿಂದ, ಆ ಕಥನವೂ ಕೂಡ ಭ್ರಮರೂಪವೇ ಆಗಿದೆ!

*ನವೀನ ವೇದಾಂತದ ಆದ್ಯಪ್ರವರ್ತಕರಾದ ಶಂಕರಾಚಾರ್ಯರ ಗುರುಗಳ ಗುರುಗಳಾದ ಗೌಡಪಾದಾಚಾರ್ಯರ ಮೇಲೆ ಬೌದ್ಧಮತದ ವಿಶೇಷ ಪ್ರಭಾವವಿತ್ತು. ಬೌದ್ಧರ ಶೂನ್ಯವಾದಕ್ಕೆ →

## (ದ್ವಾದಶಾಯತನ ಪೂಜೆ ಮುಕ್ತಿಗಾಗಲ್ಲ ; ಭೋಗಕ್ಕೆ ಸಾಧನ)

ದ್ರವ್ಯೋಪಾರ್ಜನದಿಂದಲೇ ಮಾಡುವ, ಪೂರ್ವೋಕ್ತ ದ್ವಾದಶಾಯತನ ಪೂಜೆಯನ್ನು ಮೋಕ್ಷದ ಸಾಧನವೆಂದು ಅಂಗೀಕರಿಸುವಿರಾದರೆ, ದಶಪ್ರಾಣಗಳ, ಮತ್ತು ಹನ್ನೊಂದನೆಯವನಾದ ಜೀವಾತ್ಮನ ಪೂಜೆಯನ್ನೇಕೆ ಮಾಡುವುದಿಲ್ಲ ?

ಇಂದ್ರಿಯಗಳ ಮತ್ತು ಅಂತಃಕರಣದ ಪೂಜೆಯೂ ಕೂಡ, ಮೋಕ್ಷವೆನ್ನುವಾಗ, ಈ ಬೌದ್ಧರಿಗೂ, ಬೇರೆ ವಿಷಯಲಂಪಟರಿಗೂ ವ್ಯತ್ಯಾಸವೇನುಳಿಯಿತು ? ಅವರಿಂದ* ಈ ಬೌದ್ಧರು ದೂರ ಉಳಿಯಲಾರದೇ ಹೋದ ಮೇಲೆ, ಅಲ್ಲಿ ಮುಕ್ತಿಯಾದರೂ ಎಲ್ಲಿ ಉಳಿಯಿತು ? ಎಲ್ಲಿ ಇಂತಹ ಮಾತಗಳಿವೆಯೋ, ಅಲ್ಲಿ ಮುಕ್ತಿಗೇನು ಕೆಲಸ ? ತಮ್ಮ ಅವಿದ್ಯೆಯ ಉನ್ನತಿಯನ್ನು ಈ ಬೌದ್ಧರು ಎಷ್ಟೊಂದು ಸಾಧಿಸಿದ್ದಾರೆ, ಎಂದರೆ, ಇದಕ್ಕೆ ಸಮಾನವಾದ ಉದಾಹರಣೆ ಬೇರೊಂದಿಲ್ಲ !

## (ವೇದ ಮತ್ತು ಈಶ್ವರನೊಂದಿಗೆ ವಿರೋಧವಿಟ್ಟಿದ್ದರ ಫಲ)

ವೇದಗಳನ್ನೂ, ಈಶ್ವರನನ್ನೂ ವಿರೋಧಿಸಿದುದಕ್ಕೆ ಇದೇ ಫಲ ಇವರಿಗೆ ಸಿಕ್ಕಿದೆ, ಎಂದೇ ನಿಶ್ಚಯವಾಗುತ್ತದೆ ! ಮೊದಲೇನೋ, ಸಮಸ್ತ ಜಗತ್ತನ್ನೂ ದುಃಖರೂಪವೆಂದೇ ಭಾವಿಸಿದರು. ಮತ್ತೆ, ನಡುವೆ ದ್ವಾದಶಾಯತನ ಪೂಜೆಯನ್ನು ತಗಲಿಸಿಬಿಟ್ಟರು ! ಮುಕ್ತಿಪ್ರದವಾಗಬಲ್ಲುದಕ್ಕೆ, ಇವರ ದ್ವಾದಶಾಯತನಪೂಜೆಯು ಜಗತ್ತಿನ ಪದಾರ್ಥಗಳಿಂದ ಹೊರಗಿನದಾಗಿದೆಯೇನು ?

ಅಲ್ಲಾ ! ಎಂದಾದರೂ ಕಣ್ಣನ್ನು ಮುಚ್ಚಿಕೊಂಡು, ಯಾವನಾದರೂ ರತ್ನವನ್ನು ಹುಡುಕಲಿಚ್ಛಿಸಿದರೆ, ಅಥವಾ ಹುಡುಕಿದರೆ, ಎಂದಿಗಾದರೂ ಲಭಿಸಬಲ್ಲದೇ ?

---

→ಗೌಡಪಾದಾಚಾರ್ಯರು ವೈದಿಕರೂಪವನ್ನಿತ್ತು, ಅದ್ವೈತವಾದವನ್ನು ಸ್ಥಾಪಿಸಿದ್ದರು. ಅವರ 'ಮಾಂಡೂಕ್ಯಕಾರಿಕಾ' ಗ್ರಂಥದಲ್ಲಿ ಪಠಿತವಾದ ಅನೇಕ ಕಾರಿಕಾಂಶಗಳು ಬೌದ್ಧ ಗ್ರಂಥಗಳಲ್ಲಿ ಶಬ್ದತಃ ಅಥವಾ ಅರ್ಥತಃ ಉಪಲಬ್ಧವಾಗುತ್ತವೆ. ಇಷ್ಟೇ ಅಲ್ಲ ; ಬೌದ್ಧಗ್ರಂಥಗಳಲ್ಲಿ ಬುದ್ಧನಿಗಾಗಿ ಪ್ರಯುಕ್ತವಾದ 'ದ್ವಿಪದಾಂವರಃ,' 'ತಥಾಗತಃ', ಎಂಬಂತಹ ವಿಶಿಷ್ಟ ಶಬ್ದಗಳ ನಿರ್ದೇಶವೂ ಸಿಕ್ಕುತ್ತದೆ.

ಶಂಕರಾಚಾರ್ಯರ ಟೀಕೆಯನ್ನು ಬಿಟ್ಟುಬಿಟ್ಟರೆ, ಗೌಡಪಾದಾಚಾರ್ಯರಿಗೆ ಬುದ್ಧನ ಮೇಲೆ ಬಹಳ ಭಕ್ತಿ ಇತ್ತೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಆದ್ದರಿಂದಲೇ, ವಿಜ್ಞಾನ ಭಿಕ್ಷುವು ತನ್ನ 'ಸಾಂಖ್ಯಪ್ರವಚನಭಾಷ್ಯ'ದಲ್ಲಿ ನವೀನ ವೇದಾಂತಿಗಳಿಗೆ ಅನೇಕ ಸಲ 'ಪ್ರಚ್ಛನ್ನ-ಬೌದ್ಧ', ಎಂಬ ಶಬ್ದದ ಪ್ರಯೋಗ ಮಾಡಿದ್ದಾನೆ. ಆದ್ದರಿಂದಲೇ, ಪದ್ಮಪುರಾಣದಲ್ಲಿ— "ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮೇವ ಚ", ಎಂಬ ಶ್ಲೋಕಾರ್ಥವನ್ನು ಉದ್ಧರಿಸಿದ್ದಾನೆ.—ಯು. ಮೀ.

*ಎಂದರೆ, ವಿಷಯಲಂಪಟರಿಂದ.—ಸಂ.

ವೇದಗಳನ್ನೂ, ಈಶ್ವರನನ್ನೂ ಒಪ್ಪದುದರಿಂದ, ಇವರ ಲೀಲೆ ಇಂತಹುದೇ ಆಗಿದೆ! ಈಗಲೂ ಕೂಡ, ಸುಖವನ್ನು ಅಪೇಕ್ಷಿಸುವರಾದರೆ, ವೇದಗಳ, ಮತ್ತು ಈಶ್ವರನ ಆಶ್ರಯವನ್ನು ತೆಗೆದುಕೊಂಡು, ತಮ್ಮ ಜನ್ಮವನ್ನು ಸಫಲಗೊಳಿಸಿಕೊಳ್ಳಲಿ!

### (‘ವಿವೇಕವಿಲಾಸ’ದಲ್ಲಿ ನಿರ್ದಿಷ್ಟ ಬೌದ್ಧ ಸಿದ್ಧಾಂತ)

"ವಿವೇಕವಿಲಾಸ" ಎಂಬ ಗ್ರಂಥದಲ್ಲಿ ಬೌದ್ಧರ ಮತವನ್ನು ಈ ಪ್ರಕಾರ ಬರೆದಿದ್ದಾರೆ—

ಬೌದ್ಧಾನಾಂ ಸುಗತೋ ದೇವೋ ವಿಶ್ವಂ ಚ ಕ್ಷಣಭಂಗುರಮ್ ।
ಆರ್ಯಸತ್ತ್ವಾಖ್ಯಯಾ ತತ್ತ್ವಚತುಷ್ಟಯಮಿದಂ ಕ್ರಮಾತ್ ॥1॥
ದುಃಖಮಾಯತನಂ ಚೈವ ತತಃ ಸಮುದಯೋ ಮತಃ ।
ಮಾರ್ಗಶ್ಚೇತ್ಯಸ್ಯ ಚ ವ್ಯಾಖ್ಯಾ ಕ್ರಮೇಣ ಶ್ರೂಯತಾಮತಃ ॥2॥
ದುಃಖಸಂಸಾರಿಣಃ ಸ್ಕಂಧಾಸ್ತೇ ಚ ಪಂಚ ಪ್ರಕೀರ್ತಿತಾಃ ।
ವಿಜ್ಞಾನಂ ವೇದನಾ ಸಂಜ್ಞಾ ಸಂಸ್ಕಾರೋ ರೂಪಮೇವ ಚ ॥3॥
ಪಂಚೇಂದ್ರಿಯಾಣಿ ಶಬ್ದಾದ್ಯಾ ವಿಷಯಾಃ ಪಂಚ ಮಾನಸಮ್ ।
ಧರ್ಮಾಯತನಮೇತಾನಿ ದ್ವಾದಶಾಯತನಾನಿ ತು ॥4॥
ರಾಗಾದೀನಾಂ ಗಣೋಽಯಂ ಸ್ಯಾತ್ಸಮುದೇತಿ ನೃಣಾಂ ಹೃದಿ ।
ಆತ್ಮಾತ್ಮೀಯಸ್ವಭಾವಾಖ್ಯಃ ಸ್ಯಾತ್ಸಮುದಯಃ ಪುನಃ ॥5॥
ಕ್ಷಣಿಕಾಃ ಸರ್ವಸಂಸ್ಕಾರಾ ಇತಿ ಯಾ ವಾಸನಾ ಸ್ಥಿರಾ ।
ಸ ಮಾರ್ಗ ಇತಿ ವಿಜ್ಞೇಯಃ ಸ ಚ ಮೋಕ್ಷೋಽಭಿಧೀಯತೇ ॥6॥
ಪ್ರತ್ಯಕ್ಷಮನುಮಾನಂ ಚ ಪ್ರಮಾಣಂ ದ್ವಿತಯಂ ತಥಾ
ಚತುಃಪ್ರಸ್ಥಾನಿಕಾ ಬೌದ್ಧಾಃ ಖ್ಯಾತಾ ವೈಭಾಷಿಕಾದಯಃ ॥7॥
ಅರ್ಥೋ ಜ್ಞಾನಾನ್ವಿತೋ ವೈಭಾಷಿಕೇಣ ಬಹು ಮನ್ಯತೇ ।
ಸೌತ್ರಾಂತಿಕೇನ ಪ್ರತ್ಯಕ್ಷಗ್ರಾಹ್ಯೋಽರ್ಥೋ ನ ಬಹಿರ್ಮತಃ ॥8॥
ಆಕಾರಸಹಿತಾ ಬುದ್ಧಿರ್ಯೋಗಾಚಾರಸ್ಯ ಸಮ್ಮತಾ ।
ಕೇವಲಾಂ ಸಂವಿದಂ ಸ್ವಸ್ಥಾಂ ಮನ್ಯಂತೇ ಮಧ್ಯಮಾಃ ಪುನಃ ॥9॥
ರಾಗಾದಿಜ್ಞಾನಸಂತಾನವಾಸನಾಚ್ಛೇದಸಂಭವಾ ।
ಚತುರ್ಣಾಮಪಿ ಬೌದ್ಧಾನಾಂ ಮುಕ್ತಿರೇಷಾ ಪ್ರಕೀರ್ತಿತಾ ॥10॥

**ಕೃತ್ತಿಃ ಕಮಂಡಲುರ್ಮೌಂಡ್ಯಂ ಚೀರಂ ಪೂರ್ವಾಹ್ನಭೋಜನಮ್ ।**
**ಸಂಘೋ ರಕ್ತಾಂಬರತ್ವಂ ಚ ಶಿಶ್ರಿಯೇ ಬೌದ್ಧಭಿಕ್ಷುಭಿಃ ॥11॥***

1. ಸುಗತದೇವ ಬುದ್ಧಭಗವಾನ್ ಬೌದ್ಧರ ಪೂಜನೀಯ ದೇವನು; ಮತ್ತು 2. ಜಗತ್ತು ಕ್ಷಣಭಂಗುರ; 3. ಆರ್ಯ ಪುರುಷ ಮತ್ತು ಆರ್ಯಾ ಸ್ತ್ರೀ, ಹಾಗೂ 4. ತತ್ತ್ವಗಳ ಆಖ್ಯಾನ=ಪ್ರಸಿದ್ಧವಾದ ಸಂಜ್ಞೆ ಮೊದಲಾದುವು. ಈ ನಾಲ್ಕು ತತ್ತ್ವಗಳು ಬೌದ್ಧರ ಸ್ವೀಕಾರಯೋಗ್ಯವಾದ ಪದಾರ್ಥಗಳಾಗಿವೆ. [1]

ಈ ವಿಶ್ವವನ್ನು 'ದುಃಖ' [ಮತ್ತು ಶರೀರವನ್ನು 'ದುಃಖ]ದ ಮನೆ', ಎಂದು ತಿಳಿಯಬೇಕು. ಆ ಮೇಲೆ, 'ಸಮುದಯ'. ಎಂದರೆ [ರಾಗಾದಿಗಳ] ಉತ್ಪತ್ತಿಯಾಗುತ್ತದೆ. ಮತ್ತು ['ಮಾರ್ಗ']-ಇವುಗಳ ವ್ಯಾಖ್ಯಾನವನ್ನು ಕ್ರಮದಿಂದ ಆಲಿಸಿರಿ. [2]

ಜಗತ್ತಿನಲ್ಲಿ ದುಃಖವೇ ಇದೆ! ಮೊದಲು ಯಾವ **ಪಂಚಸ್ಕಂಧಗಳನ್ನು** ಹೇಳಿದ್ದೇವೋ, ಅವುಗಳನ್ನು ತಿಳಿಯಬೇಕು. [3]

ಪಂಚ ಜ್ಞಾನೇಂದ್ರಿಯಗಳು, ಅವುಗಳ ಶಬ್ದ ಮೊದಲಾದ ಐದು ವಿಷಯಗಳು; ಮತ್ತು ಮನಸ್ಸು, ಬುದ್ಧಿ=ಅಂತಃಕರಣಗಳು ಧರ್ಮದ ಸ್ಥಾನಗಳು–ಇವು '**ಹನ್ನೆರಡು**' [ಆಯತನಗಳು]. [4]

ಮಾನವರ ಹೃದಯದಲ್ಲಿ ಯಾವ ರಾಗ-ದ್ವೇಷ ಮೊದಲಾದುವುಗಳ ಸಮೂಹದ ಉತ್ಪತ್ತಿಯಾಗುವುದೋ, ಅದು '**ಸಮುದಯ**'. ಆತ್ಮಾ ಮತ್ತು ಆತ್ಮನ ಸಂಬಂಧಿಗಳು, ಹಾಗೂ ಸ್ವಭಾವವು '**ಆಖ್ಯಾ**'. ಎನಿಸುತ್ತವೆ. ಇವುಗಳಿಂದಲೇ ಮರಳಿ, ಸಮುದಯ ಮೂಡುತ್ತದೆ. [5]

ಎಲ್ಲ **ಸಂಸ್ಕಾರಗಳೂ ಕ್ಷಣಿಕವಾಗಿವೆ.** ವಾಸನೆಯು ಸ್ಥಿರವಾಗುವಿಕೆ ಏನಿದೆಯೋ, ಅದು ಬೌದ್ಧರ '**ಮಾರ್ಗ**'ವಾಗಿದೆ. ಮತ್ತು ಅದೇ ಶೂನ್ಯ ತತ್ತ್ವ=ಶೂನ್ಯ ರೂಪವಾಗುವುದು '**ಮೋಕ್ಷ**'ವಾಗಿದೆ. [6]

ಬೌದ್ಧರು **ಪ್ರತ್ಯಕ್ಷ** ಮತ್ತು **ಅನುಮಾನ**–[ಈ] ಎರಡೇ ಪ್ರಮಾಣಗಳನ್ನು ಅಂಗೀಕರಿಸುತ್ತಾರೆ.

ಇವರಲ್ಲಿ '**ವೈಭಾಷಿಕ**'. '**ಸೌತ್ರಾಂತಿಕ**', '**ಯೋಗಾಚಾರ**' ಮತ್ತು '**ಮಾಧ್ಯಮಿಕ**'–[ಈ] ನಾಲ್ಕು ಬಗೆಯ ಭೇದಗಳಿವೆ. [7]

---

***ವಿವೇಕವಿಲಾಸ (8/265-275)—ಯು.ಮೀ.**

ಇವರಲ್ಲಿ **ವೈಭಾಷಿಕನು**—ಜ್ಞಾನದಲ್ಲಿ ಯಾವ ಅರ್ಥ*ವಿದೆಯೋ, ಅದನ್ನು ಇವೆ, ಎಂದು ಅಂಗೀಕರಿಸುತ್ತಾನೆ. ಏಕೆಂದರೆ, ಯಾವುದು ಜ್ಞಾನದಲ್ಲಿಲ್ಲವೋ, ಅದರ ಅಸ್ತಿತ್ವವನ್ನು ಸಿದ್ಧಪುರುಷನು ಅಂಗೀಕರಿಸಲಾರನು.

ಮತ್ತು **ಸೌತ್ರಾಂತಿಕನು**—ಪ್ರತ್ಯಕ್ಷ ಪದಾರ್ಥ ಒಳಗಿದೆ; ಹೊರಗಿಲ್ಲ, ಎಂದು ಅಂಗೀಕರಿಸುತ್ತಾನೆ. [8]

**ಯೋಗಾಚಾರನು**—ಆಕಾರಸಹಿತವೂ, ವಿಜ್ಞಾನಯುಕ್ತವೂ ಆದ ಬುದ್ಧಿಯನ್ನು ಅಂಗೀಕರಿಸುತ್ತಾನೆ.

ಮತ್ತು **ಮಾಧ್ಯಮಿಕನು**—ಕೇವಲ ತನ್ನಲ್ಲಿ ಪದಾರ್ಥಗಳ ಜ್ಞಾನಮಾತ್ರವನ್ನು ಅಂಗೀಕರಿಸುತ್ತಾನೆ: ಪದಾರ್ಥಗಳನ್ನಲ್ಲ. [9]

ಮತ್ತು ನಾಲ್ಕು [ಸಂಪ್ರದಾಯಗಳ] ಬೌದ್ಧರ ರಾಗವೇ ಮೊದಲಾದ ಜ್ಞಾನದ ಪ್ರವಾಹದ ವಾಸನಾನಾಶದಿಂದ ಉತ್ಪನ್ನವಾದ ಮುಕ್ತಿಯನ್ನು [ಹೇಳ]ಲಾಗಿದೆ. [10]

ಜಿಂಕೆ ಮೊದಲಾದುವುಗಳ ಚರ್ಮ, ಕಮಂಡಲು, ಶಿರ-ಮುಂಡನ, ವಲ್ಕಲವಸ್ತ್ರ, ಪೂರ್ವಾಹ್ನದಲ್ಲಿ, ಎಂದರೆ ಹನ್ನೆರಡು ಗಂಟೆಗಿಂತ ಮುನ್ನ ಭೋಜನ, ಏಕಾಕಿಯಾಗಿರದಿರುವುದು, ಕೆಂಪು ಬಟ್ಟೆಯಧಾರಣ—ಇದು ಬೌದ್ಧರ ಸಾಧುಗಳ ವೇಷವಾಗಿದೆ. [11]

### (‘ಕ್ಷಣಿಕವಾದ’ದ ಸಿದ್ಧಾಂತದಲ್ಲಿ ಅನೇಕ ದೋಷಗಳು)

**ಉತ್ತರ:**—ಬೌದ್ಧರ ದೇವರು ಸುಗತ ಬುದ್ಧನೇ ಆಗಿದ್ದರೆ, ಅವನ ಗುರು ಯಾವನಾಗಿದ್ದನು ?

ಮತ್ತು ವಿಶ್ವವು ಕ್ಷಣಭಂಗುರವಾಗಿದ್ದರೆ, **“ಇದು ಅದೇ ಆಗಿದೆ.”, ಎಂದು ಒಂದೆ ಕಂಡ ಪದಾರ್ಥದ ಸ್ಮರಣವಾಗಬಾರದು!** ಕ್ಷಣಭಂಗುರವಾಗಿದ್ದಲ್ಲಿ, ಆ ಪದಾರ್ಥವೇ ಇರುವುದಿಲ್ಲ! ಮತ್ತೆ, ಯಾವುದರ ಸ್ಮರಣವಾದೀತು ? **‘ಕ್ಷಣಿಕವಾದ’**ವೇ ಬೌದ್ಧರ ಮಾರ್ಗವಾಗಿದ್ದರೆ, ಇವರ ಮೋಕ್ಷವೂ ಕ್ಷಣಭಂಗುರವೇ ಆದೀತು!

---

*ಎಂದರೆ, ಪ್ರತ್ಯಕ್ಷವಾಗಿರುವ ವಸ್ತು.—ಅನು.

### (ಹೊರಗೆ ಕಾಣಿಸುವ ವಸ್ತು ಮಿಥ್ಯೆ ಹೇಗಾದೀತು?)

ಜ್ಞಾನದಿಂದ ಯುಕ್ತವಾದ ಅರ್ಥವೇ* ದ್ರವ್ಯವಾಗಿದ್ದರೆ, ಜಡದ್ರವ್ಯದಲ್ಲಿಯೂ ಜ್ಞಾನವಿರಬೇಕು. ಮತ್ತು ಅದು ಚಾಲನ ಮೊದಲಾದ ಕ್ರಿಯೆಗಳನ್ನು ನಡೆಯಿಸು ವುದು ಯಾವುದರ ಮೇಲೆ ? ಅಲ್ಲಾ ! ಯಾವುದು ಹೊರಗೆ ಕಾಣಿಸುತ್ತದೋ, ಅದು ಮಿಥ್ಯೆ ಹೇಗಾಗಬಲ್ಲದು ? ಬುದ್ಧಿಯು ಆಕಾರಸಹಿತವಾಗಿದ್ದರೆ, ಅದು ದೃಶ್ಯವಾಗಿರಬೇಕು !

### (ಜ್ಞೇಯ ಪದಾರ್ಥವಿಲ್ಲದೇ ಜ್ಞಾನವಾಗುವುದಿಲ್ಲ)

ಕೇವಲ ಜ್ಞಾನವೇ ಹೃದಯದಲ್ಲಿ, ಆತ್ಮಸ್ಥವಾಗುವುದಾದರೆ, [ಮತ್ತು]ಬಾಹ್ಯ ಪದಾರ್ಥಗಳು ಕೇವಲ ಜ್ಞಾನ†[ರೂಪ]ವೆಂದೇ ಅಂಗೀಕೃತವಾದರೆ, ಜ್ಞೇಯಪದಾರ್ಥ ವಿಲ್ಲದೇ, ಜ್ಞಾನವೇ ಉಂಟಾಗದು. ವಾಸನಾವಿಚ್ಛೇದವೇ ಮುಕ್ತಿಯೆಂದಾದರೆ, ಸುಷುಪ್ತಿಯಲ್ಲಿಯೂ ಮುಕ್ತಿಯನ್ನೊಪ್ಪಬೇಕು! ಹೀಗೆ ಗ್ರಹಿಸುವುದು ವಿದ್ಯಾವಿರುದ್ಧ ವಾದ ಕಾರಣದಿಂದ, ತಿರಸ್ಕರಣೀಯವಾಗಿದೆ !

ಈ ಮೊದಲಾದ ಬೌದ್ಧಮತೀಯರ ಸಿದ್ಧಾಂತಗಳನ್ನು ಸಂಕ್ಷಿಪ್ತವಾಗಿ ಪ್ರದರ್ಶಿಸಿ ದ್ದೇವೆ. ಈಗ ಬುದ್ಧಿವಂತರೂ, ವಿಚಾರಶೀಲರೂ ಆದ ಪುರುಷರು ಅವಲೋಕಿಸಿ— 'ಇವರ ವಿದ್ಯೆ ಎಂತಹುದು ? ಮತ್ತು ಮತವೆಂತಹುದು ?', ಎಂದು ತಿಳಿದು ಕೊಳ್ಳುವರು.

ಇದನ್ನು ಜೈನರೂ ಕೂಡ, ಅಂಗೀಕರಿಸುತ್ತಾರೆ !

### (ಜೈನರ ಮತ್ತು ಬೌದ್ಧರ ಸಮಾನವಿಷಯಗಳು)

ಇಲ್ಲಿಂದ ಮುಂದಕ್ಕೆ [ಬೌದ್ಧ ಮತ್ತು] ಜೈನಮತದ ವರ್ಣನೆಯಿದೆ—

"ಪ್ರಕರಣ ರತ್ನಾಕರ"ದ ಪ್ರಥಮ ಭಾಗದ ನಯಚಕ್ರಸಾರದಲ್ಲಿ ಕೆಳಗೆ ಬರೆ ದಿರುವ ಮಾತುಗಳನ್ನು ಬರೆದಿದ್ದಾರೆ:—

ಬೌದ್ಧರು ಕಾಲ-ಕಾಲಕ್ಕೆ ನವೀನವಾಗುವ‡—[1] ಆಕಾಶ, [2] ಕಾಲ, [3] ಜೀವ, [4] ಪುದ್ಗಲ,–ಈ ನಾಲ್ಕು ದ್ರವ್ಯಗಳನ್ನು ಅಂಗೀಕರಿಸುತ್ತಾರೆ.

---

*ಜ್ಞಾನಯುಕ್ತವಾದ ಜ್ಞೇಯವಸ್ತುವೇ ತತ್ತ್ವ, ಎಂಬ ಸಿದ್ಧಾಂತವು ಸರಿಯಲ್ಲ, ಎಂದು ತೋರಿಸಲು ಮಹರ್ಷಿಗಳು ಜ್ಞಾನರಹಿತವಾದ ವಸ್ತುಗಳೂ ಇವೆ, ಎಂದು ತರ್ಕಿಸಿದ್ದಾರೆ. ಅರ್ಥ, ಎಂಬ ಶಬ್ದವು ಪದಾರ್ಥ ಎಂಬರ್ಥದಲ್ಲಿ ಬಂದಿದೆ.—ಅನು.

†ಎಂದರೆ, ಬುದ್ಧಿಯ ಕಲ್ಪನೆ ಮಾತ್ರ.—ಅನು.

‡ಪರಿವರ್ತನಶೀಲವಾದ.—ಅನು.

ಮತ್ತು ಜೈನರು—[1] ಧರ್ಮಾಸ್ತಿಕಾಯ, [2] ಅಧರ್ಮಾಸ್ತಿಕಾಯ, [3] ಆಕಾಶಾಸ್ತಿಕಾಯ, [4] ಪುದ್ಗಲಾಸ್ತಿಕಾಯ, [5] ಜೀವಾಸ್ತಿಕಾಯ, ಮತ್ತು [6] ಕಾಲ-ಈ ಆರು ದ್ರವ್ಯಗಳನ್ನು ಅಂಗೀಕರಿಸುತ್ತಾರೆ.

ಇವುಗಳಲ್ಲಿ ಕಾಲವನ್ನು 'ಅಸ್ತಿಕಾಯ'*, ಎಂದು ಒಪ್ಪಿಕೊಳ್ಳುವುದಿಲ್ಲ. ಆದರೆ, "ಕಾಲವು ಉಪಚಾರದಿಂದ ದ್ರವ್ಯವಾಗಿದೆ; ವಸ್ತುತಃ ಅಲ್ಲ.", ಎಂದು ಹೇಳುತ್ತಾರೆ.

ಅವುಗಳಲ್ಲಿ [ಮೊದಲನೆಯದು], 'ಧರ್ಮಾಸ್ತಿಕಾಯ'—ಇದು ಗತಿಪರಿಣಾಮತ್ವದಿಂದ, ಪರಿಣಾಮವನ್ನು ಹೊಂದಿದ 'ಜೀವ' ಮತ್ತು 'ಪುದ್ಗಲ'. ಇದರ ಗತಿಯು ಸಾಮೀಪ್ಯದಿಂದ ಸ್ತಂಭನಕ್ಕೆ ಕಾರಣವಾಗುತ್ತದೆ. ಮತ್ತು ಅದು ಅಸಂಖ್ಯ ಪ್ರದೇಶಗಳಲ್ಲೂ, ಪರಿಣಾಮಗಳಲ್ಲೂ ಮತ್ತು ಲೋಕಗಳಲ್ಲೂ ವ್ಯಾಪಕವಾಗಿರುತ್ತದೆ.[1]

ಎರಡನೆಯದು, 'ಅಧರ್ಮಾಸ್ತಿಕಾಯ'—ಇದು ಸ್ಥಿರತೆಯಿಂದ ಪರಿಣಾಮವನ್ನು ಹೊಂದಿದ 'ಜೀವ' ಮತ್ತು 'ಪುದ್ಗಲ'ದ ಸ್ಥಿತಿಯ ಆಶ್ರಯದ ಕಾರಣವಾಗಿರುತ್ತದೆ.[2]

ಮೂರನೆಯದು, 'ಆಕಾಶಾಸ್ತಿಕಾಯ'—ಯಾವುದರಲ್ಲಿ ಮುಳುಗುವುದು, ಪ್ರವೇಶಮಾಡುವುದು, ಹೊರಬರುವುದು, ಮೊದಲಾದ ಕ್ರಿಯೆ ಮಾಡುವ 'ಜೀವ'

---

*'ಅಸ್ತಿಕಾಯ' ಎಂದರೆ, ವೈದಿಕಪರಿಭಾಷೆಯಲ್ಲಿ 'ದ್ರವ್ಯ'; 'ಭಾವಪದಾರ್ಥ,' ಎಂದರ್ಥ. —ಅನು.

1. ಗತಿಯು ಪರಿವರ್ತನಶೀಲತೆಯ ಪರಿಣಾಮವಾಗಿ ಉಂಟಾಗುವ ಸೀಮಾಬಂಧಗಳಿಂದ ಬದ್ಧನಾದ, ಪುದ್ಗಲಗಳ ಚಲನೆಯಿಂದಲೂ ಮತ್ತು ಜೀವನ ಚಲನಗಳಿಂದಲೂ ಉದ್ಭವಿಸುವ ಕರ್ಮಗಳನ್ನು ಕ್ರಮಬದ್ಧವಾಗಿ ಮಾಡುವ ತತ್ವವೇ ಮೊದಲನೆಯದಾದ 'ಧರ್ಮಾಸ್ತಿಕಾಯ'ವಾಗಿರುತ್ತದೆ. ಮತ್ತು ಅದು ಅಸಂಖ್ಯ ಪ್ರದೇಶಗಳಲ್ಲಿಯೂ, ಪರಿಣಾಮಗಳಲ್ಲಿಯೂ ಮತ್ತು ಲೋಕಗಳಲ್ಲಿಯೂ ವ್ಯಾಪಕವಾಗಿರುತ್ತದೆ.

ಸಂಕ್ಷೇಪತಃ, ಜೀವನ ಮತ್ತು ಪುದ್ಗಲಗಳ ಕರ್ಮಗಳ ಮೇಲೆ ಮಾಡಲ್ಪಡುವ ನಿಯಂತ್ರಣವೇ ಧರ್ಮ ಅಥವಾ ಧರ್ಮಾಸ್ತಿಕಾಯ, ಎನ್ನಬಹುದು.—ಅನು.

2. ನಿರಂತರವಾಗಿ ಸೀಮಾಬದ್ಧವಾಗಿ ಮಾಡಲ್ಪಡುವ ಪುದ್ಗಲಗಳ ಮತ್ತು ಜೀವರ ತತ್ಪರತ್ವದ ಸ್ರೋತಸ್ಸೇ ಎರಡನೆಯದಾದ 'ಅಧರ್ಮಾಸ್ತಿಕಾಯ' ವಾಗಿರುತ್ತದೆ.

ಸಂಕ್ಷೇಪತಃ, ಪುದ್ಗಲಗಳ ಮತ್ತು ಜೀವರ ಸಂಯೋಗದ ಅಥವಾ ಪುನರ್ಜನ್ಮದ ಮೂಲವು 'ಅಧರ್ಮಾಸ್ತಿಕಾಯ'ವಾಗಿರುತ್ತದೆ—ಅನು.

ಮತ್ತು 'ಪುದ್ಗಲ'ಗಳ ಮುಳುಗುವಿಕೆಯ ಕಾರಣ, ಹಾಗೂ ಸರ್ವವ್ಯಾಪಿಯಾದ ಎಲ್ಲ ದ್ರವ್ಯಗಳ ಆಧಾರವಾಗಿದೆಯೋ, ಅದು.[3]

ನಾಲ್ಕನೆಯದು, **'ಪುದ್ಗಲಾಸ್ತಿಕಾಯ'**—ಇದು ಕಾರಣರೂಪವೂ, ಸೂಕ್ಷ್ಮವೂ, ನಿತ್ಯವೂ, ಏಕರಸವೂ, ವರ್ಣ, ಗಂಧ, ಸ್ಪರ್ಶ, ಕಾರ್ಯ, ಲಿಂಗ ಮತ್ತು ತುಂಬಿಸುವ, ಹಾಗೂ ಕರಗುವ ಸ್ವಭಾವವುಳ್ಳದ್ದೂ ಆಗಿರುತ್ತದೆ.[4]

ಐದನೆಯದು, **'ಜೀವಾಸ್ತಿಕಾಯ'**—ಇದು ಚೈತನ್ಯ ಲಕ್ಷಣ, ಜ್ಞಾನ, ದರ್ಶನಗಳಲ್ಲಿ ಉಪಯುಕ್ತವಾದ ಅನಂತ ಪರ್ಯಾಯಗಳಿಂದ ಪರಿಣಾಮವನ್ನು ಹೊಂದುವ ಕರ್ತೃ ಮತ್ತು ಭೋಕ್ತೃವಾಗಿರುತ್ತದೆ.[5]

ಮತ್ತು ಆರನೆಯದು, **'ಕಾಲ'**—ಇದು ಮೊದಲು ಹೇಳಿದ, ಪಂಚಾಸ್ತಿಕಾಯಗಳ ಪರತ್ವ, ಅಪರತ್ವ, ನವೀನತೆ, ಪ್ರಾಚೀನತೆಗಳ ಕುರುಹಿನಂತೆ, ಪ್ರಸಿದ್ಧ ವರ್ತಮಾನದಂತಿರುವ ಪರ್ಯಾಯಗಳಿಂದ ಕೂಡಿರುತ್ತದೆ. ಇದು **'ಕಾಲ'**, ಎನಿಸುತ್ತದೆ.[6]

---

8. ಸಮಸ್ತ ಭಾವಪದಾರ್ಥಗಳ ಅಥವಾ ಇರುವಿಕೆಯ ಭೇದಗಳ ಅಥವಾ ತತ್ತ್ವಗಳ ಆಧಾರ ಅಥವಾ ಆಶ್ರಯವೂ, ತನ್ನಲ್ಲಿಯೇ, ಚೇತನ ಜೀವರ ಮುಳುಗುವಿಕೆ, ಪ್ರವೇಶ, ಹೊರಡುವಿಕೆ, ಮತ್ತು ಇತರ ಕಾರ್ಯಗಳಿಗೂ, ಅದೇ ರೀತಿ ಪುದ್ಗಲಗಳ ಚಲನಗಳಿಗೂ, ಎಡೆಯನ್ನು ಕೊಡುವಂತಹುದೂ, ಸರ್ವವ್ಯಾಪಕವೂ ಆದ ತತ್ತ್ವವೇ ಮೂರನೆಯದಾಗಿ 'ಆಕಾಶಾಸ್ತಿಕಾಯ'ವಾಗಿರುತ್ತದೆ.—ಅನು.

4. ಸೂಕ್ಷ್ಮವೂ, ನಿತ್ಯವೂ, ಏಕರಸವೂ, ವರ್ಣ-ಗಂಧ ಸ್ಪರ್ಶ-ಪರಿವರ್ತನಶೀಲತ್ವ-ವಿಭಾಜ್ಯತ್ವವೆಂಬ ಸ್ವಾಭಾವಿಕ ಗುಣಗಳಿಂದ ಯುಕ್ತವೂ, ತುಂಬಿಸುವಂತಹುದೂ, ಕರಗುವಂತಹುದೂ, ಆದ ತತ್ತ್ವವು ನಾಲ್ಕನೆಯದಾದ 'ಪುದ್ಗಲಾಸ್ತಿಕಾಯ'ವಾಗಿರುತ್ತದೆ.—ಅನು.

5. ಚೈತನ್ಯಲಕ್ಷಣಯುಕ್ತನೂ, ಜ್ಞಾನ-ದರ್ಶನ-ಸಮರ್ಥನೂ, ಅನಂತವಾದ ಪರ್ಯಾಯಗಳಿಂದ ಪರಿಣಾಮಗಳಿಗೆ ಸಿಕ್ಕುವವನೂ, ಕರ್ತೃವೂ, ಭೋಕ್ತೃವೂ ಆದ ತತ್ತ್ವವು ಐದನೆಯ "ಜೀವಾಸ್ತಿಕಾಯ"ವಾಗಿರುತ್ತದೆ.—ಅನು.

6. ಮತ್ತು, ಮೇಲೆ ಹೇಳಿದ ಐದು ಅಸ್ತಿಕಾಯಗಳಿಗೆ ಸಂಬಂಧಿಸಿದಂತೆ ಮೊದಲನೆಯದು, ಆಮೇಲಿನದು, ಹೊಸದು, ಹಳೆಯದು, ಎಂದು ಗ್ರಹಿಸಲು ನೆರವಾಗುವಂತಹುದೂ, ಈಗಲೂ ಇರುವಂತಹುದೂ ಮತ್ತು ಪರಿವರ್ತನಗಳಿಗೆ ಗುರಿಯಾಗುವಂತಹುದೂ ಆದ ತತ್ತ್ವವು ಆರನೆಯದಾದ 'ಕಾಲ'ವಾಗಿರುತ್ತದೆ.—ಅನು.

## (ಪೂರ್ವೋಕ್ತ ನಾಲ್ಕು ದ್ರವ್ಯಗಳನ್ನು ಸದಾ ನವೀನ, ಎಂದಂಗೀಕರಿಸುವುದು ಸರಿಯಲ್ಲ)

**ಸಮೀಕ್ಷಕ:**—ಬೌದ್ಧರು ಪ್ರತಿ ಸಮಯದಲ್ಲಿಯೂ ಹೊಸ ಹೊಸದಾಗುತ್ತಾ ಹೋಗುವ ಯಾವ ನಾಲ್ಕು ದ್ರವ್ಯಗಳನ್ನು ಅಂಗೀಕರಿಸಿದ್ದಾರೋ, **ಅವಂತೂ** ಸುಳ್ಳಾಗಿವೆ. ಏಕೆಂದರೆ, ಆಕಾಶ, ಕಾಲ, ಜೀವ ಮತ್ತು ಪರಮಾಣುಗಳು—ಇವು ನವೀನ ಅಥವಾ ಪುರಾತನವೆಂದಿಗೂ ಆಗಲಾರವು. ಏಕೆಂದರೆ, ಅವು ಅನಾದಿಗಳೂ, ಮತ್ತು ಕಾರಣರೂಪದಿಂದ ಅವಿನಾಶಿಗಳೂ ಆಗಿವೆ. ಮತ್ತೆ, [ಇವುಗಳಲ್ಲಿ] ನವೀನತ್ವ ಮತ್ತು ಪುರಾಣತ್ವಗಳು ಅನ್ವಯಿಸಬಲ್ಲವಾದರೂ ಹೇಗೆ ?

## (ವೈಶೇಷಿಕದರ್ಶನದಲ್ಲಿ ಹೇಳಿದ ಒಂಬತ್ತು ದ್ರವ್ಯಗಳನ್ನು ಅಂಗೀಕರಿಸಿದರೆ, ಸರಿ)

ಮತ್ತು ಜೈನರ [ಈ] ಗ್ರಹಿಕೆಯೂ ಕೂಡ ಸರಿಯಲ್ಲ. ಏಕೆಂದರೆ, ಧರ್ಮಾಧರ್ಮಗಳು ದ್ರವ್ಯಗಳಲ್ಲ ; ಆದರೆ, ಗುಣಗಳಾಗಿವೆ! ಇವೆರಡೂ **'ಜೀವಾಸ್ತಿಕಾಯ'**ದಲ್ಲಿ ಸೇರಿವೆ. ಆದುದರಿಂದ, ಆಕಾಶ, ಪರಮಾಣು, ಜೀವ ಮತ್ತು **ಕಾಲವನ್ನು** ಅಂಗೀಕರಿಸಿದ್ದರೆ, ಸರಿಯಾಗಿರುತ್ತಿತ್ತು.

ಮತ್ತು ಯಾವ ಒಂಬತ್ತು ದ್ರವ್ಯಗಳು **'ವೈಶೇಷಿಕ'**ದಲ್ಲಿ* ಅಂಗೀಕರಿಸಲ್ಪಟ್ಟಿವೆಯೋ, ಅವೇ ಸರಿಯಾದುವಾಗಿವೆ. ಏಕೆಂದರೆ, ಪೃಥಿವೀ ಮೊದಲಾದ ಐದು ತತ್ವಗಳೂ, ಕಾಲ, ದಿಕ್ಕು, ಆತ್ಮಾ ಮತ್ತು ಮನಸ್ಸು—ಈ ಒಂಬತ್ತೂ ನಿಶ್ಚಯವಾಗಿಯೂ ಬೇರೆ ಬೇರೆ ಪದಾರ್ಥಗಳಾಗಿವೆ.

**ಜೀವನೊಬ್ಬನನ್ನು ಚೇತನನೆಂದೊಪ್ಪಿ, ಈಶ್ವರನನ್ನು ಅಂಗೀಕರಿಸದಿರುವುದು ಜೈನರ** ಮತ್ತು ಬೌದ್ಧರ ಮಿಥ್ಯೆಯು [ಮತ್ತು] **ಪಕ್ಷಪಾತದ ಮಾತಾಗಿದೆ !**

## ('ಸಪ್ತಭಂಗೀ' ಮತ್ತು 'ಸ್ಯಾದ್ವಾದ' ಸಿದ್ಧಾಂತ)

ಈಗ, **ಬೌದ್ಧರು** ಮತ್ತು **ಜೈನರು** 'ಸಪ್ತಭಂಗೀ' ಮತ್ತು **'ಸ್ಯಾದ್ವಾದ'**ವೆಂದು ಯಾವುದನ್ನು ಅಂಗೀಕರಿಸುತ್ತಾರೋ, ಅದು ಹೀಗಿದೆ:—

**"ಸನ್ ಘಟಃ"**—ಇದನ್ನು **'ಪ್ರಥಮ ಭಂಗ'**, ಎನ್ನುತ್ತಾರೆ. ಏಕೆಂದರೆ, ಗಡಿಗೆಯು ತನ್ನ ಅಸ್ತಿತ್ವದಿಂದ ಕೂಡಿದೆ. ಎಂದರೆ, ಗಡಿಗೆ ಇದೆ. ಇದು ಅಭಾವದ ವಿರೋಧವನ್ನು ಮಾಡಿದೆ.

---

*ಎಂದರೆ, ವೈಶೇಷಿಕ ದರ್ಶನದಲ್ಲಿ —ಸಂ.

**'ಎರಡನೆಯ ಭಂಗ'—"ಅಸನ್ ಘಟಃ"**, [ಎಂದರೆ] ಗಡಿಗೆ ಇಲ್ಲ. ಮೊದಲ ಗಡಿಗೆಯ ಅಸದ್ಭಾವದಿಂದ ಎರಡನೆಯ 'ಭಂಗ' ಉಂಟಾಗಿದೆ.

**'ಮೂರನೆಯ ಭಂಗ'ವಿದು—"ಸನ್ನಸನ್‌ಘಟಃ"**, ಎಂದರೆ ಇದು ಗಡಿಗೆ ಏನೋ ಅಹುದು ; ಆದರೆ, ಬಟ್ಟೆಯಲ್ಲ. ಏಕೆಂದರೆ, ಇದು ಅವೆರಡರಿಂದಲೂ ಬೇರೆಯಾಗಿ ಹೋಯಿತು.

**'ನಾಲ್ಕನೆಯ ಭಂಗ'—"ಘಟೋऽಘಟಃ"**, ಎಂದರೆ, **"ಅಘಟಃ ಪಟಃ"**, ಎನ್ನುವಂತೆ. ಇನ್ನೊಂದು ಬಟ್ಟೆಯ ಅಭಾವದ ಅಪೇಕ್ಷೆಯಿಂದ, ತನ್ನಲ್ಲಿ ತಾನು ಇರುವುದರಿಂದ, ಗಡಿಗೆಯು ಗಡಿಗೆಯಲ್ಲದು ಎನಿಸುತ್ತದೆ. ಏಕಕಾಲದಲ್ಲಿ ಅದಕ್ಕೆ ಎರಡು ಸಂಜ್ಞೆಗಳಾದುವು. ಎಂದರೆ, ಅದು ಘಟವೂ ಅಹುದು ; ಅಘಟವೂ ಅಹುದು.

**'ಐದನೆಯ ಭಂಗ'** ಯಾವುದೆಂದರೆ—ಗಡಿಗೆಯನ್ನು ಬಟ್ಟೆ, ಎನ್ನುವುದು ಅಯೋಗ್ಯ,–ಎಂದರೆ, ಅದರಲ್ಲಿ ಗಡಿಗೆತನವನ್ನು ಹೇಳಬಹುದು ; ಆದರೆ, ಬಟ್ಟೆತನವನ್ನು ಹೇಳಲಾಗದು.

**'ಆರನೆಯ ಭಂಗ'** ಯಾವುದೆಂದರೆ—ಯಾವುದು ಗಡಿಗೆಯಲ್ಲವೋ, ಅದು ಹೇಳಲು ಯೋಗ್ಯವೂ ಅಲ್ಲ. ಮತ್ತು ಯಾವುದು ಅಹುದೋ, ಆದು ಅಹುದು. ಮತ್ತು ಹೇಳಲು ಯೋಗ್ಯವೂ ಅಹುದು.

ಮತ್ತು **'ಏಳನೆಯ ಭಂಗ'** ಯಾವುದೆಂದರೆ—ಯಾವುದನ್ನು ಹೇಳುವುದು ಅಭೀಷ್ಟವಾಗಿದೆಯೋ, ಅದು ಇಲ್ಲವಾಗಿದೆ. ಮತ್ತು ಗಡಿಗೆಯು ಹೇಳಲು ಯೋಗ್ಯವೂ ಆಗಿಲ್ಲ. ಇದು **'ಸಪ್ತಮ ಭಂಗ'**, ಎನಿಸುತ್ತದೆ.

ಹೀಗೆಯೇ:—

**ಸ್ಯಾದಸ್ತಿ ಜೀವೋऽಯಂ ಪ್ರಥಮೋ ಭಂಗಃ ॥1॥**
**ಸ್ಯಾನ್ನಾಸ್ತಿ ಜೀವೋ ದ್ವಿತೀಯೋ ಭಂಗಃ ॥2॥**
**ಸ್ಯಾದವಕ್ತವ್ಯೋ ಜೀವಸ್ತೃತೀಯೋ ಭಂಗಃ ॥3॥**
**ಸ್ಯಾದಸ್ತಿ ನಾಸ್ತಿರೂಪೋ ಜೀವಶ್ಚತುರ್ಥೋ ಭಂಗಃ ॥4॥**
**ಸ್ಯಾದಸ್ತಿ ಚಾವಕ್ತವ್ಯೋ ಜೀವಃ ಪಂಚಮೋ ಭಂಗಃ ॥5॥**
**ಸ್ಯಾನ್ನಾಸ್ತಿ ಚಾವಕ್ತವ್ಯೋ ಜೀವಃ ಷಷ್ಠೋ ಭಂಗಃ ॥6॥**
**ಸ್ಯಾದಸ್ತಿ ನಾಸ್ತಿ ಚಾವಕ್ತವ್ಯೋ ಜೀವ ಇತಿ ಸಪ್ತಮೋ ಭಂಗಃ ॥7॥**

**ಅರ್ಥ:**—**"ಇದ್ದಾನೆ ಜೀವ"**, ಎಂದಾಗ ಜೀವನಲ್ಲಿ ಜೀವನ ವಿರೋಧಗಳಾದ ಜಡ ಪದಾರ್ಥಗಳ ಅಭಾವರೂಪವಾದ **'ಭಂಗ ಮೊದಲನೆಯದು'**, ಎನಿಸುತ್ತದೆ. [1]

**'ಎರಡನೆಯ ಭಂಗ'**ವಿದು:—"ಇಲ್ಲ ಜೀವನು ಜಡದಲ್ಲಿ", ಎಂಬ ಕಥನವೂ ಕೂಡ, ಉಂಟು. ಇದರಿಂದ, ಇದು ಎರಡನೆಯ 'ಭಂಗ' ಎನಿಸುತ್ತದೆ. [2]

"ಜೀವನು ಹೇಳಲು ಯೋಗ್ಯನಲ್ಲ."—**ಇದು 'ಮೂರನೆಯ ಭಂಗ'** [ವಾಗಿದೆ]. [3]

"ಯಾವಾಗ ಜೀವನು ಶರೀರಧಾರಣ ಮಾಡುತ್ತಾನೋ, ಆಗ ಪ್ರಸಿದ್ಧನಾಗಿರುತ್ತಾನೆ. ಮತ್ತು ಯಾವಾಗ ಶರೀರದಿಂದ ಬೇರೆಯಿರುತ್ತಾನೋ, ಆಗ ಅಪ್ರಸಿದ್ಧನಾಗಿರುತ್ತಾನೆ", ಎಂಬ ಕಥನವಾದಾಗ, ಅದನ್ನು **'ನಾಲ್ಕನೆಯ ಭಂಗ'**, ಎನ್ನುತ್ತಾರೆ. [4]

"ಜೀವನಿದ್ದಾನೆ; ಆದರೆ, ಹೇಳಲು ಯೋಗ್ಯನಾಗಿಲ್ಲ", ಎಂಬ ಈ ಕಥನವನ್ನು **'ಐದನೆಯ ಭಂಗ'**, ಎನ್ನುತ್ತಾರೆ. [5]

"ಜೀವನು ಪ್ರತ್ಯಕ್ಷಪ್ರಮಾಣದಿಂದ, ಕಥನೀಯನಲ್ಲ; ಆದುದರಿಂದ ಚಾಕ್ಷುಷ ಪ್ರತ್ಯಕ್ಷನಲ್ಲ."—ಎಂಬೀ ವ್ಯವಹಾರವನ್ನು **'ಆರನೆಯ ಭಂಗ'**, ಎನ್ನುತ್ತಾರೆ. [6]

"ಒಂದು ಕಾಲದಲ್ಲಿ ಅನುಮಾನ ಪ್ರಮಾಣದಿಂದ, ಜೀವನ ಇರುವಿಕೆ; ಅದೃಶ್ಯತ್ವದಿಂದಾಗಿ ಇಲ್ಲದಿರುವಿಕೆ; ಮತ್ತು ಒಂದೇ ರೀತಿಯಲ್ಲಿ ಇರದಿರುವುದು; ಆದರೆ, ಕ್ಷಣ-ಕ್ಷಣದಲ್ಲಿ ಪರಿಣಾಮಕ್ಕೆ ಈಡಾಗುತ್ತಿರುವುದು; ಇರುವಿಕೆ–ಇಲ್ಲದಿರುವಿಕೆ ಆಗದಿರುವುದು; ಮತ್ತು ಇಲ್ಲದಿರುವಿಕೆ–ಇರುವಿಕೆಯಾಗುವ ವ್ಯವಹಾರವೂ ಆಗದಿರುವುದು."–**ಇದು 'ಏಳನೆಯ ಭಂಗ'**, ಎನಿಸುತ್ತದೆ. [7]

ಇದೇ ರೀತಿ, **ನಿತ್ಯತ್ವ–ಸಪ್ತಭಂಗೀ**; ಮತ್ತು **ಅನಿತ್ಯತ್ವ–ಸಪ್ತಭಂಗೀ; ಮತ್ತು ಸಾಮಾನ್ಯಧರ್ಮ, ವಿಶೇಷಧರ್ಮ, ಗುಣ ಮತ್ತು ಪರ್ಯಾಯ**ಗಳ ದೃಷ್ಟಿಯಿಂದ ಪ್ರತಿಯೊಂದು ವಸ್ತುವಿಗೂ **'ಸಪ್ತಭಂಗಿ'**ಯು ಅನ್ವಯಿಸುವುದು. ಅಲ್ಲದೇ, ದ್ರವ್ಯಗಳು, ಗುಣಗಳು, ಸ್ವಭಾವಗಳು ಮತ್ತು ಪರ್ಯಾಯಗಳು* ಅನಂತವಾಗಿರುವುದರಿಂದ, 'ಸಪ್ತಭಂಗಿ'ಯೂ ಅನಂತವಾಗಿರುತ್ತದೆ.

**ಈ ರೀತಿ, ಬೌದ್ಧರ, ಹಾಗೂ ಜೈನರ 'ಸ್ಯಾದ್ವಾದ'** ಮತ್ತು **'ಸಪ್ತಭಂಗೀ ನ್ಯಾಯ'** ನಿರೂಪಿತವಾಗಿದೆ.



*ಪರಿವರ್ತನಗಳು.—ಅನು.

**('ಸ್ಯಾದ್ವಾದ' ಮತ್ತು 'ಸಪ್ತಭಂಗೀ ನ್ಯಾಯ' ವ್ಯರ್ಥದ ಪ್ರಪಂಚವಾಗಿದೆ)**

**ಸಮೀಕ್ಷಕ:**—ಈ ಕಥನವು ಒಂದು ಅನ್ಯೋಽನ್ಯಾಭಾವದಲ್ಲಿ, ಸಾಧರ್ಮ್ಯ-ವೈಧರ್ಮ್ಯದಲ್ಲಿ ಪ್ರತಿಪಾದಿತವಾಗಬಲ್ಲದು. ಈ ಸರಳ ಪ್ರಕರಣ*ವನ್ನು ಬಿಟ್ಟು, ಕಠಿಣವಾದ ರಚನೆಯನ್ನು ಮಾಡುವುದು ಕೇವಲ ಅಜ್ಞಾನಿಗಳನ್ನು ಸಿಕ್ಕಿಸಿಕೊಳ್ಳುವುದಕ್ಕಾಗಿ ಮಾತ್ರವಾಗಿರುತ್ತದೆ!

ನೋಡಿರಿ! ಜೀವನ [ಅಭಾವ] ಅಜೀವನಲ್ಲಿ, ಮತ್ತು ಅಜೀವನ ಅಭಾವ ಜೀವನಲ್ಲಿ ಇದ್ದೇ ಇರುತ್ತದೆ.

ಹೇಗೆ ಜೀವ ಮತ್ತು ಜಡ, ಎರಡಕ್ಕೂ ಅಸ್ತಿತ್ವವಿರುವುದರಿಂದ, ಸಾಧರ್ಮ್ಯ; ಮತ್ತು ಚೇತನ, ಹಾಗೂ ಜಡವಾಗಿರುವುದರಿಂದ, ವೈಧರ್ಮ್ಯ; ಎಂದರೆ, ಜೀವನಲ್ಲಿ ಚೇತನತ್ವ ಅಸ್ತಿ=ಇದೆ; ಮತ್ತು ಜಡತ್ವ ನಾಸ್ತಿ=ಇಲ್ಲ.

ಇದೇ ರೀತಿ. ಜಡದಲ್ಲಿ ಜಡತ್ವವಿದೆ; ಮತ್ತು ಚೇತನತ್ವವಿಲ್ಲ.

ಇದರಿಂದ ಗುಣ, ಕರ್ಮ, ಸ್ವಭಾವಗಳ ಸಮಾನ ಧರ್ಮ ಮತ್ತು ವಿರುದ್ಧ ಧರ್ಮದ ಸಮಾಲೋಚನೆಯಿಂದ, ಇವರ **ಸಪ್ತಭಂಗೀ** ಮತ್ತು **ಸ್ಯಾದ್ವಾದ**ವೆಲ್ಲವೂ ಸಹಜತ್ವದಿಂದ ಅರಿವಿಗೆ ಬಂದುಬಿಡುತ್ತದೆ. ಮತ್ತೆ, ಇಷ್ಟು ಪ್ರಪಂಚನಾವರ್ಧನ ಯಾವ ಪ್ರಯೋಜನಕ್ಕಾಗಿ?

ಈ ವಿಷಯದಲ್ಲಿ ಬೌದ್ಧರ ಮತ್ತು ಜೈನರ ಮತ ಒಂದೇ ಆಗಿದೆ! ಸ್ವಲ್ಪ ಮಾತ್ರ ಬೇರೆಯಾಗುವುದರಿಂದ, ಭಿನ್ನಭಾವವೂ ಉಂಟಾಗುತ್ತದೆ.

**(ಜೈನಮತದ ಮತ್ತೆ ಹಲವು ಸಿದ್ಧಾಂತಗಳು)**

ಈಗ, ಇವರ ಮುಂದಕ್ಕೆ ಕೇವಲ ಜೈನಮತದ ವಿಷಯದಲ್ಲಿ ಬರೆಯಲ್ಪಡುತ್ತದೆ—

**ಚಿದಚಿದ್ದ್ವೇ ಪರೇ ತತ್ತ್ವೇ ವಿವೇಕಸ್ತದ್ವಿವೇಚನಮ್ ।**
**ಉಪಾದೇಯಮುಪಾದೇಯಂ ಹೇಯಂ ಚ ಕುರ್ವತಃ ॥1॥**
**ಹೇಯಂ ಹಿ ಕರ್ತೃರಾಗಾದಿ ತತ್ಕಾರ್ಯಮವಿವೇಕಿನಃ ।**
**ಉಪಾದೇಯಂ ಪರಂ ಜ್ಯೋತಿರುಪಯೋಗೈಕಲಕ್ಷಣಮ್ ॥2॥**†

---

*ಎಂದರೆ ಪ್ರಕ್ರಿಯೆ.—ಯು.ಮಿ.

†ಸರ್ವದರ್ಶನ ಸಂಗ್ರಹ; ಆರ್ಹತದರ್ಶನ.—ಯು.ಮಿ.

ಜೈನರು 'ಚಿತ್' ಮತ್ತು 'ಅಚಿತ್', ಎಂದರೆ, ಚೇತನ ಮತ್ತು ಜಡ, ಎರಡೇ ಪರತತ್ತ್ವಗಳನ್ನು ಅಂಗೀಕರಿಸುತ್ತಾರೆ. ಅವೆರಡರ ವಿವೇಚನಕ್ಕೆ 'ವಿವೇಕ' ಎಂದು ಹೆಸರು. ಯಾವ ಯಾವುದು ಸ್ವೀಕಾರಯೋಗ್ಯವೋ, ಅದರದರ ಸ್ವೀಕಾರವನ್ನೂ ಮತ್ತು ಯಾವ ಯಾವುದು ತ್ಯಾಗಯೋಗ್ಯವೋ, ಅದರದರ ತ್ಯಾಗವನ್ನೂ ಮಾಡುವವನನ್ನು 'ವಿವೇಕಿ', ಎನ್ನುತ್ತಾರೆ. [1]

ಜಗತ್ತಿನ ಕರ್ತೃ, ಮತ್ತು ರಾಗ ಮೊದಲಾದುದು, ಮತ್ತು ಈಶ್ವರನು ಜಗತ್ತನ್ನು ರಚಿಸಿದ್ದಾನೆ, ಎಂಬ ಈ ಅವಿವೇಕೀ ಮತದ ತ್ಯಾಗವನ್ನೂ, ಮತ್ತು ಯೋಗದಿಂದ ಲಕ್ಷಿತನಾಗುವ ಪರಮ ಜ್ಯೋತಿಃಸ್ವರೂಪನಾದ ಯಾವ ಜೀವನಿದ್ದಾನೋ, ಅವನ ಸ್ವೀಕಾರವನ್ನೂ ಮಾಡುವುದು ಉತ್ತಮವಾಗಿದೆ. [2]

ಎಂದರೆ, ಜೀವನ ಹೊರತು, ಎರಡನೆಯ ಚೇತನತತ್ತ್ವವಾದ ಈಶ್ವರನನ್ನು ಅಂಗೀಕರೀಸುವುದಿಲ್ಲ. 'ಅನಾದಿಸಿದ್ಧನಾದ ಈಶ್ವರನಾವನೂ ಇಲ್ಲ', ಎಂದು ಬೌದ್ಧರೂ, ಜೈನರೂ ಅಂಗೀಕರಿಸುತ್ತಾರೆ.

### ('ಬೌದ್ಧರು ಮತ್ತು ಜೈನರು ಒಂದೇ', ಎಂಬುದು ರಾಜಾ ಶಿವಪ್ರಸಾದರ ಮತ)

ಈ ವಿಷಯದಲ್ಲಿ ರಾಜಾ ಶಿವಪ್ರಸಾದರು 'ಇತಿಹಾಸ-ತಿಮಿರನಾಶಕ', ಎಂಬ ಗ್ರಂಥದಲ್ಲಿ—

"ಇವರಿಗೆ ಎರಡು ಹೆಸರುಗಳಿವೆ—ಒಂದು 'ಜೈನ': ಮತ್ತು ಇನ್ನೊಂದು 'ಬೌದ್ಧ'. ಎಂದು. ಇವು ಪರ್ಯಾಯವಾಚಕ ಶಬ್ದಗಳಾಗಿವೆ."

"ಆದರೆ, ಬೌದ್ಧರಲ್ಲಿ ವಾಮಮಾರ್ಗೀ, ಮದ್ಯ-ಮಾಂಸಾಹಾರಿ ಬೌದ್ಧರಿದ್ದಾರೆ. ಅವರೊಂದಿಗೆ ಜೈನರ ವಿರೋಧವಿದೆ. ಆದರೆ, ಯಾವ 'ಮಹಾವೀರ' ಮತ್ತು 'ಗೌತಮ ಗಣಧರ'ರಿದ್ದಾರೋ, ಅವರಿಗೆ ಬೌದ್ಧರು 'ಬುದ್ಧ', ಎಂದು ಹೆಸರಿಟ್ಟಿದ್ದಾರೆ.

"ಮತ್ತು ಜೈನರು [ಅವರನ್ನೇ] 'ಗಣಧರ' ಮತ್ತು 'ಜಿನವರ', [ಎಂದು ಕರೆದಿದ್ದಾರೆ]", ಎಂದು ಬರೆಯುತ್ತಾರೆ.

ಇವರಲ್ಲಿ ಯಾರ ಪರಂಪರೆ ಜೈನಮತವಾಗಿದೆಯೋ, ಆ ರಾಜಾ ಶಿವಪ್ರಸಾದರು ತಮ್ಮ "ಇತಿಹಾಸ-ತಿಮಿರನಾಶಕ", ಎಂಬ ಗ್ರಂಥದ ಮೂರನೆಯ ಖಂಡದಲ್ಲಿ ಬರೆದಿದ್ದಾರೇನೆಂದರೆ—

"ಯಾರು ಜನ್ಮವೆತ್ತಿ, ಒಟ್ಟು ಸುಮಾರು ಸಾವಿರ ವರ್ಷಗಳು ಕಳೆದಿವೆಯೋ, ಆ **ಸ್ವಾಮೀ ಶಂಕರಾಚಾರ್ಯರಿಗಿಂತ ಮೊದಲು ಸಂಪೂರ್ಣ ಭಾರತವರ್ಷದಲ್ಲಿ ಬೌದ್ಧ ಅಥವಾ ಜೈನಧರ್ಮ ಹರಡಿದ್ದಿತು."**

**ಇದರ ಮೇಲೆ ಟಿಪ್ಪಣಿ—**

**"ಮಹಾವೀರನ ಗಣಧರನಾದ ಗೌತಮ ಸ್ವಾಮಿಯ** ಸಮಯದಿಂದ **ಶಂಕರ ಸ್ವಾಮಿಯ** ಸಮಯದವರೆಗೆ, ಯಾವ ವೇದವಿರುದವಾದ್ಧ ಮತವು ಸಮಸ್ತ ಭಾರತವರ್ಷದಲ್ಲಿಯೂ ಪ್ರಸರಿಸಿದ್ದಿತೋ, ಮತ್ತು ಯಾವುದನ್ನು **ಅಶೋಕನು** ಅಂಗೀಕರಿಸಿದ್ದನೋ, ಮತ್ತು ಸಂಪ್ರತಿ ಮಹಾರಾಜರು* ಹೇಳುತ್ತಾರೋ, ಅದೇ **ಬೌದ್ಧ ಮತವೆಂದು ನಮ್ಮ ಆಶಯ. ಜೈನರು ಆದರಿಂದ ಯಾವ ರೀತಿಯಿಂದಲೂ ಹೊರಬರಲಾರರು !**

"ಯಾವುದರಿಂದ **'ಜೈನ'** ಶಬ್ದ ಹೊರಟಿತೋ, ಆ **'ಜಿನ'**, ಮತ್ತು ಯಾವುದರಿಂದ 'ಬೌದ್ಧ' ಶಬ್ದ ಹೊರಟಿತೋ, ಆ 'ಬುದ್ಧ' ಎರಡೂ ಪರ್ಯಾಯ ವಾಚಕ ಶಬ್ದಗಳಾಗಿವೆ. ಕೋಶದಲ್ಲಿ† ಎರಡಕ್ಕೂ ಒಂದೇ ಅರ್ಥ ಬರೆದಿದ್ದಾರೆ.

"ಮತ್ತು ಗೌತಮನನ್ನು ಇಬ್ಬರೂ ಒಪ್ಪಿಕೊಳ್ಳುತ್ತಾರೆ. ಇಲ್ಲದಿದ್ದರೆ, **'ದೀಪವಂಶ'** ಈ ಮೊದಲಾದ ಬೌದ್ಧ ಗ್ರಂಥಗಳಲ್ಲಿ **'ಶಾಕ್ಯಮುನಿ ಗೌತಮ** ಬುದ್ಧ'ನನ್ನು ಅನೇಕಸಾರಿ **'ಮಹಾವೀರ'**, ಎಂಬ ಹೆಸರಿನಿಂದಲೇ [ಏಕೆ] ನಿರ್ದೇಶಿಸುತ್ತಿದ್ದರು ? ಆಯಿತು ! ಅವರ ಕಾಲದಲ್ಲಿ ಅವರ ಮತ ಒಂದೇ ಇದ್ದಿರಬಹುದು !

**"ನಾವು 'ಜೈನ', ಎಂದು ಬರೆಯುದೇ, ಗೌತಮನ ಮತದವರನ್ನು 'ಬೌದ್ಧರು', ಎಂದು ಬರೆದಿರುವುದರ ಉದ್ದೇಶ್ಯ, ಬೇರೆ ದೇಶದವರು 'ಬೌದ್ಧರು', ಎಂಬ ಹೆಸರಿನಿಂದ ಬರೆದಿರುವುದಿಷ್ಟೇ ಆಗಿದೆ!"**

### ('ಬೌದ್ಧರು ಮತ್ತು ಜೈನರು ಒಂದೇ', ಎಂಬುದು 'ಅಮರಕೋಶದ' ಮತವೂ ಕೂಡ)

ಹೀಗೆಯೇ, **'ಅಮರಕೋಶ'**ದಲ್ಲಿಯೂ ಬರೆದಿದ್ದಾರೆ:—

**ಸರ್ವಜ್ಞಃ ಸುಗತೋ ಬುದ್ಧೋ ಧರ್ಮರಾಜಸ್ತಥಾಗತಃ ।**
**ಸಮಂತಭದ್ರೋ ಭಗವಾನ್ ಮಾರಜಿಲ್ಲೋಕಜಿಜ್ಜಿನಃ ॥1॥**

---

*ಎಂದರೆ, ಸ್ವಾಮೀ ದಯಾನಂದ ಸರಸ್ವತಿಗಳು—ಸಂ.

†ಎಂದರೆ, 'ಅಮರಕೋಶ' ಅಥವಾ ನಾಮಲಿಂಗಾನುಶಾಸನ ಶಬ್ದಕೋಶ.—ಸಂ.

**ಷಡಭಿಜ್ಞೋ ದಶಬಲೋऽದ್ವಯವಾದೀ ವಿನಾಯಕಃ ।**
**ಮುನೀಂದ್ರಃ ಶ್ರೀಘನಃ ಶಾಸ್ತಾ ಮುನಿಃ ಶಾಕ್ಯಮುನಿಸ್ತು ಯಃ ॥2॥**
**ಸ ಶಾಕ್ಯಸಿಂಹಃ ಸರ್ವಾರ್ಥಃ ಸಿದ್ಧಃ ಶೌದ್ಧೋದನಿಶ್ಚ ಸಃ ।**
**ಗೌತಮಶ್ಚಾರ್ಕಬಂಧುಶ್ಚ ಮಾಯಾದೇವೀಸುತಶ್ಚ ಸಃ ॥3॥**

**[ಅಮರಕೋಶಃ-1.1.8.10]**

ಈಗ ನೋಡಿರಿ ! ಬುದ್ಧ, [ಹಾಗೂ] ಜಿನ; ಮತ್ತು ಬೌದ್ಧ, [ಹಾಗೂ] ಜೈನ ಒಬ್ಬನದೇ ಹೆಸರು ಅಹುದೋ, ಅಲ್ಲವೋ ?

**ಅಮರಸಿಂಹನೂ* ಕೂಡ, ಬುದ್ಧ-ಜಿನ ಒಬ್ಬನೇ, ಎಂದು ಬರೆಯುವಾಗ ವೈಮರೆತನೇನು ?**

ಯಾವ ಅವಿದ್ವಾಂಸರಾದ ಜೈನರಿದ್ದಾರೋ, ಅವರಂತೂ ತಮ್ಮದನ್ನೂ ಅರಿಯರು ; ಬೇರೆಯವರದನ್ನೂ ಅರಿಯರು ! ಕೇವಲ ಹಠಮಾತ್ರದಿಂದ, ಒದರುತ್ತಾ ಇರುತ್ತಾರೆ! ಆದರೆ, **ಜೈನರಲ್ಲಿ ಯಾರು ವಿದ್ವಾಂಸರಿದ್ದಾರೋ, ಅವರೆಲ್ಲರೂ 'ಬುದ್ಧ' ಮತ್ತು 'ಜಿನ', ಹಾಗೂ 'ಬೌದ್ಧ' ಮತ್ತು 'ಜೈನ' ಪರ್ಯಾಯವಾಚಕಗಳೆಂದು ಬಲ್ಲರು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ!**

## (ಜೈನರ ಇನ್ನಷ್ಟು ಸಿದ್ಧಾಂತಗಳು)



ಜೈನರು—

'ಜೀವನೇ ಪರಮೇಶ್ವರನಾಗಿ ಹೋಗುತ್ತಾನೆ', ಎಂದು ಹೇಳುತ್ತಾರೆ.

ಅವರು ತಮ್ಮ ತೀರ್ಥಂಕರರನ್ನೇ **'ಕೇವಲೀ'**, **'ಮುಕ್ತಿಪ್ರಾಪ್ತರು'** ಮತ್ತು **'ಪರಮೇಶ್ವರ'**, ಎಂದು ಅಂಗೀಕರಿಸುತ್ತಾರೆ.

'ಅನಾದಿ ಪರಮೇಶ್ವರನು ಯಾವನೂ ಇಲ್ಲ'. **'ಸರ್ವಜ್ಞ'**, **'ವೀತರಾಗ'**, **'ಅರ್ಹನ್'**, **'ಕೇವಲೀ'**, **'ತೀರ್ಥಕೃತ್'**, **'ಜಿನ'**-ಈ ಆರೂ ನಾಸ್ತಿಕರ† ದೇವತೆಗಳ ಹೆಸರುಗಳಾಗಿವೆ.

---

*'ಅಮರಕೋಶ'ದ ರಚಯಿತೃ.—ಸಂ.

†ಎಂದರೆ, ಜೈನರ.—ಯು.ಮೀ.

## (ಜೈನಪ್ರೋಕ್ತ ಆದಿದೇವನ ಸ್ವರೂಪ)

ಆದಿದೇವನ ಸ್ವರೂಪವನ್ನು ಚಂದ್ರಸೂರಿಯು "ಆಪ್ತನಿಶ್ಚಯಾಲಂಕಾರ", ಎಂಬ ಗ್ರಂಥದಲ್ಲಿ ಬರೆದಿದ್ದಾನೆ:—

**ಸರ್ವಜ್ಞೋ ವೀತರಾಗಾದಿದೋಷಸ್ತ್ರೈಲೋಕ್ಯಪೂಜಿತಃ ।**
**ಯಥಾಸ್ಥಿತಾರ್ಥವಾದೀ ಚ ದೇವೋಽರ್ಹನ್ ಪರಮೇಶ್ವರಃ ॥1॥**

## (ಸರ್ವಜ್ಞ ಈಶ್ವರನ ಖಂಡನೆಗಾಗಿ ಜೈನರ ಕುತರ್ಕ)

ಹಾಗೆಯೇ ತೌತಾತಿತರೂ* ಕೂಡ, ಬರೆದಿದ್ದಾರೇನೆಂದರೆ:—

**ಸರ್ವಜ್ಞೋ ದೃಶ್ಯತೇ ತಾವನ್ನೇದಾನೀಮಸ್ಮದಾದಿಭಿಃ ।**
**ದೃಷ್ಟೋ ನ ಚೈಕದೇಶೋಽಸ್ತಿ ಲಿಂಗಂ ವಾ ಯೋಽನುಮಾಪಯೇತ್ ॥2॥**
**ನ ಚಾಗಮವಿಧಿಃ ಕಶ್ಚಿನ್ನಿತ್ಯಸರ್ವಜ್ಞಬೋಧಕಃ ।**
**ನ ಚ ತತ್ರಾರ್ಥವಾದಾನಾಂ ತಾತ್ಪರ್ಯಮಪಿ ಕಲ್ಪತೇ ॥3॥**
**ನ ಚಾನ್ಯಾರ್ಥಪ್ರಧಾನೈಸ್ತೈಸ್ತದಸ್ತಿತ್ವಂ ವಿಧೀಯತೇ ।**
**ನ ಚಾನುವದಿತುಂ ಶಕ್ಯಃ ಪೂರ್ವಮನ್ಯೈರಬೋಧಿತಃ† ॥4॥**

ಯಾವನು ರಾಗವೇ ಮೊದಲಾದ ದೋಷಗಳಿಂದ ರಹಿತನೂ, ತ್ರೈಲೋಕ್ಯ ಪೂಜನೀಯನೂ, ಪದಾರ್ಥಗಳನ್ನು ಯಥಾವತ್ತಾಗಿ ಹೇಳುವವನೂ, ಸರ್ವಜ್ಞನೂ ಆದ 'ಅರ್ಹನ್' ದೇವನಿದ್ದಾನೋ, ಅವನೇ ಪರಮೇಶ್ವರನಾಗಿದ್ದಾನೆ. [1]

ನಾವು ಈ ಸಮಯದಲ್ಲಿ ಪರಮೇಶ್ವರನನ್ನು ನೋಡದೇ ಇರುವ ಕಾರಣ, ಸರ್ವಜ್ಞನೂ, ಅನಾದಿಯೂ ಆದ ಯಾವ ಪರಮೇಶ್ವರನೂ ಪ್ರತ್ಯಕ್ಷನಾಗಿಲ್ಲ ! ಈಶ್ವರನ [ಇರುವಿಕೆ]ಯಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲದಿರುವಾಗ, ಅನುಮಾನವೂ ಅನ್ವಯಿಸಲಾರದು. ಏಕೆಂದರೆ, ಏಕದೇಶ ಪ್ರತ್ಯಕ್ಷವಿಲ್ಲದೇ, ಅನುಮಾನವೂ ಆಗಲಾರದು. [2]

---

*ತುತಾತಿತ, ಎಂಬುದು 'ಕುಮಾರಿಲಭಟ್ಟ'ನ ಮತ್ತೊಂದು ಹೆಸರು. ಕುಮಾರಿಲನು 'ಮೀಮಾಂಸಾ-ವಾರ್ತಿಕ'ವನ್ನು ಬರೆದ ಪ್ರಸಿದ್ಧ ಮೀಮಾಂಸಕ. ಅವನ ಅನುಯಾಯಿಗಳು 'ತೌತಾತಿತ'ರು.—ಅನು.

†ಸರ್ವದರ್ಶನಸಂಗ್ರಹ:-ಆರ್ಹತದರ್ಶನ, ಪುಟ 56—ಯು. ಮೀ.

ಪ್ರತ್ಯಕ್ಷಾನುಮಾನಗಳಿಲ್ಲದ ಮೇಲೆ ಆಗಮ, ಎಂದರೆ ನಿತ್ಯನೂ, ಅನಾದಿಯೂ, ಸರ್ವಜ್ಞನೂ ಆದ ಪರಮಾತ್ಮನ ಬೋಧಕವಾದ **ಶಬ್ದಪ್ರಮಾಣವೂ** ಕೂಡ, ಇರಲಾರದು. ಮೂರು ಪ್ರಮಾಣಗಳೂ ಇಲ್ಲವಾದುದರಿಂದ '**ಅರ್ಥವಾದ**', ಎಂದರೆ ಸ್ತುತಿ, ನಿಂದೆ; **ಪರಕೃತಿ**, ಎಂದರೆ ಅನ್ಯನ ಚರಿತ್ರದ ವರ್ಣನ; ಮತ್ತು **ಪುರಾಕಲ್ಪ**, ಎಂದರೆ ಇತಿಹಾಸದ ತಾತ್ಪರ್ಯವೂ ಕೂಡ ಅನ್ವಯಿಸಲಾರದು. [3]

ಮತ್ತು '**ಅನ್ಯಾರ್ಥಪ್ರಧಾನ**', ಎಂದರೆ, ಬಹುವ್ರೀಹಿ ಸಮಾಸದಂತೆ,* ಪರೋಕ್ಷವಾಗಿ ಪರಮಾತ್ಮನ ಸಿದ್ಧಿಯ ವಿಧಾನವೂ ಆಗದು. ಮತ್ತೆ, ಉಪದೇಶಕರಿಂದ, ತಾವು ಆಲಿಸದಿರುವ ಈಶ್ವರನ ಬಗೆಗೆ ಅನುವಾದವಾಗಬಲ್ಲದಾದರೂ ಹೇಗೆ? [4]

### (ಈಶ್ವರನಿಲ್ಲದೇ, 'ಅರ್ಹನ್'ರ ತಂದೆ-ತಾಯಿಗಳ ರಚನೆ ಯಾರು ಮಾಡಿದರು?)

**ಇದರ ಪ್ರತ್ಯಾಖ್ಯಾನ, ಎಂದರೆ ಖಂಡನ:—**

ಅನಾದಿಯಾದ ಈಶ್ವರನು ಇಲ್ಲದೇ ಹೋಗಿದ್ದಲ್ಲಿ, '**ಅರ್ಹನ್**' ದೇವನ ಮಾತಾಪಿತೃಗಳೇ ಮೊದಲಾದವರ ಶರೀರದ ಪಡಿಯಚ್ಚನ್ನು† ಯಾವನು ನಿರ್ಮಿಸುತ್ತಿದ್ದನು?

ಸಂಯೋಗಕರ್ತೃವಿಲ್ಲದೇ, ಯಥಾಯೋಗ್ಯವಾಗಿ ಸರ್ವಾವಯವ ಸಂಪನ್ನವೂ, ಯಥೋಚಿತವಾದ ಕಾರ್ಯವನ್ನು ಮಾಡುವುದರಲ್ಲಿ ಉಪಯುಕ್ತವೂ ಆದ ಶರೀರವು ನಿರ್ಮಿತವೇ ಆಗಲಾರದು! ಮತ್ತು ಯಾವ ಪದಾರ್ಥಗಳಿಂದ ಶರೀರವಾಗಿದೆಯೋ, ಅವು ಜಡವಾಗಿರುವುದರಿಂದ. ಸ್ವತಃ ಈ ರೀತಿಯ ಉತ್ತಮ ರಚನಾಯುಕ್ತವಾದ ಶರೀರವಾಗಿ ರೂಪುಗೊಳ್ಳಲಾರವು! ಏಕೆಂದರೆ, ಅವುಗಳಲ್ಲಿ ಹೇಗೆ ಆಗುವುದು ಯೋಗ್ಯವೋ, ಹಾಗೆ ರೂಪುಗೊಳ್ಳುವ ಜ್ಞಾನವೇ ಇಲ್ಲ!

### (ರಾಗಾದಿ ದೋಷಯುಕ್ತ ಜೀವನು 'ಈಶ್ವರ'ನಾಗಲಾರನು)

**ಮತ್ತು ಯಾವನು ರಾಗ ಮೊದಲಾದ ದೋಷಗಳಿಂದ ಸಹಿತನಾಗಿದ್ದು, ಆಮೇಲೆ ದೋಷರಹಿತನಾಗುತ್ತಾನೋ, ಅವನು ಎಂದಿಗೂ 'ಈಶ್ವರ'ನಾಗಲಾರನು!** ಏಕೆಂದರೆ, ಯಾವ ನಿಮಿತ್ತದಿಂದ ಅವನು ರಾಗ ಮೊದಲಾದುವುಗಳಿಂದ ಮುಕ್ತನಾಗುತ್ತಾನೋ, ಆ ನಿಮಿತ್ತವು ಬಿಟ್ಟು ಹೋಗುವುದರಿಂದ, ಅದರ ಕಾರ್ಯವಾದ ಮುಕ್ತಿಯೂ ಕೂಡ, ಅನಿತ್ಯವಾಗಿರುವುದು.

---

*ಬಳಸಿದ ಶಬ್ದಗಳಿಂದ ಸೂಚಿತವಾಗುವ ವಸ್ತುಗಳನ್ನು ಬಿಟ್ಟು, ಬೇರೆಯದೇ ಆದ ವಸ್ತುವನ್ನು ಸೂಚಿಸುವ, 'ಚತುರ್ಭುಜ, ತ್ರಿನೇತ್ರ' ಮೊದಲಾದ ಶಬ್ದಗಳು. – ಅನು.

†ಆಕೃತಿಯನ್ನು.—ಅನು.

## (ಅಲ್ಪ ಮತ್ತು ಅಲ್ಪಜ್ಞ ಜೀವನು ಸರ್ವವ್ಯಾಪಕ ಮತ್ತು ಸರ್ವಜ್ಞನಾಗುವುದಿಲ್ಲ)

ಯಾವನು ಅಲ್ಪನೂ, ಅಲ್ಪಜ್ಞನೂ ಆಗಿದ್ದಾನೋ, ಅವನು ಎಂದಿಗೂ ಸರ್ವವ್ಯಾಪಕನೂ ಮತ್ತು ಸರ್ವಜ್ಞನೂ ಆಗಲಾರನು. ಏಕೆಂದರೆ, ಜೀವನ ಸ್ವರೂಪವು ಏಕದೇಶೀಯವೂ, ಮತ್ತು ಪರಿಮಿತಗುಣ-ಕರ್ಮ-ಸ್ವಭಾವಯುಕ್ತವೂ ಆಗಿದೆ. ಅವನು ಸಮಸ್ತ ವಿದ್ಯೆಗಳಲ್ಲಿಯೂ, ಎಲ್ಲ ರೀತಿಯಿಂದಲೂ, ಯಥಾರ್ಥ ವಕ್ತೃವಾಗಲಾರನು.

ಆದುದರಿಂದ, ನಿಮ್ಮ ತೀರ್ಥಂಕರು ಎಂದಿಗೂ ಪರಮೇಶ್ವರರಾಗಲಾರರು! [1]

## (ಯೋಗಾಭ್ಯಾಸದಿಂದ ಪರಮಾತ್ಮನ ಪ್ರತ್ಯಕ್ಷವೂ ಆಗುತ್ತದೆ)

ನೀವು ಯಾವ ಪದಾರ್ಥಗಳು ಪ್ರತ್ಯಕ್ಷವಾಗಿವೆಯೋ, ಅವುಗಳನ್ನು ಮಾತ್ರ ಅಂಗೀಕರಿಸುತ್ತೀರೋ ? ಅಪ್ರತ್ಯಕ್ಷವಾಗಿರುವುದನ್ನು [ಅಂಗೀಕರಿಸುವು]ದಿಲ್ಲವೋ ?

ಹೇಗೆ, ಕಿವಿಯಿಂದ ರೂಪದ ಮತ್ತು ಕಣ್ಣಿನಿಂದ, ಶಬ್ದದ ಗ್ರಹಿಕೆಯಾಗಲಾರದೋ, ಹಾಗೆಯೇ ಅನಾದಿ ಪರಮಾತ್ಮ [ನಿದ್ದಾನೆ.* ಅವನನ್ನು] ನೋಡುವ ಸಾಧನ, [ಎಂದರೆ] ಶುದ್ಧವಾದ ಅಂತಃಕರಣ; ವಿದ್ಯೆ ಮತ್ತು ಯೋಗಾಭ್ಯಾಸದಿಂದ ಪವಿತ್ರಾತ್ಮನು ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡುತ್ತಾನೆ !

ಹೇಗೆ ಓದದೇ ಇದ್ದರೆ, ವಿದ್ಯೆಯು ಪ್ರಯೋಜನಗಳ ಪ್ರಾಪ್ತಿಯಾಗುವುದಿಲ್ಲವೋ, ಹಾಗೆಯೇ ಯೋಗಾಭ್ಯಾಸ ಮತ್ತು ಜ್ಞಾನವಿಲ್ಲದೇ, ಪರಮಾತ್ಮನೂ ಕೂಡ, ಕಾಣಿಸುವುದಿಲ್ಲ !

## (ರಚನಾವಿಶೇಷ ಲಕ್ಷಣಗಳಿಂದ ಈಶ್ವರನ ಪ್ರತ್ಯಕ್ಷವಾಗುತ್ತದೆ)

ಹೇಗೆ ಭೂಮಿಯ ರೂಪವೇ ಮೊದಲಾದ ಗುಣಗಳನ್ನು ಮಾತ್ರವೇ ನೋಡಿ, ತಿಳಿದು, ಗುಣಗಳಿಂದ ಅವ್ಯವಹಿತವಾದ† ಸಂಬಂಧದಿಂದ, ಪೃಥಿವಿಯು ಪ್ರತ್ಯಕ್ಷವಾಗುತ್ತದೋ, ಹಾಗೆ ಈ ಸೃಷ್ಟಿಯಲ್ಲಿ ಪರಮಾತ್ಮನ ರಚನಾವಿಶೇಷವಾದ ಚಿಹ್ನೆಯನ್ನು ನೋಡಿದಲ್ಲಿ ಪರಮಾತ್ಮನು ಪ್ರತ್ಯಕ್ಷನಾಗುತ್ತಾನೆ !

ಮತ್ತು ಪಾಪಾಚರಣದ ಇಚ್ಛೆಯುಂಟಾದ ಸಮಯದಲ್ಲಿ ಯಾವ ಭಯ, ಸಂಶಯ, ಲಜ್ಜೆ ಉತ್ಪನ್ನವಾಗುತ್ತವೋ, ಅವು ಅಂತರ್ಯಾಮಿಯಾದ ಪರಮಾತ್ಮನ

---

*ಎಂದರೆ, ಅವನನ್ನು ಈ ಇಂದ್ರಿಯಗಳಿಂದ ನೋಡಲಾಗದು, ಎಂದರ್ಥ.—ಅನು.

†ಅಡ್ಡಿ ಅಥವಾ ಮರೆಯಿಲ್ಲದ.—ಅನು.

ಕಡೆಯಿಂದ ಆಗುತ್ತವೆ. ಇದರಿಂದಲೂ ಕೂಡ, ಪರಮಾತ್ಮನು ಪ್ರತ್ಯಕ್ಷ ನಾಗುತ್ತಾನೆ !

[ಮತ್ತೆ], ಅನುಮಾನ [ಪ್ರಮಾಣ] ಅನ್ವಯಿಸುವುದರಲ್ಲಿ ಸಂದೇಹವೇನು ತಾನೇ ಆದೀತು ? [2]

**(ಪ್ರತ್ಯಕ್ಷ ಮತ್ತು ಅನುಮಾನ ಇರುವುದರಿಂದ, ಶಬ್ದ ಪ್ರಮಾಣವೂ ಈಶ್ವರನಲ್ಲಿದೆ)**

ಮತ್ತು ಪ್ರತ್ಯಕ್ಷ ಮತ್ತು ಅನುಮಾನಗಳು ಅನ್ವಯಿಸುವುದರಿಂದ, 'ಆಗಮ' ಪ್ರಮಾಣವೂ ಕೂಡ, ನಿತ್ಯನೂ, ಅನಾದಿಯೂ, ಸರ್ವಜ್ಞನೂ ಆದ ಈಶ್ವರನ ಬೋಧಕವಾಗುತ್ತದೆ. ಆದುದರಿಂದ, ಈಶ್ವರನ ವಿಷಯದಲ್ಲಿ ಶಬ್ದ ಪ್ರಮಾಣವೂ ಇದೆ !

ಯಾವಾಗ ಮೂರು ಪ್ರಮಾಣಗಳಿಂದಲೂ ಈಶ್ವರನನ್ನು ಜೀವನು ತಿಳಿದು ಕೊಳ್ಳಬಲ್ಲನೋ, ಆಗ 'ಅರ್ಥವಾದ', ಎಂದರೆ ಪರಮೇಶ್ವರನ ಗುಣಗಳ ಪ್ರಶಂಸೆಯನ್ನು ಮಾಡುವುದೂ ಕೂಡ, ಯಥಾರ್ಥವಾಗಿ ಅನ್ವಯಿಸುತ್ತದೆ.

ಏಕೆಂದರೆ, ಯಾವ ಪದಾರ್ಥಗಳು ನಿತ್ಯವಾಗಿರುತ್ತವೋ, ಅವುಗಳ ಗುಣ-ಕರ್ಮ-ಸ್ವಭಾವಗಳೂ ಕೂಡ, ನಿತ್ಯವಾಗಿರುತ್ತವೆ ! ಅವುಗಳ ಪ್ರಶಂಸೆಯನ್ನು ಮಾಡುವುದರಲ್ಲಿ ಪ್ರತಿಬಂಧಕವಾವುದೂ ಇಲ್ಲ. [3]

**(ಸೃಷ್ಟಿರಚನೆಯಂತಹ ಕಾರ್ಯ ಈಶ್ವರನಿಲ್ಲದೇ ಅಸಂಭವ)**

ಹೇಗೆ ಮಾನವರಲ್ಲಿ ಕರ್ತೃವಿಲ್ಲದೇ, ಯಾವ ಕಾರ್ಯವೂ ಆಗುವುದಿಲ್ಲವೋ, ಹಾಗೆಯೇ ಕರ್ತೃವಿಲ್ಲದೇ, ಈ ಮಹತ್ಕಾರ್ಯ*ದ ಆಗುವಿಕೆಯು ಸರ್ವಥಾ ಅಸಂಭವ ವಾಗಿದೆ. ಸ್ಥಿತಿ ಹೀಗಿರುವಾಗ, ಈಶ್ವರನ ಇರುವಿಕೆಯಲ್ಲಿ ಮೂಢನಿಗೂ ಕೂಡ, ಸಂದೇಹ ಉಂಟಾಗಲಾರದು !

ಯಾವಾಗ ಪರಮಾತ್ಮನ ಬಗೆಗೆ ಉಪದೇಶಗಳನ್ನು ಮಾಡುವವರಿಂದ ಆಲಿಸುವರೋ, ಆ ನಂತರ, ಅದರ ಅನುವಾದವನ್ನು† ಮಾಡುವುದು ಕೂಡ, ಸರಳ ವಾಗಿರುತ್ತದೆ. [4]

---

*ಎಂದರೆ, ಸೃಷ್ಟಿರಚನೆ-ಪಾಲನೆ-ಸಂಹಾರ.—ಸಂ.

†ಎಂದರೆ, ಪ್ರವಚನವನ್ನು—ಸಂ.

ಈ ಕಾರಣದಿಂದ, ಪ್ರತ್ಯಕ್ಷ ಮೊದಲಾದ ಪ್ರಮಾಣಗಳ [ಅಭಾವದ] ನೆಪ ದಿಂದ, ಈಶ್ವರನ [ಅಸ್ತಿತ್ವದ] ಖಂಡನವನ್ನು ಮಾಡುವುದೇ ಮೊದಲಾದ ಜೈನರ ವ್ಯವಹಾರವು ಅನುಚಿತವಾಗಿದೆ !

### (ಅನಾದಿ, ನಿತ್ಯ ಪದಾರ್ಥಗಳಲ್ಲಿ ಅನ್ಯೋಽನ್ಯಾಶ್ರಯ ದೋಷ ಬರುವುದಿಲ್ಲ)

ಪ್ರಶ್ನೆ:—

ಅನಾದೇರಾಗಮಸ್ಯಾರ್ಥೋ ನ ಚ ಸರ್ವಜ್ಞ ಆದಿಮಾನ್ ।
ಕೃತ್ರಿಮೇಣ ತ್ವಸತ್ಯೇನ ಸ ಕಥಂ ಪ್ರತಿಪಾದ್ಯತೇ ॥1॥
ಅಥ ತದ್ವಚನೇನೈವ ಸರ್ವಜ್ಞೋಽನ್ಯೈಃ ಪ್ರತೀಯತೇ ।
ಪ್ರಕಲ್ಪೇತ ಕಥಂ ಸಿದ್ಧಿರನ್ಯೋಽನ್ಯಾಶ್ರಯಯೋಸ್ತಯೋಃ ॥2॥
ಸರ್ವಜ್ಞೋಕ್ತತಯಾ ವಾಕ್ಯಂ ಸತ್ಯಂ ತೇನ ತದಸ್ತಿತಾ ।
ಕಥಂ ತದುಭಯಂ ಸಿಧ್ಯೇತ್ಸಿದ್ಧಮೂಲಾಂತರಾದೃತೇಃ ॥3॥

[ಸರ್ವದರ್ಶನ ಸಂಗ್ರಹಃ-ಆರ್ಹತ ದರ್ಶನ]

ಮಧ್ಯೆ ಸರ್ವಜ್ಞನಾದವನು[1] ಅನಾದಿಯಾದ [ಆಗಮ]ಶಾಸ್ತ್ರದ ಪ್ರತಿಪಾದನ ವಿಷಯವಾಗಲಾರನು. ಏಕೆಂದರೆ, ರಚಿಸಲ್ಪಟ್ಟ ಅಸತ್ಯವಚನದಿಂದ[2] ಅವನ ಪ್ರತಿ ಪಾದನ ಆಗಬಲ್ಲುದಾದರೂ ಹೇಗೆ ? [1]

ಮತ್ತು ಪರಮೇಶ್ವರನ ವಚನದಿಂದಲೇ, ಪರಮೇಶ್ವರನು ಸಿದ್ಧನಾಗುತ್ತಾನೆ ಯಾದರೆ, ಅನಾದಿ ಈಶ್ವರನಿಂದ ಅನಾದಿ ಶಾಸ್ತ್ರದ ಸಿದ್ಧಿ, [ಮತ್ತು] ಅನಾದಿ ಶಾಸ್ತ್ರದಿಂದ ಅನಾದಿ ಈಶ್ವರನ ಸಿದ್ಧಿ, ಎಂಬ ಅನ್ಯೋಽನ್ಯಾಶ್ರಯದೋಷ ಬರುತ್ತದೆ. [2]

ಏಕೆಂದರೆ, ಸರ್ವಜ್ಞನ ಕಥನವಾದುದರಿಂದ, ಆ ವೇದವಾಕ್ಯವನ್ನು ಸತ್ಯ ವೆಂದೂ, ಮತ್ತು ಅದೇ ವೇದವಚನದಿಂದ ಈಶ್ವರನ ಸಿದ್ಧಿಯನ್ನೂ ಮಾಡುತ್ತೀರಿ ! ಇದು ಹೇಗೆ ಸಿದ್ಧವಾದೀತು ? ಆ ಶಾಸ್ತ್ರದ, ಮತ್ತು ಪರಮೇಶ್ವರನ ಸಿದ್ಧಿಗಾಗಿ

1. ಎಂದರೆ ಮೊದಲು ಸರ್ವಜ್ಞನಾಗಿರದೇ ಸಾಧನಾನಂತರ, ಸರ್ವಜ್ಞನಾದವನು – ಅನು.

2. ಯಾವುದು ಅನಾದಿಯಲ್ಲವೋ, ಅದು ರಚಿತವಾದುದು. ರಚಿತವಾದ ವಚನ ನಿತ್ಯ ವಲ್ಲದ ಕಾರಣ ಅಸತ್ಯ. —ಅನು.

ಯಾವುದಾದರೂ ಮೂರನೆಯ ಪ್ರಮಾಣವು ಬೇಕು. ಹೀಗೆ ಅಂಗೀಕರಿಸದಿದ್ದರೆ, **ಅನವಸ್ಥಾದೋಷ*** ಬರುವುದು. [3]

**(ಈಶ್ವರಪ್ರಣೀತ ವೇದಗಳಲ್ಲಿ ಅನವಸ್ಥಾದೋಷ ಬರುವುದಿಲ್ಲ)**

ಉತ್ತರ:—ನಾವು ಪರಮೇಶ್ವರನನ್ನೂ, ಮತ್ತು ಪರಮೇಶ್ವರನ ಗುಣ-ಕರ್ಮ-ಸ್ವಭಾವಗಳನ್ನೂ ಅನಾದಿಯೆಂದು ಅಂಗೀಕರಿಸುತ್ತೇವೆ. ಅನಾದಿ-ನಿತ್ಯ ಪದಾರ್ಥಗಳಲ್ಲಿ ಅನ್ಯೋಽನ್ಯಾಶ್ರಯದೋಷ ಬರಲಾರದು !

**ಹೇಗೆ, ಕಾರ್ಯದಿಂದ ಕಾರಣದ ಜ್ಞಾನವೂ, ಮತ್ತು ಕಾರಣದಿಂದ ಕಾರ್ಯದ ಬೋಧವೂ ಉಂಟಾಗುತ್ತದೋ; [ಮತ್ತು] ಹೇಗೆ, ಕಾರ್ಯದಲ್ಲಿ ಕಾರಣದ ಸ್ವಭಾವವೂ, ಮತ್ತು ಕಾರಣದಲ್ಲಿ ಕಾರ್ಯದ ಸ್ವಭಾವವೂ ನಿತ್ಯವಾಗಿರುತ್ತದೋ, ಹಾಗೆ ಪರಮೇಶ್ವರನೂ ಮತ್ತು ಪರಮೇಶ್ವರನ ಅನಂತ ವಿದ್ಯೆಯೇ ಮೊದಲಾದ ಗುಣಗಳೂ ನಿತ್ಯವಾಗಿರುವುದರಿಂದ, ಈಶ್ವರಪ್ರಣೀತವಾದ ವೇದದಲ್ಲಿ ಅನವಸ್ಥಾ ದೋಷವು ಬರುವುದಿಲ್ಲ.** [1,2,3]

**(ತಾಯಿ-ತಂದೆಗಳಿಂದ ಉತ್ಪನ್ನರಾದ ತೀರ್ಥಂಕರರು ಎಂದಿಗೂ ಈಶ್ವರರಾಗುವುದಿಲ್ಲ)**

ಮತ್ತು, ನೀವು ತೀರ್ಥಂಕರರನ್ನು ಪರಮೇಶ್ವರರೆಂದು ಅಂಗೀಕರಿಸುತ್ತೀರಿ ! ಇದು ಎಂದಿಗೂ ಹೊಂದಿಕೊಳ್ಳಲಾರದು. ಏಕೆಂದರೆ, ಮಾತಾಪಿತೃಗಳಿಲ್ಲದಿದ್ದರೆ, ಅವರಿಗೆ ಶರೀರವೇ ಪ್ರಾಪ್ತವಾಗುವುದಿಲ್ಲ! ಎಂದ ಮೇಲೆ, ಅವರು ತಪಶ್ಚರ್ಯೆ, ಜ್ಞಾನ ಮತ್ತು ಮುಕ್ತಿಯನ್ನು ಹೇಗೆ ತಾನೇ ಪಡೆಯಬಲ್ಲರು ?

ಹಾಗೆಯೇ, ಸಂಯೋಗದ ಆದಿಯು ಅವಶ್ಯವಾಗಿ ಇರುತ್ತದೆ. ಏಕೆಂದರೆ, **ವಿಯೋಗವಿಲ್ಲದೇ, ಸಂಯೋಗವೇ ಆಗಲಾರದು! ಆದುದರಿಂದ, ಅನಾದಿಯೂ, ಸೃಷ್ಟಿಕರ್ತೃವೂ ಆದ ಪರಮಾತ್ಮನನ್ನು ಅಂಗೀಕರಿಸಿರಿ !**

**(ಪರಿಚ್ಛಿನ್ನ ಸಾಮರ್ಥ್ಯವನ್ನುಳ್ಳ ಅಲ್ಪಜ್ಞ ಜೀವನನ್ನು ಈಶ್ವರನೆಂದು ಅಂಗೀಕರಿಸುವುದು ತಪ್ಪು)**

ನೋಡಿರಿ ! ಯಾವನು ಎಷ್ಟೇ ದೊಡ್ಡ ಸಿದ್ಧನೇ **ಆಗಿರಲೀ, ಆದರೂ ಕೂಡ, ಶರೀರ ಮೊದಲಾದುವುಗಳ ರಚನೆಯನ್ನು ಪೂರ್ಣತಃ ತಿಳಿದುಕೊಳ್ಳಲಾರನು !**

---

*ಅದರಿಂದ ಇದೋ; ಇದರಿಂದ ಅದೋ; ಮೂರನೆಯದರಿಂದ ಇವೆರಡೋ-ಎಂಬ ಸಂಶಯಾಸ್ಪದವಾದ ನಿಲುವು; ಸಂದಿಗ್ಧ ಸ್ಥಿತಿ.—ಅನು.

ಯಾವಾಗ ಸಿದ್ಧ ಜೀವನು ಸುಷುಪ್ತಿ ಸ್ಥಿತಿಯಲ್ಲಿರುತ್ತಾನೋ, ಆಗ ಅವನಿಗೆ ಸ್ವಲ್ಪ ಅರಿವೂ ಕೂಡ ಇರುವುದಿಲ್ಲ. ಯಾವಾಗ ಜೀವನು ದುಃಖವನ್ನು ಹೊಂದುತ್ತಾನೋ, ಆಗ ಅವನ ಜ್ಞಾನವೂ ಕೂಡ, ಕಡಿಮೆಯಾಗಿ ಹೋಗುತ್ತದೆ!

ಇಂತಹ ಪರಿಚ್ಛಿನ್ನ ಸಾಮರ್ಥ್ಯವನ್ನುಳ್ಳ ಏಕದೇಶೀಯನನ್ನು ಈಶ್ವರನೆಂದು ಗ್ರಹಿಸುವುದು, ಭ್ರಾಂತಬುದ್ಧಿಯುಕ್ತರಾದ ಜೈನರನ್ನು ಬಿಟ್ಟರೆ, ಬೇರೆ ಯಾವನೂ ಅಂಗೀಕರಿಸುವುದಿಲ್ಲ!

'ತೀರ್ಥಂಕರರು ತಮ್ಮ ಮಾತಾಪಿತೃಗಳಿಂದ ಉದ್ಭವಿಸಿದರು', ಎಂದು ನೀವು ಹೇಳುವಿರಾದರೆ, ಅವರು* ಯಾರಿಂದ ಹುಟ್ಟಿದರು ? ಮತ್ತು ಅವರ ಮಾತಾ ಪಿತೃಗಳು ಯಾರಿಂದ ಜನಿಸಿದರು ? ಮತ್ತೆ, ಅವರ ಮಾತಾಪಿತೃಗಳೂ ಕೂಡ, ಯಾರಿಂದ ಉತ್ಪನ್ನರಾದರು ? ಈ ಮೊದಲಾದ ಅನವಸ್ಥಾದೋಷವು ಬರುವುದು.

## (ಆಸ್ತಿಕನ ಮತ್ತು ನಾಸ್ತಿಕನ ಸಂವಾದ)

ಇಲ್ಲಿಂದ ಮುಂದಕ್ಕೆ, "ಪ್ರಕರಣ ರತ್ನಾಕರ"ದ ದ್ವಿತೀಯ ಭಾಗ[ದಿಂದ] 'ಆಸ್ತಿಕ-ನಾಸ್ತಿಕ ಸಂವಾದ'ದ ಪ್ರಶ್ನೋತ್ತರಗಳನ್ನು† ಇಲ್ಲಿ ಬರೆಯುತ್ತೇವೆ. ಅದನ್ನು ದೊಡ್ಡ ದೊಡ್ಡ ಜೈನರು ತಮ್ಮ ಸಮ್ಮತಿಯಿಂದ ಅಂಗೀಕರಿಸಿದ್ದಾರೆ. ಮತ್ತು ಬೊಂಬಾಯಿಯಲ್ಲಿ ಮುದ್ರಣ ಮಾಡಿಸಿದ್ದಾರೆ.

## (ಈಶ್ವರನ ವ್ಯವಸ್ಥೆಯಿಂದಲೇ ಜೀವನ ಕರ್ಮಫಲ-ಭೋಗ)

**ನಾಸ್ತಿಕ:**—ಈಶ್ವರನ ಇಚ್ಛೆಯಿಂದ ಏನೂ ಆಗುವುದಿಲ್ಲ. ಏನೇನು ಆಗುತ್ತದೋ, ಅದೆಲ್ಲವೂ ಕರ್ಮದಿಂದ!

**ಆಸ್ತಿಕ:**—ಎಲ್ಲವೂ ಕರ್ಮದಿಂದ ಆಗುವುದಾದರೆ, ಕರ್ಮ ಯಾರಿಂದ ಆಗುತ್ತದೆ ?

---

*ಎಂದರೆ, ಮಾತಾಪಿತೃಗಳು.—ಸಂ.

†ಜೈನರು ತಮ್ಮನ್ನು ಆಸ್ತಿಕರೆಂದೂ, ಈಶ್ವರವಾದಿಗಳನ್ನು ನಾಸ್ತಿಕರೆಂದೂ ಕರೆಯುತ್ತಾರೆ. ಹಾಗೆಯೇ, ಈ 'ಪ್ರಕರಣ ರತ್ನಾಕರ'ದಲ್ಲಿ (ಪುಟ 177-211) ಈ ಸಂವಾದವಿದೆ. ಆದರೆ, ಋಷಿ ದಯಾನಂದರು 'ಸತ್ಯಾರ್ಥಪ್ರಕಾಶ'ದಲ್ಲಿ ಆ ಗ್ರಂಥದ ಉತ್ತರಪಕ್ಷ (ಆಸ್ತಿಕ) ವನ್ನು ಪೂರ್ವಪಕ್ಷ (ನಾಸ್ತಿಕ)ವಾಗಿಯೂ; ಮತ್ತು ಪೂರ್ವಪಕ್ಷ (ನಾಸ್ತಿಕ)ವನ್ನು ಉತ್ತರಪಕ್ಷ (ಆಸ್ತಿಕ)ವಾಗಿಯೂ ಪರಿವರ್ತಿಸಿ, ಸಂವಾದವನ್ನು ಸಂಕ್ಷೇಪಿಸಿ ಬರೆದಿದ್ದಾರೆ.

—ಸ್ವಾಮೀ ವೇದಾನಂದರ 'ಸತ್ಯಾರ್ಥ ಪ್ರಕಾಶ'-ಸಂಸ್ಕರಣ.

‘ಜೀವ ಮೊದಲಾದವರಿಂದ ಆಗುತ್ತದೆ’, ಎನ್ನುವಿರಾದರೆ, ಯಾವ ಕಿವಿಯೇ ಮೊದಲಾದ ಸಾಧನಗಳಿಂದ ಜೀವನು ಕರ್ಮ ಮಾಡುತ್ತಾನೋ, ಅವು ಯಾರಿಂದಾದುವು ?

‘ಅನಾದಿಕಾಲದಿಂದ ಮತ್ತು ಸ್ವಭಾವದಿಂದ ಆಗುತ್ತವೆ’, ಎಂದು ಹೇಳುವಿರಾದರೆ, ಅನಾದಿಯಾದುದರ ಬಿಟ್ಟು ಹೋಗುವಿಕೆ ಅಸಂಭವವಾಗಿ, ನಿಮ್ಮ ಮತದಲ್ಲಿ ಮುಕ್ತಿಗೆ ಅಭಾವ ಬರುವುದು.

‘ಪ್ರಾಗಭಾವದ[1] ಹಾಗೆ ಅನಾದಿಗಳೇ ಆದರೂ ಸಾಂತವಾಗಿರುತ್ತವೆ’, ಎನ್ನುವಿರಾದರೆ, ಯತ್ನವಿಲ್ಲದೆಯೇ, ಸರ್ವರ ಕರ್ಮಗಳೂ ನಿವೃತ್ತವಾಗಿ ಹೋಗುವುವು[2]!

**ಈಶ್ವರನು ಫಲಪ್ರದಾಯಕನಲ್ಲವಾದರೆ, ಪಾಪದ ಫಲವಾದ ದುಃಖವನ್ನು ಜೀವನು ತನ್ನ ಇಚ್ಛೆಯಿಂದ ಎಂದಿಗೂ ಅನುಭವಿಸುವುದಿಲ್ಲ.** ಉದಾಹರಣೆಗೆ—

ಕಳ್ಳರೇ ಮೊದಲಾದವರು ಕಳ್ಳತನದ ಫಲವನ್ನು ತಮ್ಮ ಇಚ್ಛೆಯಿಂದ ಅನುಭವಿಸುವುದಿಲ್ಲ. ಆದರೆ, ರಾಜವ್ಯವಸ್ಥೆಯಿಂದಾಗಿ ಅನುಭವಿಸುತ್ತಾರೆ! ಹಾಗೆಯೇ, ಪರಮೇಶ್ವರನು ಭೋಗಮಾಡಿಸುವುದರಿಂದ, ಪಾಪ–ಪುಣ್ಯಗಳ ಫಲವನ್ನು ಅನುಭವಿಸುತ್ತಾರೆ. ಅನ್ಯಥಾ ಕರ್ಮಸಂಕರ[3]ವಾಗಿ ಹೋಗುವುದು ! ಒಬ್ಬರ ಕರ್ಮವನ್ನು ಮತ್ತೊಬ್ಬರು ಅನುಭವಿಸಬೇಕಾಗಿ ಬಂದೀತು!

---

1. ವೈದಿಕರೂ ಕೂಡ—ಪ್ರಾಗಭಾವ, ಎಂದರೆ ಪದಾರ್ಥ ಉತ್ಪನ್ನವಾಗುವ ಮುನ್ನ ಇದ್ದ ಅದರ ಅಭಾವ. ಪ್ರಧ್ವಂಸಾಭಾವ, ಎಂದರೆ ವಸ್ತುವು ನಾಶವಾದ ಮೇಲೆ ಉದ್ಭವಿಸುವ ಅಭಾವ. ಅನ್ಯೋಽನ್ಯಾಭಾವ, ಎಂದರೆ ಗೋವಿನಲ್ಲಿ ಅಶ್ವತ್ವವಿಲ್ಲ; ಅಶ್ವದಲ್ಲಿ ಗೋತ್ವವಿಲ್ಲ, ಎಂಬ ರೀತಿಯ ಅಭಾವ. ಸಂಬಂಧಾಭಾವ, ಎಂದರೆ ಮನೆಯಲ್ಲಿ ಘಟವಿಲ್ಲ, ಎಂಬ ಬಗೆಯ ಅಭಾವ. ಅತ್ಯಂತಾಭಾವ, ಎಂದರೆ ಸರ್ವದಾ, ಸರ್ವಥಾ, ಸರ್ವತ್ರ ವಸ್ತುವಿನ ಅಭಾವ–ಇವನ್ನು ಗ್ರಹಿಸುತ್ತಾರೆ. ಪ್ರಾಗಭಾವ ಅನಾದಿಯಹುದು. ಪದಾರ್ಥ ರಚಿತವಾದ ಮೇಲೆ ಆ ಅಭಾವಕ್ಕೆ ಅಂತ ಬರುವುದು.—ಅನು.

2. ಕೊನೆಯಾಗಲೇ ಬೇಕು ಬಂಧನ–ಎಂದ ಮೇಲೆ, ಯತ್ನ ಮಾಡುವುದು-ಮಾಡದಿರುವುದು–ಎರಡೂ ಒಂದೇ!—ಅನು.

8. ಮಹರ್ಷಿ ದಯಾನಂದರ ತರ್ಕಗಾಂಭೀರ್ಯವನ್ನು ಗ್ರಹಿಸುವುದು ಇಷ್ಟಕರ! ಜೈನರು ಕರ್ಮಗಳನ್ನು ಕ್ರಿಯಾರೂಪವೆನ್ನದೇ, ಆತ್ಮನಿಗೆ ಅಂಟಿಕೊಳ್ಳುವ ಅದಾವುದೋ ಅಣುಗಳಂತಹ [ಕರ್ಮ ಪುದ್ಗಲ]ವೆಂದು ತಿಳಿಯುತ್ತಾರೆ. ಆ ಕರ್ಮ ಸ್ವತಃ ಜಡ! ಚೇತನನಾದ ಜೀವನು ಜಡವಾದ ಕರ್ಮದ ಫಲವನ್ನು ಅನುಭವಿಸಿಬೇಕಾದ ಕಾಲದಲ್ಲಿ ಒಳ್ಳೆಯದನ್ನೇ ಆರಿಸಿಕೊಂಡಾನು! ಫಲದಾತೃವಿಲ್ಲ; ಫಲಗ್ರಹೀತೃ ಮಾತ್ರ ಇದ್ದಾನೆ. ಗ್ರಹೀತೃ ಕೆಟ್ಟದನ್ನೇಕೆ ಆರಿಸಿಕೊಂಡಾನು ?
—ಅನು.→

### (ಜೀವನು ತನ್ನ ಜೀವತ್ವ ಸ್ವಭಾವವನ್ನು ಬಿಟ್ಟು ಈಶ್ವರನಾಗಲಾರನು)

ನಾಸ್ತಿಕ:—ಈಶ್ವರನು ಅಕ್ರಿಯನು. ಏಕೆಂದರೆ, ಕರ್ಮಗಳನ್ನು ಮಾಡುತ್ತಿದ್ದಲ್ಲಿ, ಕರ್ಮಫಲವನ್ನೂ ಕೂಡ. ಅನುಭವಿಸಬೇಕಾಗಿ ಬರುತ್ತಿದ್ದೀತು ! ಆದುದರಿಂದ, ಹೇಗೆ ನಾವು ಕೇವಲ ಜ್ಞಾನಿಗಳಾಗಿ ಮುಕ್ತರಾದವರನ್ನು ಅಂಗೀಕರಿಸುತ್ತೇವೋ, ಹಾಗೆ ನೀವು ಕೂಡ, ಅಂಗೀಕರಿಸಿರಿ!

ಆಸ್ತಿಕ:—ಈಶ್ವರನು ಅಕ್ರಿಯನಲ್ಲ; ಆದರೆ, ಸಕ್ರಿಯನು ! ಚೇತನನಾಗಿರುವಾಗ ಕರ್ತೃವೇಕಲ್ಲ ? ಮತ್ತು ಕರ್ತೃವಾಗಿರುವುದಾದರೆ, ಕ್ರಿಯೆಯಿಂದ ಎಂದಿಗೂ ಬೇರೆ ಇರಲಾರನು.

ನೀವು ಎಂತಹ ಕೃತ್ರಿಮನೂ, ಕಲ್ಪಿತನೂ ಆದ, [ಮತ್ತು] ಜೀವನಿಂದ ಆದ ತೀರ್ಥಂಕರರನ್ನು, ಈಶ್ವರ. ಎಂದು ಅಂಗೀಕರಿಸುತ್ತೀರೋ, ಅಂತಹ ಈಶ್ವರನನ್ನು ವಿದ್ವಾಂಸನಾವನೂ ಅಂಗೀಕರಿಸಲಾರನು! ಏಕೆಂದರೆ, ನಿಮಿತ್ತದಿಂದ ಈಶ್ವರನಾಗುವುದಾದರೆ, ಅವನು ಅನಿತ್ಯನೂ, ಪರಾಧೀನನೂ ಆಗಿಹೋದಾನು! ಏಕೆಂದರೆ, [ಅವನು] ಈಶ್ವರನಾಗುವ ಮೊದಲು ಜೀವನಾಗಿದ್ದನು! ಆಮೇಲೆ, ಯಾವುದೋ ನಿಮಿತ್ತದಿಂದ ಈಶ್ವರನಾದನು ! ಅಂದಮೇಲೆ, ಮತ್ತೆಯೂ ಜೀವನಾಗಿ ಹೋಗುವನು !

ಜೀವತ್ವವೆಂಬ ತನ್ನ ಸ್ವಭಾವವನ್ನು ಎಂದಿಗೂ ಬಿಡಲಾರನು. ಏಕೆಂದರೆ, ಅನಾದಿಕಾಲದಿಂದ ಜೀವನಾಗಿದ್ದಾನೆ! ಮತ್ತು ಅನಂತ ಕಾಲದವರೆಗೂ ಇರುವನು. ಆದುದರಿಂದ. ಅನಾದಿಯೂ, ಸ್ವತಃ ಸಿದ್ಧನೂ ಆದ ಈಶ್ವರನನ್ನು ಅಂಗೀಕರಿಸುವುದು ಯೋಗ್ಯವಾಗಿದೆ.

### (ಈಶ್ವರನು ನಿಷ್ಕ್ರಿಯನಾಗಿದ್ದರೆ, ಜಗತ್ತನ್ನು ಹೇಗೆ ರಚಿಸುತ್ತಿದ್ದನು ?)

ನೋಡಿರಿ ! ಹೇಗೆ ವರ್ತಮಾನ ಸಮಯದಲ್ಲಿ ಜೀವನು ಪಾಪ-ಪುಣ್ಯಗಳನ್ನು ಮಾಡುತ್ತಾನೋ, ಸುಖ-ದುಃಖಗಳನ್ನು ಅನುಭವಿಸುತ್ತಾನೋ, ಹಾಗೆ ಈಶ್ವರನು ಎಂದಿಗೂ ಇರುವುದಿಲ್ಲ.

ಈಶ್ವರನು ಕ್ರಿಯಾವಂತನಾಗಿರದಿದ್ದರೆ, ಈ ಜಗತ್ತನ್ನೆಂತು ನಿರ್ಮಿಸಬಲ್ಲವನಾಗುತ್ತಿದ್ದನು ?

---

→ ಕರ್ಮವು ಅಚೇತನ, ಜಡ! ಆದ್ದರಿಂದ, ಫಲಕಾಲದಲ್ಲಿ ತಾವು ಯಾರ ಕರ್ಮಗಳೆಂದು ಅವು ಗುರುತಿಸಬಲ್ಲವು ? ಈ ಕಾರಣದಿಂದ, ಯಾರ ಯಾರ ಜತೆಗೋ, ಮತ್ತಿನ್ನಾವ ಯಾವುವೋ ಕರ್ಮಗಳ ಸಂಬಂಧವಾಗುವುದರಿಂದ, 'ಕರ್ಮಸಂಕರ'ವಾಗುತ್ತದೆ.—ಮು.ಮೀ.

ಕರ್ಮಗಳನ್ನು 'ಪ್ರಾಗಭಾವ'ದಂತೆ, ಅನಾದಿ-ಸಾಂತವೆಂದು ಗ್ರಹಿಸುವಿರಾದರೆ, ಕರ್ಮವು ಸಮವಾಯ ಸಂಬಂಧದಿಂದ ಇರಲಾರದು. ಯಾವುದು **ಸಮವಾಯ ಸಂಬಂಧ***ದಿಂದ ಇರುವುದಿಲ್ಲವೋ, ಅದು **ಸಂಯೋಗಜ** [ಸಂಬಂಧ]ವಾಗಿ ಅನಿತ್ಯವಾಗಿರುತ್ತದೆ.

## (ಮುಕ್ತಿಯಲ್ಲಿ ಜೀವಗಳು ನಿಷ್ಕ್ರಿಯರಾದರೆ, ಕಲ್ಲಿನಂತಾದಾರು !)

ಮುಕ್ತಿಯಲ್ಲಿ ಕ್ರಿಯಾಹೀನರೆಂದು ಅಂಗೀಕರಿಸುತ್ತೀರಾದರೆ, ಆ ಮುಕ್ತ ಜೀವರು ಜ್ಞಾನಯುಕ್ತರಾಗಿರುತ್ತಾರೋ, ಅಥವಾ ಇಲ್ಲವೋ ?

'ಆಗಿರುತ್ತಾರೆ', ಎನ್ನುತ್ತೀರಾದರೆ, ಆಭ್ಯಂತರಕ್ರಿಯರಾದರು.

ಮುಕ್ತಿಯಲ್ಲಿ ಕಲ್ಲಿನಂತೆ ಜಡವಾಗಿರುತ್ತಾರೇನು ? ಒಂದೇ ಕಡೆ ಬಿದ್ದಿರುತ್ತಾರೇನು ? ಮತ್ತು ಚಲನ-ವಲನವೇನನ್ನೂ ಮಾಡುವುದಿಲ್ಲವೇನು ? ಹಾಗಾದರೆ, ಮುಕ್ತಿ ಏನಾಯಿತು ? ಕತ್ತಲಿನಲ್ಲಿ ಮತ್ತು ಬಂಧನದಲ್ಲಿ ಬಿದ್ದುಹೋದರು, ಅಷ್ಟೇ !

## (ಈಶ್ವರನು ವ್ಯಾಪಕನಾಗಿರುವ ಮಾತ್ರದಿಂದ ಎಲ್ಲ ಜಗತ್ತು ಚೇತನವಾಗುವುದಿಲ್ಲ)

**ನಾಸ್ತಿಕ:**—ಈಶ್ವರನು ವ್ಯಾಪಕನಲ್ಲ. ವ್ಯಾಪಕನಾಗಿರುವುದಾದರೆ, ಸಕಲ ವಸ್ತುಗಳೂ ಚೇತನವಾಗುವುದಿಲ್ಲವೇಕೆ ? ಮತ್ತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದವರ ಸ್ಥಿತಿಗಳು ಉತ್ತಮ, ಮಧ್ಯಮ, ನಿಕೃಷ್ಟವಾಗಿರುವುದೇಕೆ ? ಏಕೆಂದರೆ, ಈಶ್ವರನು ಎಲ್ಲರಲ್ಲಿಯೂ ಒಂದೇ ರೀತಿ ವ್ಯಾಪಕನಾಗಿರುತ್ತಾನಾದರೆ, ಕನಿಷ್ಠತ್ವ-ಜ್ಯೇಷ್ಠತ್ವಗಳಿರಬಾರದು !

**ಆಸ್ತಿಕ:**—ವ್ಯಾಪ್ಯ ಮತ್ತು ವ್ಯಾಪಕ ಒಂದಾಗಿರುವುದಿಲ್ಲ. ಆದರೆ, ವ್ಯಾಪ್ಯವು ಏಕದೇಶೀಯವೂ ಮತ್ತು ವ್ಯಾಪಕವು ಸರ್ವದೇಶೀಯವೂ ಆಗಿರುತ್ತದೆ. ಉದಾಹರಣೆಗೆ—

---

*'ಸಮವಾಯ ಸಂಬಂಧ', ಎಂದರೆ ನಿತ್ಯಸಂಬಂಧ; ಶಾಶ್ವತಸಂಬಂಧ. ಚೇತನನಾದ ಜೀವ ಮತ್ತು ಚೇತನನಾದ ಈಶ್ವರ-ಇವರಿಗೂ, ಕರ್ಮಗಳೊಂದಿಗೂ ಇರುವ ಸಂಬಂಧ ನೈಮಿತ್ತಿಕವಾದ ಸಂಬಂಧವಲ್ಲ. ಕಾರಣಾಂತರದಿಂದ ಕರ್ಮ ಗಂಟುಬಿದ್ದು, ಕಾರಣಾಂತರದಿಂದ ಬಿಟ್ಟು ಹೋಯಿತು, ಎಂದು ಚೇತನ ಪದಾರ್ಥ, ಹಾಗೂ ಕರ್ಮಗಳ ಸಂಬಂಧವನ್ನು ವರ್ಣಿಸಲಾಗದು. ಚೈತನ್ಯ, ಹಾಗೂ ಕ್ರಿಯೆ ಸರ್ವದಾ ಅನ್ಯೋಽನ್ಯಾಶ್ರಿತವೇ !—ಅನು.

ಆಕಾಶವು ಎಲ್ಲದರಲ್ಲಿಯೂ ವ್ಯಾಪಕವಾಗಿದೆ. ಮತ್ತು ಭೂಗೋಳವೂ, ಹಾಗೂ ಗಡಿಗೆ-ಬಟ್ಟೆ ಮೊದಲಾದ ಸಮಸ್ತ ವ್ಯಾಪ್ಯ [ವಸ್ತು]ಗಳೂ ಏಕದೇಶೀಯವಾಗಿವೆ.

ಹೇಗೆ ಪೃಥಿವೀ [ಮತ್ತು] ಆಕಾಶ ಒಂದಲ್ಲವೋ, ಹಾಗೆಯೇ ಈಶ್ವರ ಮತ್ತು ಜಗತ್ತು ಒಂದಲ್ಲ. ಹೇಗೆ ಸಮಸ್ತ ಗಡಿಗೆ-ಬಟ್ಟೆ ಮೊದಲಾದುದರಲ್ಲಿ ಆಕಾಶ ವ್ಯಾಪಕವಾಗಿದೆಯೋ, ಗಡಿಗೆ-ಬಟ್ಟೆ ಮೊದಲಾದುವು ಆಕಾಶವಲ್ಲವೋ, ಹಾಗೆ ಚೇತನನಾದ ಪರಮೇಶ್ವರನು ಎಲ್ಲರಲ್ಲಿಯೂ ಇದ್ದಾನೆ! ಮತ್ತು ಎಲ್ಲವೂ ಚೇತನವಾಗುವುದಿಲ್ಲ!

## (ತನ್ನ ಗುಣ-ಕರ್ಮಗಳಿಂದ ಮನುಷ್ಯನು ಚಿಕ್ಕವನು, ದೊಡ್ಡವನಾಗುತ್ತಾನೆ)

ಉದಾಹರಣೆಗಾಗಿ—

ಎಲ್ಲ ವಿದ್ವಾಂಸರೂ, ಅವಿದ್ವಾಂಸರೂ; ಮತ್ತು ಧರ್ಮಾತ್ಮರೂ, ಅಧರ್ಮಾತ್ಮರೂ ಸಮಾನರಾಗಿರುವುದಿಲ್ಲ!

ವಿದ್ಯೆ ಮೊದಲಾದ ಸದ್ಗುಣಗಳೂ, ಮತ್ತು ಸತ್ಯಭಾಷಣ ಮೊದಲಾದ ಕರ್ಮಗಳೂ, ಸುಶೀಲತ್ವ ಮೊದಲಾದ ಸ್ವಭಾವಗಳೂ ನ್ಯೂನಾಧಿಕವಾಗಿರುವುದರಿಂದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಅಂತ್ಯಜರು* ದೊಡ್ಡವರು–ಚಿಕ್ಕವರು, ಎಂದು ಭಾವಿಸಲ್ಪಡುತ್ತಾರೆ, ಅಷ್ಟೇ ! ವರ್ಣವ್ಯವಸ್ಥೆಯನ್ನು ಚತುರ್ಥ ಸಮುಲ್ಲಾಸದಲ್ಲಿ ಹೇಗೆ ಬರೆದಿದ್ದೇವೆಯೋ† ಅಲ್ಲಿ ನೋಡಿಕೊಳ್ಳಿರಿ !

## (ಜೀವರ ಕರ್ತವ್ಯ–ಕರ್ಮಗಳನ್ನು ಈಶ್ವರನು ಮಾಡುವುದಿಲ್ಲ; ಅವನ ಕೆಲಸಗಳು ಬೇರೆಯೇ ಇವೆ)

ನಾಸ್ತಿಕ:—ಈಶ್ವರನ ರಚನೆಯಿಂದ ಸೃಷ್ಟಿಯಾಗುವುದಾದರೆ, ಮಾತಾಪಿತೃಗಳ ಕೆಲಸವೇನಿದೆ ?

ಆಸ್ತಿಕ:—ಈಶ್ವರನು ಈಶ್ವರೀಯಸೃಷ್ಟಿಯ ಕರ್ತೃವಾಗಿದ್ದಾನೆ. ಜೈವೀ ಸೃಷ್ಟಿಯ ಕರ್ತೃವಲ್ಲ. ಜೀವನ ಕರ್ತವ್ಯ–ಕರ್ಮಗಳು ಯಾವುವು ಇವೆಯೋ, ಅವುಗಳನ್ನು ಈಶ್ವರನು ಮಾಡುವುದಿಲ್ಲ; ಆದರೆ, ಜೀವನೇ ಮಾಡುತ್ತಾನೆ!

*ಕೇವಲ ಯೋಗ್ಯತಾದೃಷ್ಟಿಯಿಂದ.—ಅನು.

†ಪುಟ 145–157ನ್ನು ನೋಡಿ.—ಸಂ.

ಉದಾಹರಣೆಗೆ—

ವೃಕ್ಷಗಳು, ಫಲಗಳು, ಓಷಧಿ, ಅನ್ನ ಮೊದಲಾದುವನ್ನು ಈಶ್ವರನು ಉತ್ಪನ್ನ ಮಾಡಿದ್ದಾನೆ. ಅವನ್ನು ಗ್ರಹಿಸಿ, ಮಾನವರು ಹಿಟ್ಟುಮಾಡದಿದ್ದರೆ, ಕುಟ್ಟದಿದ್ದರೆ, ರೊಟ್ಟಿ ಮೊದಲಾದ ಪದಾರ್ಥಗಳನ್ನು ಮಾಡದಿದ್ದರೆ, ಮತ್ತು ತಿನ್ನದೆಯೂ ಇದ್ದರೆ, ಈಶ್ವರನು ಅವರಿಗೆ ಬದಲು ಈ ಕಾರ್ಯಗಳನ್ನು ಎಂದಾದರೂ ಮಾಡುವನೇನು ?

ಮತ್ತು ಮಾಡದೇ ಇದ್ದರೆ,* ಜೀವರ ಜೀವನವೂ ಕೂಡ ನಡೆಯಲಾರದು! **ಆದುದರಿಂದ, ಆದಿಸೃಷ್ಟಿಯಲ್ಲಿ ಜೀವರ ಶರೀರಗಳನ್ನೂ ಮತ್ತು ಅಚ್ಚನ್ನೂ† ರಚಿಸುವುದು ಈಶ್ವರಾಧೀನ! ಆಮೇಲೆ, ಅವುಗಳಿಂದ ಸಂತಾನೋತ್ಪಾದನ ಮೊದಲಾದುವನ್ನು ಮಾಡುವುದು ಜೀವನ ಕರ್ತವ್ಯ-ಕರ್ಮವಾಗಿದೆ.**

### (ಪರಮಾತ್ಮನು ಜಗತ್ತನ್ನು ರಚಿಸದಿದ್ದರೆ, ಇನ್ನಾರಿಂದ ಆದೀತು ?)

**ನಾಸ್ತಿಕ:**—ಪರಮಾತ್ಮನು ಶಾಶ್ವತನೂ, ಅನಾದಿಯೂ, ಚಿದಾನಂದ ಜ್ಞಾನ ಸ್ವರೂಪನೂ ಆಗಿರುವನಾದರೆ, ಜಗತ್ತಿನ ಪ್ರಪಂಚದಲ್ಲಿ‡, ಹಾಗೂ ದುಃಖದಲ್ಲಿ ಬಿದ್ದನೇಕೆ ? ಆನಂದವನ್ನು ಬಿಟ್ಟು, ದುಃಖವನ್ನು ಗ್ರಹಿಸುವಂತಹ ಕಾರ್ಯವನ್ನು ಯಾವ ಸಾಧಾರಣ ಮಾನವನೂ ಕೂಡ, ಮಾಡುವುದಿಲ್ಲ! [ಮತ್ತೆ.] ಈಶ್ವರನೇತಕ್ಕೆ ಮಾಡಿದನು ?

**ಆಸ್ತಿಕ:—ಪರಮಾತ್ಮನು ಯಾವುದೇ ಪ್ರಪಂಚದಲ್ಲಿ ಮತ್ತು ದುಃಖದಲ್ಲಿ ಬೀಳುವುದಿಲ್ಲ! ತನ್ನ ಆನಂದವನ್ನು** ಬಿಡುವುದೂ ಇಲ್ಲ! ಏಕೆಂದರೆ, ಯಾವನು ಏಕದೇಶೀಯನಾಗಿದ್ದಾನೋ, ಅವನು ಮಾತ್ರ ಪ್ರಪಂಚದಲ್ಲಿ, ಮತ್ತು ದುಃಖದಲ್ಲಿ ಬೀಳುವುದು ಶಕ್ಯ; ಸರ್ವದೇಶೀಯನು ಬೀಳುವುದಿಲ್ಲ!

**ಅನಾದಿಯೂ, ಚಿದಾನಂದನೂ, ಜ್ಞಾನಸ್ವರೂಪನೂ ಆದ ಪರಮಾತ್ಮನು ಜಗತ್ತನ್ನು ರಚಿಸುವುದಿಲ್ಲವಾದರೆ, ಬೇರೆ ಯಾವನು ರಚಿಸಬಲ್ಲನು ? ಜೀವನಲ್ಲಿ ಜಗತ್ತನ್ನು ರಚಿಸುವ ಸಾಮರ್ಥ್ಯವಿಲ್ಲ. ಮತ್ತು ಜಡದಲ್ಲಿ ಸ್ವತಃ ನಿರ್ಮಿತವಾಗುವ ಸಾಮರ್ಥ್ಯವೂ ಇಲ್ಲ. ಇದರಿಂದ, ಪರಮಾತ್ಮನೇ ಜಗತ್ತನ್ನು ರಚಿಸುತ್ತಾನೆ ಮತ್ತು ಸದಾ ಆನಂದದಲ್ಲಿರುತ್ತಾನೆ,** ಎಂಬುದು ಸಿದ್ಧವಾಯಿತು.

---

*ಎಂದರೆ, ಜೀವರು ಈ ಕಾರ್ಯಗಳನ್ನು ಮಾಡದಿದ್ದರೆ.—ಅನು.

†ಆಕೃತಿ.—ಅನು.

‡ಎಂದರೆ, ಸೃಷ್ಟಿರಚನೆ-ಪಾಲನೆ-ಸಂಹಾರ, ಎಂಬ ವ್ಯವಹಾರದಲ್ಲಿ.—ಸಂ.

ಹೇಗೆ ಪರಮಾತ್ಮನು ಪರಮಾಣುಗಳಿಂದ ಸೃಷ್ಟಿಯನ್ನು ಮಾಡುತ್ತಾನೋ, ಹಾಗೆ ಮಾತಾಪಿತೃರೂಪದ ನಿಮಿತ್ತಕಾರಣದಿಂದ, ಉತ್ಪತ್ತಿಯ ಪ್ರಬಂಧದ ನಿಯಮವನ್ನೂ ಅವನೇ ಮಾಡಿದ್ದಾನೆ.

## (ಈಶ್ವರನು ಜಗತ್ತಿನ ಕರ್ತಾ-ಧರ್ತಾ-ಹರ್ತಾ ಆಗಿಯೂ ಬಂಧನಮುಕ್ತನಾಗಿದ್ದಾನೆ)

**ನಾಸ್ತಿಕ:**—ಈಶ್ವರನು ಮುಕ್ತಿರೂಪ ಸುಖವನ್ನು ಬಿಟ್ಟು, ಜಗತ್ತಿನ ಸೃಜನ, ಧಾರಣ, ಹಾಗೂ ಪ್ರಳಯ ಮಾಡುವ ಗೊಂದಲದಲ್ಲಿ ಏಕೆ ಬಿದ್ದನು ?

**ಆಸ್ತಿಕ:**—ಈಶ್ವರನು ಸದಾ ಮುಕ್ತನಾಗಿರುವುದರಿಂದ, ಸಾಧನಗಳಿಂದ ಸಿದ್ಧರಾದ ನಿಮ್ಮ ತೀರ್ಥಂಕರರುಗಳಂತೆ, ಏಕದೇಶದಲ್ಲಿರುವ, ಬಂಧನಪೂರ್ವಕವಾಗಿ ಮುಕ್ತಿಯಿಂದ ಯುಕ್ತನಾಗುವಂತಹ ಸನಾತನ ಪರಮಾತ್ಮನಾಗಿಲ್ಲ !

**ಯಾವ ಅನಂತಸ್ವರೂಪ-ಗುಣ-ಕರ್ಮ-ಸ್ವಭಾವಯುಕ್ತನಾದ ಪರಮಾತ್ಮನಿದ್ದಾನೋ, ಅವನು ಈ ಕಿಂಚಿನ್ಮಾತ್ರ ಜಗತ್ತನ್ನು ರಚಿಸುತ್ತಾ, ಧರಿಸುತ್ತಾ, ಪ್ರಳಯಗೊಳಿಸುತ್ತಾ ಇದ್ದರೂ ಕೂಡ, ಬಂಧನದಲ್ಲಿ ಬೀಳುವುದಿಲ್ಲ !** ಏಕೆಂದರೆ, **ಬಂಧ-ಮೋಕ್ಷಗಳು ಸಾಪೇಕ್ಷತೆಯಿಂದಿವೆ.** ಉದಾಹರಣೆಗೆ—

ಮುಕ್ತಿಯ ಅಪೇಕ್ಷೆ*ಯಿಂದ ಬಂಧವೂ, ಮತ್ತು ಬಂಧದ ಅಪೇಕ್ಷೆಯಿಂದ ಮುಕ್ತಿಯೂ ಇರುತ್ತವೆ. ಯಾವನು ಎಂದೂ 'ಬದ್ಧ'ನಾಗಿರಲೇ ಇಲ್ಲವೋ, ಅವನು **'ಮುಕ್ತ'**, ಎಂದು ಹೇಗೆ ಹೇಳಲ್ಪಡಲು ಸಾಧ್ಯ?†

ಮತ್ತು ಯಾವ **ಏಕದೇಶೀಯರಾದ ಜೀವರಿದ್ದಾರೋ, ಅವರೇ ಸದಾ ಬದ್ಧರು ಮತ್ತು ಮುಕ್ತರು ಆಗುತ್ತಾ ಇರುತ್ತಾರೆ !** ಅನಂತನೂ, ಸರ್ವದೇಶೀಯನೂ, ಸರ್ವವ್ಯಾಪಕನೂ ಆಗಿರುವ ಈಶ್ವರನು, ನಿಮ್ಮ ತೀರ್ಥಂಕರರುಗಳಂತೆ, ಬಂಧನದ ಅಥವಾ ನೈಮಿತ್ತಿಕ ಮುಕ್ತಿಯ ಚಕ್ರದಲ್ಲಿ ಎಂದಿಗೂ ಬೀಳುವುದಿಲ್ಲ. ಆದುದರಿಂದ, **ಪರಮಾತ್ಮನು ಯಾವಾಗಲೂ ಮುಕ್ತನೆನಿಸುತ್ತಾನೆ.**

---

*ಹೋಲಿಕೆ, ದೃಷ್ಟಿ.—ಅನು.

†ಶುದ್ಧ ದಾರ್ಶನಿಕ ತಥ್ಯವಿದೇ ಆದರೂ, ಬದ್ಧಜೀವರನ್ನು ದೃಕ್ಪಥದಲ್ಲಿಟ್ಟುಕೊಂಡು, ಪರಮಾತ್ಮನನ್ನು 'ನಿತ್ಯಮುಕ್ತ', ಎಂದು ಔಪಚಾರಿಕವಾಗಿ ಹೇಳುವುದುಂಟು.—ಅನು.

## (ಯಾವ ಜೀವನೂ ತನ್ನ ಕುಕರ್ಮಗಳ ಫಲವನ್ನು ಭೋಗಿಸಲಿಚ್ಛಿಸುವುದಿಲ್ಲ)

ನಾಸ್ತಿಕ:—ಹೇಗೆ ಭಂಗೀಸೇವನದ ಮದವನ್ನು ಮಾನವನು ತಾನೇ ಅನುಭವಿಸುತ್ತಾನೋ, ಹಾಗೆ ಜೀವರು ಕರ್ಮಗಳ ಫಲಗಳನ್ನು ತಾವೇ ಅನುಭವಿಸಬಲ್ಲರು! ಇದರಲ್ಲಿ ಈಶ್ವರನ ಕೆಲಸವಿಲ್ಲ.

**ಆಸ್ತಿಕ:**—ಹೇಗೆ ರಾಜನು ಇಲ್ಲದಿದ್ದರೆ, ದರೋಡೆಕೋರರು, ವ್ಯಭಿಚಾರಿಗಳು, ಕಳ್ಳರು ಮೊದಲಾದ ದುಷ್ಟಮಾನವರು ಸ್ವತಃ ಗಲ್ಲಿಗೇರುವುದಿಲ್ಲವೋ, ಅಥವಾ ಕಾರಾಗೃಹಕ್ಕೆ ತೆರಳುವುದಿಲ್ಲವೋ; [ಮತ್ತು] ಅವರು ಹೋಗಲು ಬಯಸುವುದೂ ಇಲ್ಲವೋ; ಆದರೆ. ರಾಜನು ರಾಜ್ಯದ ನ್ಯಾಯವ್ಯವಸ್ಥೆಗೆ ಅನುಸಾರವಾಗಿ ಬಲವಂತದಿಂದ ಹಿಡಿಸಿ, ಯಥೋಚಿತವಾಗಿ ಶಿಕ್ಷೆ ವಿಧಿಸುತ್ತಾನೋ, ಅದೇ ರೀತಿ, ಜೀವರಿಗೂ ಕೂಡ ಈಶ್ವರನು [ತನ್ನ] ನ್ಯಾಯವ್ಯವಸ್ಥೆಗೆ ಅನುಗುಣವಾಗಿ, ಅವರವರ ಕರ್ಮಾನುಸಾರ ಯಥಾಯೋಗ್ಯವಾಗಿ ಶಿಕ್ಷೆಯನ್ನು ಕೊಡುತ್ತಾನೆ. **ಏಕೆಂದರೆ, ಯಾವ ಜೀವನೂ ಕೂಡ, ತನ್ನ ದುಷ್ಟಕರ್ಮಗಳ ಫಲವನ್ನು [ತಾನೇ] ಅನುಭವಿಸಲು ಇಚ್ಛಿಸುವುದಿಲ್ಲ! ಆದುದರಿಂದ, ಅವಶ್ಯವಾಗಿ ಪರಮಾತ್ಮನು ನ್ಯಾಯಾಧೀಶನಾಗಿರಬೇಕು !**

## (ಈಶ್ವರರು ಅನೇಕರಾದರೆ, ಜೀವರಂತೆ ಪರಸ್ಪರ ಕಾದಾಡಿ ಬಿಡುವರು)

**ನಾಸ್ತಿಕ:**—ಜಗತ್ತಿನಲ್ಲಿ ಒಬ್ಬ ಈಶ್ವರನಿಲ್ಲ! ಆದರೆ, ಎಷ್ಟು ಜನ ಮುಕ್ತಜೀವರಿದ್ದಾರೋ, ಅವರೆಲ್ಲರೂ ಈಶ್ವರರಾಗಿದ್ದಾರೆ !

**ಆಸ್ತಿಕ:**—ಈ ಕಥನ ಸರ್ವಥಾ ವ್ಯರ್ಥವಾಗಿದೆ. ಏಕೆಂದರೆ, **ಮೊದಲು ಬದ್ಧರಾಗಿದ್ದು, [ಆಮೇಲೆ] ಮುಕ್ತರಾಗಿದ್ದರೆ, ಪುನಃ ಬಂಧನದಲ್ಲಿ ಅವಶ್ಯವಾಗಿ ಬೀಳಬೇಕಾದೀತು !** ಏಕೆಂದರೆ, ಅವರು ಸ್ವಾಭಾವಿಕವಾಗಿ ಸದಾ ಕಾಲದಲ್ಲಿಯೂ ಮುಕ್ತರಾಗಿರುವವರಲ್ಲ.

ಹೇಗೆ, ನಿಮ್ಮ ಇಪ್ಪತ್ತನಾಲ್ಕು ಜನ ತೀರ್ಥಂಕರರು ಮೊದಲು ಬದ್ಧರಾಗಿದ್ದು. ಆ ಮೇಲೆ ಮುಕ್ತರಾದರೋ, ಹಾಗೆಯೇ ಮತ್ತೆ ಕೂಡ, ಬಂಧನದಲ್ಲಿ ಅವಶ್ಯವಾಗಿ ಬೀಳುವರು !

ಮತ್ತು ಬಹುಜನ ಈಶ್ವರರು ಇರುವರಾದರೆ, ಹೇಗೆ ಜೀವರು ಅನೇಕರಿರುವುದರಿಂದ ಕಾದಾಡುತ್ತಾ-ಕಿತ್ತಾಡುತ್ತಾ ಅಲೆದಾಡುತ್ತಾರೋ, ಹಾಗೆ ಈಶ್ವರರೂ ಕೂಡ. ಕಾದಾಡುತ್ತಾ-ಕಿತ್ತಾಡುತ್ತಾ ಇರುವರು!

## (ಕರ್ತೃವಿಲ್ಲದೇ ಜಗತ್ತಿನಲ್ಲಿ ಯಾವ ಕಾರ್ಯವೂ ಆಗದು)

ನಾಸ್ತಿಕ:—ಎಲವೋ ಮೂಢ! ಜಗತ್ತಿನ ಕರ್ತೃವು ಯಾವನೂ ಇಲ್ಲ; ಆದರೆ, ಜಗತ್ತು ಸ್ವತಃ ಸಿದ್ಧವಾಗಿದೆ!

ಆಸ್ತಿಕ:—ಇದು ಜೈನರ ಎಷ್ಟು ದೊಡ್ಡ ತಪ್ಪು! **ಅಲ್ಲಾ! ಕರ್ತೃವಿಲ್ಲದೇ ಯಾವುದಾದರೂ ಕರ್ಮ; [ಮತ್ತು] ಕರ್ಮವಿಲ್ಲದೇ ಯಾವುದಾದರೂ ಕಾರ್ಯ ಆಗುತ್ತಿರುವುದು ಜಗತ್ತಿನಲ್ಲಿ ಕಂಡುಬರುತ್ತದೆಯೇ?** ಇದು ಯಾವ ಮಾತಿನಂತಿದೆಯೆಂದರೆ—

ಗೋಧಿಯು ಹೊಲದಲ್ಲಿ ಸ್ವತಃ ಸಿದ್ಧವಾದ ಹಿಟ್ಟು ಉದ್ಭವಿಸಿ, ತಾನೇ ಜೈನರ ಉದರದೊಳಕ್ಕೆ ಸೇರಿಹೋಗಿಬಿಡಬೇಕು!

ಹತ್ತಿ, ನೂಲು, ಬಟ್ಟೆ, ಅಂಗವಸ್ತ್ರ, ದುಪಟಿ. ಪಂಚೆ, ಪೇಟ ಮೊದಲಾದುವು ತಾವೇ ಸ್ವತಃ ತಯಾರಾಗಿ ಎಂದಿಗೂ ಬರುವುದಿಲ್ಲ! ಸ್ಥಿತಿ ಹೀಗೆ ಇಲ್ಲದಿರುವಾಗ* **ಕರ್ತೃವಾದ ಈಶ್ವರನಿಲ್ಲದೇ, ಈ ವಿವಿಧ ಜಗತ್ತು, ಹಾಗೂ ನಾನಾ ಪ್ರಕಾರದ ರಚನಾ-ವಿಶೇಷಗಳು ಆಗಬಲ್ಲುವಾದರೂ ಹೇಗೆ?**

ಹಠಧರ್ಮದಿಂದ, ಸ್ವತಃ ಸಿದ್ಧವಾದ ಜಗತ್ತನ್ನು ಅಂಗೀಕರಿಸುವಿರಾದರೆ, ಮೇಲೆ ಹೇಳಿದ ಸ್ವತಃ ಸಿದ್ಧವಾದ ವಸ್ತ್ರಗಳು ಮೊದಲಾದುವು ಕರ್ತೃವಿಲ್ಲದೇ ಆಗುವುದನ್ನು ಪ್ರತ್ಯಕ್ಷವಾಗಿ ತೋರಿಸಿರಿ! ಈ ರೀತಿ ಸಿದ್ಧಪಡಿಸಲು ಆಗದಿರುವಾಗ, ನಿಮ್ಮ ಪ್ರಮಾಣಶೂನ್ಯವಾದ ಕಥನವನ್ನು ಯಾವ ಬುದ್ಧಿವಂತನು ತಾನೇ ಅಂಗೀಕರಿಸಲು ಸಾಧ್ಯ?

## (ಈಶ್ವರನು ವಿರಕ್ತನೂ ಅಲ್ಲ, ಮೋಹಿಯೂ ಅಲ್ಲ! ಇವುಗಳಂತೂ 'ಜೀವ'ನ ಧರ್ಮಗಳಾಗಿವೆ)

ನಾಸ್ತಿಕ:—ಈಶ್ವರನು ವಿರಕ್ತನೋ, ಅಥವಾ ಮೋಹಿತನೋ? ವಿರಕ್ತನಾಗಿರುವುದಾದರೆ, ಜಗತ್ತಿನ ಪ್ರಪಂಚದಲ್ಲಿ ಬಿದ್ದನೇಕೆ? ಮೋಹಿತನಾಗಿರುವುದಾದರೆ, ಜಗತ್ತನ್ನು ರಚಿಸಲು ಸಮರ್ಥನಾಗಲಾರನು!

ಆಸ್ತಿಕ:—ಪರಮೇಶ್ವರನಲ್ಲಿ ವೈರಾಗ್ಯ ಅಥವಾ ಮೋಹ ಎಂದಿಗೂ ಉದಯಿಸಲಾರದು. ಏಕೆಂದರೆ, ಯಾವನು ಸರ್ವವ್ಯಾಪಕನೋ, ಅವನು ಯಾವುದನ್ನು ಬಿಡಬೇಕು? ಮತ್ತು ಯಾವುದನ್ನು ಗ್ರಹಿಸಬೇಕು? **ಈಶ್ವರನಿಗಿಂತ ಉತ್ತಮವಾದ,**

---

*ಎಂದರೆ, ಸ್ವತಃ ಯಾವುದೂ ಉದ್ಭವಿಸದಿರುವಾಗ. – ಅನು.

ಅಥವಾ ಅವನಿಗೆ ಪ್ರಾಪ್ತವಾಗದಿರುವ ಯಾವ ಪದಾರ್ಥವೂ ಇಲ್ಲ! ಆದುದರಿಂದ, ಯಾವುದರಲ್ಲಿಯೂ ಅವನಿಗೆ ಮೋಹವೂ ಕೂಡ, ಆಗುವುದಿಲ್ಲ.

**ವೈರಾಗ್ಯದ ಮತ್ತು ಮೋಹದ ಉದ್ಭವ ಜೀವನಲ್ಲಿ ಆಗುತ್ತದೆ; ಈಶ್ವರನಲ್ಲಿ ಅಲ್ಲ!**

## (ನ್ಯಾಯಾಧೀಶನಂತೆ ಈಶ್ವರನು ನಿರ್ಲಿಪ್ತನಾಗಿರುತ್ತಾನೆ)

ನಾಸ್ತಿಕ:—ಈಶ್ವರನನ್ನು ಜಗತ್ತಿನ ಕರ್ತೃವೆಂದೂ, ಮತ್ತು ಜೀವರ ಕರ್ಮಗಳ ಫಲಗಳ ದಾತೃವೆಂದೂ ಅಂಗೀಕರಿಸುವಿರಾದರೆ, ಈಶ್ವರನು ಪ್ರಾಪಂಚಿಕನಾಗಿ ದುಃಖಿಯಾಗಿ ಹೋಗುವನು!

**ಆಸ್ತಿಕ:—ಅಲ್ಲಾ! ಅನೇಕ ಬಗೆಯ ಕರ್ಮಗಳ ಕರ್ತೃವೂ, ಪ್ರಾಣಿಗಳಿಗೆ ಫಲಗಳ ದಾತೃವೂ, ಧಾರ್ಮಿಕನೂ, ನ್ಯಾಯಾಧೀಶನೂ ಆದ ವಿದ್ವಾಂಸನೂ [ಕೂಡ], ಕರ್ಮಗಳಲ್ಲಿ ಸಿಕ್ಕಿಕೊಳ್ಳುವುದಿಲ್ಲ; ಪ್ರಾಪಂಚಿಕನೂ ಆಗುವುದಿಲ್ಲ! ಎಂದ ಮೇಲೆ, ಅನಂತಸಾಮರ್ಥ್ಯಯುಕ್ತನಾದ ಪರಮೇಶ್ವರನು ಪ್ರಾಪಂಚಿಕನೂ ಮತ್ತು ದುಃಖಿಯೂ ಹೇಗೆ ತಾನೇ ಆಗುವನು?**

ಹೌದು! ನೀವು ನಿಮ್ಮ ಅಜ್ಞಾನದಿಂದ, ನಿಮ್ಮ, ಮತ್ತು ನಿಮ್ಮ ತೀರ್ಥಂಕರರ ಹಾಗೆ ಪರಮೇಶ್ವರನೂ ಕೂಡ, ಇದ್ದಾನೆಂದು ತಿಳಿಯುತ್ತೀರಿ. ಆದು ನಿಮ್ಮ ಅವಿದ್ಯೆಯ ಲೀಲೆಯಾಗಿದೆ!

**ಅವಿದ್ಯೆ ಮೊದಲಾದ ದೋಷಗಳಿಂದ ಬಿಡುಗಡೆ ಹೊಂದಬಯಸುವಿರಾದರೆ, ವೇದಗಳೇ ಮೊದಲಾದ ಸತ್ಯಶಾಸ್ತ್ರಗಳ ಆಶ್ರಯವನ್ನು ತೆಗೆದುಕೊಳ್ಳಿರಿ!** ಭ್ರಮದಲ್ಲಿ ಬಿದ್ದುಕೊಂಡು, ಏಕೆ ಮುಗ್ಗರಿಸುತ್ತೀರಿ?

## (ಜೈನರು ಪ್ರಪಂಚವನ್ನು ಅನಾದಿ ಮತ್ತು ಅನಂತ, ಎಂದು ಅಂಗೀಕರಿಸುವುದು ತಪ್ಪು)

ಈಗ, ಜೈನರು ಜಗತ್ತನ್ನು ಹೇಗೆ ತಿಳಿದಿರುತ್ತಾರೋ, ಹಾಗೆ, ಇವರುಗಳ ಸೂತ್ರಗಳಿಗೆ ಅನುಸಾರವಾಗಿ ತೋರಿಸುತ್ತೇವೆ. ಮತ್ತು ಸಂಕ್ಷೇಪವಾಗಿ ಮೂಲದ ಅರ್ಥವನ್ನು ಮಾಡಿ, ಆ ಮೇಲೆ ಸತ್ಯಾಸತ್ಯಗಳ ಸಮೀಕ್ಷೆಯನ್ನು ಮಾಡಿತೋರಿಸುತ್ತೇವೆ:—

[1] **ಮೂಲ:—**

**ಸಾಮಿ ಅಣಾಇ ಅಣಂತೇ, ಚಉಗಇ ಸಂಸಾರಘೋರಕಾಂತಾರೇ ।**

**ಮೋಹಾಇ ಕಮ್ಮಗುರುಠಿಇ ವಿವಾಗವಸಉ ಭಮಇ ಜೀವೋ ॥**

[ಪ್ರಕರಣ ರತ್ನಾಕರ:-ಭಾಗ-2; ಸಮ್ಯಕ್ತ್ವಸ್ವರೂಪಸ್ತವ; ಸೂತ್ರ 2]

ಇದು **ಪ್ರಕರಣ ರತ್ನಾಕರ**, ಭಾಗ-2 ಎಂಬ ಗ್ರಂಥದ **'ಸಮ್ಯಕ್ತ್ವಪ್ರಕಾಶ'** ಪ್ರಕರಣದಲ್ಲಿರುವ **ಗೌತಮ ಮತ್ತು ಮಹಾವೀರರ** ಸಂವಾದವಾಗಿದೆ.

ಸಂಕ್ಷೇಪವಾಗಿ, ಇದರ ಉಪಯುಕ್ತವಾದ ಅರ್ಥವೇನೆಂದರೆ—

'ಈ ಜಗತ್ತು ಅನಾದಿ-ಅನಂತವಾಗಿದೆ. ಎಂದಿಗೂ ಇದರ ಉತ್ಪತ್ತಿಯಾಗ ಲಿಲ್ಲ; ವಿನಾಶವೂ ಕೂಡ ಎಂದಿಗೂ ಆಗುವುದಿಲ್ಲ. ಎಂದರೆ, ಜಗತ್ತು ಯಾವನ ರಚನೆಯೂ ಅಲ್ಲ'.

ಅದೇ ಆಸ್ತಿಕ-ನಾಸ್ತಿಕ-ಸಂವಾದದಲ್ಲಿ—

"ಲೋ ಮೂಢ! ಜಗತ್ತಿನ ಕರ್ತೃವಾವನೂ ಇಲ್ಲ! ಅದೆಂದಿಗೂ ಆಗಲಿಲ್ಲ; ಮತ್ತು ಎಂದಿಗೂ ನಾಶವಾಗುವುದೂ ಇಲ್ಲ". [ಎಂದು ಹೇಳಿದೆ.]

**ಸಮೀಕ್ಷಕ:—ಯಾವುದು ಸಂಯೋಗದಿಂದ ಉತ್ಪನ್ನವಾಗುತ್ತದೋ, ಅದು ಎಂದಿಗೂ ಅನಾದಿ-ಅನಂತವಾಗಲಾರದು.** ಮತ್ತು ಉತ್ಪತ್ತಿ, ಹಾಗೂ ವಿನಾಶ ವಿಲ್ಲದೇ, ಕರ್ಮವು ಇರುವುದಿಲ್ಲ. ಜಗತ್ತಿನಲ್ಲಿ ಎಷ್ಟು ಪದಾರ್ಥಗಳು ಉತ್ಪನ್ನ ವಾಗುತ್ತವೋ, ಅವೆಲ್ಲವೂ ಸಂಯೋಗದಿಂದ ಉದಿಸುವಂತಹವೂ, ಉತ್ಪತ್ತಿ-ವಿನಾಶ ಯುಕ್ತವೂ ಆಗಿಯೇ ನೋಡಲ್ಪಡುತ್ತವೆ. ಮತ್ತೆ, ಜಗತ್ತು ಉತ್ಪನ್ನವಾದುದೂ ಮತ್ತು ವಿನಾಶಯುಕ್ತವಾದುದೂ ಏಕಲ್ಲ? **ಆದುದರಿಂದ, ನಿಮ್ಮ ತೀರ್ಥಂಕರರು ಗಳಿಗೆ ಸಮ್ಯಕ್ ಬೋಧವಿರಲಿಲ್ಲ!** ಅವರಿಗೆ ಸಮ್ಯಕ್ ಜ್ಞಾನವಿದ್ದಿದ್ದರೆ, ಇಂತಹ ಅಸಂಭವವಾದ ಮಾತುಗಳನ್ನೇಕೆ ಬರೆಯುತ್ತಿದ್ದರು?

## (ಜೈನರ ಅಸಂಭವ ಮಾತುಗಳು; ಪಲ್ಯೋಪಮಾದಿ ಕಾಲದ ವ್ಯಾಖ್ಯೆ)

ನಿಮ್ಮ ಗುರುಗಳು ಹೇಗೆ ಇದ್ದಾರೋ, ಹಾಗೆಯೇ ಶಿಷ್ಯರಾದ ನೀವೂ ಕೂಡ ಇದ್ದೀರಿ! ನಿಮ್ಮ ಮಾತುಗಳನ್ನು ಆಲಿಸುವವನಿಗೆ ಪದಾರ್ಥಜ್ಞಾನವೆಂದಿಗೂ ಉಂಟಾಗಲಾರದು.

ಅಲ್ಲಾ**! ಯಾವ ಸಂಯುಕ್ತ ಪದಾರ್ಥ ಪ್ರತ್ಯಕ್ಷವಾಗಿ ಕಾಣುತ್ತಿದೆಯೋ, ಅದರ ಉತ್ಪತ್ತಿಯನ್ನು ಮತ್ತು ವಿನಾಶವನ್ನು ಏತಕ್ಕೆ ಅಂಗೀಕರಿಸುವುದಿಲ್ಲ? ಎಂದರೆ, ಇವರ ಆಚಾರ್ಯರಿಗೆ ಅಥವಾ ಜೈನರಿಗೆ ಭೂಗೋಳ-ಖಗೋಳ ವಿದ್ಯೆಯೂ ಕೂಡ ಬರುತ್ತಿರಲಿಲ್ಲ! ಮತ್ತು ಈಗಲೂ ಆ ವಿದ್ಯೆ ಇವರಲ್ಲಿಲ್ಲ!** ಅನ್ಯಥಾ, ಕೆಳಗೆ ಬರೆದಿರುವಂತಹ ಅಸಂಭವವಾದ ವಿಷಯಗಳನ್ನು ಒಪ್ಪುತ್ತಿದ್ದ ರೆಂತು? ಮತ್ತು ಹೇಳುತ್ತಿದ್ದರೆಂತು?

ನೋಡಿರಿ! ಈ ಸೃಷ್ಟಿಯಲ್ಲಿ ಪೃಥಿವೀಕಾಯ [ಜೀವರನ್ನೂ], ಎಂದರೆ ಪೃಥಿವಿಯನ್ನೇ ಶರೀರವಾಗಿ ಹೊಂದಿರುವ ಜೀವರನ್ನೂ, ಮತ್ತು ಜಲಕಾಯ ಮೊದಲಾದ ಜೀವರನ್ನೂ ಕೂಡ ಅಂಗೀಕರಿಸುತ್ತಾರೆ! ಇದನ್ನು ಯಾವನೂ ಒಪ್ಪಲಾರನು!

ಮತ್ತು ನೋಡಿರಿ, ಇವರ ಮಿಥ್ಯಾಕಥನಗಳನ್ನು! ಯಾವ ತೀರ್ಥಂಕರರನ್ನು ಜೈನರುಗಳು ಸಮ್ಯಕ್‌ಜ್ಞಾನಿಗಳು ಮತ್ತು ಪರಮೇಶ್ವರರು, ಎಂದು ಅಂಗೀಕರಿಸುತ್ತಾರೋ, **ಅವರ ಮಿಥ್ಯಾಕಥನಗಳ ಮಾದರಿಗಳು ಇವಾಗಿವೆ:—**

**"ರತ್ನಸಾರ"** ಭಾಗ [1]ರ 145ನೆಯ ಪುಟ—

ಈ ಗ್ರಂಥವನ್ನು ಜೈನರು ಅಂಗೀಕರಿಸುತ್ತಾರೆ. ಮತ್ತು ಇದು ಇಸವಿ ಸನ್ 1879ರ ಏಪ್ರಿಲ್ 28ನೆಯ ದಿನಾಂಕದಂದು ಬನಾರಸದ **"ಜೈನ ಪ್ರಭಾಕರ ಮುದ್ರಣಾಲಯ"**ದಲ್ಲಿ ನಾನಕಚಂದ್ ಜತಿಯು ಮುದ್ರಣ ಮಾಡಿಸಿ, ಪ್ರಸಿದ್ಧಪಡಿಸಿದ್ದಾರೆ. ಅದರ, ಮೇಲೆ ಹೇಳಿದ ಪುಟದಲ್ಲಿ. **ಕಾಲದ ವ್ಯಾಖ್ಯಾನವನ್ನು ಈ ರೀತಿ ಮಾಡಿದ್ದಾರೆ; ಎಂದರೆ—**

"**ಸಮಯದ** ಹೆಸರು **ಸೂಕ್ಷ್ಮಕಾಲ,** ಎಂದಾಗಿದೆ. ಮತ್ತು ಅಸಂಖ್ಯಾತವಾದ ಸಮಯಗಳನ್ನು **'ಆವಲಿ',** ಎನ್ನುತ್ತಾರೆ.

"ಒಂದು ಕೋಟಿ ಅರವತ್ತೇಳು ಲಕ್ಷ ಎಪ್ಪತ್ತು ಸಾವಿರದ ಇನ್ನೂರ ಹದಿನಾರು ಆವಲಿಗಳಿಂದ ಒಂದು **ಮುಹೂರ್ತ**ವಾಗುತ್ತದೆ. ಅಂತಹ ಮೂವತ್ತು ಮುಹೂರ್ತಗಳಿಗೆ ಒಂದು **ದಿವಸ;** ಅಂತಹ ಹದಿನೈದು ದಿವಸಗಳಿಗೆ ಒಂದು **ಪಕ್ಷ;** ಅಂತಹ ಎರಡು ಪಕ್ಷಗಳಿಗೆ ಒಂದು **ಮಾಸ;** ಅಂತಹ ಹನ್ನೆರಡು ಮಾಸಗಳಿಗೆ ಒಂದು **ವರ್ಷ.** ಅಂತಹ ಎಪ್ಪತ್ತು ಲಕ್ಷ ಕೋಟಿ. ಐವತ್ತಾರು ಸಾವಿರ ಕೋಟಿ ವರ್ಷಗಳಿಗೆ ಒಂದು **'ಪೂರ್ವ'**ವಾಗುತ್ತದೆ. ಇಂತಹ ಅಸಂಖ್ಯಾತ **ಪೂರ್ವ**ಗಳನ್ನು ಒಂದು **'ಪಲ್ಯೋಪಮ'**ಕಾಲವೆನ್ನುತ್ತಾರೆ.

"**'ಅಸಂಖ್ಯಾತ',** ಎಂದರೆ, ನಾಲ್ಕು ಕೋಶ* ಚದರವೂ, ಅಷ್ಟೇ ಆಳವೂ ಆದ ಬಾವಿಯನ್ನು ಅಗೆದು, ಅದನ್ನು **'ಜುಗುಲಿಯಾ'** ಮನುಷ್ಯನ ಶರೀರದ. ಕೂದಲುಗಳ ತುಂಡುಗಳಿಂದ ಕೆಳಗೆ ಉಲ್ಲೇಖಿಸಿರುವಂತೆ ತುಂಬಿಸಬೇಕು. ಎಂದರೆ, ಜುಗುಲಿಯಾ ಮನುಷ್ಯನ ಕೂದಲುಗಳು ಆಧುನಿಕ ಮಾನವನ ಕೂದಲುಗಳಿಗಿಂತ ನಾಲ್ಕು ಸಾವಿರದ ತೊಂಬತ್ತಾರು ಭಾಗದಷ್ಟು ಸೂಕ್ಷ್ಮವಾಗಿರುತ್ತದೆ.

---

*ಸುಮಾರು ಎಂಟು ಮೈಲಿ—ಅನು.

"ಜುಗುಲಿಯಾ ಮನುಷ್ಯನ ನಾಲ್ಕು ಸಾವಿರದ ತೊಂಬತ್ತಾರು ಕೂದಲುಗಳನ್ನು ಸೇರಿಸಿದರೆ, ಆಧುನಿಕ ಮಾನವನ ಒಂದು ಕೂದಲಾಗುತ್ತದೆ!

"ಇಂತಹ ಜುಗುಲಿಯಾ ಮನುಷ್ಯನ ಒಂದು ಕೂದಲಿನ ಒಂದು ಅಂಗುಲ ಭಾಗವನ್ನು ಏಳುಸಾರಿ ಎಂಟು-ಎಂಟು ಚೂರುಗಳನ್ನು ಮಾಡುವುದರಿಂದ, 20,97,152, ಎಂದರೆ ಇಪ್ಪತ್ತುಲಕ್ಷ, ತೊಂಬತ್ತೇಳು ಸಾವಿರದ ನೂರ ಐವತ್ತೆರಡು ತುಣುಕುಗಳಾಗುತ್ತವೆ. ಇಂತಹ ತುಣುಕುಗಳಿಂದ ಮೇಲೆ ಹೇಳಿದ* ಭಾವಿಯನ್ನು ತುಂಬಿಸಬೇಕು!

"ಅದರೊಳಗಿನಿಂದ, ನೂರು–ನೂರು ವರ್ಷಕ್ಕೆ ಒಂದೊಂದು ತುಣುಕನ್ನು ತೆಗೆಯುತ್ತಾ ಹೋಗಬೇಕು. ಯಾವಾಗ ಎಲ್ಲ ತುಣುಕುಗಳೂ ಹೊರಕ್ಕೆ ಬಂದು ಬಿಡುತ್ತವೋ, ಮತ್ತು ಭಾವಿ ಖಾಲಿಯಾಗಿ ಹೋಗುತ್ತದೋ, ಆಗಲೂ ಅದು **'ಸಂಖ್ಯಾತಕಾಲ'**ವೇ !

"ಮತ್ತು ಯಾವಾಗ ಅವುಗಳಲ್ಲಿನ ಒಂದೊಂದು ತುಣುಕನ್ನೂ ಅಸಂಖ್ಯಾತ ತುಣುಕುಗಳನ್ನಾಗಿಮಾಡಿ, ಆ ತುಣುಕುಗಳಿಂದ, ಅದರ ಮೇಲೆ, ಚಕ್ರವರ್ತಿ ಸಾರ್ವ ಭೌಮನ ಸೇನೆಯು ಹಾದುಹೋದರೂ ಕುಸಿಯಬಾರದು, ಹಾಗೆ ಆ ಭಾವಿಯನ್ನು ಅದುಮಿ–ಅದುಮಿ ತುಂಬಿಸಬೇಕು.†

"ಆ ತುಣುಕುಗಳನ್ನು ನೂರು ವರ್ಷಕ್ಕೆ ಒಂದರಂತೆ ತೆಗೆಯಬೇಕು. ಯಾವಾಗ ಆ ಭಾವಿ ರಿಕ್ತವಾಗಿ ಹೋಗುವುದೋ, ಆಗ **'ಅಸಂಖ್ಯಾತಪೂರ್ವ'**ವಾಗುವುದು. ಆಗ ಒಂದೊಂದು **'ಪಲ್ಯೋಪಮಕಾಲ'**ವಾಗುತ್ತದೆ. ಆ **ಪಲ್ಯೋಪಮ** ಕಾಲವನ್ನು ಭಾವಿಯ ದೃಷ್ಟಾಂತದಿಂದ ತಿಳಿದುಕೊಳ್ಳಬೇಕು.

"ಯಾವಾಗ ಹತ್ತು ಕೋಟ್ಯನುಕೋಟಿ ಪಲ್ಯೋಪಮ ಕಾಲಗಳು ವ್ಯತೀತ ವಾಗುವುವೋ, ಆಗ ಒಂದು **'ಸಾಗರೋಪಮಕಾಲ'**ವಾಗುತ್ತದೆ. ಯಾವಾಗ ಹತ್ತು ಕೋಟ್ಯನುಕೋಟಿ **ಸಾಗರೋಪಮ** ಕಾಲಗಳು ಮುಗಿಯುವುವೋ, ಆಗ ಒಂದು **"ಉತ್ಸರ್ಪಿಣೀ"** ಕಾಲವಾಗುತ್ತದೆ. ಮತ್ತು ಯಾವಾಗ ಒಂದು **ಉತ್ಸರ್ಪಿಣೀ**

---

*ಸುಮಾರು ಎಂಟು ಘನ ಮೈಲುಗಳಷ್ಟಿರುವ. – ಅನು.

†ಇಂತಿಂತಹ ಬುರುಡೆಗಳನ್ನು ಹೊಡೆಯುವುದರಲ್ಲಿ ಪೌರಾಣಿಕರದು ಮೇಲುಗೈಯೋ, ಅಥವಾ ಜೈನರದೋ ? ಈ ಬುರುಡೆಗಳನ್ನು ನಂಬುವವರು, ಮತ್ತು ಇವರ ಅನುಯಾಯಿಗಳು ಎಷ್ಟು ವೈಜ್ಞಾನಿಕ ಪ್ರಗತಿಯನ್ನು ಸಾಧಿಸಿದರೇನು ? ಎಲ್ಲವೂ ಧೂರ್ತ ಸಂನ್ಯಾಸಿ–ಪೂಜಾರಿ–ಮಠಾಧೀಶ–ಪಂಡಾಗಳ ಪಾದಗಳಿಗೆ ಅರ್ಪಣವೇ !—ಸಂ.

ಮತ್ತು ಒಂದು "ಅವಸರ್ಪಿಣೀ"*ಕಾಲ ಮುಗಿಯುವುವೋ. ಆಗ ಒಂದು '**ಕಾಲಚಕ್ರ**'ವಾಗುತ್ತದೆ. ಯಾವಾಗ ಅನಂತ **ಕಾಲಚಕ್ರ**ಗಳು ಉರುಳಿ ಹೋಗುವುವೋ. ಆಗ ಒಂದು '**ಪುದ್ಗಲಪರಾವೃತ್ತ**'ವಾಗುತ್ತದೆ.

"ಈಗ. **ಅನಂತಕಾಲ,** ಎಂದು ಯಾವುದನ್ನು ಹೇಳುತ್ತಾರೆ? ಸಿದ್ಧಾಂತ ಪುಸ್ತಕಗಳಲ್ಲಿ ಒಂಬತ್ತು ದೃಷ್ಟಾಂತಗಳಿಂದ ಕಾಲದ ಯಾವ ಸಂಖ್ಯೆಯನ್ನು ಗಣಿಸಿದ್ದಾರೋ. ಅದರ ನಂತರ, '**ಅನಂತಕಾಲ**' ಎನಿಸುತ್ತದೆ. ಅಂತಹ ಅನಂತ **ಪುದ್ಗಲಪರಾವೃತ್ತ**ಕಾಲಗಳು ಜೀವನಿಗೆ ಆವಾಗಮನಮಾಡುತ್ತಾ ಕಳೆದಿವೆ. ಈ ಮೊದಲಾಗಿವೆ".

**(ಮೇಲೆ ಹೇಳಿದ ಕಾಲಗಣನೆ ಎಲ್ಲ ಅನರ್ಗಲ ಪ್ರಲಾಪ)**

[**ಸಮೀಕ್ಷಕ**]:—ಗಣಿತವಿದ್ಯೆ ತಿಳಿದ ಸೋದರ ಜನರೇ! ಆಲಿಸಿರಿ! [ನೀವು] ಜೈನರ ಗ್ರಂಥಗಳ ಕಾಲ–ಗಣನೆಯನ್ನು ಮಾಡಬಲ್ಲಿರೋ, ಅಥವಾ ಇಲ್ಲವೋ? ಮತ್ತು ನೀವು ಇದನ್ನು ಸತ್ಯವೆಂದೂ ಕೂಡ ಒಪ್ಪಬಲ್ಲಿರೋ, ಅಥವಾ ಇಲ್ಲವೋ?

ನೋಡಿರಿ! ಈ ತೀರ್ಥಂಕರರುಗಳು ಇಂತಹ ಗಣಿತ ವಿದ್ಯೆಯನ್ನು ಕಲಿತಿದ್ದರು! ಇಂತಿಂತಹ ಗುರುಗಳು ಮತ್ತು ಶಿಷ್ಯರು ಇವರ ಮತದಲ್ಲಿ ಇದ್ದಾರೆ! ಇವರ ಅವಿದ್ಯೆಗೆ ಯಾವುದೇ ಇತಿಮಿತಿಯೂ ಇಲ್ಲ!

**(ಜೈನರ ಇತರ ಅಸಂಭವ ಮಾತುಗಳು)**

ಇನ್ನೂ ಕೇಳಿರಿ, ಇವರ ಅಂಧಲೀಲೆಯನ್ನು! **ರತ್ನಸಾರ** ಭಾಗ[1], ಪುಟ134 ರಿಂದ ಹಿಡಿದು, ಏನೇನೋ '**ಬೂಟಾಬೋಲ್**', ಎಂದರೆ ಋಷಭದೇವನಿಂದಾರಂಭಿಸಿ, ಮಹಾವೀರನವರೆಗೆ ಯಾವ 24 ಮಂದಿ ಇವರ ತೀರ್ಥಂಕರರಾಗಿದ್ದರೋ, ಅವರುಗಳ ಸಿದ್ಧಾಂತಗ್ರಂಥದಲ್ಲಿ ವಚನಗಳ ಸಾರ ಸಂಗ್ರಹವಿದೆ. ಹೀಗೆಂದು **ರತ್ನಸಾರ** ಭಾಗ [1]ರ 148ನೆಯ ಪುಟದಲ್ಲಿ ಬರೆದಿದ್ದಾರೆ. ಎಂದರೆ—

**(ಪೃಥಿವೀಕಾಯ ಜೀವರ ಪರಿಮಾಣ ಮತ್ತು ಆಯುಸ್ಸು)**

"ಪೃಥಿವೀಕಾಯದ ಜೀವರನ್ನು, ಮಣ್ಣು, ಕಲ್ಲು ಮೊದಲಾದ ಪೃಥಿವಿಯ ಭೇದ, ಎಂದು ತಿಳಿಯಬೇಕು. ಅವುಗಳಲ್ಲಿರುವ ಜೀವರ ಶರೀರದ ಪರಿಮಾಣ ಒಂದು ಅಂಗುಲದ ಅಸಂಖ್ಯಾತ ಭಾಗವೆಂದು ತಿಳಿಯಬೇಕು. ಅಂದರೆ, ಅತ್ಯಂತ ಸೂಕ್ಷ್ಮರಾಗಿದ್ದಾರೆ! ಅವರ ಆಯುಸ್ಸಿನ ಅವಧಿ, ಎಂದರೆ ಆಯುಸ್ಸು, ಅಧಿಕಕ್ಕಿಂತ ಅಧಿಕ, 22 ಸಾವಿರ ವರ್ಷಪರ್ಯಂತ ಜೀವಿಸುತ್ತಾರೆ!"

---

*ಈ ಶಬ್ದಗಳು ಆಯುರ್ವೇದದ ಕಾಶ್ಯಪಸಂಹಿತೆಯಲ್ಲೂ ಇವೆ. ಆದರೆ, ಅದರಲ್ಲಿ ಇವುಗಳ ಅರ್ಥ ಬೇರೆಯಾಗಿದೆ.—ಯು. ಮೀ.

### (ಸಾಧಾರಣ ವನಸ್ಪತಿಯ ಜೀವಗಳ ಆಯುಸ್ಸು)

**ರತ್ನಸಾರ** ಭಾಗ [1]; ಪುಟ 149—

"ವನಸ್ಪತಿಯ ಒಂದು ಶರೀರದಲ್ಲಿ ಅನಂತ ಜೀವರಿರುತ್ತಾರೆ. ಯಾವುವು **ಕಂದ-ಮೂಲಪ್ರಧಾನವಾಗಿರುತ್ತವೋ**, ಅವು '**ಸಾಧಾರಣ ವನಸ್ಪತಿ**'ಗಳೆನಿಸುತ್ತವೆ. ಮತ್ತು **ಅನಂತಕಾಯಪ್ರಧಾನವಾದುವು** ಯಾವುವು ಇವೆಯೋ, ಅವುಗಳನ್ನು **ಸಾಧಾರಣ ವನಸ್ಪತಿಯ ಜೀವರು**ಗಳೆನ್ನಬೇಕು. ಅವುಗಳ ಆಯುಸ್ಸು '**ಅನಂತ ಮುಹೂರ್ತ**'ವಾಗಿರುತ್ತದೆ."

ಆದರೆ, ಇಲ್ಲಿ ಪೂರ್ವೋಕ್ತವಾದ ಇವರುಗಳ '**ಮುಹೂರ್ತ**'ವನ್ನು ಗ್ರಹಿಸಬೇಕು.

"ಮತ್ತು ಒಂದು ಶರೀರದಲ್ಲಿ **ಏಕೇಂದ್ರಿಯ**, ಎಂದರೆ ಕೇವಲ **ಸ್ಪರ್ಶೇಂದ್ರಿಯವು** ಇವುಗಳಲ್ಲಿರುತ್ತದೆ. ಮತ್ತು ಅದರಲ್ಲಿ ಒಬ್ಬ ಜೀವನಿರುತ್ತಾನೆ. ಅದನ್ನು **ಪ್ರತ್ಯೇಕ ವನಸ್ಪತಿ**, ಎನ್ನುತ್ತಾರೆ. ಅವನ ದೇಹದ ಅಳತೆ ಒಂದು ಸಾವಿರ ಯೋಜನಗಳು."

ಎಂದರೆ, **ಪೌರಾಣಿಕರ** ಯೋಜನ ನಾಲ್ಕು ಕೋಶಗಳು; ಆದರೆ, ಜೈನರ ಯೋಜನ 10,000 ಕೋಶಗಳಷ್ಟು ಇರುತ್ತದೆ.

"ಇಂತಹ ನಾಲ್ಕು ಸಾವಿರ ಕೋಶಗಳ ಶರೀರವಿರುತ್ತದೆ. ಅದರ ಆಯುಸ್ಸು, ಅಧಿಕಾಧಿಕವೆಂದರೆ, ಹತ್ತು ಸಾವಿರ ವರ್ಷಗಳಷ್ಟು ಆಗಿರುತ್ತದೆ".

### (ಶಂಖ, ಕವಡೆ, ಹೇನು ಮೊದಲಾದ ಶರೀರಗಳ ಪರಿಮಾಣ ಮತ್ತು ಆಯುಸ್ಸು)

"ಈಗ ಎರಡು ಇಂದ್ರಿಯಗಳನ್ನುಳ್ಳ ಜೀವರ ವಿಷಯ! ಎಂದರೆ, ಅವುಗಳ ಒಂದು ಶರೀರ ಮತ್ತು ಒಂದು ಮುಖ! ಶಂಖ, ಕವಡೆ ಮತ್ತು ಹೇನು ಮೊದಲಾದುವು ಇಂತಹವಾಗಿ ಇರುತ್ತವೆ. ಅವುಗಳ ದೇಹದ ಅಳತೆ, ಅಧಿಕಾಧಿಕವೆಂದರೆ, ನಲವತ್ತೆಂಟು ಕೋಶಗಳ ಸ್ಥೂಲಶರೀರವಾಗಿರುತ್ತದೆ. ಮತ್ತು ಅವುಗಳ ಆಯುಸ್ಸು, ಅತ್ಯಂತ ಹೆಚ್ಚೆಂದರೆ, ಹನ್ನೆರಡು ವರ್ಷಗಳಷ್ಟಾಗಿರುತ್ತದೆ."

### (ಜೈನರನ್ನು ಬಿಟ್ಟು, ಯಾವನಲ್ಲಿ ಇಂತಹ ದೊಡ್ಡ ಹೇನಿದೆ?)

**ಸಮೀಕ್ಷಕ:**—ಇಲ್ಲಿ ಬಹಳ ಮುಗ್ಗರಿಸಿದ್ದಾರೆ. ಏಕೆಂದರೆ, ಇಷ್ಟು ದೊಡ್ಡ ಶರೀರದ ಆಯುಸ್ಸುಗಳನ್ನು ಹೆಚ್ಚಾಗಿ ಬರೆಯಬೇಕಾಗಿದ್ದಿತು! ಮತ್ತು ನಲವತ್ತೆಂಟು ಕೋಶಗಳಷ್ಟು ದಪ್ಪವಾದ ಹೇನು ಜೈನರ ಶರೀರಗಳಲ್ಲಿ ಬೀಳುತ್ತಿರಬಹುದು! ಮತ್ತು ಅವರು ನೋಡಿಯೂ ಇರಬಹುದು! ಇಷ್ಟು ದೊಡ್ಡ ಹೇನನ್ನು ನೋಡಲು, ಬೇರೆಯವನಿಗೆ ಇಂತಹ ಭಾಗ್ಯವಾದರೂ ಎಲ್ಲಿದೆ!!

**(ಜೈನಮತಾನುಸಾರ ಚೇಳು ಮೊದಲಾದುವುಗಳ ಶರೀರ ಪರಿಮಾಣ)**

ಮತ್ತೂ ನೋಡಿರಿ, ಇವರ ಗೊತ್ತು-ಗುರಿಯಿಲ್ಲದ ಮಾತನ್ನು !

**ರತ್ನಸಾರ** ಭಾಗ[1], ಪುಟ 150—

"ಚೇಳುಗಳು, ತಿಗಣೆಗಳು, ಜಿರಲೆಗಳು ಮತ್ತು ನೊಣಗಳು ಒಂದು ಯೋಜನ ದಷ್ಟು ದೊಡ್ಡ ಶರೀರಗಳಿಂದ ಯುಕ್ತವಾಗಿವೆ! ಇವುಗಳ ಆಯುಸ್ಸು, ಅತ್ಯಂತ ಅಧಿಕವೆಂದರೆ, ಆರು ತಿಂಗಳಷ್ಟು ಆಗಿರುತ್ತದೆ".

[ಸಮೀಕ್ಷಕ:—]ನೋಡಿ ಸೋದರರೇ ! **ನಾಲ್ಕು-ನಾಲ್ಕು ಕೋಶದ ಚೇಳನ್ನು ಬೇರೆ ಯಾವನೂ ನೋಡಿರಲಾರನು !** [ಆದರೆ], ಎಂಟು ಮೈಲಿಗಳ ವರೆಗಿನ ಶರೀರಗಳನ್ನುಳ್ಳ ಚೇಳುಗಳು, ಮತ್ತು ನೊಣಗಳೂ ಕೂಡ, ಜೈನರ ಮತದಲ್ಲಿರುತ್ತವೆ! ಇಂತಹ ಚೇಳುಗಳು ಮತ್ತು ನೊಣಗಳು ಅವರ ಮನೆಗಳಲ್ಲಿಯೇ ಇರಬಹುದು! ಮತ್ತು ಅವರೇ ನೋಡಿರಬಹುದು! ಬೇರೆ ಯಾವನೂ ಜಗತ್ತಿನಲ್ಲಿ ನೋಡಿರಲಾರನು! **ಯಾವಾಗಲಾದರೂ ಇಂತಹ ಚೇಳುಗಳು ಯಾವನಾದರೂ ಜೈನನನ್ನು ಕುಟುಕಿದರೆ, ಅವನ ಗತಿ ಏನಾಗುತ್ತಿರಬಹುದು ?**

**(ಒಂದು ಸಾವಿರ ಯೋಜನ ಪರಿಮಾಣದ ಮೀನುಗಳು)**

"ಜಲಚರಗಳಾದ ಮೀನು ಮೊದಲಾದುವುಗಳ ಶರೀರದ ಅಳತೆ ಒಂದು ಸಾವಿರ ಯೋಜನ! ಎಂದರೆ 10,000 ಕೋಶಕ್ಕೆ ಒಂದು ಯೋಜನವೆಂದು ಗಣಿಸಿದರೆ, ಒಂದು ಕೋಟಿ ಕೋಶದ ಶರೀರವಾಗಿರುತ್ತದೆ. ಮತ್ತು ಇವಕ್ಕೆ ಒಂದು ಕೋಟಿ **'ಪೂರ್ವವರ್ಷ'**ಗಳ ಆಯುಸ್ಸಿರುತ್ತದೆ."

[ಸಮೀಕ್ಷಕ:—]ಅಂತಹ ಸ್ಥೂಲವಾದ ಜಲಚರವನ್ನು ಜೈನರ ಹೊರತು, ಬೇರೆ ಯಾವನೂ ನೋಡಿರಲಾರನು !

**(ಆನೆ ಮೊದಲಾದುವುಗಳ ಶರೀರಮಾನ ಮತ್ತು ಆಯುಸ್ಸು)**

"ಮತ್ತು ಚತುಷ್ಪಾದವಾದ ಆನೆ ಮೊದಲಾದುದರ ದೇಹದ ಅಳತೆ ಎರಡು ಕೋಶದಿಂದ ಒಂಬತ್ತು ಕೋಶಗಳವರೆಗೆ, ಮತ್ತು ಆಯುಸ್ಸು ಎಂಬತ್ತನಾಲ್ಕು ಸಾವಿರ ವರ್ಷಗಳು !—ಈ ಮೊದಲಾಗಿದೆ".

[ಸಮೀಕ್ಷಕ:—]ಇಂತಹ ದೊಡ್ಡ ದೊಡ್ಡ ಶರೀರಗಳ ಜೀವರನ್ನೂ ಕೂಡ, ಜೈನರೇ ನೋಡಿರಬಹುದು ! ಮತ್ತು ಅಂಗೀಕರಿಸುತ್ತಾರೆ. ಆದರೆ, ಯಾವ ಬುದ್ಧಿಶಾಲಿಯೂ ಒಪ್ಪಲಾರನು!

**(ಗರ್ಭಜ ಜಲಚರ ಜೀವಗಳ ದೇಹಮಾನ ಮತ್ತು ಆಯುಸ್ಸು)**

**ರತ್ನಸಾರ** ಭಾಗ [1] ಪುಟ 151—

"ಜಲಚರಗಳಲ್ಲಿ ಗರ್ಭದಿಂದ ಹುಟ್ಟುವ ಜೀವರ ದೇಹಗಳ ಅಳತೆ ಉತ್ಕೃಷ್ಟವಾದುದು ಒಂದು ಯೋಜನ ! ಎಂದರೆ, ಒಂದು ಕೋಟಿ ಕೋಶಗಳಷ್ಟು ! ಮತ್ತು ಆಯುಸ್ಸು ಒಂದು ಕೋಟಿ "ಪೂರ್ವವರ್ಷ"ಗಳಷ್ಟು ಆಗಿರುತ್ತದೆ."

[**ಸಮೀಕ್ಷಕ**]:—ಇಷ್ಟು ದೊಡ್ಡ ಶರೀರಗಳ ಮತ್ತು ಆಯುಸ್ಸಿನ ಜೀವರನ್ನೂ ಕೂಡ ಕೇವಲ ಇವರ ಆಚಾರ್ಯರುಗಳೇ ಸ್ವಪ್ನದಲ್ಲಿ ನೋಡಿರಬಹುದು! ಯಾವುದು ಎಂದಿಗೂ **ಸಂಭವವೇ ಆಗಲಾರದೋ**. ಅಂತಹ ಮಹಾಮಿಥ್ಯೆಯು ಮಾತಲ್ಲವೇ ಇದು?

**(ಜೈನರ ಭೂಗೋಳಜ್ಞಾನ ; ಭೂಮಿಯ ಪರಿಮಾಣ)**

ಈಗ ಕೇಳಿರಿ, ಭೂಮಿಯ ಪರಿಮಾಣವನ್ನು !

**ರತ್ನಾಸಾರ** ಭಾಗ [1] ಪುಟ 152—

"ಈ ಡೊಂಕಾದ ಲೋಕದಲ್ಲಿ ಅಸಂಖ್ಯಾತ ದ್ವೀಪಗಳೂ, ಮತ್ತು ಅಸಂಖ್ಯಾತ ಸಮುದ್ರಗಳೂ ಇವೆ. ಈ **ಅಸಂಖ್ಯಾತದ ಪ್ರಮಾಣವು**, ಎಂದರೆ ಎರಡೂವರೆ '**ಸಾಗರೋಪಮ**' ಕಾಲದಲ್ಲಿ ಎಷ್ಟು ಸಮಯವಾಗುವುದೋ, ಅಷ್ಟು ದ್ವೀಪಗಳೂ ಮತ್ತು ಸಮುದ್ರಗಳೂ ಇವೆ, ಎಂದು ತಿಳಿಯಬೇಕು".

"ಈಗ, ಈ ಪೃಥಿವಿಯಲ್ಲಿ '**ಜಂಬೂದ್ವೀಪ**'ವು ಮೊದಲನೆಯದು; ಎಲ್ಲ ದ್ವೀಪಗಳ ನಡುವೆ ಇದೆ. ಇದರ ವಿಸ್ತಾರ ಒಂದು ಲಕ್ಷ ಯೋಜನ ! ಎಂದರೆ, ಒಂದು ಅರ್ವ* ಕೋಶವಾಗಿದೆ.

"ಮತ್ತು ಇದರ ನಾಲ್ಕು ಕಡೆಯೂ '**ಲವಣಸಮುದ್ರ**'ವಿದೆ. ಅದರ ಪ್ರಮಾಣ ಎರಡು ಲಕ್ಷ ಯೋಜನ ಕೋಶ ! ಎಂದರೆ, ಎರಡು ಅರ್ವಕೋಶದಷ್ಟಿದೆ.

"ಈ ಜಂಬೂದ್ವೀಪದ ನಾಲ್ಕು ಕಡೆಯೂ "**ಧಾತಕೀ ಖಂಡ**", ಎಂಬ ಹೆಸರಿನ ಯಾವ ದ್ವೀಪವಿದೆಯೋ, ಅದರ ವಿಸ್ತಾರ ನಾಲ್ಕು ಲಕ್ಷ ಯೋಜನ ! ಎಂದರೆ, ನಾಲ್ಕು ಅರ್ವಕೋಶದಷ್ಟಿದೆ.

"ಮತ್ತು ಅದರ ಹಿಂದೆ '**ಕಾಲೋದಧಿ**' ಸಮುದ್ರವಿದೆ. ಅದರ ವಿಸ್ತಾರ ಎಂಟು ಲಕ್ಷ [ಯೋಜನ] ! ಎಂದರೆ, ಎಂಟು ಅರ್ವಕೋಶಗಳಷ್ಟಿದೆ.

---

***ಎಂದರೆ, 100 ಕೋಟಿ.—ಸಂ.**

"ಅದರ ಹಿಂದೆ "ಪುಷ್ಕರಾವರ್ತ" ದ್ವೀಪವಿದೆ. ಅದರ ವಿಸ್ತಾರ ಹದಿನಾರು [ಲಕ್ಷ ಯೋಜನ!, ಎಂದರೆ ಹದಿನಾರು ಅರ್ಧ] ಕೋಶದಷ್ಟಿದೆ. ಈ ದ್ವೀಪದ ಒಳಭಾಗ ಉಚ್ಚ-ನೀಚವಾಗಿದೆ. ಆ ದ್ವೀಪದ ಅರ್ಧ ಭಾಗದಲ್ಲಿ ಮನುಷ್ಯರು ವಾಸಿಸುತ್ತಾರೆ. ಮತ್ತು ಅದರಿಂದ ಮುಂದಕ್ಕೆ ಅಸಂಖ್ಯಾತ ದ್ವೀಪಗಳೂ, ಸಮುದ್ರಗಳೂ ಇವೆ. ಅವುಗಳಲ್ಲಿ ತಿರ್ಯಗ್ಯೋನಿ ಜೀವರಿರುತ್ತಾರೆ."

**ರತ್ನಸಾರ** ಭಾಗ [1] ಪುಟ 153—

"ಜಂಬೂದ್ವೀಪದ ಒಂದು **ಹಿಮವಂತ**, ಒಂದು **ಐರಣ್ಯವಂತ**, ಒಂದು **ಹರಿವರ್ಷ**, ಒಂದು **ರಮ್ಯಕ**, ಒಂದು **ದೇವಕುರು**, ಒಂದು **ಉತ್ತರಕುರು—ಈ ಆರು ಕ್ಷೇತ್ರಗಳಿವೆ."***

**(ಜೈನ ಆಚಾರ್ಯರು ಭೂಗೋಳ–ಖಗೋಳ ವಿದ್ಯೆಯನ್ನು ತಿಳಿದಿರಲಿಲ್ಲ)**

**ಸಮೀಕ್ಷಕ:**— ಕೇಳಿ ಸೋದರರೇ ! ಭೂಗೋಳವಿದ್ಯೆ ತಿಳಿದ ಜನರೇ ! ಭೂಗೋಳದ ಅಳತೆ ಮಾಡುವಲ್ಲಿ ನೀವು ಮುಗ್ಗರಿಸಿದಿರೋ, ಅಥವಾ ಜೈನರೋ ? ಜೈನರು ತಪ್ಪು ಮಾಡುವವರಾದರೆ, ನೀವು ಅವರಿಗೆ ತಿಳುವಳಿಕೆ ಹೇಳಿರಿ. ಮತ್ತು ನೀವೇ ತಪ್ಪು ಮಾಡಿರುವಿರಾದರೆ, ಅವರಿಂದ ತಿಳುವಳಿಕೆ ಪಡೆದುಕೊಳ್ಳಿರಿ !

ಸ್ವಲ್ಪ ಆಲೋಚಿಸಿ ನೋಡುವಿರಾದರೆ, **ಜೈನರ ಆಚಾರ್ಯರು ಮತ್ತು ಶಿಷ್ಯರು ಭೂಗೋಳ ಮತ್ತು ಗಣಿತ ವಿದ್ಯೆಯನ್ನು ಸ್ವಲ್ಪವೂ ಓದಿರಲಿಲ್ಲವೆಂದೇ ನಿಶ್ಚಯವಾಗುತ್ತದೆ !** ಓದಿದ್ದ ಪಕ್ಷದಲ್ಲಿ, ಮಹಾ ಅಸಂಭವವಾದ ಬುರುಡೆಗಳನ್ನೇಕೆ ಹೊಡೆಯುತ್ತಿದ್ದರು ?

**(ಜೈನಗ್ರಂಥಗಳಲ್ಲಿ ಅವಿದ್ಯಾಯುಕ್ತ ಮಾತುಗಳು ತುಂಬಿತುಳುಕುತ್ತಿವೆ)**

ಅಲ್ಲಾ ! ಇಂತಹ ಅವಿದ್ಯಾವಂತರಾದ ಪುರುಷರು ಜಗತ್ತನ್ನು ಅಕರ್ತೃಕವೆಂದು [ತಿಳಿದರೆ], ಮತ್ತು ಈಶ್ವರನನ್ನು ಒಪ್ಪದಿದ್ದರೆ, ಇದರಲ್ಲಿ ಆಶ್ಚರ್ಯವೇನಿದೆ ?

---

*ಜೈನರ ಗ್ರಂಥಗಳಲ್ಲಿನ ಅನೇಕ ಭೌಗೋಳಿಕ ಹೆಸರುಗಳು ಹಿಂದುಗಳ ಪುರಾಣಗಳಲ್ಲೂ ಇವೆ. ಹಿಂದುಗಳ ಪುರಾಣಗಳು ನವೀನವಾದ್ದರಿಂದ, ಅವುಗಳಲ್ಲಿನ ಈ ಕಲ್ಪನಾಲೋಕ ಜೈನ ಗ್ರಂಥಗಳಿಂದ ಆಯ್ದುಕೊಂಡದ್ದು, ಎಂಬುದರಲ್ಲಿ ಸಂದೇಹವಿಲ್ಲ.

ಪಾತಂಜಲ ಯೋಗದರ್ಶನದ ವ್ಯಾಸಭಾಷ್ಯದಲ್ಲಿ 'ಭುವನಜ್ಞಾನಂ ಸೂರ್ಯೇ ಸಂಯಮಾತ್' (3/26) ಸೂತ್ರದ ಭಾಷ್ಯದಲ್ಲಿ ಕಲ್ಪಿತ ಲೋಕಗಳ ಇಂತಹ ಅಸಂಬದ್ಧ ಪ್ರಲಾಪವಿದೆ. ಭಾಷ್ಯದ ಈ ಭಾಗ, ಮತ್ತು ಇದೇ ತರಹದ ಅನೇಕ ಅಂಶಗಳು ಜೈನರಿಂದ ಪ್ರಕ್ಷಿಪ್ತವಾಗಿವೆ. ಪಾತಂಜಲ ಯೋಗದರ್ಶನದ ವಿಭೂತಿಪಾದ ಮತ್ತ ಕೈವಲ್ಯಪಾದಗಳಲ್ಲಿ ಅನೇಕ ಸೂತ್ರಗಳೇ ಪ್ರಕ್ಷಿಪ್ತವಾಗಿವೆ.—ಸಂ.

ಇದೇ ಕಾರಣದಿಂದ, ಜೈನರು ತಮ್ಮ ಪುಸ್ತಕಗಳನ್ನು ಯಾವ ವಿದ್ವಾಂಸರಾದ ಅನ್ಯಮತಸ್ಥರಿಗೂ ಕೊಡುವುದಿಲ್ಲ. ಏಕೆಂದರೆ. ಯಾವುವನ್ನು ಈ ಜನರು ಪ್ರಾಮಾಣಿಕವಾದ, ತೀರ್ಥಂಕರರುಗಳಿಂದ ರಚಿತವಾದ ಸಿದ್ಧಾಂತ ಗ್ರಂಥಗಳೆಂದು ಅಂಗೀಕರಿಸುತ್ತಾರೋ, ಅವುಗಳಲ್ಲಿ ಇದೇ ರೀತಿಯ **ಅವಿದ್ಯಾಯುಕ್ತವಾದ ಮಾತುಗಳೇ ತುಂಬಿಕೊಂಡಿವೆ!** ಆದುದರಿಂದ, ಅವುಗಳನ್ನು ನೋಡಲು ಅವಕಾಶ ಕೊಡುವುದಿಲ್ಲ. ಕೊಟ್ಟರೆ, ಪೊಳ್ಳು ಹೊರಬಿದ್ದೀತು! ಇವರ ಹೊರತು, ಯಾವನೇ ಮಾನವನು, ಸ್ವಲ್ಪವಾದರೂ ಬುದ್ಧಿಯನ್ನು ಹೊಂದಿರುವವನಾದರೆ, ಅವನು ಎಂದಿಗೂ ಈ ಬುರುಡೆ–ಕಗ್ಗವನ್ನು ಸತ್ಯವೆಂದು ಅಂಗೀಕರಿಸಲಾರನು.

## (ಈ ಎಲ್ಲ 'ಪ್ರಪಂಚ' ಜಗತ್ತನ್ನು ಅನಾದಿ, ಎಂದು ಅಂಗೀಕರಿಸುವುದಕ್ಕಾಗಿ)

ಈ ಸಮಸ್ತ 'ಪ್ರಪಂಚ'ವನ್ನೂ ಜೈನರು ಜಗತ್ತನ್ನು ಅನಾದಿಯೆಂದು ಅಂಗೀಕರಿಸುವುದಕ್ಕಾಗಿಯೇ ಮಾಡಿದ್ದಾರೆ. ಆದರೆ, ಇದು ಬರಿಯ ಸುಳ್ಳು!

ಅಹುದು! ಜಗತ್ತಿನ ಕಾರಣ ಅನಾದಿಯಾಗಿದೆ. ಏಕೆಂದರೆ, ಪರಮಾಣು ಮೊದಲಾದ ಆ ತತ್ತ್ವಸ್ವರೂಪವು ಅಕರ್ತೃಕವಾಗಿದೆ. ಆದರೆ, ಅವುಗಳಲ್ಲಿ ನಿಯಮ ಪೂರ್ವಕವಾಗಿ ಆಗುವ ಅಥವಾ ಕೆಡುವ ಸಾಮರ್ಥ್ಯವು ಸ್ವಲ್ಪವೂ ಇಲ್ಲ. ಏಕೆಂದರೆ, **ಪರಮಾಣುಗಳು. ಎಂಬುದು ಒಂದು ದ್ರವ್ಯದ ಹೆಸರಾಗಿದೆ. ಮತ್ತು ಸ್ವಭಾವತಃ [ಅವು] ಬೇರೆ ಬೇರೆ ರೂಪವಾಗಿದ್ದು, ಜಡವಾಗಿವೆ! ಅವು ತಮ್ಮಷ್ಟಕ್ಕೆ ತಾವೇ ಯಥಾಯೋಗ್ಯವಾಗಿ ರೂಪ ತಾಳಲಾರವು.** ಆದುದರಿಂದ, ಇವುಗಳಿಂದ ಸೃಷ್ಟಿಯನ್ನು ರಚಿಸುವವನಾದ ಚೇತನನು ಅವಶ್ಯವಾಗಿಯೂ ಇದ್ದಾನೆ! ಮತ್ತು ಆ ರಚನಾಕರ್ತೃವು ಜ್ಞಾನಸ್ವರೂಪನಾಗಿದ್ದಾನೆ!

## (ಸೂರ್ಯಾದಿ ಲೋಕಗಳನ್ನು ನಿಯಮದಲ್ಲಿಡುವುದು ಈಶ್ವರನ ಕೆಲಸ)

ನೋಡಿರಿ! ಪೃಥಿವೀ, ಸೂರ್ಯ ಮೊದಲಾದ ಸಮಸ್ತ ಲೋಕಗಳನ್ನು ನಿಯಮದಲ್ಲಿಡುವುದು ಅನಂತನೂ. ಅನಾದಿಯೂ, ಚೇತನನೂ ಆದ ಪರಮಾತ್ಮನ ಕಾರ್ಯವಾಗಿದೆ. ಯಾವುದರಲ್ಲಿ ಸಂಯೋಗವೂ. ರಚನಾವಿಶೇಷವೂ ಕಾಣಿಸುತ್ತದೋ, ಆ ಸ್ಥೂಲ ಜಗತ್ತು ಅನಾದಿ ಎಂದಿಗೂ ಆಗಲಾರದು.

'ಕಾರ್ಯಜಗತ್ತನ್ನು ನಿತ್ಯ', ಎಂದು ಅಂಗೀಕರಿಸುವಿರಾದರೆ, ಅದರ ಕಾರಣವಾವುದೂ ಇರಲಾರದು.

'ಆದರೆ, ಅದೇ ಕಾರ್ಯ–ಕಾರಣರೂಪವಾಗಿ ಹೋಗುವುದು', ಎಂದು ಹೇಳುವಿರಾದರೆ. ತನ್ನ ಕಾರ್ಯ ಮತ್ತು ಕಾರಣ ತಾನೇ ಆಗುವುದರಿಂದ. **ಅನ್ಯೋಽನ್ಯಾಶ್ರಯ**

ಮತ್ತು ಆತ್ಮಾಶ್ರಯ ದೋಷ ಬರುವುದು. ಉದಾಹರಣೆಗಾಗಿ—ತನ್ನ ಹೆಗಲಿನ ಮೇಲೆ ತಾನು ಏರುವುದೂ ಮತ್ತು ತನ್ನ ತಂದೆಯೂ, ಮಗನೂ ತಾನೇ ಆಗುವುದೂ ಶಕ್ಯವಲ್ಲ. ಆದುದರಿಂದ, ಜಗತ್ತಿನ ಕರ್ತೃವನ್ನು ಅವಶ್ಯವಾಗಿಯೇ ಅಂಗೀಕರಿಸಬೇಕಾಗಿದೆ.

**(ಕರ್ತೃವಿನ ಕರ್ತೃ ಮತ್ತು ಕಾರಣದ ಕಾರಣವಿರುವುದಿಲ್ಲ)**

ಪ್ರಶ್ನೆ:—ಈಶ್ವರನನ್ನು ಜಗತ್ತಿನ ಕರ್ತೃವೆಂದು ಗ್ರಹಿಸುವಿರಾದರೆ, ಈಶ್ವರನ ಕರ್ತೃ ಯಾವನು ?

ಉತ್ತರ:—ಕರ್ತೃವಿನ ಕರ್ತೃವು, ಮತ್ತು ಕಾರಣದ ಕಾರಣ ಯಾವನೂ, ಯಾವುದೂ ಆಗಲಾರದು. ಏಕೆಂದರೆ, **ಮೊದಲು ಕರ್ತೃ, ಮತ್ತು ಕಾರಣವಿರುವುದರಿಂದಲೇ ಕಾರ್ಯವಾಗುತ್ತದೆ.** ಯಾವುದರಲ್ಲಿ ಸಂಯೋಗ-ವಿಯೋಗವಾಗುವುದಿಲ್ಲವೋ, ಯಾವುದು ಪ್ರಥಮ ಸಂಯೋಗ-ವಿಯೋಗದ ಕಾರಣವೋ, ಅದರ ಕರ್ತೃ ಅಥವಾ ಕಾರಣ ಯಾವ ರೀತಿಯುಲ್ಲಿಯೂ ಇರಲಾರದು. ಇದರ ವಿಶೇಷ ವ್ಯಾಖ್ಯಾನವನ್ನು **ಎಂಟನೆಯ ಸಮುಲ್ಲಾಸದಲ್ಲಿ, ಸೃಷ್ಟಿ–ವಿವರಣೆಯಲ್ಲಿ** ಬರೆದಿದ್ದೇವೆ.* ನೋಡಿಕೊಳ್ಳಿರಿ !

**(ದ್ರವ್ಯಪರ್ಯಾಯಗಳನ್ನು ಅನಾದಿ,**
**ಅನಂತ, ಎಂದು ತಿಳಿಯುವುದು ಬುದ್ಧಿವಿರುದ್ಧ)**

ಈ ಜೈನರಿಗೆ ಸ್ಥೂಲವಾದ ವಿಷಯದ ಜ್ಞಾನವೂ ಯಥಾವತ್ತಾಗಿ ಇಲ್ಲ; ಎಂದಮೇಲೆ, ಪರಮ ಸೂಕ್ಷ್ಮವಾದ ಸೃಷ್ಟಿವಿದ್ಯಾಜ್ಞಾನ ಹೇಗೆ ತಾನೇ ಆಗಲು ಶಕ್ಯ? ಆದ್ದರಿಂದ, "ಜೈನರು ಸೃಷ್ಟಿಯನ್ನು ಅನಾದಿ-ಅನಂತವೆಂದೂ ಗ್ರಹಿಸುತ್ತಾರೆ. ದ್ರವ್ಯಪರ್ಯಾಯಗಳನ್ನೂ† ಅನಾದಿ, ಅನಂತವೆಂದು ತಿಳಿಯುತ್ತಾರೆ. ಮತ್ತು ಪ್ರತಿಯೊಂದು ಗುಣದಲ್ಲಿಯೂ, ಪ್ರತಿಯೊಂದು ದೇಶದಲ್ಲಿಯೂ ಪರ್ಯಾಯಗಳನ್ನೂ, ಮತ್ತು ಪ್ರತಿವಸ್ತುವಿನಲ್ಲಿಯೂ ಅನಂತ ಪರ್ಯಾಯವನ್ನೂ ಗ್ರಹಿಸುತ್ತಾರೆ", ಎಂದು **ಪ್ರಕರಣ ರತ್ನಾಕರದ** ಪ್ರಥಮ ಭಾಗದಲ್ಲಿ ಬರೆದಿದ್ದಾರೆ.

ಈ ಮಾತೂ ಕೂಡ, ಎಂದಿಗೂ ಅನ್ವಯಿಸಲಾರದು. ಏಕೆಂದರೆ, 'ಅಂತ', ಎಂದರೆ ಎಲ್ಲೆಯಿರುವ ತತ್ತ್ವಗಳಿಗೆ ಸಂಬಂಧಿಸಿದುದೆಲ್ಲವೂ ಅಂತಯುಕ್ತವೇ ಆಗಿರುತ್ತವೆ. 'ಅನಂತ', ಎಂಬ ಶಬ್ದಕ್ಕೆ ಅಸಂಖ್ಯ, ಎಂದು ಅರ್ಥಮಾಡಿದರೂ

---

*ಪುಟ 408ನ್ನು ನೋಡಿ —ಸಂ.

†ಪರಿವರ್ತನ, ಎಂಬುದಕ್ಕೆ ಜೈನರು ಬಳಸುವ ಪಾರಿಭಾಷಿಕ ಶಬ್ದ 'ಪರ್ಯಾಯ', ಎಂಬುದು—ಅನು.

ಸರಿಹೋಗದು. ಆದರೆ, 'ಜೀವ'ನ ದೃಷ್ಟಿಯಿಂದ ಈ ಮಾತು ಸರಿಹೋಗಬಹುದು;* ಪರಮೇಶ್ವರನ ದೃಷ್ಟಿಯಿಂದಲ್ಲ! ಏಕೆಂದರೆ, ಒಂದೊಂದು ದ್ರವ್ಯದಲ್ಲಿನ ತನ್ನ ತನ್ನ ಒಂದೊಂದು ಕಾರ್ಯಕಾರಣ ಸಾಮರ್ಥ್ಯವನ್ನು ಅವಿಭಾಗ ಪರ್ಯಾಯಗಳಿಂದ ಅನಂತ ಸಾಮರ್ಥ್ಯವೆಂದು ಗ್ರಹಿಸುವುದು ಕೇವಲ ಅವಿದ್ಯೆಯ ಮಾತಾಗಿರುತ್ತದೆ.

ಒಂದು ಪರಮಾಣು ದ್ರವ್ಯಕ್ಕೆ ಎಲ್ಲೆ ಇರುವಾಗ ಅನಂತವಾದ ಭಾಗಗಳಾಗುವ ಪರ್ಯಾಯಗಳು ಘಟಿಸಬಲ್ಲವೆಂತು? ಹೀಗೆಯೇ, ಒಂದೊಂದು ದ್ರವ್ಯದಲ್ಲಿ ಅನಂತ ಗುಣಗಳನ್ನೂ, ಮತ್ತು ಒಂದು ಗುಣಪ್ರದೇಶದಲ್ಲಿ ಅವಿಭಾಗರೂಪವಾದ ಅನಂತ ಪರ್ಯಾಯಗಳನ್ನೂ ಅನಂತವೆಂದು ಗ್ರಹಿಸುವುದು ಹುಡುಗುತನದ ಮಾತಾಗಿದೆ! **ಏಕೆಂದರೆ, ಯಾವುದರ ಅಧಿಕರಣಕ್ಕೆ† ಅಂತವಿದೆಯೋ, ಅದರಲ್ಲಿರುವ ತತ್ತ್ವಗಳಿಗೆ ಅಂತ ಏಕಿಲ್ಲ ?**

ಇದೇ ರೀತಿಯ ಉದ್ದುದ್ದದ-ಅಗಲಗಲದ ಮಿಥ್ಯಾ ವಿಷಯಗಳನ್ನು ಬರೆದಿದ್ದಾರೆ !

## (ಜಡ ಪುದ್ಗಲವು ಪಾಪ-ಪುಣ್ಯಯುಕ್ತವಾಗಲಾರದು)

ಈಗ **ಜೀವ** ಮತ್ತು **ಅಜೀವ**-ಈ ಎರಡು ಪದಾರ್ಥಗಳ ವಿಷಯದಲ್ಲಿ ಜೈನರ ನಿಶ್ಚಯ ಹೀಗಿದೆ:—

**ಚೇತನಾಲಕ್ಷಣೋ ಜೀವಃ ಸ್ಯಾದಜೀವಸ್ತದನ್ಯಕಃ ।**
**ಸತ್ಕರ್ಮಪುದ್ಗಲಾಃ ಪುಣ್ಯಂ ಪಾಪಂ ತಸ್ಯ ವಿಪರ್ಯಯಃ ॥‡**

ಇದು '**ಜಿನದತ್ತಸೂರಿ**'ಯ ವಚನವಾಗಿದೆ. ಮತ್ತು ಇದೇ "**ಪ್ರಕರಣ ರತ್ನಾಕರ**"ದ ಮೊದಲನೆಯ ಭಾಗದ "**ನಯಚಕ್ರಸಾರ**"ದಲ್ಲಿಯೂ—

"ಚೇತನವನ್ನೇ ಲಕ್ಷಣವಾಗಿ ಉಳ್ಳವನು 'ಜೀವ'; ಮತ್ತು ಚೇತನಾರಹಿತನು 'ಅಜೀವ', ಎಂದರೆ. ಜಡದ್ರವ್ಯ. ಸತ್ಕರ್ಮರೂಪ ಪುದ್ಗಲಗಳೇ ಪುಣ್ಯ; ಮತ್ತು ದುಷ್ಕರ್ಮರೂಪ ಪುದ್ಗಲಗಳು ಪಾಪ ಮಾಡಿಸುತ್ತವೆ", ಎಂದು ಬರೆದಿದ್ದಾರೆ.

---

*'ಅನಂತ' ಎಂದರೆ, ಅಸಂಖ್ಯವೆಂದು ಔಪಚಾರಿಕವಾಗಿ ಒಪ್ಪಬಹುದು.—ಅನು.

†ನೆಲೆ, ಆಶ್ರಯ—ಅನು.

‡ಆರ್ಹತದರ್ಶನ; ಪುಟ 87—ಯು.ಮೀ.

**ಸಮೀಕ್ಷಕ:**—ಜೀವ ಮತ್ತು ಜಡದ ಲಕ್ಷಣವೇನೋ ಸರಿಯಾಗಿದೆ. ಆದರೆ, ಜಡರೂಪವಾದ ಯಾವ ಪುದ್ಗಲಗಳಿವೆಯೋ, ಅವು ಎಂದಿಗೂ ಪಾಪ-ಪುಣ್ಯ ಯುಕ್ತವಾಗಲಾರವು. ಏಕೆಂದರೆ, **ಪಾಪ-ಪುಣ್ಯಮಾಡುವ ಸ್ವಭಾವ ಚೇತನನಲ್ಲಿರುತ್ತದೆ.**

ನೋಡಿರಿ! **ಈ ಜಡಪದಾರ್ಥಗಳೆಷ್ಟಿವೆಯೋ, ಅವೆಲ್ಲವೂ ಪಾಪ-ಪುಣ್ಯ ರಹಿತವಾಗಿವೆ !**

ಜೀವರನ್ನು ಅನಾದಿಯೆಂದು ಗ್ರಹಿಸುವುದೇನೋ ಸರಿ ! ಆದರೆ, ಅದೇ ಅಲ್ಪನೂ, ಅಲ್ಪಜ್ಞನೂ ಆದ ಜೀವನನ್ನು ಮುಕ್ತಿಸ್ಥಿತಿಯಲ್ಲಿ ಸರ್ವಜ್ಞನೆಂದು ಗ್ರಹಿಸುವುದು ತಪ್ಪು ! ಏಕೆಂದರೆ, ಯಾವನು ಅಲ್ಪನೂ ಮತ್ತು ಅಲ್ಪಜ್ಞನೂ ಆಗಿರುತ್ತಾನೋ, ಅವನ ಸಾಮರ್ಥ್ಯವೂ ಕೂಡ ಅಲ್ಪವೇ ಆಗಿ, ಸದಾ ಸಸೀಮವಾಗಿ ಇರುವುದು.

### (ಜಗತ್ತು, ಜೀವರ ಕರ್ಮ ಮತ್ತು ಬಂಧನ ಅನಾದಿಯಾಗಲಾರವು)

ಜೈನರು ಜಗತ್ತು, ಜೀವರು, ಜೀವರ ಕರ್ಮಗಳು ಮತ್ತು ಬಂಧನವನ್ನು ಅನಾದಿಯೆಂದು ಅಂಗೀಕರಿಸುತ್ತಾರೆ. ಇಲ್ಲಿಯೂ ಕೂಡ, ಜೈನರ ತೀರ್ಥಂಕರರು ತಪ್ಪುಮಾಡಿದ್ದಾರೆ. ಏಕೆಂದರೆ, ಸಂಯುಕ್ತವಾದ ಜಗತ್ತಿನ ಕಾರಣ, ಕಾರ್ಯ ಪ್ರವಾಹದಿಂದ ಕಾರ್ಯ[ರೂಪ ಜಗತ್ತೂ], ಮತ್ತು ಜೀವನ ಕರ್ಮಗಳೂ, ಹಾಗೂ ಬಂಧನವೂ [ಪ್ರವಾಹದಿಂದ ಅನಾದಿಯಾದರೂ, ಸ್ವರೂಪತಃ] ಅನಾದಿಯಾಗಿರಲಾರವು.

ಯಾವಾಗ ಹೀಗೆ ಒಪ್ಪುತ್ತೀರೋ, ಮತ್ತೆ ಕರ್ಮ ಮತ್ತು ಬಂಧನದಿಂದ ಬಿಡುಗಡೆಯಾಗುವುದನ್ನು ಏಕೆ ಅಂಗೀಕರಿಸುತ್ತೀರಿ ? ಏಕೆಂದರೆ, ಯಾವ ಪದಾರ್ಥ ಅನಾದಿಯಾಗಿರುತ್ತದೋ, ಅದು ಎಂದಿಗೂ ಬಿಟ್ಟುಹೋಗಲಾರದು.

ಅನಾದಿಯಾದುದರ ನಾಶವನ್ನೂ ಕೂಡ, ಅಂಗೀಕರಿಸುವಿರಾದರೆ, ನಿಮ್ಮ ಸಮಸ್ತ ಅನಾದಿ ಪದಾರ್ಥಗಳ ನಾಶದ ಪ್ರಸಂಗವೂ ಬರುವುದು ! ಮತ್ತು ಆಗ ಸಮಸ್ತ ಕರ್ಮಗಳ ನಾಶದ ಪ್ರಸಂಗವೂ ಬರುವುದು !

ಹಾಗೆಯೇ, ಅನಾದಿಯಾದುದನ್ನು ನಿತ್ಯವೆಂದು ತಿಳಿಯುವಿರಾದರೆ, ಕರ್ಮವೂ ಮತ್ತು [ಕರ್ಮ]ಬಂಧವೂ ಕೂಡ ನಿತ್ಯವೆಂದಾಗುವುದು.

ಮತ್ತು ಸಮಸ್ತ ಕರ್ಮಗಳ ಬಿಟ್ಟು ಹೋಗುವಿಕೆಯಿಂದ, ಮುಕ್ತಿಯನ್ನು ಅಂಗೀಕರಿಸುವಿರಾದರೆ, ಸಮಸ್ತ ಕರ್ಮಗಳ ಬಿಟ್ಟು ಹೋಗುವಿಕೆಯೆಂಬುದು ಮುಕ್ತಿಯ

ನಿಮಿತ್ತವಾಯಿತು. ಈ ಸ್ಥಿತಿಯಲ್ಲಿ ನೈಮಿತ್ತಿಕೀ*ಮುಕ್ತಿ ಆದಾಯಿತು. ಹಾಗಾದರೆ, ಅದು ಶಾಶ್ವತವಾಗದು,

ಹಾಗೂ, ಕರ್ಮ-ಕರ್ತೃಗಳ ಸಂಬಂಧ ನಿತ್ಯವಾಗಿರುವುದರಿಂದ, ಕರ್ಮಗಳೂ ಕೂಡ, ಎಂದಿಗೂ ಬಿಟ್ಟು ಹೋಗುವುದಿಲ್ಲ. ಮತ್ತೆ. ನಿಮ್ಮ ಮುಕ್ತಿಯನ್ನೂ ಮತ್ತು ನಿಮ್ಮ ತೀರ್ಥಂಕರರ ಮುಕ್ತಿಯನ್ನೂ ನಿತ್ಯವೆಂದು ಅಂಗೀಕರಿಸುವುದು ಯುಕ್ತವಾಗಲಾರದು.

## (ಸಾಧನಗಳಿಂದ ಪಡೆದ ಮುಕ್ತಿ ಎಂದಿಗೂ ನಿತ್ಯವಾಗಲಾರದು)

**ಪ್ರಶ್ನೆ:—**ಹೇಗೆ ಧಾನ್ಯದ ಸಿಪ್ಪೆಯನ್ನು† ತೆಗೆದುಬಿಡುವುದರಿಂದ, ಅಥವಾ ಬೆಂಕಿಯನ್ನು ಹೊತ್ತಿಸುವುದರಿಂದ, ಆ ಬೀಜವು ಮತ್ತೆ ಬೆಳೆಯುವುದಿಲ್ಲವೋ, ಹಾಗೆಯೇ, ಮುಕ್ತಿಯನ್ನು ಪಡೆದುಕೊಂಡು, ಜೀವನು ಪುನಃ ಜನನ-ಮರಣರೂಪದ ಜಗತ್ತಿಗೆ ಬರುವುದಿಲ್ಲ.

**ಉತ್ತರ:—**ಜೀವರ ಮತ್ತು ಕರ್ಮಗಳ ಸಂಬಂಧ ಸಿಪ್ಪೆ ಮತ್ತು ಬೀಜದ [ಸಂಬಂಧ] ದಂತೆ ಇಲ್ಲ. ಆದರೆ, ಇವರದು **ಸಮವಾಯ ಸಂಬಂಧ**‡ವಾಗಿದೆ. ಈ ಕಾರಣದಿಂದ, ಅನಾದಿ ಕಾಲದಿಂದ [ಜೀವನಿದ್ದಾನೆ;] ಮತ್ತು ಅವನಲ್ಲಿ ಕರ್ಮ, ಹಾಗೂ ಕರ್ತೃತ್ವ ಶಕ್ತಿಯ ಸಂಬಂಧವಿದೆ. ಅವನಲ್ಲಿ ಕರ್ಮ ಮಾಡುವ ಶಕ್ತಿಯ ಅಭಾವವನ್ನೂ ಕೂಡ, ಅಂಗೀಕರಿಸುವಿರಾದರೆ, ಜೀವರೆಲ್ಲರೂ ಪಾಷಾಣದಂತೆ ಆಗಿ ಹೋಗುವರು ! ಮತ್ತು ಮುಕ್ತಿಯನ್ನನುಭವಿಸುವ ಸಾಮರ್ಥ್ಯವೂ ಇರಲಾರದು.

ಅನಾದಿಕಾಲದ ಕರ್ಮಬಂಧನವು ಬಿಟ್ಟುಹೋಗಿ, ಹೇಗೆ ಜೀವನು ಮುಕ್ತನಾಗುವನೋ, ಹಾಗೆಯೇ ನಿಮ್ಮ ಮುಕ್ತಿಯಿಂದಲೂ ಹೊರಬಂದು. ಬಂಧನದಲ್ಲಿ ಬೀಳುವನು. ಏಕೆಂದರೆ, ಕರ್ಮವೆಂಬ ಮುಕ್ತಿಸಾಧನಗಳಿಂದ ಬಿಡುಗಡೆ ಹೊಂದಿ, 'ಜೀವ'ನ ಮುಕ್ತನಾಗುವಿಕೆಯನ್ನು ಅಂಗೀಕರಿಸುವ ಹಾಗೆಯೇ, ನಿತ್ಯಮುಕ್ತಿಯಿಂದಲೂ ಹೊರಬಂದು ಬಂಧನದಲ್ಲಿ ಬೀಳುವನು.$

**ಸಾಧನಗಳಿಂದ ಸಿದ್ಧವಾದ ಪದಾರ್ಥ ಎಂದಿಗೂ ನಿತ್ಯವಾಗಲಾರದು.** ಮತ್ತು ಸಾಧನಗಳಿಲ್ಲದೆಯೇ ಸಿದ್ಧವಾಗುವ ಮುಕ್ತಿಯನ್ನು ಅಂಗೀಕರಿಸುವಿರಾದರೆ, ಕರ್ಮಗಳಿಲ್ಲದೆಯೇ ಬಂಧನವೂ ಪ್ರಾಪ್ತವಾಗಬಲ್ಲದು.

---

*ನಿಮಿತ್ತದಿಂದ ಲಭಿಸುವ.—ಅನು.

†ಹೊಟ್ಟನ್ನು.—ಅನು.

‡ನಿತ್ಯಸಂಬಂಧ.—ಅನು.

$ಎಂಬುದಾಗಿಯೂ ಒಪ್ಪಿಕೊಳ್ಳಬೇಕಾದೀತು.—ಅನು.

ಹೇಗೆ ವಸ್ತುಗಳಿಗೆ ಕೊಳೆ ಹತ್ತಿಕೊಳ್ಳುತ್ತದೋ, ಮತ್ತು ತೊಳೆಯುವುದರಿಂದ ಬಿಟ್ಟು ಹೋಗುತ್ತದೋ, ಮತ್ತೆಯೂ ಕೊಳೆ ಅಂಟಿಕೊಳ್ಳುತ್ತದೋ, ಹಾಗೆ, ಮಿಥ್ಯಾತ್ವವೇ ಮೊದಲಾದ ಕಾರಣಗಳಿಂದ, ರಾಗ–ದ್ವೇಷ ಮೊದಲಾದುದರ ಆಶ್ರಯದಿಂದ, ಜೀವನಿಗೆ ಕರ್ಮಫಲ ಅಂಟಿಕೊಳ್ಳುತ್ತದೆ.

ಮತ್ತು ಸಮ್ಯಕ್-ಜ್ಞಾನ, ಸಮ್ಯಗ್ದರ್ಶನ ಮತ್ತು ಸಮ್ಯಕ್ಚಾರಿತ್ರ್ಯದಿಂದ ನಿರ್ಮಲನಾಗುತ್ತಾನೆ; ಮತ್ತು ಮಲಿನತೆಯುಂಟಿಕೊಳ್ಳುವ ಕಾರಣಗಳಿಂದ,ಕೊಳೆ ಹತ್ತಿಕೊಳ್ಳುವುದು, ಎಂದು ಗ್ರಹಿಸುವಿರಾದರೆ, ಮುಕ್ತಜೀವನು ಸಾಂಸಾರಿಕನಾಗುವುದನ್ನೂ, ಮತ್ತು ಸಾಂಸಾರಿಕ ಜೀವನು ಮುಕ್ತನಾಗುವುದನ್ನೂ ಅವಶ್ಯವಾಗಿ ಒಪ್ಪಿಕೊಳ್ಳಬೇಕಾಗುವುದು! ಏಕೆಂದರೆ, **ಹೇಗೆ ನಿಮಿತ್ತಗಳಿಂದ ಮಲಿನತೆ ಬಿಟ್ಟುಹೋಗುತ್ತದೋ, ಹಾಗೆ, ನಿಮಿತ್ತಗಳಿಂದ ಮಲಿನತೆ ಹತ್ತಿಕೊಳ್ಳುವುದೂ ಉಂಟು.**

**ಆದುದರಿಂದ, ಜೀವನಿಗೆ ಬಂಧನವನ್ನೂ ಮತ್ತು ಮುಕ್ತಿಯನ್ನೂ ಪ್ರವಾಹರೂಪದಿಂದ ಅನಾದಿಯೆಂದು ಗ್ರಹಿಸಿರಿ! ಅನಾದಿತ್ವ–ಅನಂತತ್ವದ ದೃಷ್ಟಿಯಿಂದ* ಅಲ್ಲ.**

### (ರಾಗ–ದ್ವೇಷಾದಿಗಳ ಆಶ್ರಯದಿಂದ ಜೀವನು ಮಲಿನನಾಗುತ್ತಾನೆ)

**ಪ್ರಶ್ನೆ:**—ಜೀವನು ಎಂದೂ ನಿರ್ಮಲನಾಗಿರಲಿಲ್ಲ; ಆದರೆ, ಮಲಸಹಿತನಾಗಿದ್ದಾನೆ.

**ಉತ್ತರ:**—ಎಂದಿಗೂ ನಿರ್ಮಲನಾಗಿರಲಿಲ್ಲವಾದರೆ, ಎಂದೂ ನಿರ್ಮಲನೂ ಕೂಡ ಆಗಲಾರನು. ಉದಾಹರಣೆಗೆ—

ಶುದ್ಧವಾಗಿದ್ದ ವಸ್ತ್ರಕ್ಕೆ, ಆ ಮೇಲೆ ಹತ್ತಿಕೊಂಡ ಕೊಳೆಯನ್ನು ತೊಳೆದು ದೂರೀಕರಿಸುತ್ತಾರೆ. ಅದರ ಸ್ವಾಭಾವಿಕವಾದ ಬಿಳಿಯ ಬಣ್ಣವನ್ನು ಬಿಡಿಸಲಾಗದು. **ಕೊಳೆಯು ಮತ್ತೂ ಕೂಡ ಬಟ್ಟೆಗೆ ಹತ್ತಿಕೊಳ್ಳುತ್ತದೆ. ಹಾಗೆಯೇ ಮುಕ್ತಿಯಲ್ಲಿಯೂ ಕೂಡ, ಹತ್ತಿಕೊಳ್ಳುವುದು.**†

### (ಯಾವ ಜೀವನೂ ಸ್ವತಃ ದುಃಖರೂಪ ಫಲವನ್ನು ಭೋಗಿಸಲಿಚ್ಛಿಸುವುದಿಲ್ಲ)

**ಪ್ರಶ್ನೆ:**—ಜೀವನು ಪೂರ್ವದಲ್ಲಿ ಸಂಪಾದಿಸಿದ ಕರ್ಮದಿಂದಲೇ ಶರೀರಧಾರಣ ಮಾಡಿಕೊಳ್ಳುತ್ತಾನೆ. ಈಶ್ವರನನ್ನು ಅಂಗೀಕರಿಸುವುದು ವ್ಯರ್ಥವಾಗಿದೆ.

---

*ಎಂದರೆ, ಸ್ವರೂಪತಃ.—ಅನು.

†ಜೀವನು ಸಾಧನಾನಿಮಿತ್ತದಿಂದ ಪಡೆದ ಮುಕ್ತಿಯು ಪ್ರವಾಹತಃ ಆದಿಯುಕ್ತವಾಗಿರುವುದರಿಂದ, ಪ್ರವಾಹತಃ ಅಂತಯುಕ್ತ! ಸ್ವರೂಪತಃ ಅನಾದಿ–ಅನಂತವಲ್ಲ.—ಅನು.

ಉತ್ತರ:—ಕೇವಲ ಕರ್ಮವೇ ಶರೀರಧಾರಣಕ್ಕೆ ನಿಮಿತ್ತವಾಗಿದ್ದರೆ, ಈಶ್ವರನು ಕಾರಣವಲ್ಲವಾಗಿದ್ದರೆ, ಆ ಜೀವನು ಯಾವುದರಲ್ಲಿ ಬಹಳ ದುಃಖವಿರುತ್ತದೋ, ಆ ಕೆಟ್ಟ ಜನ್ಮವನ್ನು ಎಂದಿಗೂ ಧಾರಣಮಾಡುವುದಿಲ್ಲ! ಆದರೆ, ಯಾವಾಗಲೂ ಉತ್ತಮೋತ್ತಮ ಜನ್ಮಗಳನ್ನೇ ಧರಿಸುತ್ತಾ ಹೋಗುವನು.

'ಕರ್ಮವು ಪ್ರತಿಬಂಧಕವಾಗಿರುವುದು', ಎಂದು ಹೇಳುವಿರಾದರೂ ಕೂಡ, ಹೇಗೆ ಕಳ್ಳನು ತಾನೇ ಮುಂದೆ ಬಂದು, ಕಾರಾಗೃಹಕ್ಕೆ ಹೋಗುವುದಿಲ್ಲವೋ, ಮತ್ತು ಸ್ವತಃ ನೇಣನ್ನೂ ಹಾಕಿಕೊಳ್ಳುವುದಿಲ್ಲವೋ, ಆದರೆ, ರಾಜನು [ಅದೆಲ್ಲ ವನ್ನೂ] ವಿಧಿಸುತ್ತಾನೋ, ಹಾಗೆಯೇ, ಜೀವನಿಗೆ ಶರೀರಧಾರಣವನ್ನು ಮಾಡಿ ಸುವ, ಮತ್ತು ಅವನ ಕರ್ಮಾನುಸಾರ ಫಲಗಳನ್ನು ಕೊಡುವ ಪರಮೇಶ್ವರನನ್ನು ನೀವೂ ಕೂಡ ಅಂಗೀಕರಿಸಿರಿ!

## (ಕರ್ಮಫಲ ಸ್ವತಃ ಪ್ರಾಪ್ತವಾದರೆ, ಪಾಪಿಗಳು ಮಜೆಯಲ್ಲಿರುವರು)

ಪ್ರಶ್ನೆ:—ಮದ್ಯ ನಶೆಯು ಹಾಗೆ ಕರ್ಮಫಲವು ತಾನೇ ಪ್ರಾಪ್ತವಾಗುತ್ತದೆ. ಫಲ ಕೊಡುವುದಕ್ಕೆ ಬೇರೆಯವನ ಆವಶ್ಯಕತೆಯಿಲ್ಲ.

ಉತ್ತರ:—ಹೀಗಿದ್ದಲ್ಲಿ, ಹೇಗೆ [ಅಭ್ಯಾಸಪೂರ್ವಕವಾಗಿ] ಮದ್ಯಪಾನ ಮಾಡು ವವರಿಗೆ ಮದವು ಕಡಿಮೆ ಏರುತ್ತದೋ, ಅಭ್ಯಾಸವಿಲ್ಲದವನಿಗೆ ಹೆಚ್ಚಾಗಿ ಏರು ತ್ತದೋ, ಹಾಗೆ ದಿನವೂ ಬಹಳವಾಗಿ ಪಾಪ-ಪುಣ್ಯ ಮಾಡುವವರಿಗೆ ಕಡಿಮೆ ಯಾಗಿಯೂ, ಮತ್ತು ಯಾವಾಗಲೋ ಒಂದೊಂದು ಸಾರಿ ಸ್ವಲ್ಪ ಸ್ವಲ್ಪ ಪಾಪ-ಪುಣ್ಯ ಮಾಡುವವರಿಗೆ ಹೆಚ್ಚಾಗಿಯೂ ಫಲವಾಗಬೇಕು! ಹಾಗೂ, ಅಲ್ಪಕರ್ಮ ಮಾಡುವವರಿಗೆ ಅಧಿಕ ಫಲ ಲಭಿಸಬೇಕು!

## (ಸ್ವಭಾವದಿಂದ ಕರ್ಮಫಲ ಸಿಗುವುದು-ಬಿಡುವುದು ಆಗಲಾರದು)

ಪ್ರಶ್ನೆ:—ಯಾವನ ಸ್ವಭಾವ ಹೇಗಿರುವುದೋ, ಅವನಿಗೆ ಅಂತಹದೇ ಫಲ ಸಿಕ್ಕುತ್ತಾ ಹೋಗುವುದು.

ಉತ್ತರ:—ಸ್ವಭಾವದಿಂದ ಆಗುವುದಾದರೆ, ಅದರ ಬಿಟ್ಟುಹೋಗುವಿಕೆ ಅಥವಾ ಸಿಕ್ಕುವಿಕೆ ಶಕ್ಯವಲ್ಲ. ಅಹುದು! ಹೇಗೆ ಶುದ್ಧ ವಸ್ತ್ರಕ್ಕೆ ಕಾರಣಾಂತರ ಗಳಿಂದ, ಕೊಳೆ ಹತ್ತಿ ಕೊಳ್ಳುತ್ತದೋ, ಅದನ್ನು ಜಿಡಿಸುವ ನಿಮಿತ್ತಗಳಿಂದ, ಬಿಟ್ಟೂ ಹೋಗುತ್ತದೋ, ಹಾಗೆ, ಎಂದು ಒಪ್ಪಿಕೊಳ್ಳುವುದು ಸರಿ!

ಪ್ರಶ್ನೆ:—ಸಂಯೋಗವಿಲ್ಲದೇ ಹೋದರೆ, ಕರ್ಮವು ಪರಿಣಾಮವನ್ನು ಹೊಂದಲಾರದು. ಹೇಗೆ ಹಾಲು ಮತ್ತು ಹೆಪ್ಪು ಇವುಗಳ ಸಂಯೋಗವಾಗದೇ,

ಮೊಸರು ಆಗುವುದಿಲ್ಲವೋ. ಅವುಗಳ ಸೇರುವಿಕೆಯಿಂದಲೇ ಮೊಸರಾಗುತ್ತದೋ, ಹಾಗೆಯೇ ಜೀವನ ಮತ್ತು ಕರ್ಮದ ಯೋಗದಿಂದಲೇ ಕರ್ಮದ ಪರಿಣಾಮವಾಗುತ್ತದೆ.

**ಉತ್ತರ:**— ಹೇಗೆ ಹಾಲು ಮತ್ತು ಹೆಪ್ಪನ್ನು ಸೇರಿಸುವ ಮೂರನೆಯುವನಿರುತ್ತಾನೋ, ಹಾಗೆಯೇ ಜೀವರನ್ನು ಕರ್ಮಫಲಗಳೊಂದಿಗೆ ಕೂಡಿಸುವವನಾದ, ಮೂರನೆಯುವನಾದ ಈಶ್ವರನು ಇರಬೇಕು! ಏಕೆಂದರೆ, **ಜಡಪದಾರ್ಥಗಳು ಸ್ವತಃ ನಿಯಮಪೂರ್ವಕವಾಗಿ ಒಂದುಗೂಡುವುದಿಲ್ಲ.** ಮತ್ತು **ಜೀವರೂ ಕೂಡ, ಅಲ್ಪಜ್ಞರಾಗಿರುವುದರಿಂದ, ಸ್ವತಃ ನಿಯಮಪೂರ್ವಕವಾಗಿ ಕರ್ಮಫಲವನ್ನು ಪಡೆದುಕೊಳ್ಳಲಾರರು. ಇದರಿಂದ, ಈಶ್ವರನಿಂದ ಸ್ಥಾಪಿತವಾದ, ಸೃಷ್ಟಿಕ್ರಮವಿಲ್ಲದೇ, ಕರ್ಮಫಲದ ವ್ಯವಸ್ಥೆಯಾಗಲಾರದು, ಎಂದು ಸಿದ್ಧವಾಯಿತು !**

## (ಕರ್ಮಬಂಧನದಿಂದ ಜೀವರಿಗೆ ಸದಾಕಾಲಕ್ಕೂ ಮುಕ್ತಿ ಇಲ್ಲ)

**ಪ್ರಶ್ನೆ:**—ಯಾವನು ಕರ್ಮದಿಂದ ಮುಕ್ತನಾಗಿರುತ್ತಾನೋ, ಅವನು ಈಶ್ವರನೆನಿಸುತ್ತಾನೆ.

**ಉತ್ತರ:**—ಅನಾದಿಕಾಲದಿಂದ ಜೀವರೊಂದಿಗೆ ಕರ್ಮಗಳು ಅಂಟಿಕೊಂಡಿರುವಾಗ, ಅವುಗಳಿಂದ ಜೀವರು [ಸದಾ ಕಾಲಕ್ಕೂ] ಎಂದಿಗೂ ಮುಕ್ತರಾಗಲಾರರು.

**ಪ್ರಶ್ನೆ:**—ಕರ್ಮದ ಬಂಧನ ಆದಿಯುಕ್ತವಾಗಿದೆ.

**ಉತ್ತರ:**—ಅದು ಆದಿಯುಕ್ತವಾಗಿರುವುದಾದರೆ, ಕರ್ಮದ ಯೋಗವು ಅನಾದಿಯಲ್ಲ. ಮತ್ತು ಸಂಯೋಗದ ಆದಿಯಲ್ಲಿ ಜೀವನು ನಿಷ್ಕರ್ಮನಾಗಿರುವನು. ಮತ್ತು ನಿಷ್ಕರ್ಮನಿಗೆ ಕರ್ಮ ಹತ್ತಿಕೊಂಡಿತೆಂದಾದರೆ, ಮುಕ್ತರಿಗೂ ಕೂಡ, ಹತ್ತಿಕೊಳ್ಳುವುದು **!**

ಮತ್ತು ಕರ್ಮ, ಹಾಗೂ ಕರ್ತೃವಿನ ಸಂಬಂಧವು **ಸಮವಾಯ, ಎಂದರೆ ನಿತ್ಯಸಂಬಂಧವಾಗಿರುತ್ತದೆ. ಇದು ಎಂದಿಗೂ ಬಿಟ್ಟು ಹೋಗುವುದಿಲ್ಲ.** ಆದಕಾರಣ, ನವಮ ಸಮುಲ್ಲಾಸದಲ್ಲಿ ಹೇಗೆ ಬರೆದಿದ್ದೇವೋ,* ಹಾಗೆಯೇ ಅಂಗೀಕರಿಸುವುದು ಸರಿಯಾಗಿರುತ್ತದೆ.

## (ಜೀವನು ಈಶ್ವರನ ಸಮಾನ ಎಂದಿಗೂ ಆಗಲಾರನು)

ಜೀವನು ಎಷ್ಟು ಬೇಕೆನಿಸಿದರೆ, ಅಷ್ಟೂ ತನ್ನ ಜ್ಞಾನವನ್ನೂ ಮತ್ತು ಸಾಮರ್ಥ್ಯವನ್ನೂ ಹೆಚ್ಚಿಸಿಕೊಳ್ಳಲಿ! ಆದರೂ ಕೂಡ, ಅವನಲ್ಲಿ ಪರಿಮಿತ ಜ್ಞಾನ,

---

*489ನೇ ಪುಟವನ್ನು ನೋಡಿ.—ಸಂ.

ಹಾಗೂ ಸೀಮಾಯುಕ್ತವಾದ ಸಾಮರ್ಥ್ಯವೇ ಇರುವುದು! ಈಶ್ವರನಿಗೆ ಸಮನಾಗಿ ಎಂದಿಗೂ ಆಗಲಾರನು! ಅಹುದು! ಎಷ್ಟು ಸಾಮರ್ಥ್ಯ ವರ್ಧಿಸುವುದು ಉಚಿತವೋ,* ಅಷ್ಟನ್ನು ಯೋಗದಿಂದ ಹೆಚ್ಚಿಸಿಕೊಳ್ಳಬಲ್ಲನು.

**(ಯೋನಿಭೇದದಿಂದ ಜೀವರ ಪರಿಮಾಣವನ್ನೊಪ್ಪುವುದು ಮೂರ್ಖತನ)**

ಮತ್ತು ಜೈನರಲ್ಲಿ ಯಾವ ಆರ್ಹತರು ದೇಹದ ಪರಿಮಾಣಕ್ಕೆ ಸರಿಯಾಗಿ 'ಜೀವ'ನ ಪರಿಮಾಣವನ್ನು ಅಂಗೀಕರಿಸುತ್ತಾರೋ, ಅವರನ್ನು—

**"ಸ್ಥಿತಿ ಹೀಗಿದ್ದಲ್ಲಿ ಆನೆಯ ಜೀವ ಇರುವೆಯ, ಹಾಗೂ ಇರುವೆಯ ಜೀವ ಆನೆಯ ದೇಹದಲ್ಲಿ ಹೇಗೆ ಹೊಂದಿಕೊಳ್ಳಬಲ್ಲದು ?"**, ಎಂದು ಪ್ರಶ್ನಿಸಬೇಕು.

ಇದೂ ಒಂದು ಮೌಢ್ಯದ ಮಾತೇ ಆಗಿದೆ! ಏಕೆಂದರೆ, **ಜೀವನು ಒಂದು ಸೂಕ್ಷ್ಮ ಪದಾರ್ಥವಾಗಿದ್ದಾನೆ.** ಅವನು ಒಂದು ಪರಮಾಣುವಿನಲ್ಲಿಯೂ **ಕೂಡ, ಇರಬಲ್ಲನು.** ಆದರೆ, **ಅವನ ಶಕ್ತಿಗಳು ಶರೀರದಲ್ಲಿ ಪ್ರಾಣ,** ವಿದ್ಯುತ್ತು **ಮತ್ತು ನಾಡಿಗಳು ಮೊದಲಾದುವುಗಳ ಸಂಗಡ ಸಂಯುಕ್ತವಾಗಿರುತ್ತವೆ. ಅವುಗಳಿಂದ, ಸಮಸ್ತ ಶರೀರದ ಸಂಗತಿಗಳನ್ನೂ ತಿಳಿದುಕೊಳ್ಳುತ್ತಾನೆ. ಒಳ್ಳೆಯ ಸಂಗದಿಂದ ಒಳ್ಳೆಯವನೂ, ಮತ್ತು ಕೆಟ್ಟ ಸಂಗದಿಂದ ಕೆಟ್ಟವನೂ ಆಗುತ್ತಾನೆ!**

**(ಜೈನಧರ್ಮ ದೇವ ಮತ್ತು ಗುರುವನ್ನೇ**
**ಉತ್ತಮನೆಂದು ಒಪ್ಪುವುದು ಪಕ್ಷಪಾತ)**

ಇನ್ನು ಜೈನರು ಧರ್ಮವನ್ನು ಈ ರೀತಿಯದ್ದೆಂದು ಅಂಗೀಕರಿಸುತ್ತಾರೆ:—

[2] **ಮೂಲ:—**

**ರೇ ಜೀವ ಭವ ದುಹಾಇಂ ಇಕ್ಕಂ ಚಿಯ ಹರಇ ಜಿಣಮಯಂ ಧಮ್ಮಂ।**
**ಇಯರಾಣಂ ಪರಮಂತೋ ಸುಹಕಯ್ಯೋ ಮೂಢ ಮುಸಿಓಸಿ ॥**

[ಪ್ರಕರಣರತ್ನಾಕರ:-ಭಾಗ-2; **ಷಷ್ಟೀಶತಕ-60. ಸೂತ್ರಾಂಕ 8**]

ಸಂಕ್ಷೇಪವಾಗಿ ಅರ್ಥ—"ಓ ಜೀವ! ಒಂದೇ ಜಿನಮತ, ಶ್ರೀವೀತರಾಗಭಾಷಿತ ಧರ್ಮವು ಜಗತ್ತಿಗೆ ಸಂಬಂಧಪಟ್ಟ ಜನ್ಮ, ಮುಪ್ಪು, ಮರಣ ಮೊದಲಾದ ದುಃಖಗಳ ಹರಣಕಾರಕವಾಗಿದೆ. ಇದೇ ರೀತಿ, **ಸುದೇವ, ಹಾಗೂ ಸುಗುರುವನ್ನೂ ಕೂಡ, ಜೈನ ಮತೀಯರು ತಿಳಿದುಕೊಳ್ಳಬೇಕು.**

---

*ಎಂದರೆ, ಸಂಭವವೋ—ಯು. ವಿ.

"ವೀತರಾಗನಾದ ಋಷಭದೇವನಿಂದ ಹಿಡಿದು, ಮಹಾವೀರನ ತನಕ, [ಮತ್ತು] ವೀತರಾಗರಾದ ದೇವರುಗಳಿಂದ ಬೇರೆಯಾದ ಹರಿ, ಹರ, ಬ್ರಹ್ಮ ಮೊದಲಾದವರು 'ಕುದೇವರು'ಗಳು!, ಅವರನ್ನು ತಮ್ಮ ಕಲ್ಯಾಣಕ್ಕಾಗಿ ಪೂಜಿಸುವ ಯಾವ ಜೀವರಿದ್ದಾರೋ, ಅವರೆಲ್ಲಾ ವಂಚಿತರಾದ ಮಾನವರಾಗಿದ್ದಾರೆ".

ಇದರ ಭಾವಾರ್ಥವೇನೆಂದರೆ, ಜೈನಮತದ ಸುದೇವರು, ಸುಗುರುಗುಳು, ಹಾಗೂ ಸುಧರ್ಮವನ್ನು ಬಿಟ್ಟು, ಬೇರೆ ಕುದೇವರುಗಳನ್ನೂ, ಕುಗುರುಗಳನ್ನೂ ಮತ್ತು ಕುಧರ್ಮವನ್ನೂ ಸೇವಿಸುವುದರಿಂದ ಸ್ವಲ್ಪವೂ ಕಲ್ಯಾಣವಾಗುವುದಿಲ್ಲ, ಎಂಬುದಾಗಿದೆ.

**ಸಮೀಕ್ಷಕ:**—ಈಗ, ಇವರ ಧರ್ಮದ ಪುಸ್ತಕಗಳು ಹೇಗೆ ನಿಂದಾಯುಕ್ತವಾಗಿವೆ, ಎಂದು ವಿದ್ವಾಂಸರು ಆಲೋಚಿಸಬೇಕು!

**(ಕೇವಲ ಜೈನಧರ್ಮದಿಂದಲೇ ಪ್ರಾಣಿಗಳ ಉದ್ಧಾರವಾಗುತ್ತದೇನು ?)**

[3] **ಮೂಲ:—**

**ಅರಿಹಂ ದೇವೋ ಸುಗುರು ಸುದ್ಧಂ ಧಮ್ಮಂ ಚ ಪಂಚ ನವಕಾರೋ ।**

**ಧನ್ನಾಣಂ ಕಯುಚ್ಛಾಣಂ ನಿರಂತರಂ ವಸಇ ಹಿಯುಯಮ್ಮಿ ॥**

[ಪ್ರಕರಣರತ್ನಾಕರ ಭಾಗ-2; ಷಷ್ಟೀಶತಕ-60. ಸೂತ್ರ-1]

[ಸಂಕ್ಷೇಪವಾಗಿ ಅರ್ಥ]:—ಯಾವ ಅರಿಹಂತಾ, ದೇವರುಗಳಿಗೂ ದೇವನಿದ್ದಾನೋ, ಪೂಜೆ ಮೊದಲಾದುವಕ್ಕೆ, ಅವನಿಗಿಂತ ಯೋಗ್ಯವಾದ ಉತ್ತಮ ಪದಾರ್ಥವು ಬೇರೆಯುದಾವುದೂ ಇಲ್ಲ. ಇಂತಹ ದೇವರ ದೇವನಾಗಿ ಶೋಭಾಯಮಾನನಾಗಿರುವ ಅರಿಹಂತಾ ದೇವನು ಜ್ಞಾನಿಯೂ, ಕ್ರಿಯಾವಂತನೂ, ಶಾಸ್ತ್ರಗಳ ಉಪದೇಶಕನೂ, ಶುದ್ಧನೂ, ಕಷಾಯ-ಮಲರಹಿತನೂ, ಸಮ್ಯಕ್ತ್ವ-ವಿನಯ-ದಯೆಗಳ ಮೂಲವೂ ಆಗಿದ್ದಾನೆ.

ಆ ಶ್ರೀಜಿನನಿಂದ ಹೇಳಲ್ಪಟ್ಟ ಯಾವ ಧರ್ಮವಿದೆಯೋ, ಅದೇ, ದುರ್ಗತಿಯಲ್ಲಿ ಬೀಳುವ ಪ್ರಾಣಿಗಳ ಉದ್ಧಾರಕಾರಕವಾಗಿದೆ. ಮತ್ತು ಹರಿ-ಹರ ಮೊದಲಾದವರ ಧರ್ಮ ಸಂಸಾರದಿಂದ ಉದ್ಧಾರ ಮಾಡುವಂತಹುದಲ್ಲ !

ಮತ್ತು ಅರಿಹಂತಾ ಮೊದಲಾದ ಐವರು ಪರಮೇಷ್ಠಿಗಳಿಗೂ, ಅವರ ಸಂಬಂಧಿಕರಿಗೂ ನಮಸ್ಕಾರ! ಈ ನಾಲ್ಕು ಪದಾರ್ಥಗಳು ಧನ್ಯವಾಗಿವೆ. ಎಂದರೆ, ದಯೆ, ಕ್ಷಮೆ, ಸಮ್ಯಕ್ತ್ವಜ್ಞಾನ, ದರ್ಶನ, ಮತ್ತು ಚಾರಿತ್ರ್ಯ–ಇದು ಜೈನರ ಧರ್ಮವಾಗಿದೆ.

### (ಜೈನರ ದಯೆ ಬಾಯಿಮಾತಷ್ಟೇ! ಅದು ದಯೆಯಲ್ಲ)

**ಸಮೀಕ್ಷಕ:**—ಮಾನವಮಾತ್ರರ ಮೇಲೆ ದಯೆ ಇಲ್ಲದಿರುವಾಗ, ಆ ದಯೆ ದಯೆಯಲ್ಲ : ಕ್ಷಮೆಯೂ ಅಲ್ಲ ! ಜ್ಞಾನಕ್ಕೆ ಪ್ರತಿಯಾಗಿ ಅಜ್ಞಾನ ! ದರ್ಶನಕ್ಕೆ [ಬದಲಾಗಿ] ಕತ್ತಲೆಯ ಬೀಡು ! ಮತ್ತು ಚಾರಿತ್ರ್ಯಕ್ಕೆ ಬದಲು ಉಪವಾಸ ಸಾಯುವುದು ! ಇದಾವ ಒಳ್ಳೆಯ ಮಾತು!

ದಯೆ ಮತ್ತು ಕ್ಷಮೆ ಒಳ್ಳೆಯ ತತ್ತ್ವಗಳಾಗಿದ್ದರೂ, ಪಕ್ಷಪಾತದಲ್ಲಿ ಸಿಕ್ಕಿಕೊಂಡಿರುವ ಕಾರಣದಿಂದ, ದಯೆಯು ಅದಯೆಯೂ, ಮತ್ತು ಕ್ಷಮೆಯು ಅಕ್ಷಮೆಯೂ ಆಗಿ ಹೋಗುತ್ತದೆ. ಇದರ ತಾತ್ಪರ್ಯವೇನೆಂದರೆ, ಯಾವನೇ ಜೀವನಿಗೂ ದುಃಖವನ್ನು ಕೊಡದಿರುವುದು ! ಇದು ಸರ್ವಥಾ ಸಂಭವವಾಗಲಾರದು. ಏಕೆಂದರೆ, ದುಷ್ಟರಿಗೆ ಶಿಕ್ಷೆಯನ್ನು ಕೊಡುವುದೂ ಕೂಡ, ದಯೆಯಲ್ಲಿಯೇ ಎಣಿಸಲರ್ಹವಾಗಿದೆ. ಒಬ್ಬ ದುಷ್ಟನಿಗೆ ಶಿಕ್ಷೆ ಕೊಡಲ್ಪಡದಿದ್ದರೆ, ಸಾವಿರಾರು ಮಂದಿ ಮಾನವರಿಗೆ ದುಃಖ ಉಂಟಾಗುವುದು. ಆದಕಾರಣ, ಆ ದಯೆಯು ಅದಯೆಯೂ, ಮತ್ತು ಕ್ಷಮೆಯು ಅಕ್ಷಮೆಯೂ ಆಗಿಹೋದೀತು!

### (ಕೇವಲ ನೀರನ್ನು ಶೋಧಿಸಿ ಕುಡಿಯುವುದೇ 'ದಯೆ' ಅಲ್ಲ)

ಸಕಲ ಪ್ರಾಣಿಗಳಿಗೂ ದುಃಖವನ್ನು ನಾಶಮಾಡುವ, ಮತ್ತು ಸುಖದ ಪ್ರಾಪ್ತಿಯನ್ನು ಮಾಡುವ ಉಪಾಯವೇ ದಯೆ, ಎನ್ನಿಸುತ್ತದೆ, ಎಂಬುದೇನೋ ಸರಿಯೇ! ಕೇವಲ ನೀರನ್ನು ಶೋಧಿಸಿ ಕುಡಿಯುವುದು, ಕ್ಷುದ್ರ ಜಂತುಗಳನ್ನು ರಕ್ಷಿಸುವುದು ಮಾತ್ರವೇ 'ದಯೆ', ಎನ್ನಿಸುವುದಿಲ್ಲ ! ಆದರೆ, ಈ ಬಗೆಯ ದಯೆ ಜೈನರ ಕಥನ ಮಾತ್ರವೇ ಆಗಿದೆ. ಏಕೆಂದರೆ, ಹಾಗೆ [ಅವರು] ವರ್ತಿಸುವುದಿಲ್ಲ.

ಮಾನವಮಾತ್ರರ ಮೇಲೆ, ಅವರು ಯಾವುದೇ ಮತದಲ್ಲಿರಲೀ, ದಯೆ ತೋರಿಸಿ, ಇತರ ಮಾನವೇತರ ಜೀವರಲ್ಲಿಯೂ ಯಥೋಚಿತವಾಗಿ ದಯೆಯಿಟ್ಟು, ಅನ್ನ-ಪಾನ ಮೊದಲಾದುವುಗಳಿಂದ ಉಪಚರಿಸುವುದು; ಮತ್ತು ಅನ್ಯಮತದ ವಿದ್ವಾಂಸರ ಸಮ್ಮಾನವನ್ನು ಮತ್ತು ಸೇವೆಯನ್ನು ಮಾಡುವುದು ದಯೆಯಲ್ಲವೇನು?

### (ಜೈನರ ದಯೆ ನಿಜವಾಗಿದ್ದರೆ, ಅವರು ಆರು 'ಯತನ'ಗಳನ್ನು ಒಪ್ಪುತ್ತಿರಲಿಲ್ಲ)

ಇವರ 'ದಯೆ' ನಿಜವಾದುದಾಗಿದ್ದರೆ, "ವಿವೇಕಸಾರ"ದ 221 ನೆಯ ಪುಟದಲ್ಲಿ ಏನು ಬರೆದಿದ್ದಾರೋ, ನೋಡಿರಿ—

"ಮೊದಲಾಗಿ, 'ಪರಮತೀಯರನ್ನು ಸ್ತುತಿಸುವುದು'—ಎಂದರೆ, ಅವರ ಗುಣಕೀರ್ತನ ಎಂದಿಗೂ ಮಾಡಬಾರದು.

ಎರಡನೆಯದಾಗಿ, **'ಅವರಿಗೆ ನಮಸ್ಕಾರ'**—ಎಂದರೆ, ವಂದನೆಯನ್ನೂ ಕೂಡ, ಮಾಡಬಾರದು.

ಮೂರನೆಯದಾಗಿ, **'ಆಲಪನ'**—ಎಂದರೆ, ಅನ್ಯಮತೀಯರೊಂದಿಗೆ ಕಡಿಮೆ ಮಾತನಾಡಬೇಕು.

ನಾಲ್ಕನೆಯದಾಗಿ, **'ಸಂಲಪನ'**—ಎಂದರೆ, ಅವರೊಡನೆ ಮತ್ತೆ-ಮತ್ತೆ ಮಾತನಾಡಬಾರದು.

ಐದನೆಯದಾಗಿ, ಅವರಿಗೆ **'ಅನ್ನ, ವಸ್ತ್ರ ಮೊದಲಾದುದರ ದಾನ'**—ಎಂದರೆ, ಅವರಿಗೆ ಖಾದ್ಯ-ಪೇಯ ವಸ್ತುಗಳನ್ನೂ ಕೂಡ, ಕೊಡಬಾರದು.

ಆರನೆಯದಾಗಿ, **'ಗಂಧ, ಹೂವು ಮೊದಲಾದ ದಾನ'**—ಅನ್ಯಮತದ ಪ್ರತಿಮಾಪೂಜನಕ್ಕಾಗಿ ಗಂಧ, ಹೂವು ಮೊದಲಾದುವನ್ನೂ ಕೊಡಬಾರದು.

**ಈ ಆರು** 'ಯತನ'ಗಳನ್ನು ಎಂದರೆ, **ಈ ಆರು ವಿಧದ ಕರ್ಮಗಳನ್ನು ಜೈನರು ಎಂದಿಗೂ ಮಾಡಬಾರದು !**

**ಸಮೀಕ್ಷಕ:**—ಈಗ ಬುದ್ಧಿವಂತರು ಅನ್ಯಮತೀಯರಾದ ಮಾನವರ ಮೇಲೆ ಈ ಜೈನರಿಗೆ ಎಷ್ಟು ನಿರ್ದಯತ್ವ, ಕುದೃಷ್ಟಿ ಮತ್ತು ದ್ವೇಷವಿದೆ, ಎಂಬುದನ್ನು ಆಲೋಚಿಸಬೇಕು. **ಅನ್ಯಮತಸ್ಥರಾದ ಮಾನವರ ಮೇಲೆ ಇಷ್ಟು ನಿರ್ದಯತ್ವ ವಿರುವಾಗ, ಜೈನರನ್ನು ದಯಾಹೀನರೆಂದು ಹೇಳುವುದು ಸಂಭವವೇ ಸರಿ!** ಏಕೆಂದರೆ, **ತಮ್ಮ ಮನೆಯವರಿಗೆ ಮಾತ್ರವೇ ಸೇವೆಮಾಡುವುದು ವಿಶೇಷ ಧರ್ಮವೆನ್ನಿಸುವು ದಿಲ್ಲ !**

ಅವರ ಮತದ ಮಾನವರು ಅವರ ಮನೆಯವರಿಗೇ ಸಮಾನರಾಗಿದ್ದಾರೆ! ಆದುದರಿಂದ, ಅವರ ಸೇವೆಯನ್ನು ಮಾಡುತ್ತಾರೆ; ಅನ್ಯಮತೀಯರಿಗೆ ಮಾಡುವು ದಿಲ್ಲ. ಇನ್ನು ಅವರನ್ನು ದಯಾವಂತರೆಂದು ಯಾವ ಬುದ್ಧಿಶಾಲಿಯು ತಾನೇ ಹೇಳಬಲ್ಲನು ?

## (ಅನ್ಯಮತೀಯರೊಡನೆ ವೈರಬುದ್ಧಿ ಇಡುವುದು ಎಲ್ಲಿಯ ದಯೆ ?)

**'ವಿವೇಕಸಾರ'**ದ 108 ನೆಯ ಪುಟದಲ್ಲಿ—

"ಮಥುರೆಯ ರಾಜನ ನಮುಚಿ, ಎಂಬ ಹೆಸರಿನ ಮುಖ್ಯ ಸಚಿವನನ್ನು ಜೈನ ಯತಿಗಳು ತಮ್ಮ ವಿರೋಧಿ, ಎಂದು ತಿಳಿದು, ಕೊಂದುಹಾಕಿದರು! ಮತ್ತು **'ಆಲೋಯಣಾ'* ಮಾಡಿಕೊಂಡು** ಶುದ್ಧರಾದರು.", ಎಂದು ಬರೆದಿದ್ದಾರೆ.

---

* ಎಂದರೆ ಪ್ರಾಯಶ್ಚಿತ್ತ—ಅನು.

[ಸಮೀಕ್ಷಕ:—]ಇದೂ ಕೂಡ, ದಯೆಯ ಮತ್ತು ಕ್ಷಮೆಯ ನಾಶಕವಾದ ಕರ್ಮವಲ್ಲವೇನು ? ಪ್ರಾಣಾಪಹಾರ ಮಾಡುವ ಪರ್ಯಂತವೂ ಅನ್ಯಮತೀಯರ ಮೇಲೆ ವೈರಬುದ್ಧಿಯನ್ನು ಇಟ್ಟುಕೊಂಡಿರುವಾಗ, ಇವರನ್ನು ದಯಾಳುಗಳು, ಎನ್ನುವುದಕ್ಕೆ ಪ್ರತಿಯಾಗಿ ಹಿಂಸಕರೆನ್ನುವುದೇ ಸಾರ್ಥಕವಾಗಿರುತ್ತದೆ !

## (ಜೈನರ ಮೋಕ್ಷದ ನಾಲ್ಕು ಸಾಧನಗಳು)

ಇನ್ನು ಸಮ್ಯಕ್ತ್ವದರ್ಶನವೇ ಮೊದಲಾದುದರ ಲಕ್ಷಣಗಳು "**ಆರ್ಹತ ಪ್ರವಚನ ಸಂಗ್ರಹ**"; "**ಪರಮಾಗಮಸಾರ**"ದಲ್ಲಿ ಹೇಳಲ್ಪಟ್ಟಿವೆ—

'ಸಮ್ಯಕ್-ಶ್ರದ್ಧಾನ, ಸಮ್ಯಗ್ದರ್ಶನ, ಜ್ಞಾನ, ಮತ್ತು ಚಾರಿತ್ರ್ಯ'

**—ಈ ನಾಲ್ಕು ಮೋಕ್ಷಮಾರ್ಗದ ಸಾಧನಗಳಾಗಿವೆ.*** ಇವುಗಳ ವ್ಯಾಖ್ಯಾನವನ್ನು **ಯೋಗದೇವನು** ಮಾಡಿದ್ದಾನೆ—

'ಯಾವ ರೂಪದಲ್ಲಿ ಜೀವ ಮೊದಲಾದ ದ್ರವ್ಯಗಳು ಅವಸ್ಥಿತವಾಗಿವೆಯೋ, ಅದೇ ರೂಪದಿಂದ, ಜಿನಪ್ರತಿಪಾದಿತವಾದ ಗ್ರಂಥಗಳಿಗೆ ಅನುಸಾರವಾಗಿ, ಅವಕ್ಕೆ ವಿಪರೀತವಾದ ಅಭಿನಿವೇಶವೇ ಮೊದಲಾದುವುಗಳಿಂದ ರಹಿತವಾಗಿ ಯಾವ ಶ್ರದ್ಧೆ ಇದೆಯೋ, ಎಂದರೆ ಜಿನಮತದಲ್ಲಿ ಪ್ರೀತಿ ಇದೆಯೋ, ಅದು **'ಸಮ್ಯಕ್ ಶ್ರದ್ಧಾನ'** ಮತ್ತು **'ಸಮ್ಯಗ್ದರ್ಶನ'**ವಾಗಿದೆ.

**ರುಚಿರ್ಜಿನೋಕ್ತತತ್ತ್ವೇಷು ಸಮ್ಯಕ್‌ಶ್ರದ್ಧಾನಮುಚ್ಯತೇ ॥**

[ಸರ್ವದರ್ಶನ ಸಂಗ್ರಹ–ಆರ್ಹತದರ್ಶನ]

'ಜಿನನು ಹೇಳಿದ ತತ್ತ್ವಗಳಲ್ಲಿ ಸಮ್ಯಕ್‌ಶ್ರದ್ಧಾನ ಇಡಬೇಕು'. ಎಂದರೆ, ಬೇರೆಯಾವುದರಲ್ಲಿಯೂ ಇಡಬಾರದು!

**ಯಥಾವಸ್ಥಿತತತ್ತ್ವಾನಾಂ ಸಂಕ್ಷೇಪಾದ್ವಿಸ್ತರೇಣ ವಾ ।**
**ಯೋ ಬೋಧಸ್ತಮತಾಹುಃ† ಸಮ್ಯಗ್‌ಜ್ಞಾನಂ ಮನೀಷಿಣಃ ॥**

[ಸರ್ವದರ್ಶನ ಸಂಗ್ರಹ–ಆರ್ಹತದರ್ಶನ]

---

*ಮುಕ್ತಿಯ ವೈದಿಕ ಸಾಧನಗಳ ಬಗ್ಗೆ ಪುಟ 471-479ನ್ನು ನೋಡಿ, ತುಲನೆ ಮಾಡಿ. —ಸಂ.

†"ಯೋ ಬೋಧಸ್ತಮತ್ರಾಹುಃ"–ಎಂಬಲ್ಲಿ ಛಂದೋಭಂಗವಿದೆ. ಆದುದರಿಂದ, ಸುಧಾರಿತ ಪಾಠವಾದ 'ಯೋ ಬೋಧಸ್ತಮಿಹ ಪ್ರಾಹುಃ,' ಎಂದಿರಬೇಕು. – ಅನು.

ಯಾವ ರೀತಿಯ ಜೀವ ಮೊದಲಾದ ತತ್ತ್ವಗಳಿವೆಯೋ, ಅವುಗಳ ಸಂಕ್ಷಿಪ್ತವಾದ ಅಥವಾ ವಿಸ್ತೃತವಾದ ಬೋಧವನ್ನೇ*, 'ಸಮ್ಯಕ್‌ಜ್ಞಾನ', ಎಂದು ಬುದ್ಧಿವಂತರು ಹೇಳುತ್ತಾರೆ.

**ಸರ್ವಥಾऽವದ್ಯಯೋಗಾನಾಂ ತ್ಯಾಗಶ್ಚಾರಿತ್ರಮುಚ್ಯತೇ ।**
**ಕೀರ್ತಿತಂ ತದಹಿಂಸಾದಿವ್ರತಭೇದೇನ ಪಂಚಧಾ ॥**
**ಅಹಿಂಸಾಸೂನೃತಾऽಸ್ತೇಯಬ್ರಹ್ಮಚರ್ಯಾಪರಿಗ್ರಹಾಃ ॥**

[ಸರ್ವದರ್ಶನ ಸಂಗ್ರಹ-ಆರ್ಹತದರ್ಶನ]

ಎಲ್ಲ ರೀತಿಯಿಂದಲೂ ನಿಂದನೀಯವಾದ ಅನ್ಯಮತ-ಸಂಬಂಧದ ತ್ಯಾಗವೇ **'ಚಾರಿತ್ರ'**, ಎನಿಸುತ್ತದೆ. ಮತ್ತು ಅಹಿಂಸೆ ಮೊದಲಾದ ಭೇದಗಳಿಂದ **ಐದು ಬಗೆಯ** ವ್ರತವಿದೆ.†

ಒಂದು, **'ಅಹಿಂಸೆ'**—ಪ್ರಾಣಿಮಾತ್ರವಾವುದನ್ನೂ ಕೊಲ್ಲದಿರುವುದು.

ಎರಡನೆಯದು, **'ಸೂನೃತಾ'**—ಪ್ರಿಯವಾದ ವಾಣಿಯನ್ನು ಮಾತನಾಡುವುದು.

ಮೂರನೆಯದು, **'ಅಸ್ತೇಯ'**—ಕದಿಯದಿರುವುದು.

ನಾಲ್ಕನೆಯದು, **'ಬ್ರಹ್ಮಚರ್ಯ'**—ಉಪಸ್ಥೇಂದ್ರಿಯದ ಸಂಯಮ.

ಮತ್ತು ಐದನೆಯದು, **'ಅಪರಿಗ್ರಹ'**—ಸಮಸ್ತ ವಸ್ತುಗಳ ತ್ಯಾಗವನ್ನು ಮಾಡುವುದು.

## (ಪರನಿಂದೆ ಮಾಡುವುದರಿಂದ ಒಳ್ಳೆಯ ಮಾತುಗಳೂ ದೋಷಯುಕ್ತವಾದುವು)

[**ಸಮೀಕ್ಷಕ:**—]ಇವುಗಳಲ್ಲಿ ಬಹಳ ಮಾತುಗಳು ಒಳ್ಳೆಯವಾಗಿವೆ. ಎಂದರೆ, ಅಹಿಂಸೆ ಮತ್ತು ಕಳ್ಳತನ ಮೊದಲಾದ ನಿಂದನೀಯ ಕರ್ಮಗಳ ತ್ಯಾಗಮಾಡುವುದು

---

*ಎಂದರೆ, ಅರಿವನ್ನೇ.—ಅನು.

†ಯೋಗದರ್ಶನ(2.30)ದಲ್ಲಿ ಇದಕ್ಕೆ 'ಯಮ', ಎಂದು ಹೆಸರು. ಪುಟ 77ನ್ನು ನೋಡಿ.—ಸಂ.

ಒಳ್ಳೆಯದಾಗಿದೆ. ಆದರೆ, ಈ ಎಲ್ಲಾ ಒಳ್ಳೆಯ ಮಾತುಗಳೂ ಕೂಡ, ಅನ್ಯಮತದ ನಿಂದೆಮಾಡುವುದು ಮೊದಲಾದ ದೋಷಗಳಿಂದ, ದೋಷಯುಕ್ತವಾಗಿ ಹೋಗಿವೆ! **ಉದಾಹರಣೆಗೆ—**

'ಬೇರೆಯ ಹರಿ-ಹರ ಮೊದಲಾದವರ ಧರ್ಮವು ಜಗತ್ತಿನಲ್ಲಿ ಉದ್ಧಾರ ಮಾಡುವಂತಹುದಾಗಿಲ್ಲ', ಎಂದು ಪ್ರಥಮ ಸೂತ್ರದಲ್ಲಿ ಬರೆದಿದ್ದಾರೆ.

ಯಾರ ಗ್ರಂಥಗಳನ್ನು ಅವಲೋಕಿಸುವುದರಿಂದಲೇ ಪೂರ್ಣ ವಿದ್ಯೆಯೂ, ಮತ್ತು ಧಾರ್ಮಿಕತ್ವವೂ ಗಳಿಸಲ್ಪಡುತ್ತದೋ, ಅವುಗಳನ್ನು ಕೆಟ್ಟದೆನ್ನುವುದು ; ಏನು ಸಣ್ಣ ನಿಂದೆಯ ಮಾತೇನು ? ಮತ್ತು ನಾವು ಮೊದಲೇ ಹೇಳಿರುವಂತೆ, ಮಹಾ ಅಸಂಭವವಾದ ಮಾತುಗಳನ್ನು ಹೇಳುವ ತಮ್ಮ ತೀರ್ಥಂಕರರ ಸ್ತುತಿಯನ್ನು ಮಾಡುವುದು ಕೇವಲ ಹಠದ ಮಾತುಗಳಾಗಿವೆ !

**(ಇತರರು ಇವರನ್ನು ನಿಂದಿಸಿದರೆ, ಇವರಿಗೆ ಕೋಪ ಬರದೇನು ?**

**ಜೈನಮತದ ಧರ್ಮದ ಹೊಗಳಿಕೆ—**

[4] **ಮೂಲ:—**

**ಜಇನ ಕುಣಿಸಿ ತವ ಚರಣಂ ನ ಪಢಸಿ ನ ಗುಣೇಸಿ ದೇಸಿ ನೋ ದಾಣಂ ।**

**ತಾ ಇತ್ತಿಯಂ ಸಕ್ಕಿಸಿ ಜಂ ದೇವೋ ಇಕ್ಕ ಅರಿಹಂತೋ ॥**

**[ಪ್ರಕರಣರತ್ನಾಕರ ಭಾಗ–2. ಷಷ್ಟಿಶತಕ–60. ಸೂತ್ರ–2]**

[ಸಂಕ್ಷೇಪವಾಗಿ ಅರ್ಥ:—]ಓ ಮಾನವ! ನೀನು ತಪಸ್ಸನ್ನೂ, ಚಾರಿತ್ರ್ಯವನ್ನೂ ನಿರ್ವಹಿಸಲಾಗದಿದ್ದರೂ, ಸೂತ್ರಗಳನ್ನು ಓದಲಾಗದಿದ್ದರೂ, ಪ್ರಕರಣ ಮೊದಲಾದುವುಗಳ ವಿವೇಚನೆ ಮಾಡಲಾಗದಿದ್ದರೂ, ಮತ್ತು ಸುಪಾತ್ರರೇ ಮೊದಲಾದವರಿಗೆ ದಾನವನ್ನು ಕೊಡಲಾಗದಿದ್ದರೂ ಕೂಡ, **ಏಕಮಾತ್ರ ಅರಿಹಂತಾ ದೇವನೇ ನಮ್ಮ ಆರಾಧನೆಗೆ ಯೋಗ್ಯನಾದ ಸದ್ಗುರು, ಎಂದು ತಿಳಿಯುವುದು; ಹಾಗೂ ಸದ್ಧರ್ಮವಾದ ಜೈನಮತದಲ್ಲಿ ಶ್ರದ್ಧೆಯನ್ನಿಡುವುದು ಸರ್ವೋತ್ತಮವಾದ ವಿಷಯ ಮತ್ತು ಉದ್ಧಾರದ ಕಾರಣವಾಗಿರುತ್ತದೆ !**

**ಸಮೀಕ್ಷಕ:**—ಅಲ್ಲಾ! ಯಾವ ಜೈನನು ಸ್ವಲ್ಪವೂ ಚಾರಿತ್ರ್ಯ ಪಾಲಿಸಲಾರನೋ, ಓದಲಾರನೋ, ಯಾವನಿಗೆ ದಾನ ಕೊಡುವ ಸಾಮರ್ಥ್ಯವೂ ಇಲ್ಲವೋ, ಹಾಗಿದ್ದರೂ ಕೂಡ, ಅವನು—"ಜೈನಮತವು ಸತ್ಯವಾಗಿದೆ", ಎಂದಿಷ್ಟು ಮಾತ್ರ ಹೇಳುವುದರಿಂದಲೇ, ಉತ್ತಮನಾಗಿ ಹೋಗುವನೇನು? ಮತ್ತು ಅನ್ಯಮತದವರು ಶ್ರೇಷ್ಠರಾಗಿದ್ದರೂ ಕೂಡ, ಅಶ್ರೇಷ್ಠರಾಗಿ ಹೋಗುವರೇನು?

ಇಂತಹ ಮಾತುಗಳನ್ನು ಹೇಳುವ ಮಾನವರನ್ನು ಭ್ರಾಂತರು ಮತ್ತು ಬಾಲ ಬುದ್ಧಿಗಳು, ಎಂದು ಹೇಳಲಾಗದಿದ್ದರೆ, ಮತ್ತೇನೆಂದು ಹೇಳೋಣ ?

ಇದರಿಂದ, ಇವರ ಆಚಾರ್ಯರು ಸ್ವಾರ್ಥಿಗಳಾಗಿದ್ದರು ; ಪೂರ್ಣವಿದ್ವಾಂಸ ರಾಗಿಲಿಲ್ಲ, ಎಂದೇ ವಿದಿತವಾಗುತ್ತದೆ! ಏಕೆಂದರೆ, ಸರ್ವರ ನಿಂದೆಯನ್ನೂ ಮಾಡದೇ ಹೋಗಿದ್ದರೆ, ಇಂತಹ ಸುಳ್ಳು ಮಾತುಗಳಲ್ಲಿ ಯಾವನೂ ಸಿಕ್ಕಿಕೊಳ್ಳು ತ್ತಿರಲಿಲ್ಲ ! ಅವರ ಸ್ವಾರ್ಥವೂ ಕೈಗೂಡುತ್ತಿರಲಿಲ್ಲ!

ನೋಡಿರಿ! ಜೈನರ ಮತ ಮುಳುಗಿಸುವಂತಹುದು ಮತ್ತು ವೇದಮತ ಸರ್ವರನ್ನೂ ಉದ್ಧರಿಸುವಂತಹುದು, ಎಂದೇನೋ ಸಿದ್ಧವಾಗುತ್ತದೆ!

'ಹರಿ–ಹರ ಮೊದಲಾದ ದೇವರು ಸುದೇವರು ಮತ್ತು ಇವರ ಋಷಭದೇವ ಮೊದಲಾದ ಎಲ್ಲರೂ ಕುದೇವರು', ಎಂದು ಬೇರೆಯ ಜನ ಹೇಳಿದರೆ, ಅದೇ ರೀತಿ ಅವರಿಗೆ ಕೆಟ್ಟದೆನಿಸುವುದಿಲ್ಲವೇನು ?

**(ಸ್ವಯಂ ತನ್ನ ಪ್ರಶಂಸೆ ಮಾಡಿಕೊಳ್ಳುವುದು ಮೂರ್ಖತನ)**

ಮತ್ತೂ ಕೂಡ, ಇವರ ಆಚಾರ್ಯರ ಮತ್ತು ಅನುಯಾಯಿಗಳ ಹುಳುಕನ್ನು ನೋಡಿಕೊಳ್ಳಿರಿ—

[5] **ಮೂಲ:—**

**ಜಿಣವರ ಆಣಾ ಭಂಗಂ ಉಮಗ್ಗ ಉಸ್ಸುತ್ತ ಲೇಸ ದೇಸಣಓ ।**

**ಆಣಾ ಭಗೇ ಪಾವಂತಾ ಜಿಣಮಯ ದುಃಕ್ಕರಂ ಧಮ್ಮಂ ॥**

[ಪ್ರಕರಣರತ್ನಾಕರ:–ಭಾಗ–2; ಷಷ್ಟಿಶತಕ–60. ಸೂತ್ರ–11]

[ಸಂಕ್ಷೇಪವಾಗಿ ಅರ್ಥ :—]ಉನ್ಮಾರ್ಗ*ದ ಮತ್ತು ಉತ್ಸೂತ್ರ†ದ ಲೇಖ ವನ್ನು ತೋರಿಸುವುದರಿಂದ ಜಿನವರರ, ಎಂದರೆ, ವೀತರಾಗ ತೀರ್ಥಂಕರರ ಆಜ್ಞಾ ಭಂಗವಾಗುತ್ತದೆ. ಅದು ದುಃಖಕ್ಕೆ ಕಾರಣವಾದ ಪಾಪವಾಗಿದೆ. ಜಿನೇಶ್ವರನಿಂದ ಉಕ್ತವಾದ ಸಮ್ಯಕ್ತ್ವ ಮೊದಲಾದ ಧರ್ಮವನ್ನು ಗ್ರಹಿಸುವುದು ಮಹಾ ಕಠಿಣ ವಾಗಿದೆ. ಆದುದರಿಂದ, ಜಿನನ ಆಜ್ಞೆಯ ಭಂಗವಾಗದ ರೀತಿಯಲ್ಲಿ ನಡೆದುಕೊಳ್ಳ ಬೇಕು.

---

*ವಿರುದ್ಧ ಮಾರ್ಗ—ಅನು.

†ವಿರುದ್ಧ ಸೂತ್ರ—ಅನು.

**ಸಮೀಕ್ಷಕ** :—ತನ್ನ ಬಾಯಿನಿಂದಲೇ ತನ್ನ ಪ್ರಶಂಸೆಯನ್ನು ಮಾಡಿಕೊಳ್ಳುವುದೂ, ತನ್ನ ಧರ್ಮವನ್ನೇ ದೊಡ್ಡದೆಂದು ಸಾರಿಕೊಳ್ಳುವುದೂ ಮತ್ತು ಬೇರೆಯವನದನ್ನು ನಿಂದಿಸುವುದೂ, ಮೂರ್ಖತನದ ಮಾತಾಗಿದೆ ! ಏಕೆಂದರೆ, ಯಾವುದರ ಪ್ರಶಂಸೆಯನ್ನು ಅನ್ಯ ವಿದ್ವಾಂಸರು ಮಾಡುವರೋ, ಅದರ ಪ್ರಶಂಸೆಯೇ ಸರಿಯಾಗಿರುತ್ತದೆ!

ತಮ್ಮ ಬಾಯಿನಿಂದ ತಮ್ಮ ಪ್ರಶಂಸೆಯನ್ನಂತೂ ಕಳ್ಳರೂ ಕೂಡ, ಮಾಡಿಕೊಳ್ಳುತ್ತಾರೆ ! ಅಂದಮಾತ್ರಕ್ಕೆ ಅವರು ಪ್ರಶಂಸನೀಯರಾಗಬಲ್ಲರೇನು ? ಈ ರೀತಿಯದೇ ಆಗಿವೆ, ಇವರ ಮಾತುಗಳು !

(ಜೈನರಂತಹ ಪಕ್ಷಪಾತಿಗಳು ಬೇರೆಯವರಾಗರು)

[6] ಮೂಲ:—

**ಬಹುಗುಣವಿಜ್ಜಾ ನಿಲಓ ಉಸ್ಸುತ್ತಭಾಸೀ ತಹಾವಿ ಮುತ್ತವ್ವೋ ।**
**ಜಹ ವರಮಣಿಜುತೋ ವಿಹು ವಿಗ್ಘಕರೋ ವಿಸಹರೋ ಲೋಏ ॥**

(ಪ್ರಕರಣರತ್ನಾಕರ:- ಭಾಗ-2; ಷಷ್ಠೀಶತಕ ; ಸೂತ್ರ-18)

[ಸಂಕ್ಷೇಪವಾಗಿ ಅರ್ಥ:—] ಹೇಗೆ ವಿಷಧರ ಸರ್ಪದಲ್ಲಿನ ಮಣಿಯು ತ್ಯಜಿಸಲು ಯೋಗ್ಯವಾಗಿರುತ್ತದೋ, ಹಾಗೆ, ಯಾವನು ಜೈನಮತದಲ್ಲಿಲ್ಲವೋ, ಅವನು, ಎಷ್ಟು ದೊಡ್ಡ ಧಾರ್ಮಿಕ ಪಂಡಿತನೇ ಆಗಿರಲೀ, ಅವನನ್ನು ತ್ಯಜಿಸಿಬಿಡುವುದೇ ಜೈನರಿಗೆ ಉಚಿತವಾಗಿರುತ್ತದೆ!

**ಸಮೀಕ್ಷಕ** :—ನೋಡಿರಿ, ಇದು ಎಷ್ಟು ದೊಡ್ಡ ಪ್ರಮಾದದ ಮಾತಾಗಿದೆ! ಇವರ ಶಿಷ್ಯರೂ, ಆಚಾರ್ಯರೂ ವಿದ್ವಾಂಸರಾಗಿದ್ದಲ್ಲಿ, ವಿದ್ವಾಂಸರೊಂದಿಗೆ ಪ್ರೇಮದಿಂದ ಇರುತ್ತಿದ್ದರು. ಇವರ ತೀರ್ಥಂಕರರೂ ಕೂಡ ಅವಿದ್ವಾಂಸರಾಗಿರುವಾಗ, ವಿದ್ವಾಂಸರ ಸಮ್ಮಾನವನ್ನು ಏಕೆ ಮಾಡಬೇಕು !

ಹೊಲಸಿನಲ್ಲಿ ಅಥವಾ ಧೂಳಿನಲ್ಲಿ ಬಿದ್ದಿರುವ ಚಿನ್ನವನ್ನು ಯಾವನಾದರೂ ತ್ಯಜಿಸುತ್ತಾನೆಯೇನು ? ಇದರಿಂದ, ಜೈನರ ಹೊರತು, ಬೇರೆ ಇಂತಹ ಪಕ್ಷಪಾತಿಗಳೂ, ಹಠಮಾರಿಗಳೂ, ದುರಾಗ್ರಹಿಗಳೂ ಮತ್ತು ವಿದ್ಯಾಹೀನರೂ ಯಾರು ತಾನೇ ಇದ್ದಾರು ?, ಎಂದು ಸಿದ್ಧವಾಯಿತು.

**(ಯಾರ ಮತವು ಸತ್ಯವೋ, ಅವರಿಗೆ ಯಾರಿಂದಲೂ ಭಯವಿಲ್ಲ)**

[7] **ಮೂಲ:—**

**ಅಇಸಯ ಪಾವಿಯ ಪಾವಾ ಧಮ್ಮಿಆ ಪಬ್ಬೇಸು ತೋವಿ ಪಾವರಯಾ ।**

**ನ ಚಲಂತಿ ಸುದ್ಧ ಧಮ್ಮಾ ಧನ್ನಾ ಕಿವಿಪಾವ ಪವ್ವೇಸು ॥**

[ಪ್ರಕರಣರತ್ನಾಕರ:-ಭಾಗ-2; **ಷಷ್ಟೀಶತಕ ; ಸೂತ್ರ-29**]

[ಸಂಕ್ಷೇಪವಾಗಿ ಅರ್ಥ:—]ಅನ್ಯದರ್ಶನವನ್ನಂಗೀಕರಿಸುವವರು ಕುಲಿಂಗಿಗಳು ! ಎಂದರೆ, ಜೈನಮತ-ವಿರೋಧಿಗಳು. ಅವರ ದರ್ಶನವನ್ನೂ ಕೂಡ, ಜೈನರುಗಳು ಮಾಡಬಾರದು.

ಸಮೀಕ್ಷಕ :—ಇದೆಷ್ಟು ಪಾಮರತನದ ಮಾತು. ಎಂದು ಬುದ್ಧಿವಂತರಾದ ಜನರು ಆಲೋಚಿಸಿಕೊಳ್ಳುವರು. **ಯಾವನ ಮತ ಸತ್ಯವಾಗಿರುತ್ತದೋ, ಅವನಿಗೆ ಯಾರಿಂದಲೂ ಭಯವಾಗುವುದಿಲ್ಲ,** ಎಂಬುದು ನಿಜವಾದ ಮಾತು ! ಇವರ ಆಚಾರ್ಯರುಗಳು—

“ನಮ್ಮ ಮತ ಪೊಳ್ಳು-ಟೊಳ್ಳು ! ಬೇರೆಯವರಿಗೆ ತಿಳಿಸುವೆವಾದರೆ, ಖಂಡನವಾಗಿ ಹೋಗುವುದು”, ಎಂದು ತಿಳಿದುಕೊಂಡಿದ್ದರು.

ಆದುದರಿಂದ, ಎಲ್ಲರನ್ನೂ ನಿಂದಿಸಿರಿ ! ಹಾಗೂ, ಮೂರ್ಖಮಂದಿಗಳನ್ನು ಸಿಕ್ಕಿಸಿಕೊಳ್ಳಿರಿ ! !

**(ಅನ್ಯಧರ್ಮೀಯರ ನಿಂದೆ ಶಠತನ)**

[8] **ಮೂಲ:—**

**ನಾಮಂಪಿ ತಸ್ಸ ಅಸುಹಂ ಜೇಣ ನಿದಿಠಾಯಿ ಮಿಚ್ಛ ಪವ್ವಾಇ ।**

**ಜೇಸಿಂ ಅಣುಸಂಗಾಉ ಧಮ್ಮೀಣವಿ ಹೋಈ ಪಾವ ಮಈ ॥**

[ಪ್ರಕರಣರತ್ನಾಕರ:-ಭಾಗ-2; **ಷಷ್ಟೀಶತಕ; ಸೂತ್ರ-27**]

[ಸಂಕ್ಷೇಪವಾಗಿ ಅರ್ಥ :—]ಯಾವ ಧರ್ಮಗಳು ಜೈನಧರ್ಮಕ್ಕೆ ವಿರುದ್ಧವಾಗಿವೆಯೋ, ಅವೆಲ್ಲವೂ ಮಾನವರನ್ನು ಪಾಪಿಗಳನ್ನಾಗಿ ಮಾಡುವಂತಹವಾಗಿವೆ. ಆದುದರಿಂದ, ಯಾವನದೇ ಅನ್ಯ ಧರ್ಮವನ್ನೂ ಅಂಗೀಕರಿಸದೇ, ಜೈನಧರ್ಮವನ್ನು ಮಾತ್ರ ಅಂಗೀಕರಿಸುವುದು ಶ್ರೇಷ್ಠವಾಗಿರುತ್ತದೆ !

**ಸಮೀಕ್ಷಕ** :—ಇದರಿಂದ, 'ಎಲ್ಲರೊಂದಿಗೂ ವೈರ, ವಿರೋಧ, ನಿಂದೆ, ಈರ್ಷ್ಯೆ ಮೊದಲಾದ ದುಷ್ಕರ್ಮರೂಪವಾದ ಸಾಗರದಲ್ಲಿ ಮುಳುಗಿಸುವಂತಹುದು ಜೈನ ಮಾರ್ಗವಾಗಿದೆ', ಎಂದು ಸಿದ್ಧವಾಗುತ್ತದೆ. ಹೇಗೆ ಜೈನರು ಸರ್ವರ ನಿಂದಕರಾಗಿರುತ್ತಾರೋ, ಹಾಗೆ ಬೇರೆ ಯಾವುದೇ ಮತದವನೂ ಮಹಾನಿಂದಕನೂ, ಮತ್ತು ಅಧರ್ಮಿಯೂ ಆಗಿರಲಾರನು !

ಒಂದು ಕಡೆಯಿಂದ ಎಲ್ಲರ ನಿಂದೆಯನ್ನೂ, ಮತ್ತು ತಮ್ಮ ಅತಿ ಪ್ರಶಂಸೆಯನ್ನೂ ಮಾಡುವುದು ಶಠರಾದ ಮಾನವರ ಮಾತಲ್ಲವೇನು ? ವಿವೇಕಿಗಳಾದ ಜನರಂತೂ, ಅವರು ಯಾವುದೇ ಮತದವರು ಬೇಕಾದರೂ ಆಗಿರಲೀ. ಅವರಲ್ಲಿ ಒಳ್ಳೆಯವರನ್ನು ಒಳ್ಳೆಯವರೆಂದೂ, ಕೆಟ್ಟವರನ್ನು ಕೆಟ್ಟವರೆಂದೂ ಹೇಳುತ್ತಾರೆ!

## (ತಮ್ಮ ಧರ್ಮ ಮತ್ತು ಗುರುಗಳನ್ನೇ ಒಳ್ಳೆಯವರೆನ್ನುವುದು ಉಚಿತವೇ ?)

[9] **ಮೂಲ**:—

**ಹಾ ಹಾ ಗುರುಅ ಅಕಜ್ಜಂ ಸಾಮೀ ನ ಹು ಅಚ್ಛಿ ಕಸ್ಸ ಪುಕ್ಕರಿಮೋ ।**
**ಕಹ ಜಿಣ ವಯಣ ಕಹ ಸುಗುರು ಸಾವಯಾ ಕಹ ಇಯ ಅಕಜ್ಜಂ ॥**

[ಪ್ರಕರಣರತ್ನಾಕರ :- ಭಾಗ–2; ಷಷ್ಠೀಶತಕ ; ಸೂತ್ರ- 35]

[ಸಂಕ್ಷೇಪವಾಗಿ ಅರ್ಥ:—] ಸರ್ವಜ್ಞ ಕಥಿತವಾದ ಜಿನವಚನ, ಜೈನರ ಸುಗುರುಗಳು ಮತ್ತು ಜೈನಧರ್ಮವೆಲ್ಲಿ ! ಮತ್ತು ಅದಕ್ಕೆ ವಿರುದ್ಧವಾದ ಕುಗುರುಗಳು, ಅನ್ಯಮಾರ್ಗಗಳ ಉಪದೇಶಕರೆಲ್ಲಿ ! ಅಂದರೆ, ನಮ್ಮವರು ಸುಗುರುಗಳು, ಸುದೇವರು, ಸುಧರ್ಮ! ಮತ್ತು ಅನ್ಯರ [ದೇವರು] ಕುದೇವರು; [ಗುರುಗಳು] ಕುಗುರುಗಳು ಮತ್ತು [ಧರ್ಮ] ಕುಧರ್ಮ!

**ಸಮೀಕ್ಷಕ**:—ಈ ಮಾತು ಎಲಚೀ ಹಣ್ಣನ್ನು ಮಾರುವ ಹೆಣ್ಣಿನವಳ ಮಾತಿನಂತಿದೆ! ಹೇಗೆ ಅವಳು ತನ್ನ ಹುಳಿಯ ಎಲಚಿಯನ್ನು ಸಿಹಿಯೆಂದೂ, ಮತ್ತು ಬೇರೆಯವಳ ಸಿಹಿಯ ಹಣ್ಣುಗಳನ್ನು ಹುಳಿ ಮತ್ತು ಕೆಲಸಕ್ಕೆ ಬಾರದುದು, ಎಂದೂ ಹೇಳುತ್ತಾಳೋ, ಹಾಗೆಯೇ ಜೈನರ ಮಾತುಗಳೂ ಈ ರೀತಿಯವೇ ಆಗಿವೆ !

ಈ ಜನರು ತಮ್ಮ ಮತದಿಂದ ಬೇರೆಯದಾದ ಮತಗಳವರ ಸೇವೆಯಲ್ಲಿ ಮಹಾ ಅಕಾರ್ಯವನ್ನು, ಎಂದರೆ ಪಾಪವನ್ನು ಎಣಿಸುತ್ತಾರೆ!

**(ಇತರ ಮತದವರನ್ನು ಹಾವಿಗಿಂತ ಕೆಟ್ಟವರೆನ್ನುವುದು ಸರಿಯಲ್ಲ)**

ಈ ಮೊದಲೇ ನಾವು ಬರೆದು ಬಂದಿರುವಂತೆ,'ಹೇಗೆ ಸರ್ಪದಲ್ಲಿನ ಮಣಿಯನ್ನೂ ಕೂಡ, ತ್ಯಜಿಸುವುದು ಉಚಿತವಾಗಿರುತ್ತದೋ, ಹಾಗೆ ಅನ್ಯಮಾರ್ಗೀಯರಲ್ಲಿರುವ ಶ್ರೇಷ್ಠ ಧಾರ್ಮಿಕ ಪುರುಷರನ್ನೂ ಕೂಡ, ತ್ಯಜಿಸಿಬಿಡಬೇಕು'. [ಎಂದಿದ್ದರು].

ಈಗ, ಅದಕ್ಕಿಂತಲೂ ಹೆಚ್ಚು ಅನ್ಯ ಮತೀಯರ ನಿಂದೆಯನ್ನು ಮಾಡುತ್ತಾರೆ—

[10]**ಮೂಲ:—**

**ಸಪ್ಪೋ ಇಕ್ಕಂ ಮರಣಂ ಕುಗುರು ಅಣಂತಾಇ ದೇಹ ಮರಣಾಇ ।**

**ತೋ ವರಿಸಪ್ಪಂ ಗಹಿಯುಂ ಮಾ ಕುಗುರುಸೇವಣಂ ಭದ್ದಂ ॥**

**[ಪ್ರಕರಣರತ್ನಾಕರಃ-ಭಾಗ-2; ಷಷ್ಟಿಶತಕ; ಸೂತ್ರ 37]**

[ಸಂಕ್ಷೇಪವಾಗಿ ಅರ್ಥ: —] ಜೈನಮತದಿಂದ ಬೇರೆಯಾದವರೆಲ್ಲರೂ ಕುಗುರುಗಳು; ಎಂದರೆ, ಅವರು ಸರ್ಪಕ್ಕಿಂತಲೂ ಕೂಡ ಹೆಚ್ಚು ಕೆಟ್ಟವರಿರುತ್ತಾರೆ! ಅವರ ದರ್ಶನವನ್ನು, ಸೇವೆಯನ್ನು, ಸಂಗವನ್ನು ಎಂದಿಗೂ ಮಾಡಬಾರದು. ಏಕೆಂದರೆ, ಸರ್ಪದ ಸಂಗದಿಂದ ಒಂದು ಸಾರಿ ಮರಣ ಉಂಟಾಗುತ್ತದೆ. ಆದರೆ, **ಅನ್ಯ ಮಾರ್ಗೀಯರಾದ ಕುಗುರುಗಳ ಸಂಗದಿಂದ, ಅನೇಕ ಸಾರಿ ಜನನ-ಮರಣದಲ್ಲಿ ಬೀಳಬೇಕಾಗುತ್ತದೆ!** ಆದುದರಿಂದ, ಓ ಭದ್ರ ಪುರುಷ ! ಅನ್ಯಮಾರ್ಗೀಯರ ಕುಗುರುಗಳ ಹತ್ತಿರವೂ ಕೂಡ, ನಿಲ್ಲಬೇಡ. ಏಕೆಂದರೆ, ನೀನು ಅನ್ಯಮಾರ್ಗೀಯರಿಗೆ ಸ್ವಲ್ಪವಾದರೂ ಸೇವೆಯನ್ನು ಮಾಡುವೆಯಾದರೆ, ದುಃಖದಲ್ಲಿ ಬೀಳುವೆ."

**ಸಮೀಕ್ಷಕ:—ನೋಡಿರಿ !** ಜೈನರಿಗೆ ಸಮಾನರಾಗಿ ಕಠೋರರರೂ, ಭ್ರಾಂತರೂ, ದ್ವೇಷಿಗಳೂ, ನಿಂದಕರೂ, ಮೈಮರೆತವರೂ ಆದಂತೆ ಅನ್ಯಮತೀಯರು ಯಾರೂ ಆಗಿರಲಾರರು. ಇವರು ಮನಸ್ಸಿನಲ್ಲಿ—

**"ನಾವು ಅನ್ಯರ ನಿಂದೆಯನ್ನೂ, ಮತ್ತು ನಮ್ಮ ಪ್ರಶಂಸೆಯನ್ನೂ ಮಾಡಿಕೊಳ್ಳದಿದ್ದರೆ, ನಮ್ಮ ಸೇವೆ ಮತ್ತು ಪ್ರತಿಷ್ಠೆಯಾಗುವುದಿಲ್ಲ.", ಎಂದು ಆಲೋಚಿಸಿದ್ದಾರೆ.**

ಆದರೆ, ಇದು ಅವರ ದೌರ್ಭಾಗ್ಯದ ಮಾತಾಗಿದೆ ! ಏಕೆಂದರೆ, ಯಾವಾಗಿನವರೆಗೆ ಉತ್ತಮ ವಿದ್ವಾಂಸರ ಸಂಗವನ್ನೂ, ಸೇವೆಯನ್ನೂ ಮಾಡುವುದಿಲ್ಲವೋ, ಅವರೆಗೆ ಇವರಿಗೆ ಯಥಾರ್ಥ ಜ್ಞಾನವೂ, ಹಾಗೂ ಸತ್ಯಧರ್ಮದ ಪ್ರಾಪ್ತಿಯೂ

ಎಂದಿಗೂ ಆಗುವುದಿಲ್ಲ. ಆದುದರಿಂದ, ತಮ್ಮ ವಿದ್ಯಾವಿರುದ್ಧವಾದ ಮಿಥ್ಯಾ ವಚನಗಳನ್ನು ಬಿಟ್ಟು, ವೇದೋಕ್ತ ಸತ್ಯ ಸಿದ್ಧಾಂತಗಳನ್ನು ಗ್ರಹಿಸುವುದು ಜೈನರಿಗೆ ಉಚಿತವಾಗಿರುತ್ತದೆ. ಇದು ಅವರಿಗೆ ಮಹಾ ಕಲ್ಯಾಣದ ವಿಷಯವಾಗಿದೆ !

**(ಇತರ ಮತದವರ ಉಪಕಾರದಿಂದ ತಮ್ಮ ನಾಶವಾಗುವುದೇನು ?)**

[11] **ಮೂಲ:—**

**ಕಿಂ ಭಣಿಮೋ ಕಿಂ ಕರಿಮೋ ತಾಣ ಹಯಾಸಾಣ ಧಿಟ್ಠ ದುಟ್ಠಾಣಂ ।**

**ಜೇ ದಂಸಿಊಣ ಲಿಂಗಂ ಖಿವಂತಿ ನ ರಯಮ್ಮಿ ಮುದ್ಧಜಣಂ ॥**

[ಪ್ರಕರಣರತ್ನಾಕರ:–ಭಾಗ–2. ಷಷ್ಟೀಶತಕ; ಸೂತ್ರ–40]

[ಸಂಕ್ಷೇಪವಾಗಿ ಅರ್ಥ:—] ಯಾವನ ಕಲ್ಯಾಣದ ಭರವಸೆಯೇ ನಾಶವಾಗಿದೆಯೋ, ಆ ಧೃಷ್ಟನೂ, ದುಷ್ಕರ್ಮ ಮಾಡುವುದರಲ್ಲಿ ಬಹು ಚತುರನೂ, ದುಷ್ಟನೂ, ದೋಷಯುಕ್ತನೂ ಆದವನಿಗೆ ಏನು ಹೇಳುವುದು ? ಏನು ಮಾಡುವುದು ? ಏಕೆಂದರೆ, ಅವನಿಗೆ ಉಪಕಾರ ಮಾಡುವಿರಾದರೆ. ಪ್ರತಿಯಾಗಿ ಅವನು ನಾಶವನ್ನೇ ಮಾಡುವನು! ಉದಾಹರಣೆಗೆ—

ಯಾವನಾದರೂ ದಯೆ ತೋರಿಸಿ. ಕುರುಡು ಸಿಂಹದ ಕಣ್ಣನ್ನು ತೆರೆಯಲು ಹೋದರೆ, ಅದು ಅವನನ್ನೇ ತಿಂದು ಬಿಡುವುದು! ಅದೇ ರೀತಿ. ಕುಗುರುಗಳ, ಎಂದರೆ **ಅನ್ಯಮಾರ್ಗಿಗಳ ಉಪಕಾರ ಮಾಡುವುದೆಂದರೆ, ತನ್ನ ನಾಶಮಾಡಿಕೊಂಡಂತೆಯೇ ಸರಿ!** ಎಂದರೆ, ಅವರಿಂದ ಸದಾ ಬೇರೆಯೇ ಇರಬೇಕು!

**ಸಮೀಕ್ಷಕ:—ಹೇಗೆ ಜೈನರು ಆಲೋಚಿಸುತ್ತಾರೋ. ಹಾಗೆ ಬೇರೆಯ ಮತದವರೂ ಆಲೋಚಿಸುವವರಾದರೆ, ಜೈನರಿಗೆ ಎಷ್ಟು ದುರ್ಗತಿಯುಂಟಾದೀತು ?** ಮತ್ತು ಅವರಿಗೆ ಯಾರೂ ಯಾವುದೇ ಪ್ರಕಾರದ ಉಪಕಾರವನ್ನೂ ಮಾಡದೇ ಹೋದರೆ. ಅವರ ಬಹಳ ಕೆಲಸಗಳು* ಹಾಳಾಗಿ. ಎಷ್ಟು ದುಃಖ ಉಂಟಾಗಬಹುದು ? ಹಾಗೆ ಅನ್ಯರ ಸಲುವಾಗಿ ಜೈನರು ಏತಕ್ಕೆ ಆಲೋಚಿಸುವುದಿಲ್ಲ ?

---

*ಸಾಮಾನ್ಯವಾಗಿ, ಜೈನರೆಲ್ಲಾ ವ್ಯಾಪಾರಸ್ಥರಾಗಿರುತ್ತಾರೆ. ಆದ್ದರಿಂದ, ಅವರಿಗೆ ಜನತೆಯ ಮತ್ತು ಸರ್ಕಾರದ ಸಹಾಯ ಬೇಕೇ ಬೇಕು! ಇದು ಸಿಗದಿದ್ದರೆ, ಅವರ ವ್ಯಾಪಾರದ **ನಾಶ ನಿಶ್ಚಿತ !—ಸಂ.**

**(ಜೈನರಲ್ಲಿ ಎಷ್ಟು ಈರ್ಷ್ಯಾ-ದ್ವೇಷಗಳಿವೆಯೋ, ಅಷ್ಟು ಅನ್ಯರಲಿಲ್ಲ)**

[12] **ಮೂಲ:—**

**ಜಹ ಜಹ ತುಟ್ಟಇ ಧಮ್ಮೋ ಜಹ ಜಹ ದುಟ್ಠಾಣ ಹೋಇ ಅಹ ಉದಉಂ।**
**ಸಮದ್ದಿಟ್ಠಿ ಜಿಯಾಣಂ ತಹ ತಹ ಉಲ್ಲಸಇ ಸಮತ್ತಂ ॥**

[ಪ್ರಕರಣರತ್ನಾಕರ:—ಭಾಗ-2; ಷಷ್ಟೀಶತಕ; ಸೂತ್ರ-42]

[ಸಂಕ್ಷೇಪವಾಗಿ ಅರ್ಥ:—] ಹೇಗೆ ಹೇಗೆ ದರ್ಶನ-ಭ್ರಷ್ಟರಾದ ನಿಹ್ನವಾ,* ಪಾಸಚ್ಛಾ.* ಉಸನ್ನಾ*, ಹಾಗೂ ಕುಸೀಲಿಯಾ* ಮೊದಲಾದವರ, ಮತ್ತು ಅನ್ಯತತ್ತ್ವದವರ, ತ್ರಿದಂಡೀ ಪರಿವ್ರಾಜಕರ, ಹಾಗೂ ಬ್ರಾಹ್ಮಣರೇ ಮೊದಲಾದ ದುಷ್ಟ ಜನರ ಅತಿಶಯುವಾದ ಬಲ, ಸತ್ಕಾರ, ಪೂಜೆ ಮೊದಲಾದುವು ಆಗುತ್ತಾ ಹೋಗುತ್ತವೋ, ಹಾಗೆ, ಹಾಗೆ ಸಮ್ಯಕ್‌ದೃಷ್ಟಿಯುನ್ನುಳ್ಳ ಜೀವರ ಸಮ್ಯಕ್ತ್ವವು ವಿಶೇಷವಾಗಿ ಪ್ರಕಾಶಿತವಾಗುವುದು ಮಹದಾಶ್ಚರ್ಯವಾಗಿದೆ !

ಈಗ, ನೋಡಿರಿ ! ಈ ಜೈನರಿಗಿಂತ ಅಧಿಕ ಈರ್ಷ್ಯಾ–ದ್ವೇಷ–ವೈರ ಬುದ್ಧಿ ಯುಕ್ತನಾದವನು ಯಾವನಾದರೂ ಇರಬಹುದೇನು? ಅಹುದು ! ಬೇರೆಯ ಮತ ದಲ್ಲಿಯೂ ಈರ್ಷ್ಯಾ–ದ್ವೇಷಗಳಿವೆ ! ಆದರೆ, ಎಷ್ಟು ಈ ಜೈನರಲ್ಲಿವೆಯೋ, ಅಷ್ಟು ಯಾವನಲ್ಲಿಯೂ ಇಲ್ಲ! ಮತ್ತು **ದ್ವೇಷವೇ ಪಾಪದ ಮೂಲವಾಗಿದೆ!** ಆದುದ ರಿಂದ, ಜೈನರಲ್ಲಿ ಪಾಪಾಚರಣ ಏತಕ್ಕಿಲ್ಲವಾದೀತು ?

**(ಇತರ ಮತಗಳನ್ನು 'ಚೋರಮತ', ಎನ್ನುವುದು ಅನುಚಿತ)**

[31] **ಮೂಲ:—**

**ಸಂಗೋವಿ ಜಾಣ ಅಹಿಉ ತೇಸಿಂ ಧಮ್ಮಾಇಜೇ ಪಕುವ್ವಂತಿ ।**
**ಮುತ್ತೂಣ ಚೋರಸಂಗಂ ಕರಂತಿ ತೇ ಚೋರಿಯಂ ಪಾವಾ ॥**

[ಪ್ರಕರಣರತ್ನಾಕರ:–ಭಾಗ 2. ಷಷ್ಟೀಶತಕ; ಸೂತ್ರ-75]

[ಸಂಕ್ಷೇಪವಾಗಿ ಅರ್ಥ:—] ಇವರ ಮುಖ್ಯ ತಾತ್ಪರ್ಯವಿಷ್ಟೇ:—

"ಹೇಗೆ ಮೂಢ ಜನರು ಕಳ್ಳನ ಸಂಗದಿಂದ ನಾಸಿಕಾಚ್ಛೇದನ ಮೊದಲಾದ ಶಿಕ್ಷೆಗೆ ಭಯಪಡುವುದಿಲ್ಲವೋ, ಹಾಗೆ, ಜೈನಮತದಿಂದ ಬೇರೆಯಾದ ಚೋರ ಧರ್ಮಗಳಲ್ಲಿ ಸ್ಥಿತರಾಗಿರುವ ಜನರು ತಮ್ಮ ಅಕಲ್ಯಾಣಕ್ಕೆ ಭಯಪಡುವುದಿಲ್ಲ.

---

*ಆ ಕಾಲದಲ್ಲಿ ಪ್ರಚಲಿತವಾಗಿದ್ದ ಬೇರೆ ಮತಗಳ ಜನರು.—ಅನು.

ಸಮೀಕ್ಷಕ:—ಯಾವನು ಎಂತಹ ಮನುಷ್ಯನಾಗಿರುತ್ತಾನೋ, ಅವನು ಪ್ರಾಯಶಃ ಬೇರೆಯವನನ್ನೂ ತನ್ನಂತಹವನೆಂದೇ ತಿಳಿದುಕೊಳ್ಳುತ್ತಾನೆ.

ಬೇರೆಯವೆಲ್ಲವೂ ಚೋರಮತಗಳು! ಮತ್ತು ಜೈನಮತ ಮಾತ್ರ ಸಾಹುಕಾರನದು, ಎಂಬ ಈ ಮಾತು ಸತ್ಯವಾಗಬಲ್ಲದೇನು?

ಯಾವ ಕಾಲದವರೆಗೆ ಮನುಷ್ಯನಲ್ಲಿ ಬಹಳ ಅಜ್ಞಾನ ಮತ್ತು ಕುಸಂಗದಿಂದ ಬುದ್ಧಿಯು ಭ್ರಷ್ಟವಾಗಿರುತ್ತದೋ, ಆ ಕಾಲದವರೆಗೆ ಬೇರೆಯವರೊಡನೆ ಬಹಳ ಈರ್ಷ್ಯೆ, ದ್ವೇಷ, ದುಷ್ಟತನ ಮೊದಲಾದುವನ್ನು ಬಿಡುವುದಿಲ್ಲ.

ಜೈನಮತ ಹೇಗೆ ಪರಮ ದ್ವೇಷಿಯಾಗಿದೆಯೋ, ಹಾಗೆ ಬೇರೆ ಯಾವುದೂ ಆಗಿಲ್ಲ!

## (ಅನ್ಯಮತೀಯರ ವ್ರತ-ಉಪವಾಸಗಳ ನಿಂದೆ ಮಾಡುವುದು ಮೂರ್ಖತನ)

[14] ಮೂಲ:—

ಜಚ್ಛ ಪಸುಮಹಿಸಲರಕಾ ಪವ್ವಂ ಹೋಮಂತಿ ಪಾವ ನವಮೀಏ ।
ಪೂಅಂತಿ ತಂಪಿ ಸಡ್ಢಾ ಹಾ ಹೀಲಾ ವೀಯರಾಯಸ್ಸ ॥

[ಪ್ರಕರಣರತ್ನಾಕರ:-ಭಾಗ-2; ಷಷ್ಟೀಶತಕ ; ಸೂತ್ರ-76]

[ಸಂಕ್ಷೇಪವಾಗಿ ಅರ್ಥ:—] ಪೂರ್ವ ಸೂತ್ರದಲ್ಲಿ ಯಾವ ಮಿಥ್ಯಾತ್ವಿಗಳ ವಿಷಯವನ್ನು, ಎಂದರೆ—

ಜೈನಮತದಿಂದ ಬೇರೆ ಇರುವವರೆಲ್ಲರೂ ಮಿಥ್ಯಾತ್ವಿಗಳು ಮತ್ತು ತಾವು ಸಮ್ಯಕ್ತ್ವಿಗಳು ; ಎಂದರೆ ಬೇರೆ ಎಲ್ಲರೂ ಪಾಪಿಗಳು, ಜೈನಮತೀಯರೆಲ್ಲರೂ ಪುಣ್ಯಾತ್ಮರು [ಎಂದು], ಹೇಳಿದೆಯೋ, ಆದುದರಿಂದ ಯಾವನಾದರೂ ಆಗಿರಲೀ, ಯಾವನು ಮಿಥ್ಯಾತ್ವೀಯ ಧರ್ಮದ ಸ್ಥಾಪನೆಯನ್ನು ಮಾಡುವನೋ, ಅವನು ಪಾಪಿಯಾಗಿರುತ್ತಾನೆ.

ಸಮೀಕ್ಷಕ:—ಹೇಗೆ ಅನ್ಯಸ್ಥಾನಗಳಲ್ಲಿ ಚಾಮುಂಡಾ, ಕಾಲಿಕಾ, ಜ್ವಾಲಾ ಈ ಪ್ರಮುಖ [ದೇವತೆ]ಗಳಿಗೆ ಅನ್ವಯಿಸುವ ಪಾಪ ನವಮೀ, ಎಂದರೆ ದುರ್ಗಾ ನವಮೀ ಮೊದಲಾದ ತಿಥಿ ಮುಂತಾದುವೆಲ್ಲ ಕೆಟ್ಟವಾಗಿವೆಯೋ, ಹಾಗೆ ನಿಮ್ಮ ಪಜೂಷಣ* ಮೊದಲಾದ ಮಹಾಕಷ್ಟದಾಯಕವಾದ ವ್ರತಗಳು ಕೆಟ್ಟವಲ್ಲವೇನು?

*ಪರ್ಯೂಷಣ—ಯು.ಮೀ.

ಇಲ್ಲಿ ವಾಮಮಾರ್ಗಿಗಳ ಖಂಡನವೇನೋ ಸರಿಯಾಗಿದೆ; ಆದರೆ, ಯಾವ 'ಶಾಸನದೇವಿ'ಮತ್ತು'ಮರುತದೇವಿ' ಮೊದಲಾದುವನ್ನು ಅಂಗೀಕರಿಸುತ್ತೀರೋ, ಅವುಗಳ ಖಂಡನವನ್ನೂ ಮಾಡಿಬಿಡುತ್ತಿದ್ದಿರಾದರೆ, ಚೆನ್ನಾಗಿರುತ್ತಿತ್ತು!

'ನಮ್ಮ ದೇವೀ ಹಿಂಸಕಳಲ್ಲ', ಎನ್ನುವರಾದರೆ, ಇವರ ಕಥನ ಸುಳ್ಳಾಗಿದೆ! ಏಕೆಂದರೆ, 'ಶಾಸನದೇವಿಯು ಒಬ್ಬ ಪುರುಷನ, ಮತ್ತು ಇನ್ನೊಂದು ಹೋತನ ಕಣ್ಣುಗಳನ್ನು ಕಿತ್ತುಕೊಂಡಿದ್ದಳು! ಮತ್ತೆ, ಅವಳು ರಾಕ್ಷಸಿಯೂ, ಹಾಗೂ ದುರ್ಗೆ, ಕಾಳಿಕೆಯ ಸ್ವಂತ ಸೋದರಿ ಏತಕ್ಕಲ್ಲ?

ಮತ್ತು ತಮ್ಮ 'ಪಚ್ಚಖಾಣ' ಮೊದಲಾದ ವ್ರತಗಳನ್ನು ಅತಿ ಶ್ರೇಷ್ಠ ವೆಂದೂ, ಮತ್ತು ನವಮೀ ಮೊದಲಾದುವನ್ನು ದುಷ್ಟವೆಂದೂ ಹೇಳುವುದು ಮೌಢ್ಯದ ಮಾತಾಗಿದೆ! ಏಕೆಂದರೆ, ಬೇರೆಯವರ ಉಪವಾಸಗಳ ನಿಂದೆಯನ್ನೂ, ಮತ್ತು ತಮ್ಮ ಉಪವಾಸಗಳ ಸ್ತುತಿಯನ್ನೂ ಮಾಡುವುದು ಮೂರ್ಖತ್ವದ ಮಾತಾಗಿರುತ್ತದೆ. ಅಹುದು! ಯಾವ ಸತ್ಯಭಾಷಣ ಮೊದಲಾದ ವ್ರತಗಳ ಧಾರಣ ವನ್ನು ಮಾಡುತ್ತಾರೋ, ಅವೇನೋ ಸರ್ವರಿಗೂ ಉತ್ತಮವಾಗಿವೆ. ಜೈನರ ಮತ್ತು ಇನ್ನಾರ ಉಪವಾಸವೂ ಸತ್ಯವಲ್ಲ!

### (ಅನ್ಯಮತೀಯರ ದೇವತೆಗಳ ನಿಂದೆ ಮಾಡುವುದು ಪಕ್ಷಪಾತ)

[15] ಮೂಲ:—

ವೇಸಾಣ ವಂದಿಯಾಣಯ ಮಾಹಣ ಡುಂಬಾಣ ಜರಕಸಿರಕಾಣಂ ।
ಭತ್ತಾ ಭರಕಟ್ಠಾಣಂ ವಿಯಾಣಂ ಜಂತಿ ದೂರೇಣಂ ॥

[ಪ್ರಕರಣರತ್ನಾಕರ:-ಭಾಗ-2. ಷಷ್ಟೀಶತಕ; ಸೂತ್ರ-82]

[ಸಂಕ್ಷೇಪವಾಗಿ ಅರ್ಥ:—] ಇದರ ಮುಖ್ಯ ತಾತ್ಪರ್ಯವೇನೆಂದರೆ—

"ಯಾರು ವೇಶ್ಯೆಯರು, ವಂದಿಮಾಗಧರು, ಹೊಗಳುಭಟ್ಟರು ಮೊದಲಾದ ಜನರು, ಬ್ರಾಹ್ಮಣರು, ಯಕ್ಷರು, ಗಣೇಶ, ಮೊದಲಾದ ಮಿಥ್ಯಾದೃಷ್ಟಿಯುಕ್ತ ದೇವೀ, ಮೊದಲಾದ ದೇವತೆಗಳ ಭಕ್ತರಾಗಿರುತ್ತಾರೋ; ಯಾರು ಇವುಗಳನ್ನು ಅಂಗೀಕರಿಸುವವರಾಗಿರುತ್ತಾರೋ, ಅವರೆಲ್ಲರೂ ಮುಳುಗುವವರು ಮತ್ತು ಮುಳುಗಿಸುವವರು ಆಗಿರುತ್ತಾರೆ! ಏಕೆಂದರೆ, ಅವರ ಬಳಿಯೇ ಎಲ್ಲ ವಸ್ತುಗಳನ್ನೂ ಯಾಚಿಸುತ್ತಾರೆ! ಮತ್ತು ವೀತರಾಗರಾದ ಪುರುಷರಿಂದ ದೂರವಿರುತ್ತಾರೆ.

ಸಮೀಕ್ಷಕ:—ಅನ್ಯಮಾರ್ಗಿಗಳ ದೇವತೆಗಳನ್ನು ಸುಳ್ಳೆನ್ನುವುದು ಮತ್ತು ತಮ್ಮ ದೇವತೆಗಳನ್ನು ಸತ್ಯವೆನ್ನುವುದು ಕೇವಲ ಪಕ್ಷಪಾತದ ಮಾತಾಗಿದೆ.

ಮತ್ತು ಅನ್ಯ ಪಾಮರ್ಮಾರ್ಗಿಗಳ ದೇವಿಯರು ಮೊದಲಾದವರನ್ನು ನಿಷೇಧಿಸುತ್ತಾರೆ. ಆದರೆ, "ಶ್ರಾದ್ಧದಿನಕೃತ್ಯ"ದ 46ನೆಯ ಪುಟದಲ್ಲಿ—

'ಶಾಸನದೇವಿ'ಯು ರಾತ್ರಿ ಊಟ ಮಾಡಿದನೆಂಬ ಕಾರಣದಿಂದ, ಒಬ್ಬ ಪುರುಷನಿಗೆ ಕಪಾಳಕ್ಕೆ ಹೊಡೆದಳು! ಅವನ ಕಣ್ಣನ್ನು ಕಿತ್ತು ಹಾಕಿಬಿಟ್ಟಳು! ಅದಕ್ಕೆ ಪ್ರತಿಯಾಗಿ ಹೋತನ ಕಣ್ಣನ್ನು ಕಿತ್ತು, ಆ ಮನುಷ್ಯನಿಗೆ ಅಳವಡಿಸಿದಳು.". ಎಂದು ಬರೆದಿದೆಯಲ್ಲ!

ಈ ದೇವಿಯನ್ನು ಹಿಂಸಕಳೆಂದು ಏಕೆ ಒಪ್ಪಿಕೊಳ್ಳುವುದಿಲ್ಲ?

"ರತ್ನಸಾರ"ದ ಒಂದನೆಯ ಭಾಗದ 67ನೆಯ ಪುಟದಲ್ಲಿ ಏನು ಬರೆದಿದೆಯೋ. ನೋಡಿರಿ.—

'ಮರುತ ದೇವಿಯು ಪಥಿಕರಿಗೆ ಶಿಲಾವಿಗ್ರಹವಾಗಿ ಸಹಾಯಮಾಡುತ್ತಿದ್ದಳು'.

ಇವಳನ್ನೂ ಹಾಗೆಯೇ ಒಪ್ಪಿಕೊಳ್ಳುವುದಿಲ್ಲವೇಕೆ?

## (ಅನ್ಯಮತೀಯರ ನಾಶದ ಇಚ್ಛೆ! ಇದೇ ದಯಾ-ಧರ್ಮವೋ?)

[16] ಮೂಲ:—

ಕಿಂ ಸೋಪಿ ಜಣಣಿ ಜಾಓ ಜಾಣೋ ಜಣಣೀ ಕಿಂ ಗಓ ವಿದ್ಧಿಂ ।
ಜಇ ಮಿಚ್ಛರಓ ಜಾಓ ಗುಣೇಸು ಸಹ ಮಚ್ಛರಂ ವಹಇ ॥

[ಪ್ರಕರಣರತ್ನಾಕರ:-ಭಾಗ.2; ಷಷ್ಟೀಶತಕ; ಸೂತ್ರ.81]

[ಸಂಕ್ಷೇಪವಾಗಿ ಅರ್ಥ:—] ಯಾವ ಜೈನಮತ ವಿರೋಧಿಗಳಾದ ಮಿಥ್ಯಾತ್ವಿಗಳು, ಎಂದರೆ ಮಿಥ್ಯಾಧರ್ಮದವರಿದ್ದಾರೋ, ಅವರು ಹುಟ್ಟಿದರೇಕೆ? ಹುಟ್ಟಿಯೇ ಬಿಟ್ಟರಾದರೆ, ಬೆಳೆದರೇಕೆ? ಅಂದರೆ, ಶೀಘ್ರವೇ ತೀರಿಹೋಗಿದ್ದರೆ, ಚೆನ್ನಾಗಿರುತ್ತಿತ್ತು!

ಸಮೀಕ್ಷಕ:—ನೋಡಿರಿ, ಇವರ ವೀತರಾಗಭಾಷಿತವಾದ ದಯಾ-ಧರ್ಮವನ್ನು! ಬೇರೆಯ ಮತದವರ ಬಾಳನ್ನೂ ಕೂಡ ಬಯಸುವುದಿಲ್ಲ! ಇವರ ದಯಾ-ಧರ್ಮ ಕೇವಲ ಕಥನಮಾತ್ರವಾಗಿದೆ!

ಮತ್ತು ಏನಾದರೂ ಇರುವುದಾದರೆ, ಅದು ಕ್ಷುದ್ರ ಜೀವರಿಗಾಗಿ ಮತ್ತು ಪಶುಗಳಿಗಾಗಿ! ಜೈನರಿಂದ ಬೇರೆಯಾದ ಮಾನವರಿಗಾಗಿ ಅಲ್ಲ!

**(ಮುಕ್ತಿ ಕೇವಲ ಜೈನರಿಗೆ ಸಿಗುವುದು, ಎಂದು ಹೇಳುವುದು ಹುಚ್ಚುತನ)**

[17] ಮೂಲ:—

**ಸುದ್ಧೇ ಮಗ್ಗೇ ಜಾಯಾ ಸುಹೇಣ ಗಚ್ಛತ್ತಿ ಸುದ್ಧ ಮಗ್ಗಮ್ಮಿ ।**

**ಜೇ ಪುಣ ಅಮಗ್ಗಜಾಯಾ ಮಗ್ಗೇ ಗಚ್ಛಂತಿ ಯೇ ಚುಯ್ಯಂ ॥**

[ಪ್ರಕರಣರತ್ನಾಕರ:-ಭಾಗ.2; ಷಷ್ಟೀಶತಕ; ಸೂತ್ರ-83]

ಸಂಕ್ಷೇಪವಾಗಿ ಅರ್ಥ:— ಇವರ ಮುಖ್ಯ ತಾತ್ಪರ್ಯವೇನೆಂದರೆ—

ಯಾರಾದರೂ ಜೈನಕುಲದಲ್ಲಿ ಜನ್ಮತಾಳಿ ಮುಕ್ತಿಗೆ ಹೋಗುವರಾದರೆ, ಏನೂ ಆಶ್ಚರ್ಯವಿಲ್ಲ! ಆದರೆ, ಜೈನರಿಂದ ಬೇರೆಯಾದ ಕುಲದಲ್ಲಿ ಹುಟ್ಟಿದ ಮಿಥ್ಯಾತ್ವಿಗಳಾದ ಅನ್ಯಮಾರ್ಗೀಯರು ಮುಕ್ತಿಯನ್ನು ಗಳಿಸುವರಾದರೆ, ಇದರಲ್ಲಿ ದೊಡ್ಡ ಆಶ್ಚರ್ಯವಿದೆ!

ಇದರ ಫಲಿತಾರ್ಥವೇನೆಂದರೆ—**ಜೈನಮತದವರು ಮಾತ್ರ ಮುಕ್ತಿಹೊಂದುತ್ತಾರೆ! ಬೇರೆಯವರಾರೂ ಹೊಂದರು!** ಯಾರು ಜೈನಮತವನ್ನು ಗ್ರಹಿಸರೋ, ಅವರು ನರಕಗಾಮಿಗಳಾಗುತ್ತಾರೆ.

**ಸಮೀಕ್ಷಕ:—ಜೈನಮತದಲ್ಲಿ ಯಾವನೂ ದುಷ್ಟನೂ, ಅಥವಾ ನರಕಗಾಮಿಯೂ ಇರುವುದಿಲ್ಲವೇನು ?** ಅವರೆಲ್ಲರೂ ಮುಕ್ತಿಗೆ ತೆರಳುತ್ತಾರೆ! ಅನ್ಯರಾರೂ ತೆರಳುವುದಿಲ್ಲವೋ ? ಇದು ಉನ್ಮತ್ತತನದ ಮಾತಲ್ಲವೇನು ? ಮುಗ್ಧಮಾನವರ ಹೊರತು, ಇಂತಹ ಮಾತನ್ನು ಯಾವನು ಒಪ್ಪಬಲ್ಲನು ?

**(ಹೇಗೆ ಇತರರ ವಿಗ್ರಹಾರಾಧನೆ ಸುಳ್ಳೋ,
ಹಾಗೆಯೇ ಜೈನರದೂ ಕೂಡ)**

[18] **ಮೂಲ:—**

**ತಿಚ್ಛಯರಾಣಂ ಪೂಆ ಸಂಮತ್ತ ಗುಣಾಣಕಾರಿಣೀ ಭಣಿಯಾ ।**

**ಸಾವಿಯ ಮಿಚ್ಛತ್ತಯರೀ ಜಣ ಸಮಯೇ ದೇಸಿಯಾ ಪೂಆ ॥**

[ಪ್ರಕರಣರತ್ನಾಕರ:-ಭಾಗ.2; ಷಷ್ಟೀಶತಕ; ಸೂತ್ರ.90]

ಸಂಕ್ಷೇಪವಾಗಿ ಅರ್ಥ: — ಜಿನಮೂರ್ತಿಗಳ ಪೂಜೆಯೊಂದು ಮಾತ್ರ ಸಸಾರ ! ಮತ್ತು ಇವುಗಳಿಂದ ಬೇರೆಯಾದ ಮಾರ್ಗದವರ ಮೂರ್ತಿಪೂಜೆ ಅಸಾರವಾಗಿರುತ್ತದೆ! ಯಾವನು ಜಿನಮಾರ್ಗದ ಆಜ್ಞೆಯನ್ನು ಪಾಲಿಸುತ್ತಾನೋ, ಅವನು ತತ್ತ್ವಜ್ಞಾನಿ! ಯಾವನು ಪಾಲಿಸುವುದಿಲ್ಲವೋ, ಅವನು ತತ್ತ್ವಜ್ಞಾನಿಯಲ್ಲ!

**ಸಮೀಕ್ಷಕ:—ಭಾಪು! ಭಾಪು!! ಹೇಳುವುದಾದರೂ ಏನು !!! ಹೇಗೆ ವೈಷ್ಣ**ವರೇ ಮೊದಲಾದವರದು ಆಗಿರುತ್ತದೋ, ಹಾಗೆ ನಿಮ್ಮ ಮೂರ್ತಿಗಳೂ ಕಲ್ಲು ಮೊದಲಾದ ಜಡ ಪದಾರ್ಥಗಳದಲ್ಲವೇನು ? **ಹೇಗೆ ನಿಮ್ಮ ಮೂರ್ತಿಪೂಜೆ ಸುಳ್ಳಾಗಿದೆಯೋ, ಹಾಗೆಯೇ ವೈಷ್ಣವ ಮೊದಲಾದವರ ಮೂರ್ತಿಪೂಜೆಯೂ ಕೂಡ, ಸುಳ್ಳಾಗಿರುತ್ತದೆ!**

ನೀವು ನಿಮ್ಮನ್ನು ತತ್ತ್ವಜ್ಞಾನಿಗಳೆಂದು ತಿಳಿದುಕೊಳ್ಳುವುದರಿಂದ, ಮತ್ತು ಬೇರೆಯವರನ್ನು ಅತತ್ತ್ವಜ್ಞಾನಿಗಳೆಂದು ವಾದಿಸುವುದರಿಂದ, ನಿಮ್ಮ ಮತದಲ್ಲಿ ತತ್ತ್ವಜ್ಞಾನವಿಲ್ಲವೆಂದು ವಿದಿತವಾಗುತ್ತದೆ.

## (ಜೈನರೇ ಮಹಾತ್ಮರು! ಬೇರೆಯವರಲ್ಲವೇನು ?)

[19] **ಮೂಲ:—**

**ಜಿಣ ಆಣಾಏ ಧಮ್ಮೋ ಆಣಾರಹಿ ಆಣ ಫುಡಂ ಅಹಮುತ್ತಿ ।**

**ಇಯ ಮುಣಿಊಣಯ ತತ್ತಂ ಜಿಣ ಅಣಾಯೇ ಕುಣಹ ಧಮ್ಮಂ ॥**

[ಪ್ರಕರಣರತ್ನಾಕರ:–ಭಾಗ-2. ಷಷ್ಠೀಶತಕ; ಸೂತ್ರ-92]

ಸಂಕ್ಷೇಪವಾಗಿ ಅರ್ಥ:—ಜಿನದೇವನ ಆಜ್ಞೆಯು ದಯಾ-ಕ್ಷಮಾ ಮೊದಲಾದ ರೂಪವಾದ ಧರ್ಮವಾಗಿದೆ. ಅದರಿಂದ ಬೇರೆಯಾದ ಆಜ್ಞೆ ಎಲ್ಲವೂ ಅಧರ್ಮ ವಾಗಿದೆ.

**ಸಮೀಕ್ಷಕ:—ಇದೆಷ್ಟು ದೊಡ್ಡ ಅನ್ಯಾಯದ ಮಾತಾಗಿದೆ ? ಜೈನಮತ ದಿಂದ ಬೇರೆ ಯಾವನೇ ಪುರುಷನೂ ಸತ್ಯವಾದಿಯೂ, ಧರ್ಮಾತ್ಮನೂ ಆಗಿಲ್ಲ ವೇನು ?** ಆ ಧಾರ್ಮಿಕ ಪುರುಷನನ್ನು ಅಂಗೀಕರಿಸಬಾರದೇನು ?

ಅಹುದು ! ಜೈನ ಮತಸ್ಥರ ಮುಖ, ನಾಲಿಗೆ ಚರ್ಮದ್ದು ಆಗಿರದೇ, ಅನ್ಯರದು ಚರ್ಮದ್ದು ಆಗಿದ್ದಲ್ಲಿ, ಈ ಮಾತು ಅನ್ವಯಿಸಬಹುದಾಗಿತ್ತು ! ಈ ಮೂಲಕ ಕೇವಲ ತಮ್ಮ ಮತದ ಗ್ರಂಥಗಳ, ವಚನಗಳ, ಸಾಧುಗಳೇ ಮೊದ ಲಾದವರ ಹೆಚ್ಚುಗಾರಿಕೆಯನ್ನು ಹೇಗೆ ತೋಡಿಕೊಂಡಿದ್ದಾರೆಂದರೆ, ಜೈನರುಗಳು ಹೊಗಳುಭಟ್ಟರ ಹಿರಿಯಣ್ಣಂದಿರೇ ಆಗಿದ್ದಾರೋ, ಎನ್ನುವಂತೆ, ತಿಳಿಯಿರಿ!

## (ಅನ್ಯಮತೀಯರ ಐಶ್ವರ್ಯ ಮತ್ತು ಉನ್ನತಿಯಿಂದ ಈರ್ಷ್ಯೆ)

[20] **ಮೂಲ:—**

**ವನ್ನೇಮಿ ನಾರಯಾಉವಿ ಜೇಸಿ ದುರಕಾಇ ಸಂಭರಂ ತಾಣಂ ।**

**ಭವ್ವಾಣ ಜಣಇ ಹರಿಹರ ರಿದ್ಧಿ ಸಮಿದ್ಧೀ ವಿ ಉದ್ಘೋಸಂ ॥**

[ಪ್ರಕರಣರತ್ನಾಕರ:—ಭಾಗ-2. ಷಷ್ಠೀಶತಕ; ಸೂತ್ರ-95]

ಸಂಕ್ಷೇಪವಾಗಿ ಅರ್ಥ:—ಇದರ ಮುಖ್ಯ ತಾತ್ಪರ್ಯವೇನೆಂದರೆ—

**ಹರಿ, ಹರ ಮೊದಲಾದ ಯಾವ 'ವಿಭೂತಿ'* ಇದೆಯೋ, ಅದು ನರಕಕ್ಕೆ ಕಾರಣವಾಗಿದೆ.** ಅದನ್ನು ನೋಡಿದರೆ, ಜೈನರಿಗೆ ರೋಮಾಂಚ ಉಂಟಾಗುತ್ತದೆ! ಹೇಗೆ ರಾಜಾಜ್ಞೆಯ ಭಂಗವನ್ನು ಮಾಡುವುದರಿಂದ, ಮಾನವನು [ಮರಣದಂಡನೆ] ಯವರೆಗೂ ದುಃಖ ಹೊಂದುತ್ತಾನೋ, ಹಾಗೆ ಜಿನೇಂದ್ರನ ಆಜ್ಞಾ-ಭಂಗದಿಂದ ಜನನ-ಮರಣದ ದುಃಖವನ್ನು ಹೊಂದನೇತಕ್ಕೆ ?

**ಸಮೀಕ್ಷಕ :**—ನೋಡಿರಿ ! ಜೈನರ ಆಚಾರ್ಯರುಗಳೇ ಮೊದಲಾದವರ ಮಾನಸೀ ವೃತ್ತಿಯನ್ನು: ಎಂದರೆ, ಬಾಹ್ಯಕಪಟವನ್ನು, ಹಾಗೂ ಆಡಂಬರದ ಲೀಲೆಯನ್ನು ! ಈಗಂತೂ ಇವರ ಆಂತರಿಕ ಕಪಟವೂ ಕೂಡ ಹೊರಬಿದ್ದಿತು! **ಹರಿ, ಹರ ಮೊದಲಾದವರ ಮತ್ತು ಅವರ ಉಪಾಸಕರ ಐಶ್ವರ್ಯವನ್ನೂ ಮತ್ತು ಅಭಿವೃದ್ಧಿಯನ್ನೂ [ಇವರಿಂದ] ನೋಡಲೂ ಕೂಡ, ಆಗದು !**

ಅನ್ಯರ ಅಭಿವೃದ್ಧಿ ಏತಕ್ಕಾಯಿತು, ಎಂದು ಇವರಿಗೆ ರೋಮಾಂಚವಾಗುತ್ತದೆ!

'ಬಹುಶಃ ಇವರ ಸಮಸ್ತ ಐಶ್ವರ್ಯವೂ ನಮಗೆ ಸಿಕ್ಕುವುದಾದರೆ, ಮತ್ತು ಇವರು ದರಿದ್ರರಾಗಿ ಹೋದರೆ ಚೆನ್ನಾಗಿದ್ದೀತು', ಎಂದು ಬಯಸುತ್ತಿರಬಹುದೇನೋ ?

ಮತ್ತು ರಾಜಾಜ್ಞೆಯ ದೃಷ್ಟಾಂತವನ್ನು ಕೊಡುವುದಕ್ಕೆ ಕಾರಣವೂ ಕೂಡ, **ಜೈನರು ರಾಜ್ಯದ ಹೊಗಳುಭಟ್ಟರೂ, ಸುಳ್ಳರೂ ಮತ್ತು ಅಂಜುಬುರುಕರೂ ಆಗಿರುವುದೇ ಆಗಿದೆ!**†

**ರಾಜನ ಸುಳ್ಳು ಮಾತುಗಳನ್ನೂ ಒಪ್ಪಿಕೊಂಡು ಬಿಡಬೇಕೇನು ?**

ಈರ್ಷ್ಯಾದ್ವೇಷಯುಕ್ತನು ಯಾವನಾದರೂ ಇರುವುದಾದರೆ, ಜೈನರಿಗಿಂತ ಹೆಚ್ಚಾಗಿ ಬೇರೆ ಯಾವನೂ ಇರಲಾರನು !

---

*ಐಶ್ವರ್ಯ, ಪ್ರಭಾವ, ಮಹಿಮೆ, ಮಹಾಪುರುಷ ಇತ್ಯಾದಿ.—ಸಂ.

†ಈ ಐತಿಹಾಸಿಕ ತಥ್ಯ ಮಹರ್ಷಿ ದಯಾನಂದರ ರಾಜನೈತಿಕ ಅಧ್ಯಯನದ ದ್ಯೋತಕ! ಜೈನರು ಮುಸ್ಲಿಮರ ಶಾಸನಕಾಲದಲ್ಲೂ, ಆಂಗ್ಲರ ಶಾಸನಕಾಲದಲ್ಲೂ, ನಂತರ ಕಾಂಗ್ರೆಸ್ ಶಾಸನಕಾಲದಲ್ಲೂ ಒಂದೇ ತರಹ ಇದ್ದಾರೆ.—ಸಂ.

## (ಜೈನಧರ್ಮದಿಂದ ಬೇರೆಯಾದವನನ್ನು ಮೂರ್ಖನೆಂದು ಕರೆಯುವುದೇ ಮೌಢ್ಯ)

[21] ಮೂಲ:—

**ಜೋ ದೇಇ ಸುದ್ಧ ಧಮ್ಮಂ ಸೋ ಪರಮಪ್ಪಾ ಜಯಮ್ಮಿ ನಹು ಅನ್ನೋ ।**

**ಕಿಂ ಕಪ್ಪದ್ದುಮ್ಮ ಸರಿಸೋ ಇಯರ ತರೂ ಹೋಇ ಕಇಯಾವಿ ॥**

[ಪ್ರಕರಣರತ್ನಾಕರ :–ಭಾಗ–2. ಷಷ್ಟೀಶತಕ ; ಸೂತ್ರ.-101]

ಸಂಕ್ಷೇಪವಾಗಿ ಅರ್ಥ:— **ಯಾರು ಜೈನಧರ್ಮಕ್ಕೆ ವಿರುದ್ಧರಾಗಿರುತ್ತಾರೋ, ಆ ಜನರು ಮೂರ್ಖರು !** ಮತ್ತು ಯಾರು ಜಿನೇಂದ್ರಭಾಷಿತವಾದ ಧರ್ಮದ ಉಪದೇಶಕರಾದ ಸಾಧುಗಳೂ, ಅಥವಾ ಗೃಹಸ್ಥರೂ, ಅಥವಾ ಗ್ರಂಥಕರ್ತೃಗಳೂ ಆಗಿರುತ್ತಾರೋ, ಅವರು ತೀರ್ಥಂಕರರಿಗೆ ಸಮಾನರಾಗಿರುತ್ತಾರೆ. ಅವರಿಗೆ ಸಮಾನರಾದವರು ಬೇರೆ ಯಾರೂ ಇಲ್ಲ !

**ಸಮೀಕ್ಷಕ:**—ಅಲ್ಲವೇ ಮತ್ತೆ ! ಜೈನರುಗಳು ಬಾಲಬುದ್ಧಿಗಳಾಗಿರದಿದ್ದರೆ, ಇಂತಹ ಮಾತುಗಳನ್ನು ಒಪ್ಪಿಕೊಂಡು ಕುಳಿತಿರುತ್ತಿದ್ದರೇಕೆ ? ಹೇಗೆ ವೇಶ್ಯೆಯು ತನ್ನ ಹೊರತು, ಬೇರೆ ಯಾವಳ ಸ್ತುತಿಯನ್ನೂ ಮಾಡುವುದಿಲ್ಲವೋ, ಹಾಗೆಯೇ ಈ ವರ್ತನೆ ಕಾಣಿಸುತ್ತದೆ.

## (ಜೈನರ ಹಲವು ಮಾತುಗಳನ್ನು ಬಿಟ್ಟು ಬೇರೆಯವೆಲ್ಲ ತ್ಯಜಿಸಲರ್ಹವಾಗಿವೆ)

[22] ಮೂಲ:—

**ಮೂಲಂ ಜಿಣದಂ ದೇವೋ ತವ್ವಯಣಂ ಗುರುಜಣಂ ಮಹಾಸಯಾಣಂ ।**

**ಸೇಸಂ ಪಾವಟ್ಠಾಣಂ ಪರಮಪ್ಪಾಣಂ ಚ ವಜ್ಜೇಮಿ ॥**

[ಪ್ರಕರಣರತ್ನಾಕರ:–ಭಾಗ–2. ಷಷ್ಟೀಶತಕ; ಸೂತ್ರ.-103]

ಸಂಕ್ಷೇಪವಾಗಿ ಅರ್ಥ:— ಜಿನೇಂದ್ರದೇವನನ್ನೂ, ಅವನು ಹೇಳಿದ ಸಿದ್ಧಾಂತಗಳನ್ನೂ, ಮತ್ತು ಜಿನಮತದ ಉಪದೇಶಕರನ್ನೂ ತ್ಯಜಿಸುವುದು ಜೈನರಿಗೆ ಉಚಿತವಲ್ಲ.

**ಸಮೀಕ್ಷಕ:**—ಇದು ಜೈನರುಗಳ ಹಠದ, ಪಕ್ಷಪಾತದ ಮತ್ತು ಅವಿದ್ಯೆಯ ಫಲವಿಲ್ಲದಿದ್ದರೆ. ಮತ್ತೇನು ? ಆದರೆ, **ಜೈನರ ಹಲ ಕೆಲವು ಮಾತುಗಳನ್ನು ಬಿಟ್ಟು, ಬೇರೆ ಎಲ್ಲವೂ ವರ್ಜನೀಯವೇ ಆಗಿವೆ !**

ಯಾವನಿಗೆ ಸ್ವಲ್ಪವಾದರೂ ಬುದ್ಧಿಯಿರುತ್ತದೋ, ಅವನು ಜೈನರ ದೇವರುಗಳ, ಸಿದ್ಧಾಂತಗ್ರಂಥಗಳ, ಮತ್ತು ಉಪದೇಶಕರ ವಿಷಯದಲ್ಲಿ ದರ್ಶನ-ಶ್ರವಣ ಆಲೋಚನೆಗಳನ್ನು ಮಾಡುವನಾದರೆ, ಅದೇ ಸಮಯದಲ್ಲಿ ನಿಸ್ಸಂದೇಹವಾಗಿ [ಈ ಮತವನ್ನು] ವರ್ಜಿಸಿಬಿಡುವನು !

**(ಕೇವಲ ಜೈನಮತಸ್ಥರನ್ನು ಪೂಜ್ಯರೆಂದು ತಿಳಿಯುವುದು ಪಕ್ಷಪಾತ)**

[23] **ಮೂಲ:—**

**ವಯಣೇ ವಿ ಸುಗುರು ಜಿಣವಲ್ಲಹಸ್ಸ ಕೇಸಿಂ ನ ಉಲ್ಲಸಇ ಸಮ್ಮಂ ।**

**ಅಹ ಕಹ ದಿಣಮಣಿ ತೇಯಂ ಉಲುಆಣಂ ಹರಇ ಅಂಧತ್ತಂ ॥**

[ಪ್ರಕರಣರತ್ನಾಕರ:–ಭಾಗ-2. ಷಷ್ಟೀಶತಕ; ಸೂತ್ರ-108]

ಸಂಕ್ಷೇಪವಾಗಿ ಅರ್ಥ:— **ಯಾರು ಜಿನವಚನಕ್ಕೆ ಅನುಕೂಲವಾಗಿ ನಡೆದುಕೊಳ್ಳುತ್ತಾರೋ, ಅವರು ಪೂಜನೀಯರೂ,** ಮತ್ತು ಯಾರು ವಿರುದ್ಧವಾಗಿ ನಡೆದುಕೊಳ್ಳುತ್ತಾರೋ, ಅವರು ಅಪೂಜ್ಯರೂ ಆಗಿರುತ್ತಾರೆ. ಜೈನ ಗುರುಗಳನ್ನು ಅಂಗೀಕರಿಸಬೇಕು: ಎಂದರೆ, ಅನ್ಯಮಾರ್ಗೀಯರನ್ನು ಅಂಗೀಕರಿಸಬಾರದು !

**ಸಮೀಕ್ಷಕ:**—ಒಳಿತು ! ಜೈನರುಗಳು ಅನ್ಯ ಅಜ್ಞಾನಿಗಳನ್ನು ಪಶುಗಳಂತೆ ಶಿಷ್ಯರನ್ನಾಗಿ ಮಾಡಿಕೊಂಡು, ಕಟ್ಟಿಹಾಕದೇ ಇದ್ದಿದ್ದರೆ, ಅವರ ಬಲೆಯಿಂದ ಹೊರಬಂದು, ತಮ್ಮ ಮುಕ್ತಿಯ ಸಾಧನಗಳನ್ನು ಅವಲಂಬಿಸಿ, ಜನ್ಮವನ್ನು ಸಫಲಗೊಳಿಸಿಕೊಳ್ಳುತ್ತಿದ್ದರು.

**ಅಲ್ಲಾ ! ಯಾವನಾದರೂ ನಿಮ್ಮನ್ನು—'ಕುಮಾರ್ಗಿಗಳು, ಕುಗುರುಗಳು, ಮಿಥ್ಯಾತ್ವಿಗಳು ಮತ್ತು ದುರುಪದೇಶಕರು', ಎಂದು ಹೇಳಿದರೆ, ನಿಮಗೆಷ್ಟು ದುಃಖವಾಗುವುದು ?**

ಅದೇ ರೀತಿ, ನೀವು ಅನ್ಯರಿಗೆ ದುಃಖದಾಯಕರಾಗಿದ್ದೀರಿ ! ಆದುದರಿಂದ, ನಿಮ್ಮ ಮತದಲ್ಲಿ ನಿಃಸಾರವಾದ ಮಾತುಗಳು ಬಹಳವಾಗಿ ತುಂಬಿಕೊಂಡಿವೆ.

**(ಬೇಸಾಯ, ವ್ಯಾಪಾರಗಳು ನರಕಕ್ಕೆ ಹೇತು ! ಮತ್ತೆ ಬಿಡಲೊಲ್ಲಿರೇಕೆ?)**

[24] **ಮೂಲ:—**

**ಜೇ ರಜ್ಜಧಾನಈಣಂ ಕಾರಣಭೂಯ ಹವಂತಿ ವಾವಾರಾ ।**

**ತೇ ವಿಹು ಅಇಪಾವಜುಯಾ ಧನ್ನಾ ಛಡ್ಡಂತಿ ಭವಭಿಯಾ ॥**

[ಪ್ರಕರಣರತ್ನಾಕರ:–ಭಾಗ-2. ಷಷ್ಟೀಶತಕ; ಸೂತ್ರ-119]

**ತಿಹುಅಣ ಜಣಂ ಮರಂತಂ ದಠೂಣ ನಿಅಂತಿ ಜೇ ನ ಅಪ್ಪಾಣಂ ।**

**ವಿರಮಂತಿ ನ ಪಾವಾಉ ಧಿದ್ಧೀ ಧಿಠತ್ತಣಂ ತಾಣಂ ॥**

[ಪ್ರಕರಣರತ್ನಾಕರ:–ಭಾಗ-2. ಷಷ್ಟೀಶತಕ; ಸೂತ್ರ-109]

ಸಂಕ್ಷೇಪವಾಗಿ ಅರ್ಥ :—**ಮೃತ್ಯುವಿನವರೆಗೂ ಮುಟ್ಟುವ ದುಃಖವಿದ್ದರೂ ಕೂಡ, ಕೃಷಿ, ವ್ಯಾಪಾರ ಮೊದಲಾದ ಕರ್ಮಗಳನ್ನು ಜೈನರುಗಳು ಮಾಡಬಾರದು!** ಏಕೆಂದರೆ, ಈ ಕರ್ಮಗಳು ನರಕಕ್ಕೆ ಕರೆದೊಯ್ಯುವುವಾಗಿವೆ.

**ಸಮೀಕ್ಷಕ:**—ಈಗ ಯಾವನಾದರೂ ಜೈನರನ್ನು—

"ನೀವು ವ್ಯಾಪಾರ ಮೊದಲಾದ ಕರ್ಮಗಳನ್ನು ಏತಕ್ಕೆ ಮಾಡುತ್ತೀರಿ ? ಈ ಕರ್ಮಗಳನ್ನು ಬಿಟ್ಟುಬಿಡುವುದಿಲ್ಲವೇಕೆ ?", ಎಂದು ಕೇಳಬೇಕು.

ಮತ್ತು ಬಿಟ್ಟುಬಿಡುವಿರಾದರೆ, ನಿಮ್ಮ ಶರೀರಗಳ ಪಾಲನ–ಪೋಷಣಗಳೂ ಕೂಡ, ಆಗಲಾರವು. ಮತ್ತು ನಿಮ್ಮ ಕಥನಕ್ಕನುಸಾರವಾಗಿ ಎಲ್ಲ ಜನರೂ ಬಿಟ್ಟುಬಿಡುವರಾದರೆ, ನೀವು ಯಾವ ವಸ್ತುವನ್ನು ತಿಂದು ಜೀವಿಸುವಿರಿ ? ಇಂತಹ ಅತ್ಯಾಚಾರದ ಉಪದೇಶ ಮಾಡುವುದು ಸರ್ವಥಾ ವ್ಯರ್ಥವಾಗಿರುತ್ತದೆ !

ಬಡಪಾಯಿಗಳು ಮಾಡುವುದಾದರೂ ಏನನ್ನು ? ವಿದ್ಯಾ-ಸತ್ಸಂಗವಿಲ್ಲದೇ, ಮನಸ್ಸಿಗೇನು ಬಂದಿತೋ, ಅದನ್ನೇ ಬೊಗಳಿಬಿಟ್ಟರು !

**(ತಮ್ಮ ಸ್ವಾರ್ಥಸಿದ್ಧಿಗಾಗಿ ಎಲ್ಲವನ್ನೂ ಮಾಡಿಬಿಡುತ್ತಾರೆ)**

[25] **ಮೂಲ:**—

**ತಇಯಾ ಹಮಾಣ ಅಹಮಾ ಕಾರಣರಹಿಯಾ ಅನಾಣಗವ್ವೇಣ ।**

**ಜೇ ಜಪಂತಿ ಉಸ್ಸುತ್ತಂ ತೇಸಿಂ ಧಿದ್ಧಿಚ್ಚ ಪಂಡಿಚ್ಚಂ ॥**

[ಪ್ರಕರಣ ರತ್ನಾಕರ:-ಭಾಗ-2; ಷಷ್ಟೀಶತಕ; ಸೂತ್ರ–121]

ಸಂಕ್ಷೇಪವಾಗಿ ಅರ್ಥ:—ಯಾರು ಜೈನಾಗಮಕ್ಕೆ ವಿರುದ್ಧವಾದ ಶಾಸ್ತ್ರಗಳನ್ನು ಅಂಗೀಕರಿಸುವವರಾಗಿರುತ್ತಾರೋ, ಅವರು ಅಧಮಾಧಮರಾಗಿರುತ್ತಾರೆ ! **ಯಾವುದಾದರೂ ಸ್ವಾರ್ಥಸಿದ್ಧಿಸುವುದಾದರೂ ಕೂಡ, ಜೈನಮತಕ್ಕೆ ವಿರುದ್ಧವಾಗಿ ಮಾತನಾಡಬಾರದು; ಒಪ್ಪಿಕೊಳ್ಳಲೂಬಾರದು !** ಯಾವುದೇ ಪ್ರಯೋಜನ ಕೈಗೂಡುವುದೇ ಆಗಿದ್ದರೂ ಕೂಡ, ಅನ್ಯಮತದ ತ್ಯಾಗವನ್ನು ಮಾಡಿಬಿಡಬೇಕು !

**ಸಮೀಕ್ಷಕ:**—ನಿಮ್ಮ ಮೂಲಪುರುಷರಿಂದ ಹಿಡಿದು, ಇಂದಿನವರೆಗೆ ಎಷ್ಟು ಜನರು ಉದಿಸಿದ್ದಾರೋ, ಉದಿಸುವರೋ, ಅವರು ಅನ್ಯಮತವನ್ನು ಬೈಯುವುದರ ಹೊರತು, ಬೇರೆ ಯಾವುದೇ ಮಾತನ್ನು ಆಡಿಲ್ಲ ; ಮತ್ತು ಆಡುವುದೂ ಇಲ್ಲ!

ಜೈನರು ಎಲ್ಲಿ ಎಲ್ಲಿ ತಮ್ಮ ಸ್ವಾರ್ಥ ಸಿದ್ಧಿಯನ್ನು ಕಾಣುತ್ತಾರೋ, ಅಲ್ಲಿ [ಅಲ್ಲಿ], ಶಿಷ್ಯರಿಗೂ ಕೂಡ, ಶಿಷ್ಯರಾಗಿ ಹೋಗುತ್ತಾರೆ! ಇಂತಹ ಸುಳ್ಳಾದ ಉದ್ದುದ್ದ–ಅಗಲಗಲದ ಮಾತುಗಳನ್ನು ಆಡುವುದರಲ್ಲಿ ಸ್ವಲ್ಪವೂ ನಾಚಿಕೆಯಾಗುವುದಿಲ್ಲ! ಇದು ಮಹಾ ಶೋಚನೀಯವಾದ ವಿಷಯವಾಗಿದೆ !

## (ಸಮನ್ವಯದ ಭಾವನೆಯನ್ನು ಬಿಡುವುದು ಬುದ್ಧಿವಂತಿಕೆಯಲ್ಲ)

[26] **ಮೂಲ:**—

**ಜಂ ವೀರಜಿಣಸ್ಸ ಜಿಓ ಮರಈ ಉಸ್ಸುತ್ತ ಲೇಸದೇಸಣಓ ।**

**ಸಾಗರ ಕೋಡಾಕೋಡಿಂ ಹಿಂಡಇ ಅಇಭೀಮಭವವರಣ್ಣೇ।**

[ಪ್ರಕರಣರತ್ನಾಕರ:-ಭಾಗ.2. **ಷಷ್ಟೀಶತಕ; ಸೂತ್ರ.-122**]

ಸಂಕ್ಷೇಪವಾಗಿ ಅರ್ಥ:—ಯಾವನಾದರೂ—"**ಜೈನ ಸಾಧುಗಳಲ್ಲಿ ಧರ್ಮವಿದೆ. ನಮ್ಮವರಲ್ಲಿ, ಹಾಗೂ ಬೇರೆಯವರಲ್ಲಿಯೂ ಕೂಡ ಧರ್ಮವಿದೆ,**" ಎಂದು ಹೇಳುವನಾದರೆ, **ಆ ಮನುಷ್ಯನು** ಕೋಟ್ಯನುಕೋಟಿ ವರ್ಷಗಳವರೆಗೆ ನರಕದಲ್ಲಿದ್ದು, ಮತ್ತೂ ಕೂಡ, ನೀಚ **ಜನ್ಮವನ್ನು ಹೊಂದುತ್ತಾನೆ !**

**ಸಮೀಕ್ಷಕ:**—ಭಾಪು, ಭಾಪು! ವಿದ್ಯಾಶತ್ರುಗಳೇ! ನೀವು—

'ನಮ್ಮ ಮಿಥ್ಯಾವಚನಗಳ ಖಂಡನವನ್ನೂ ಯಾವನೂ ಮಾಡದಿರಲಿ', ಎಂದೇ ಯೋಚಿಸಿರಬಹುದು. ಇದೇ ಕಾರಣದಿಂದ, ಈ ಭಯಂಕರವಾದ ವಚನವನ್ನು ಬರೆದಿದ್ದೀರಿ. ಹಾಗೆ ಆಗುವುದು ಅಸಂಭವವಾಗಿದೆ !

ಈಗ ಎಲ್ಲಿಯವರೆಗೆ ನಿಮಗೆ ಬುದ್ಧಿ ಹೇಳೋಣ ?

ನೀವಂತೂ ಸುಳ್ಳು, ನಿಂದೆ ಮತ್ತು ಬೇರೆ ಮತಗಳೊಂದಿಗೆ ವೈರ–ವಿರೋಧ ಮಾಡುವುದಕ್ಕಾಗಿಯೇ ಟೊಂಕಕಟ್ಟಿ ನಿಂತು, ನಿಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದನ್ನು 'ಮೋಹನ ಭೋಗ'ಕ್ಕೆ ಸಮವೆಂದು ತಿಳಿದುಬಿಟ್ಟಿದ್ದೀರಿ!

## (ಜೈನಧರ್ಮವನ್ನು ಸತ್ಯವೆಂದು ಅಂಗೀಕರಿಸುವ ಮಾತ್ರದಿಂದ ದುಃಖಸಾಗರವನ್ನು ಪಾರಾಗುವುದು ಸುಳ್ಳು)

[27] **ಮೂಲ:—**

**ದೂರೇ ಕರಣಂ ದೂರಮ್ಮಿ ಸಾಹಣಂ ತಹ ಪಭಾವಣಾ ದೂರೇ ॥**

**ಜಿಣಧಮ್ಮ ಸದ್ದಹಾಣಂ ಪಿ ತಿರಿಕದುರಕಾಇ ನಿಟ್ಠವಇ ॥**

[ಪ್ರಕರಣರತ್ನಾಕರ:-ಭಾಗ.2. ಷಷ್ಟೀಶತಕ; ಸೂತ್ರ.-127]

ಸಂಕ್ಷೇಪವಾಗಿ ಅರ್ಥ:—ಯಾವ ಮಾನವನಿಂದ ಜೈನಧರ್ಮದ ಅನುಷ್ಠಾನ ಸ್ವಲ್ಪವೂ ಕೂಡ ಆಗಲಾರದೋ, ಅವನೂ ಕೂಡ—

'ಜೈನಧರ್ಮ ಸತ್ಯವಾಗಿದೆ; ಬೇರೆ ಯಾವುದೂ ಅಲ್ಲ.', ಎಂಬ ಇಷ್ಟು ಶ್ರದ್ಧಾಮಾತ್ರದಿಂದಲೇ, ದುಃಖದಿಂದ ಪಾರಾಗಿ ಹೋಗುತ್ತಾನೆ.

**ಸಮೀಕ್ಷಕ:**—ಆಹಾ ! ಮೂರ್ಖರನ್ನು ತಮ್ಮ ಮತಜಾಲದಲ್ಲಿ ಸಿಕ್ಕಿಸಿಕೊಳ್ಳುವುದಕ್ಕೆ, ಇದಕ್ಕಿಂತ ಅಧಿಕವಾದ ಬೇರೆ ಮಾತು ಯಾವುದಿದ್ದೀತು? ಏಕೆಂದರೆ, **ಯಾವ ಕರ್ಮವನ್ನೂ ಮಾಡಬೇಕಾಗಿಲ್ಲ; ಮತ್ತು ಸಿಕ್ಕಿಹೋಗುವುದು ನೇರ ಮುಕ್ತಿಯೇ!**

**ಇಂತಹ ಮೌಢ್ಯಮಯವಾದ ಮತ ಬೇರೆ ಯಾವುದು ಇದ್ದೀತು ?**

## (ಜಿನಾಗಮ ಆಲಿಸುವ ಇಚ್ಛಾಮಾತ್ರದಿಂದಲೇ ದುಃಖಸಾಗರವನ್ನು ಪಾರಾಗುವುದು ಸುಳ್ಳು)

[28] **ಮೂಲ:—**

**ಕಇಯಾ ಹೋಹೀ ದಿವಸೋ ಜಇಯಾ ಸುಗುರೂಣ ಪಾಯಮೂಲಮ್ಮಿ ।**

**ಉತ್ಸುತ್ತ ಲೇಸವಿಸಲವ ರಹಿಓ ನಿಸುಣೇಸು ಜಿಣಧಮ್ಮಂ ॥**

[ಪ್ರಕರಣರತ್ನಾಕರ:–ಭಾಗ-2. ಷಷ್ಟೀಶತಕ; ಸೂತ್ರ–128]

ಸಂಕ್ಷೇಪವಾಗಿ ಅರ್ಥ:—ಯಾವ ಮಾನವನು—

"ಜಿನಾಗಮವನ್ನು, ಎಂದರೆ ಜೈನರ ಶಾಸ್ತ್ರಗಳನ್ನು ಆಲಿಸುವೆನು. ಉತ್ಸೂತ್ರಗಳನ್ನು, ಎಂದರೆ ಅನ್ಯಮತಗ್ರಂಥಗಳನ್ನು ಎಂದಿಗೂ ಆಲಿಸುವುದಿಲ್ಲ.", ಎಂದಿಷ್ಟು ಇಚ್ಛೆ ಮಾಡುವನೋ, ಅವನು ಇಷ್ಟು **ಇಚ್ಛಾಮಾತ್ರದಿಂದಲೇ ದುಃಖಸಾಗರವನ್ನು ದಾಟಿ ಹೋಗುತ್ತಾನೆ !**

**ಸಮೀಕ್ಷಕ:**—ಈ ಮಾತೂ ಕೂಡ, ಮುಗ್ಧ ಮಾನವರನ್ನು ಸಿಕ್ಕಿಸಿಕೊಳ್ಳುವುದಕ್ಕಾಗಿಯೇ ಇದೆ. ಏಕೆಂದರೆ, ಈ ಪೂರ್ವೋಕ್ತವಾದ ಇಚ್ಛೆಯಿಂದ, ಇಲ್ಲಿನ ದುಃಖಸಾಗರದಿಂದಲೂ ಪಾರಾಗುವುದಿಲ್ಲ ! ಮತ್ತು, ಪೂರ್ವಜನ್ಮದ ಸಂಚಿತ ಪಾಪಗಳ ದುಃಖವೆಂಬ ಫಲವು, ಅನುಭವಿಸದೇ ಬಿಟ್ಟು ಹೋಗಲಾರದು !

ಇಂತಿಂತಹ ಸುಳ್ಳುಗಳನ್ನು, ಎಂದರೆ ವಿದ್ಯಾವಿರುದ್ಧವಾದ ಮಾತನ್ನು ಬರೆಯದೇ ಇದ್ದಿದ್ದರೆ, [ಜನರು] ವೇದಗಳೇ ಮೊದಲಾದ ಶಾಸ್ತ್ರಗಳನ್ನು ನೋಡಿ, ಕೇಳಿ, ಸತ್ಯಾಸತ್ಯಗಳನ್ನರಿತು, ಇವರ ಅವಿದ್ಯಾರೂಪವಾದ ಪೊಳ್ಳು ಗ್ರಂಥಗಳನ್ನು ವರ್ಜಿಸಿಬಿಡುತ್ತಿದ್ದರು. ಆದರೆ, ಈ ವಿದ್ಯಾಹೀನರನ್ನು ಹೇಗೆ ಬಿಗಿದು ಕಟ್ಟಿಹಾಕಿದ್ದಾರೆಂದರೆ—

ಇವರ ಈ ಜಾಲದಿಂದ ಯಾವನೋ ಒಬ್ಬ ಬುದ್ಧಿವಂತನಾದ ಸತ್ಸಂಗನಿಷ್ಠನು ಬೇಕಾದರೆ, ಬಿಡುಗಡೆ ಹೊಂದಬಲ್ಲನಾದರೆ, ಅದು ಸಂಭವ ! ಆದರೆ, ಜಡಬುದ್ಧಿಗಳಾದ ಅನ್ಯರ ಬಿಡುಗಡೆ ಬಹು ಕಠಿಣವಾಗಿದೆ!

## (ಹಸಿವಿನಿಂದ ಸಾಯುವುದು ಮೊದಲಾದ ಕಷ್ಟಸಹನೆಗಳನ್ನು ಚಾರಿತ್ರವೆನ್ನುವುದು ಸರಿಯಲ್ಲ)

[29] **ಮೂಲ:**—

**ಜಹ್ಮಾ ಜೇಣಹಿಂ ಭಣಿಯಂ ಸುಯ ವವಹಾರಂ ವಿಂಸೋಹಿಯಂ ತಸ್ಸ ।**

**ಜಾಇಯ ವಿಸುದ್ಧ ಬೋಹೀ ಜಿಣಆಣಾ ರಾಹಗತ್ತಾಓ ॥**

[ಪ್ರಕರಣರತ್ನಾಕರ:–ಭಾಗ–2. ಷಷ್ಠೀ ಶತಕ; ಸೂತ್ರ–185]

ಸಂಕ್ಷೇಪವಾಗಿ ಅರ್ಥ:— ಯಾರು ಜಿನಾಚಾರ್ಯರು ಹೇಳಿದ ಸೂತ್ರಗಳು, ನಿರುಕ್ತ, 'ವೃತ್ತಿಭಾಷ್ಯ', ಚೂರ್ಣೀ –ಇವನ್ನು ಅಂಗೀಕರಿಸುತ್ತಾರೋ, ಅವರು ಮಾತ್ರ ಶುಭ ವ್ಯವಹಾರವನ್ನೂ, ಮತ್ತು ಕಷ್ಟದಿಂದ ಮಾತ್ರ ನಿರ್ವಹಿಸಲಾಗುವ ವ್ಯವಹಾರವನ್ನೂ ಮಾಡುವುದರಿಂದ, ಚಾರಿತ್ರಯುಕ್ತರಾಗಿ, ಸುಖಗಳನ್ನು ಪಡೆದುಕೊಳ್ಳುತ್ತಾರೆ! ಅನ್ಯಮತದ ಗ್ರಂಥಗಳನ್ನು ನೋಡುವುದರಿಂದ ಅಲ್ಲ!

**ಸಮೀಕ್ಷಕ:**—ಅತ್ಯಂತ ಹಸಿವಿನಿಂದ ಸಾಯುವುದೇ ಮೊದಲಾದ ಕಷ್ಟಗಳನ್ನು ಸಹಿಸುವುದನ್ನು ಚಾರಿತ್ರ, ಎನ್ನುತ್ತಾರೆಯೇನು ?

ಹಸಿದವನಾಗಿ-ಬಾಯಾರಿದವನಾಗಿ ಸಾಯುವುದು ಮೊದಲಾದುದೇ ಚಾರಿತ್ರವಾಗಿದ್ದರೆ, ಬಹುಮಂದಿ ಮಾನವರು ಕ್ಷಾಮದಲ್ಲಿ ಅಥವಾ ಯಾರಿಗೆ ಆಹಾರ

**"ವಿವೇಕಸಾರ, ಭಾಗ-1"ರ 228ನೆಯ ಪುಟ—**

"ಬಲಶಾಲಿಯಾದ ಪುರುಷನ ಆಜ್ಞೆ, ದೇವನ ಆಜ್ಞೆ, ಘೋರವನದಲ್ಲಿ ಕಷ್ಟದಿಂದ ನಿರ್ವಾಹ, ಗುರುವಿನ ತಡೆ; ತಾಯಿ, ತಂದೆ, ಕುಲದ ಆಚಾರ್ಯ, ಜ್ಞಾತಿಗಳು, ಹಾಗೂ ಧರ್ಮೋಪದೇಶಕ–ಈ ಆರು ಜನರ ತಡೆಯುವಿಕೆಯಿಂದ, ಧರ್ಮದಲ್ಲಿ ನ್ಯೂನತೆಯುಂಟಾದರೆ, ಧರ್ಮಹಾನಿಯುಂಟಾಗುವುದಿಲ್ಲ."

**ಸಮೀಕ್ಷಕ:**—ಈಗ ನೋಡಿರಿ ಇವರ ಮಿಥ್ಯಾಕಥನಗಳನ್ನು ! **ಒಬ್ಬ ಮಾನವನು ಗ್ರಾಮದಷ್ಟು ದೊಡ್ಡದಾದ ಪಾಷಾಣ-ಖಂಡವನ್ನು ಬೆರಳಿನ ಮೇಲೆ** ಎಂದಿಗಾದರೂ ಇಟುಕೊಳ್ಳಬಲ್ಲನೇನು ? [1]

ಮತ್ತು ಪೃಥಿವಿಯ ಮೇಲೆ ಬೆರಳಿನಿಂದ ಒತ್ತುವುದರಿಂದ, ಪೃಥಿವಿ ಎಂದಿಗಾದರೂ ಕುಸಿಯಬಲ್ಲದೇ ? ಮತ್ತು **ಶೇಷನಾಗನೇ ಇಲ್ಲದಿರುವಾಗ, ಯಾವನು ಕಂಪಿಸುತ್ತಾನೆ ?** [2]

**ಅಲ್ಲಾ! ಶರೀರವನ್ನು ಕತ್ತರಿಸುವುದರಿಂದ, ಹಾಲು ಹೊರಡುವುದನ್ನು ಯಾವನೂ ನೋಡಲಿಲ್ಲ!** ಇಂದ್ರಜಾಲದ ಹೊರತು ಇದು ಮತ್ತೇನೂ ಅಲ್ಲ.

ಅವನನ್ನು ಕಚ್ಚುವ ಸರ್ಪವೇನೋ ಸ್ವರ್ಗಕ್ಕೆ ತೆರಳಿತು! ಮತ್ತು ಮಹಾತ್ಮಾ ಶ್ರೀಕೃಷ್ಣ ಮೊದಲಾದವರು ಮೂರನೆಯ ನರಕಕ್ಕೆ ತೆರಳಿದರು, ಎನ್ನುವ ಈ ಮಾತು ಎಷ್ಟು ಸುಳ್ಳು ? [3]

ಯಾವಾಗ ಮಹಾವೀರನ ಪಾದಗಳ ಮೇಲೆ ಪಾಯಸವನ್ನು ಕಾಯಿಸಿದರೋ, ಆಗ ಅವನ ಪಾದಗಳು ಸುಟ್ಟು ಹೋಗಲಿಲ್ಲವೇಕೆ ? [4]

ಅಲ್ಲಾ ! ಚಿಕ್ಕದಾದ ಪಾತ್ರೆಯಲ್ಲಿ ಯಾವಾಗಲಾದರೂ ಒಂಟೆ ಹಿಡಿಸಬಲ್ಲದೇ ? [5]

ಯಾರು ಶರೀರದ ಕೊಳೆಯನ್ನು ತೆಗೆಯದೆಯೂ, ಮತ್ತು ಕೆರೆಯದೆಯೂ ಇರುತ್ತಾರೋ, ಅವರು ದುರ್ಗಂಧವೆಂಬ ಮಹಾನರಕವನ್ನು ಅನುಭವಿಸುತ್ತಿರಬಹುದು! [6]

**ಯಾವ ಸಾಧುವು ನಗರವನ್ನು ಸುಟ್ಟುಹಾಕಿದನೋ, ಅವನ ದಯೆ ಮತ್ತು ಕ್ಷಮೆ ಎಲ್ಲಿ ಹೋಯಿತು ? ಮಹಾವೀರನ ಸಂಗದಿಂದಲೂ ಕೂಡ, ಅವನ ಆತ್ಮನು ಪವಿತ್ರನಾಗಲಿಲ್ಲವೆಂದರೆ, ಈಗ, ಮಹಾವೀರನ ಮರಣಾನಂತರ, ಅವನ ಆಶ್ರಯದಿಂದ ಜೈನರು ಎಂದಿಗೂ ಪವಿತ್ರರಾಗಲಾರರು!** [7]

ರಾಜನ ಆಜ್ಞೆಯನ್ನು* ಪಾಲಿಸಬೇಕು. ಆದರೆ, ಜೈನರುಗಳು ವ್ಯಾಪಾರಿಗಳಾಗಿದ್ದಾರೆ. ಆದುದರಿಂದ, ರಾಜನಿಗೆ ಹೆದರಿ, ಈ ಮಾತನ್ನು ಬರೆದಿರಬಹುದು! [8]

ಕೋಶಾ ವೇಶ್ಯೆ—ಅವಳ ಶರೀರ ಎಷ್ಟೇ ಹಗುರವಾಗಿರಲೊಲ್ಲದೇಕೆ ? ಹಾಗಿದ್ದರೂ ಕೂಡ, ಸಾಸಿವೆಯ ರಾಶಿಯ ಮೇಲೆ ಸೂಜಿಯನ್ನು ನಿಲ್ಲಿಸಿ, ಅದರ ಮೇಲೆ ನರ್ತಿಸುವುದು, ಸೂಜಿ ಚುಚ್ಚಿಕೊಳ್ಳದಿರುವುದು, ಮತ್ತು ಸಾಸಿವೆಯ ರಾಶಿ ಚದುರದಿರುವುದು ಭಾರೀ ಸುಳ್ಳಲ್ಲದಿದ್ದರೆ, ಮತ್ತೇನು ? [9]

ಏನೇ ಬೇಕಾದರೂ ಆಗಿಹೋಗಲೀ, ಧರ್ಮವನ್ನು ಯಾವನೂ ಯಾವುದೇ ಸ್ಥಿತಿಯಲ್ಲಿಯೂ ಬಿಡಬಾರದು! [10]

ಅಲ್ಲಾ! ಕೊರಳಸುತ್ತು ಬಟ್ಟೆಯಾಗಿರುತ್ತದೆ. ಅದು ಪ್ರತಿ ದಿನವೂ 500 ಸ್ವರ್ಣ ಮುದ್ರಿಕೆಗಳನ್ನು ಹೇಗೆ ಕೊಡಬಲ್ಲದು ? [11]

ಇನ್ನೂ ಇಂತಿಂತಹ ಇವರ ಅಸಂಭವವಾದ ಕಗ್ಗಗಳನ್ನು ಬರೆಯುವೆವಾದರೆ, ಜೈನರ ಪೊಳ್ಳು-ಪುಸ್ತಕಗಳ ಹಾಗೆ, [ಈ ಗ್ರಂಥವೂ] ಬಹಳ ಬೆಳೆದು ಹೋದೀತು ! ಆದುದರಿಂದ, ಹೆಚ್ಚಾಗಿ ಬರೆಯುವುದಿಲ್ಲ. ಎಂದರೆ, ಈ ಜೈನರ ಗ್ರಂಥಗಳಲ್ಲಿ ಸ್ವಲ್ಪ ವಿಷಯಗಳನ್ನುಳಿದು, ಮಿಕ್ಕುದೆಲ್ಲಾ ಮಿಥ್ಯಾಜಾಲವೇ ತುಂಬಿಕೊಂಡಿದೆ!

## (ಜೈನರ ಭೂಗೋಳ-ಖಗೋಳ ವಿಷಯುಕ ಮಿಥ್ಯೆ ಮಾತುಗಳು)

ನೋಡಿರಿ:—

[35] ದೋ ಸಸಿ ದೋ ರವಿ ಪಢಮೇ । ದುಗುಣಾ ಲವಣಂಮಿ ಧಾಯಈ ಸಂಡೇ।
ಬಾರಸ ಸಸಿ ಬಾರಸ ರವಿ । ತಪ್ಪಮಿ ಇಂ ನಿದಿತ ಸಸಿ ರವಿಣೋ ॥
[ತಿಗುಣಾ ಪುಬ್ಬಿಲಜಯಾ । ಅಣಂತರಾಣಂತರಂ ಮಿಖಿತ್ತಮಿ ।
ಕಾಲೋ ಏ ಬಯಾಲಾ । ಬಿಸತ್ತರೀ ಪುಸ್ಕರ ದ್ವಂಮಿ ॥]

[ಪ್ರಕರಣರತ್ನಾಕರ:-ಭಾಗ-4. ಸಂಗ್ರಹಣೀ ಸೂತ್ರ-77-78]

ಲಕ್ಷ ಯೋಜನೆ, ಎಂದರೆ 4 (ನಾಲ್ಕು) ಲಕ್ಷ ಕೋಶದಷ್ಟಿದೆ, ಎಂದು ಬರೆಯಲ್ಪಟ್ಟಿರುವ 'ಜಂಬೂದ್ವೀಪ'ದಲ್ಲಿ ಇದು ಮೊದಲ ದ್ವೀಪವೆನಿಸುತ್ತದೆ. ಇದರಲ್ಲಿ ಇಬ್ಬರು ಚಂದ್ರರೂ, ಮತ್ತು ಇಬ್ಬರು ಸೂರ್ಯರೂ ಇದ್ದಾರೆ!

*ಅದು ಧರ್ಮಾನುಕೂಲವಾಗಿದ್ದರೆ.—ಅನು.

ಮತ್ತು, ಹಾಗೆಯೇ '**ಲವಣ ಸಮುದ್ರ**'ದಲ್ಲಿ ಅವರ ಎರಡರಷ್ಟು, ಎಂದರೆ ನಾಲ್ವರು ಚಂದ್ರರು, ಮತ್ತು ನಾಲ್ವರು ಸೂರ್ಯರಿದ್ದಾರೆ!

ಮತ್ತು '**ಧಾತಕೀಖಂಡ**'ದಲ್ಲಿ ಹನ್ನೆರಡು ಚಂದ್ರರೂ, ಮತ್ತು ಹನ್ನೆರಡು ಸೂರ್ಯರೂ ಇದ್ದಾರೆ! ಮತ್ತು ಇವರನ್ನು ತ್ರಿಗುಣೀಕರಿಸುವುದರಿಂದ ಮೂವತ್ತಾರು ಆಗುತ್ತಾರೆ.

ಅವರುಗಳೊಂದಿಗೆ '**ಜಂಬೂದ್ವೀಪ**'ದ ಇಬ್ಬರನ್ನೂ, ಮತ್ತು '**ಲವಣ ಸಮುದ್ರ**'ದ ನಾಲ್ವರನ್ನೂ ಸೇರಿಸಿ, **42 ಚಂದ್ರರೂ ಮತ್ತು 42 ಸೂರ್ಯರೂ 'ಕಾಲೋದಧಿ' ಸಮುದ್ರದಲ್ಲಿದ್ದಾರೆ!**

ಹೀಗೆಯೇ, ಮುಂದಣ ಮುಂದಣ ದ್ವೀಪ, ಹಾಗೂ ಸಮುದ್ರಗಳಲ್ಲಿ ಮೇಲೆ ಹೇಳಿದ 42ನ್ನು ತ್ರಿಗುಣೀಕರಿಸಿದರೆ, 126 (ಒಂದು ನೂರ ಇಪ್ಪತ್ತಾರು) ಆಗುತ್ತಾರೆ. ಅವರಲ್ಲಿ '**ಧಾತಕೀಖಂಡ**'ದ 12 (ಹನ್ನೆರಡು), '**ಲವಣಸಮುದ್ರ**'ದ 4 (ನಾಲ್ಕು) ಮತ್ತು '**ಜಂಬೂದ್ವೀಪ**'ದ ಎರಡೆರಡು—ಇದೇ ರೀತಿಯಿಂದ ತೆಗೆದರೆ, 144 (ನೂರ ನಲವತ್ತನಾಲ್ಕು) ಚಂದ್ರರು; ಮತ್ತು **144 ಸೂರ್ಯರು 'ಪುಷ್ಕರದ್ವೀಪ'** ದಲ್ಲಿದ್ದಾರೆ. ಇದೂ ಕೂಡ, ಅರ್ಧ ಮನುಷ್ಯ ಕ್ಷೇತ್ರದ ಗಣನೆಯಾಗಿದೆ.

ಆದರೆ, ಎಲ್ಲಿಯವರೆಗೆ ಮನುಷ್ಯರು ಇರುವುದಿಲ್ಲವೋ, ಅಲ್ಲಿ ಬಹು ಸಂಖ್ಯಕ ರಾದ ಸೂರ್ಯರೂ ಮತ್ತು ಬಹು ಸಂಖ್ಯಕ ಚಂದ್ರರೂ ಇದ್ದಾರೆ!

ಮತ್ತು '**ಪುಷ್ಕರದ್ವೀಪ**'ದ ಪೂರ್ವಾರ್ಧದಲ್ಲಿರುವ ಬಹು ಸಂಖ್ಯಕ ಚಂದ್ರರು ಮತ್ತು ಸೂರ್ಯರು ಸ್ಥಿರರಾಗಿದ್ದಾರೆ!

ಮೊದಲು ಹೇಳಿದ ನೂರ ನಲವತ್ತನಾಲ್ಕನ್ನು ತ್ರಿಗುಣೀಕರಿಸುವುದರಿಂದ, 432: ಮತ್ತು ಅವುಗಳಲ್ಲಿ ಮೊದಲು ಹೇಳಿದ **ಜಂಬೂದ್ವೀಪದ** ಇಬ್ಬರು ಚಂದ್ರರು, ಇಬ್ಬರು ಸೂರ್ಯರು: **ಲವಣಸಮುದ್ರದ** ನಾಲ್ವರು-ನಾಲ್ವರು ; ಮತ್ತು **ಧಾತಕೀಖಂಡದ** ಹನ್ನೆರಡು-ಹನ್ನೆರಡು; ಮತ್ತು **ಕಾಲೋದಧಿಯ** 42 ಇವರನ್ನು ಸೇರಿಸುವುದರಿಂದ, **492 ಚಂದ್ರರೂ ಮತ್ತು 492 ಸೂರ್ಯರೂ 'ಪುಷ್ಕರಸಮುದ್ರ'ದಲ್ಲಿದ್ದಾರೆ!**

ಈ ಎಲ್ಲ ಮಾತುಗಳನ್ನೂ **ಶ್ರೀ ಜಿನಭದ್ರಗಣೀಕ್ಷಮಾ ಶ್ರಮಣನು** ದೊಡ್ಡ '**ಸಂಘಯಣಿ**'ಯಲ್ಲಿಯೂ, ಹಾಗೂ "**ಯೋತೀಸಕರಂಡಕ ಪಯನ್ನಾ**"ದಲ್ಲಿಯೂ, ಮತ್ತು '**ಚಂದ್ರಪನ್ನತಿ**', ಹಾಗೂ '**ಸೂರಪನ್ನತಿ**', ಎಂಬ ಪ್ರಮುಖ ಸಿದ್ಧಾಂತ ಗ್ರಂಥಗಳಲ್ಲಿಯೂ ಹೀಗೆಯೇ ಹೇಳಿದ್ದಾನೆ.

**ಸಮೀಕ್ಷಕ:**—ಈಗ ಆಲಿಸಿರಿ, ಭೂಗೋಳ-ಖಗೋಳಾಬಿಜ್ಞರೇ! ಈ ಒಂದು ಭೂಗೋಳದಲ್ಲಿ ಒಂದು ರೀತಿಯಿಂದ, 492 (ನಾಲ್ಕು ನೂರ ತೊಂಬತ್ತೆರಡು), ಮತ್ತು ಇನ್ನೊಂದು ರೀತಿಯಿಂದ, ಅಸಂಖ್ಯರಾದ ಚಂದ್ರ-ಸೂರ್ಯರನ್ನು ಜೈನರು ಅಂಗೀಕರಿಸುತ್ತಾರೆ ! ವೇದಮತಾನುಯಾಯಿಗಳಾದ ನಿಮಗೆ **'ಸೂರ್ಯಸಿದ್ಧಾಂತ'** ಮೊದಲಾದ ಜ್ಯೋತಿಷ ಗ್ರಂಥಗಳ ಅಧ್ಯಯನದಿಂದ, ಸರಿಸರಿಯಾಗಿ ಭೂಗೋಳ-ಖಗೋಳ ವಿದ್ಯೆಗಳು ಗೊತ್ತಿರುವುದು ನಿಮ್ಮ ಮಹಾಭಾಗ್ಯವೇ ಸರಿ! ಎಲ್ಲಿ ಯಾದರೂ ಜೈನರ ಮಹಾಮೊಬ್ಬಿನ [ಮತದ]ಲ್ಲಿ ಬಿದ್ದಿದ್ದರೆ, ಇಂದು ಜೈನರು ಬಿದ್ದಿರುವಂತೆಯೇ, ಜೀವನಪೂರ್ತ ಮೊಬ್ಬಿನಲ್ಲೇ ಇರುತ್ತಿದ್ದಿರಿ!

ಈ ಅವಿದ್ವಾಂಸರಿಗೆ—

"ಜಂಬೂದ್ವೀಪದಲ್ಲಿ ಒಬ್ಬ ಸೂರ್ಯ, ಒಬ್ಬ ಚಂದ್ರನಿಂದ ಕೆಲಸ ಸಾಗದು! ಏಕೆಂದರೆ, ಇಷ್ಟು ದೊಡ್ಡ ಪೃಥಿವಿಗಳನ್ನು ಚಂದ್ರ-ಸೂರ್ಯರು 30 ಘಟಿಕೆಗಳಲ್ಲಿ ಹೇಗೆ [ಸುತ್ತಿ]ಬರುವರು? ಎಂಬ ಸಂಶಯ ಬಂದಿತು! ಏಕೆಂದರೆ, ಈ ಜನರು **ಪೃಥಿವಿಯನ್ನು ಸೂರ್ಯ ಮೊದಲಾದುದಕ್ಕಿಂತ ದೊಡ್ಡದೆಂದು ತಿಳಿಯುತ್ತಾರೆ! ಇದೇ ಅವರ ದೊಡ್ಡ ತಪ್ಪು ಆಗಿದೆ!**

## (132 ಸೂರ್ಯ, 132 ಚಂದ್ರ, ಎಂದು ಹೇಳುವುದು ಮೂರ್ಖತನ)

[36] **ದೋ ಸಸಿ ದೋ ರವಿ ಪಂತೀ ಏಗಂತರಿಯಾ ಛಸಠಿ ಸಂಖಾಯಾ ।**
**ಮೇರುಂ ಪಯಾಹಿಣಂತಾ ಮಾಣುಸಖಿತ್ತೇ ಪರಿಅಡಂತಿ ।**

[ಪ್ರಕರಣರತ್ನಾಕರ-ಭಾಗ-4; ಸಂಗ್ರಹ ಸೂತ್ರ-79]

[ಸಂಕ್ಷೇಪವಾಗಿ ಅರ್ಥ:—] ಮಾನವಲೋಕದಲ್ಲಿ ಚಂದ್ರರ ಮತ್ತು ಸೂರ್ಯರ ಪಂಕ್ತಿಯ ಸಂಖ್ಯೆಯನ್ನು ಹೇಳುತ್ತೇವೆ.

**ಎರಡು ಚಂದ್ರರ ಮತ್ತು ಎರಡು ಸೂರ್ಯರ ಪಂಕ್ತಿ (=ಶ್ರೇಣಿ)ಗಳಿವೆ. ಅವರು ಒಂದು-ಒಂದು ಲಕ್ಷ ಯೋಜನಗಳ, ಎಂದರೆ, ನಾಲ್ಕು ಲಕ್ಷ ಕೋಶ*ಗಳ ಅಂತರದಿಂದ ಸಂಚರಿಸುತ್ತಾರೆ,** ಹೇಗೆ ಸೂರ್ಯ-ಪಂಕ್ತಿಯ ಅಂತರದಿಂದ, ಒಂದು ಚಂದ್ರ-ಪಂಕ್ತಿಯಿದೆಯೋ, ಹಾಗೆಯೇ ಚಂದ್ರ-ಪಂಕ್ತಿಯ ಅಂತರದಿಂದ ಸೂರ್ಯ-ಪಂಕ್ತಿಯಿದೆ. ಈ ರೀತಿಯಿಂದ ನಾಲ್ಕು ಪಂಕ್ತಿಗಳಿವೆ. ಅವರು, ಒಂದೊಂದು ಚಂದ್ರ ಪಂಕ್ತಿಯಲ್ಲಿ 66 ಚಂದ್ರರೂ, ಮತ್ತು ಒಂದೊಂದು ಸೂರ್ಯ-ಪಂಕ್ತಿಯಲ್ಲಿ 66 ಸೂರ್ಯರೂ ಇದ್ದಾರೆ.

---

*ಕೋಶ, ಎಂದರೆ ಸುಮಾರು ಎರಡು ಮೈಲಿ.—ಅನು.

ಆ ನಾಲ್ಕು ಪಂಕ್ತಿಗಳೂ 'ಜಂಬೂದ್ವೀಪ'ದ ಮೇರು ಪರ್ವತದ ಪ್ರದಕ್ಷಿಣೆಯನ್ನು ಮಾಡುತ್ತಾ, ಮಾನವಕ್ಷೇತ್ರದಲ್ಲಿ ಪರಿಭ್ರಮಣ ಮಾಡುತ್ತಿವೆ. ಎಂದರೆ, ಯಾವಾಗ 'ಜಂಬೂದ್ವೀಪ'ದ ಮೇರುವಿನಿಂದ ಒಬ್ಬ ಸೂರ್ಯನು ದಕ್ಷಿಣ ದಿಕ್ಕಿನಲ್ಲಿ ವಿಹರಿಸುತ್ತಾನೋ, ಆಗ ಎರಡನೆಯ ಸೂರ್ಯನು ಉತ್ತರ ದಿಕ್ಕಿನಲ್ಲಿ ತಿರುಗುತ್ತಾನೆ.

ಹಾಗೆಯೇ, 'ಲವಣಸಮುದ್ರ'ದ ಒಂದೊಂದು ದಿಕ್ಕಿನಲ್ಲಿ ಇಬ್ಬರು-ಇಬ್ಬರು ಚಲಿಸುತ್ತಾರೆ, ತಿರುಗುತ್ತಾರೆ. **'ಧಾತಕೀಖಂಡ'**ದಲ್ಲಿ 6, **'ಕಾಲೋದಧಿ'**ಯಲ್ಲಿ 21, **'ಪುಷ್ಕರಾರ್ಧ'**ದಲ್ಲಿ 36; ಈ ರೀತಿ, **ಎಲ್ಲರೂ ಸೇರಿ 66 ಸೂರ್ಯರು ದಕ್ಷಿಣ ದಿಕ್ಕಿನಲ್ಲಿಯೂ ಮತ್ತು 66 ಸೂರ್ಯರು ಉತ್ತರ ದಿಕ್ಕಿನಲ್ಲಿಯೂ ತಮ್ಮ ತಮ್ಮ ಕ್ರಮದಿಂದ ತಿರುಗುತ್ತಾರೆ.**

ಮತ್ತು ಈ ಎರಡೂ ದಿಕ್ಕುಗಳ ಸಮಸ್ತ ಸೂರ್ಯರೂ ಸೇರಿಸಲ್ಪಟ್ಟರೆ, 132 ಸೂರ್ಯರೂ, ಮತ್ತು ಹೀಗೆಯೇ ಅರವತ್ತಾರು-ಅರವತ್ತಾರು ಚಂದ್ರರ ಎರಡೂ ದಿಕ್ಕುಗಳ ಪಂಕ್ತಿಗಳೂ ಸೇರಿಸಲ್ಪಟ್ಟರೆ. **132 ಚಂದ್ರರೂ ಮನುಷ್ಯಲೋಕದಲ್ಲಿ ಸಂಚಾರ ಮಾಡುತ್ತಾರೆ.** ಇದೇ ರೀತಿ, ಚಂದ್ರನೊಂದಿಗೆ ನಕ್ಷತ್ರ ಮೊದಲಾದುವುಗಳ ಪಂಕ್ತಿಗಳೂ ಬಹಳವಿವೆ, ಎಂದು ತಿಳಿದುಕೊಳ್ಳಬೇಕು!

**ಸಮೀಕ್ಷಕ:**—ಈಗ ನೋಡಿರಿ, ಸೋದರರೇ! ಈ ಭೂಗೋಳದಲ್ಲಿ 132 ಸೂರ್ಯರೂ, ಮತ್ತು 132 ಚಂದ್ರರೂ ಜೈನರ ಮನೆಗಳ ಮೇಲೆ ಉರಿಯುತ್ತಿರಬೇಕು! ಅಲ್ಲಾ! ಹಾಗೆ ಉರಿಯುತ್ತಿರಬಹುದಾದರೆ, ಅವರು ಹೇಗೆ ಜೀವಿಸುತ್ತಾರೆ? ಮತ್ತು ರಾತ್ರಿಯಲ್ಲಿಯೂ ಕೂಡ, ಶೀತದ ಪ್ರಹಾರದಿಂದ, ಜೈನರು ಸೆಡೆತುಕೊಳ್ಳುತ್ತಿರಬಹುದೇನೋ?

ಇಂತಹ ಅಸಂಭವವಾದ ಮಾತಿನಲ್ಲಿ ಭೂಗೋಳ–ಖಗೋಳಗಳನ್ನು ತಿಳಿಯದವರು ಸಿಕ್ಕಿಕೊಳ್ಳುತ್ತಾರೆ ; ಬೇರೆಯವರಲ್ಲ! ಯಾವಾಗ ಒಬ್ಬ ಸೂರ್ಯನು ಈ ಭೂಗೋಳದಂತಹ ಬೇರೆ ಅನೇಕ ಭೂಗೋಳಗಳನ್ನು ಬೆಳಗಿಸುತ್ತಾನೋ, ಆಗ ಈ ಚಿಕ್ಕ ಭೂಗೋಳದ ಕಥೆಯನ್ನೇನು ಹೇಳುವುದು ?

ಮತ್ತು ಭೂಮಿಗುು ತಿರುಗದೇ, ಸೂರ್ಯನು ಭೂಮಿಯ ಸುತ್ತಲೂ ಸುತ್ತುವನಾದರೆ, ಅನೇಕ ವರ್ಷಗಳದೊಂದು ದಿನ, ಮತ್ತು ರಾತ್ರಿ ಆದೀತು !

ಮತ್ತು ಸುಮೇರುವು ಹಿಮಾಲಯದ ಹೊರತು, ಬೇರೆ ಯಾವುದೂ ಅಲ್ಲ! ಇದು* ಸೂರ್ಯನ ಮುಂದೆ, ಹೇಗಿದೆಯೆಂದರೆ, ಗಡಿಗೆಯ ಮುಂದೆ ಸಾಸಿವೆಯ

---

* ಈ ಪೃಥಿವೀ—ಅನು.

ಕಾಳಿನಷ್ಟು ಕೂಡ, ಇಲ್ಲ! ಜೈನರು ಎಂದಿನವರೆಗೆ ಆ ಮತದಲ್ಲಿಯೇ ಇರುವರೋ, ಅಂದಿನವರೆಗೆ ಈ ಮಾತುಗಳನ್ನು ತಿಳಿಯಲಾರರು! ಆದರೆ, ಸದಾ ಪೊಳ್ಳಿನಲ್ಲಿಯೇ ಇರುವರು!

## (14 ರಾಜ್ಯಲೋಕಗಳಲ್ಲಿ ಕೇವಲಿಯ ಸಂಚಾರ)

[37] ಸಮತ್ತಚರಣ ಸಹಿಯಾ ಸವ್ವಂ ಲೋಗಂ ಫುಸೇ ನಿರವಸೇಸಂ ।
ಸತ್ತಯು ಚಉದಸಭಾಏ ಪಂಚಯು ಸುಯದೇಸವಿರಈಏ ॥

[ಪ್ರಕರಣರತ್ನಾಕರಃ-ಭಾಗ-4. ಸಂಗ್ರಹಣೀ ಸೂತ್ರ.185]

**[ಸಂಕ್ಷೇಪವಾಗಿ ಅರ್ಥ:—]** ಸಮ್ಯಕ್ ಚಾರಿತ್ರಸಹಿತರಾಗಿ ಯಾರು ಕೇವಲಿಗಳಾಗುತ್ತಾರೋ, ಅವರು ಕೇವಲ ಮೇಲಕ್ಕೇರಬಲ್ಲ ಆತ್ಮಸ್ಥಿತಿಯಿಂದ, ಸಮಸ್ತ 14 ರಾಜ್ಯಲೋಕವನ್ನೂ ತಮ್ಮ ಆತ್ಮ-ಪ್ರದೇಶವಾಗಿ ಮಾಡಿಕೊಂಡು, ಸಂಚರಿಸುವರು.

## (ಕೇವಲೀ ತೀರ್ಥಂಕರರು ಸರ್ವಜ್ಞ, ಸರ್ವವ್ಯಾಪಕರಾಗಲಾರರು)

**ಸಮೀಕ್ಷಕ:**—ಜೈನರು 14 (ಹದಿನಾಲ್ಕು) ರಾಜ್ಯಗಳನ್ನು ಅಂಗೀಕರಿಸುತ್ತಾರೆ.

'ಅವುಗಳಲ್ಲಿ ಹದಿನಾಲ್ಕನೆಯುಪರ ಶಿಖರದಲ್ಲಿ, **ಸರ್ವಾರ್ಥಸಿದ್ಧಿ ವಿಮಾನದ** ಧ್ವಜದಿಂದ ಮೇಲಕ್ಕೆ, ಸ್ವಲ್ಪ ದೂರದಲ್ಲಿರುವ ಸಿದ್ಧಶಿಲೆ, ಹಾಗೂ ದಿವ್ಯ ಆಕಾಶವನ್ನು **'ಶಿವಪುರ'**, ಎನ್ನುತ್ತಾರೆ. ಅದರಲ್ಲಿ **'ಕೇವಲೀ'**ಗಳು, ಎಂದರೆ, ಯಾರಿಗೆ ಕೇವಲ ಜ್ಞಾನ, ಸರ್ವಜ್ಞತ್ವ ಮತ್ತು ಪೂರ್ಣ ಪವಿತ್ರತೆ ಪ್ರಾಪ್ತವಾಗಿದೆಯೋ, ಅವರು ಆ ಲೋಕಕ್ಕೆ ಹೋಗುತ್ತಾರೆ. ಮತ್ತು ತಮ್ಮ ಆತ್ಮಪ್ರದೇಶದಿಂದ ಸರ್ವಜ್ಞರಾಗಿರುತ್ತಾರೆ'.

ಯಾವನಿಗೆ **'ಪ್ರದೇಶ'**ವಿರುತ್ತದೋ **ಅವನು 'ವಿಭು'**ವಾಗಿರುವುದಿಲ್ಲ. ವಿಭುವಲ್ಲದವನು* ಸರ್ವಜ್ಞನೂ, ಕೇವಲ ಜ್ಞಾನಿಯೂ ಎಂದಿಗೂ ಆಗಲಾರನು. ಏಕೆಂದರೆ, ಯಾವನ ಆತ್ಮನು ಏಕದೇಶೀಯನಾಗಿರುತ್ತಾನೋ, ಅವನು ಹೋಗುತ್ತಾನೆ–ಬರುತ್ತಾನೆ; ಹಾಗೂ ಬದ್ಧನೂ, ಮುಕ್ತನೂ, ಜ್ಞಾನಿಯೂ, ಅಜ್ಞಾನಿಯೂ ಆಗುತ್ತಾನೆ. ಸರ್ವವ್ಯಾಪಕನೂ, ಸರ್ವಜ್ಞನೂ ಆಗುವಂತೆ ಎಂದಿಗೂ ಆಗಲಾರನು!

ಜೈನರ ಯಾವ **ತೀರ್ಥಂಕರರು** ಜೀವರೂಪರೂ, ಅಲ್ಪರೂ, ಅಲ್ಪಜ್ಞರೂ ಆಗಿದ್ದು ಸ್ಥಿತರಾಗಿದ್ದರೋ, ಅವರು ಸರ್ವವ್ಯಾಪಕರೂ, ಸರ್ವಜ್ಞರೂ ಎಂದಿಗೂ ಆಗಲಾರರು!

---

*ವ್ಯಾಪಕನಲ್ಲದವನು—ಅನು.

ಆದರೆ, ಯಾವ ಪರಮಾತ್ಮನು ಅನಾದಿ-ಅನಂತನೂ, ಸರ್ವವ್ಯಾಪಕನೂ, ಸರ್ವಜ್ಞನೂ, ಪವಿತ್ರನೂ, ಜ್ಞಾನಸ್ವರೂಪನೂ ಆಗಿದ್ದಾನೋ, ಮತ್ತು ಯಾವನಿಗೆ ಸರ್ವಜ್ಞತ್ವ ಮೊದಲಾದ ಗುಣಗಳು ಯಾಥಾತಥ್ಯವಾಗಿಯೂ ಅನ್ವಯಿಸುತ್ತವೋ, ಅವನನ್ನು ಜೈನರು ಅಂಗೀಕರಿಸುವುದಿಲ್ಲ!

## (ಜೈನರ ಅಸಂಭವ ಆಯುಸ್ಸು ಅಥವಾ ಶರೀರ ಪರಿಮಾಣ)

[38] **ಗಬ್ಭನರ ತಿಪಲಿಯಾಊ । ತಿಗಾಉ ಉಕ್ಕೋಸ ತೇ ಜಹನ್ನೇಣಂ ।**
**ಮುಚ್ಛಿಮ ದುಹಾವಿ ಅಂತಮುಹು । ಅಂಗುಲ ಅಸಂಖ ಭಾಗತಣೂ ॥241॥**

[ಪ್ರಕರಣರತ್ನಾಕರ:-ಭಾಗ-4. ಸಂಗ್ರಹಣೀ ಸೂತ್ರ 241]

**[ಸಂಕ್ಷೇಪವಾಗಿ ಅರ್ಥ :—]** ಇಲ್ಲಿ ಎರಡು ಬಗೆಯ ಮಾನವರಿದ್ದಾರೆ— ಮೊದಲಾಗಿ **ಗರ್ಭಜರು;** ಎರಡನೆಯದಾಗಿ, **ಗರ್ಭವಿಲ್ಲದೇ ಉತ್ಪನ್ನರಾದವರು,** ಎಂದು. ಅವರಲ್ಲಿ, ಗರ್ಭಜರಾದ ಮಾನವರ ಉತ್ಕೃಷ್ಟವಾದ ಆಯುಸ್ಸು ಮೂರು **ಪಲ್ಯೋಪಮದಷ್ಟು*** ಎಂದೂ, ಮತ್ತು ಶರೀರ ಮೂರು ಕೋಶಗಳಷ್ಟು,† ಎಂದೂ ತಿಳಿದುಕೊಳ್ಳಬೇಕು.

**ಸಮೀಕ್ಷಕ :—**ಭಾಪು! ಮೂರು ಪಲ್ಯೋಪಮದ ಆಯುಸ್ಸು ಮತ್ತು ಮೂರು ಕೋಶದ ಶರೀರವನ್ನುಳ್ಳ ಮಾನವರು ಈ ಭೂಗೋಳದಲ್ಲಿ ಬಹಳ ಕಡಿಮೆ ಹಿಡಿಸಬಲ್ಲರು! ಮತ್ತು, ನಾವು ಮೊದಲು ಹೇಗೆ ಬರೆದಿದ್ದೇವೋ, ಹಾಗೆ ಮೂರು ಪಲ್ಯೋಪಮದಷ್ಟು ಸಮಯ ಜೀವಿಸುವರಾದರೆ, ಹಾಗೆಯೇ ಅವರ ಸಂತತಿಯವರೂ ಕೂಡ ಮೂರು ಕೋಶದ ಶರೀರಗಳನ್ನುಳ್ಳವರಾಗಬೇಕು! [ಇಂತಹವರು] **ಬೊಂಬಾಯಿ**ಯಂತಹ ನಗರದಲ್ಲಿ ಇಬ್ಬರು, ಮತ್ತು **ಕಲಕತ್ತೆ**ಯಂತಹ ನಗರದಲ್ಲಿ ಮೂವರು ಅಥವಾ ನಾಲ್ವರು ಮನುಷ್ಯರು ನಿವಾಸ ಮಾಡಬಲ್ಲರು!

ಸ್ಥಿತಿ ಹೀಗಿರುವುದಾದರೆ, ಜೈನರು ನಗರ ಒಂದರಲ್ಲಿ ಲಕ್ಷಾಂತರ ಜನರಿದ್ದರೆಂದು ಬರೆದಿದ್ದಾರೆ! ಹಾಗಾದರೆ, ಅವರು ನೆಲೆಸುವ ನಗರಗಳೂ ಕೂಡ, ಲಕ್ಷಾಂತರ ಕೋಶ ಗಳದೇ ಆಗಿರಬೇಕು. ಆ ಸ್ಥಿತಿಯಲ್ಲಿ, ಸಮಸ್ತ ಭೂಮಂಡಲದಲ್ಲಿ ಅಂತಹ ಒಂದು ನಗರವೂ ಕೂಡ, ನೆಲೆಗೊಳ್ಳಲಾರದು !

---

*ಪಲ್ಯೋಪಮ ಕಾಲದ ಗಣನೆ ಹಿಂದಿನ ಪುಟ 927ರಲ್ಲಿ ಕೊಟ್ಟಿದೆ.—ಸಂ.

†ಆರು ಮೈಲಿ—ಅನು.

## (ಜೈನ 'ಸಿದ್ಧಶಿಲೆ'ಯ ಅಸಂಭವ ವರ್ಣನೆ)

[39] ಪಣಯಾಲ ಲಕ್ಖಜೋಯಣ। ವಿಕ್ಖಂಭಾ ಸಿದ್ಧಿಸಿಲ ಫಲಿಹ ವಿಮಲಾ।
ತದುವರಿ ಗಜೋಯಣಂತೇ ಲೋಗಂತೋ ತಚ್ಛ ಸಿದ್ಧಠಿಈ ॥258॥

[ಪ್ರಕರಣರತ್ನಾಕರ:-ಭಾಗ-4. ಸಂಗ್ರಹಣೀ ಸೂತ್ರ. 258]

[**ಸಂಕ್ಷೇಪವಾಗಿ ಅರ್ಥ:**—] ಸರ್ವಾರ್ಥಸಿದ್ಧಿ ವಿಮಾನದ ಧ್ವಜದ ಮೇಲೆ ಯಾವ 12 ಯೋಜನದ ಸಿದ್ಧಶಿಲೆ ಇದೆಯೋ, ಅದು ಪೊಳ್ಳಾಗಿದೆ. ಮತ್ತು ಉದ್ದ, ಹಾಗೂ ಪೊಳ್ಳಿನಲ್ಲಿ 45 ಲಕ್ಷ ಯೋಜನ ಪ್ರಮಾಣವುಳ್ಳದ್ದಾಗಿದೆ. ಅದೆಲ್ಲಾ ಬಿಳಿಯದಾಗಿ, ಸ್ವಚ್ಛವಾಗಿ, ಸುವರ್ಣಮಯ ಸ್ಫಟಿಕಕ್ಕೆ ಸಮಾನವಾಗಿ, ನಿರ್ಮಲವಾದ ಸಿದ್ಧಶಿಲೆಯು ಸಿದ್ಧಭೂಮಿಯಿದೆ. ಇದಕ್ಕೆ ಕೆಲವರು '**ಈಶತ್ ಪ್ರಾಗ್ಭರಾ**', ಎಂಬ ಹೆಸರನ್ನು ಹೇಳುತ್ತಾರೆ.

ಈ ಸರ್ವಾರ್ಥ ಸಿದ್ಧಶಿಲೆ ವಿಮಾನದಿಂದ 12 ಯೋಜನ ಅಲೋಕವೂ ಇದೆ. ಈ ಪರಮಾರ್ಥವನ್ನು ಕೇವಲೀ [ಬಹು] ಶ್ರುತನು ತಿಳಿದುಕೊಳ್ಳುತ್ತಾನೆ.

ಈ ಸರ್ವಾರ್ಥ ಸಿದ್ಧಶಿಲೆಯು ಮಧ್ಯಭಾಗದಲ್ಲಿ ಎಂಟು ಯೋಜನ ಸ್ಥೂಲವಾಗಿದೆ. ಅಲ್ಲಿಂದ ನಾಲ್ಕು ದಿಕ್ಕುಗಳಲ್ಲಿಯೂ, ನಾಲ್ಕು ಉಪದಿಕ್ಕುಗಳಲ್ಲಿಯೂ ಕುಗ್ಗುತ್ತಾ-ಕುಗ್ಗುತ್ತಾ, ನೊಣದ ರೆಕ್ಕೆಗೆ ಸಮನಾಗಿ ತೆಳ್ಳಗಾಗುತ್ತಾ, ಬಿಚ್ಚಿದ ಕೊಡೆಯ ಆಕಾರವನ್ನುಳ್ಳದ್ದಾಗಿ, ಈ ಸಿದ್ಧಶಿಲೆಯು ಸ್ಥಾಪನೆಯಾಗಿದೆ. ಆ ಶಿಲೆಯ ಮೇಲುಗಡೆ ಒಂದು ಯೋಜನದ ಅಂತರದಲ್ಲಿ ಲೋಕಾಂತವಿದೆ. ಅಲ್ಲಿ ಸಿದ್ಧರ ನೆಲೆಯಿದೆ.

## (ಸಿದ್ಧಶಿಲೆಯಲ್ಲಿರುವ ಜೀವರು ಬದ್ಧರಂತೆಯೇ!)

**ಸಮೀಕ್ಷಕ:**—ಈಗ ಪರ್ಯಾಲೋಚಿಸಬೇಕೇನೆಂದರೆ, ಜೈನರ ಮುಕ್ತಿಯ ಸ್ಥಾನವು ಸರ್ವಾರ್ಥಸಿದ್ಧಿ ವಿಮಾನದ ಧ್ವಜದ ಮೇಲುಗಡೆ 45 ಲಕ್ಷ ಯೋಜನದ ಶಿಲೆಯಾಗಿದೆ. ಎಂದರೆ, [ಅದು] ಬೇಕಾದಷ್ಟು ಒಳ್ಳೆಯದೂ ಮತ್ತು ನಿರ್ಮಲವೂ ಆಗಿರಲೀ; ಹಾಗಿದ್ದರೂ ಕೂಡ, ಅದರಲ್ಲಿರುವ ಮುಕ್ತಜೀವರು ಒಂದು ರೀತಿಯಿಂದ ಬದ್ಧರೇ ಆಗಿರುತ್ತಾರೆ! ಏಕೆಂದರೆ, ಆ ಶಿಲೆಯಿಂದ ಹೊರಕ್ಕೆ ಬಂದಲ್ಲಿ, ಮುಕ್ತಿಯ ಸುಖದಿಂದ ಹೊರಗಾಗುತ್ತಿರಬಹುದು! ಮತ್ತು, [ಯಾರು ಇರುವವರೋ], ಅವರಿಗೆ ವಾಯುವೂ ಕೂಡ ತಗಲದಿರಬಹುದು! ಇದು ಕೇವಲ ಕಲ್ಪನೆ ಮಾತ್ರವಾಗಿ. ಅವಿದ್ವಾಂಸರನ್ನು ಸಿಕ್ಕಿಸಿಕೊಳ್ಳಲು ಭ್ರಮಜಾಲವಾಗಿದೆ!

## (ಕೀಟ-ಭ್ರಮರಗಳ ಶರೀರಗಳ ಅಸಂಭವ ಪರಿಮಾಣ)

[40] [ಜೋಯಣ ಸಹಸ್ಸ ಮಹಿಯಂ । ಏಗಿಂದಿಯದೇಹ ಮುಕ್ಕೋಸಂ ॥]
ಬಿತಿ ಚಉರಿಂದಿಸ ಸರೀಯಂ। ಬಾರಸ ಜೋಯಣಂ ತಿಕೋಸ ಚಉಕೋಸಂ।
ಜೋಯಣ ಸಹಸಪಣಿಂ ದಿಯ । ಉಹೇ ವುಚ್ಛಂತ ವಿಸೇಸಂತು ॥

[ಪ್ರಕರಣರತ್ನಾಕರ:-ಭಾಗ 4; ಸಂಗ್ರಹಣೀ ಸೂತ್ರ-[266]-267]

[ಸಂಕ್ಷೇಪವಾಗಿ ಅರ್ಥ:—] ಸಾಮಾನ್ಯತಃ ಏಕೇಂದ್ರಿಯದ ಶರೀರವು, ಉತ್ಕೃಷ್ಟವಾದ ಶರೀರವನ್ನುಳ್ಳದಾದರೆ, ಒಂದು ಸಾವಿರ ಯೋಜನದ್ದಿರುವುದೆಂದು ತಿಳಿಯಬೇಕು. ಶಂಖವೇ ಮೊದಲಾದ ಎರಡು ಇಂದ್ರಿಯಗಳನ್ನುಳ್ಳವರ ಶರೀರವು 12 ಯೋಜನದಷ್ಟೆಂದು ತಿಳಿಯಬೇಕು. ಹಾಗೆಯೇ ಕೀಟ, ಇರುವೆ ಮೊದಲಾದ [ಮೂರು ಇಂದ್ರಿಯವುಳ್ಳ]ವರ ಶರೀರವನ್ನು ಮೂರು ಕೋಶದಷ್ಟು, ಎಂದು ತಿಳಿಯಬೇಕು. ಮತ್ತು ಚತುರಿಂದ್ರಿಯ ಭ್ರಮರ ಮೊದಲಾದ ಜೀವರ ಶರೀರ ನಾಲ್ಕು ಕೋಶದಷ್ಟು, ಮತ್ತು ಪಂಚೇಂದ್ರಿಯ [ಯುಕ್ತರದು] ಒಂದು ಸಾವಿರ ಯೋಜನಗಳಷ್ಟು, ಎಂದರೆ ನಾಲ್ಕು ಸಾವಿರ ಕೋಶದ* ಶರೀರವು ಅವರದೆಂದು ತಿಳಿಯಬೇಕು!

**ಸಮೀಕ್ಷಕ:**—ನಾಲ್ಕು-ನಾಲ್ಕು ಸಾವಿರ ಕೋಶದ ಪರಿಮಾಣವನ್ನುಳ್ಳ ಶರೀರಧಾರಿಗಳು ಇರುವುದಾದರೆ, ಭೂಗೋಳದಲ್ಲಿ ಅತಿ ಸ್ವಲ್ಪ ಜನ ಮಾನವ ರಿರಲಾದೀತು ! ಎಂದರೆ, [ಇಂತಹ] ನೂರಾರು ಮಾನವರಿಂದಲೇ ಭೂಗೋಳ ಅದುಮಿ, ಅದುಮಿ ತುಂಬಿ ಹೋದೀತು ! ಯಾರಿಗೂ ಓಡಾಡಲೂ ಕೂಡ, ಸ್ಥಳವಿರದಾದೀತು!

ಮತ್ತೆ, ಅವರು ಜೈನರನ್ನೇ ಇರುವುದಕ್ಕಾಗಿ ನೆಲೆ ಮತ್ತು ದಾರಿಯನ್ನು ಕೇಳ ಬೇಕಾದೀತು! ಆಗ ಇವರು,† ಹೀಗೆ ಬರೆದಿರುವ ಕಾರಣದಿಂದ, [ಇವರನ್ನು]‡ ತಮ್ಮ ಮನೆಯಲ್ಲಿಟ್ಟುಕೊಳ್ಳಲಿ!

## (ಇಂತಹ ಜನರಿಗೆ ಮನೆ ಹೇಗೆ ಕಟ್ಟಿಸಬೇಕು ?)

ಆದರೆ, ನಾಲ್ಕು ಸಾವಿರ ಕೋಶದ ಶರೀರವನ್ನುಳ್ಳವನಿಗೆ, ಕೇವಲ ಒಬ್ಬನ ನಿವಾಸಕ್ಕೇ 32 ಸಾವಿರ ಕೋಶದ ಮನೆಯಾದರೂ ಬೇಕಾದೀತು ! ಇಂತಹ ಒಂದು ಮನೆಯನ್ನು ಕಟ್ಟಿಸುವುದರಲ್ಲಿ, ಜೈನರ ಹಣವೆಲ್ಲವೂ ಮುಗಿದು ಹೋದರೂ

---

*8,000 ಮೈಲಿ.—ಅನು.

†ಜೈನರು.—ಸಂ.

‡ಅಂತಹ ಬೃಹಚ್ಛರೀರಿಗಳನ್ನು.—ಅನು.

ಕೂಡ, ಮನೆ ನಿರ್ಮಿತವಾಗಲಾರದು! ಇಷ್ಟು ದೊಡ್ಡ ಎಂಟು ಸಾವಿರ ಕೋಶದ ಚಾವಣಿಯನ್ನು ನಿರ್ಮಿಸಲು ದಿಮ್ಮಿಗಳನ್ನು ಎಲ್ಲಿಂದ ತರುವರು ? ಮತ್ತು ಅವರಲ್ಲಿ ಕಂಬಗಳನ್ನು ನಿಲ್ಲಿಸುವವರಾದರೆ, ಅವನು ಒಳಗೆ ಪ್ರವೇಶವನ್ನೂ ಕೂಡ, ಮಾಡಲಾರನು. ಆದುದರಿಂದ. ಇಂತಹ ಮಾತುಗಳು ಸುಳ್ಳೇ ಆಗಿರುತ್ತವೆ!

## (ಅಸಂಭವ ಕಾಲ–ಪರಿಮಾಣ)

[41] **ತೇ ಥೂಲಾ ಪಲ್ಲೇ ವಿಹು ಸಂಖಿಜ್ಜಾ ಚೇ ವಹುಂತಿ ಸವ್ವೇವಿ ।**
**ತೇ ಇಕ್ಕಿಕ್ಕ ಅಸಂಖೇ । ಸುಹುಮೋ ಖಮ್ಮೋ ಪಕಪ್ಪೇಹ ॥**

[ಪ್ರಕರಣರತ್ನಾಕರ:–ಭಾಗ–4; ಲಘುಕ್ಷೇತ್ರಸಮಾಸ ಪ್ರಕರಣ; ಸೂತ್ರ–4.]

[ಸಂಕ್ಷೇಪವಾಗಿ ಅರ್ಥ:—] ಮೊದಲು ಹೇಳಿರುವಂತೆ, ಒಂದು ಅಂಗುಲ ರೋಮದ ಖಂಡಗಳಿಂದ. ನಾಲ್ಕು ಕೋಶ ಚವರವೂ, ಅಷ್ಟೇ ಆಳವೂ ಆದ ಭಾವಿಯನ್ನು ತುಂಬಿಸಬೇಕು. ಅಂಗುಲ ಪ್ರಮಾಣದ ರೋಮದ ಖಂಡಗಳೆಲ್ಲವೂ ಸೇರಿ [20,57,152] ಇಪ್ಪತ್ತು ಲಕ್ಷ, ಐವತ್ತೇಳು ಸಾವಿರದ ನೂರ ಐವತ್ತೆರಡು ಆಗುತ್ತವೆ.

ಮತ್ತು ಅತ್ಯಂತ ಅಧಿಕವಾದರೆ,—

33,07,62,104; ಮೂವತ್ತಮೂರು ಕೋಟ್ಯನುಕೋಟಿ ; ಏಳು ಲಕ್ಷ ಅರವತ್ತೆರಡು ಸಾವಿರದ ಒಂದು ನೂರ ನಾಲ್ಕು ಕೋಟ್ಯನುಕೋಟಿ;

24,65,625; ಇಪ್ಪತ್ತನಾಲ್ಕು ಲಕ್ಷ ಅರವತ್ತೈದು ಸಾವಿರದ ಆರು ನೂರ ಇಪ್ಪತ್ತೈದು ಕೋಟ್ಯನುಕೋಟಿ; ಹಾಗೂ—

42,19,960; ನಲವತ್ತೆರಡು ಲಕ್ಷ, ಹತ್ತೊಂಬತ್ತು ಸಾವಿರದ, ಒಂಬೈನೂರ ಅರವತ್ತು ಕೋಟ್ಯನುಕೋಟಿ; ಹಾಗೂ—

'97,53,600',00,00,000; ತೊಂಬತ್ತೇಳು ಲಕ್ಷ, ಐವತ್ತಮೂರು ಸಾವಿರ ಮತ್ತು ಆರು ನೂರು ಕೋಟ್ಯನುಕೋಟಿ—

ಇಷ್ಟು ವಿಸ್ತಾರದ ಪ್ರೊಳ್ಳಿನ ಘನ ಯೋಜನ ಪಲ್ಯೋಪಮದಲ್ಲಿ ಸಮಸ್ತ ಸ್ಥೂಲ ರೋಮ-ಖಂಡಗಳ ಸಂಖ್ಯೆಯಾಗುವುದು. ಇದೂ ಕೂಡ, 'ಸಂಖ್ಯಾತ ಕಾಲ'ವಾಗಿರುತ್ತದೆ. ಪೂರ್ವೋಕ್ತವಾದ ಒಂದು ಲೋಮ ಖಂಡದ ಅಸಂಖ್ಯಾತ ಖಂಡಗಳನ್ನು ಮನಸ್ಸಿನಲ್ಲಿ ಊಹಿಸಿಕೊಳ್ಳುವಿರಾದರೆ, ಅಸಂಖ್ಯಾತ ಸೂಕ್ಷ್ಮ ರೋಮಾಣುಗಳಾಗುವುವು!

## (ಜೈನರ ಗಣನೆಯು ವಿಚಿತ್ರ ರೀತಿ)

**ಸಮೀಕ್ಷಕ:**--ಈಗ ನೋಡಿರಿ ಇವರ ಗಣನೆಯು ರೀತಿಯನ್ನು ! ಒಂದು ಅಂಗುಲ ಪ್ರಮಾಣದ ರೋಮದ ಎಷ್ಟು ಖಂಡಗಳನ್ನು ಮಾಡಿದರು! ಇವು ಎಂದಿಗಾದರೂ ಯಾರ ಗಣನೆಗಾದರೂ ಬರಬಲ್ಲವೋ ? ಮತ್ತು ಅದಾದ ನಂತರ, ಮನಸ್ಸಿನಿಂದ ಅಸಂಖ್ಯ ಖಂಡಗಳನ್ನು ಕಲ್ಪಿಸಿಕೊಳ್ಳುತ್ತಾರೆ !

ಇದರಿಂದ ಪೂರ್ವೋಕ್ತ ಖಂಡಗಳನ್ನು ಕೈಯಿನಿಂದ ಮಾಡಿರಬಹುದೆಂದೂ ಸಿದ್ಧವಾಗುತ್ತದೆ. ಯಾವಾಗ ಕೈಯಿಂದ ಸಾಧ್ಯವಾಗಲಿಲ್ಲವೋ, ಆಗ ಮನಸ್ಸಿನಿಂದ ಮಾಡಿದರು !

**ಅಲ್ಲಾ ! ಒಂದು ಅಂಗುಲ ರೋಮದ ಅಸಂಖ್ಯ ಖಂಡಗಳಾಗಬಲ್ಲವೆಂಬುದು ಎಂದಿಗಾದರೂ ಸಂಭವವೇ ?**

## (ಜಂಬೂದ್ವೀಪ ಮೊದಲಾದುದರ ಅಸಂಭವ ವರ್ಣನೆ)

[42] **ಜಂಬೂದ್ವೀಪಪಮಾಣಂ ಗುಲಜೋಯಣಲರಕ ವಟ್ಟವಿರಕಂಭೀ ।**
**ಲವಣಾಈ ಯಾಸೇಸಾ । ಬಲಯಾಭಾ ದುಗುಣ ದುಗುಣಾಯು ॥**

[**ಪ್ರಕರಣರತ್ನಾಕರ ಭಾಗ-4. ಲಘುಕ್ಷೇತ್ರ ಸಮಾಸ ಸೂತ್ರ**-12]

[ಸಂಕ್ಷೇಪವಾಗಿ ಅರ್ಥ:—] ಮೊದಲನೆಯದಾಗಿ, **ಜಂಬೂದ್ವೀಪದ** ಪ್ರಮಾಣ ಲಕ್ಷ ಯೋಜನವಿದೆ; ಮತ್ತು ಪೊಳ್ಳಾಗಿದೆ. ಹಾಗೂ **ಲವಣ ಮೊದಲಾದ ಸಪ್ತ ಸಮುದ್ರಗಳು, ಸಪ್ತ ದ್ವೀಪಗಳು** ಜಂಬೂದ್ವೀಪದ ಪ್ರಮಾಣದ ಎರಡರಷ್ಟು ಇವೆ. ಈ ಒಂದು ಪೃಥಿವಿಯಲ್ಲಿ, ಮೊದಲು ಬರೆದಿರುವಂತೆ, ಜಂಬೂದ್ವೀಪ ಮೊದಲಾದ ಸಪ್ತ ದ್ವೀಪಗಳು ಮತ್ತು ಸಪ್ತ ಸಮುದ್ರಗಳು ಇವೆ.

**ಸಮೀಕ್ಷಕ:**—ಈಗ, ಜಂಬೂದ್ವೀಪಕ್ಕಿಂತ [ದೊಡ್ಡದಾದ] ಎರಡನೆಯ ದ್ವೀಪ ಎರಡು ಲಕ್ಷ ಯೋಜಗಳು; ಮೂರನೆಯದು ನಾಲ್ಕು ಲಕ್ಷ ಯೋಜನಗಳು; ನಾಲ್ಕನೆಯದು ಎಂಟು ಲಕ್ಷ ಯೋಜಗಳು; ಐದನೆಯದು ಹದಿನಾರು ಲಕ್ಷ ಯೋಜನಗಳು; ಆರನೆಯದು ಮೂವತ್ತೆರಡು ಲಕ್ಷ ಯೋಜನಗಳು; ಮತ್ತು ಏಳನೆಯದು ಅರವತ್ತ ನಾಲ್ಕು ಲಕ್ಷ ಯೋಜನಗಳು; ಮತ್ತು ಅಷ್ಟು ಪ್ರಮಾಣದ ಅಥವಾ ಅವುಗಳಿಗಿಂತ ಹೆಚ್ಚು ಪ್ರಮಾಣದ ಸಮುದ್ರಗಳು ಈ ಪದಿನೈದು ಸಾವಿರ [ಕೋಶ] ಪರಿಧಿಯನ್ನುಳ್ಳ* ಭೂಗೋಳದಲ್ಲಿ ಇರಬಲ್ಲವಾದರೂ ಹೇಗೆ? ಆದಕಾರಣ, ಈ ಮಾತು ಕೇವಲ ಮಿಥ್ಯೆಯಾಗಿರುತ್ತದೆ!

---

***ಆಧುನಿಕ ಭೂಗೋಳವೇತ್ತರ ಅನುಸಾರವಾಗಿ ಈ ಪೃಥಿವಿಯ ಪರಿಧಿ 24,900 ಮೈಲಿಗಳು.—ಯು. ಮೀ.**

## (ಕುರುಕ್ಷೇತ್ರದಲ್ಲಿ 84 ಸಾವಿರ ನದಿಗಳಿವೆ, ಎಂದು ಹೇಳುವುದು ಮೂರ್ಖತನ)

[43] ಕುರು ನಇ ಚುಲಸೀ ಸಹಸಾ । ಛಚ್ಚೇವಂತರನಈಉ ಪಇ ವಿಜಯಂ ।
ದೋದೋ ಮಹಾ ನಈಉ । ಚವುದಸ ಸಹಸಾಉ ಪತ್ತೇಯಂ ॥

[ಪ್ರಕರಣ ರತ್ನಾಕರ-ಭಾಗ-4. ; ಲಘುಕ್ಷೇತ್ರ ಸಮಾಸ ಪ್ರಕರಣ. ಸೂತ್ರ 63]

[ಸಂಕ್ಷೇಪವಾಗಿ ಅರ್ಥ:—] ಕುರುಕ್ಷೇತ್ರದಲ್ಲಿ ಎಂಬತ್ತನಾಲ್ಕು ಸಾವಿರ ನದಿಗಳಿವೆ!

**ಸಮೀಕ್ಷಕ :—**ಆಹಾ ! ಕುರುಕ್ಷೇತ್ರ ಬಹಳ ಚಿಕ್ಕದಾದ ಪ್ರದೇಶವಾಗಿದೆ. ಅದನ್ನು ನೋಡದೇ, ಒಂದು ಸುಳ್ಳು ಮಾತನ್ನು ಬರೆಯುವಲ್ಲಿ ಇವರಿಗೆ ಲಜ್ಜೆಯೂ ಆಗಲಿಲ್ಲ !

## (ತೀರ್ಥಂಕರರ ಸಿಂಹಾಸನ)

[44] ಜಾಮುತ್ತರಾಉ ತಾಉ ಇಗೇಗ ಸಿಂಹಾಸಣಾ ಅಇಪುಬ್ಬಂ ।
ಚಉಸುವಿ ತಾಸು ನಿಯಾಸಣ । ದಿಸಿ ಭವಜಿಣ ಮಜ್ಜಣಂ ಹೋಈ ॥

[ಪ್ರಕರಣ ರತ್ನಾಕರ-ಭಾಗ-4. ; ಲಘುಕ್ಷೇತ್ರ ಸಮಾಸ ಪ್ರಕರಣ. ಸೂತ್ರ-119]

[ಸಂಕ್ಷೇಪವಾಗಿ ಅರ್ಥ :—] ಆ ಶಿಲೆಯ ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿ, ವಿಶೇಷವಾಗಿ ಒಂದೊಂದು ಸಿಂಹಾಸನವಿದೆಯೆಂದು ತಿಳಿಯಬೇಕು. ಆ ಶಿಲೆಗಳಿಗೆ ದಕ್ಷಿಣ ದಿಕ್ಕಿನಲ್ಲಿ **ಅತಿಪಾಂಡು ಕಂಬಲಾ ಶಿಲೆ**, ಎಂದೂ, ಉತ್ತರ ದಿಕ್ಕಿನಲ್ಲಿ **ಅತಿರಿಕ್ತ ಕಂಬಲಾ ಶಿಲೆ**, ಎಂದೂ ಹೆಸರುಗಳಿವೆ. ಆ ಶಿಲೆಗಳ ಮೇಲೆ ತೀರ್ಥಂಕರರು ಕುಳಿತು ಕೊಳ್ಳುತ್ತಾರೆ.

**ಸಮೀಕ್ಷಕ :—**ನೋಡಿರಿ, ಇವರ ತೀರ್ಥಂಕರರ ಜನ್ಮೋತ್ಸವ ಮೊದಲಾದು ವನ್ನು ಮಾಡುವ ಶಿಲೆಗಳನ್ನು ! ಮುಕ್ತಿಯ ಸಿದ್ಧಿಶಿಲೆಯೂ ಹೀಗೆಯೇ ಇದೆ!

ಹೀಗೆ ಇವರ ಬಹಳ ಮಾತುಗಳು ತಳಮೇಲಿಲ್ಲದವಾಗಿವೆ! ಎಲ್ಲಿಯವರೆಗೆ ಬರೆಯೋಣ ?

ಆದರೆ, **ನೀರನ್ನು ಶೋಧಿಸಿ ಕುಡಿಯುವುದು, ಮತ್ತು ಸೂಕ್ಷ್ಮ ಜೀವಗಳ ಮೇಲೆ ಹೆಸರು ಮಾತ್ರಕ್ಕೆ ದಯೆ ತೋರುವುದು, ರಾತ್ರಿಭೋಜನ ಮಾಡದಿರುವುದು– ಈ ಮೂರು ವಿಷಯಗಳು ಒಳ್ಳೆಯವಾಗಿವೆ!** ಇವರ ಇನ್ನುಳಿದ ಕಥನಗಳು ಎಷ್ಟಿವೆಯೋ, ಅವೆಲ್ಲವೂ ಅಸಂಭವತ್ವದಿಂದ ಗ್ರಸ್ತವಾಗಿವೆ!

[ನಾವು] ಇಷ್ಟು ಮಾತ್ರ ಬರೆದಿರುವುದರಿಂದಲೇ, ಬುದ್ಧಿವಂತರು ಬಹಳ ವಿಷಯಗಳನ್ನು ತಿಳಿದುಕೊಳ್ಳುವರು ! ಉದಾಹರಣೆಗಾಗಿ ಮಾತ್ರ ಈ ಸ್ವಲ್ಪ ಬರೆದಿದ್ದೇವೆ.

ಇವರ ಅಸಂಭವವಾದ ಮಾತುಗಳನ್ನೆಲ್ಲಾ ಬರೆಯುವೆವಾದರೆ, ಒಬ್ಬ ಮನುಷ್ಯನು ತನ್ನ ಸಂಪೂರ್ಣ ಜೀವನದಲ್ಲಿ ಓದಲಾರದಷ್ಟು ಪುಸ್ತಕಗಳಾದಾವು !

ಆದುದರಿಂದ, ಅಕ್ಕಿಯನ್ನು ಬೇಯಿಸುತ್ತಿರುವ ಪಾತ್ರೆಯಿಂದ ಒಂದೆರಡು ಅಗಳನ್ನು ಪರೀಕ್ಷಿಸಿ, ಅಕ್ಕಿಯೆಲ್ಲವೂ ಹಸಿಯಾಗಿದೆಯೋ, ಅಥವಾ ಬೆಂದಿದೆಯೋ, ಎಂದು ತಿಳಿದು ಕೊಳ್ಳುವ ಹಾಗೆ, ಈ ಅಲ್ಪ ಲೇಖನದಿಂದಲೇ ಸಜ್ಜನರು ಬಹಳ ವಿಷಯಗಳನ್ನು ತಿಳಿದುಕೊಳ್ಳುವರು !

ಬುದ್ಧಿವಂತರ ಮುಂದೆ ವಿಸ್ತಾರವಾಗಿ ಬರೆಯುವುದು ಆವಶ್ಯಕವಲ್ಲ. ಏಕೆಂದರೆ, ಕೇವಲ ದಿಗ್ದರ್ಶನದಂತೆ ಸಂಪೂರ್ಣ ಆಶಯವನ್ನು ಬುದ್ಧಿಶಾಲಿಗಳು ತಿಳಿದುಕೊಂಡೇ ಬಿಡುತ್ತಾರೆ!

ಇದರ ನಂತರ, ಕ್ರೈಸ್ತರ ಮತದ ವಿಷಯದಲ್ಲಿ ಬರೆಯಲ್ಪಡುವುದು.

**ಇತಿ ಶ್ರೀಮದ್ದಯಾನಂದಸರಸ್ವತೀಸ್ವಾಮಿನಿರ್ಮಿತೇ ಸತ್ಯಾರ್ಥಪ್ರಕಾಶೇ**

**ಸುಭಾಷಾವಿಭೂಷಿತೇ ನಾಸ್ತಿಕಮತಾಂತರ್ಗತಚಾರ್ವಾಕ-**

**ಬೌದ್ಧಜೈನಮತಖಂಡನಮಂಡನವಿಷಯೇ**

**ದ್ವಾದಶಃ ಸಮುಲ್ಲಾಸಃ ಸಂಪೂರ್ಣಃ ॥ ೧೨ ॥**





## ಅನುಭೂಮಿಕಾ (೩)

### (ಯಹೂದ್ಯರಿಗೂ, ಕ್ರೈಸ್ತರಿಗೂ ಬೈಬಲ್ ಪ್ರಾಮಾಣಿಕ)

ಬೈಬಲಿನ ಈ ಮತ ಕೇವಲ ಕ್ರೈಸ್ತರದೆಂದು ತಿಳಿಯಬಾರದು. ಇದರಲ್ಲಿ ಯಹೂದ್ಯರೇ ಮೊದಲಾದವರೂ ಗ್ರಹಿಸಲ್ಪಡುತ್ತಾರೆ! ಇಲ್ಲಿ, ಈ 13ನೆಯ ಸಮುಲ್ಲಾಸದಲ್ಲಿ, ಕ್ರೈಸ್ತ–ಮತದ ವಿಷಯದಲ್ಲಿ ನಾವು ಬರೆದಿರುವುದರ ಅಭಿಪ್ರಾಯವು, ಆಧುನಿಕ ಕಾಲದಲ್ಲಿ ಬೈಬಲಿನ ಅನುಯಾಯಿಗಳಲ್ಲಿ ಕ್ರೈಸ್ತರೇ ಮುಖ್ಯರಾಗಿದ್ದಾರೆ ; ಯಹೂದ್ಯರೇ ಮೊದಲಾದವರು ಗೌಣರು*, ಎಂಬುದೇ ಆಗಿದೆ. **ಮುಖ್ಯರಾದವರನ್ನು ಗ್ರಹಿಸಿದರೆ, ಮುಖ್ಯರಲ್ಲದವರ ಗ್ರಹಿಕೆಯೂ ಆಗಿ ಹೋಗುತ್ತದೆ!**

ಹೀಗೆ, ಯಹೂದ್ಯರೇ ಮೊದಲಾದವರೂ ಗ್ರಹಿಸಲ್ಪಡುತ್ತಾರೆ, ಎಂದು ತಿಳಿಯಿರಿ!

ಕ್ರೈಸ್ತರೂ ಮತ್ತು ಯಹೂದ್ಯರೇ ಮೊದಲಾದವರೆಲ್ಲರೂ ಪ್ರಾಮಾಣಿಕವೆಂದು ಅಂಗೀಕರಿಸುವ ಬೈಬಲಿನಿಂದಲೇ [ಉದ್ಧರಿಸಿ], ಇವರ ವಿಷಯಗಳನ್ನು ಇಲ್ಲಿ ಬರೆದಿದ್ದೇವೆ. ಮತ್ತು [ಇವರು] ಈ ಪುಸ್ತಕವನ್ನೇ ತಮ್ಮ ಧರ್ಮದ ಮೂಲ ಕಾರಣವೆಂದು ಭಾವಿಸುತ್ತಾರೆ.

### (ಬೈಬಲಿನ ಬಗೆಗೆ ಬಹಳ ಸಂದೇಹ)

ಈ ಪುಸ್ತಕದ ಭಾಷಾಂತರಗಳು ಅನೇಕವಾಗಿವೆ. ಇವರ ಮತದ ದೊಡ್ಡ ದೊಡ್ಡ ಪಾದರಿಗಳು ಆ ಭಾಷಾಂತರಗಳನ್ನು ಮಾಡಿದ್ದಾರೆ. ಅವುಗಳಲ್ಲಿ ದೇವನಾಗರೀ ಲಿಪಿಯಲ್ಲಿದ್ದ ಅಥವಾ ಸಂಸ್ಕೃತದ ಭಾಷಾಂತರವನ್ನು† ನೋಡಿ, ನನಗೆ ಬೈಬಲಿನ ಬಗೆಗೆ ಬಹಳ ಸಂದೇಹಗಳು ಬಂದವು. ಅವುಗಳಲ್ಲಿ ಸ್ವಲ್ಪವನ್ನು ಈ 13ನೆಯ ಸಮುಲ್ಲಾಸದಲ್ಲಿ ಸರ್ವರಿಗೂ ವಿವೇಚನೆ ಮಾಡುವುದಕ್ಕೆ ನೆರವಾಗಲಿ, ಎಂದು ಬರೆದಿದ್ದೇನೆ.

---

*ಎಂದರೆ ಅಮುಖ್ಯರಾಗಿದ್ದಾರೆ.—ಅನು.

†ಬೈಬಲನ್ನು ಮಹಾಭಾರತದ ಪ್ರಸಿದ್ಧ ಟೀಕಾಕಾರನಾದ ನೀಲಕಂಠ ಶಾಸ್ತ್ರಿಯು ಕ್ರೈಸ್ತ ಮತವನ್ನವಲಂಬಿಸಿದ ಮೇಲೆ, ಸಂಸ್ಕೃತದಲ್ಲಿ ಭಾಷಾಂತರಿಸಿದ್ದನು. ಸಂಸ್ಕೃತದ ಒಂದು ಪ್ರತಿಯನ್ನು ಆರ್ಯಸಮಾಜ, ವಿಶ್ವೇಶ್ವರಪುರಂ, ಬೆಂಗಳೂರಿನ ಪುಸ್ತಕಾಲಯದಲ್ಲಿ ಇಡಲಾಗಿದೆ.—ಸಂ.

ಈ ಲೇಖನವು ಕೇವಲ ಸತ್ಯ-ಸಂವರ್ಧನಕ್ಕಾಗಿ ಮತ್ತು ಅಸತ್ಯದ ಹ್ರಾಸಕ್ಕಾಗಿ ಮಾಡಲ್ಪಟ್ಟಿದೆ. ಯಾರಿಗಾದರೂ ದುಃಖವನ್ನು ಅಥವಾ ಹಾನಿಯನ್ನುಂಟುಮಾಡುವ, ಇಲ್ಲವೇ ಮಿಥ್ಯಾದೋಷದ ಆರೋಪಣೆಯನ್ನು ಮಾಡುವ ಉದ್ದೇಶ್ಯದಿಂದಲ್ಲ! ಮುಂದಣ ಲೇಖನದಿಂದ, ಇದರ ಅಭಿಪ್ರಾಯವನ್ನು, ಎಂದರೆ ಈ ಪುಸ್ತಕ, ಹಾಗೂ ಇವರ ಮತವೂ ಕೂಡ, ಹೇಗಿದೆ, ಎಂದು ಎಲ್ಲರೂ ತಿಳಿದುಕೊಳ್ಳುವರು.

## (ಪಕ್ಷ-ಪ್ರತಿಪಕ್ಷಗಳ ಪ್ರತಿಪಾದನೆ ಆವಶ್ಯಕ)

ಮನುಷ್ಯಮಾತ್ರರೆಲ್ಲರಿಗೆ ದರ್ಶನ, ಶ್ರವಣ, ಲೇಖನ, ಮೊದಲಾದುವನ್ನು ನಿರ್ವಹಿಸುವುದು ಸಹಜವಾಗಬೇಕು ; ಮತ್ತು [ಇದರಿಂದ], ಪಕ್ಷ–ಪ್ರತಿಪಕ್ಷಗಳ ಪ್ರತಿಪಾದಕರಾಗಿ, ಪರ್ಯಾಲೋಚನೆ ಮಾಡಿ, ಕ್ರೈಸ್ತ ಮತದ ವಿವೇಚನೆಯನ್ನು ಮಾಡುವುದು ಎಲ್ಲರಿಗೂ ಸಂಭವವಾಗುವುದು, ಎನ್ನುವುದೇ ಈ ಲೇಖನದ ಉದ್ದೇಶ್ಯ ವಾಗಿದೆ.

ಇದರಿಂದ, **ಮಾನವರಿಗೆ ಧರ್ಮವಿಷಯುಕವಾದ ಜ್ಞಾನ ಹೆಚ್ಚಿ, ಯಥಾಯೋಗ್ಯವಾಗಿ, ಸತ್ಯಾಸತ್ಯ ಮತದ ಮತ್ತು ಕರ್ತವ್ಯಾಕರ್ತವ್ಯ ಕರ್ಮಗಳ ಸಂಬಂಧದ ವಿಷಯು ವಿದಿತವಾಗಿ, ಸತ್ಯದ ಮತ್ತು ಕರ್ತವ್ಯಕರ್ಮದ ಸ್ವೀಕಾರವನ್ನೂ, ಅಸತ್ಯದ ಮತ್ತು ಅಕರ್ತವ್ಯವಾದ ಕರ್ಮದ ಪರಿತ್ಯಾಗವನ್ನೂ ಮಾಡುವುದು ಸಹಜವಾಗಿ ಆಗಬಲ್ಲದು**, ಎಂಬ ಪ್ರಯೋಜನವೂ ಸಿದ್ಧಿಸುವುದು.

ಎಲ್ಲರ ಮತಗಳ ವಿಷಯುಕವಾದ ಪುಸ್ತಕಗಳನ್ನು ನೋಡಿ, ತಿಳಿದುಕೊಂಡು, ಏನಾದರೂ ಸಮ್ಮತಿಯನ್ನು ಅಥವಾ ಅಸಮ್ಮತಿಯನ್ನು ಕೊಡುವುದು, ಅಥವಾ ಬರೆಯುವುದು, ಇಲ್ಲವೇ ಆಲಿಸುವುದು ಮಾನವರೆಲ್ಲರಿಗೂ ಉಚಿತವಾಗಿರುತ್ತದೆ!

**ಏಕೆಂದರೆ, ಓದುವುದರಿಂದ 'ಪಂಡಿತ'ನಾಗುವಂತೆ, ಆಲಿಸುವುದರಿಂದ 'ಬಹುಶ್ರುತ'ನಾಗುತ್ತಾನೆ. ಶ್ರೋತೃವು ಬೇರೆಯವನಿಗೆ ತಿಳಿಯು ಹೇಳಲು ಸಮರ್ಥನಾಗದಿದ್ದರೂ, ಸ್ವತಃ ತಾನಂತೂ ತಿಳಿದುಕೊಂಡೇ ಬಿಡುತ್ತಾನೆ!**

ಯಾರಾದರೂ ಪಕ್ಷಪಾತವೆಂಬ ವಾಹನವನ್ನೇರಿ ನೋಡುತ್ತಾರೆಯಾದರೆ, ಅವರಿಗೆ ತಮ್ಮ ಗುಣ–ದೋಷಗಳೂ ವಿದಿತವಾಗಲಾರವು ; ಅನ್ಯರದೂ ತಿಳಿದು ಬರಲಾರವು !

## (ಜಗಳವಾಗುವುದು ಸುಳ್ಳು ವಿಷಯುಗಳಲ್ಲಿ ಮಾತ್ರ)

ಮಾನವನ ಆತ್ಮನು ಯಥಾಯೋಗ್ಯವಾಗಿ ಸತ್ಯಾಸತ್ಯ ನಿರ್ಣಯವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ತನ್ನ ಪಠಿತವಾದ ಅಥವಾ ಶ್ರುತ ವಾದ ಜ್ಞಾನ ಎಷ್ಟಿದೆಯೋ, ಅಷ್ಟು ನಿಶ್ಚಯು ಮಾಡಬಲ್ಲವನಾಗಿದ್ದಾನೆ.

ಒಂದು ಮತದವರು, ಇನ್ನೊಂದು ಮತದವರ ವಿಷಯಗಳನ್ನು ತಿಳಿದಿದ್ದು, ಮತ್ತು ಇನ್ನೊಂದು ಮತದವರು [ಇವರ ಮತದ ವಿಷಯವನ್ನು] ತಿಳಿಯದವರಾಗಿದ್ದರೆ, ಯೋಗ್ಯಕ್ರಮದಲ್ಲಿ ಸಂವಾದ ನಡೆಯಲಾರದು. ಆದರೆ, ಅಜ್ಞಾನಿಗಳಾದುದರಿಂದ, ಭ್ರಮವೆಂಬ ಆವರಣದಲ್ಲಿ ಸಿಕ್ಕಿಕೊಂಡುಬಿಡುತ್ತಾರೆ!

ಹೀಗೆ ಆಗದೇ ಇರಲಿ, ಎಂದು ಈ ಗ್ರಂಥದಲ್ಲಿ ಪ್ರಚರಿತವಾಗಿರುವ ಮತಗಳೆಲ್ಲದರ ವಿಷಯವನ್ನೂ ಸ್ವಲ್ಪ ಸ್ವಲ್ಪ ಬರೆದಿದ್ದೇವೆ. ಇಷ್ಟರಿಂದಲೇ, ಉಳಿದ ವಿಷಯಗಳಲ್ಲಿ, ಅವು ಸತ್ಯವೋ ಅಥವಾ ಸುಳ್ಳೋ, ಎಂದು ಊಹಿಸಬಹುದಾಗಿದೆ.

**ಯಾವ ಯಾವ ಸರ್ವಮಾನ್ಯ ಸತ್ಯವಿಷಯಗಳಿವೆಯೋ, ಅವಂತೂ ಎಲ್ಲವುಗಳಲ್ಲಿಯೂ ಒಂದೇ ಬಗೆಯದಾಗಿವೆ. ಜಗಳವಾಗುವುದು ಸುಳ್ಳು ವಿಷಯಗಳಲ್ಲಿ ಮಾತ್ರ!**

ಅಥವಾ, ಒಂದು ಸತ್ಯವೂ, ಎರಡನೆಯದು ಸುಳ್ಳೂ ಆಗಿದ್ದರೂ ಕೂಡ, ಸ್ವಲ್ಪ ವಿವಾದ ನಡೆಯುತ್ತದೆ. ವಾದಿ-ಪ್ರತಿವಾದಿಗಳು ಸತ್ಯಾಸತ್ಯ ನಿಶ್ಚಯಕ್ಕಾಗಿ ವಾದ–ಪ್ರತಿವಾದ ಮಾಡುವವರಾದರೆ, ಅವಶ್ಯವಾಗಿ ನಿರ್ಣಯವಾಗುತ್ತದೆ.

ಈಗ, ನಾನು ಈ ಹದಿಮೂರನೆಯ ಸಮುಲ್ಲಾಸದಲ್ಲಿ ಕ್ರೈಸ್ತ ಮತವಿಷಯಕವಾದುದನ್ನು ಸ್ವಲ್ಪ ಬರೆದು, ಎಲ್ಲರ ಮುಂದೆ ಇಡುತ್ತೇನೆ. ಹೇಗೆ ಇದೆ, ಎಂದು ಆಲೋಚಿಸಿರಿ !

**ಅಲಮತಿಲೇಖೇನ ವಿಚಕ್ಷಣವರೇಷು ॥**



# ಅಥ ತ್ರಯೋದಶಸಮುಲ್ಲಾಸಾರಂಭಃ

## ಅಥ ಕೃಶ್ಚೀನಮತವಿಷಯಂ ವ್ಯಾಖ್ಯಾಸ್ಯಾಮಃ

ಈಗ, ಇದರಿಂದ ಮುಂದಕ್ಕೆ, ಕ್ರೈಸ್ತರ ಮತ-ವಿಷಯದಲ್ಲಿ ಬರೆಯುತ್ತೇವೆ. ಅವರಿಂದ, ಎಲ್ಲರಿಗೂ ಇವರ ಮತ ನಿರ್ದೋಷವಾಗಿದೆಯೊ, ಇಲ್ಲವೋ; ಮತ್ತು ಇವರ ಬೈಬಲ್ ಎಂಬ ಪುಸ್ತಕ ಈಶ್ವರಕೃತವಾದುದೋ, ಅಥವಾ ಅಲ್ಲವೋ, ಎಂಬುದು ವಿದಿತವಾಗುವುದು.

ಮೊದಲು ಬೈಬಲಿನ ತೌರೇತಿ*ನ ವಿಷಯ ಬರೆಯಲ್ಪಡುತ್ತದೆ—

**(ಕ್ರೈಸ್ತ ಮತಾನುಸಾರ ಆಕಾಶ ಮತ್ತು ಪೃಥಿವಿಯ ರಚನೆ)**

**[1] ಆರಂಭದಲ್ಲಿ, ಈಶ್ವರನು ಆಕಾಶವನ್ನು ಮತ್ತು ಪೃಥಿವಿಯನ್ನು ಸೃಜಿಸಿದನು.**

**ಮತ್ತು ಪೃಥಿವಿಯು ಕುರೂಪವೂ, ಹಾಗೂ ಶೂನ್ಯವೂ ಆಗಿದ್ದಿತು. ಮತ್ತು ಆಳದಲ್ಲಿ ಕತ್ತಲೆಯಿದ್ದಿತು.**

**ಮತ್ತು ಈಶ್ವರನ ಆತ್ಮನು ನೀರಿನ ಮೇಲೆ ಚಲಿಸುತ್ತಾ ಇದ್ದನು.†**

**[ಬೈಬಲ್, ತೌರೇತ್‌ನ ಉತ್ಪತ್ತಿ ಪುಸ್ತಕ-ಪರ್ವ 1; ಆಯತ 1, 2]**

**ಸಮೀಕ್ಷಕ:**—ಆರಂಭವೆಂದು ಯಾವುದನ್ನು ಹೇಳುತ್ತೀರಿ ?

**ಕ್ರೈಸ್ತ:**—ಸೃಷ್ಟಿಯ ಪ್ರಥಮ ಉತ್ಪತ್ತಿಯನ್ನು.

**ಸಮೀಕ್ಷಕ:**—ಇದೇ ಸೃಷ್ಟಿ ಮೊದಲಾಯಿತೇನು? ಇದಕ್ಕೆ ಮೊದಲು ಎಂದೂ ಆಗಿರಲಿಲ್ಲವೇನು ?

---

*ಬೈಬಲ್—ತೌರೇತ್ = ಹಳೆಯ ನಿಯಮಗಳ ಧರ್ಮಗ್ರಂಥ (Old Testament) —ಸಂ.

†ಈಜಿಪ್ಟಿನಲ್ಲಿ ಮೊದಲು ವೇದದ ಪ್ರಚಾರವಿತ್ತು. ಹಿರಣ್ಯಗರ್ಭ ಅಥವಾ ಮಹದಂಡವು 'ಆಪಃ'ದಲ್ಲಿ ಗತಿಶೀಲವಾಗಿತ್ತು. (ಶತಪಥ ಬ್ರಾಹ್ಮಣ 11.1.6.1.2) ಈ ರಹಸ್ಯವನ್ನರಿಯದೇ ಹಿರಣ್ಯಾಂಡವನ್ನು ಈಶ್ವರನೆಂದು ತಿಳಿದು, ಬೈಬಲಿನಲ್ಲಿ ಜಗತ್ತನ್ನು ಅಜ್ಞಾನ ಸಾಗರಕ್ಕೆ ತಳ್ಳಲಾಗಿದೆ. ಬೈಬಲಿನಲ್ಲಿ ಪ್ರಾಯಃ ಮೂಲವೈದಿಕ ವಿಚಾರಗಳು ವಿಕೃತ ರೂಪದಲ್ಲಿ ತೋರಿಸಲ್ಪಟ್ಟಿವೆ. —ಯು. ಮೀ.

**ಕ್ರೈಸ್ತ:**—ಆಗಿದ್ದಿತೋ, ಇಲ್ಲವೋ ನಾವು ಅರಿಯೆವು. ಈಶ್ವರನು ಬಲ್ಲನು!

**ಸಮೀಕ್ಷಕ:**—ನಿಮಗೆ ಗೊತ್ತಿಲ್ಲದಿರುವಾಗ, ಈ ಪುಸ್ತಕವನ್ನು ಏತಕ್ಕೆ ನಂಬಿದಿರಿ? ಏಕೆಂದರೆ, ಇದರಿಂದ, ಸಂದೇಹದ ನಿವಾರಣೆಯಾಗಲಾರದು! ಮತ್ತು ಇದರ ಮೇಲಣ ಭರವಸೆಯಿಂದಲೇ, ಜನರಿಗೆ ಉಪದೇಶವನ್ನು ಮಾಡಿ, ಈ ಸಂದೇಹ ಭರಿತವಾದ ಮತದಲ್ಲಿ ಏತಕ್ಕೆ ಸಿಕ್ಕಿಸಿ ಹಾಕುತ್ತೀರಿ?

ಮತ್ತು ನಿಃಸಂದೇಹವೂ, **ಸರ್ವಸಂಶಯ-ನಿವಾರಕವೂ ಆದ ವೇದಮತವನ್ನು ಸ್ವೀಕರಿಸುವುದಿಲ್ಲವೇತಕ್ಕೆ? ನೀವು ಈಶ್ವರನ ಸೃಷ್ಟಿಯ ವಿಷಯವನ್ನು ತಿಳಿಯದಿರುವಾಗ, ಈಶ್ವರನನ್ನು ತಿಳಿದುಕೊಳ್ಳುವಿರಾದರೂ ಹೇಗೆ?***

[ಸರಿ!] ಆಕಾಶವೆಂದು ಯಾವುದನ್ನು ಗ್ರಹಿಸುತ್ತೀರಿ?

**ಕ್ರೈಸ್ತ:**—ಪೊಳ್ಳನ್ನು, ಮತ್ತು ಊರ್ಧ್ವವನ್ನು!

**ಸಮೀಕ್ಷಕ:**—ಪೊಳ್ಳಿನ ಉತ್ಪತ್ತಿ ಹೇಗೆ ಆಯಿತು? ಏಕೆಂದರೆ, ಇದು ವಿಭು† ಪದಾರ್ಥ ಮತ್ತು ಅತಿ ಸೂಕ್ಷ್ಮವಾಗಿದೆ. ಮತ್ತು ಮೇಲೆ-ಕೆಳಗೆ ಒಂದೇ ಬಗೆಯದಾಗಿದೆ.

ಯಾವಾಗ ಆಕಾಶವನ್ನು ಸೃಜಿಸಿರಲಿಲ್ಲವೋ, ಆಗ ಪೊಳ್ಳು ಮತ್ತು ಆಕಾಶ ಇದ್ದಿತೋ, ಅಥವಾ ಇಲ್ಲವೋ? 'ಇರಲಿಲ್ಲ', ಎಂದರೆ ಈಶ್ವರನೂ, ಜಗತ್ತಿನ ಕಾರಣವೂ ಮತ್ತು ಜೀವರೂ ಎಲ್ಲಿರುತ್ತಿದ್ದರು? **ಅವಕಾಶವಿಲ್ಲದೇ, ಯಾವ ಪದಾರ್ಥವೂ ಸ್ಥಿತವಾಗಿರಲಾರದು!** ಆದುದರಿಂದ, ನಿಮ್ಮ ಬೈಬಲಿನ ಕಥನ ಯುಕ್ತವಾದುದಲ್ಲ!

## (ಈಶ್ವರನ ಸೃಷ್ಟಿಯನ್ನು ಕುರೂಪವೆನ್ನುವುದು ತಪ್ಪು)

ಈಶ್ವರನು ಕುರೂಪನೂ, ಅವನ ಜ್ಞಾನ-ಕರ್ಮಗಳೂ ಕುರೂಪವೂ ಆಗಿರುತ್ತವೋ, ಅಥವಾ ಎಲ್ಲವೂ ಸುರೂಪವಾಗಿರುತ್ತವೋ?

**ಕ್ರೈಸ್ತ:**—ಸುರೂಪವಾಗಿರುತ್ತವೆ.

---

***ಈಶ್ವರನನ್ನು ತಿಳಿಯುವ ಮೊದಲು, ಅವನಿಂದಾದ ಸೃಷ್ಟಿರಚನೆಯ ಜ್ಞಾನವನ್ನು ತಿಳಿಯುವುದು ಆವಶ್ಯಕ. ಇದು ವೈದಿಕ ಸಿದ್ಧಾಂತ! ಸೃಷ್ಟಿಯ ಜ್ಞಾನವಿಲ್ಲದೇ, ಅಥವಾ ಅದನ್ನು ಕಡೆಗಣಿಸಿ, ಕೇವಲ 'ಬ್ರಹ್ಮಜ್ಞಾನ'ದ ಬಗ್ಗೆ ಕೂಗು ಹಾಕುವುದು ಆಚಾರ್ಯತ್ರಯರ ಸಿದ್ಧಾಂತವಾಗಿತ್ತು. ವೇದಾನುಯಾಯಿಗಳಾದ ಮಹರ್ಷಿ ದಯಾನಂದರಿಗೂ, ಪುರಾಣ-ಉಪನಿಷತ್ತುಗಳ ಅನುಯಾಯಿಗಳಾದ ಆಚಾರ್ಯರಿಗೂ ಇರುವ ವ್ಯತ್ಯಾಸ ಇದೇ! – ಸಂ.**

**†ವ್ಯಾಪಕವಾದ - ಅನು.**

**ಸಮೀಕ್ಷಕ:**—ಹಾಗಾದರೆ, ಇಲ್ಲಿ 'ಈಶ್ವರ–ರಚಿತವಾದ ಪೃಥಿವೀ ಕುರೂಪವಾಗಿದ್ದಿತು', ಎಂದೇಕೆ ಬರೆದರು?

**ಕ್ರೈಸ್ತ:**—ಕುರೂಪವೆಂದರೆ, ಏರು-ಇಳಿತಗಳಿಂದ ಕೂಡಿದುದಾಗಿತ್ತು; ಸಮತಲವಾಗಿರಲಿಲ್ಲ. ಎಂದು ಅರ್ಥ.

**ಸಮೀಕ್ಷಕ:**—ಮತ್ತೆ, ಸಮತಲವಾಗಿ ಯಾವನು ಮಾಡಿದನು? ಈಗಲೂ ಎತ್ತರವಾಗಿ-ತಗ್ಗಾಗಿ ಇಲ್ಲವೇನು? ಆದುದರಿಂದ, ಈಶ್ವರನ ಕಾರ್ಯ ಕುರೂಪವಾಗಲಾರದು! ಏಕೆಂದರೆ, ಅವನು ಸರ್ವಜ್ಞನಾಗಿದ್ದಾನೆ. **ಅವನ ಕೆಲಸದಲ್ಲಿ ಮರೆವಾಗಲೀ, ತ್ರುಟಿಯಾಗಲೀ ಎಂದಿಗೂ ಆಗಲಾರದು.**

ಮತ್ತು ಬೈಬಲಿನಲ್ಲಿ—**'ಈಶ್ವರನ ಸೃಷ್ಟಿ ಕುರೂಪವಾಗಿದ್ದಿತು'**, ಎಂದು ಬರೆದಿದೆ. **ಆದುದರಿಂದ, ಈ ಪುಸ್ತಕ ಈಶ್ವರಕೃತವಾಗಲಾರದು!**

## (ವ್ಯಾಪಕ ಈಶ್ವರನು 'ಸನಾಯೀ ಪರ್ವತ' ಅಥವಾ 'ನಾಲ್ಕನೆಯ ಆಕಾಶ'ದ ಮೇಲೆ ಹೇಗೆ?)

ಮೊದಲಾಗಿ, ಈಶ್ವರನ ಆತ್ಮನು ಯಾವ ಪದಾರ್ಥ?

**ಕ್ರೈಸ್ತ:**—ಚೇತನ!

**ಸಮೀಕ್ಷಕ:**—ಅವನು ಸಾಕಾರನೋ, ಅಥವಾ ನಿರಾಕಾರನೋ? ಮತ್ತು ವ್ಯಾಪಕನೋ, ಅಥವಾ ಏಕದೇಶೀಯನೋ?

**ಕ್ರೈಸ್ತ:**—ನಿರಾಕಾರನಾಗಿದ್ದಾನೆ! ಚೇತನನೂ ಮತ್ತು ವ್ಯಾಪಕನೂ ಆಗಿದ್ದಾನೆ. ಆದರೆ, ಯಾವುದೋ ಒಂದು **'ಸನಾಯೀ ಪರ್ವತ', 'ನಾಲ್ಕನೆಯ ಆಕಾಶ' ಮೊದಲಾದ ಸ್ಥಾನಗಳಲ್ಲಿ ವಿಶೇಷವಾಗಿರುತ್ತಾನೆ.**

**ಸಮೀಕ್ಷಕ:**—ನಿರಾಕಾರನಾಗಿರುವುದಾದರೆ, ಅವನನ್ನು ಯಾವನು ನೋಡಿದನು? ಮತ್ತು **ವ್ಯಾಪಕನು ನೀರಿನ ಮೇಲೆ ತೇಲುವುದು ಎಂದಿಗೂ ಸಂಭವವಲ್ಲ.**

ಅಲ್ಲಾ! ಈಶ್ವರನ ಆತ್ಮನು ಯಾವಾಗ ನೀರಿನ ಮೇಲೆ ತೇಲುತ್ತಿದ್ದನೋ, ಆಗ ಈಶ್ವರನೆಲ್ಲಿದ್ದನು? ಇದರಿಂದ, ಈಶ್ವರನ ಶರೀರವು ಬೇರೆ ಎಲ್ಲಿಯೋ ಸ್ಥಿತವಾಗಿದ್ದಿತು, ಎಂದೇ ಸಿದ್ಧವಾಗುತ್ತದೆ. ಅಥವಾ ತನ್ನ ಆತ್ಮನ ಒಂದು ಚೂರನ್ನು ನೀರಿನ ಮೇಲೆ ತೇಲಿಸಿರಬಹುದು! ಹೀಗೆ ಆದಲ್ಲಿ, **ವಿಭು ಮತ್ತು ಸರ್ವಜ್ಞ** ಎಂದಿಗೂ ಆಗಲಾರನು.

ವಿಭುವಲ್ಲದಿದ್ದರೆ, ಜಗತ್ತಿನ ರಚನೆ, ಧಾರಣ, ಪಾಲನ, ಮತ್ತು ಜೀವರ ಕರ್ಮಗಳ ವ್ಯವಸ್ಥೆ ಅಥವಾ ಪ್ರಳಯವನ್ನು ಎಂದಿಗೂ ಮಾಡಲಾರನು. ಏಕೆಂದರೆ, **ಯಾವ ಪದಾರ್ಥದ ಸ್ವರೂಪವು ಏಕದೇಶೀಯವಾಗಿರುತ್ತದೋ, ಅದರ ಗುಣ-ಕರ್ಮ-ಸ್ವಭಾವಗಳೂ ಕೂಡ, ಏಕದೇಶೀಯವಾಗಿರುತ್ತವೆ!** ಹೀಗಿರುವುದಾದರೆ, ಅವನು ಈಶ್ವರನಾಗಿರಲಾರನು.

ಏಕೆಂದರೆ. 'ಈಶ್ವರನು ಸರ್ವವ್ಯಾಪಕನೂ, ಅನಂತಗುಣ-ಕರ್ಮ-ಸ್ವಭಾವ ಯುಕ್ತನೂ, ಸಚ್ಚಿದಾನಂದಸ್ವರೂಪನೂ, ನಿತ್ಯಶುದ್ಧ-ಬುದ್ಧ-ಮುಕ್ತಸ್ವಭಾವನೂ, ಅನಾದಿಯೂ, ಅನಂತತ್ವ ಮೊದಲಾದ ಲಕ್ಷಣಯುಕ್ತನೂ ಆಗಿದ್ದಾನೆ', ಎಂದು ವೇದಗಳಲ್ಲಿ ಹೇಳಿದೆ.

**ಅವನನ್ನೇ ಅಂಗೀಕರಿಸಿರಿ! ಆಗ ಮಾತ್ರ ನಿಮ್ಮ ಕಲ್ಯಾಣವಾಗುವುದು; ಅನ್ಯಥಾ ಆಗಲಾರದು!** [1]

## (ಕ್ರೈಸ್ತ ಮತಾನುಸಾರ ಸೂರ್ಯಾದಿಗಳ ಉತ್ಪತ್ತಿ)

**[2] ಮತ್ತು ಈಶ್ವರನು—'ಬೆಳಕಾಗಲಿ!', ಎಂದು ಹೇಳಿದನು.**
**ಮತ್ತು ಬೆಳಕು ಆಗಿಹೋಯಿತು!**
**ಮತ್ತು ಈಶ್ವರನು ಬೆಳಕು ಚೆನ್ನಾಗಿದೆ, ಎಂಬುದನ್ನು ನೋಡಿದನು.**

**[ಬೈಬಲ್ (ತೌ); ಉತ್ಪತ್ತಿ:-ಪರ್ವ-1 ಆ. 8, 4]**

**ಸಮೀಕ್ಷಕ:—ಈಶ್ವರನ ಮಾತನ್ನು ಜಡವಾದ ಬೆಳಕು ಆಲಿಸಿತೇನು? ಆಲಿಸಿದ್ದೇ ಆದರೆ, ಈಗಲೂ ಸೂರ್ಯನ, ದೀಪದ, ಹಾಗೂ ಬೆಂಕಿಯ ಬೆಳಕು ನಮ್ಮ-ನಿಮ್ಮ ಮಾತುಗಳನ್ನು ಆಲಿಸುವುದಿಲ್ಲವೇಕೆ?**

ಬೆಳಕು ಜಡವಾಗಿರುತ್ತದೆ. ಅದು ಎಂದಿಗೂ, ಯಾವನ ಮಾತನ್ನೂ ಆಲಿಸಲಾರದು!

ಮತ್ತು **ಯಾವಾಗ ಈಶ್ವರನು ಬೆಳಕನ್ನು ನೋಡಿದನೋ, ಆಗಲೇ ಬೆಳಕು ಚೆನ್ನಾಗಿದೆ, ಎಂದು ಕಂಡುಕೊಂಡನೋ? ಮೊದಲು ತಿಳಿದಿರಲಿಲ್ಲವೋ?** ತಿಳಿದಿದ್ದ ಪಕ್ಷದಲ್ಲಿ, ನೋಡಿ, 'ಚೆನಾಗಿದೆ', ಎಂದೇಕೆ ಹೇಳುತ್ತಿದ್ದನು? ತಿಳಿಯದೇ ಇದ್ದಪಕ್ಷದಲ್ಲಿ, ಅವನು ಈಶ್ವರನೇ ಅಲ್ಲ!

**ಆದುದರಿಂದ, ನಿಮ್ಮ ಬೈಬಲ್ ಈಶ್ವರೋಕ್ತವಲ್ಲ! ಮತ್ತು ಅದರಲ್ಲಿ ಹೇಳಲ್ಪಟ್ಟಿರುವ ಈಶ್ವರನು ಸರ್ವಜ್ಞನಲ್ಲ!** [2]

**(ಜಲಗಳ ಮಧ್ಯೆ ಆಕಾಶ ನಿರ್ಮಿಸಿ, ಅದನ್ನು ವಿಭಕ್ತ ಮಾಡುವುದು)**

[3] ಮತ್ತು ಈಶ್ವರನು—"ಜಲಗಳ ನಡುವೆ ಆಕಾಶ ಉಂಟಾಗಲಿ! ಮತ್ತು ಜಲಗಳಿಂದ ಜಲಗಳನ್ನು ವಿಭಾಗಮಾಡಲಿ!", ಎಂದನು.

ಆಗ ಈಶ್ವರನು ಆಕಾಶವನ್ನು ರಚಿಸಿದನು. ಮತ್ತು ಆಕಾಶದಿಂದ ಕೆಳಗಿನ ಜಲಗಳನ್ನು, ಆಕಾಶದ ಮೇಲಿನ ನೀರುಗಳಿಂದ ವಿಭಾಗ ಮಾಡಿದನು. ಮತ್ತು ಹಾಗೆ ಆಗಿಹೋಯಿತು!

ಮತ್ತು ಈಶ್ವರನು ಆಕಾಶವನ್ನು 'ಸ್ವರ್ಗ', ಎಂದು ಕರೆದನು. ಮತ್ತು 'ಸಂಜೆ', ಹಾಗೂ 'ಮುಂಜಾನೆ', ಎರಡನೆಯ ದಿನವಾಯಿತು.

[ಬೈಬಲ್ (ತೌ); ಉತ್ಪತ್ತಿ:-ಪರ್ವ-1; ಆ. 6-8]

ಸಮೀಕ್ಷಕ:—ಆಕಾಶ ಮತ್ತು ಜಲಗಳೂ ಕೂಡ, ಈಶ್ವರನ ಮಾತನ್ನು ಆಲಿಸಿದುವೇನು? ಮತ್ತು ಜಲದ ನಡುವೆ ಆಕಾಶವಿಲ್ಲದಿದ್ದರೆ, ಜಲವಿರುತ್ತಿದ್ದಿತಾದರೂ ಎಲ್ಲಿ?

ಮೊದಲನೆಯ ಆಯತ್ತಿನಲ್ಲಿ—'ಆಕಾಶವನ್ನು ಸೃಜಿಸಿದನು', ಎಂದಿದೆ. ಪುನಃ ಆಕಾಶದ ನಿರ್ಮಾಣವನ್ನು ಹೇಳುವುದು ವ್ಯರ್ಥವಾಯಿತು.

**(ಆಕಾಶವು ಸರ್ವವ್ಯಾಪಕ ; ಮತ್ತೆ, ಸ್ವರ್ಗ ಮೇಲೆ ಹೇಗೆ?)**

ಆಕಾಶವನ್ನು 'ಸ್ವರ್ಗ', ಎಂದು ಹೇಳಿದನಾದರೆ, ಅದು ಸರ್ವವ್ಯಾಪಕವಾಗಿದೆ. ಆದುದರಿಂದ, ಎಲ್ಲೆಡೆಯೂ 'ಸ್ವರ್ಗ ಇದೆ,' ಎಂದಾಯಿತು. ಮತ್ತೆ, 'ಮೇಲೆ ಸ್ವರ್ಗ ಇದೆ', ಎಂದು ಹೇಳುವುದು ವ್ಯರ್ಥವಾಯಿತು.

ಸೂರ್ಯನು ಉತ್ಪನ್ನನೇ ಆಗಿರಲಿಲ್ಲವೆಂದಾಗ, ಹಗಲು ಮತ್ತು ಇರುಳು ಆಯಿತೆಲ್ಲಿಂದ ?

ಇಂತಹ ಅಸಂಭವವಾದ ಮಾತುಗಳು ಮುಂದಿನ ಆಯತ್ತುಗಳಲ್ಲಿ ತುಂಬಿಕೊಂಡಿವೆ! [3]

**(ಈಶ್ವರನ ಸ್ವರೂಪದಲ್ಲಿ ಆದಮನ ಉತ್ಪತ್ತಿ)**

[4] ಆಗ, ಈಶ್ವರನು—"ನಾವು 'ಆದಮು'ನನ್ನು ನಮ್ಮ ಸ್ವರೂಪದಲ್ಲಿ, ನಮಗೆ ಸಮಾನನಾಗಿ ಸೃಜಿಸುವೆವು.", ಎಂದನು.

ಆಗ ಈಶ್ವರನು ಆದಮುನನ್ನು ತನ್ನ ಸ್ವರೂದಲ್ಲಿ ಉತ್ಪನ್ನಮಾಡಿದನು. ಅವನು ಅವನನ್ನು 'ಈಶ್ವರನ ಸ್ವರೂಪ'ದಲ್ಲಿ ಉತ್ಪನ್ನಮಾಡಿದನು. ಅವನು ಅವರನ್ನು 'ನರ'ನಾಗಿ ಮತ್ತು 'ನಾರಿ'ಯಾಗಿ ನಿರ್ಮಿಸಿದನು.

ಮತ್ತು ಈಶ್ವರನು ಅವರಿಗೆ ಆಶೀರ್ವಾದವನ್ನು ಕೊಟ್ಟನು.

[ಬೈಬಲ್ (ತೌ); ಉತ್ಪತ್ತಿ:-ಪರ್ವ 1 ; ಆ. 26 ರಿಂದ 28]

## (ಆದಮುನು ಈಶ್ವರನ ಸದೃಶನೇಕಾಗಲಿಲ್ಲ?)

**ಸಮೀಕ್ಷಕ:**—ಆದಮುನನ್ನು ಈಶ್ವರನು ತನ್ನ ಸ್ವರೂಪದಲ್ಲಿ ಸೃಜಿಸಿದನಾದರೆ; ಈಶ್ವರನ ಸ್ವರೂಪವು ಪವಿತ್ರತ್ವ, ಜ್ಞಾನಸ್ವರೂಪತ್ವ, ಆನಂದಮಯತ್ವ ಮೊದಲಾದ ಲಕ್ಷಣಗಳನ್ನುಳ್ಳದ್ದಾಗಿದೆ ; ಅವನಂತೆ ಆದಮುನು ಆಗಲಿಲ್ಲವೇಕೆ? 'ಆಗಲಿಲ್ಲ', ಎಂದರೆ, ಅವನ ಸ್ವರೂಪದಲ್ಲಿ ನಿರ್ಮಿತನಾಗಲಿಲ್ಲ! ಮತ್ತು ಆದಮುನನ್ನು ಸೃಜಿಸಿದನಾದರೆ,* ಈಶ್ವರನು ತನ್ನ ಸ್ವರೂಪವನ್ನೇ ಉತ್ಪತ್ತಿಶೀಲವನ್ನಾಗಿ ಮಾಡಿದನು! ಮತ್ತೆ, ಅವನು ಅನಿತ್ಯನಲ್ಲವೇಕೆ?

## (ಕ್ರೈಸ್ತ ಮತಾನುಸಾರ ಈಶ್ವರನಲ್ಲದೇ ಬೇರಾವ ವಸ್ತುವೂ ಇರಲಿಲ್ಲ)

ಮತ್ತು ಆದಮುನನ್ನು ಎಲ್ಲಿಂದ ಸೃಜಿಸಿದನು?

**ಕ್ರೈಸ್ತ:**—ಮಣ್ಣಿನಿಂದ ಉತ್ಪನ್ನಮಾಡಿದನು.

**ಸಮೀಕ್ಷಕ:**—ಮಣ್ಣನ್ನು ಎಲ್ಲಿಂದ ಸೃಜಿಸಿದನು?

**ಕ್ರೈಸ್ತ:**—ತನ್ನ ಪ್ರಕೃತಿಯಿಂದ, ಎಂದರೆ ಸಾಮರ್ಥ್ಯದಿಂದ.

**ಸಮೀಕ್ಷಕ:**—ಈಶ್ವರನ ಸಾಮರ್ಥ್ಯ ಅನಾದಿಯೋ, ಅಥವಾ ನವೀನವೋ?

**ಕ್ರೈಸ್ತ:**—ಅನಾದಿಯಾಗಿದೆ.

**ಸಮೀಕ್ಷಕ:**—ಅನಾದಿಯಾಗಿದ್ದರೆ, ಜಗತ್ತಿನ ಕಾರಣ ಸನಾತನವಾಯಿತು. ಮತ್ತೆ, ಅಭಾವದಿಂದ ಭಾವವನ್ನೇಕೆ ಗ್ರಹಿಸುತ್ತೀರಿ ?

**ಕ್ರೈಸ್ತ:**—ಸೃಷ್ಟಿಗೆ ಮುನ್ನ ಈಶ್ವರನ ಹೊರತು, ಯಾವ ವಸ್ತುವೂ ಇರಲಿಲ್ಲ.

---

*'ಆದಮುನನ್ನು ತನ್ನ ಸ್ವರೂಪದಲ್ಲಿ ಸೃಜಿಸಿದನು', ಎಂದರೆ ಈಶ್ವರನ ಸ್ವರೂಪವೂ ಸೃಜನಯುಕ್ತವೇ ಆಯಿತು — ಅನು.

## (ಜಗತ್ತಿನ ಕಾರಣವೇನೂ ಇಲ್ಲದಿದ್ದಲ್ಲಿ ಸೃಷ್ಟಿ ಎಲ್ಲಿಂದಾಯಿತು ?)

**ಸಮೀಕ್ಷಕ:—ಇರಲಿಲ್ಲವಾದರೆ, ಈ ಜಗತ್ತು ಎಲ್ಲಿಂದ ಆಯಿತು ?**

ಮತ್ತು ಈಶ್ವರನ ಸಾಮರ್ಥ್ಯವು ದ್ರವ್ಯವಾಗಿದೆಯೋ, ಅಥವಾ ಗುಣವಾಗಿದೆಯೋ ?

ದ್ರವ್ಯವಾಗಿದ್ದರೆ, ಈಶ್ವರನಿಂದ ಬೇರೆಯಾದ ಎರಡನೆಯ ಪದಾರ್ಥವಿದ್ದಿತು. ಮತ್ತು ಗುಣವಾಗಿದ್ದರೆ, ಗುಣದಿಂದ ದ್ರವ್ಯವೆಂದಿಗೂ ನಿರ್ಮಿತವಾಗಲಾರದು.

ಉದಾಹರಣೆಗೆ—ರೂಪದಿಂದ ಅಗ್ನಿಯೂ, ರಸದಿಂದ ನೀರೂ ಉತ್ಪನ್ನವಾಗಲಾರದು.

ಮತ್ತು **ಈಶ್ವರನಿಂದ ಜಗತ್ತು ನಿರ್ಮಿತವಾಗಿದ್ದಲ್ಲಿ, ಈಶ್ವರನದರಂತಹ ಗುಣ–ಕರ್ಮ–ಸ್ವಭಾವಗಳಿಂದ ಯುಕ್ತವಾಗಿರುತ್ತಿದ್ದಿತು.** [ಆದರೆ], ಅವನ ಗುಣ, ಕರ್ಮ, ಸ್ವಭಾವಕ್ಕೆ ಅನುಗುಣವಾಗಿಲ್ಲದಿರುವುದರಿಂದ, ಈಶ್ವರನಿಂದ ಜಗತ್ತು ನಿರ್ಮಿತವಾಗಲಿಲ್ಲ; ಆದರೆ, ಜಗತ್ತಿನ [ಉಪಾದಾನ] ಕಾರಣ, ಎಂದರೆ ಪರಮಾಣು ಮೊದಲಾದ ಹೆಸರನ್ನುಳ್ಳ ಜಡದಿಂದ ನಿರ್ಮಿತವಾಗಿದೆ, ಎಂಬುದೇ ನಿಶ್ಚಯವಾಗುತ್ತದೆ.*

ವೇದಗಳೇ ಮೊದಲಾದ ಶಾಸ್ತ್ರಗಳಲ್ಲಿ ಜಗತ್ತಿನ ಉತ್ಪತ್ತಿಯನ್ನು ಹೇಗೆ ಬರೆದಿದೆಯೋ, ಹಾಗೆಯೇ, 'ಈಶ್ವರನು ಜಗತ್ತನ್ನು ನಿರ್ಮಿಸುತ್ತಾನೆ', ಎಂದು ಅಂಗೀಕರಿಸಿರಿ!

'ಆದಮನ ಅಂತರಿಕಸ್ವರೂಪವು ಜೀವನಿಗೂ, ಮತ್ತು ಬಾಹ್ಯವು ಮನುಷ್ಯನಿಗೂ ಸದೃಶ್ಯವಾಗಿದೆ', ಎನ್ನುವುದಾದರೆ, ಹಾಗೆಯೇ ಈಶ್ವರನ ಸ್ವರೂಪವೂ ಏತಕ್ಕಿಲ್ಲ ? ಏಕೆಂದರೆ, ಆದಮನು ಈಶ್ವರನಂತೆ ಉತ್ಪನ್ನನಾದನು, ಎಂದ ಮೇಲೆ ಈಶ್ವರನು ಆದಮನಂತೆ ಅವಶ್ಯವಾಗಿಯೂ ಇರಬೇಕು! [4]

## (ಆದಮನನ್ನು ನಿರ್ಮಿಸಿ, ಏಡನ್ನಿನ ಉದ್ಯಾನದಲ್ಲಿಟ್ಟನು)

[5] ಆಗ, ಪರಮೇಶ್ವರ ಈಶ್ವರನು ಭೂಮಿಯ ಧೂಳಿನಿಂದ ಆದಮನನ್ನು ಸೃಜಿಸಿದನು. ಮತ್ತು ಅವನ ಮೂಗಿನ ಹೊಳ್ಳೆಗಳಲ್ಲಿ ಜೀವನದ ಶ್ವಾಸವನ್ನೂದಿದನು. ಮತ್ತು ಆದಮನು ಜೀವಂತಪ್ರಾಣನಾದನು!

---

*ಎಂದರೆ, ಈಶ್ವರನು ಜಗತ್ತಿನ ಉಪಾದಾನ ಕಾರಣನಲ್ಲ.—ಅನು.

**ಮತ್ತು ಪರಮೇಶ್ವರ ಈಶ್ವರನು ಏಡನ್ನಿನ ಪೂರ್ವದ ಕಡೆಗೆ ಒಂದು ಉದ್ಯಾನವನವನ್ನು ನಿರ್ಮಿಸಿದನು. ಮತ್ತು ತಾನು ಸೃಜಿಸಿದ್ದ ಆದಮನನ್ನು ಆದರಲ್ಲಿ ನೆಲೆಗೊಳಿಸಿದನು.**

**ಮತ್ತು ಆ ಉದ್ಯಾನದ ಮಧ್ಯದಲ್ಲಿ ಜೀವನದ ವೃಕ್ಷವನ್ನೂ ಮತ್ತು ಒಳಿತು-ಕೆಡಕುಗಳ ಜ್ಞಾನದ ವೃಕ್ಷವನ್ನೂ ಭೂಮಿಯಿಂದ ಮೊಳೆಯಿಸಿದನು.**

[ಬೈಬಲ್ (ತೌ). ಉತ್ಪತ್ತಿ:- ಪರ್ವ. 2; ಆ. 7 ರಿಂದ 9]

### (ಆದಮನನ್ನು ಧೂಳಿಂದ ಸೃಜಿಸಿದ್ದರಿಂದ ಅವನು ಈಶ್ವರನ ಸ್ವರೂಪವಲ್ಲ)

**ಸಮೀಕ್ಷಕ:**—ಯಾವಾಗ ಈಶ್ವರನು ಏಡನ್ನಿನಲ್ಲಿ ಉದ್ಯಾನವನ್ನು ನಿರ್ಮಿಸಿ, ಅದರಲ್ಲಿ ಆದಮನನ್ನು ಇಟ್ಟನೋ, ಆಗ ಅವನನ್ನು ಪುನಃ ಅಲ್ಲಿಂದ ಹೊರ ದೂಡಬೇಕಾಗುವುದೆಂದು ಈಶ್ವರನು ತಿಳಿದಿರಲಿಲ್ಲವೇನು? ಮತ್ತು ಈಶ್ವರನು ಆದಮ ನನ್ನು ಧೂಳಿನಿಂದ ಸೃಜಿಸಿದನಾದರೆ, ಈಶ್ವರನ ಸ್ವರೂಪವಾಗಲಿಲ್ಲ! ಒಂದುವೇಳೆ, 'ಆಗಿದೆ', ಎನ್ನುವಿರಾದರೆ, ಈಶ್ವರನೂ ಧೂಳಿನಿಂದಲೇ ಆಗಿರಬಹುದೇನೋ?

ಅವನ ಹೊಳ್ಳೆಗಳಲ್ಲಿ ಈಶ್ವರನು ಶ್ವಾಸವನ್ನು ಊದಿದನೆಂದಾದರೆ, ಆ ಶ್ವಾಸವು ಈಶ್ವರನ ಸ್ವರೂಪವಾಗಿದ್ದಿತೋ, ಅಥವಾ ಬೇರೆಯದಾಗಿದ್ದಿತೋ? ಬೇರೆಯದಾಗಿದ್ದಿತಾದರೆ, ಆದಮನು ಈಶ್ವರನ ಸ್ವರೂಪದಲ್ಲಿ ಉದ್ಭವಿಸಲಿಲ್ಲ! **'ಒಂದೇ' ಆಗಿದ್ದರೆ, ಆದಮನು ಮತ್ತು ಈಶ್ವರನು ಒಂದೇ ವಿಧದವರಾದರು!** ಮತ್ತೆ ಒಂದೇ ವಿಧದವರಾಗಿದ್ದರೆ, ಆದಮನಿಗೆ ಸದೃಶವಾಗಿ ಜನನ, ಮರಣ, ಕ್ಷಯ, ಹಸಿವು, ಬಾಯಾರಿಕೆ ಮೊದಲಾದ ದೋಷಗಳು ಈಶ್ವರನಲ್ಲಿ ಬಂದವು! ಮತ್ತೆ, ಅವನು ಈಶ್ವರನು ಹೇಗಾಗಬಲ್ಲನು?

**ಆದುದರಿಂದ, ಬೈಬಲಿನ ಈ ಮಾತು ಸರಿಯೆಂದು ತಿಳಿದುಬರುವುದಿಲ್ಲ. ಮತ್ತು ಈ ಪುಸ್ತಕವೂ ಈಶ್ವರಕೃತವಾಗಿಲ್ಲ!** [5]

### (ಆದಮನ ಪಕ್ಕೆಲುಬಿನಿಂದ ನಾರಿಯ ಸೃಷ್ಟಿ)

[6] **ಮತ್ತು ಪರಮೇಶ್ವರ ಈಶ್ವರನು ಆದಮನನ್ನು ಗಾಢನಿದ್ರೆಯಲ್ಲಿ ಒರಗಿಸಿದನು. ಮತ್ತು ಅವನು ನಿದ್ರಿಸಿಬಿಟ್ಟನು! ಆಗ, ಅವನು ಅವನ ಪಕ್ಕೆಲುಬುಗಳಿಂದ ಒಂದು ಎಲುಬನ್ನು ಹೊರತೆಗೆದನು. ಮತ್ತು ಆ ಜಾಗದಲ್ಲಿ ಮಾಂಸವನ್ನು ತುಂಬಿದನು.**

**ಮತ್ತು ಪರಮೇಶ್ವರ ಈಶ್ವರನು ಆದಮನ ಆ ಪಕ್ಕೆಲುಬಿನಿಂದ ಒಬ್ಬಳು ನಾರಿಯನ್ನು ಸೃಜಿಸಿದನು. ಮತ್ತು ಅವಳನ್ನು ಆದಮನ ಬಳಿಗೆ ಕರೆತಂದನು.**

[ಬೈಬಲ್ (ತೌ). ಉತ್ಪತ್ತಿ:-ಪರ್ವ. 2; ಆ. 21-22]

### (ಸ್ತ್ರೀಯನ್ನು ಧೂಳಿನಿಂದ ಸೃಜಿಸದೇ ಎಲುಬಿನಿಂದೇಕೆ ಮಾಡಿದ?)

ಸಮೀಕ್ಷಕ: —ಈಶ್ವರನು ಆದಮನನ್ನು ಧೂಳಿನಿಂದ ಸೃಜಿಸಿದನಾದರೆ, ಅವನ ಸ್ತ್ರೀಯನ್ನು ಧೂಳಿನಿಂದೇಕೆ ಸೃಜಿಸಲಿಲ್ಲ? ಮತ್ತು ನಾರಿಯನ್ನು ಮೂಳೆಯಿಂದ ಸೃಜಿಸಿದನಾದರೆ, ಆದಮನನ್ನು ಮೂಳೆಯಿಂದೇಕೆ ಸೃಜಿಸಲಿಲ್ಲ?

ಮತ್ತು ಹೇಗೆ ನರನಿಂದ ಉದ್ಭವಿಸಿದುದರಿಂದ, 'ನಾರಿ', ಎಂಬ ಹೆಸರು ಅಳಿಕೆಗೆ ಬಂದಿತೋ, ನಾರಿಯಿಂದ ಉದ್ಭವಿಸಿದುದರಿಂದ, 'ನರ', ಎಂಬ ಹೆಸರೂ ಕೂಡ, ಆಗಬೇಕು!

ಮತ್ತು ಅವರಲ್ಲಿ ಪರಸ್ಪರ ಪ್ರೇಮವೂ ಇರಬೇಕು! ಹೇಗೆ ಸ್ತ್ರೀಯಲ್ಲಿ ಪುರುಷನು ಪ್ರೇಮವಿಡಬೇಕೋ, ಹಾಗೆ ಪುರುಷನಲ್ಲಿ ಸ್ತ್ರೀಯೂ ಪ್ರೇಮವಿಡ ಬೇಕು!

ನೋಡಿರಿ, ವಿದ್ವಜ್ಜನರೇ! ಈಶ್ವರನ 'ಪದಾರ್ಥವಿದ್ಯೆ', ಎಂದರೆ 'ಫಿಲಾಸಫಿ' ಹೇಗೆ ಸ್ಫುಟವಾಗಿ ಮೂಡುತ್ತಿದೆ? ಆದಮನ ಪಕ್ಕೆಲುಬೊಂದನ್ನು ತೆಗೆದುಕೊಂಡು, ನಾರಿಯನ್ನು ನಿರ್ಮಿಸಿದನಾದರೆ, ಮಾನವರೆಲ್ಲರಲ್ಲಿಯೂ ಒಂದೊಂದು ಪಕ್ಕೆಲುಬು ಕಡಿಮೆ ಏಕಿರುವುದಿಲ್ಲ?

ಮತ್ತು ಸ್ತ್ರೀಯ ಶರೀರದಲ್ಲಿ 'ಒಂದು' ಪಕ್ಕೆಲುಬಿರಬೇಕು! ಏಕೆಂದರೆ, ಅವಳು 'ಒಂದು' ಪಕ್ಕೆಲುಬಿನಿಂದ ನಿರ್ಮಿತಳಾಗಿದ್ದಾಳೆ, ಯಾವ ಸಾಮಗ್ರಿಯಿಂದ ಸಮಸ್ತ ಜಗತ್ತನ್ನೂ ಸೃಜಿಸಿದನೋ, ಆ ಸಾಮಗ್ರಿಯಿಂದ ಸ್ತ್ರೀಯ ಶರೀರವು ನಿರ್ಮಿತವಾಗಲು ಶಕ್ಯವಿದ್ದಿಲ್ಲವೇನು?

**ಆದುದರಿಂದ, ಈ ಬೈಬಲಿನ ಸೃಷ್ಟಿಕ್ರಮವು ಸೃಷ್ಟಿವಿದ್ಯೆಗೆ ವಿರುದ್ಧವಾಗಿದೆ!**

**[6]**

### (ಶೈತಾನನು ಆದಮ ಮತ್ತು ಅವನ ಸ್ತ್ರೀಯನ್ನು ಹಾದಿತಪ್ಪಿಸಿದನು; ಮೂವರಿಗೂ ಶಾಪ!)

[7] ಈಗ, ಯಾವುದನ್ನು ಪರಮೇಶ್ವರ ಈಶ್ವರನು ನಿರ್ಮಿಸಿದ್ದನೋ, ಆ ಪ್ರತಿಯೊಂದು ಪ್ರಾಣಿಗಿಂತಲೂ 'ಸರ್ಪ'ವು ಧೂರ್ತವಾಗಿದ್ದಿತು. ಮತ್ತು ಅದು ಸ್ತ್ರೀಯನ್ನು—

"ನಿಜವಾಗಿ ಈಶ್ವರನು—'ನೀನು ಈ ಉದ್ಯಾನದ ಪ್ರತಿಯೊಂದು ವೃಕ್ಷ ದಿಂದಲೂ [ಹಣ್ಣನ್ನು] ತಿನ್ನಬೇಡ', ಎಂದು ಹೇಳಿದ್ದಾನೋ?", ಎಂದು ಕೇಳಿತು.

ಮತ್ತು ಸ್ತ್ರೀಯು ಸರ್ಪಕ್ಕೆ—

"ನಾವೇನೋ ಈ ಉದ್ಯಾನದ ವೃಕ್ಷಗಳ ಹಣ್ಣನ್ನು ತಿನ್ನುತ್ತೇವೆ!

"ಆದರೆ, 'ಯಾವುದು ಉದ್ಯಾನದ ನಡುವೆ ಇದೆಯೋ, ಆ ವೃಕ್ಷದ ಫಲವನ್ನು ನೀನು ತಿನ್ನಬೇಡ; ಮತ್ತು ಮುಟ್ಟಬೇಡ! ಇಲ್ಲದಿದ್ದರೆ, ಎಲ್ಲಿಯಾದರೂ ಸತ್ತು ಹೋದೀಯೆ!', ಎಂದು ಈಶ್ವರನು ಹೇಳಿದ್ದಾನೆ.", ಎಂದು ಹೇಳಿದಳು.

ಆಗ ಸರ್ಪವು—"ನಿಶ್ಚಯವಾಗಿಯೂ ನೀನು ಸಾಯುವುದಿಲ್ಲ!

"ಏಕೆಂದರೆ, ಯಾವ ದಿನ ನೀನು ಅದನ್ನು ತಿನ್ನುವೆಯೋ, ಅಂದು ನಿನ್ನ ಕಣ್ಣುಗಳು ತೆರೆದುಕೊಳ್ಳುವುವು! ಮತ್ತು ಒಳಿತು-ಕೆಡಕುಗಳನ್ನು ಗುರುತಿಸುವುದರಲ್ಲಿ ಈಶ್ವರನಿಗೆ ಸಮಾನಳಾಗಿ ಹೋಗುವೆ, ಎಂದು ಈಶ್ವರನು ತಿಳಿದಿದ್ದಾನೆ", ಎಂದು ಹೇಳಿತು.

ಮತ್ತು ಯಾವಾಗ ಸ್ತ್ರೀಯು ಆ ವೃಕ್ಷದ ಫಲವು ತಿನ್ನುವುದಕ್ಕೆ ಸುರುಚಿಕರವೂ ಮತ್ತು ನೋಡುವುದಕ್ಕೆ ಸುಂದರವೂ ಮತ್ತು ಬುದ್ಧಿಯನ್ನು ಕೊಡಲು ಶಕ್ತವೂ ಆಗಿದೆ, ಎಂಬುದನ್ನು ಕಂಡಳೋ, ಆಗ, ಅದರ ಹಣ್ಣುಗಳಿಂದ [ಹಲವನ್ನು] ತೆಗೆದುಕೊಂಡಳು ; ಮತ್ತು ತಿಂದಳು! ಮತ್ತು ತನ್ನ ಪತಿಗೂ ಕೊಟ್ಟಳು ; ಮತ್ತು ಅವನೂ ತಿಂದನು!

ಆಗ ಅವರಿಬ್ಬರ ಕಣ್ಣುಗಳೂ ತೆರೆಯಲ್ಪಟ್ಟವು ! ಮತ್ತು ಅವರು—'ನಾವು ನಗ್ನರಾಗಿದ್ದೇವೆ', ಎಂದು ತಿಳಿದುಕೊಂಡರು. ಆದ್ದರಿಂದ! ಅವರು ಅತ್ತಿಯ ಮರದ ಎಲೆಗಳನ್ನು ಸೇರಿಸಿ, ಹೊಲಿದರು. ಮತ್ತು ತಮಗಾಗಿ ಹೊದಿಕೆಗಳನ್ನು ಮಾಡಿಕೊಂಡರು!

ಆಗ ಪರಮೇಶ್ವರ ಈಶ್ವರನು ಸರ್ಪಕ್ಕೆ—

"ನೀನು ಈ ಕೆಲಸ ಮಾಡಿರುವೆಯಾದ ಕಾರಣ, ಸಮಸ್ತ ಮೃಗಗಳಲ್ಲಿಯೂ ಮತ್ತು ಪ್ರತಿಯೊಂದು ಕಾಡಿನ ಪಶುವಿಗಿಂತಲೂ ಹೆಚ್ಚು ಶಾಪಗ್ರಸ್ತನಾಗುವೆ! ನೀನು ನಿನ್ನ ಹೊಟ್ಟೆಯ ಮೇಲೆ ತೆವಳಿಕೊಂಡು ನಡೆಯುವೆ. ಮತ್ತು ನಿನ್ನ ಜೀವನಪೂರ್ತಿ ಧೂಳನ್ನು ತಿನ್ನುತ್ತಾ ಸಾಗುವೆ!

"ಮತ್ತು ನಾನು ನಿನ್ನ, ಮತ್ತು ಸ್ತ್ರೀಯ ನಡುವೆ, ಮತ್ತು ನಿನ್ನ ವಂಶದ, ಹಾಗೂ ಅವಳ ವಂಶದ ನಡುವೆ ವೈರವನ್ನುಂಟುಮಾಡುವೆನು! ಅದು* ನಿನ್ನ ತಲೆಯನ್ನು ತುಳಿಯುವುದು! ಮತ್ತು ನೀನು ಅದರ ಹಿಮ್ಮಡಿಯನ್ನು ಕಚ್ಚುವೆ!", ಎಂದು ಹೇಳಿದನು.

ಮತ್ತು ಅವನು ಸ್ತ್ರೀಯಳಿಗೆ—

---

*ಅವಳ ವಂಶ—ಅನು.

"ನಾನು ನಿನಗೆ ನೋವನ್ನೂ, ಗರ್ಭಧಾರಣ [ಶ್ರಮ]ವನ್ನೂ ಬಹಳ ಹೆಚ್ಚಿಸುವೆನು! ನೀನು ನೋವಿನಿಂದ ಮಗುವನ್ನು ಹೆರುವೆ! ಮತ್ತು ನಿನ್ನ ಬಯಕೆ ನಿನ್ನ ಪತಿಯ ಮೇಲೆ ಆಗುವುದು! ಮತ್ತು ಅವನು ನಿನ್ನ ಮೇಲೆ ಅಧಿಕಾರ ನಡೆಯಿಸುವನು!", ಎಂದು ಹೇಳಿದನು.

ಮತ್ತು ಅವನು ಆದಮನಿಗೆ—

"ನೀನು ನಿನ್ನ ಪತ್ನಿಯ ಮಾತನ್ನು ಒಪ್ಪಿದ್ದೀಯೆ. ಮತ್ತು ಯಾವ ವೃಕ್ಷದ [ಫಲ]ವನ್ನು ತಿನ್ನಬಾರದೆಂದು, ನಿನ್ನನ್ನು ನಿಷೇಧಿಸಿದ್ದೆನೋ, ಅದನ್ನು ತಿಂದಿದ್ದೀಯೆ! ಈ ಕಾರಣದಿಂದ, ಭೂಮಿ ನಿನ್ನ ಪಾಲಿಗೆ ಅಭಿಶಪ್ತವಾಗಿದೆ! ನಿನ್ನ ಇಡೀ ಜೀವನದಲ್ಲಿಯೇ ನೀನು ಶ್ರಮದಿಂದಲೇ ಅದರಿಂದ ಭೋಗ ಪಡೆದುಕೊಳ್ಳುವೆ!

"ಮತ್ತು ಅದು ನಿನಗಾಗಿ ಮುಳ್ಳುಗಳನ್ನೂ, ಕಳೆಗಳನ್ನೂ ಚಿಗುರಿಸುವುದು! ಮತ್ತು ನೀನು ಹೊಲದ ಪೈರು-ಪಚ್ಚೆಗಳನ್ನು ತಿನ್ನುವೆ!", ಎಂದು ಹೇಳಿದನು.

[ಬೈಬಲ್ (ತೌ). ಉತ್ಪತ್ತಿ :-ಪರ್ವ-3 ; ಆ-1-7; 14-18]

## (ಅಪರಾಧವಿಲ್ಲದೇ ಶೈತಾನನನ್ನು ದುಷ್ಟನನ್ನಾಗಿ ಏಕೆ ಮಾಡಿದನು?)

**ಸಮೀಕ್ಷಕ :**—ಕ್ರೈಸ್ತರ ಈಶ್ವರನು ಸರ್ವಜ್ಞನಾಗಿದ್ದಿದ್ದರೆ, ಈ ಧೂರ್ತ ಸರ್ಪವನ್ನು, ಎಂದರೆ ಶೈತಾನನನ್ನು ಹುಟ್ಟಿಸುತ್ತಿದ್ದನೇಕೆ ? ಮತ್ತು ಹುಟ್ಟಿಸಿದನಾದರೆ, ಆ ಈಶ್ವರನೇ ಅಪರಾಧಕ್ಕೆ ಭಾಗಿಯಾಗಿದ್ದಾನೆ! ಏಕೆಂದರೆ, ಅವನು ಅದನ್ನು ದುಷ್ಟವಾಗಿ ಸೃಜಿಸದೇ ಇದ್ದಿದ್ದರೆ, ಅದು ದುಷ್ಟತ್ವವನ್ನೇಕೆ ಮಾಡುತ್ತಿದ್ದಿತು ?

ಮತ್ತು ಅವನು ಪೂರ್ವಜನ್ಮವನ್ನು ಒಪ್ಪುತ್ತಿಲ್ಲವಾದರೆ, **ಅಪರಾಧವಿಲ್ಲದೆಯೇ ಅದನ್ನು ಪಾಪಿಯಾಗಿ ಏತಕ್ಕೆ ಸೃಜಿಸಿದನು ?**

ಮತ್ತು, ಸತ್ಯವನ್ನು ಕೇಳುವಿರಾದರೆ, **ಅದು ಸರ್ಪವಾಗಿರಲಿಲ್ಲ ; ಮನುಷ್ಯನಾಗಿತ್ತು !** ಏಕೆಂದರೆ, ಮನುಷ್ಯನಾಗಿರದಿದ್ದರೆ, ಮನುಷ್ಯನ ಭಾಷೆಯನ್ನು ಹೇಗೆ ಮಾತನಾಡಲು ಸಮರ್ಥವಾಗುತ್ತಿತ್ತು ?

## (ಸುಳ್ಳುಗಾರನಿಗೆ 'ಶೈತಾನ' ಎನ್ನುತ್ತಾರೆ ; ಸತ್ಯವಾದಿಗಲ್ಲ)

ಮತ್ತು ಯಾವನು ತಾನೇ ಸುಳ್ಳುಗಾರನಾಗಿದ್ದು, ಬೇರೆಯವನನ್ನು ಸುಳ್ಳು ದಾರಿಯಲ್ಲಿ ನಡೆಯಿಸುವನೋ, ಅವನನ್ನು **'ಶೈತಾನ'**,ಎನ್ನಬೇಕು. ಆದರೆ, ಈ ಸ್ಥಳದಲ್ಲಿ ಶೈತಾನನು ಸತ್ಯವಾದಿಯಾಗಿದ್ದನು! ಇದೇ ಕಾರಣದಿಂದ, ಅವನು ಸ್ತ್ರೀಯನ್ನು ದುಷ್ಪ್ರೇರಣೆಗೆ ಈಡಾಗಿಸಲಿಲ್ಲ. ಆದರೆ, ಸತ್ಯವನ್ನು ಹೇಳಿದನು!

ಮತ್ತು ಈಶ್ವರನು ಆದಮನಿಗೂ ಮತ್ತು ಹವ್ವಾಳಿಗೂ—"ಇದನ್ನು ತಿನ್ನುವುದರಿಂದ ನೀವು ಸತ್ತು ಹೋಗುವಿರಿ.", ಎಂದು ಸುಳ್ಳನ್ನು ಹೇಳಿದನು.

ಆ ವೃಕ್ಷವು ಜ್ಞಾನದಾಯಕವೂ ಮತ್ತು ಅಮರರನ್ನಾಗಿ ಮಾಡುವಂತಹದೂ ಆಗಿದ್ದಿತು. ಎನ್ನುವಾಗ, ಅದರ ಫಲಗಳನ್ನು ತಿನ್ನುವುದನ್ನು ನಿಷೇಧಿಸಿದನೇಕೆ ? ಮತ್ತು ನಿಷೇಧಿಸಿದನಾದರೆ, ಆ ಈಶ್ವರನು ಸುಳ್ಳುಗಾರನೂ. ಹಾದಿ ತಪ್ಪಿಸುವವನೂ ಆಗಿ ಉಳಿದನು. ಏಕೆಂದರೆ. ಆ ವೃಕ್ಷದ ಫಲಗಳು ಮಾನವರಿಗೆ ಜ್ಞಾನದಾಯಕವೂ ಮತ್ತು ಸುಖಕಾರಕವೂ ಆಗಿದ್ದುವು! ಅಜ್ಞಾನಪ್ರದವೂ ಮತ್ತು ಮೃತ್ಯುಕಾರಕವೂ ಆಗಿರಲಿಲ್ಲ!

ಈಶ್ವರನು ಹಣ್ಣುಗಳನ್ನು ತಿನ್ನುವುದನ್ನು ನಿಷೇಧಿಸಿದನಾದರೆ, ಆ ವೃಕ್ಷದ ಉತ್ಪತ್ತಿಯನ್ನೇತಕ್ಕಾಗಿ ಮಾಡಿದ್ದನು ? ತನ್ನ ಸಲುವಾಗಿ ಮಾಡಿಕೊಂಡಿದ್ದನಾದರೆ, ತಾನು ಅಜ್ಞಾನಿಯೂ, ಮೃತ್ಯು-ಧರ್ಮಯುಕ್ತನೂ ಆಗಿದ್ದನೇನು ? ಮತ್ತು ಬೇರೆಯವರಿಗಾಗಿ ಮಾಡಿದ್ದನಾದರೆ, ಫಲಗಳನ್ನು ತಿನ್ನುವುದರಲ್ಲಿ ಅಪರಾಧವೇನೇನೂ ಆಗಲಿಲ್ಲ!

ಮತ್ತು ಈ ದಿನಗಳಲ್ಲಿ ಯಾವ ವೃಕ್ಷವೂ ಕೂಡ. ಜ್ಞಾನಕಾರಕವೂ ಮತ್ತು ಮೃತ್ಯುನಿವಾರಕವೂ ಆಗಿರುವುದು ಕಂಡುಬರುತ್ತಿಲ್ಲ! ಈಶ್ವರನು ಅದರ ಬೀಜವನ್ನೂ ನಾಶಮಾಡಿಬಿಟ್ಟನೇನು ?

## (ಅಪರಾಧವಿಲ್ಲದೇ ಮೂವರಿಗೂ ಶಾಪನೀಯುವುದು ಅನ್ಯಾಯವಾಗಿತ್ತು)

ಇಂತಹ ನಡೆಗಳಿಂದ ಮಾನವನೂ ಕೂಡ ಛಲಿ, ಕಪಟಿಯಾಗಿ ಹೋಗುತ್ತಾನೆ ! ಎಂದ ಮೇಲೆ, ಈಶ್ವರನು ಹಾಗೆ ಏಕಾಗಲಿಲ್ಲ ? **ಏಕೆಂದರೆ, ಯಾವನೊಬ್ಬನು ಬೇರೆಯವನಿಗೆ ಛಲ-ಕಪಟಗಳನ್ನು ಮಾಡುತ್ತಾನೋ, ಅವನು ಛಲಿ, ಕಪಟಿ ಆಗದಿರುವನೆಂತು?**

ಮತ್ತು ಈ ಮೂವರಿಗೂ ಈಶ್ವರನು ಕೊಟ್ಟ ಶಾಪವು, ಅಪರಾಧವಿಲ್ಲದೆಯೇ ಕೊಟ್ಟುದಾಗಿದೆ. ಮತ್ತೆ, ಆ ಈಶ್ವರನು ಅನ್ಯಾಯಕಾರಿಯೂ ಆದನು! ಮತ್ತು ಈ ಶಾಪ ಈಶ್ವರನಿಗೇ ತಾಕಬೇಕು ! ಏಕೆಂದರೆ, ಅವನು ಸುಳ್ಳನ್ನಾಡಿದನು. ಮತ್ತು ಅವರನ್ನು ದುಷ್ಪ್ರೇರಣೆಗೆ ಈಡು ಮಾಡಿದನು.

ನೋಡಿರಿ. ಈ 'ಫಿಲಾಸಫಿ'ಯನ್ನು ! ನೋವಿಲ್ಲದೇ ಗರ್ಭಧಾರಣ ಮತ್ತು ಸಂತತಿಯ ಜನನ ಎಂದಾದರೂ ಆಗಬಲ್ಲದಾಗಿದ್ದಿತೋ ?

ಮತ್ತು ಶ್ರಮವಿಲ್ಲದೇ ಯಾವನಾದರೂ ತನ್ನ ಜೀವನ-ನಿರ್ವಾಹವನ್ನು ಮಾಡಬಲ್ಲನೇನು ?

ಮೊದಲು ಮುಳ್ಳು ಮೊದಲಾದ ವೃಕ್ಷಗಳಿರಲಿಲ್ಲವೇನು ?

ಮತ್ತು ಶಾಕ-ಪತ್ರಗಳ ಭಕ್ಷಣವು ಈಶ್ವರನ ಹೇಳಿಕೆಯಿಂದ, ಮಾನವರೆಲ್ಲರಿಗೂ ಉಚಿತವಾಯಿತೆಂದ ಮೇಲೆ. ಮುಂದೆ ನಡೆದು, ಮಾಂಸಭಕ್ಷಣವನ್ನು ಬೈಬಲಿನಲ್ಲಿ ಬರೆದಿರುವುದು ತಪ್ಪೇಕಲ್ಲ ?

ಮತ್ತು ಅದು* ಸತ್ಯವಾಗಿರುವುದಾದರೆ, ಇದು† ಸುಳ್ಳಾಗಿದೆ!

ಆದಮನ ಅಪರಾಧ ಎಷ್ಟು ಮಟ್ಟಿಗೂ ಸಿದ್ಧವಾಗದಿರುವಾಗ, ಕ್ರೈಸ್ತರು ಆದಮನ ಅಪರಾಧದಿಂದ, [ಅವನ] ಸಂತತಿಯಾದ ಕಾರಣ, ಮಾನವರೆಲ್ಲರನ್ನೂ ಅಪರಾಧಿಗಳೆಂದು ಏತಕ್ಕೆ ಹೇಳುತ್ತಾರೆ ?

ಆಹಾ ! ಇಂತಹ ಪುಸ್ತಕ ಮತ್ತು ಇಂತಹ ಈಶ್ವರನು ಎಂದಿಗಾದರೂ ಬುದ್ಧಿವಂತರ ಮುಂದೆ [ಅಂಗೀಕರಿಸಲು] 'ಯೋಗ್ಯ', ಎನಿಸುವುದು ಶಕ್ಯವೇ ? [7]

(ಆದಮನನ್ನು ಏಡನ್ನಿನ ಉದ್ಯಾನದಿಂದ ಹೊರದೂಡಿದನು)

[8] ಮತ್ತು ಪರಮೇಶ್ವರ ಈಶ್ವರನು—

"ನೋಡಿರಿ! ಆದಮನು ಒಳಿತು-ಕೆಡಕುಗಳನ್ನು ತಿಳಿದುಕೊಳ್ಳುವುದರಲ್ಲಿ, ನಮ್ಮಲ್ಲಿ ಒಬ್ಬನಿಗೆ ಸಮನಾಗಿ ಹೋದನು. ಆದುದರಿಂದ, ಈಗ ಅವನು ತನ್ನ ಕೈಯನ್ನು ಚಾಚಿ, ಜೀವನದ ವೃಕ್ಷದಿಂದಲೂ ತೆಗೆದುಕೊಂಡು, ತಿಂದು, ಅಮರನಾಗಿ ಹೋಗುವಂತೆ ಆಗದಿರಲಿ!", ಎಂದನು.

ಆದುದರಿಂದ ಅವನು ಆದಮನನ್ನು ಹೊರಹಾಕಿದನು. ಮತ್ತು ಏಡನ್ನಿನ ಉದ್ಯಾನದ ಪೂರ್ವದ ಕಡೆಗೆ ಕರೋಬೀಮರನ್ನು‡ ನಿಲ್ಲಿಸಿದನು. ಮತ್ತು ಥಳಥಳಿಸುತ್ತಾ ನಾಲ್ಕು ಕಡೆಗೂ ತಿರುಗುತ್ತಿದ್ದ ಖಡ್ಗವನ್ನು ಜೀವನದ ವೃಕ್ಷದ ಮಾರ್ಗದ ರಕ್ಷಣೆ ಮಾಡುವಂತೆ [ನೇಮಿಸಿದನು].

[ಬೈಬಲ್ (ತೌ). ಉತ್ಪತ್ತಿ:– ಪರ್ವ. 3; ಆ. 22, 24]

---

*ಎಂದರೆ, ಶಾಕಾಹಾರ.—ಸಂ.

†ಎಂದರೆ, ಮಾಂಸಾಹಾರ.—ಸಂ.

‡ಒಂದು ಜನಾಂಗ–ವಿಶೇಷ. Cherubems.—ಅನು.

ಈ ಹೆಸರುಗಳ ಉಚ್ಚಾರಣೆಯಲ್ಲಿ ಏಕರೂಪತೆ ಇಲ್ಲದಿರುವುದರಿಂದ, ಪಾದ–ಟಿಪ್ಪಣಿಗಳಲ್ಲಿ ಹೆಸರುಗಳನ್ನು ರೋಮನ್ ಲಿಪಿಯಲ್ಲೂ ತೋರಿಸಲಾಗಿದೆ.—ಸಂ.

## (ಕ್ರೈಸ್ತರ ಈಶ್ವರನು ಭ್ರಾಂತ ಮನುಷ್ಯನಾಗಿದ್ದನು)

ಸಮೀಕ್ಷಕ:— 'ಅಲ್ಲಾ! ಜ್ಞಾನದಲ್ಲಿ ನಮಗೆ ಸಮಾನನಾದನು', ಎಂಬ ಈರ್ಷ್ಯೆ ಮತ್ತು ಭ್ರಾಂತಿ ಈಶ್ವರನಿಗೆ ಏತಕ್ಕಾಯಿತು ? ಇದೇನಾದರೂ ಕೆಟ್ಟ ವಿಷಯ ವಾಯಿತೇ ? ಈ ಸಂದೇಹ ತಾನೇ ಏತಕ್ಕೆ ಉಂಟಾಯಿತು ? ಏಕೆಂದರೆ, **ಈಶ್ವರನಿಗೆ ಸಮನಾಗಿ ಎಂದಿಗೂ, ಯಾವನೂ ಆಗಲಾರನು!**

ಮತ್ತು ಈ ಲೇಖನದಿಂದ, 'ಅವನು ಈಶ್ವರನಾಗಿರಲಿಲ್ಲ: ಆದರೆ, ಯಾವನೋ ವಿಶಿಷ್ಟ ಮಾನವನಾಗಿದ್ದನು', ಎಂದೂ ಕೂಡ, ಸಿದ್ಧವಾಗುತ್ತದೆ.

**ಬೈಬಲಿನಲ್ಲಿ ಎಲ್ಲಿ-ಎಲ್ಲಿ ಈಶ್ವರನ ವಿಷಯ ಬರುತ್ತದೋ, ಅಲ್ಲಿ ಮನುಷ್ಯನಿಗೆ ಸಮನಾಗಿಯೇ ಬರೆದಿರುವುದು ಕಂಡುಬರುತ್ತದೆ!**

ಈಗ ನೋಡಿರಿ! **ಆದಮನ ಜ್ಞಾನದ ವೃದ್ಧಿಯಿಂದ ಈಶ್ವರನು ಎಷ್ಟು ದುಃಖಿತನಾದನು ?** ಮತ್ತು ಪುನಃ ಅಮರ-ವೃಕ್ಷದ ಫಲಗಳನ್ನು ತಿನ್ನುವುದರಲ್ಲಿ ಎಷ್ಟು ಈರ್ಷ್ಯೆಪಟ್ಟನು ?

ಮತ್ತು, ಮೊದಲು, ಆದಮನನ್ನು ಉದ್ಯಾನದಲ್ಲಿರಿಸಿದಾಗ, 'ಇವನನ್ನು ಮರಳಿ ಹೊರಹಾಕಬೇಕಾಗುವುದು'. ಎಂಬ ಭವಿಷ್ಯತ್ತಿನ ಜ್ಞಾನ ಅವನಿಗೆ ಇರಲಿಲ್ಲ ವೇನು?

ಆದುದರಿಂದ, **ಕ್ರೈಸ್ತರ ಈಶ್ವರ ಸರ್ವಜ್ಞನಾಗಿರಲಿಲ್ಲ.** ಮತ್ತು **ಹೊಳೆಯುವ ಖಡ್ಗದ ಪಹರೆಯನ್ನಿಟ್ಟನು! ಇದೂ ಕೂಡ, ಮನುಷ್ಯನ ಕಾರ್ಯವೇ; ಈಶ್ವರನ ದಲ್ಲ!** [8]

## ('ಹಾಬೀಲ'ನ ಕಾಣಿಕೆ ಒಪ್ಪಿಗೆ! 'ಕೈನ'ನದಲ್ಲ)

**[9]** ಅದೆಷ್ಟೋ ದಿನಗಳು ಆದಮೇಲೆ, ಹೇಗೆ ಆಯಿತೆಂದರೆ—

'ಕೈನ'*ನು ಭೂಮಿಯ ಫಲಗಳಿಂದ ಪರಮೇಶ್ವರನಿಗಾಗಿ ಕಾಣಿಕೆಯನ್ನು ತಂದನು.

ಮತ್ತು 'ಹಾಬೀಲ'ನೂ† ಕೂಡ, ತನ್ನ ಹಿಂಡಿನಿಂದ ಚೊಚ್ಚಲ, ಹಾಗೂ ದಪ್ಪ ದಪ್ಪವಾದ [ಕುರಿ]ಯನ್ನು ತಂದನು. ಮತ್ತು ಪರಮೇಶ್ವರನು ಹಾಬೀಲ ನನ್ನು, ಹಾಗೂ ಅವನ ಕಾಣಿಕೆಯನ್ನು ಆದರಿಸಿದನು.

---

*Cain. †Abel.

ಆದರೆ, ಕೈನನನ್ನು ಮತ್ತು ಅವನ ಕಾಣಿಕೆಯನ್ನು ಆದರಿಸಲಿಲ್ಲ. ಆದುದರಿಂದ, ಕೈನನು ಅತಿ ಕುಪಿತನಾದನು. ಮತ್ತು ತನ್ನ ಮೋರೆಯನ್ನು ಊದಿಸಿಕೊಂಡನು.

ಆಗ ಪರಮೇಶ್ವರನು ಕೈನನನ್ನು ಕುರಿತು—

"ನೀನೇಕೆ ಕ್ರುದ್ಧನಾಗಿದ್ದೀಯೆ ? ಮತ್ತು ನಿನ್ನ ಮೋರೆ ಏಕೆ ಊದಿಕೊಂಡಿತು ?", ಎಂದು ಕೇಳಿದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 1; ಅ. 3-6]

## (ಕ್ರೈಸ್ತರ ಮಾಂಸಾಹಾರಿಯಾದ ಈಶ್ವರನು ಮಾತನಾಡುತ್ತಿದ್ದನು)

ಸಮೀಕ್ಷಕ:—ಈಶ್ವರು ನಮಾಂಸಾಹಾರಿಯಾಗಿರದಿದ್ದರೆ, ಕುರಿಯ ಕಾಣಿಕೆಯ, ಹಾಗೂ ಹಾಬೀಲನ ಸತ್ಕಾರವನ್ನೂ, ಮತ್ತು ಕೈನನ, ಹಾಗೂ ಅವನ ಕಾಣಿಕೆಯ ತಿರಸ್ಕಾರವನ್ನೂ ಮಾಡುತ್ತಿದ್ದನೇತಕ್ಕೆ ? ಮತ್ತು ಈ ಜಗಳವನ್ನು ಹಚ್ಚುವ, ಮತ್ತು ಹಾಬೀಲನ ಸಾವಿನ ಕಾರಣವೂ ಕೂಡ, ಈಶ್ವರನೇ ಆದನು! ಹೇಗೆ ಮಾನವರು ಪರಸ್ಪರ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಾರೋ, ಹಾಗೆಯೇ ಕ್ರೈಸ್ತರ ಈಶ್ವರನ ಮಾತುಗಳೂ ಇವೆ. ಉದ್ಯಾನಕ್ಕೆ ಬರುವುದು ಹೋಗುವುದು. ಅದನ್ನು ನಿರ್ಮಿಸುವುದೂ ಕೂಡ, ಮಾನವರ ಕಾರ್ಯವಾಗಿದೆ!

ಇದರಿಂದ, ಈ ಬೈಬಲ್ ಮಾನವರಚಿತವಾಗಿದೆ; ಈಶ್ವರನದಲ್ಲವೆಂದು ಸಿದ್ಧವಾಗುತ್ತದೆ! [9]

## (ಭೂಮಿಯಿಂದ ರಕ್ತವು ಕೂಗಿತು!)

[10] ಪರಮೇಶ್ವರನು ಕೈನನನ್ನು—

"ನಿನ್ನ ಸೋದರ ಹಾಬೀಲನೆಲ್ಲಿದ್ದಾನೆ ?", ಎಂದು ಕೇಳಿದನು. ಆಗ ಅವನು—

"ನಾನು ತಿಳಿಯೆನು. ನಾನು ನನ್ನ ಸೋದರನ ರಕ್ಷಕನೇನು ?", ಎಂದನು. ಆಗ ಅವನು—

"ನೀನೇನು ಮಾಡಿದೆ ? ನಿನ್ನ ಸೋದರನ ರಕ್ತದ ಕರೆ ಭೂಮಿಯಿಂದ ನನ್ನನ್ನು ಕರೆಯುತ್ತಿದೆ. ಮತ್ತು ಈಗ ನೀನು ಪೃಥಿವಿಯಿಂದ ಶಪ್ತನಾಗಿದ್ದೀಯೆ.", ಎಂದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 4; ಅ. 9-11]

ಸಮೀಕ್ಷಕ:—ಈಶ್ವರನು ಕೈನನನ್ನು ಕೇಳದೆಯೇ, ಹಾಬೀಲನ ಸ್ಥಿತಿಯನ್ನು ತಿಳಿದಿರಲಿಲ್ಲವೇನು ? ಮತ್ತು ರಕ್ತದ ಕರೆ ಭೂಮಿಯಿಂದ ಎಂದಿಗಾದರೂ, ಯಾರನ್ನಾದರೂ ಕೂಗಬಲ್ಲದೇ ? ಈ ಮಾತುಗಳೆಲ್ಲವೂ ಅವಿದ್ವಾಂಸರದಾಗಿವೆ!

ಆದುದರಿಂದ, ಈ ಪುಸ್ತಕವು ಈಶ್ವರನ ರಚನೆಯಾಗಲೀ, ಅಥವಾ ವಿದ್ವಾಂಸನ ರಚನೆಯಾಗಲೀ ಆಗಿರಲಾರದು. [10]

## (ಮುನ್ನೂರು ವರ್ಷಗಳ ತನಕ ಈಶ್ವರನ ಓಡಾಟ ಮೂರ್ಖತನ)

[11] ಮತ್ತು ಹನೂಕ*ನು ಮತೂಸಿಲಹ† ನ ಉತ್ಪತ್ತಿಯ ನಂತರ, 300 ವರ್ಷಗಳವರೆಗೆ ಈಶ್ವರನ ಜೊತೆ ಜೊತೆಯಲ್ಲಿ ಓಡಾಡುತ್ತಿದ್ದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 5; ಆ. 22]

ಸಮೀಕ್ಷಕ:—ಅಲ್ಲಾ! ಕ್ರೈಸ್ತರ ಈಶ್ವರನು ಮನುಷ್ಯನಲ್ಲವಾಗಿದ್ದಿದ್ದರೆ, 'ಹನೂಕ'ನ ಜೊತೆ-ಜೊತೆಯಾಗಿ, ಹೇಗೆ ಓಡಾಡುತ್ತಿದ್ದನು?

ಇವನಿಗಿಂತ ವೇದೋಕ್ತನಾದ ನಿರಾಕಾರ ಈಶ್ವರನನ್ನೇ ಕ್ರೈಸ್ತರು ಅಂಗೀಕರಿಸುವರಾದರೆ, ಅವರ ಕಲ್ಯಾಣವಾದೀತು! [11]

## (ಈಶ್ವರನ ಪಶ್ಚಾತ್ತಾಪ ಮತ್ತು ಸೃಷ್ಟಿನಾಶ)

[12] ಮತ್ತು, ಅವರಿಂದ ಹೆಣ್ಣು ಮಕ್ಕಳು ಹುಟ್ಟಿದರು.

ಆಗ ಈಶ್ವರನ ಪುತ್ರರು ಆದಮನ ಪುತ್ರಿಯರು ಸುಂದರಿಯರಾಗಿರುವುದನ್ನು ನೋಡಿದರು. ಮತ್ತು ಅವರಲ್ಲಿ ಯಾರನ್ನು ಅವರು ಬಯಸಿದರೋ, ಅವರೊಂದಿಗೆ ವಿವಾಹ ಮಾಡಿಕೊಂಡರು.

ಮತ್ತು ಆ ದಿನಗಳಲ್ಲಿ ಪೃಥಿವಿಯಲ್ಲಿ ದಾನವರಿದ್ದರು.‡

ಮತ್ತು ಆಮೇಲೆ ಕೂಡ, ಈಶ್ವರನ ಪುತ್ರರು ಆದಮನ ಯಾವಾಗ ಪುತ್ರಿಯರನ್ನು ಸಂಧಿಸಿದರೋ, ಆಗ, ಅವರಿಂದ, ಬಲಶಾಲಿಗಳೂ, ಅನಂತರ, ಪ್ರಸಿದ್ಧರೂ ಆದ ಮಕ್ಕಳು ಜನಿಸಿದರು.

ಮತ್ತು ಈಶ್ವರನು—'ಆದಮನ ದುಷ್ಟತನ ಭೂಮಿಯ ಮೇಲೆ ಬಹಳವಾಯಿತು. ಮತ್ತು ಅವನ ಮನಸ್ಸಿನ ಯೋಜನೆ ಮತ್ತು ಭಾವನೆ ಪ್ರತಿದಿನವೂ ಕೇವಲ ಕೆಟ್ಟದೇ ಆಗುತ್ತಿದೆ', ಎಂಬುದನ್ನು ನೋಡಿದನು.

ಆಗ, ಪೃಥಿವಿಯ ಮೇಲೆ ಮನುಷ್ಯನನ್ನು ಉತ್ಪನ್ನ ಮಾಡಿದುದಕ್ಕಾಗಿ, ಪರಮೇಶ್ವರನು ಪಶ್ಚಾತ್ತಾಪಪಟ್ಟನು. ಮತ್ತು ಅವನಿಗೆ ಬಹಳ ಶೋಕವಾಯಿತು. ಆಗ ಪರಮೇಶ್ವರನು—

---

*Henoch. †Mathusala.

‡ಈ ದಾನವರನ್ನು ಸೃಜಿಸಿದವನಾವನು? ಇತರರಿಗಿಂತ ಮೊದಲೇ ಅವರನ್ನು ಸೃಜಿಸಲಾಗಿತ್ತೋ? ಒಂದೂ ತಿಳಿಯದು.—ಅನು.

"ನಾನು ಸೃಜಿಸಿರುವ ಮನುಷ್ಯನನ್ನೂ; ಮನುಷ್ಯನಿಂದ ಹಿಡಿದು, ಪಶು ಗಳವರೆಗೆ: ಮತ್ತು ತೆವಳಿಕೊಂಡು ಓಡಾಡುವ ಸರೀಸೃಪಗಳನ್ನೂ; ಮತ್ತು ಆಕಾಶದ ಪಕ್ಷಿಗಳನ್ನೂ ಪೃಥಿವಿಯ ಮೇಲಿನಿಂದ ನಾಶಮಾಡಿ ಬಿಡುವೆನು. ಏಕೆಂದರೆ, ಅವುಗಳನ್ನು ನಿರ್ಮಿಸಿದುದಕ್ಕಾಗಿ, ನಾನು ಪಶ್ಚಾತ್ತಾಪ ಪಡುತ್ತೇನೆ.," ಎಂದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 6; ಆ. 1, 2, 4,7]

## (ಈಶ್ವರನಿಗೆ ಮಕ್ಕಳಿದ್ದ ಮೇಲೆ ಅವನೂ ಮನುಷ್ಯನೇ ಆದನು)

**ಸಮೀಕ್ಷಕ:**—'ಈಶ್ವರನ ಮಕ್ಕಳು ಯಾರು? ಮತ್ತು ಈಶ್ವರನ ಹೆಂಡತಿ, ಅತ್ತೆ, ಮಾವ, ಮೈದುನ ಮತ್ತು ಸಂಬಂಧಿಕರು ಯಾರು?', ಎಂದು ಕ್ರೈಸ್ತ ರನ್ನು ಕೇಳಬೇಕು. ಏಕೆಂದರೆ, ಈಗಲಂತೂ ಮಾನವನ ಪುತ್ರಿಯರೊಂದಿಗೆ ವಿವಾಹ ವಾಮದರಿಂದ, ಈಶ್ವರನು ಇವರ ಬೀಗನಾದನು! ಮತ್ತು ಅವರಿಂದ ಉತ್ಪನ್ನ ರಾಗುವವರು ಅವನ ಪೌತ್ರರೂ, ಪ್ರಪೌತ್ರರೂ ಆಗುವರು.

**ಇಂತಹ ಮಾತುಗಳು ಈಶ್ವರನವು; ಮತ್ತು ಈಶ್ವರನ ಪುಸ್ತಕದವು ಆಗ ಬಲ್ಲವೇನು ? ಆದರೆ, ಆ ಕಾಡುಮನುಷ್ಯರು ಈ ಪುಸ್ತಕವನ್ನು ಬರೆದಿದ್ದಾರೆ, ಎಂದು ಸಿದ್ಧವಾಗುತ್ತದೆ!**

ಸರ್ವಜ್ಞನಲ್ಲದವನು, ಭವಿಷ್ಯದ ಮಾತನ್ನು ಅರಿಯಲಾರದವನು ಈಶ್ವರನೇ ಅಲ್ಲ! ಅವನು ಜೀವನಾಗಿರುತ್ತಾನೆ.

ಸೃಷ್ಟಿಯನ್ನು ರಚಿಸಿದಾಗ, ಮುಂದಕ್ಕೆ ಮಾನವರು ದುಷ್ಟರಾಗುವರು, ಎಂದು ತಿಳಿದಿರಲಿಲ್ಲವೋ ? ಮತ್ತು ಪಶ್ಚಾತ್ತಾಪ ಪಡುವುದು ; ಅತಿಶೋಕಗ್ರಸ್ತನೇ ಮೊದಲಾಗಿ ಆಗುವುದು; ಮರೆವಿನಿಂದ ಕೆಲಸಮಾಡಿ, ಹಿಂದಿನಿಂದ ಪರಿತಪಿಸುವುದು ಮೊದಲಾದುದು ಕ್ರೈಸ್ತರ ಈಶ್ವರನಿಗೆ ಅನ್ವಯಿಸಬಲ್ಲದು! [ವೇದೋಕ್ತ ಈಶ್ವರ ನಿಗಲ್ಲ:] ಮತ್ತು ಕ್ರೈಸ್ತರ ಈಶ್ವರನು ಪೂರ್ಣವಿದ್ವಾಂಸನಾದ ಯೋಗಿಯೂ ಕೂಡ. ಆಗಿರಲಿಲ್ಲ. [ಎಂದೂ ಸಿದ್ಧವಾಗುತ್ತದೆ]. ಇಲ್ಲದಿದ್ದರೆ, ಶಾಂತಿ ಮತ್ತು ವಿಜ್ಞಾನ ದಿಂದ, ಅತಿಶೋಕ ಮೊದಲಾದುವರಿಂದ, ದೂರವಿರಲು ಶಕ್ತನಾಗುತ್ತಿದ್ದನು.

**ಅಲ್ಲಾ ! ಪಶು-ಪಕ್ಷಿಗಳೂ ಕೂಡ, ದುಷ್ಟವಾಗಿ ಹೋದುವೇನು ?**

ಆ ಈಶ್ವರನು ಸರ್ವಜ್ಞನಾಗಿದ್ದಿದ್ದರೆ, ಹೀಗೆ ವಿಷಾದಗ್ರಸ್ತನಾಗುತ್ತಿದ್ದನೇಕೆ ? **ಆದುದರಿಂದ, ಇವನು ಈಶ್ವರನೂ ಅಲ್ಲ; [ಮತ್ತು] ಇದು ಈಶ್ವರಕೃತವಾದ ಪುಸ್ತಕವೂ ಆಗಲಾರದು!**

ವೇದೋಕ್ತವಾದ ಪರಮೇಶ್ವರನು ಸಮಸ್ತ ಪಾಪ, ಕ್ಲೇಶ, ದುಃಖ, ಶೋಕ ಮೊದಲಾದುದರಿಂದ ರಹಿತನೂ, 'ಸಚ್ಚಿದಾನಂದಸ್ವರೂಪ'ನೂ ಆಗಿದ್ದಾನೆ. ಹಾಗೆಯೇ, ಅವನನ್ನು ಕ್ರೈಸ್ತರು ಅಂಗೀಕರಿಸಿದ್ದರೆ, ಅಥವಾ ಈಗಲಾದರೂ ಒಪ್ಪುವರಾದರೆ, ತಮ್ಮ ಮಾನವಜನ್ಮವನ್ನು ಸಫಲವಾಗಿಮಾಡಿಕೊಳ್ಳಲು ಶಕ್ತರಾದಾರು! [12]

## (ನೂಹನು ನಾವೆಯಲ್ಲಿ ಎಲ್ಲ ಪ್ರಾಣಿಗಳ ಜೋಡಿಗಳನ್ನಿಟ್ಟನು)

[13] ಆ ನಾವೆಯು ಉದ್ದ ಮುನ್ನೂರು ಮೊಳ, ಅಗಲ ಐವತ್ತು ಮೊಳ ಮತ್ತು ಎತ್ತರ ಮೂವತ್ತು ಮೊಳವಿರಲಿ.

ನೀನು ನಾವೆಯಲ್ಲಿ ಹೋಗು! ನೀನು ಮತ್ತು ನಿನ್ನ ಪುತ್ರರು ಮತ್ತು ನಿನ್ನ ಪತ್ನಿ ಮತ್ತು ನಿನ್ನ ಪುತ್ರರ ಪತ್ನಿಯರು ನಿನ್ನ ಜೊತೆಗಿರಲಿ.

ಮತ್ತು ಸಮಸ್ತ ಯೋನಿಗಳಿಂದಲೂ ಎರಡೆರಡು ಜೀವಂತ ಜಂತುಗಳು, ನಿನ್ನ ಜೊತೆಯಲ್ಲಿ ಜೀವಿಸಿರಲಾಗುವಂತೆ, ನಿನ್ನೊಂದಿಗೆ ನಾವೆಯಲ್ಲಿ ಕರೆದುಕೋ. ಅವು ಗಂಡು, ಹಾಗೂ ಹೆಣ್ಣುಗಳಾಗಿರಲಿ.

ಪಕ್ಷಿಗಳಿಂದ ಅವುಗಳ ವಿಧ-ವಿಧದ; ಪಶುಗಳಿಂದ ಅವುಗಳ ವಿಧ-ವಿಧದ; ಮತ್ತು ಭೂಮಿಯ ಪ್ರತಿಯೊಂದು ತೆವಳಿಕೊಂಡು ಹೋಗುವ ಜಂತುಗಳಿಂದ ವಿಧ-ವಿಧದ; ಪ್ರತಿಯೊಂದರಿಂದಲೂ ಎರಡೆರಡು, ಜೀವಿಸಲಾಗಿರುವಂತೆ, ನಿನ್ನ ಬಳಿ ಬರಲಿ!

ಮತ್ತು ನೀನು ನಿನಗೋಸ್ಕರ ತಿನ್ನಲು ಎಲ್ಲ ಸಾಮಗ್ರಿಗಳನ್ನೂ, ನಿನ್ನ ಹತ್ತಿರ ಸಂಗ್ರಹಿಸು. ಅದು ನಿನಗೂ ಮತ್ತು ಅವುಗಳಿಗೂ ಭೋಜನವಾಗುವುದು.

ಹಾಗೆಯೇ, ಈಶ್ವರನ ಸಮಸ್ತ ಆಜ್ಞೆಗಳಿಗೆ ಅನುಗುಣವಾಗಿ 'ನೂಹ'*ನು ಮಾಡಿದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 6; ಆ. 15, 18-22]

## (ನೂಹನ ನಾವೆಯಲ್ಲಿ ಕೋಟ್ಯಂತರ ಜೀವಗಳು ಹೇಗೆ ಸೇರಿದವು ?)

**ಸಮೀಕ್ಷಕ:**—ಅಲ್ಲಾ! ವಿದ್ವಾಂಸನಾದ ಯಾವನೇ ಆದರೂ, ಇಂತಹ ವಿದ್ಯಾವಿರುದ್ಧವಾದ, ಮತ್ತು ಅಸಂಭವವಾದ ಮಾತುಗಳನ್ನಾಡುವವನನ್ನು ಈಶ್ವರನೆಂದು ಒಪ್ಪಿಕೊಳ್ಳಬಲ್ಲನೇನು ? ಏಕೆಂದರೆ, ಇಷ್ಟು ಉದ್ದ-ಅಗಲ-ಎತ್ತರವಾದ ನಾವೆಯಲ್ಲಿ ಗಂಡಾನೆ-ಹೆಣ್ಣಾನೆ, ಗಂಡು ಒಂಟೆ-ಹೆಣ್ಣು ಒಂಟೆ ಮೊದಲಾದ ಕೋಟ್ಯಂತರ ಪ್ರಾಣಿಗಳು, ಮತ್ತು ಅವುಗಳು ತಿನ್ನುವ-ಕುಡಿಯುವ ವಸ್ತುಗಳು. ಅವು ಎಲ್ಲವೂ, ಎಲ್ಲ ಕುಟುಂಬಗಳವರೂ ಹಿಡಿಸಬಲ್ಲರೇನು ?

---

*Noe.

ಆದುದರಿಂದ, ಇದು ಮಾನವಕೃತವಾದ ಪುಸ್ತಕವಾಗಿದೆ. ಇದನ್ನು ಬರೆದವನು ವಿದ್ವಾಂಸನೂ ಕೂಡ, ಆಗಿರಲಿಲ್ಲ. [13]

(ಪಶು–ಪಕ್ಷಿಗಳ ಹೋಮ ; ಈಶ್ವರನು ಸುಗಂಧ ಮೂಸಿ ನೋಡುವುದು)

[14] ಮತ್ತು ನೂಹನು ಪರಮೇಶ್ವರನಿಗಾಗಿ ಒಂದೊಂದು ವೇದಿಯನ್ನು ನಿರ್ಮಿಸಿದನು. ಮತ್ತು ಸಮಸ್ತ ಪವಿತ್ರ ಪಶುಗಳಿಂದಲೂ, ಮತ್ತು ಪ್ರತ್ಯೇಕ ಪವಿತ್ರ ಪಕ್ಷಿಗಳಿಂದಲೂ ಒಂದೊಂದನ್ನು ತೆಗೆದುಕೊಂಡನು. ಮತ್ತು ಹೋಮದ ಆಹುತಿಯನ್ನು ಆ ವೇದಿಕೆಯಲ್ಲಿ ಸಮರ್ಪಿಸಿದನು!

ಮತ್ತು ಪರಮೇಶ್ವರನು ಸುಗಂಧವನ್ನು ಮೂಸಿ ನೋಡಿದನು. ಮತ್ತು ಪರಮೇಶ್ವರನು ತನ್ನ ಮನಸ್ಸಿನಲ್ಲಿಯೇ—

'ಮಾನವನಿಗಾಗಿ ನಾನು ಭೂಮಿಗೆ ಮತ್ತೆ ಎಂದಿಗೂ ಶಾಪವನ್ನು ಕೊಡುವುದಿಲ್ಲ. ಏಕೆಂದರೆ, ಮಾನವನ ಮನಸ್ಸಿನ ಭಾವನೆ ಅವನ ಬಾಲತನದಿಂದಾಗಿ ಕೆಟ್ಟದಾಗಿರುತ್ತದೆ. ಮತ್ತು ನಾನು ಸಮಸ್ತ ಜೀವಧಾರಿಗಳನ್ನೂ [ಮುನ್ನ] ಸಂಹರಿಸಿದ ಹಾಗೆ ಮತ್ತೆ ಎಂದಿಗೂ ಸಂಹರಿಸುವುದಿಲ್ಲ.", ಎಂದು ಹೇಳಿಕೊಂಡನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 8; ಆ. 20,21]

ಸಮೀಕ್ಷಕ:—ವೇದಿಯನ್ನು ರಚಿಸುವ, ಹೋಮಮಾಡುವುದರ ಲೇಖನದಿಂದ ಈ ವಿಷಯಗಳು ವೇದಗಳಿಂದ ಬೈಬಲ್‌ಗೆ ಹೋಗಿವೆ, ಎಂದೇ ಸಿದ್ಧವಾಗುತ್ತದೆ.

ಸುಗಂಧ ಮೂಸಿ ನೋಡುವ ಮೂಗು ಕೂಡ, ಪರಮೇಶ್ವರನಿಗೆ ಇದೆಯೋ?

ಕ್ರೈಸ್ತರ ಈ ಈಶ್ವರನು ಮನುಷ್ಯರಂತೆ ಅಲ್ಪಜ್ಞನಲ್ಲವೇ ? ಒಂದು ಸಲ ಶಾಪಹಾಕುತ್ತಾನೆ. ಪುನಃ ಪಶ್ಚಾತ್ತಾಪ ಪಡುತ್ತಾನೆ. ಮತ್ತು ಇನ್ನೊಮ್ಮೆ— 'ನಾನು ಎಂದಿಗೂ ಶಾಪ ಕೊಡುವುದಿಲ್ಲ', ಎನ್ನುತ್ತಾನೆ!

ಮೊದಲು ಶಾಪವನ್ನು ಕೊಟ್ಟಿದ್ದನು. ಮತ್ತು ಮರಳಿಯೂ ಕೊಡುವನು! ಮೊದಲು ಎಲ್ಲರನ್ನೂ ಸಂಹರಿಸಿಬಿಟ್ಟನು ಮತ್ತು ಈಗ—'ಎಂದಿಗೂ ಸಂಹರಿಸುವುದಿಲ್ಲ!!', ಎನ್ನುತ್ತಾನೆ.

ಈ ಮಾತುಗಳೆಲ್ಲಾ ಹುಡುಗುತನದವಾಗಿವೆ; ಈಶ್ವರನದಲ್ಲ! ಮತ್ತು ಯಾವ ವಿದ್ವಾಂಸನದೂ ಕೂಡ, ಅಲ್ಲ!

ಏಕೆಂದರೆ, ವಿದ್ವಾಂಸನ ಮಾತು, ಮತ್ತು ಪ್ರತಿಜ್ಞೆಯೂ ಕೂಡ, ಸ್ಥಿರವಾಗಿರುತ್ತವೆ! [14]

### (ನೂಹನ ಪರಿವಾರಕ್ಕೆ ಪಶು-ಪಕ್ಷಿ ತಿನ್ನುವ ಆಶೀರ್ವಾದ)

[15] ಮತ್ತು ಈಶ್ವರನು ನೂಹನಿಗೆ ಮತ್ತು ಅವನ ಸಂತತಿಗೆ ಆಶೀರ್ವಾದ ಕೊಟ್ಟನು. ಮತ್ತು ಅವರಿಗೆ—

"ಪ್ರತಿಯೊಂದು ಜೀವಂತವೂ, ನಡೆಯುವಂತಹುದೂ ಆದ ಜಂತುವು ನಿಮ್ಮ ಭೋಜನಕ್ಕಾಗಿ ಇರುವುದು. ನಾನು ಹಸಿರು ಕಾಯಿ-ಪಲ್ಯಕ್ಕೆ ಸಮಾನವಾಗಿ ಎಲ್ಲವನ್ನೂ ನಿಮಗೆ ಕೊಟ್ಟಿದ್ದೇನೆ.

"ಕೇವಲ ಮಾಂಸವನ್ನು ಅದರ ಜೀವದೊಂದಿಗೆ, ಅಂದರೆ, ರಕ್ತದೊಂದಿಗೆ ತಿನ್ನಬೇಡಿ," ಎಂದು ಹೇಳಿದನು.

[ಬೈಬಲ್ (ತೌ); ಉತ್ಪತ್ತಿ:-ಪರ್ವ 9 ; ಆ. 1, 3, 4]

ಸಮೀಕ್ಷಕ :—ಒಂದರ ಪ್ರಾಣಕ್ಕೆ ಕ್ಲೇಶವನ್ನಿತ್ತು, ಬೇರೆಯವರಿಗೆ ಆನಂದ ವನ್ನುಂಟುಮಾಡುವುದರಿಂದ, ಕ್ರೈಸ್ತರ ಈಶ್ವರನು ದಯಾಹೀನನಾಗಲಿಲ್ಲವೇನು ?

ತಾಯಿ-ತಂದೆಗಳು ಒಬ್ಬ ಮಗನನ್ನು ಸಾಯಿಸಿ, ಬೇರೆ ಮಕ್ಕಳಿಗೆ ತಿನ್ನಿಸಿದರೆ, ಮಹಾಪಾಪಿಗಳಾಗುವುದಿಲ್ಲವೇನು? ಈ ಮಾತು ಇದೇ ರೀತಿಯದಾಗಿದೆ! ಏಕೆಂದರೆ, ಈಶ್ವರನಿಗೆ ಸರ್ವಪ್ರಾಣಿಗಳೂ ಮಕ್ಕಳಂತೆ ಇವೆ. ಈ ರೀತಿ ವರ್ತಿಸದಿರುವುದರಿಂದ. ಇವರ ಈಶ್ವರನು ಕಟುಕನಂತೆ ಕೆಲಸ ಮಾಡುತ್ತಾನೆ. ಮತ್ತು ಎಲ್ಲ ಮನುಷ್ಯರನ್ನೂ ಹಿಂಸಕರನ್ನಾಗಿಯೂ ಇವನೇ ಮಾಡಿದ್ದಾನೆ!

ಆದುದರಿಂದ, ಕ್ರೈಸ್ತರ ಈಶ್ವರನು ನಿರ್ದಯನಾಗಿರುವುದರಿಂದ, ಪಾಪಿ ಏತಕ್ಕಲ್ಲ?

### (ಈಶ್ವರನು ಹೆದರಿ, ಕೆಳಗೆ ಬರುವುದು ; ಭಾಷಾಭೇದ!)

[16] ಮತ್ತು ಸಮಸ್ತ ಪೃಥಿವಿಯಲ್ಲಿ ಒಂದೇ ನುಡಿ ಮತ್ತು ಒಂದೇ ಭಾಷೆಯಿದ್ದಿತು.

ಮತ್ತು ಅವರು—

"ಬನ್ನಿರಿ! ನಾವು ಒಂದು ನಗರವನ್ನು ಮತ್ತು ಸ್ವರ್ಗದವರೆಗೆ ಏರುವಂತಹ ಶೃಂಗವನ್ನುಳ್ಳ ಒಂದು ಗೋಪುರವನ್ನು ನಮ್ಮ ಸಲುವಾಗಿ ಕಟ್ಟಿಕೊಳ್ಳೋಣ! ಮತ್ತು ನಮ್ಮ ಹೆಸರನ್ನು ಗಳಿಸೋಣ!* ಇಲ್ಲದಿದ್ದರೆ ಸಮಸ್ತ ಭೂಮಿಯ ಮೇಲೆ ಭಿನ್ನ-ಭಿನ್ನರಾಗಿ ಹೋದೇವು!" ಎಂದರು.

ಆಗ ಈಶ್ವರನು ಆ ನಗರವನ್ನು ಮತ್ತು ಆದಮನ ಸಂತತಿಯವರು ಕಟ್ಟುತ್ತಿದ್ದ ಆ ಗೋಪುರವನ್ನು ನೋಡಲು ಇಳಿದನು.

---

*ಎಂದರೆ, ಹೆಸರಿನಿಂದ ಪ್ರಸಿದ್ಧರಾಗೋಣ.—ಸಂ.

ಆಗ, ಪರಮೇಶ್ವರನು—

"ನೋಡಿರಿ! ಈ ಜನರು ಒಂದೇ ಆಗಿದ್ದಾರೆ. ಮತ್ತು ಅವರೆಲ್ಲರ ಭಾಷೆಯೂ ಒಂದೇ ಆಗಿದೆ. ಈಗ ಅವರು ಈ ಈ ಬಗೆಯದೇನನ್ನಾದರೂ ಮಾಡಲಾರಂಭಿಸಿದ್ದಾರೆ. ಆದುದರಿಂದ, ಅವರು ಯಾವುದರ ಮೇಲೆ ಮನಸ್ಸನ್ನು ನಿಲ್ಲಿಸುವರೋ, ಅದರಿಂದ ಅವರನ್ನು ದೂರವಿಡಲಾಗದು.

"ಬನ್ನಿರಿ! ನಾವು ಇಳಿಯೋಣ, ಮತ್ತು ಅಲ್ಲಿ ಅವರ ಭಾಷೆಯನ್ನು, ಒಬ್ಬರು ಇನ್ನೊಬ್ಬರ ನುಡಿಯನ್ನು ತಿಳಿದುಕೊಳ್ಳಲು ಆಗದ ಹಾಗೆ, ಕಲಬೆರಕೆ ಮಾಡಿ ಬಿಡೋಣ", ಎಂದು ಹೇಳಿದನು.

ಆಗ ಪರಮೇಶ್ವರನು ಅವರನ್ನು ಅಲ್ಲಿಂದ ಸಮಸ್ತ ಭೂಮಂಡಲದಲ್ಲಿ ಚದುರಿಸಿ ಬಿಟ್ಟನು. ಮತ್ತು ಅವರು ಆ ನಗರವನ್ನು ನಿರ್ಮಿಸುವುದರಿಂದ ದೂರ ಉಳಿದರು. [ಬೈಬಲ್ (ತೌ). ಉತ್ಪತ್ತಿ:-ಪರ್ವ, 1, 4-8]

**(ಭಾಷಾಭೇದ ಮಾಡುವುದು ಶೈತಾನನಕ್ಕಿಂತ ಕೆಟ್ಟ ಕೆಲಸ)**

**ಸಮೀಕ್ಷಕ:—ಸಮಸ್ತ ಭೂಮಂಡಲದಲ್ಲಿ ಒಂದೇ ಭಾಷೆ [ಮತ್ತು] ನುಡಿ ಇದ್ದಿರಬಹುದಾದ ಕಾಲದಲ್ಲಿ ಮಾನವರೆಲ್ಲರಿಗೂ ಪರಸ್ಪರ ಅತ್ಯಂತ ಆನಂದವು ಪ್ರಾಪ್ತವಾಗಿದ್ದಿರಬಹುದು!**

ಆದರೆ, ಮಾಡುವುದಾದರೂ ಏನು? **ಕ್ರೈಸ್ತರ ಈ ಈರ್ಷ್ಯಾಳುವಾದ ಈಶ್ವರನು ಎಲ್ಲರ ಭಾಷೆಯನ್ನೂ ಕಲಬೆರಕೆಮಾಡಿ, ಸರ್ವರ ಸತ್ಯಾನಾಶವನ್ನು ಮಾಡಿಬಿಟ್ಟನು! ಅವನು ಈ ಮಹಾಪರಾಧವನ್ನು ಮಾಡಿದನು! ಇದು ಶೈತಾನನ ಕೆಲಸಕ್ಕಿಂತ ಕೆಟ್ಟ ಕೆಲಸವಲ್ಲವೇನು?**

ಮತ್ತು ಇದರಿಂದ, ಕ್ರೈಸ್ತರ ಈಶ್ವರನು ಸನಾಯೀ ಪರ್ವತ ಮೊದಲಾದೆಡೆ ಇರುತ್ತಿದ್ದನು. ಮತ್ತು ಜೀವರ ಉನ್ನತಿಯನ್ನೂ ಕೂಡ, ಬಯಸುತ್ತಿರಲಿಲ್ಲವೆಂದೂ ವಿದಿತವಾಗುತ್ತದೆ.

ಇದು ಒಬ್ಬ ಅವಿದ್ವಾಂಸನ ಹೊರತು ಈಶ್ವರನ ಮಾತು, ಮತ್ತು ಇದು ಈಶ್ವರೋಕ್ತವಾದ ಪುಸ್ತಕ, ಹೇಗಾದರೂ ಆಗಬಲ್ಲದೇ ? [16]

**(ಅಬ್ರಹಾಮನು ವಿಪತ್ತಿನಲ್ಲಿ ಪತ್ನಿಯನ್ನು ಸೋದರಿಯನ್ನಾಗಿ ಮಾಡಿದ)**

[17] ಆಗ ಅವನು ತನ್ನ ಪತ್ನಿ 'ಸಾರಾ'*ಳಿಗೆ—

"ನೋಡು! ನೀನು ನೋಡುವುದಕ್ಕೆ ಸುಂದರಿಯಾದ ಸ್ತ್ರೀಯಾಗಿದ್ದೀಯೆ, ಎಂದು ನಾನು ಬಲ್ಲೆನು.

---

*Sarai.

"ಆದುದರಿಂದ, ಹೇಗೆ ಆಗಬಹುದೆಂದರೆ—

"ಮಿಶ್ರದೇಶಿಯರು ನಿನ್ನನ್ನು ನೋಡುವಾಗ, ಅವರು—'ಇವಳು ಅವನ ಪತ್ನಿಯಾಗಿದ್ದಾಳೆ', ಎನ್ನುವರು. ಮತ್ತು ನನ್ನನ್ನು ಕೊಂದುಬಿಡುವರು. ಆದರೆ, ನಿನ್ನನ್ನು ಜೀವಿತಳನ್ನಾಗಿ ಇಡುವರು.

"ನೀನು, ನಿನ್ನ ಕಾರಣದಿಂದ, ನನಗೆ ಒಳಿತಾಗುವಂತೆ ಮತ್ತು ನನ್ನ ಪ್ರಾಣ ನಿನ್ನ ಕಾರಣದಿಂದ ಜೀವಿತವಾಗಿ ಉಳಿದುಕೊಳ್ಳುವಂತೆ,—'ನಾನು ಅವನ ಸೋದರಿ!'. ಎಂದು ಹೇಳು.", ಎಂದು ಹೇಳಿದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 12; ಆ. 11-18]

**ಸಮೀಕ್ಷಕ:**—ಈಗ ನೋಡಿರಿ! 'ಅಬ್ರಹಾಮು'*ನು ಕ್ರೈಸ್ತರ ಮತ್ತು ಮುಸಲ್ಮಾನರ ಮಹಾಪ್ರವಾದಿಯೆಂದು ಪ್ರಸಿದ್ಧನಾಗಿದ್ದಾನೆ. ಆದರೆ. ಮಿಥ್ಯಾಭಾಷಣ ಮೊದಲಾದ ಅವನ ಕರ್ಮಗಳು ಕೆಟ್ಟವಾಗಿವೆ.

ಭಲೇ! ಯಾರ ಪ್ರವಾದಿಗಳು ಇಂತಹವರಾಗಿರುತ್ತಾರೋ, ಅವರಿಗೆ ವಿದ್ಯೆಯು ಮತ್ತು ಕಲ್ಯಾಣದ ಮಾರ್ಗ ಸಿಕ್ಕಬಲ್ಲದೆಂತು? [17]

### ("ಖತನಾ" ಮಾಡಲು ಈಶ್ವರನ ಕಠೋರ ಆದೇಶ)

**[18]** ಮತ್ತು ಈಶ್ವರನು ಅಬ್ರಹಾಮನಿಗೆ—

"ನೀನು ಮತ್ತು ನಿನ್ನ ನಂತರ, ನಿನ್ನ ವಂಶ, ಅವರ ಪೀಳಿಗೆಗಳಲ್ಲಿ ನನ್ನ ನಿಯಮವನ್ನೇ ಅಂಗೀಕರಿಸಲಿ!

"ನನ್ನ-ನಿನ್ನ ನಡುವೆ, ಮತ್ತು ನಿನ್ನ ನಂತರ, ನಿನ್ನ ವಂಶದ ನಡುವೆ, ಪ್ರಚಲಿತವಾಗಿರುವ ಮತ್ತು ನೀನು ಅಂಗೀಕರಿಸಬೇಕಾಗಿರುವ ನನ್ನ ನಿಯಮವೇನೆಂದರೆ—

"ನಿಮ್ಮಲ್ಲಿ ಪ್ರತಿಯೊಬ್ಬ ಪುರುಷನ 'ಖತನಃ'† ಮಾಡಲ್ಪಡಬೇಕು!

"ಮತ್ತು ನೀನು ನಿನ್ನ ಶರೀರದ‡ ಹೊರಚರ್ಮವನ್ನು ಕತ್ತರಿಸಿಹಾಕು. ಮತ್ತು ಅದು ನನ್ನ, ಹಾಗೂ ನಿನ್ನ ನಡುವಣ ಚಿಹ್ನೆಯಾಗಿರುವುದು.

"ಮತ್ತು ನಿನ್ನ ವಂಶಗಳಲ್ಲಿ, ಮನೆಯಲ್ಲಿ ಜನಿಸಿದ, ಅಥವಾ ನಿನ್ನ ವಂಶದವನಲ್ಲವನಾದ ಯಾವನಾದರೂ ಪರದೇಶಿಯಿಂದ, ರೂಪಾಯಿಗಳನ್ನಿತ್ತು

---

*Abraham.

†ಜನನೇಂದ್ರಿಯದ ತುದಿಯನ್ನು ಕತ್ತರಿಸಿಹಾಕಬೇಕು.—ಅನು.

‡ಶಿಶ್ನದ ತುದಿಯು—ಅನು.

ಖರೀದಿಸಿರುವ ಪ್ರತಿಯೊಂದು ಎಂಟು ವರ್ಷ ವಯಸ್ಸಿನ ಬಾಲಕನ 'ಖತನಃ' ಮಾಡಲ್ಪಡಬೇಕು!

"ನಿನ್ನ ಮನೆಯಲ್ಲಿ ಜನಿಸಿದ, ಮತ್ತು ನಿನ್ನ ರೂಪಾಯಿಗಳಿಂದ ಖರೀದಿಸಿದವನ 'ಖತನಃ' ಅವಶ್ಯವಾಗಿ ಮಾಡಲ್ಪಡಬೇಕು!

"ಮತ್ತು ನನ್ನ ನಿಯಮವು ನಿನ್ನ ಮಾಂಸದಲ್ಲಿ ಯಾವಾಗಲೂ ಇರುವ ನಿಯಮಕ್ಕಾಗಿ ಆಗುವುದು.

"ಮತ್ತು ಯಾವನ ಶಿಶ್ನದ ಹೊರ ಚರ್ಮದ ತುದಿಯು ಕತ್ತರಿಸಲ್ಪಟ್ಟಿಲ್ಲವೋ, ಆ 'ಅಖತನಃ'* ಬಾಲಕನೆಂಬ ಪ್ರಾಣಧಾರಿಯು ತನ್ನ ಜನರಿಂದ ಬಹಿಷ್ಕೃತನಾಗಲಿ! ಏಕೆಂದರೆ, ಅವನು ನನ್ನ ನಿಯಮವನ್ನು ಮುರಿದಿದ್ದಾನೆ.", ಎಂದು ಹೇಳಿದನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ.17; ಆ. 9-14]

**(ಖತನಃ ಈಶ್ವರನಿಗೆ ಇಷ್ಟವಾಗಿದ್ದಿದ್ದರೆ, ಆ ಚರ್ಮವನ್ನೇಕೆ ರಚಿಸಿದನು!)**

ಸಮೀಕ್ಷಕ:—ಈಗ ನೋಡಿರಿ, ಈಶ್ವರನ ವಿಪರೀತವಾದ ಆಜ್ಞೆಯನ್ನು! 'ಖತನ' ಮಾಡುವುದು ಈಶ್ವರನಿಗೆ ಇಷ್ಟವಾಗಿದ್ದಿದ್ದರೆ, ಆದಿಸೃಷ್ಟಿಯಲ್ಲಿ ಆ ಚರ್ಮವನ್ನು ನಿರ್ಮಿಸುತ್ತಲೇ ಇರಲಿಲ್ಲ !

ಮತ್ತು ಹೇಗೆ ಕಣ್ಣಿನ ಮೇಲಣ ರೆಪ್ಪೆಯು ಚರ್ಮವಿದೆಯೋ, ಹಾಗೆ ಶಿಶ್ನದ ಮೇಲಣ ಚರ್ಮವನ್ನು ರಚಿಸಿರುವುದು ರಕ್ಷಣೆಯು ಸಲುವಾಗಿ! ಏಕೆಂದರೆ, ಆ ಗುಪ್ತಸ್ಥಾನ ಅತಿಕೋಮಲವಾಗಿದೆ. ಅದರ ಮೇಲೆ ಚರ್ಮವಿಲ್ಲದೇ ಹೋದರೆ, ಒಂದು ಇರುವೆಯು ಕಚ್ಚುವುದರಿಂದಲೂ, ಮತ್ತು ಸ್ವಲ್ಪ ಏಟು ತಗಲುವುದರಿಂದಲೂ ಬಹಳ ನೋವಾಗುವುದು !

ಮತ್ತು ಮೂತ್ರವಿಸರ್ಜನೆಯಾದ ನಂತರ, ಉಳಿದಿರಬಹುದಾದ ಮೂತ್ರದ ಅಂಶ ಬಟ್ಟೆಗೆ ಅಂಟಿಕೊಳ್ಳದಿರಲಿ, ಎಂಬ ಈ ಮೊದಲಾದ ಕಾರಣಗಳಿಂದಲೂ [ಇದೆ]. ಇದನ್ನು ಕತ್ತರಿಸುವುದು ಅನುಚಿತವಾಗಿರುತ್ತದೆ!

ಮತ್ತು ಈಗ ಕ್ರೈಸ್ತರು ಈ ಆಜ್ಞೆಯನ್ನು ಪಾಲಿಸುವುದಿಲ್ಲವೇಕೆ ? ಈ ಆಜ್ಞೆಯು ಸರ್ವಕಾಲಕ್ಕೂ ಅನ್ವಯಿಸುತ್ತದೆ!

ಇದನ್ನು ಮಾಡದೇ ಇರುವುದರಿಂದ, 'ವ್ಯವಸ್ಥಾಪಕಪುಸ್ತಕದ ಒಂದು ಬಿಂದುವೂ ಕೂಡ ಸುಳ್ಳಲ್ಲ', ಎಂಬ ಏಸುವಿನ ಸಾಕ್ಷ್ಯ ಸುಳ್ಳಾಗಿ ಹೋಯಿತು! ಇದರ ಯೋಜನೆ-ವಿಚಾರವನ್ನು ಕ್ರೈಸ್ತರು ಸ್ವಲ್ಪವೂ ಕೂಡ, ಮಾಡುತ್ತಿಲ್ಲ. [18]

---

*'ಅಖತನಃ' = ಶಿಶ್ನದ ತುದಿಯಲ್ಲಿ ಅಖಂಡವಾದ ಚರ್ಮವನ್ನುಳ್ಳವನು; ಅಥವಾ ಶಿಶ್ನದ ಅಗ್ರಭಾಗದ ಚರ್ಮ ತೆಗೆಯಲ್ಪಡದವನು—ಅನು.

(ಅಬ್ರಹಾಮನೊಂದಿಗೆ ಮಾತನಾಡಿ, ಈಶ್ವರನು ಮೇಲೆ ಹೋಗುವುದು)

[19] ಆಗ ಅವನೊಂದಿಗೆ ಮಾತನಾಡುವುದು ಮುಗಿಯಿತು. ಮತ್ತು ಅಬ್ರಹಾಮನ ಹತ್ತಿರದಿಂದ ಈಶ್ವರನು ಮೇಲಕ್ಕೆ ಹೊರಟುಹೋದನು.

[ಬೈಬಲ್ (ತೌ). ಉತ್ಪತ್ತಿ:- ಪರ್ವ. 17; ಆ. 22]

ಸಮೀಕ್ಷಕ:—ಇದರಿಂದ, ಈಶ್ವರನು ಮೇಲಿನಿಂದ ಕೆಳಕ್ಕೆ ಮತ್ತು ಕೆಳಗಿನಿಂದ ಮೇಲಕ್ಕೆ ಬರುತ್ತಾ-ಹೋಗುತ್ತಾ ಇರುತ್ತಿದ್ದ ಮನುಷ್ಯನಂತೆ ಇದ್ದನು ಅಥವಾ ಪಕ್ಷಿಯಂತೆ ಇದ್ದನು, ಎಂದು ಸಿದ್ಧವಾಗುತ್ತದೆ. ಇವನು ಯಾವನೋ ಇಂದ್ರಜಾಲ ಮಾಡುವ ಪುರುಷನಂತೆ ತೋರುತ್ತಾನೆ! [19]

(ಈಶ್ವರನು ರೊಟ್ಟಿ, ಬೆಣ್ಣೆ ಮತ್ತು ಕರುವಿನ ಮಾಂಸವನ್ನು ತಿಂದನು)

[20] ಮತ್ತೆ, ಈಶ್ವರನು ಅವನಿಗೆ ಕಾಡುತುಳಸಿಯ, ಹಾಗೂ ವೃಕ್ಷಗಳ ನಡುವೆ ಕಾಣಿಸಿಕೊಂಡನು. ಮತ್ತು ಅವನು ಹಗಲು ಬಿಸಿಲಿನ ಹೊತ್ತಿನಲ್ಲಿ ತನ್ನ ಗುಡಾರದ ದ್ವಾರದಲ್ಲಿ ಕುಳಿತಿದ್ದನು.

ಮತ್ತು ಅವನು ತನ್ನ ಕಣ್ಣುಗಳನ್ನೆತ್ತಿದನು. ಮತ್ತು ಮೂವರು ಮಾನವರು ತನ್ನ ಬಳಿ ನಿಂತಿರುವುದನ್ನು ನೋಡಿದನು. ಮತ್ತು ಅವರನ್ನು ನೋಡಿ, ಅವನು ಗುಡಾರದ ಬಾಗಿಲಿನಿಂದ ಅವರ ಭೇಟಿಗಾಗಿ ಓಡಿದನು; ಮತ್ತು ಭೂಮಿಗೆರಗಿ ದಂಡವತ್ ಪ್ರಣಾಮವನ್ನು ಮಾಡಿದನು. ಮತ್ತು—

"ಓ ನನ್ನ ಸ್ವಾಮಿ ! ನಾನು ಈಗ ತಮ್ಮ ದೃಷ್ಟಿಯಲ್ಲಿ ಅನುಗ್ರಹಕ್ಕೆ ಪಾತ್ರನಾಗಿದ್ದೇನೆಯಾದರೆ, ತಮ್ಮ ಈ ದಾಸನ ಹತ್ತಿರದಿಂದ ಹೊರಟುಹೋಗಬೇಡಿರಿ, ಎಂದು ಪ್ರಾರ್ಥಿಸುತ್ತೇನೆ.

"ಇಚ್ಛೆಯಿದ್ದಲ್ಲಿ, ಸ್ವಲ್ಪ ನೀರು ತರಲ್ಪಡಲಿ. ಮತ್ತು ತಮ್ಮ ಪಾದಗಳನ್ನು ತೊಳೆದುಕೊಳ್ಳಿರಿ. ಮತ್ತು ವೃಕ್ಷದ ಕೆಳಗೆ ವಿಶ್ರಮಿಸಿಕೊಳ್ಳಿರಿ.

"ಮತ್ತು ನಾನು ಒಂದು ಗ್ರಾಸ ರೊಟ್ಟಿಯನ್ನು ತರುವೆನು. ಮತ್ತು ತಾವು ತೃಪ್ತರಾಗಿರಿ.

"ಅದಾದ ಮೇಲೆ, ಮುನ್ನಡೆಯಿರಿ. ಏಕೆಂದರೆ, ತಾವು ಇದಕ್ಕಾಗಿಯೇ ತಮ್ಮ ದಾಸನ ಬಳಿ ಬಂದಿದ್ದೀರಿ.", ಎಂದು ಹೇಳಿದನು.

ಆಗ ಅವರು—"ನೀನು ಹೇಳಿದ ಹಾಗೆ ಮಾಡು", ಎಂದರು.

ಮತ್ತು ಅಬ್ರಹಾಮನು ಗುಡಾರಕ್ಕೆ 'ಸಾರಾ*ಳ' ಬಳಿಗೆ ಅವಸರದಿಂದ ಹೋದನು. ಮತ್ತು ಅವಳಿಗೆ—

---

*Sara.

"ತ್ವರೆಮಾಡು. ಮತ್ತು ಮೂರು ಸೇರು ಚೊಕ್ಕವಾದ ಹಿಟ್ಟನ್ನು ತೆಗೆದುಕೊಂಡು, ಕಲಸು. ಮತ್ತು ಅದರ ರೊಟ್ಟಿಗಳನ್ನು ಮಾಡು.", ಎಂದು ಹೇಳಿದನು.

ಮತ್ತು ಅಬ್ರಹಾಮನು ಹಿಂಡಿನ ಕಡೆಗೆ ಓಡುತ್ತಾ ಹೋದನು. ಮತ್ತು ಒಂದು ಒಳ್ಳೆಯ ಕೋಮಲವಾದ ಕರುವನ್ನು ತೆಗೆದುಕೊಂಡು, ಸೇವಕನಿಗೆ ಕೊಟ್ಟನು.

ಮತ್ತು ಅವನೂ ಕೂಡ, ಅದನ್ನು ಸಿದ್ಧಪಡಿಸುವುದರಲ್ಲಿ* ಚುರುಕಾಗಿಯೇ ಕೆಲಸ ಮಾಡಿದನು.

ಮತ್ತು ಅವನು ಬೆಣ್ಣೆಯನ್ನು ಮತ್ತು ಹಾಲನ್ನು ಮತ್ತು ಬೇಯಿಸಿದ್ದ ಆ ಕರುವನ್ನು ತೆಗೆದುಕೊಂಡನು. ಮತ್ತು ಅವರ ಮುಂದೆ ಇಟ್ಟನು. ಮತ್ತು ತಾನು ಅವರ ಹತ್ತಿರ ವೃಕ್ಷದ ಕೆಳಗೆ ನಿಂತುಕೊಂಡಿದ್ದನು. ಮತ್ತು ಅವರು ತಿಂದರು.

[ಬೈಬಲ್ (ತೌ). ಉತ್ಪತ್ತಿ :— ಪರ್ವ. 16 ; ಆ. 1-8]

### (ಈ ಈಶ್ವರನು ಕಾಡು ಮನುಷ್ಯರ ಗುಂಪಿನ ಸರದಾರನಿದ್ದಿರಬೇಕು)

ಸಮೀಕ್ಷಕ :—ಈಗ ನೋಡಿರಿ. ಸಜ್ಜನರುಗಳೇ! ಯಾರ ಈಶ್ವರನು ಕರುವಿನ ಮಾಂಸವನ್ನು ತಿನ್ನುವನೋ, ಅವನ ಉಪಾಸಕರು ಹಸು–ಕರು ಮೊದಲಾದ ಪ್ರಾಣಿಗಳನ್ನು ಏತಕ್ಕೆ ಬಿಟ್ಟಾರು ?

ಯಾವನಿಗೆ ಸ್ವಲ್ಪವೂ ದಯೆಯಿಲ್ಲವೋ, ಮತ್ತು ಮಾಂಸ ತಿನ್ನಲು ಚಡಪಡಿಸುವನೋ, ಅವನು ಹಿಂಸಕನಾದ ಮಾನವನೇ ಹೊರತು, ಈಶ್ವರನೆಂದಿಗಾದರೂ ಆಗ ಬಲ್ಲನೇನು? ಮತ್ತು ಈಶ್ವರನ ಜೊತೆಯಲ್ಲಿ ಇಬ್ಬರು ಮನುಷ್ಯರು ಅದಾರಿದ್ದರೋ, ತಿಳಿಯದು!

ಇದರಿಂದ, ಕಾಡು ಜನರ ಒಂದು ಗುಂಪು ಇದ್ದಿತು. ಅವರ ಪ್ರಧಾನನಾಗಿದ್ದ ಮನುಷ್ಯನಿಗೆ ಬೈಬಲಿನಲ್ಲಿ 'ಈಶ್ವರ', ಎಂಬ ಹೆಸರನ್ನು ಇಟ್ಟಿರಬಹುದು, ಎಂದು ವಿದಿತವಾಗುತ್ತದೆ!

ಇಂತಹ ಮಾತುಗಳ ಇರುವಿಕೆಯಿಂದಲೇ, ಬುದ್ಧಿಶಾಲೀ ಜನರು ಇವರ ಪುಸ್ತಕವನ್ನು ಈಶ್ವರಕೃತವೆಂದು ಅಂಗೀಕರಿಸಲಾರರು ; ಮತ್ತು ಇಂತಹವನನ್ನು ಈಶ್ವರನೆಂದು ಅಂಗೀಕರಿಸುವುದು ಯೋಗ್ಯವೆಂದೂ ತಿಳಿಯುವುದಿಲ್ಲ. [20]

### (ಈಶ್ವರನು ಸ್ತ್ರೀಯರಂತೆ ಆಕ್ಷೇಪಿಸುವುದು)

[21] ಮತ್ತು ಪರಮೇಶ್ವರನು ಅಬ್ರಹಾಮನಿಗೆ—

"ಸಾರಾ—'ಮುದುಕಿಯಾದ ನಾನು ನಿಜವಾಗಿಯೂ ಬಾಲಕನನ್ನು ಹೆರುವೆನೇ ?'. ಎಂದು ಹೇಳಿ, ಮುಗುಳ್ನಗೆ ನಕ್ಕಳೇಕೆ ?

---

*ಎಂದರೆ, ಮಾಂಸದ ಅಡಿಗೆ ಮಾಡುವ, ಬಡಿಸುವ ಕ್ರಿಯೆಗಳು. ಇದಕ್ಕೆ ಇಂಗ್ಲಿಷಿನಲ್ಲಿ 'Dressing', ಎಂಬ ಪ್ರಯೋಗವಿದೆ.—ಸಂ.

"ಪರಮೇಶ್ವರನಿಗೆ ಯಾವುದಾದರೂ ವಿಷಯ ಅಸಾಧ್ಯವೇ?", ಎಂದು ಕೇಳಿದನು.

[ಬೈಬಲ್ (ತೌ). ಉತ್ಪತ್ತಿ :—ಪರ್ವ. 18; ಆ. 13, 14]

ಸಮೀಕ್ಷಕ:—ಈಗ ನೋಡಿರಿ! ಹುಡುಗರಂತೆ ಅಥವಾ ಹೆಂಗಸರಂತೆ ರೇಗುವ ಮತ್ತು ಭರ್ತ್ಸನೆ*ಯನ್ನೆಸಗುವ ಕ್ರೈಸ್ತರ ಈಶ್ವರನ ಯಾವ-ಯಾವ ಲೀಲೆಗಳಿವೆ, ಎಂಬುದನ್ನು! [21]

## (ಈಶ್ವರನು ಕೋಪಿಸಿಕೊಂಡು ಬೆಂಕಿ ಸುರಿಸುವುದು)

[22] ಆಗ, ಪರಮೇಶ್ವರನು 'ಸದೂಮು'† [ಮತ್ತು] 'ಅಮೂರ'‡ಗಳ ಮೇಲೆ ಗಂಧಕದ ಮತ್ತು ಬೆಂಕಿಯ ಮಳೆಯನ್ನು ತನ್ನ ಕಡೆಯಿಂದ ಸುರಿಸಿದನು.

ಮತ್ತು ಆ ನಗರಗಳನ್ನೂ, ನಾಲ್ಕೆಡೆಯ ಬಯಲನ್ನೂ. ಮತ್ತು ನಗರಗಳ ಎಲ್ಲ ನಿವಾಸಿಗಳನ್ನೂ ಮತ್ತು ಭೂಮಿಯ ಮೇಲೆ ಮೊಳೆಯುತ್ತಿದ್ದುದೆಲ್ಲವನ್ನೂ, ಮಗುಚಿ ಹಾಕಿದನು.

[ಬೈಬಲ್ (ತೌ). ಉತ್ಪತ್ತಿ:—ಪರ್ವ. 19 ; ಆ. 24, 25]

## (ನಿರಪರಾಧಿಗಳಿಗೆ ಕಷ್ಟ ಕೊಡುವುದು ಅನ್ಯಾಯ)

ಸಮೀಕ್ಷಕ:—ಈಗ ಬೈಬಲಿನ ಈಶ್ವರನ ಈ ಲೀಲೆಯನ್ನೂ ಕೂಡ. ನೋಡಿರಿ! ಅವನಿಗೆ ಬಾಲಕರೇ ಮೊದಲಾದವರ ಮೇಲೆಯೂ ದಯೆ ಬರಲಿಲ್ಲ! ಭೂಮಿಯನ್ನು ಮಗುಚಿ ಹಾಕಿ, ಎಲ್ಲರನ್ನೂ ಹೂಳಿ. ಸಾಯಿಸಲು ಅವರೆಲ್ಲರೂ ಅಪರಾಧಿಗಳಾಗಿದ್ದರೇನು? ಈ ಮಾತು ನ್ಯಾಯ. ದಯೆ ಮತ್ತು ವಿವೇಕಕ್ಕೆ ವಿರುದ್ಧವಾಗಿದೆ.

ಯಾರ ಈಶ್ವರನು ಇಂತಹ ಕೆಲಸವನ್ನು ಮಾಡುವನೋ, ಅವನ ಉಪಾಸಕರು ಹಾಗೆಯೇ ಮಾಡದೇ ಇರುವರೇಕೆ?$ [22]

## (ಲೂತನು ತನ್ನ ಪುತ್ರಿಯರೊಂದಿಗೆ ಸಂಭೋಗ ಮಾಡುವುದು)

[23] ಬನ್ನಿರಿ! ನಾವು ನಮ್ಮ ತಂದೆಗೆ ದ್ರಾಕ್ಷಾರಸವನ್ನು ಕುಡಿಸೋಣ. ಮತ್ತು ನಾವು ಅವನೊಂದಿಗೆ ಮಲಗೋಣ. ಹೀಗೆ, ನಮ್ಮ ತಂದೆಯಿಂದ ವಂಶವನ್ನು ನಡೆಯಿಸೋಣ.

---

*ಬೈಗಳನ್ನು—ಅನು.

†Sodom. ‡Gomorrha.

$1945ನೆಯ ಇಸವಿಯಲ್ಲಿ ಅಮೇರಿಕನರು ಜಾಪಾನಿನ ಮೇಲೆ 2 ಆಟಂ ಬಾಂಬುಗಳನ್ನು ಹಾಕಿ, ಇದೇ ರೀತಿ ಅನ್ಯಾಯ ಮಾಡಿದ್ದರು. ಪುನಃ ವಿಯತನಾಮಿನಲ್ಲೂ 21 ವರ್ಷ ತಾಂಡವ ಮಾಡಿದರು.—ಯು. ಮೀ.

ಆಗ ಅವರು ಆ ರಾತ್ರಿ ತಮ್ಮ ತಂದೆಗೆ ದ್ರಾಕ್ಷಾರಸವನ್ನು ಕುಡಿಸಿದರು. ಮತ್ತು ದೊಡ್ಡ ಮಗಳು ಹೋದಳು. ಮತ್ತು ತನ್ನ ತಂದೆಯೊಂದಿಗೆ ಮಲಗಿದಳು.

ನಾವು ಅವನಿಗೆ ಇಂದು ರಾತ್ರಿಯೂ ಕೂಡ, ದ್ರಾಕ್ಷಾರಸವನ್ನು ಕುಡಿಸೋಣ. ನೀನು ಹೋಗಿ ಮಲಗು.

ಹೀಗೆ 'ಲೂತ'*ನ ಇಬ್ಬರು ಹೆಣ್ಣು ಮಕ್ಕಳೂ ತಮ್ಮ ತಂದೆಯಿಂದ ಗರ್ಭಿಣಿಯರಾದರು!

[ಬೈಬಲ್ (ತೌ). ಉತ್ಪತ್ತಿ :-ಪರ್ವ.19 ; ಆ. 32-34, 36]

## (ಮದ್ಯಪಾನದ ನಶೆಯಿಂದ ಇಂತಹ ಕುಕರ್ಮಗಳೇ ಆಗುತ್ತವೆ)

**ಸಮೀಕ್ಷಕ:—** ನೋಡಿರಿ! ಯಾವ ಮದ್ಯಪಾನದ ಮತ್ತಿನಲ್ಲಿ ಕುಕರ್ಮ ಮಾಡುವುದರಿಂದ ಪಿತಾ-ಪುತ್ರಿಯರೂ ಕೂಡ, ದೂರ ಉಳಿಯಲಾರದೇ ಹೋದರೋ, ಅಂತಹ ದುಷ್ಟ ಮದ್ಯವನ್ನು ಕುಡಿಯುವ ಕ್ರೈಸ್ತರೇ ಮೊದಲಾದವರ ಕೇಡಿಗೆ ಇತಿ-ಮಿತಿಯಾದರೂ ಏನಿದ್ದೀತು ?

ಆದುದರಿಂದ, ಸಜ್ಜನರುಗಳು ಮದ್ಯದ ಪಾನ ಮಾಡುವ ಹೆಸರನ್ನೂ ಕೂಡ, ಎತ್ತಬಾರದು ! [23]

## (ಪರಮೇಶ್ವರನಿಂದ ಸಾರಾ ಗರ್ಭಿಣಿಯಾದಳು)

[24] ಮತ್ತು ತನ್ನ ಹೇಳಿಕೆಗೆ ಸಮವಾಗಿ ಪರಮೇಶ್ವರನು ಸಾರಾಳನ್ನು ಭೇಟಿ ಮಾಡಿದನು. ಮತ್ತು ವಚನಕ್ಕೆ ಸರಿಯಾಗಿ ಪರಮೇಶ್ವರನು ಸಾರಾಳ ವಿಷಯದಲ್ಲಿ ವರ್ತಿಸಿದನು.

ಮತ್ತು ಸಾರಾ ಗರ್ಭಿಣಿಯಾದಳು.

[ಬೈಬಲ್ (ತೌ). ಉತ್ಪತ್ತಿ :-ಪರ್ವ 21 ; ಆ. 1-2]

## (ಕ್ರೈಸ್ತರ ಈಶ್ವರನ ಪರಸ್ತ್ರೀಗಮನ)

**ಸಮೀಕ್ಷಕ:—** ಈಗ ಆಲೋಚಿಸಿರಿ! ಸಾರಾಳನ್ನು ಭೇಟಿ ಮಾಡಿ. ಗರ್ಭವತಿಯನ್ನಾಗಿ ಮಾಡಿದನು! ಈ ಕೆಲಸ ಎಂತಹದಾಯಿತು ?

ಪರಮೇಶ್ವರನ ಮತ್ತು ಸಾರಾಳ ಹೊರತು, ಮೂರನೆಯವನು ಯಾವನಾದರೂ ಗರ್ಭಸ್ಥಾಪನಕ್ಕೆ ಕಾರಣವಾಗಿ ಕಾಣಿಸುತ್ತಾನೇನು ? ಸಾರಾಳು ಪರಮೇಶ್ವರನ ಕೃಪೆಯಿಂದ ಗರ್ಭವತಿಯಾದಳು, ಎಂದು ವಿದಿತವಾಗುತ್ತದೆ! [24]

†Lot.

## (ಹಾಜಿರಾಳನ್ನು ಹೊರದೂಡುವುದು)

[25] ಆಗ ಅಬ್ರಹಾಮನು ಬಹಳ ಮುಂಜಾನೆಯೇ ಎದ್ದು, ರೊಟ್ಟಿಯನ್ನು, ಮತ್ತು ಒಂದು ಚರ್ಮದ ಚೀಲದಲ್ಲಿ ನೀರನ್ನು ತೆಗೆದುಕೊಂಡನು. ಮತ್ತು 'ಹಾಜಿರಾ'*ಳ ಹೆಗಲಿನ ಮೇಲೆ ಹೊರಿಸಿದನು. ಮತ್ತು ಬಾಲಕನನ್ನೂ ಕೂಡ, ಅವಳಿಗೆ ಒಪ್ಪಿಸಿ, ಅವಳನ್ನು ಬೀಳ್ಕೊಟ್ಟನು.

ಅವಳು ಆ ಬಾಲಕನನ್ನು ಒಂದು ಪೊದರಿನ ಕೆಳಗೆ ಇಟ್ಟುಬಿಟ್ಟಳು. ಮತ್ತು ಅವಳು ಅವನ ಮುಂದೆ ಕುಳಿತು, ಕೂಗಿ-ಕೂಗಿ ಅತ್ತಳು.

ಆಗ ಈಶ್ವರನು ಆ ಬಾಲಕನ ಶಬ್ದವನ್ನು ಕೇಳಿದನು.

[ಬೈಬಲ್ (ತೌ). ಉತ್ಪತ್ತಿ:—ಪರ್ವ 21; ಆ. 14–17]

## (ಬೈಬಲಿನಲ್ಲಿ ಸಾಧಾರಣ ಜನರ ಮಾತೇ ತುಂಬಿದೆ)

ಸಮೀಕ್ಷಕ:—ಈಗ ನೋಡಿರಿ. ಕ್ರೈಸ್ತರ ಈಶ್ವರನ ಲೀಲೆಯನ್ನು! ಮೊದಲಂತೂ ಸಾರಾಳ ಕಡೆ ಪಕ್ಷಪಾತ ಮಾಡಿ. ಹಾಜಿರಾಳನ್ನು ಅಲ್ಲಿಂದ ಹೊರದೂಡಿಸಿದನು.

ಮತ್ತು ದನಿ ತೆಗೆದು ರೋದಿಸಿದಳು ಹಾಜಿರಾ! ಆದರೆ. ಆಲಿಸಿದುದು ಬಾಲಕನ ಶಬ್ದವನ್ನು! ಇದು ಎಂತಹ ಅದ್ಭುತವಾದ ಮಾತು ? ವಿಷಯ ಹೇಗೆ ನಡೆದಿರಬಹುದೆಂದರೆ—ಬಾಲಕನೇ ರೋದಿಸುತ್ತಾನೆ. ಎಂದು ಈಶ್ವರನಿಗೆ ಭ್ರಮವಾಗಿರಬಹುದು!

ಅಲ್ಲಾ! ಇದು ಈಶ್ವರನ, ಮತ್ತು ಈಶ್ವರನ ಪುಸ್ತಕದ ಮಾತು ಎಂದಿಗಾದರೂ ಆಗಬಲ್ಲದೇನು ? ಈ ಪುಸ್ತಕದಲ್ಲಿ ಸ್ವಲ್ಪ ಮಾತು ಸತ್ಯವಿದ್ದು, [ಮತ್ತು] ಸಾಧಾರಣ ಮನುಷ್ಯನ ಮಾತನ್ನು ಬಿಟ್ಟು, ಎಲ್ಲವೂ ಅಸಾರವಾದುದೇ ತುಂಬಿಕೊಂಡಿದೆ! [25]

## (ಈಶ್ವರನು ಅಬ್ರಹಾಮನ ಪುತ್ರನ ಬಲಿ ಕೇಳುವುದು)

[26] ಮತ್ತು ಈ ಘಟನೆಗಳ ನಂತರ ಹೇಗೆ ಆಯಿತೆಂದರೆ, ಈಶ್ವರನು ಅಬ್ರಹಾಮನ ಪರೀಕ್ಷೆಯನ್ನು ಮಾಡಿದನು. ಮತ್ತು ಅವನಿಗೆ—

"ಓ ಅಬ್ರಹಾಮ್! ನೀನು ಪ್ರೀತಿಸುವ ಆ ನಿನ್ನ ಏಕಮಾತ್ರ ಪುತ್ರನಾದ 'ಇಜಾಕ'†ನನ್ನು, ತೆಗೆದುಕೊಂಡು, ಅವನನ್ನು ಹೋಮದ ಆಹುತಿಯಾಗಿ ಅರ್ಪಿಸು.", ಎಂದನು.

ಮತ್ತು ತನ್ನ ಮಗನಾದ ಇಜಾಕನನ್ನು ಬಂಧಿಸಿ, ಅವನನ್ನು ವೇದಿಯಲ್ಲಿ ಕಾಷ್ಠಗಳ ಮೇಲಿಟ್ಟನು.

---

*Agar. †Isaac.

ಮತ್ತು ಅಬ್ರಹಾಮನು ಚೂರಿಯನ್ನು ತೆಗೆದುಕೊಂಡು, ತನ್ನ ಮಗನನ್ನು ಕೊಲ್ಲಲು ಕೈಯನ್ನು ನೀಡಿದನು. ಆಗ ಪರಮೇಶ್ವರನ ದೂತನು ಸ್ವರ್ಗದ ಮೇಲಿನಿಂದ ಅವನನ್ನು—

"ಅಬ್ರಹಾಮ್! ಅಬ್ರಹಾಮ್!!

"ನಿನ್ನ ಕೈಯನ್ನು ಹುಡುಗನ ಮೇಲೆ ಚಾಚಬೇಡ. ಅವನಿಗೆ ಏನನ್ನೂ ಮಾಡಬೇಡ. ಏಕೆಂದರೆ, ನೀನು ಈಶ್ವರನಿಗೆ ಹೆದರುತ್ತೀಯೋ, ಎಂದು ಈಗ ನಾನು ತಿಳಿದಿದ್ದೇನೆ.", ಎಂದು ಕೂಗಿದನು.

[ಬೈಬಲ್ (ತೌ). ಉತ್ಪತ್ತಿ:—ಪರ್ವ. 22; ಆ. 1, 2, 9-12]

**ಸಮೀಕ್ಷಕ:**—ಈ ಬೈಬಲಿನ ಈಶ್ವರನು ಅಲ್ಪಜ್ಞನಾಗಿದ್ದಾನೆ; ಸರ್ವಜ್ಞನಲ್ಲ, ಎಂಬುದೀಗ ಸ್ಪಷ್ಟವಾಗಿ ಹೋಯಿತು.

ಮತ್ತು ಅಬ್ರಹಾಮನೂ ಕೂಡ, ಒಬ್ಬ ಮುಗ್ಧ ಮನುಷ್ಯನಾಗಿದ್ದನು. ಇಲ್ಲದಿದ್ದರೆ, ಇಂತಹ ಉದ್ಯಮಕ್ಕೇಕೆ ಇಳಿಯುತ್ತಿದ್ದನು? ಮತ್ತು ಬೈಬಲಿನ ಈಶ್ವರನು ಸರ್ವಜ್ಞನಾಗಿದ್ದಿದ್ದರೆ, ಅವನ ಭಾವೀ ಶ್ರದ್ಧೆಯನ್ನೂ ಕೂಡ, ಸರ್ವಜ್ಞತ್ವದಿಂದ ತಿಳಿದುಕೊಳ್ಳುತ್ತಿದ್ದನು.

**ಇದರಿಂದ, ಕ್ರೈಸ್ತರ ಈಶ್ವರನು ಸರ್ವಜ್ಞನಲ್ಲವೆಂದು ನಿಶ್ಚಿತವಾಗುತ್ತದೆ!**

[26]

## (ಸತ್ತವರನ್ನು ಹೂಳುವ ಆದೇಶ)

[27] **ಹೀಗೆ, ತಾವು ನಮ್ಮ ಸಮಾಧಿಗಳಿಂದ ಆರಿಸಿಕೊಂಡು, ತಾವು ತಮ್ಮ ಮೃತಕನನ್ನು ಹೂಳಲು ಶಕ್ತರಾಗುವಂತೆ, ಒಂದರಲ್ಲಿ ತಮ್ಮ ಮೃತಕನನ್ನು ಹೂಳಿರಿ!**

[ಬೈಬಲ್ (ತೌ). ಉತ್ಪತ್ತಿ:—ಪರ್ವ. 23; ಆ. 6]

## (ಹೆಣ ಹೂಳುವುದರಿಂದ ಅನೇಕ ದೋಷಗಳು)

**ಸಮೀಕ್ಷಕ:**—ಶವಗಳನ್ನು ಹೂಳುವುದರಿಂದ, ಜಗತ್ತಿಗೆ ಬಹಳ ಹಾನಿಯುಂಟಾಗುತ್ತದೆ. ಏಕೆಂದರೆ, ಅದು ಕೊಳೆತು, ವಾಯುವನ್ನು ದುರ್ಗಂಧಮಯವನ್ನಾಗಿ ಮಾಡಿ, ರೋಗವನ್ನು ಹರಡಿಬಿಡುತ್ತದೆ!

**ಪ್ರಶ್ನೆ:**—ನೋಡಿರಿ! ಯಾವನ ಮೇಲೆ ಪ್ರೀತಿ ಇರುವುದೋ, ಅವನನ್ನು ಸುಡುವುದು ಒಳ್ಳೆಯ ಮಾತಲ್ಲ. ಮತ್ತು ಹೂಳುವುದು, ಅವನನ್ನು ನಿದ್ರೆಹೋಗಿಸುವಂತೆ ಇರುತ್ತದೆ. ಆದುದರಿಂದ, ಹೂಳುವುದು ಒಳ್ಳೆಯದಾಗಿರುತ್ತದೆ!

ಉತ್ತರ:—ಮೃತನಾದವನನ್ನು ಪ್ರೀತಿಸುತ್ತೀರಿ, ಎಂದಾದರೆ, ನಿಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳುವುದಿಲ್ಲವೇಕೆ?

ಮತ್ತು ಹೂಳುತ್ತೀರಿಯಾದರೂ ಏತಕ್ಕೆ? ಯಾವ ಜೀವಾತ್ಮನ ಮೇಲೆ ಪ್ರೀತಿ ಇದ್ದಿತೋ, ಅವನು ಹೊರಟು ಹೋದನು. ಇನ್ನು, ದುರ್ಗಂಧಮಯವಾದ ಮಣ್ಣಿನೊಂದಿಗೆ ಪ್ರೀತಿ ಏನು? ಮತ್ತು, ಪ್ರೀತಿಸುತ್ತೀರಾದರೆ, ಅವನನ್ನು ಭೂಮಿಯಲ್ಲಿ ಏಕೆ ಹೂಳುತ್ತೀರಿ? ಏಕೆಂದರೆ, ಯಾವನಾದರೊಬ್ಬನು ಮತ್ತೊಬ್ಬನಿಗೆ—

"ನಿನ್ನನ್ನು ಭೂಮಿಯಲ್ಲಿ ಹೂಳುವೆವು.", ಎಂದರೆ, ಅವನು ಅದನ್ನು ಕೇಳಿ ಪ್ರಸನ್ನನೆಂದಿಗೂ ಆಗುವುದಿಲ್ಲ.

ಅವನ ಮುಖ, ಕಣ್ಣು ಮತ್ತು ಶರೀರದ ಮೇಲೆ ಧೂಳು, ಕಲ್ಲು, ಇಟ್ಟಿಗೆ, ಸುಣ್ಣ—ಇವನ್ನು ಹಾಕುವುದು, ಎದೆಯ ಮೇಲೆ ಕಲ್ಲನ್ನು ಇಡುವುದು ಯಾವ ಪ್ರೀತಿಯ ಕೆಲಸವಾಗಿದೆ?

ಮತ್ತು ಪೆಟ್ಟಿಗೆಯಲ್ಲಿಟ್ಟು ಹೂಳುವುದರಿಂದ, ಬಹಳ ದುರ್ಗಂಧವುಂಟಾಗಿ. ಪೃಥಿವಿಯಿಂದ ಹೊರಟು, ವಾಯುವನ್ನು ಕೆಡಿಸಿ, ದಾರುಣವಾದ ರೋಗೋತ್ಪತ್ತಿಯನ್ನುಂಟುಮಾಡುತ್ತದೆ.

ಎರಡನೆಯದಾಗಿ—ಒಂದು ಶವಕ್ಕೆ ಕನಿಷ್ಠ ಪಕ್ಷ ಆರು ಮೊಳ ಉದ್ದ, ನಾಲ್ಕು ಮೊಳ ಅಗಲದ ಭೂಮಿಯು ಬೇಕು. ಇದೇ ಲೆಕ್ಕದಂತೆ. ನೂರು, ಸಾವಿರ, ಅಥವಾ ಲಕ್ಷ, ಇಲ್ಲವೇ ಕೋಟ್ಯಂತರ ಮಾನವರಿಗೆ ಎಷ್ಟು ಭೂಮಿ ವ್ಯರ್ಥವಾಗಿ ಕಟ್ಟು ಬೀಳುತ್ತದೆ? ಅದು ಹೊಲದ ಕೆಲಸಕ್ಕೂ ಸಲ್ಲದು; ತೋಟಕ್ಕೂ ಸಲ್ಲದು; ಮತ್ತು ನಿವಾಸದ ಕಾರ್ಯಕ್ಕಂತೂ ಬರುವಂತೆಯೇ ಇಲ್ಲ! ಆದುದರಿಂದ, ಹೂಳುವುದು ಎಲ್ಲಕ್ಕಿಂತ ಕೆಟ್ಟದಾಗಿರುತ್ತದೆ!

ಅದಕ್ಕಿಂತ ಸ್ವಲ್ಪ ಕಡಿಮೆ ಕೆಟ್ಟದು ನೀರಿನಲ್ಲಿ ಹಾಕುವುದು. ಏಕೆಂದರೆ. ಜಲಜಂತುಗಳು ಅದನ್ನು ಅದೇ ಸಮಯದಲ್ಲಿ ಸೀಳಿ-ಹರಿದು. ತಿಂದುಬಿಡುತ್ತವೆ. ಆದರೆ, ಯಾವ ಸ್ವಲ್ಪ ಮೂಳೆ, ಮಲ ಜಲದಲ್ಲಿ ಉಳಿಯುವುದೋ. ಅದು ಕೊಳೆತು, ಜಗತ್ತಿಗೆ ದುಃಖದಾಯಕವಾಗುವುದು!

ಅದಕ್ಕಿಂತ ಮತ್ತೂ ಸ್ವಲ್ಪ ಕಡಿಮೆ ಕೆಟ್ಟದು ಕಾಡಿನಲ್ಲಿ ಬಿಡುವುದಾಗಿದೆ! ಏಕೆಂದರೆ. ಅದನ್ನು ಮಾಂಸಾಹಾರೀ ಪಶುಗಳು. ಪಕ್ಷಿಗಳು ಕಿತ್ತು ತಿನ್ನುವುವು. ಹಾಗಿದ್ದರೂ, ಅದರ ಮೂಳೆ, ಮಜ್ಜೆ ಮತ್ತು ಮಲಗಳು ಕೊಳೆತು [ಎಷ್ಟು] ದುರ್ಗಂಧವನ್ನುಂಟು ಮಾಡುವುವೋ, ಅಷ್ಟು ಮಟ್ಟಿಗೆ ಜಗತ್ತಿಗೆ ಅನುಪಕಾರವಾಗುವುದು.

ಮತ್ತು ಸರ್ವೋತ್ತಮವಾದುದೆಂದರೆ, ದಹನಮಾಡುವುದೇ ಆಗಿದೆ! ಏಕೆಂದರೆ, ಅವರ [ಭೌತಿಕ] ತತ್ತ್ವಗಳೆಲ್ಲಾ ಅಣುಗಳಾಗಿ ಹೋಗಿ, ವಾಯುವಿನಲ್ಲಿ ಹಾರಿ ಹೋಗುವುವು!

## (ವಿಧಿಪೂರ್ವಕವಾಗಿಯೇ ಶವವನ್ನು ಸುಡಬೇಕು)

**ಪ್ರಶ್ನೆ:**—ಸುಡುವುದರಿಂದಲೂ ದುರ್ಗಂಧ ಬರುತ್ತದೆ.

**ಉತ್ತರ:**—ವಿಧಿವಿರುದ್ಧವಾಗಿ ಸುಡುವರಾದರೆ, ಸ್ವಲ್ಪ ದುರ್ಗಂಧ ಉಂಟಾಗುತ್ತದೆ. ಆದರೆ, ಹೂಳುವುದು ಮೊದಲಾದುದಕ್ಕಿಂತ ಬಹಳ ಕಡಿಮೆ ಉಂಟಾಗುವುದು.

ಮತ್ತು ವೇದದಲ್ಲಿ ಹೇಳಿರುವಂತೆ, ವಿಧಿಪೂರ್ವಕವಾಗಿ, ಎಂದರೆ—

ಶವಕ್ಕಾಗಿ ಮೂರು ಮೊಳ ಆಳವೂ, ಮೂರುವರೆ ಮೊಳ ಅಗಲವೂ, ಐದು ಮೊಳ ಉದ್ದವೂ, ತಳದಲ್ಲಿ ಒಂದೂವರೆ ಗೇಣು, ಎಂದರೆ, ಇಳಿಜಾರಾದ* ವೇದಿಯನ್ನು ಅಗೆದು, ಶರೀರದ ಭಾಗಕ್ಕೆ ಸರಿತೂಗುವಂತೆ ತುಪ್ಪವನ್ನೂ, ಅದರಲ್ಲಿ ಸೇರಿಗೆ ಗುಲಗುಂಜಿಯಷ್ಟು ಕಸ್ತೂರಿಯನ್ನೂ, ಅರ್ಧ ತೊಲೆಯಷ್ಟು ಕೇಸರಿಯನ್ನೂ ಬೆರೆಸಿಟ್ಟುಕೊಂಡು, ಕನಿಷ್ಠಪಕ್ಷ ಅರ್ಧಮಣ ಚಂದನ ; ಹೆಚ್ಚಿಗೆ ಎಷ್ಟು ಬೇಕಾದರೂ ತೆಗೆದುಕೊಳ್ಳಿ; ಅಗರು, ತಗರು, ಕರ್ಪೂರ ಮೊದಲಾದುವನ್ನೂ, ಮತ್ತು ಮುತ್ತುಗ ಮೊದಲಾದುವುಗಳ ಕಟ್ಟಿಗೆಯನ್ನು ವೇದಿಯಲ್ಲಿ ಜೋಡಿಸಿ, ಅದರ ಮೇಲೆ ಶವವನ್ನು ಇಟ್ಟು, ಮತ್ತೆ ನಾಲ್ಕು ಕಡೆಯಿಂದಲೂ ಮೇಲೆ, ವೇದಿಯ ಸ್ತರದಿಂದ ಗೇಣಿನವರೆಗೆ [ಕಟ್ಟಿಗೆಗಳನ್ನು] ತುಂಬಿಸಿ, ತುಪ್ಪದ ಆಹುತಿಗಳನ್ನಿತ್ತು ದಹನ ಮಾಡಬೇಕು†, ಎಂದು ಬರೆದಿದೆ.

ಈ ರೀತಿಯಿಂದ ದಹಿಸಿದರೆ, ಸ್ವಲ್ಪವೂ ಕೂಡ, ದುರ್ಗಂಧ ಹರಡುವುದಿಲ್ಲ!

ಆದರೆ, ಇದಕ್ಕೇ **'ಅಂತ್ಯೇಷ್ಟಿ'**, **'ನರಮೇಧ'**, **'ಪುರುಷಮೇಧಯಜ್ಞ'**, ಎಂದು ಹೆಸರಿದೆ.

---

*ಎಂದರೆ, ತಲೆಯ ಕಡೆ, ಸ್ವಲ್ಪ ಎತ್ತರ; ಮತ್ತು ಕಾಲಿನ ಕಡೆ ಇಳಿಜಾರಾಗಿ. —ಯು.ಮೀ.

†ಈ ಬಗ್ಗೆ ಸ್ವಾಮೀ ದಯಾನಂದ-ಸರಸ್ವತಿ ರಚಿತ 'ಸಂಸ್ಕಾರವಿಧಿ'ಯ 'ಅಂತ್ಯೇಷ್ಟಿ ಸಂಸ್ಕಾರ'ವನ್ನು ನೋಡಿ. ಈ ಗ್ರಂಥ ಕನ್ನಡದಲ್ಲಿ 1989ನೆಯ ಇಸವಿಯಲ್ಲಿ ಪ್ರಕಟವಾಗಿದೆ. —ಸಂ.

ಮತ್ತು ದರಿದ್ರನಾಗಿದ್ದರೆ, ಇಪ್ಪತ್ತು ಸೇರಿಗಿಂತ ಕಡಿಮೆ ತುಪ್ಪವನ್ನು ಚಿತೆಯಲ್ಲಿ ಹಾಕಬಾರದು. ಬೇಕಾದರೆ, ಭಿಕ್ಷೆ ಬೇಡುವುದರಿಂದ, ಅಥವಾ ಸಾಮಾಜಿಕರ ದಾನದಿಂದ, ಅಥವಾ ರಾಜ್ಯ [ಪ್ರಶಾಸನ]ದಿಂದ ಅದು ಸಿಕ್ಕಲಿ! ಆದರೆ, ದಹನವನ್ನು ಅದೇ ಪ್ರಕಾರವಾಗಿ ಮಾಡಬೇಕು.

ಮತ್ತು ತುಪ್ಪ ಮೊದಲಾದುವು ಯಾವುದೇ ರೀತಿಯಿಂದಲೂ ಸಿಕ್ಕದೇ ಹೋದರೂ, ಹೂಳುವುದೇ ಮೊದಲಾದುದಕ್ಕಿಂತ ಕೇವಲ ಸೌದೆಯಿಂದಲೇ ಆದರೂ, ಶವವನ್ನು ದಹನ ಮಾಡುವುದು ಉತ್ತಮವಾಗಿರುತ್ತದೆ!

**ಏಕೆಂದರೆ, ಒಂದು ವಿಶ್ವಾ* ಭೂಮಿಯಲ್ಲಿ, ಅಥವಾ ಒಂದು ವೇದಿಯಲ್ಲಿ ಲಕ್ಷಾಂತರ-ಕೋಟ್ಯಂತರ ಮೃತರು ದಹಿಸಲ್ಪಡಬಲ್ಲರು.** ಭೂಮಿಯೂ ಕೂಡ, ಹೂಳುವುದರಿಂದ ಆಗುವಂತೆ, ಹೆಚ್ಚಾಗಿ ಕೆಡುವುದಿಲ್ಲ!

**ಮತ್ತು ಗೋರಿಯನ್ನು ನೋಡುವುದರಿಂದ ಭಯವೂ ಉಂಟಾಗುತ್ತದೆ! ಆದುದರಿಂದ, ಹೂಳುವುದು ಮೊದಲಾದುದು ಸರ್ವಥಾ ನಿಷಿದ್ಧವಾಗಿರುತ್ತದೆ!** [27]

### (ಈಶ್ವರನಿಂದ ಅಬ್ರಹಾಮನ ಪಥ-ಪ್ರದರ್ಶನ)

**[28] ನನ್ನ ಒಡೆಯನನ್ನು ತನ್ನ ದಯೆಯಿಂದ ಮತ್ತು ತನ್ನ ಸತ್ಯದಿಂದ ಹೊರತಾಗಿ ಬಿಡದ ಪರಮೇಶ್ವರನು, [ಎಂದರೆ,] ನನ್ನ ಒಡೆಯನಾದ ಅಬ್ರಹಾಮನ ಈಶ್ವರನು, ಧನ್ಯನಾಗಿದ್ದಾನೆ.**

**ಮಾರ್ಗದಲ್ಲಿ ಪರಮೇಶ್ವರನು ನನ್ನ ಒಡೆಯನ ಸೋದರರ ಮನೆಯ ಕಡೆಗೆ, ನನಗೆ ಪಥಪ್ರದರ್ಶನ ಮಾಡಿದನು.**

**[ಬೈಬಲ್ (ತೌ). ಉತ್ಪತ್ತಿ:—ಪರ್ವ.24 ; ಆ. 27]**

**ಸಮೀಕ್ಷಕ:**—ಅವನು ಅಬ್ರಹಾಮನಿಗೆ ಮಾತ್ರ ಈಶ್ವರನಾಗಿದ್ದನೋ? ಮತ್ತು ಈ ದಿನಗಳಲ್ಲಿ ಪಥಪ್ರದರ್ಶಕರು ಅಥವಾ ಮುಂದಾಳುಗಳು ಮುಂದೆ ಮುಂದೆ ನಡೆದು, ದಾರಿ ತೋರಿಸುತ್ತಾ ಹೋಗುವ ಹಾಗೆ, ಈಶ್ವರನೂ ಕೂಡ, ಮಾಡಿದ ನಾದರೆ, ಆಧುನಿಕ ಕಾಲದಲ್ಲಿ ಮಾರ್ಗವನ್ನೇಕೆ ತೋರಿಸುವುದಿಲ್ಲ?

ಮತ್ತು ಮಾನವರೊಂದಿಗೆ ಮಾತನ್ನೇಕೆ ಆಡುವುದಿಲ್ಲ?

**ಆದುದರಿಂದ, ಇಂತಹ ಮಾತುಗಳು ಈಶ್ವರನವಾಗಲೀ, ಈಶ್ವರನ ಪುಸ್ತಕದವಾಗಲೀ, ಎಂದಿಗೂ ಆಗಲಾರವು; ಆದರೆ, ಕಾಡು ಮನುಷ್ಯರದಾಗಿವೆ!** [28]

---

*ಇದು ಉತ್ತರ ಭಾರತದ ಭೂಮಿಯ ಅಳತೆ ; 1/40 ಎಕರೆಯಷ್ಟು.—ಸಂ.

## (ಇಸ್ಮಾಯೇಲನ ಮಕ್ಕಳ ಹೆಸರು ಹೇಳುವುದು)

[29] 'ಇಸ್ಮಯೇಲ'[1]ನ ಮಕ್ಕಳ ಹೆಸರುಗಳು ಇವಾಗಿವೆ—ಇಸ್ಮಯೇಲನ ಮೊದಲನೆಯ ಮಗ 'ನಬೀತ'[2] ಮತ್ತು 'ಕೀದಾರ'[3] ಮತ್ತು 'ಅದಬಿಯೇಲ್'[4] ಮತ್ತು 'ಮಿಂಬಸಾಮ್'[5].

ಮತ್ತು 'ಮಿಂಸಮಾಅ'[6] ಮತ್ತು ದೂಮಃ'[7] ಮತ್ತು 'ಮಸ್ಸಾ'[8].

'ಹದರ'[9] ಮತ್ತು 'ತೈಮಾ'[10], ಇತೂರ,'[11] 'ನಫೀಸ್'[12] ಮತ್ತು 'ಕಿದಮಃ'.[13]

[ಬೈಬಲ್ (ತೌ). ಉತ್ಪತ್ತಿ:-ಪರ್ವ. 2; ಆ 13-15]

ಸಮೀಕ್ಷಕ:—ಈ ಇಸ್ಮಯೇಲನು ಅಬ್ರಹಾಮನಿಂದ. ಅವನ ದಾಸಿಯಾದ ಹಾಜಿರಾಳಿಗೆ ಹುಟ್ಟಿದ ಮಗನಾಗಿದ್ದನು. [29]

## (ಯಾಕೂಬನು ಛಲ-ಕಪಟದಿಂದ ಆಶೀರ್ವಾದ ಪಡೆಯುವುದು)

[30] ನಾನು ನಿನ್ನ ತಂದೆಯ ರುಚಿಗೆ ಸರಿಯಾಗಿ, [ಅವುಗಳ ಮಾಂಸದ] ರುಚಿಕರವಾದ ಭೋಜನವನ್ನು ತಯಾರಿಸುವೆನು. ಮತ್ತು ನೀನು ನಿನ್ನ ತಂದೆಯ ಬಳಿಗೆ ಅವನು ತಿನ್ನುವುದಕ್ಕಾಗಿ, ಮತ್ತು ತಾನು ಸಾಯುವ ಮುನ್ನ, ನಿನಗೆ ಆಶೀರ್ವಾದ ಮಾಡುವುದಕ್ಕಾಗಿ, ತೆಗೆದುಕೊಂಡು ಹೋಗು.

ಮತ್ತು 'ರಿಬಕಃ'[14]ಳು ತನ್ನ ಮನೆಯಿಂದ ತನ್ನ ಜ್ಯೇಷ್ಠ ಪುತ್ರ 'ಏಸೌ'[15]ನ ಉತ್ತಮ ಪೋಷಾಕನ್ನು ತೆಗೆದುಕೊಂಡಳು. [ಮತ್ತು ತನ್ನ ಕಿರಿಯ ಪುತ್ರ 'ಯಾಕೂಬ'[16]ನಿಗೆ ತೊಡಿಸಿದಳು].

ಮತ್ತು ಮೇಕೆಯ ಮರಿಗಳ ಚರ್ಮವನ್ನು ಅವನ ಕೈಗಳ, ಮತ್ತು ನುಣುಪು ಕೊರಳಿನ ಮೇಲೆ ಸುತ್ತಿದಳು.

ಆಗ ಯಾಕೂಬನು ತನ್ನ ತಂದೆಗೆ—

"ನಾನು ನಿಮ್ಮ ಜ್ಯೇಷ್ಠಪುತ್ರನಾದ ಏಸೌ ಆಗಿದ್ದೇನೆ. ತಾವು ಹೇಳಿದಂತೆ ನಾನು ಮಾಡಿದ್ದೇನೆ. ಎದ್ದು ಕುಳಿತುಕೊಳ್ಳಿರಿ. ತಮ್ಮ ಪ್ರಾಣವು ನನಗೆ ಆಶೀರ್ವಾದ ಕೊಡುವಂತೆ ಮೇಕೆಯ ಮಾಂಸದಿಂದ ಭೋಜನಮಾಡಿರಿ.", ಎಂದನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ. 27; ಆ. 9,10,15,16,19]

---

1. Ismael 2. Nabajoth 3. Cedar 4. Adbeel 5. Mabsam 6. Masma 7. Duma 8. Massa 9. Hadar 10. Thema 11. Jethur 12. Naphis 13. Cedma 14. Rebacca 15. Esau 16. Jacob

## (ಛಲ-ಕಪಟಿಗಳೂ ಪ್ರವಾದಿಗಳಾದರು!)

ಸಮೀಕ್ಷಕ:—ನೋಡಿರಿ! ಇಂತಹ ಸುಳ್ಳು-ಕಪಟದಿಂದ ಆಶೀರ್ವಾದ ಪಡೆದುಕೊಂಡು, ಆಮೇಲೆ ಸಿದ್ಧರೂ, ಪ್ರವಾದಿಗಳೂ ಆಗುತ್ತಾರೆ! ಇದು ಆಶ್ಚರ್ಯದ ವಿಷಯವಲ್ಲವೇನು?

ಮತ್ತು ಇಂತಹವರು ಕ್ರೈಸ್ತರ ಮುಂದಾಳುಗಳಾಗಿ ಹೋಗಿದ್ದಾರೆ! ಮತ್ತೆ, ಇವರ ಮತದ ಗಲಿಬಿಲಿಯಲ್ಲಿ ಕಡಿಮೆ ಏನು? [30]

## (ಕಲ್ಲಿನ ಕಂಬವನ್ನು ನಿಲ್ಲಿಸಿ, ಈಶ್ವರನ ಮನೆ)

[31] ಮತ್ತು ಯಾಕೂಬನು ಬೆಳಗ್ಗೆ ಮುಂಚೆಯೇ ಎದ್ದನು. ಮತ್ತು ತನ್ನ ತಲೆ ದಿಂಬಾಗಿ ಇಟ್ಟುಕೊಂಡಿದ್ದ ಕಲ್ಲನ್ನು ಸ್ತಂಭವಾಗಿ ನಿಲ್ಲಿಸಿದನು. ಮತ್ತು ಅದರ ಮೇಲೆ ಎಣ್ಣೆಯನ್ನು ಹಾಕಿದನು.

ಮತ್ತು ಆ ಸ್ಥಳಕ್ಕೆ 'ಬೈತಯೇಲ್'[1], ಎಂದು ಹೆಸರಿಟ್ಟನು.

ಮತ್ತು 'ನಾನು ಕಂಭವಾಗಿ ನಿಲ್ಲಿಸಿರುವ ಕಲ್ಲು ಈಶ್ವರನ ಮನೆಯಾಗುವುದು', [ಎಂದನು.]

[ಬೈಬಲ್ (ತೌ). ಉತ್ಪತ್ತಿ:— ಪರ್ವ. 28; ಆ. 18, 19, 22]

ಸಮೀಕ್ಷಕ:—ಕಾಡುಜನರ ಕಾರ್ಯಗಳನ್ನು ಈಗ ನೋಡಿರಿ! ಇವರೇ ಕಲ್ಲುಗಳನ್ನು ಪೂಜಿಸಿದರು ಮತ್ತು ಪೂಜೆಮಾಡಿಸಿದರು! ಮತ್ತು ಇದನ್ನು ಮುಸಲ್ಮಾನರು 'ಬಯುತಲ್ ಮುಕದ್ದಸ್', ಎನ್ನುತ್ತಾರೆ! ಈ ಕಲ್ಲೊಂದೇ ಈಶ್ವರನ ಮನೆಯೋ? ಮತ್ತು ಆ ಕಲ್ಲಿನಲ್ಲಿ ಮಾತ್ರ ಈಶ್ವರನಿರುತ್ತಿದ್ದನೋ?

ಭಾಪು, ಭಾಪು!! ಏನು ಹೇಳಬೇಕು? ಕ್ರೈಸ್ತಜನರೇ! ಮಹಾ ಮೂರ್ತಿಪೂಜಕರಂತೂ ನೀವೇ ಆಗಿದ್ದೀರಿ!! [31]

## (ಈಶ್ವರನು ರಾಖಿಲಳ ಗರ್ಭವನ್ನು ತೆರೆದನು)

[32] ಮತ್ತು ಈಶ್ವರನು 'ರಾಖಿಲ'[2]ಳನ್ನು ಸ್ಮರಿಸಿದನು. ಮತ್ತು ಈಶ್ವರನು ಅವಳ [ಅರಿಕೆಯನ್ನು] ಕೇಳಿದನು. ಮತ್ತು ಅವಳ ಗರ್ಭಕೋಶವನ್ನು ಬಿಚ್ಚಿದನು.

ಮತ್ತು ಅವಳು ಗರ್ಭಿಣಿಯಾದಳು ಮತ್ತು ಮಗನನ್ನು ಹೆತ್ತಳು.

ಮತ್ತು—'ಈಶ್ವರನು ನನ್ನ ನಿಂದೆಯನ್ನು ದೂರಮಾಡಿದನು.', ಎಂದಳು.

[ಬೈಬಲ್ (ತೌ). ಉತ್ಪತ್ತಿ:—ಪರ್ವ. 30; ಆ. 22, 23]

---

1. Bethel. 2. Rachel.

**ಸಮೀಕ್ಷಕ:**—ಭಲೇ, ಕ್ರೈಸ್ತರುಗಳ ಈಶ್ವರನೇ! ಏನು ದೊಡ್ಡ ಡಾಕ್ಟರನಾಗಿದ್ದೀಯೆ! ಸ್ತ್ರೀಯರ ಗರ್ಭಕೋಶವನ್ನು ಬಿಚ್ಚಲು ಎಂತಹ ಶಸ್ತ್ರಗಳು ಅಥವಾ ಔಷಧಗಳಿದ್ದುವು? ಯಾವುದರಿಂದ ಬಿಚ್ಚಿದೆ? **ಇವೆಲ್ಲ ಮಾತುಗಳೂ ಮೊಬ್ಬಿನ ಮಾತುಗಳು ಅಷ್ಟೇ!** [32]

## (ಸ್ವಪ್ನದಲ್ಲಿ ಈಶ್ವರ)

**[33] ಆದರೆ, ಈಶ್ವರನು ನಿದ್ರಿಸುತ್ತಿರುವ 'ಲಾವನ'[1]ನ ಬಳಿ ರಾತ್ರಿಗೆ ಸ್ವಪ್ನದಲ್ಲಿ ಬಂದನು. ಮತ್ತು ಅವನಿಗೆ—**

**"ಸಾವಧಾನನಾಗಿರು. ನೀನು ಯಾಕೂಬನಿಗೆ ಒಳ್ಳೆಯದು-ಕೆಟ್ಟದು ಯಾವುದನ್ನೂ ಹೇಳಬೇಡ.**

**"ಏಕೆಂದರೆ, ನೀನು ನಿನ್ನ ತಂದೆಯ ಮನೆಯ ಬಗೆಗೆ ಅತ್ಯಂತ ಅಭಿಲಾಷಿಯಾಗಿದ್ದೀಯೆ. ನೀನು ಏತಕ್ಕೆ ನನ್ನ ದೇವರುಗಳನ್ನು ಅಪಹರಿಸಿದ್ದೀಯೆ?", ಎಂದು ಕೇಳಿದನು.**

**[ಬೈಬಲ್ (ತೌ). ಉತ್ಪತ್ತಿ:—ಪರ್ವ. 31; ಆ. 24, 30]**

## (ಈಗ ಸ್ವಪ್ನದಲ್ಲಿ ಈಶ್ವರನೇಕೆ ಬರುವುದಿಲ್ಲ?)

**ಸಮೀಕ್ಷಕ:**—ನಾವು ಮಾದರಿಗಾಗಿ ಇದನ್ನು ಬರೆಯುತ್ತೇವೆ.

ಸಾವಿರಾರು ಜನರಿಗೆ ಕನಸಿನಲ್ಲಿ ಬಂದನು; ಮಾತನಾಡಿದನು. ಜಾಗೃತ [ಅವಸ್ಥೆಯಲ್ಲಿ] ಸಾಕ್ಷಾತ್ತಾಗಿ ಸಂಧಿಸಿದನು. ತಿಂದನು–ಕುಡಿದನು; ಬಂದನು–ಹೋದನು; ಎಂದು ಮೊದಲಾಗಿ ಬೈಬಲಿನಲ್ಲಿ ಬರೆದಿದೆ. ಆದರೆ, ಈಗ ಅವನು ಇದ್ದಾನೋ, ಅಥವಾ ಇಲ್ಲವೋ, ತಿಳಿಯದು! ಏಕೆಂದರೆ, **ಈಗ ಯಾವನಿಗೂ ಸ್ವಪ್ನದಲ್ಲಿ ಅಥವಾ ಜಾಗ್ರದವಸ್ಥೆಯಲ್ಲಿಯೂ ಕೂಡ, ಈಶ್ವರನು ಸಿಕ್ಕುವುದಿಲ್ಲ!**

ಮತ್ತು ಈ ಕಾಡುಜನರು ಶಿಲೆ ಮೊದಲಾದುವುಗಳ ಮೂರ್ತಿಗಳನ್ನು ದೇವರೆಂದು ಅಂಗೀಕರಿಸಿ, ಪೂಜಿಸುತ್ತಿದ್ದರು, ಎಂಬುದೂ ಕೂಡ, ವಿದಿತವಾಯಿತು. ಆದರೆ, ಕ್ರೈಸ್ತರ ಈಶ್ವರನೂ ಕೂಡ, ಕಲ್ಲನ್ನೇ ದೇವರೆಂದು ಗ್ರಹಿಸುತ್ತಾನೆ! ಇಲ್ಲದಿದ್ದರೆ, 'ದೇವರುಗಳ ಕಳವು', ಎನ್ನುವುದು ಹೇಗೆ ಅನ್ವಯಿಸೀತು? [33]

## (ಈಶ್ವರನ ಸೇನೆ)

**[34] ಯಾಕೂಬನು ತನ್ನ ಮಾರ್ಗದಲ್ಲಿ ನಡೆದು ಹೋದನು. ಮತ್ತು ಈಶ್ವರನ ದೂತರು ಅವನನ್ನು ಮತ್ತೆ ಸಂಧಿಸಿದರು.**

---

1. Laban.

ಮತ್ತು ಯಾಕೂಬನು ಅವರನ್ನು ನೋಡಿ—'ಇದು ಈಶ್ವರನ ಸೇನೆಯಾಗಿದೆ.', ಎಂದನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ 82. ಆ; 1, 2]

**ಸಮೀಕ್ಷಕ:**—ಈಗ ಕ್ರೈಸ್ತರ ಈಶ್ವರನು ಮನುಷ್ಯನೆಂಬುದರಲ್ಲಿ ಸಂದೇಹವಾದುದು ಏನೂ ಉಳಿಯಲಿಲ್ಲ. ಏಕೆಂದರೆ, [ಅವನು] ಸೈನ್ಯವನ್ನೂ ಕೂಡ, ಇಟ್ಟುಕೊಂಡಿದ್ದಾನೆ.

ಸೈನ್ಯವಿರುವಾಗ ಶಸ್ತ್ರಗಳೂ ಇರಬಹುದು! ಮತ್ತು ಅತ್ತ-ಇತ್ತ ಏರಿ ಹೋಗಿ, ಯುದ್ಧವನ್ನೂ ಕೂಡ, ಮಾಡುತ್ತಿರಬಹುದು! ಇಲ್ಲವಾದರೆ, ಸೈನ್ಯವನ್ನಿಡುವುದರ ಪ್ರಯೋಜನವೇನು ? [34]

## (ಈಶ್ವರನೊಂದಿಗೆ ಯಾಕೂಬನ ಮಲ್ಲಯುದ್ಧ)

**[35]** ಮತ್ತು ಯಾಕೂಬನು ಒಂಟಿಯಾಗಿ ಉಳಿದುಹೋದನು. ಮತ್ತು ಅಲ್ಲಿ ಬೆಳಕು ಹರಿಯುವವರೆಗೆ ಒಬ್ಬನು ಅವನೊಂದಿಗೆ ಮಲ್ಲಯುದ್ಧವನ್ನು ಮಾಡುತ್ತಾ ಇದ್ದನು.

ಮತ್ತು ತಾನು ಅವನಿಗಿಂತ ಪ್ರಬಲನಾಗಲಿಲ್ಲವೆಂದು ಕಂಡು ಬಂದಾಗ, ಅವನು ಅವನ ಜಂಘೆಯನ್ನು ಒಳಗಿನಿಂದ ಸ್ಪರ್ಶಿಸಿದನು.

ಆಗ ಯಾಕೂಬನ ಜಂಘೆಯ ನರವು ಅವನೊಂದಿಗೆ ಮಲ್ಲಯುದ್ಧಮಾಡುತ್ತಿದ್ದಾಗ ಸೆಟೆತುಕೊಂಡಿತು.

ಆಗ ಅವನು—

"ನನಗೆ ಹೋಗಗೊಡು. ಏಕೆಂದರೆ, ಬೆಳಕು ಹರಿಯುತ್ತಿದೆ", ಎಂದನು!

ಮತ್ತು ಅವನು—

"ಎಲ್ಲಿಯವರೆಗೆ ನೀನು ನನಗೆ ಆಶೀರ್ವಾದವನ್ನು ಕೊಡುವುದಿಲ್ಲವೋ, ಆವರೆಗೆ ನಾನು ನಿನ್ನನ್ನು ಹೋಗಲು ಬಿಡುವುದಿಲ್ಲ", ಎಂದನು.

ಆಗ ಅವನು ಅವನನ್ನು—"ನಿನ್ನ ಹೆಸರೇನು ?", ಎಂದು ಕೇಳಿದನು. ಮತ್ತು ಅವನು—"ಯಾಕೂಬ್!", ಎಂದನು. ಆಗ ಅವನು—

"ನಿನ್ನ ಹೆಸರು ಇನ್ನು ಮುಂದೆ 'ಯಾಕೂಬ', ಎಂದು ಇರುವುದಿಲ್ಲ; ಆದರೆ, 'ಇಸ್ರಾಯೇಲ್'[1], ಎಂದಾಗುವುದು. ಏಕೆಂದರೆ. ನೀನು ಈಶ್ವರನ ಮುಂದೆ, ಮತ್ತು ಮಾನವರ ಮುಂದೆ ರಾಜನಂತೆ ಮಲ್ಲಯುದ್ಧವನ್ನು ಮಾಡಿದೆ; ಮತ್ತು ಗೆದ್ದೆ!", ಎಂದು ಹೇಳಿದನು.

---

1. Israel.

ಆಗ ಯಾಕೂಬನು ಇದನ್ನು ಹೇಳಿ, —"ತಮ್ಮ ಹೆಸರನ್ನು ಹೇಳಿರಿ." ಎಂದು ಕೇಳಿದನು. ಮತ್ತು ಅವನು—

"ನನ್ನ ಹೆಸರನ್ನು ಏಕೆ ಕೇಳುತ್ತೀಯೆ?", ಎಂದು ಕೇಳಿದನು. ಮತ್ತು ಅವನು ಅವನಿಗೆ ಅಲ್ಲಿ ಆಶೀರ್ವಾದವನ್ನು ಕೊಟ್ಟನು.

ಮತ್ತು ಯಾಕೂಬನು ಆ ಸ್ಥಳಕ್ಕೆ 'ಫನೂಯೇಲ್'[1], ಎಂದು ಹೆಸರಿಟ್ಟನು.

ಏಕೆಂದರೆ, ನಾನು ಈಶ್ವರನನ್ನು ಪ್ರತ್ಯಕ್ಷವಾಗಿ ನೋಡಿದೆನು: ಮತ್ತು ನನ್ನ ಪ್ರಾಣ ಉಳಿದಿದೆ.

ಮತ್ತು ಅವನು ಫನೂಯೇಲದಿಂದ ಮುಂದೆ ನಡೆದಾಗ, ಸೂರ್ಯನ ಜ್ಯೋತಿ ಅವನ ಮೇಲೆ ಬಿದ್ದಿತು. ಮತ್ತು ಅವನು ತನ್ನ ಜಂಘೆಯಿಂದ ಕುಂಟುತ್ತಾ ಇದ್ದನು.

ಆದುದರಿಂದ, ಇಸ್ರಾಯೇಲನ ವಂಶದವರು, ಯಾವುದರ ನರ ಸಿಕ್ಕು ಗಟ್ಟಿದ್ದಿತೋ, ಆ ಜಂಘೆಯ ನಾಡಿಯನ್ನು ಇಂದಿನವರೆಗೂ ತಿನ್ನುವುದಿಲ್ಲ. ಏಕೆಂದರೆ, ಅವನು ಯಾಕೂಬನ ಜಂಘೆಯ ಯಾವ ನಾಡಿ ಏರಿ ಹೋಗಿದ್ದಿತೋ, ಅದನ್ನು ಮುಟ್ಟಿದ್ದನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ. 23; ಆ. 24-82]

**ಸಮೀಕ್ಷಕ:**—ಕ್ರೈಸ್ತರ ಈಶ್ವರನು ಕುಸ್ತಿಯ ಜಟ್ಟಿಯಾಗಿರುವವನಾದುದರಿಂದಲೇ, ಸಾರಾ ಮತ್ತು ರಾಖಿಲಳ ಮೇಲೆ 'ಪುತ್ರರು ಹುಟ್ಟುವ' ಕರುಣೆಯನ್ನು ಮಾಡಿದನು. ಭಲೇ! ಇವನೆಂದಾದರೂ ಈಶ್ವರನಾಗಿರಬಲ್ಲನೇ?

ಮತ್ತೂ, ನೋಡಿರಿ ಲೀಲೆಯನ್ನು! ಎಂದರೆ, ಒಬ್ಬನು ಹೆಸರನ್ನು ಕೇಳಿದರೆ, ಎರಡನೆಯವನು ತನ್ನ ಹೆಸರನ್ನೇ ಹೇಳುವುದಿಲ್ಲ!

## (ಈಶ್ವರನು ಭಕ್ತನ ಜಂಘೆಯನ್ನು ಏಕೆ ಸರಿಪಡಿಸಲಿಲ್ಲ?)

ಮತ್ತು ಈಶ್ವರನು ಅವನ ನಾಡಿಯನ್ನು ಸೆಟೆಯಿಸಿಬಿಟ್ಟನು ಮತ್ತು ಸೋತು ಹೋದನು. ಆದರೆ, ಡಾಕ್ಟರನಾಗಿದ್ದಿದ್ದರೆ, ಜಂಘಾ ನಾಡಿಯನ್ನು ಸರಿಪಡಿಸುತ್ತಲೂ ಇದ್ದನು. ಮತ್ತು ಇಂತಹ ಈಶ್ವರನ ಭಕ್ತಿಯಿಂದ ಯಾಕೂಬನು ಕುಂಟುತ್ತಲೇ ಬಾಳಿದನೆಂದರೆ, ಅನ್ಯಭಕ್ತರೂ ಕುಂಟುತ್ತಲೇ ಇರುವರೇನೋ ?

ಈಶ್ವರನನ್ನು ಪ್ರತ್ಯಕ್ಷವಾಗಿ ನೋಡಿದನು; ಮತ್ತು ಮಲ್ಲಯುದ್ಧವನ್ನೂ ಮಾಡಿದನು, ಎಂಬ ಈ ಮಾತು, [ಈಶ್ವರನು] ಶರೀರಯುಕ್ತನಾಗಿಲ್ಲದಿದ್ದಲ್ಲಿ ಹೇಗೆ ತಾನೇ ಅನ್ವಯಿಸೀತು? ಇದು ಕೇವಲ ಬಾಲಕತನದ ಲೀಲೆಯಾಗಿದೆ! [35]

1. Phanuel.

## (ಈಶ್ವರನಿಗೆ ಮುಖ ಇದೆಯೋ?)

[36] ಈಶ್ವರನ ಮುಖವನ್ನು ನೋಡಿದನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ. 33; ಆ. 10]

ಸಮೀಕ್ಷಕ:—ಈಶ್ವರನಿಗೆ ಮುಖವಿರುವಾಗ, ಮತ್ತೆ ಬೇರೆಲ್ಲ ಅವಯವಗಳೂ ಇದ್ದಿರಬೇಕಲ್ಲ! ಮತ್ತು ಅವನು ಜನ್ಮ-ಮರಣವುಳ್ಳವನೂ ಆಗಿರಬೇಕು! [36]

## (ನಿಯೋಗವನ್ನು ಒಪ್ಪದಿದ್ದಾಗ ಈಶ್ವರನು ಕೊಂದುಬಿಟ್ಟನು)

[37] ಮತ್ತು 'ಯುಹೂದಾ'[1]ನ ಜ್ಯೇಷ್ಠಪುತ್ರನಾದ ಏರ[2]ನು ಪರಮೇಶ್ವರನ ದೃಷ್ಟಿಯಲ್ಲಿ ದುಷ್ಟನಾಗಿದ್ದನು. ಆದುದರಿಂದ, ಪರಮೇಶ್ವರನು ಅವನನ್ನು ಸಂಹರಿಸಿಬಿಟ್ಟನು.

ಆಗ ಯುಹೂದಾ 'ಓನಾನ'[3]ನಿಗೆ—

"ನಿನ್ನ ಸೋದರನ ಪತ್ನಿಯ ಬಳಿ ತೆರಳು. ಮತ್ತು ಅವಳನ್ನು ಮದುವೆ ಮಾಡಿಕೊಂಡು, ನಿನ್ನ ಸೋದರನಿಗಾಗಿ ವಂಶವನ್ನು ಮುನ್ನಡೆಯಿಸು.". ಎಂದು ಹೇಳಿದನು.

ಮತ್ತು ಓನಾನನು—

'ಇದು ನನ್ನ ವಂಶವಾಗದು', ಎಂದು ಕಂಡುಕೊಂಡನು. ಮತ್ತು ಹೇಗೆ ಆಯಿತೆಂದರೆ—ಅವನು ತನ್ನ ಸೋದರನ ಪತ್ನಿಯ ಬಳಿ ಹೋದಾಗ ವೀರ್ಯವನ್ನು ನೆಲದ ಮೇಲೆ ಬೀಳಿಸಿಬಿಟ್ಟನು.

ಮತ್ತು ಅವನ ಆ ಕಾರ್ಯ ಪರಮೇಶ್ವರನ ದೃಷ್ಟಿಯಲ್ಲಿ ಕೆಟ್ಟದಾಗಿದ್ದಿತು. ಆದುದರಿಂದ, ಅವನು ಅವನನ್ನೂ ಸಂಹರಿಬಿಟ್ಟನು.

[ಬೈಬಲ್ (ತೌ). ಉತ್ಪತ್ತಿ:-ಪರ್ವ. 38; ಆ. 7-10]

## (ನಿಯೋಗದ ರೂಢಿ ಮೊದಲಿನಿಂದಲೂ ಪ್ರಚಲಿತವಾಗಿದೆ)

ಸಮೀಕ್ಷಕ:—ಈಗ ನೋಡಿಕೊಳ್ಳಿರಿ! ಇವು ಮಾನವನ ಕಾರ್ಯಗಳೋ ಅಥವಾ ಈಶ್ವರನವೋ? ಅವಳೊಂದಿಗೆ ನಿಯೋಗವಾಯಿತು, ಎಂದಾಗ, ಅವನನ್ನು ಸಾಯಿಸಿದನೇಕೆ? ಅವನ ಬುದ್ಧಿಯನ್ನು ಶುದ್ಧವಾಗಿ ಮಾಡಲಿಲ್ಲವೇತಕ್ಕೆ ?

ಮತ್ತು ವೇದೋಕ್ತವಾದ ನಿಯೋಗವೂ ಕೂಡ, ಮೊದಲು ಸರ್ವತ್ರ ಪ್ರಚಲಿತವಾಗಿದ್ದಿತು. ನಿಯೋಗಪದ್ಧತಿಯು ಮೊದಲು ಸರ್ವದೇಶಗಳಲ್ಲಿಯೂ ಪ್ರಚಲಿತವಾಗಿದ್ದಿತೆಂಬುದು ನಿಶ್ಚಯವಾಯಿತು! [37]

---

1. Juda 2. Her 3. Onan.

## ಬೈಬಲ್ ಯಾತ್ರಾಪುಸ್ತಕ[1]

### (ಕೊಂದು, ಓಡಿ ಹೋಗುವ ಮೂಸಾ)

[38] 'ಮೂಸಾ'[2] ಪ್ರೌಢನಾದಾಗ ತನ್ನ ಸೋದರರ ನಡುವಣ ಒಬ್ಬ 'ಇಬ್ರಾನಿ'[3]ಯನ್ನು ಒಬ್ಬ ಇಜಿಪ್ತದೇಶೀಯ[4]ನನ್ನು ಪ್ರಹರಿಸುತ್ತಿರುವುದನ್ನು ನೋಡಿದನು.

ಮತ್ತೆ, ಅವನು ಅತ್ತ ಇತ್ತ ದೃಷ್ಟಿ ಹರಿಸಿದನು. ಯಾವನೂ ಇಲ್ಲ ವೆಂಬುದನ್ನು ಕಂಡನು. ಆಗ ಅವನು ಆ ಇಜಿಪ್ತದೇಶೀಯನನ್ನು ಸಾಯಿಸಿ ಬಿಟ್ಟನು ಮತ್ತು ಮರಳಿನಲ್ಲಿ ಅವನನ್ನು ಬಚ್ಚಿಟ್ಟುಬಿಟ್ಟನು.

ಅವನು ಮರುದಿನ ಹೊರಗೆ ಹೋದಾಗ, ಇಬ್ಬರು ಇಬ್ರಾನಿಗಳು ಪರಸ್ಪರ ಜಗಳವಾಡುತ್ತಿರುವುದನ್ನು ನೋಡಿದನು. ಆಗ ಅವನು ಆ ಅಪರಾಧಿಯನ್ನು—

"ನೀನು ನಿನ್ನ ನೆರೆಹೊರೆಯವನನ್ನು ಏಕೆ ಹೊಡೆಯುತ್ತೀಯೆ ?", ಎಂದು ಕೇಳಿದನು.

ಆಗ ಅವನು—"ಯಾವನು ನಿನ್ನನ್ನು ನಮ್ಮ ಅಧ್ಯಕ್ಷನನ್ನಾಗಿ, ಅಥವಾ ನ್ಯಾಯಾಧೀಶನನ್ನಾಗಿ ನೇಮಿಸಿದ್ದಾನೆ? ಯಾವ ರೀತಿಯಿಂದ ನೀನು ಇಜಿಪ್ತದೇಶೀಯನನ್ನು ಕೊಂದು ಹಾಕಿದ್ದೀಯೋ, ಹಾಗೆ ನನ್ನನ್ನೂ ಕೊಂದುಹಾಕಬಯಸುವೆಯೋ?", ಎಂದು ಪ್ರಶ್ನಿಸಿದನು.

ಆಗ ಮೂಸಾ ಹೆದರಿದನು. ಮತ್ತು ಓಡಿಹೋದನು!

[ಬೈಬಲ್ (ತೌ). ಯಾತ್ರಾ:–ಪರ್ವ. 2; ಆ. 11–15]

### (ಮೂಸಾ ಮೊದಲಾದವರು ಕದನಪ್ರಿಯರಾಗಿದ್ದರು)

**ಸಮೀಕ್ಷಕ:**—ಈಗ ನೋಡಿರಿ! ಯಾವನು ಬೈಬಲಿನ ಮುಖ್ಯ ಸಿದ್ಧಿಕರ್ತೃವೂ ಆಗಿದ್ದಾನೋ. ಯಾವನ ಚರಿತ್ರವು ಕ್ರೋಧ ಮೊದಲಾದ ದುರ್ಗುಣಗಳಿಂದ ಯುಕ್ತವಾಗಿದೆಯೋ, ಯಾವನು ಮನುಷ್ಯಹತ್ಯೆ ಮಾಡುವವನೂ, ಮತ್ತು ಕಳ್ಳನಂತೆ ರಾಜದಂಡದಿಂದ ನುಣುಚಿಕೊಳ್ಳುವವನೂ ಆಗಿದ್ದಾನೋ; ಎಂದರೆ, ಯಾವಾಗ ವಾಸ್ತವವಾದುದನ್ನು ಮುಚ್ಚಿಡುತ್ತಿದ್ದನೋ, ಆಗ ಸುಳ್ಳುಗಾರನೂ ಅವಶ್ಯವಾಗಿ ಆಗಿರಬೇಕಲ್ಲವೇ; ಆ ಮೂಸಾ ಮತಾಚಾರ್ಯನಾಗಿದ್ದಾನೆ!

ಇಂತಹವನಿಗೂ ಈಶ್ವರನು ಸಿಕ್ಕಿದನು! ಮತ್ತೆ, ಅವನು ಪ್ರವಾದಿಯೂ ಆದನು! ಅವನು ಯಹೂದ್ಯರೇ ಮೊದಲಾದವರ ಸಂಪ್ರದಾಯವನ್ನು ಪ್ರತಿಷ್ಠಾಪಿಸಿದನು! ಅವನೂ* ಕೂಡ, ಮೂಸಾನ ಹಾಗೆಯೇ ಆದನು!

---

1. The Exodus 2. Moses 3. Hebrew 4. Egyptian.

*ಎಂದರೆ, ಈಶ್ವರನು.—ಸಂ.

ಆದುದರಿಂದ, ಯಾರು ಕ್ರೈಸ್ತರ ಮೂಲಪುರುಷರಾಗಿದ್ದರೋ, ಅವರೆಲ್ಲರೂ ಮೂಸಾನಿಂದಲೇ ಆರಂಭಿಸಿ, ವನ್ಯಸ್ಥಿತಿಯಲ್ಲಿದ್ದರು! ವಿದ್ಯಾವಸ್ಥೆಯಲ್ಲಿರಲಿಲ್ಲ! ಹೀಗೆ ಅದೆಷ್ಟೋ ಇದೆ. [38]

**(ಪವಿತ್ರ ಸ್ಥಾನದಲ್ಲಿ ಚಪ್ಪಲಿ ತೆಗೆದು ಬರುವ ಆದೇಶ)**

[39] ಅವನು ಬೇರೆ ಕಡೆಗೆ ತಿರುಗಿದ್ದುದನ್ನು ಪರಮೇಶ್ವರನು ನೋಡಿದನು! ಆಗ ಈಶ್ವರನು ಪೊದೆಗಳ ಮಧ್ಯದಿಂದ ಅವನನ್ನು ಕೂಗಿ ಹೇಳಿದನು—

"ಓ ಮೂಸಾ! ಓ ಮೂಸಾ!"

ಆಗ ಅವನು—"ನಾನಿಲ್ಲಿದ್ದೇನೆ", ಎಂದು ಉತ್ತರಕೊಟ್ಟನು.

ಆಗ ಅವನು—"ಇತ್ತ ಬಳಿಗೆ ಬರಬೇಡ. ನಿನ್ನ ಕಾಲುಗಳಿಂದ ಜೋಡನ್ನು ತೆಗೆದುಹಾಕು! ಏಕೆಂದರೆ, ಯಾವ ಜಾಗದ ಮೇಲೆ ನೀನು ನಿಂತಿದ್ದೀಯೋ, ಅದು ಪವಿತ್ರಭೂಮಿಯಾಗಿದೆ", ಎಂದು ಹೇಳಿದನು.

[ಬೈಬಲ್ (ತೌ). ಯಾತ್ರಾ:-ಪರ್ವ. 8; ಆ. 4, 5]

**(ಮತ್ತೆ ಕ್ರೈಸ್ತರು ಪವಿತ್ರ ಸ್ಥಾನದಲ್ಲಿ ಜೋಡನ್ನೇಕೆ ಹಾಕಿಕೊಂಡು ಹೋಗುತ್ತಾರೆ ?)**

**ಸಮೀಕ್ಷಕ:**—ನೋಡಿರಿ, ಮನುಷ್ಯನನ್ನು ಕೊಂದು, ಮರಳಿನಲ್ಲಿ ಹೂಳುವವ ನಂತಹವನ ಜೊತೆ ಈಶ್ವರನ ಮಿತ್ರತ್ವವನ್ನು! ಮತ್ತು ಅಂತಹವನನ್ನು 'ಪ್ರವಾದಿ', ಎಂದು ಅಂಗೀಕರಿಸುತ್ತಾರೆ!

ಇನ್ನೂ ನೋಡಿ! ನಿಮ್ಮ ಈಶ್ವರನು ಮೂಸಾಗೆ—'ಪವಿತ್ರ ಸ್ಥಾನದಲ್ಲಿ ಚಪ್ಪಲಿ ಹಾಕಿಕೊಂಡು ಹೋಗಬಾರದು'; ಎಂದು ಹೇಳಿದ ಮೇಲೂ, ಕ್ರೈಸ್ತರಾದ ನೀವು ಈ ಆಜ್ಞೆಗೆ ವಿರುದ್ಧವಾಗಿ ಏಕೆ ನಡೆಯುತ್ತಿದ್ದೀರಿ?

**ಪ್ರಶ್ನೆ:**—ನಾವು ಚಪ್ಪಲಿಯ ಬದಲು ಟೋಪಿಯನ್ನು ತೆಗೆದುಬಿಡುತ್ತೇವೆ!

**ಉತ್ತರ:**—ಇದಿನ್ನೊಂದು ಅಪರಾಧವನ್ನು ನೀವು ಮಾಡಿದಿರಿ! ಏಕೆಂದರೆ, ಟೋಪಿಯನ್ನು ತೆಗೆಯಬೇಕೆಂದು ನಿಮ್ಮ ಈಶ್ವರನೂ ಹೇಳಿಲ್ಲ; ಮತ್ತು ನಿಮ್ಮ ಪುಸ್ತಕದಲ್ಲೂ ಬರೆದಿಲ್ಲ! ತೆಗೆಯುವುದನ್ನು ತೆಗೆಯುವುದಿಲ್ಲ; ಮತ್ತು ತೆಗೆಯಬಾರದುದನ್ನು, ತೆಗೆದುಹಾಕುತ್ತೀರಿ! ಈ ಎರಡು ರೀತಿಗಳೂ ನಿಮ್ಮ ಪುಸ್ತಕಕ್ಕೆ ವಿರುದ್ಧವಾಗಿವೆ.

**ಪ್ರಶ್ನೆ:**—ನಮ್ಮ ಯೂರೋಪ ದೇಶದಲ್ಲಿ ಚಳಿ ಹೆಚ್ಚಾಗಿರುತ್ತದೆ. ಆದ್ದರಿಂದ, ನಾವು ಜೋಡನ್ನು ತೆಗೆಯುವುದಿಲ್ಲ.

ಉತ್ತರ:—ತಲೆಗೆ ಚಳಿ ತಗಲುವುದಿಲ್ಲವೇನು?

[ಸರಿ], ಹಾಗೆಯೇ ಆದಲ್ಲಿ, ಯಾವಾಗ ಯುರೋಪ ದೇಶಕ್ಕೆ ಹೋಗುವಿರೋ, ಆಗ ಹಾಗೆಯೇ ಮಾಡಿ! ಆದರೆ, ನಮ್ಮ ಮನೆಯಲ್ಲಿ ಅಥವಾ ಜಮಖಾನೆಯ ಮೇಲೆ ಬಂದಾಗ ಜೋಡನ್ನು ತೆಗೆದುಬಿಡಿ!* ಮತ್ತು [ಹಾಗೆ] ತೆಗೆಯದಿದ್ದರೆ, ನೀವು ನಿಮ್ಮ ಬೈಬಲ್ ಗ್ರಂಥಕ್ಕೆ ವಿರುದ್ಧವಾಗಿ ನಡೆಯುತ್ತೀರಿ. ಈ ರೀತಿ ನೀವು ಮಾಡ ಬಾರದು! [39]

### (ಈಶ್ವರನು ಮೂಸಾಗೆ 'ಜಾದೂ' ಆಟವನ್ನು ತೋರಿಸಿದನು!)

[40] ಆಗ ಪರಮೇಶ್ವರನು ಅವನಿಗೆ—"ನಿನ್ನ ಕೈಯಲ್ಲಿ ಏನಿದೆ?", ಎಂದು ಕೇಳಿದನು. ಮತ್ತು ಅವನು—"ಬೆತ್ತವಿದೆ", ಎಂದು ಹೇಳಿದನು.

ಆಗ ಅವನು—"ಅದನ್ನು ನೆಲದ ಮೇಲೆ ಹಾಕಿಬಿಡು", ಎಂದು ಹೇಳಿದನು.

ಮತ್ತು ಅವನು ಅದನ್ನು ನೆಲದ ಮೇಲೆ ಹಾಕಿಬಿಟ್ಟನು. ಮತ್ತು ಅದು ಹಾವಾಯಿತು! ಮತ್ತು ಮೂಸಾ ಅದರ ಮುಂದಿನಿಂದ ಓಡಿಹೋದನು.

ಆಗ ಪರಮೇಶ್ವರನು ಮೂಸಾಗೆ—"ನಿನ್ನ ಕೈ ಚಾಚು ಮತ್ತು ಅದರ ಬಾಲವನ್ನು ಹಿಡಿದುಕೋ", ಎಂದು ಹೇಳಿದನು.

ಆಗ ಅವನು ತನ್ನ ಕೈಯನ್ನು ಚಾಚಿದನು. ಮತ್ತು ಅದನ್ನು ಹಿಡಿದು ಕೊಂಡನು. ಮತ್ತೆ, ಅದು ಅವನ ಕೈಯಿನ ಬೆತ್ತವಾಗಿ ಹೋಯಿತು!

ಆಗ ಪರಮೇಶ್ವರನು ಅವನಿಗೆ—

"ಪುನಃ ನೀನು ನಿನ್ನ ಕೈಯನ್ನು ತೊಡೆಯ ಮೇಲಿಟ್ಟುಕೋ", ಎಂದನು.

ಮತ್ತು ಅವನು ತನ್ನ ಕೈಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡನು.

---

*ಪಂಜಾಬಿನಲ್ಲಿ ರಣಜಿತಸಿಂಹನ ರಾಜ್ಯವಿದ್ದಾಗ, ಅಗಿನ ಗವರ್ನರ್ ಜನರಲ್ ಲಾರ್ಡ್ ಡಲಹೌಸಿಯು ಅಮೃತಸರದ ಸ್ವರ್ಣಮಂದಿರವನ್ನು ನೋಡಲಿಚ್ಛಿಸಿದನು. ಸಿಕ್ಖರು ಮಂದಿರ ಪ್ರವೇಶಕ್ಕೆ ಮೊದಲು, ಜೋಡನ್ನು ತೆಗೆದು ಬರಬೇಕೆಂದರು. ಡಲಹೌಸಿಯು ಇದಕ್ಕೆ ಒಪ್ಪಲಿಲ್ಲ. ಆದ್ದರಿಂದ, ಅವನು ಹಾಗೆಯೇ ವಾಪಸು ಹೊರಟುಹೋದನು. ಪುನಃ ಪಂಜಾಬ ಪ್ರದೇಶವು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಮೇಲೆ, ಡಲಹೌಸಿಯು ಮತ್ತೆ ಸ್ವರ್ಣಮಂದಿರವನ್ನು ನೋಡ ಬಯಸಿದನು. ಆಗ ಪರಾಧೀನರಾದ ಸಿಕ್ಖರು ಗವರ್ನರ ಜನರಲ್ಲನನ್ನು ವಿಜೃಂಭಣೆಯಿಂದ, ದೀಪಾವಳಿಯ ಆಡಂಬರದೊಡನೆ ಸ್ವಾಗತಿಸಿ, ಧನ್ಯರಾದೆವೆಂದು ತಿಳಿದರು! ಸ್ವರ್ಣಮಂದಿರದಲ್ಲಿ ನಡೆಯಲು ಅವನಿಗೆ ವಿಶೇಷವಾದ ಮಖಮಲ್, ರೇಷ್ಮೆಯ ಮೆದುವಾದ ಬಟ್ಟೆಯ ಪಾದುಕೆ ಗಳನ್ನು ನಿರ್ಮಿಸಿಕೊಟ್ಟರು.

ಈ ವಿಷಯವನ್ನು ಡಲಹೌಸಿಯು ತನ್ನ ಸ್ನೇಹಿತನಿಗೆ ಬರೆದ—''Private Letters of the Marquess of Dalhousie'' (published in London 1911) ಎಂಬ ಗ್ರಂಥದಲ್ಲಿ ತಿಳಿಸಿದ್ದಾನೆ.—ಸಂ.

ಯಾವಾಗ ಅವನು ತನ್ನ ಕೈಯನ್ನು ಮೇಲೆತ್ತಿದನೋ, ಆಗ ತನ್ನ ಕೈಯನ್ನು ಮಂಜಿನಂತೆ ತೊನ್ನು ಹಿಡಿದಿರುವುದಾಗಿ ನೋಡಿದನು!

ಮತ್ತು ಅವನು—"ನಿನ್ನ ಕೈಯನ್ನು ಪುನಃ ತೊಡೆಯ ಮೇಲಿಡು", ಎಂದು ಹೇಳಿದನು.

ಅವನು ಮತ್ತೆ ತನ್ನ ಕೈಯನ್ನು ತನ್ನ ತೊಡೆಯ ಮೇಲಿಟ್ಟನು. ಮತ್ತು ಪುನಃ ತೊಡೆಯಿಂದ ಕೈಯನ್ನು ಮೇಲೆತ್ತಿದಾಗ, ಅದು ಅವನ ದೇಹವೆಲ್ಲಾ ಹೇಗಿತ್ತೋ, ಹಾಗೆ ಮೊದಲಿನಂತೆಯೇ ಪುನಃ ಆಗಿಬಿಟ್ಟಿದುದನ್ನು ನೋಡಿದನು !

"ನೀನು ನೀಲ ನದಿಯ ನೀರನ್ನು ತೆಗೆದುಕೊಂಡು, ಒಣ ನೆಲದಮೇಲೆ ಹಾಕು. ಮತ್ತು ನೀನು ನದಿಯಿಂದ ಯಾವ ನೀರನ್ನು ತೆಗೆದು ಹಾಕುವೆಯೋ, ಅದು ಒಣ ನೆಲದಮೇಲೆ ರಕ್ತವಾಗಿಬಿಡುವುದು!"

[ಬೈಬಲ್ (ತೌ). ಯಾತ್ರಾ:-ಪರ್ವ 4; ಆ. 2-4,6,7,9]

## (ಜಾದೂಗರನ ಆಟವನ್ನು ತೋರಿಸುವುದು ಈಶ್ವರನ ಕೆಲಸವೇನು ?)

**ಸಮೀಕ್ಷಕ:**—ಈಗ ನೋಡಿರಿ, ಎಂತಹ 'ಗಾರುಡಿಗ'ನ ಆಟವನ್ನು! ಆಟಗಾರ ಈಶ್ವರ!! ಅವನ ಶಿಷ್ಯ ಮೂಸಾ!!! ಮತ್ತು ಈ ಮಾತುಗಳನ್ನು ಒಪ್ಪುವವರು ಎಂತಹವರು?

ಇಂದಿನ ಗಾರುಡಿಗರು ಇದಕ್ಕಿಂತ ಕಡಿಮೆ ಮಾಯದಾಟವನ್ನು ತೋರಿಸುವ ರೇನು? ಇವನೇನು ಈಶ್ವರನೇ? ಇವನೊಬ್ಬ ದೊಡ್ಡ ಆಟಗಾರ!

ಈ ಮಾತುಗಳನ್ನು ವಿದ್ವಾಂಸರು ಏತಕ್ಕೆಂದು ಅಂಗೀಕರಿಸುವರು?

ಮತ್ತು ಪ್ರತಿಸಲವೂ—

"ನಾನು ಪರಮೇಶ್ವರನು! ಮತ್ತು ಅಬ್ರಹಾಮ, ಇಜಾಕ ಮತ್ತು ಯಾಕೂಬರ ಈಶ್ವರನು!" ಈ ಮೊದಲಾಗಿ ಪ್ರತಿಯೊಬ್ಬರೊಡನೆಯೂ ತನ್ನ ಬಾಯಿಂದಲೇ ತನ್ನ ಪ್ರಶಂಸೆಯನ್ನು ಮಾಡಿಕೊಳ್ಳುತ್ತಾ ತಿರುಗಾಡುತ್ತಿರುತ್ತಾನೆ.

ಈ ಮಾತು ಉತ್ತಮ ಮನುಷ್ಯರದಾಗಲಾರದು; ಆದರೆ, ದಾಂಭಿಕ ಮನುಷ್ಯರ ದಾಗಬಲ್ಲುದು! [40]

## (ರಕ್ತದ ಮುದ್ರೆಯಿಂದ ಈಶ್ವರನು ಭಕ್ತರ ಮನೆಗಳನ್ನು ಗುರುತಿಸುವುದು)

[41] ಮತ್ತು ಒಂದು ಲಾಂಘನ-ಪರ್ವದ ಮೇಕೆಯ ಮರಿಯನ್ನು ಕೊಲ್ಲು.

ಮತ್ತು ಒಂದು ಹಿಡಿ 'ಹಿಸ್ಸೋಪ್'[1] ಗಿಡದ [ಪೊರಕೆಯನ್ನು] ತೆಗೆದುಕೋ. ಮತ್ತು ಅದನ್ನು ಪಾತ್ರೆಯಲ್ಲಿರುವ ರಕ್ತದಲ್ಲಿ ಅದ್ದಿ; ಹೆಬ್ಬಾಗಿಲ ಚೌಕಟ್ಟಿನ ಮೇಲೆ,

---

1. Hyssop.

ಮತ್ತು ಬಾಗಿಲಿನ ಎರಡೂ ಪಕ್ಕಗಳಿಗೆ ಅದರಿಂದ ಮುದ್ರೆಯನ್ನು ಒತ್ತು. ಮತ್ತು ನಿಮ್ಮ ನಡುವಣ ಕಡೆಯಿಂದ ಬೆಳಕು ಹರಿಯುವವರೆಗೆ ಯಾವನೂ ಮನೆಯ ಬಾಗಿಲಿನಿಂದ ಹೊರಗೆ ಹೋಗದಿರಲಿ!

ಏಕೆಂದರೆ, ಪರಮೇಶ್ವರನು ಇಜಿಪ್ತದೇಶವನ್ನು ನೆಲಸಮ ಮಾಡಿಹಾಕಲು, ನಿಮ್ಮ ಹಾದಿಯನ್ನು ದಾಟಿ ಹೋಗುವನು. ಮತ್ತು ಯಾವಾಗ ಪರಮೇಶ್ವರನು ಮೇಲಿನ ಚೌಕಟ್ಟಿನ ಮೇಲೆ, ಮತ್ತು ದ್ವಾರದ ಎರಡೂ ಕಡೆ ರಕ್ತವನ್ನು ನೋಡುವನೋ, ಆಗ ಅವನು ನಿಮ್ಮ ಬಾಗಿಲಿನಿಂದ ಹೊರಗೆ ಹೋಗುವನು. ಮತ್ತು ಹಿಂಸಕರನ್ನು ಸಂಹಾರ ಮಾಡಲು ನಿಮ್ಮ ಮನೆಗಳೊಳಕ್ಕೆ ಬಿಡುವುದಿಲ್ಲ.

[ಬೈಬಲ್ (ತೌ). ಯಾತ್ರಾ:-ಪರ್ವ. 12; ಆ. 21–23]

**ಸಮೀಕ್ಷಕ:**—ಅಲ್ಲಾ! ಮಾಟ-ಮಂತ್ರ ಮಾಡುವವರ ಹಾಗೆ ಇರುವ ಇವನು ಸರ್ವಜ್ಞನಾದ ಈಶ್ವರನಾಗಿ ಎಂದಿಗಾದರೂ ಆಗಬಲ್ಲನೇನು?

ರಕ್ತದ ಮುದ್ರೆಯನ್ನು ಕಂಡಾಗ ಮಾತ್ರವೇ ಇಸ್ರಯೇಲ್ ಕುಲದ ಮನೆ, ಎಂದು ತಿಳಿದುಕೊಳ್ಳುತ್ತಾನೆ; ಇಲ್ಲದಿದ್ದರೆ, ಇಲ್ಲ! ಈ ಕೆಲಸ ಕ್ಷುದ್ರಬುದ್ಧಿಯುಳ್ಳ ಮಾನವರದಂತಿದೆ!

ಇದರಿಂದ, ಈ ಎಲ್ಲ ಮಾತುಗಳೂ ಯಾವನೋ ಕಾಡು ಮನುಷ್ಯನು ಬರೆದುದಾಗಿವೆ, ಎಂದು ವಿದಿತವಾಗುತ್ತದೆ. [41]

### (ಪರಮೇಶ್ವರನಿಂದ ಅರ್ಧ ರಾತ್ರಿಯಲ್ಲಿ ಇಜಿಪ್ತದೇಶೀಯರ ಕೊಲೆ)

**[42]** ಮತ್ತು ಹೇಗೆ ನಡೆಯಿತೆಂದರೆ—ಪರಮೇಶ್ವರನು ನಡುರಾತ್ರಿಯಲ್ಲಿ ಇಜಿಪ್ತದೇಶದಲ್ಲಿ, ತನ್ನ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಿದ್ದ 'ಫಿರಾವೂನ'[1]ನ ಚೊಚ್ಚಲು ಮಗನಿಂದ ಹಿಡಿದು, ಕಾರಾಗೃಹದಲ್ಲಿದ್ದ ಕೈದಿಗಳ ಚೊಚ್ಚಲು ಮಕ್ಕಳವರೆಗೆ, ಪಶುಗಳ ಚೊಚ್ಚಲು ಸಂತತಿಯ ಸಂಗಡ, ಸಮಸ್ತ ಚೊಚ್ಚಲು ಮಕ್ಕಳು-ಮರಿಗಳನ್ನೂ ನಾಶಮಾಡಿದನು!

ಮತ್ತು ರಾತ್ರಿ ಫಿರಾವೂನನು ಎದ್ದನು. ಅವನು, ಮತ್ತು ಅವನ ಸೇವಕರು, ಮತ್ತು ಸಮಸ್ತ ಇಜಿಪ್ತದೇಶೀಯರೂ ಎದ್ದರು. ಮತ್ತು ಇಜಿಪ್ತದೇಶದಲ್ಲಿ ಮಹಾವಿಲಾಪವೆದ್ದಿತು. ಏಕೆಂದರೆ, ಒಬ್ಬನೂ ಸಾಯದ, ಯಾವುದೇ ಒಂದು ಮನೆಯೂ, ಇರಲಿಲ್ಲ.

[ಬೈಬಲ್ (ತೌ). ಯಾತ್ರಾ:-ಪರ್ವ. 12. ಆ. 29, 30]

1. Pharaon.

## (ನಿರಪರಾಧಿಗಳ ಕೊಲೆ ಈಶ್ವರನ ಕೆಲಸವಲ್ಲ)

**ಸಮೀಕ್ಷಕ:**—ಧನ್ಯ ಧನ್ಯ! ಕ್ರೈಸ್ತರ ಈಶ್ವರನು ಅರ್ಧರಾತ್ರಿಯಲ್ಲಿ, ದರೋಡೆಕೋರನಂತೆ ನಿರ್ದಯನಾಗಿ, ಮಕ್ಕಳು-ಮರಿಗಳು, ವೃದ್ಧರು ಮತ್ತು ಪಶುಗಳವರೆಗೂ ಕೂಡ, ಅಪರಾಧವಿಲ್ಲದೇ ಸಾಯಿಸಿಬಿಟ್ಟನು! ಸ್ವಲ್ಪವೂ ದಯೆ ಬಾರಲಿಲ್ಲ!

ಮತ್ತು ಇಜಿಪ್ತದೇಶದಲ್ಲಿ ಮಹಾವಿಲಾಪವಾಗುತ್ತಿದ್ದರೂ ಕೂಡ, ಕ್ರೈಸ್ತರ ಈಶ್ವರನ ಚಿತ್ತದಲ್ಲಿನ ನಿಷ್ಠುರತೆ ನಾಶವಾಗಲಿಲ್ಲ! **ಇಂತಹ ಕೆಲಸ ಈಶ್ವರನದಾಗುವುದಂತಿರಲಿ! ಆದರೆ, ಯಾವನೇ ಸಾಧಾರಣನಾದ ಮನುಷ್ಯನೂ ಕೂಡ, ಮಾಡುವಂತಹುದಲ್ಲ.**

ಇದು ಆಶ್ಚರ್ಯವಲ್ಲ. ಏಕೆಂದರೆ—

**"ಮಾಂಸಾಹಾರಿಣಃ ಕುತೋ ದಯಾ?", ಎಂದು ಬರೆಯಲಾಗಿದೆ.**

**ಕ್ರೈಸ್ತರ ಈಶ್ವರನು ಮಾಂಸಾಹಾರಿಯಾಗಿರುವಾಗ, ಅವನಿಂದ ದಯೆ ತೋರಿಸುವುದರ ಕೆಲಸವಾದರೂ ಏನಿದೆ?** [42]

## (ಈಶ್ವರನು ಇಸ್ರಾಯೇಲರಿಗಾಗಿ ಯುದ್ಧ ಮಾಡುವುದು)

**[43]** ಪರಮೇಶ್ವರನು ನಿಮಗಾಗಿ ಯುದ್ಧ ಮಾಡುವನು.

**"ಅವರು ಮುನ್ನಡೆಯಲಿ", ಎಂದು ಇಸ್ರಾಯೇಲನ ಸಂತತಿಗೆ ಹೇಳು.**

**ಆದರೆ, ನೀನು ನಿನ್ನ ಬೆತ್ತವನ್ನು ಎತ್ತು, ಮತ್ತು ಸಮುದ್ರದ ಮೇಲೆ ನಿನ್ನ ಕೈಯನ್ನು ಚಾಚು. ಮತ್ತು ಅದನ್ನು* ಎರಡು ಭಾಗಗಳನ್ನಾಗಿ ಮಾಡು. ಮತ್ತು ಇಸ್ರಾಯೇಲನ ಸಂತತಿಗಳು ಸಮುದ್ರದ ನಟ್ಟನಡುವಿನಲ್ಲಿ, ಒಣಗಿದ ಭೂಮಿಯ ಮೇಲೆ ಹಾದು ಹೋಗುವುವು.**

[ಬೈಬಲ್ (ತೌ). ಯಾತ್ರಾ:-ಪರ್ವ. 14; ಆ. 14-16]

## (ಈಶ್ವರನು ಇಸ್ರಾಯೇಲರ ಸಹಾಯ ಈಗೇಕೆ ಮಾಡುವುದಿಲ್ಲ?)

**ಸಮೀಕ್ಷಕ:**—ಏನು ಸ್ವಾಮೀ ? ಮೊದಲಂತೂ, ಈಶ್ವರನು, ಹಿಂಡುಗಳ ಹಿಂದೆ ಕುರುಬನು ನಡೆಯುವಂತೆ, ಇಸ್ರಾಯೇಲನ ಕುಲದ ಹಿಂದೆ ಹಿಂದೆ ಅಲೆದಾಡುತ್ತಿದ್ದನು. ಈಗ ಎಲ್ಲಿ ಅಂತರ್ಧಾನನಾಗಿ ಹೋದನೋ. ತಿಳಿಯದು!

---

*ಎಂದರೆ, ಸಮುದ್ರವನ್ನು.—ಯು.ಮೀ.

ಇಲ್ಲದಿದ್ದರೆ, ಸಮಸ್ತ ಜಗತ್ತಿಗೂ ಉಪಕಾರವಾಗುವಂತೆ, ಸಮುದ್ರದ ನಡುವಿನಿಂದ ನಾಲ್ಕು ಕಡೆಗೂ ರೈಲುಗಾಡಿಗಳ ಮಾರ್ಗಗಳನ್ನು ನಿರ್ಮಿಸಿಕೊಳ್ಳ ಬಹುದಾಗಿತ್ತು! ಮತ್ತು ನಾವೆಯೇ ಮೊದಲಾದುವುಗಳನ್ನು ನಿರ್ಮಿಸುವ ಶ್ರಮವು ತಪ್ಪಿಹೋಗುತ್ತಿತ್ತು!

ಆದರೆ, ಏನು ತಾನೇ ಮಾಡಲಾದೀತು? ಕ್ರೈಸ್ತರ ಈಶ್ವರನು ಎಲ್ಲಿ ಬಚ್ಚಿಟ್ಟು ಕೊಂಡಿದ್ದಾನೋ ಗೊತ್ತಾಗದು!

ಈ ಪರಿಯಾಗಿ ಬಹಳ ಅಸಂಭವವಾದ ಲೀಲೆಗಳನ್ನು ಬೈಬಲಿನ ಈಶ್ವರನು ಮೂಸಾನೊಂದಿಗೆ ಮಾಡಿದ್ದಾನೆ!

ಮತ್ತು, ಕ್ರೈಸ್ತರ ಈಶ್ವರನು ಇರುವ ಹಾಗೆಯೇ ಅವನ ಸೇವಕರೂ ಇದ್ದಾರೆ. ಮತ್ತು ಅವನಿಂದ ರಚಿತವಾದ ಪುಸ್ತಕವೂ ಹಾಗೆಯೇ ಇದೆ, ಎಂಬುದು ವಿದಿತ ವಾಯಿತು!

ಇಂತಹ ಪುಸ್ತಕ ಮತ್ತು ಇಂತಹ ಈಶ್ವರನು ನಮ್ಮಗಳಿಂದ ದೂರವೇ ಇರಲಿ! ಆಗಲೇ ಒಳ್ಳೆಯದಾಗುತ್ತದೆ! [43]

## (ಈಶ್ವರನ ದ್ವೇಷ–ಸಾಧನೆ)

**[44] ಏಕೆಂದರೆ, ನಿನ್ನ ಈಶ್ವರನಾದ, ನಾನು ಪರಮೇಶ್ವರನು ಈರ್ಷ್ಯೆ ಯೊಡನೆ ಸರ್ವಶಕ್ತಿಮಂತನಾಗಿದ್ದೇನೆ. ಪಿತೃಗಳ ಅಪರಾಧದ ಶಿಕ್ಷೆಯನ್ನು, ನನ್ನ ಬಗೆಗೆ ವೈರಭಾವವನ್ನಿಡುವ ಅವರ ಮಕ್ಕಳಿಗೆ, ಅವರ ಮೂರನೆಯ ಮತ್ತು ನಾಲ್ಕನೆಯ ಪೀಳಿಗೆಯವರೆಗೂ ಕೊಡುವವನಾಗಿದ್ದೇನೆ.**

**[ಬೈಬಲ್ (ತೌ). ಯಾತ್ರಾ:–ಪರ್ವ. 20; ಆ. 5]**

**ಸಮೀಕ್ಷಕ:**—ಅಲ್ಲಾ! ತಂದೆಯ ಅಪರಾಧಕ್ಕಾಗಿ ನಾಲ್ಕು ಪೀಳಿಗೆಯವರೆಗೆ ಶಿಕ್ಷೆ ಕೊಡುವುದನ್ನು ಒಳ್ಳೆಯದೆಂದು ತಿಳಿಯುವುದು, ಇದಾರ ಮನೆಯ ನ್ಯಾಯ?

ಒಳ್ಳೆಯ ತಂದೆಗೆ ದುಷ್ಟ ಸಂತತಿಯೂ, ಮತ್ತು ದುಷ್ಟನಾದ ತಂದೆಗೆ ಒಳ್ಳೆಯ ಸಂತತಿಯೂ ಆಗುವುದಿಲ್ಲವೇನು?

ಹೀಗೆ ಆಗುವುದಾದಲ್ಲಿ, ನಾಲ್ಕನೆಯ ಪೀಳಿಗೆಯವರೆಗೆ ಶಿಕ್ಷೆಯನ್ನು ಹೇಗೆ ಕೊಡಬಲ್ಲನು? ಮತ್ತು ಐದನೆಯ ಪೀಳಿಗೆಯ ನಂತರ, ದುಷ್ಟನು ಹುಟ್ಟುವ ನಾದರೆ, ಅವನಿಗೂ ಶಿಕ್ಷೆಯನ್ನು ಕೊಡುವುದಿಲ್ಲವೇನು?

### (ಭಾನುವಾರ ಈಶ್ವರನ ರಜೆಯ ದಿನ)

[45] ಅದನ್ನು ಪವಿತ್ರವಾಗಿಡುವುದಕ್ಕಾಗಿ ವಿಶ್ರಾಂತಿಯ ದಿನವನ್ನು ಸ್ಮರಿಸು.

ಆರು ದಿನಗಳವರೆಗೆ ನೀನು ಪರಿಶ್ರಮವನ್ನು ಮಾಡು.

ಮತ್ತು ಏಳನೆಯ ದಿನ ನಿನ್ನ ಈಶ್ವರನಾದ ಪರಮೇಶ್ವರನ ವಿಶ್ರಾಂತಿ ದಿವಸವಾಗಿದೆ. ಪರಮೇಶ್ವರನು ವಿಶ್ರಾಂತಿ ದಿವಸಕ್ಕೆ ಆಶೀರ್ವಾದವಿತ್ತನು.*

[ಬೈಬಲ್ (ತೌ). ಯಾತ್ರಾ:-ಪರ್ವ 20; ಆ. 8-11]

### (ಭಾನುವಾರವನ್ನು ಪವಿತ್ರವಾಗಿಸಲು ಅದರಲ್ಲಿ ಏನು ವಿಶೇಷ?)

**ಸಮೀಕ್ಷಕ:**—ಭಾನುವಾರ ಒಂದು ಮಾತ್ರ ಪವಿತ್ರ. ಹಾಗೂ ಆರು ದಿನಗಳು ಅಪವಿತ್ರವಾಗಿರುತ್ತವೆಯೇನು? ಆಯಾಸಪಟ್ಟು ಏಳನೆಯ ದಿನ ನಿದ್ರೆ ಮಾಡಿಬಿಟ್ಟನು, ಎನ್ನಲು. ಪರಮೇಶ್ವರನು ಆರು ದಿನಗಳವರೆಗೆ ಮಹಾಪರಿಶ್ರಮ ಮಾಡಿದ್ದನೇನು? ಮತ್ತು ಭಾನುವಾರಕ್ಕೆ ಆಶೀರ್ವಾದವನ್ನು ಕೊಟ್ಟನಾದರೆ, ಸೋಮವಾರವೇ ಮೊದಲಾದ ಆರು ದಿನಗಳಿಗೆ ಏನು ಕೊಟ್ಟನು? ಎಂದರೆ, ಶಾಪವನ್ನು ಕೊಟ್ಟಿರಬಹುದೋ?

ಇಂತಹ ಕಾರ್ಯ ವಿದ್ವಾಂಸನದೂ ಅಲ್ಲವಾಗಿದೆ. ಎಂದ ಮೇಲೆ ಈಶ್ವರನ ದಾಗಲು ಹೇಗೆ ಶಕ್ಯ?

ಭಲೇ! ಒಂದನ್ನು ಪವಿತ್ರಗೊಳಿಸಲು ಮತ್ತು ವರವನ್ನು ಕೊಡಲು, ಭಾನುವಾರದಲ್ಲಿರುವ ಗುಣವಾದರೂ ಏನು? ಮತ್ತು ಬೇರೆಯ ದಿನಗಳನ್ನು ಹೀಗೆಯೇ ಅಪವಿತ್ರವಾಗಿ ಮಾಡಲು ಸೋಮವಾರ ಮೊದಲಾದುವು ಏನು ತಪ್ಪನ್ನು ಮಾಡಿದ್ದುವು?

### (ನೆರೆಹೊರೆಯುವನ ಪದಾರ್ಥಗಳ ಮೇಲೆ ಆಸೆ ಇಡಬೇಡ)

[46] ನಿನ್ನ ನೆರೆಹೊರೆಯುವನ ಮೇಲೆ ಸುಳ್ಳುಸಾಕ್ಷ್ಯ ಕೊಡಬೇಡ.

ನಿನ್ನ ನೆರೆಹೊರೆಯುವನ ಹೆಂಡತಿಯ ಬಗೆಗೆ, ಅವನ ದಾಸರ, ಅವನ ದಾಸಿಯರ ಬಗೆಗೆ, ಮತ್ತು ಅವನ ಎತ್ತಿನ ಬಗೆಗೆ, ಮತ್ತು ಅವನ ಕತ್ತೆಯ ಬಗೆಗೆ, ಹಾಗೂ ನಿನ್ನ ನೆರೆಹೊರೆಯುವನದಾಗಿರುವ ಯಾವುದೇ ವಸ್ತುವಿನ ಬಗೆಗೂ ಆಸೆ ಇಡಬೇಡ.*

[ಬೈಬಲ್ (ತೌ). ಯಾತ್ರಾ:-ಪರ್ವ. 20; ಆ. 16-17]

* ಇವು 'The Ten Commandments'ನಲ್ಲಿನ ಮಾತುಗಳು.—ಸಂ.

**(ಹಾಗಾದರೆ, ವಿದೇಶೀಯರ ಸ್ವತ್ತನ್ನು ಕಬಳಿಸಬೇಕೇನು ?)**

ಸಮೀಕ್ಷಕ:— ಓಹೋ! ಅದಕ್ಕೇ ಈ ಕ್ರೈಸ್ತರು ವಿದೇಶೀಯರ ಸ್ವತ್ತಿನ ಮೇಲೆ, 'ಬಾಯಾರಿದವನು ನೀರಿನ ಮೇಲೆ, ಹಸಿದವನು ಅನ್ನದ ಮೇಲೆ ಎರಗುವಂತೆ', ಎರಗಿ ಬೀಳುತ್ತಾರೆ, ಎಂದು ತಿಳಿಯಿರಿ! ಈ ಸಂಗತಿ ಸ್ವಾರ್ಥ ಪೂರ್ತಿಯುದೂ, ಮತ್ತು ಪಕ್ಷಪಾತಭಾವನೆಯುದೂ ಆಗಿರುವ ಹಾಗೆಯೇ, ಕ್ರೈಸ್ತರ ಈಶ್ವರನೂ ಅವಶ್ಯವಾಗಿ ಇದ್ದಾನು!

ಯಾವನಾದರೂ—

"ನಾವು ಸಂಪೂರ್ಣ ಮಾನವಮಾತ್ರರನ್ನು ನೆರೆಹೊರೆಯುವರೆಂದು ಗ್ರಹಿಸುತ್ತೇವೆ", ಎನ್ನುವನಾದರೆ, ನೀವು ನೆರೆಹೊರೆಯುವರಲ್ಲವೆಂದು ಎಣಿಸಬಹುದಾದ ಸ್ತ್ರೀಯುಕ್ತರೂ ಮತ್ತು [ದಾಸ]–ದಾಸೀಯುಕ್ತರೂ ಆದ ಬೇರೆ ಯಾವ ಮನುಷ್ಯರಿದ್ದಾರೆ?

ಆದುದರಿಂದ, ಈ ಮಾತುಗಳು ಸ್ವಾರ್ಥೀ ಮನುಷ್ಯರದಾಗಿವೆ; ಈಶ್ವರನದಲ್ಲ! [46]

**(ಮನುಷ್ಯನ ಕೊಲೆಗಡುಕನಿಗೆ ಅವಶ್ಯ ಶಿಕ್ಷೆಯಾಗಬೇಕು)**

**[47] ಯಾವನಾದರೂ ಯಾವನೊಬ್ಬ ಮನುಷ್ಯನನ್ನು ಹೊಡೆದರೆ, ಮತ್ತು ಅವನು ಮೃತನಾದರೆ, ನಿಶ್ಚಿತವಾಗಿ ಅವನ ವಧೆ ಮಾಡಲ್ಪಡಬೇಕು.**

**ಮತ್ತು ಹೊಡೆಯುವ ಮಾನವನು ಹೊಂಚುಹಾಕದೇ ಇದ್ದು, ಈಶ್ವರನೇ ಘಾತಕನ ಕೈಗೆ ಒಪ್ಪಿಸಿಬಿಟ್ಟಿದ್ದಲ್ಲಿ, ಆಗ ನಾನು ನಿನಗೆ ಪಲಾಯನದ ಸ್ಥಳವನ್ನು ತೋರಿಸುವೆನು.** **[ಬೈಬಲ್ (ತೌ). ಯಾತ್ರಾ:–ಪರ್ವ. 21; ಆ. 12–13]**

**ಸಮೀಕ್ಷಕ:**—ಈಶ್ವರನ ಈ ನ್ಯಾಯ ಸತ್ಯವಾಗಿರುವುದಾದರೆ, ಮೂಸಾ ಮನುಷ್ಯನೊಬ್ಬನನ್ನು ಕೊಂದು, ಹೂಳಿ, ಓಡಿಹೋಗಿದ್ದನು! ಅವನಿಗೆ ಈ ಶಿಕ್ಷೆ ಸಿಕ್ಕಲಿಲ್ಲವೇತಕ್ಕೆ? 'ಈಶ್ವರನು ಕೊಲ್ಲಲ್ಪಟ್ಟವನನ್ನು ಕೊಲ್ಲುವುದಕ್ಕಾಗಿ ಮೂಸಾಗೆ ಒಪ್ಪಿಸಿದನು', ಎನ್ನುವರಾದರೆ, ಈಶ್ವರನು ಪಕ್ಷಪಾತಿಯಾದನು! ಏಕೆಂದರೆ, ರಾಜನ ಕಡೆಯಿಂದ ಆ ಮೂಸಾನ ನ್ಯಾಯ ವಿಚಾರಣೆಯಾಗಲು ಬಿಡಲಿಲ್ಲವೇಕೆ? [47]

**(ಪರಮೇಶ್ವರನಿಗಾಗಿ ಎತ್ತುಗಳ ಬಲಿ)**

**[48] ಮತ್ತು ಕ್ಷೇಮಕ್ಕಾಗಿ ಎತ್ತುಗಳ ಬಲಿದಾನವನ್ನು ಪರಮೇಶ್ವರನಿಗಾಗಿ ಅರ್ಪಿಸಿದನು.**

**ಮತ್ತು ಮೂಸಾ ರಕ್ತದ ಅರ್ಧ ಭಾಗವನ್ನು ತೆಗೆದುಕೊಂಡು, ಪಾತ್ರೆಗಳಲ್ಲಿಟ್ಟನು. ಮತ್ತು ಅರ್ಧ ಭಾಗ ರಕ್ತವನ್ನು ವೇದಿಯ ಮೇಲೆ ಪ್ರೋಕ್ಷಿಸಿದನು.**

ಮತ್ತು ಮೂಸಾ ಆ ರಕ್ತವನ್ನು ತೆಗೆದುಕೊಂಡು, ಜನರ ಮೇಲೆರಚಿದನು. ಮತ್ತು—

"ಈ ರಕ್ತವು ಪರಮೇಶ್ವರನು ಈ ಉದ್ದೇಶ್ಯಗಳಿಗಾಗಿ ನಿಮ್ಮ ಸಂಗಡ ಮಾಡಿಕೊಂಡಿರುವ ನಿಯಮಕ್ಕೆ ಸಂಬಂಧಿಸಿದುದಾಗಿದೆ", ಎಂದು ಹೇಳಿದನು.

ಮತ್ತು ಪರಮೇಶ್ವರನು ಮೂಸಾಗೆ—

"ಪರ್ವತದ ಮೇಲೆ ನನ್ನ ಹತ್ತಿರ ಬಾ. ಮತ್ತು ಅಲ್ಲಿ ಇರು. ಮತ್ತು ನಾನು ನಿನಗೆ ಸ್ವತಃ ನಾನೇ ಬರೆದಿರುವ ಶಿಲಾಪಟಲಗಳನ್ನೂ ಮತ್ತು ವ್ಯವಸ್ಥೆಯನ್ನೂ ಮತ್ತು ಆಜ್ಞೆಯನ್ನೂ ಕೊಡುವೆನು.". ಎಂದು ಹೇಳಿದನು.

[ಬೈಬಲ್ (ತೌ). ಯಾತ್ರಾ:–ಪರ್ವ 24; ಆ. 5,6,8,12]

## (ಎತ್ತುಗಳ ಬಲಿ, ರಕ್ತ ಎರಚುವುದು ಕಾಡು-ಸ್ವಭಾವ)

ಸಮೀಕ್ಷಕ:—ಈಗ ನೋಡಿರಿ ! ಇವೆಲ್ಲವೂ ಕಾಡುಜನರ ಮಾತುಗಳು ಅಹುದೋ ಅಥವಾ ಅಲ್ಲವೋ? ಮತ್ತು ಪರಮೇಶ್ವರನು ಎತ್ತುಗಳ ಬಲಿದಾನವನ್ನು ತೆಗೆದುಕೊಳ್ಳುತ್ತಾನೆ! ಮತ್ತು ವೇದಿಯ ಮೇಲೆ ರಕ್ತವನ್ನು ಪ್ರೋಕ್ಷಿಸುವುದು! ಇದೆಂತಹ ಕಾಡಾಡಿತನದ ಮತ್ತು ಅಸಭ್ಯತೆಯ ಸಂಗತಿಯಾಗಿದೆ!

ಕ್ರೈಸ್ತರ ದೇವರೂ ಕೂಡ, ಎತ್ತುಗಳ ಬಲಿದಾನವನ್ನು ತೆಗೆದುಕೊಳ್ಳುವಾಗ, ಅವನ ಭಕ್ತರು ಎತ್ತು-ಹಸುಗಳ ಬಲಿದಾನದ ಪ್ರಸಾದದಿಂದ ಹೊಟ್ಟೆಯನ್ನೇಕೆ ತುಂಬಿಸಿಕೊಳ್ಳಬಾರದು! ಮತ್ತು ಜಗತ್ತಿಗೆ ಹಾನಿಯನ್ನು ಏಕೆ ಮಾಡಬಾರದು!

## (ವೇದಗಳ ಮೇಲೂ ಇಂತಹ ದೋಷ ಆರೋಪಿಸುತ್ತಾರೆ, ಈ ಕ್ರೈಸ್ತರು)

ಇಂತಿಂತಹ ಕೆಟ್ಟ ಮಾತುಗಳು ಬೈಬಲಿನಲ್ಲಿ ತುಂಬಿಕೊಂಡಿವೆ! ಇದರದೇ ಆದ ದುಷ್ಟ ಸಂಸ್ಕಾರದಿಂದ ವೇದಗಳಲ್ಲಿಯೂ ಕೂಡ, ಇಂತಹ ದೋಷವನ್ನು ಆರೋಪಿಸಬಯಸುತ್ತಾರೆ. ಆದರೆ, ವೇದಗಳಲ್ಲಿ ಇಂತಹ ಮಾತುಗಳ ಹೆಸರೂ ಕೂಡ, ಇಲ್ಲ!

ಮತ್ತು 'ಕ್ರೈಸ್ತರ ದೇವರು ಒಬ್ಬ ಪಾರ್ವತ್ಯ ಮನುಷ್ಯನಾಗಿದ್ದನು. ಪರ್ವತದ ಮೇಲೆ ಇರುತ್ತಿದ್ದನು.', ಎಂಬುದೂ ಕೂಡ, ನಿಶ್ಚಯವಾಯಿತು.

ಮತ್ತು ಆ ದೇವರು ಮಸಿ, ಲೇಖನಿ ಮತ್ತು ಕಾಗದಗಳನ್ನು ನಿರ್ಮಿಸಲು ತಿಳಿಯದಿದ್ದ ಕಾರಣ, ಮತ್ತು ಅವನಿಗೆ ಸಿಕ್ಕದೇ ಇದ್ದ ಕಾರಣ, ಶಿಲಾಪಟಲಗಳ ಮೇಲೆ ಬರೆದು ಬರೆದು ಕೊಡುತ್ತಿದ್ದನು. ಮತ್ತು ಈ ಕಾಡುಮನುಷ್ಯರ ಮುಂದೆ ಈಶ್ವರನೂ ಆಗಿ ಕುಳಿತಿದ್ದನು! [48]

(ಪರಮೇಶ್ವರನ ಮಾಯಾ-ಪ್ರಪಂಚ)

[49] ಮತ್ತು—"ನೀನು ನನ್ನ ರೂಪವನ್ನು ನೋಡಲಾರೆ; ಏಕೆಂದರೆ, ನನ್ನನ್ನು ನೋಡಿ ಯಾವ ಮಾನವನೂ ಬದುಕುವುದಿಲ್ಲ", ಎಂದು ಹೇಳಿದನು.

ಮತ್ತು ಪರಮೇಶ್ವರನು—"ನೋಡು, ಒಂದು ಸ್ಥಳ ನನ್ನ ಬಳಿಯಿದೆ. ಮತ್ತು ನೀನು ಈ ಗುಡ್ಡದ ಮೇಲೆ ನಿಂತಿರು.

"ಮತ್ತು ಹೇಗೆ ಸಂಭವಿಸುವುದೆಂದರೆ—ನನ್ನ ವೈಭವದ* ಥಳಕು ಮೆರೆಯುವಾಗ, ನಾನು ನಿನ್ನನ್ನು ಪರ್ವತದ ಗವಿಯಲ್ಲಿಡುವೆನು. ಮತ್ತು ನಾನು ಹಾದು ಹೋಗುವವರೆಗೆ, ನಿನ್ನನ್ನು ನನ್ನ ಕೈಯಿಂದ ಮರೆಮಾಡುವೆನು.

"ಮತ್ತು [ಯಾವಾಗ] ನನ್ನ ಕೈಯನ್ನು ಸರಿಸಿಕೊಳ್ಳುವೆನೋ, ಆಗ ನೀನು ನನ್ನ ಬೆನ್ನನ್ನು ನೋಡುವೆ. ಆದರೆ, ನನ್ನ ರೂಪ ಕಾಣಿಸುವುದಿಲ್ಲ", ಎಂದು ಹೇಳಿದನು.

[ಬೈಬಲ್ (ತೌ). ಯಾತ್ರಾ:-ಪರ್ವ 30; ಆ. 20-28]

ಸಮೀಕ್ಷಕ:—ಈಗ ನೋಡಿರಿ! ಕ್ರೈಸ್ತರ ದೇವರು ಕೇವಲ ಮಾನವರಂತೆ ಶರೀರಧಾರಿಯಾಗಿದ್ದಾನೆ! ಮತ್ತು ಮೂಸಾನೊಂದಿಗೆ ಎಂತಹ ಕಪಟವಾಡಿ, ತಾನು ಸ್ವತಃ ಈಶ್ವರನಾಗಿಬಿಟ್ಟನು!

ಬೆನ್ನನ್ನು ನೋಡುವನು; ರೂಪವನ್ನು ನೋಡುವುದಿಲ್ಲ, ಎಂದಾದ ಮೇಲೆ ಕೈಯಿಂದ ಅವನನ್ನು ಮರೆಮಾಡಿಯೂ ಇರಲಾರನಲ್ಲವೇ?

ದೇವರು ತನ್ನ ಕೈಯಿಂದ ಮೂಸಾನನ್ನು ಮರೆಮಾಡಿಟ್ಟಿದ್ದಾಗ, ಅವನ ಕೈಯಿನ ರೂಪವನ್ನು ಅವನು ನೋಡಿರುವುದಿಲ್ಲವೇನು? [49]

## ಲಯವ್ಯವಸ್ಥೆಯ ಪುಸ್ತಕ†, ಬೈಬಲ್(ತೌರೇತ್)

### (ಪರಮೇಶ್ವರನು ಎತ್ತಿನ ಕಾಣಿಕೆ ಕೇಳುವುದು)

[50] ಮತ್ತು ಪರಮೇಶ್ವರನು ಮೂಸಾನನ್ನು ಕರೆದನು. ಮತ್ತು ಮಂಡಲಿಯಲ್ಲಿ, ಗುಡಾರದೊಳಗಿನಿಂದ ಅವನಿಗೆ ಈ ಮಾತನ್ನು ಹೇಳಿದನು—

"ಇಸ್ರಾಯೆಲನ ಸಂತತಿಯವರೊಂದಿಗೆ ಮಾತನಾಡು ಮತ್ತು ಅವರಿಗೆ—'ನಿಮ್ಮಲ್ಲಿ ಯಾವನಾದರೂ ಪರಮೇಶ್ವರನಿಗೆ ಕಾಣಿಕೆಯನ್ನರ್ಪಿಸುವುದಾದರೆ, ನೀವು ದನಗಳ ನಡುವಣಿಂದ, ಎಂದರೆ, ಹಸು, ಎತ್ತು, ಮತ್ತು ಕುರಿ-ಮೇಕೆಗಳ ಮಧ್ಯದಿಂದ, ನಿಮ್ಮ ಕಾಣಿಕೆಯನ್ನು ತನ್ನಿರಿ.', ಎಂದು ಹೇಳು."

[ಬೈಬಲ್ (ತೌ). ಲಯವ್ಯವಸ್ಥಾ ಪುಸ್ತಕ:-ಪರ್ವ 1; ಆ. 1-2]

---

*ಎಂದರೆ, ತೇಜಸ್ಸಿನ.—ಯು.ಮೀ.

†The Book of Leviticus.

## (ಕ್ರೈಸ್ತರ ಈಶ್ವರನು ನಿಶ್ಚಯವಾಗಿ ಮಾಂಸಾಹಾರಿಯಾಗಿದ್ದನು)

ಸಮೀಕ್ಷಕ:—ಈಗ ಆಲೋಚಿಸಿರಿ! ತನ್ನ ಸಲುವಾಗಿ ಬಲಿದಾನಸಮರ್ಪಣ ಕ್ಕಾಗಿ ಉಪದೇಶಗಳನ್ನು ಕೊಡುವ ಕ್ರೈಸ್ತರ ಪರಮೇಶ್ವರನು ಹಸು, ಎತ್ತು ಮೊದ ಲಾದವುಗಳ ಕಾಣಿಕೆಯನ್ನು ತೆಗೆದುಕೊಳ್ಳುವವನಾಗಿದ್ದಾನೆ. ಅವನು ಎತ್ತು, ಹಸು ಮೊದಲಾದ ಪಶುಗಳ ರಕ್ತ-ಮಾಂಸಗಳ ದಾಹವುಳ್ಳವನೂ, ಹಸಿವೆಯುಳ್ಳವನೂ ಆಗಿದ್ದಾನೋ ಅಥವಾ ಇಲ್ಲವೋ? ಇದರಿಂದಲೇ, ಅವನು ಅಹಿಂಸಕರ, ಹಾಗೂ ಈಶ್ವರರ ಶ್ರೇಣಿಯಲ್ಲಿ ಎಂದಿಗೂ ಎಣಿಸಲ್ಪಡಲಾರನು. ಆದರೆ, ಮಾಂಸಾ ಹಾರಿಯಾದ ಲೌಕಿಕ ಮನುಷ್ಯನ ಹಾಗೆ ಇದ್ದಾನೆ! [50]

## (ಯಜ್ಞವೇದಿಯಲ್ಲಿ ಪಶುಗಳನ್ನು ಹುರಿದು ತಿನ್ನುವುದು)

[51] ಮತ್ತು ಅವನು ಆ ಎತ್ತನ್ನು ಪರಮೇಶ್ವರನ ಮುಂದೆ ಬಲಿಕೊಡಲಿ! ಮತ್ತು 'ಹಾರೂನ'[1]ನ ಮಕ್ಕಳಾದ 'ಯಾಜಕ'[2]ರು ರಕ್ತವನ್ನು ಹತ್ತಿರ ತರಲಿ! ಮತ್ತು ಮಂಡಲಿಯ ಗುಡಾರದ ಬಾಗಿಲಿನಲ್ಲಿರುವ ಯಜ್ಞವೇದಿಯ ನಾಲ್ಕೂ ಕಡೆ ಆ ರಕ್ತವನ್ನು ಪ್ರೋಕ್ಷಿಸಲಿ!

ಆಗ, ಅವನು ಆ ಕಾಣಿಕೆಯ ಬಲಿದಾನದ ಚರ್ಮವನ್ನು ಬೇರ್ಪಡಿಸಲಿ! ಮತ್ತು ಅದನ್ನು ಚೂರು ಚೂರಾಗಿ ಮಾಡಲಿ!

ಮತ್ತು ಹಾರೂನನ ಮಕ್ಕಳಾದ ಯಾಜಕರು ಯಜ್ಞವೇದಿಯಲ್ಲಿ ಬೆಂಕಿ ಯನ್ನಿಡಲಿ! ಮತ್ತು ಅದರ ಮೇಲೆ ಸಮಿಧಾಚಯನವನ್ನು ಮಾಡಲಿ!

ಮತ್ತು ಹಾರೂನನ ಮಕ್ಕಳಾದ ಯಾಜಕರು ಅದರ ಚೂರುಗಳನ್ನು ಮತ್ತು ಅದರ ತಲೆ, ಹಾಗೂ ಕೊಬ್ಬನ್ನು ಯಜ್ಞವೇದಿಯ ಬೆಂಕಿಯ ಮೇಲೆ ಇರುವ ಸಮಿತ್ತುಗಳ ಮೇಲೆ ವಿಧಿಪೂರ್ವಕವಾಗಿಡಲಿ!

ಹೀಗೆ ಬೆಂಕಿಯಿಂದ ಸಿದ್ಧವಾಗಿ, ಪರಮೇಶ್ವರನಿಗೆ ಸುಗಂಧಕ್ಕಾಗಿ ಸಮರ್ಪಿತ ವಾದ ಬಲಿದಾನವಾದ ಕಾಣಿಕೆಯಾಗಲಿ!*

[ಬೈಬಲ್ (ತೌ). ಲಯವ್ಯವಸ್ಥಾಪುಸ್ತಕ:—ಪರ್ವ. 1; ಆ. 5–9]

---

1. Aaron. 2. Priests.

*ಭಾರತದಲ್ಲಿ ಸೋಮಯಾಗ ಮೊದಲಾದ ಯಾಗಗಳನ್ನು ಮಾಡುವ ಬ್ರಾಹ್ಮಣ ಯಾಜಕರು ಈಗಲೂ ಮೇಲೆ ಹೇಳಿದ ವಿಧಿಯನ್ನೇ ಪಶುಯಜ್ಞದಲ್ಲಿ ಆಚರಿಸುತ್ತಾರೆ. ವಾಮಮಾರ್ಗಿಗಳು ಮತ್ತು ಕಾಡಾಡಿಗಳಾದ ಯಹೂದ್ಯರಿಗೇನೋ ಈ ವಿಧಿ ಸಮರ್ಪಕವಾಗಿದೆ. ಆದರೆ, ಶಾಕಾ ಹಾರಿಗಳಾದ ಬ್ರಾಹ್ಮಣ ಯಾಜಕರು ಈ ದುಷ್ಟ ವಿಧಿಯನ್ನು ಏಕೆ ಕೊರಳಿಗೆ ಸುತ್ತಿಕೊಂಡಿದ್ದಾರೆ?

ಈ ಪಶುಯಾಗಗಳ ಕಾರಣದಿಂದ, ಬ್ರಾಹ್ಮಣರಿಗೆ ವಿರುದ್ಧವಾಗಿ, ಭಾರತದಲ್ಲಿ ಚಾರವಾಕ, ಬುದ್ಧ ಮೊದಲಾದವರು ಹೇಗೆ ವಿದ್ರೋಹವನ್ನು ಕಟ್ಟಿದರೋ, ಹಾಗೆಯೇ, ಪ್ಯಾಲಸ್ತಾಯಿನ್ ನಲ್ಲಿ ಯಹೂದ್ಯರಿಗೆ ವಿರುದ್ಧವಾಗಿ ಏಸುಕ್ರಿಸ್ತನು ವಿರೋಧವನ್ನು ಮಾಡಿದನು. ಆದರೆ, ಅವನ→

## (ಬಲಿ ಕೇಳುವ ಈಶ್ವರನು ಪಾಪಿಯೇ ಸೈ!)

**ಸಮೀಕ್ಷಕ:**—ಸ್ವಲ್ಪ ವಿಮರ್ಶಿಸಿರಿ! ಎತ್ತನ್ನು ಪರಮೇಶ್ವರನ ಮುಂದೆ ಅವನ ಭಕ್ತರು ಕೊಲ್ಲುವರು. ಮತ್ತು ಅವನು ಕೊಲೆ ಮಾಡಿಸುವನು! ಮತ್ತು ರಕ್ತವನ್ನು ನಾಲ್ಕು ಕಡೆ ಎರಚುವರು: ಬೆಂಕಿಯಲ್ಲಿ ಆಹುತಿ ಕೊಡುವರು; ಈಶ್ವರನು ಪರಿಮಳವನ್ನು ಮೂಸುವನು!

ಭಲೇ! ಇದು ಕಟುಕನ ಮನೆಯ ಲೀಲೆಗಿಂತ ಕಡಿಮೆ ಏನಾದರೂ ಆಗಿದೆಯೇ?

**ಇದರಿಂದಲೇ ಬೈಬಲ್ ಈಶ್ವರಕೃತವೂ ಅಲ್ಲ; ಮತ್ತು ಆ ಕಾಡಾಡಿಯಾದ ಮನುಷ್ಯನಂತೆ ಲೀಲೆ ಮಾಡುವವನು ಈಶ್ವರನೂ ಆಗಿರಲಾರನು, ಎಂದು ಸಿದ್ಧವಾಗುತ್ತದೆ!** [51]

## (ಕರುವಿನ ಬಲಿದಾನದಿಂದ ಪಾಪದ ನಿವೃತ್ತಿ)

[52] **ಮತ್ತೆ, ಪರಮೇಶ್ವರನು ಮೂಸಾಗೆ ಹೀಗೆಂದು ಹೇಳಿದನು—**

**"ಅಭಿಷಿಕ್ತನಾದ ಯಾಜಕನು ಸಾಧಾರಣ ಪಾಪಕ್ಕೆ ಸಮನಾದ ಪಾಪವನ್ನು ಮಾಡುವವನಾದರೆ, ತಾನು ಮಾಡಿದ ತನ್ನ ಪಾಪದ [ಪ್ರಾಯಶ್ಚಿತ್ತದ] ಕಾಣಿಕೆಗಾಗಿ, ಒಂದು ನಿರ್ದೋಷವಾದ ಕರುವನ್ನು ಪರಮೇಶ್ವರನ ಸಲುವಾಗಿ ತರಬೇಕು.**

**"ಮತ್ತು ಕರುವಿನ ತಲೆಯ ಮೇಲೆ ತನ್ನ ಕೈಯನ್ನಿಡಬೇಕು. ಮತ್ತು ಕರುವನ್ನು ಪರಮೇಶ್ವರನ ಮುಂದೆ ಬಲಿಯಾಗಿ ಅರ್ಪಿಸಬೇಕು."**

[ಬೈಬಲ್ (ತೌ). **ಲಯವ್ಯವಸ್ಥಾಪುಸ್ತಕ:—ಪರ್ವ. 4; ಆ.1,3,4**]

## (ಪಾಪವನ್ನು ನಿವಾರಿಸಲು ನಿಕೃಷ್ಟತಮ ಪ್ರಾಯಶ್ಚಿತ್ತ)

**ಸಮೀಕ್ಷಕ:—ಈಗ ನೋಡಿರಿ. ಪಾಪವನ್ನು ನಿವಾರಿಸುವ ಪ್ರಾಯಶ್ಚಿತ್ತವನ್ನು!** ಸ್ವತಃ ಪಾಪಮಾಡುವುದು; ಹಸು ಮೊದಲಾದ ಉತ್ತಮ ಪಶುಗಳನ್ನು ಕೊಲ್ಲುವುದು ಮತ್ತು ಪರಮೇಶ್ವರನು ಕೊಲ್ಲಿಸುವುದು!

---

→ಪ್ರಯತ್ನದಿಂದ ಪಶುಯಾಗಗಳು ನಿಂತವೇ ಹೊರತು, ಕ್ರೈಸ್ತರು ಶಾಕಾಹಾರಿಗಳಾಗಲಿಲ್ಲ. ಮಾಂಸಾಹಾರಿಗಳಾಗಿಯೇ ಉಳಿದರು!

ವೈಷ್ಣವ ಬ್ರಾಹ್ಮಣರಲ್ಲಿ ಈ ದುಷ್ಟ ವಿಧಿಯ ಪ್ರಚಲನೆ ಇಲ್ಲದಿರುವುದು ಸಂತೋಷದ ಸಂಗತಿ. ಆದಿ ಶಂಕರಾಚಾರ್ಯರಿಂದ ಈ ಕುರೀತಿಯನ್ನು ಮೆಟ್ಟಲಾಗಲಿಲ್ಲ. ಆದರೆ, ಮಧ್ವಾಚಾರ್ಯರು ಇದನ್ನು ಬಹುಮಟ್ಟಿಗೆ ಮೆಟ್ಟಿ ಹಾಕಿದರು. ಈ ಕಾರಣದಿಂದ, ಅವರು ಯಜ್ಞ-ಯಾಗಾದಿಗಳನ್ನು ಮಾಡಲು ತಮ್ಮ ಅನುಯಾಯಿಗಳಿಗೆ ಪ್ರೋತ್ಸಾಹವನ್ನೀಯಲಿಲ್ಲ. ಆದ್ದರಿಂದಲೇ, ಮಾಧ್ವರು ಶುದ್ಧ ಶಾಕಾಹಾರಿಗಳೂ, ಸಾತ್ವಿಕ ವ್ರತಾಚಾರವನ್ನುಳ್ಳವರೂ ಆಗಿ ಉಳಿದರು.—ಸಂ.

ಕ್ರೈಸ್ತ ಜನರೇ ನೀವು ಧನ್ಯರಾಗಿದ್ದೀರಿ!!! ಇಂತಹ ಕೃತ್ಯಗಳನ್ನು ಮಾಡುವವನೂ, ಮಾಡಿಸುವವನೂ ಆದವನನ್ನೂ ಕೂಡ, ಈಶ್ವರನೆಂದು ಗ್ರಹಿಸಿ, ತಮಗೆ ಮುಕ್ತಿ, ಮೊದಲಾದುವರ ಆಸೆಯನ್ನಿಟ್ಟುಕೊಂಡಿರುತ್ತೀರಲ್ಲ! [52]

## (ಮೇಕೆಯ ಮರಿಯ ಕಾಣಿಕೆಯಿಂದಲೂ ಪಾಪ--ಪರಿಹಾರ)

**[53] ಯಾವಾಗ ಯಾವನಾದರೂ ಅಧ್ಯಕ್ಷನು ಪಾಪ ಮಾಡುತ್ತಾನೋ.**

**ಆಗ ಅವನು ಮೇಕೆಯ ನಿರ್ದೋಷವಾದ ಗಂಡು ಮರಿಯೊಂದನ್ನು ತನ್ನ ಕಾಣಿಕೆಗಾಗಿ ತರಬೇಕು.**

**ಮತ್ತು ಅದನ್ನು ಪರಮೇಶ್ವರನ ಮುಂದೆ ಬಲಿಕೊಡಬೇಕು. ಇದು ಪಾಪದ ಕಾಣಿಕೆಯಾಗಿದೆ.**

[ಬೈಬಲ್ (ತೌ). ಲಯವ್ಯವಸ್ಥಾಪುಸ್ತಕ:—ಪರ್ವ. 4; ಆ. 22-24]

## (ಮತ್ತೆ, ಅಧ್ಯಕ್ಷ ಮೊದಲಾದವರು ಪಾಪ ಮಾಡಲು ಹೆದರುವರೇಕೆ?)

ಸಮೀಕ್ಷಕ:—ಸರಿ! ಸ್ವಾಮೀ, ಸರಿ!! ಹೀಗೆ ಇರುವುದಾದರೆ, ಇವರ ಅಧ್ಯಕ್ಷರು, ಎಂದರೆ ನ್ಯಾಯಾಧೀಶರು ಮತ್ತು ಸೇನಾಪತಿ ಮೊದಲಾದವರು ಪಾಪ ಮಾಡುವುದಕ್ಕೆ ಹೆದರುವರಾದರೂ ಏಕೆ?

ತಾವೇನೋ ಯಥೇಚ್ಛವಾಗಿ ಪಾಪ ಮಾಡುತ್ತಾರೆ! ಆದರೆ, ಪ್ರಾಯಶ್ಚಿತ್ತದ ಸಲುವಾಗಿ ಪಸು, ಕರು. ಆಡು ಮೊದಲಾದುವುಗಳ ಪ್ರಾಣಾಪಹಾರ ಮಾಡುತ್ತಾರೆ!

ಇದರಿಂದಲೇ ಇರಬೇಕು, **ಕ್ರೈಸ್ತರುಗಳು ಯಾವುದಾದರೂ ಪಶುವಿನ ಅಥವಾ ಪಕ್ಷಿಯ ಪ್ರಾಣಗಳನ್ನು ತೆಗೆಯುವುದರಲ್ಲಿ ಹಿಂದೆ-ಮುಂದೆ ನೋಡುವುದಿಲ್ಲ!**

ಆಲಿಸಿರಿ ಕ್ರೈಸ್ತರುಗಳೇ! **ಈಗಲಾದರೂ ಈ ಕಾಡುಮತವನ್ನು ವರ್ಜಿಸಿ, ನಿಮಗೆ ಕಲ್ಯಾಣವನ್ನುಂಟುಮಾಡುವ ಸುಸಭ್ಯ ಧರ್ಮಮಯವಾದ ವೇದಮತವನ್ನು ಸ್ವೀಕರಿಸಿರಿ!** [53]

## (ಕುರಿ ಸಿಗದಿದ್ದರೆ. ಪಾರಿವಾಳದ ಮರಿಗಳೇ ಸೈ!)

**[54] ಮತ್ತು ಅವನ ಬಳಿ ಕುರಿಯನ್ನು ತರಲು ಬಂಡವಾಳವಿಲ್ಲದಿದ್ದರೆ, ಅವನು ತನ್ನಿಂದಾದ ಅಪರಾಧಕ್ಕಾಗಿ, ಎರಡು ಆಮೆಗಳನ್ನೂ ಮತ್ತು ಪಾರಿವಾಳದ ಎರಡು ಮರಿಗಳನ್ನೂ ಪರಮೇಶ್ವರನ ಸಲುವಾಗಿ ತರಬೇಕು.**

**ಮತ್ತು ಅದರ ತಲೆಯನ್ನು ಅದರ ಕೊರಳಿನ ಬಳಿ ತಿರುಚಿಬಿಡಬೇಕು! ಆದರೆ, ಬೇರೆ ಮಾಡಬಾರದು.**

ತಾನು ಮಾಡಿದ ಪಾಪದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಮತ್ತು ಅವನಿಗೆ ಕ್ಷಮೆ ಕೊಡಲ್ಪಡುವುದು.

ಮತ್ತು ಅವನ ಬಳಿ ಎರಡು ಆಮೆಗಳನ್ನೂ ಮತ್ತು ಪಾರಿವಾಳದ ಎರಡು ಮರಿಗಳನ್ನೂ ತರುವುದಕ್ಕೆ ಬಂಡವಾಳವಿಲ್ಲವಾದರೆ, ಸೇರು ತುಂಬ ಚೊಕ್ಕವಾದ ಹಿಟ್ಟಿನ ಹತ್ತನೆಯ ಒಂದು ಭಾಗವನ್ನು ಪಾಪದ ಕಾಣಿಕೆಗಾಗಿ ತರಬೇಕು*. ಅದರ ಮೇಲೆ ಎಣ್ಣೆಯನ್ನು ಹಾಕಬಾರದು.

ಮತ್ತು ಅವನು ಕ್ಷಮಿಸಲ್ಪಡುವನು.

[ಬೈಬಲ್ (ತೌ). ಲಯುವ್ಯವಸ್ಥಾಪುಸ್ತಕ:—ಪರ್ವ. 5; ಆ. 7,8, 10,11,13]

## (ಪಾಪದಿಂದ ಪಾಪದ ಪರಿಹಾರವಾಗದು)

ಸಮೀಕ್ಷಕ:—ಈಗ ಕೇಳಿರಿ, ಕ್ರೈಸ್ತರಲ್ಲಿ ಪಾಪ ಮಾಡುವುದಕ್ಕೆ ಯಾವ ಧನಾಢ್ಯನೂ ಹೆದರದಿರಬಹುದು! ಮತ್ತು ಯಾವ ದರಿದ್ರನೂ ಅಂಜದಿರಬಹುದು! ಏಕೆಂದರೆ, ಇವರ ಈಶ್ವರನು ಪ್ರಾಯಶ್ಚಿತ್ತ ಮಾಡುವುದನ್ನೂ ಸುಗಮವಾಗಿ ಮಾಡಿಟ್ಟಿದ್ದಾನೆ!

ಕಷ್ಟವನ್ನು ಅನುಭವಿಸದೇ, ಪಾಪವು ಬಿಟ್ಟು ಹೋಗುವುದು, ಎಂಬೀ ಮಾತು ಬೈಬಲಿನಲ್ಲಿ ಮಹದದ್ಭುತವಾದುದಾಗಿದೆ! ಏಕೆಂದರೆ, ಮೊದಲಾಗಿ, ಪಾಪವನ್ನು

---

*ಯಾವನು ಕರು, ಕುರಿ, ಮತ್ತು ಮೇಕೆಯ ಮರಿ, ಪಾರಿವಾಳ ಮತ್ತು ಹಿಟ್ಟನ್ನೂ ಕೂಡ, ತೆಗೆದುಕೊಳ್ಳುವ ವಿಧಾನ ಮಾಡಿದನೋ, ಆ ಈಶ್ವರನಿಗೆ ಧನ್ಯವಾದಗಳಿರಲಿ! ಅದ್ಭುತವಾದ ಸಂಗತಿಯೆಂದರೆ, ಪಾರಿವಾಳದ ಮರಿಗಳನ್ನು 'ಕೊರಳನ್ನು ತಿರುಚಿಸಿ' ತೆಗೆದುಕೊಳ್ಳುತ್ತಿದ್ದನು, ಎಂಬುದೇ ಆಗಿದೆ. ಎಂದರೆ, ಕೊರಳನ್ನು ಮುರಿಯುವ ಪರಿಶ್ರಮವನ್ನೂ ಕೂಡ, ಮಾಡಬೇಕಾಗಿ ರದಿರಲಿ, ಎಂದು.

ಈ ಎಲ್ಲಾ ಸಂಗತಿಗಳನ್ನೂ ನೋಡುವುದರಿಂದ, "ಕಾಡಾಡಿಗಳ ನಡುವೆ ಯಾವನೋ ಒಬ್ಬ ಚತುರ ಪುರುಷನಿದ್ದನು. ಅವನು ಪರ್ವತದ ಮೇಲೆ ಹೋಗಿ ಕುಳಿತನು. ಮತ್ತು ತನ್ನನ್ನು ಈಶ್ವರನೆಂದು ಸಾರಿದನು. ಕಾಡಾಡಿಗಳು ಅಜ್ಞಾನಿಗಳಾಗಿದ್ದರು. ಅವರು ಅವನನ್ನೇ ಈಶ್ವರ ನೆಂದು ಒಪ್ಪಿಕೊಂಡು ಬಿಟ್ಟರು!

"ತನ್ನ ಉಪಾಯಗಳಿಂದ, ಅವನು ಪರ್ವತದ ಮೇಲಕ್ಕೆಯೇ ತಿನ್ನಲು ಪಶು-ಪಕ್ಷಿಗಳನ್ನೂ ಮತ್ತು ಅನ್ನ ಮೊದಲಾದುವನ್ನೂ ತರಿಸಿಕೊಳ್ಳುವ ಪರಿಪಾಟಿಯನ್ನಿಟ್ಟುಕೊಂಡಿದ್ದನು. ಮತ್ತು ಮಜಾ ಮಾಡುತ್ತಾ ಇದ್ದನು. ಅವನ ದೂತರು ದೇವದೂತರ ಕೆಲಸಮಾಡುತ್ತಿದ್ದರು.", ಎಂದು ವಿದಿತವಾಗುತ್ತದೆ.

ಸಜ್ಜನರುಗಳು—ಬೈಬಲಿನಲ್ಲಿ [ಹೇಳಿರುವ] ಕರುವನ್ನೂ, ಕುರಿಯನ್ನೂ, ಆಡಿನ ಮರಿ ಯನ್ನೂ, ಪಾರಿವಾಳವನ್ನೂ ಮತ್ತು 'ಒಳ್ಳೆಯ' ಹಿಟ್ಟನ್ನೂ ತಿನ್ನುವ ಈಶ್ವರನೆಲ್ಲಿ! ಸರ್ವವ್ಯಾಪಕ, ಸರ್ವಜ್ಞ, ಅಜ, ನಿರಾಕಾರ, ಸರ್ವಶಕ್ತಿಮಂತ, ಮತ್ತು ನ್ಯಾಯಕಾರಿ ಈ ಮೊದಲಾದ ಉತ್ತಮ ಗುಣಯುಕ್ತನೂ, ವೇದೋಕ್ತನೂ ಆದ ಈಶ್ವರನೆಲ್ಲಿ, ಎಂದು ಆಲೋಚಿಸಲಿ!—ದ.ಸ.

ಮಾಡಿದನು! ಮತ್ತು ಎರಡನೆಯದಾಗಿ, ಜೀವರ ಹಿಂಸೆಯನ್ನು ಮಾಡಿದನು! ಮತ್ತು ಚೆನ್ನಾಗಿ, ಸಂತಸದಿಂದ ಮಾಂಸವನ್ನು ತಿಂದನು! ಮತ್ತು ಪಾಪವೂ ಬಿಟ್ಟು ಹೋಯಿತು!

### (ಇಂತಹ ಉಪದೇಶವಿರುವ ಕಡೆ ದಯೆಯ ಕೆಲಸವೇನು?)

ಅಲ್ಲಾ! ಪಾರಿವಾಳದ ಮರಿಯ ಕೊರಳನ್ನು ತಿರುಚುವುದರಿಂದ, ಅದು ಬಹಳ ಹೊತ್ತು ಚಡಪಡಿಸುತ್ತಿರಬಹುದು. ಆಗಲೂ ಕೂಡ, ಕ್ರೈಸ್ತರಿಗೆ ದಯೆ ಬರುತ್ತಿಲ್ಲವಲ್ಲ! ದಯೆ ಬಂದೀತಾದರೂ ಹೇಗೆ? **ಇವರ ಈಶ್ವರನ ಉಪದೇಶವೇ ಹಿಂಸಾಪರಕವಾಗಿದೆ!**

ಮತ್ತು ಸಮಸ್ತ ಪಾಪಗಳಿಗೂ 'ಇಂತಹ' ಪ್ರಾಯಶ್ಚಿತ್ತವಿರುವುದಾದರೆ, ಏಸುವಿನಲ್ಲಿ ನಂಬಿಕೆಯಿಡುವುದರಿಂದ, ಪಾಪವು ಬಿಟ್ಟು ಹೋಗುತ್ತದೆ, ಎಂಬ ಈ ಮಹದಾಡಂಬರವನ್ನು ಏಕೆ ರಚಿಸುತ್ತಾರೆ? [54]

### (ಬಲಿಪಶುವಿನ ಚರ್ಮವೂ, ಯಾಜಕನ ಭೋಜನವೂ)

**[55] ಹೀಗೆ, ಅದೇ ಬಲಿದಾನದ ಚರ್ಮವು, ಯಾವನು ಅದನ್ನು ಅರ್ಪಿಸಿದ್ದಾನೋ, ಅದೇ ಯಾಜಕನದಾಗುವುದು.**

**ಮತ್ತು ಯಾವುದು ಭಟ್ಟಿಯಲ್ಲಿ ಬೇಯಿಸಲ್ಪಡುತ್ತದೋ. ಆ ಸಮಸ್ತ ಭೋಜನದ ಕಾಣಿಕೆಯೂ, ಮತ್ತು ಯಾವುದು ಬಾಣಲೆಯಲ್ಲಿ ಅಥವಾ ಕಾವಲಿಯ ಮೇಲೆ ಕರಿಯಲ್ಪಡುತ್ತದೋ. ಬೇಯಿಸಲ್ಪಡುತ್ತದೋ, ಅದೆಲ್ಲವೂ ಅದೇ ಯಾಜಕನದಾಗುವುದು,**

**[ಬೈಬಲ್ (ತೌ). ಲಯಯವ್ಯವಸ್ಥಾಪುಸ್ತಕ:-ಪರ್ವ 7; ಆ. 8,9]**

### (ಕ್ರೈಸ್ತ ಪೂಜಾರಿಗಳು ದೇವಿಯ ಅರ್ಚಕರಿಗಿಂತ ಹೆಚ್ಚಾದರು)

**ಸಮೀಕ್ಷಕ:**—ಇಲ್ಲಿಯ ದೇವಿಯ ಅರ್ಚಕರ. ಮತ್ತು ದೇವಾಲಯದ ಪೂಜಾರಿಗಳ ಪೋಪಲೀಲೆ ವಿಚಿತ್ರವಾಗಿದೆ. ಎಂದು ತಿಳಿದಿದ್ದೆವು! ಆದರೆ, ಕ್ರೈಸ್ತರ ಈಶ್ವರನ ಮತ್ತು ಅವರ ಪೂಜಾರಿಗಳ ಪೋಪಲೀಲೆ ಅದಕ್ಕಿಂತ ಸಾವಿರಪಟ್ಟು ಹೆಚ್ಚಾಗಿದೆ! ಏಕೆಂದರೆ, ಚರ್ಮದ ಬೆಲೆಯೂ ಸಿಕ್ಕುವುದು! ಭೋಜನದ ಪದಾರ್ಥಗಳೂ ತಿನ್ನುವುದಕ್ಕೆ ಲಭಿಸುವುವು! ಮತ್ತೆ. ಕ್ರೈಸ್ತರು ಚೆನ್ನಾಗಿ ಮಜಾ ಮಾಡಿರಬೇಕು! ಮತ್ತು ಈಗಲೂ ಉಲಿಯುತ್ತಿರಬಹುದು!

ಭಲೇ! ಯಾವನಾದರೂ ಮಾನವನು ಒಬ್ಬ ಮಗನನ್ನು ಕೊಲ್ಲಿಸಿ. ಎರಡನೆಯ ಮಗನಿಗೆ ಅವನ ಮಾಂಸವನ್ನು ತಿನ್ನಿಸುವುದು ಎಂದಿಗಾದರೂ ಶಕ್ಯವೇ? **ಹೇಗೂ, ಈಶ್ವರನಿಗೆ ಸಮಸ್ತ ಮಾನವರೂ, ಮತ್ತು ಪಶು-ಪಕ್ಷಿಗಳು ಮೊದಲಾದ**

ಜೀವರೆಲ್ಲರೂ ಮಕ್ಕಳಂತೆ ಇದ್ದಾರೆ. ಪರಮೇಶ್ವರನು ಇಂತಹ ಕಾರ್ಯವನ್ನು ಎಂದಿಗೂ ಮಾಡಲಾರನು.

ಈ ಕಾರಣದಿಂದಲೇ, ಈ ಬೈಬಲ್ ಈಶ್ವರಕೃತವಲ್ಲ. ಮತ್ತು ಇದರಲ್ಲಿ ಬರೆದಿರುವ ಈಶ್ವರನು ಮತ್ತು ಇದನ್ನು ಅಂಗೀಕರಿಸುವವರು ಧರ್ಮಜ್ಞರು ಎಂದಿಗೂ ಆಗಲಾರರು.

ಇಂತಹವೇ ಆವ ಸಮಸ್ತ ಲೀಲೆಗಳೂ 'ಲಯವ್ಯವಸ್ಥೆ' ಮೊದಲಾದ ಪುಸ್ತಕಗಳಲ್ಲಿ ತುಂಬಿಕೊಂಡಿವೆ! ಎಲ್ಲಿಯವರೆಗೆ ಎಣಿಸೋಣ? [55]

## ಸಂಖ್ಯಾಪುಸ್ತಕ*

### (ಈಶ್ವರನ ದೂತನೊಡನೆ ಹೆಣ್ಣುಕತ್ತೆಯ ಸಂಭಾಷಣೆ)

[56] ಮತ್ತು ಹೆಣ್ಣುಕತ್ತೆಯು ಪರಮೇಶ್ವರನ ದೂತನು ತನ್ನ ಕೈಯಲ್ಲಿ ಖಡ್ಗವನ್ನು ಸೆಳೆದು ದಾರಿಯಲ್ಲಿ ನಿಂತಿರುವುದನ್ನು ನೋಡಿತು. ಆಗ ಹೆಣ್ಣು ಕತ್ತೆಯು ಮಾರ್ಗದಿಂದ ಬೇರೆಯಾಗಿ ಹೊಲದೊಳಗೆ ತಿರುಗಿತು. ಅದು ಮಾರ್ಗಕ್ಕೆ ಮತ್ತೆ ತಿರುಗಲೋಸ್ಕರ 'ಬಲಆಮು'[1]ನು ಕತ್ತೆಯನ್ನು ಕೋಲಿನಿಂದ ಹೊಡೆದನು. ಆಗ ಪರಮೇಶ್ವರನು ಹೆಣ್ಣು ಕತ್ತೆಯ ಬಾಯಿಯನ್ನು ತೆರೆದನು. ಮತ್ತೆ ಅದು ಬಲಆಮನನ್ನು—"ನೀನು ನನ್ನನ್ನು ಮೂರುಸಾರಿ ಹೊಡೆಯಲು ನಾನು ನಿನಗೆ ಏನು ಮಾಡಿದ್ದೇನೆ?", ಎಂದು ಕೇಳಿತು.

[ಬೈಬಲ್ (ತೌ). ಸಂಖ್ಯಾಪುಸ್ತಕ:-ಪರ್ವ 22; ಆ. 23,28]

**ಸಮೀಕ್ಷಕ:**—ಮೊದಲ ಕಾಲದಲ್ಲಿಯಂತೂ, ಕತ್ತೆಗಳೂ ಕೂಡ, ಈಶ್ವರನ ದೂತರನ್ನು ನೋಡುತ್ತಿದ್ದವು! ಆದರೆ, ಈ ದಿನಗಳಲ್ಲಿ ಬಿಷಪ್‌ಗಳು, ಪಾದರಿಗಳೇ ಮೊದಲಾದ ಶ್ರೇಷ್ಠರಾದ ಅಥವಾ ಅಶ್ರೇಷ್ಠರಾದ ಮಾನವರಿಗೂ ಕೂಡ, ದೇವರು ಅಥವಾ ಅವನ ದೂತರೂ ಕಾಣಿಸುವುದಿಲ್ಲ!

ಈ ಕಾಲದಲ್ಲಿ ಪರಮೇಶ್ವರನೂ, ಮತ್ತು ಅವನ ದೂತರೂ ಇದ್ದಾರೋ, ಅಥವಾ ಇಲ್ಲವೋ? ಇರುವರಾದರೆ, ಗಾಢ ನಿದ್ರೆಯಲ್ಲಿ ಒರಗಿರುತ್ತಾರೋ? ಇಲ್ಲವೇ ರೋಗಗ್ರಸ್ತರಾಗಿದ್ದಾರೋ? ಅಥವಾ ಬೇರೆ ಭೂಗೋಳಕ್ಕೆ ಹೊರಟು ಹೋದರೋ? ಇಲ್ಲವೇ ಯಾವುದಾದರೂ ಬೇರೆ ವೃತ್ತಿಯಲ್ಲಿ ತೊಡಗಿಬಿಟ್ಟಿದ್ದಾರೋ? ಅಥವಾ ಕ್ರೈಸ್ತರೊಡನೆ ಕೋಪಿಸಿಕೊಂಡಿದ್ದಾರೋ? ಅಥವಾ ಸತ್ತುಹೋದರೋ? ಏನಾಯಿತೆಂದು ಗೊತ್ತಾಗುವುದಿಲ್ಲ!

---

*The Book of Numbers. 1. Balaam

ಈಗ ಇಲ್ಲ; [ಆದುದರಿಂದ], ಕಾಣಿಸುವುದಿಲ್ಲ, ಎಂದ ಮೇಲೆ, ಆಗಲೂ ಇರಲಿಲ್ಲ; ಆದುದರಿಂದ, ಕಾಣಿಸುತ್ತಲೂ ಇರಲಿಲ್ಲ. ಎಂದೇ ಊಹಿಸಬಹುದಾಗಿದೆ. ಆದರೆ, ಕೇವಲ ಮನಬಂದಂತೆ, ಈ ಬುರುಡೆಗಳನ್ನೇ ಹೊಡೆದಿದ್ದಾರೆ! [56]

**(ಎಲ್ಲರನ್ನೂ ಕೊಂದು, ಕನ್ಯೆಯರನ್ನು ತನಗಾಗಿ ಇಟ್ಟುಕೊಳ್ಳುವುದು)**

**[57] ಹೀಗೆ, ಈಗ ಬಾಲಕರಲ್ಲಿ ಪ್ರತಿಯೊಬ್ಬ ಮಗನನ್ನೂ, ಮತ್ತು ಪುರುಷನೊಂದಿಗೆ ದೇಹಸುಖವನ್ನು ಪಡೆದಿರುವಂತಹ ಪ್ರತಿಯೊಬ್ಬಳು ಹೆಂಗಸನ್ನೂ ಪ್ರಾಣಸಹಿತ ಕೊಂದುಹಾಕು.**

**ಆದರೆ, ಪುರುಷರೊಂದಿಗೆ ದೇಹ-ಸಂಗವನ್ನು ಮಾಡದೇ ಇರುವ ಹೆಣ್ಣು ಮಕ್ಕಳನ್ನು ನಿನ್ನ ಸಲುವಾಗಿ ಜೀವಂತವಾಗಿ ಉಳಿಸಿಟ್ಟುಕೋ!**

[ಬೈಬಲ್ (ತೌ). ಸಂಖ್ಯಾಪುಸ್ತಕ:-ಪರ್ವ 31; ಆ. 17,18]

**(ಈ ಮೂಸಾ ಹಿಂಸಕನು ಮತ್ತು ಲಂಪಟನಾಗಿದ್ದನು)**

**ಸಮೀಕ್ಷಕ:**—ಛೇಷ್, ಶ್ರೀಮಾನ್! ಪ್ರವಾದಿ ಮೂಸಾ ಮತ್ತು ನಿಮ್ಮ ಈಶ್ವರ ಧನ್ಯರಾಗಿದ್ದಾರೆ!! ಸ್ತ್ರೀಯರು, ಬಾಲಕರು, ವೃದ್ಧರು ಮತ್ತು ಪಶುಗಳು ಮೊದಲಾದವರನ್ನೂ ಕೂಡ, ಕೊಲ್ಲುವುದರಿಂದ, ದೂರ ಉಳಿಯಲಿಲ್ಲವಲ್ಲಾ! ಮತ್ತು ಇದರಿಂದ, **ಮೂಸಾ ವಿಷಯಾಸಕ್ತನಾಗಿದ್ದನೆಂದು ಸ್ಪಷ್ಟವಾಗಿ ನಿಶ್ಚಿತವಾಗುತ್ತದೆ!** ಏಕೆಂದರೆ, ವಿಷಯಾಸಕ್ತನಾಗಿರದಿದ್ದರೆ, **ಅಕ್ಷತಯೋನಿಯರನ್ನು**, ಎಂದರೆ ಪುರುಷಸಂಗ ಮಾಡದ ಕನ್ಯೆಯರನ್ನು ತನ್ನ ಸಲುವಾಗಿ [ಏಕೆ] ತರಿಸಿಕೊಳ್ಳುತ್ತಿದ್ದನು? ಅಥವಾ ಅವರಿಗೆ ಇಂತಹ ದಯಾಹೀನತೆಯ ಅಥವಾ ವಿಷಯಲಂಪಟತನದ ಆಜ್ಞೆಯನ್ನೇತಕ್ಕೆ ಕೊಡುತ್ತಿದ್ದನು? [57]

## ಸಾಮುಯೇಲ[1]ನ ದ್ವಿತೀಯ ಪುಸ್ತಕ

**(ಶರಣಾರ್ಥಿಗಳಂತೆ ಈಶ್ವರನು ಗುಡಾರದಲ್ಲಿ ವಾಸಿಸುವುದು)**

**[58] ಮತ್ತು ಅದೇ ರಾತ್ರಿ ಹೇಗೆ ಸಂಭವಿಸಿತೆಂದರೆ—'ನಾತನ್'[2]ನ ಬಳಿಗೆ—**

**"ಹೋಗು, ಮತ್ತು ನನ್ನ ಸೇವಕನಾದ 'ದಾಊದ'[3]ನಿಗೆ—'ನನ್ನ ನಿವಾಸಕ್ಕಾಗಿ ನೀನೊಂದು ಮನೆಯನ್ನು ಕಟ್ಟಿಸುವೆ.**

**'ಏಕೆಂದರೆ, ಯಾವಾಗಿನಿಂದ ಇಸ್ರಯೇಲನ ಸಂತತಿಯನ್ನು ಮಿಶ್ರದೇಶ[4]ದಿಂದ ಹೊರಡಿಸಿ ಕರೆತಂದನೋ, ಆಗಿನಿಂದ ಇಂದಿನವರೆಗೆ ಮನೆಯಲ್ಲಿ ನಾನಂತೂ**

---

1. Samuel 2. Nathan 3. David 4. Egypt

ವಾಸಮಾಡಲಿಲ್ಲ! ಆದರೆ,ಗುಡಾರದಲ್ಲಿಯೂ, ಡೇರಾದಲ್ಲಿಯೂ ಅಲೆದಾಡುತ್ತಿದ್ದೇನೆ', ಎಂದು ಪರಮೇಶ್ವರನು ಹೇಳುತ್ತಾನೆ. ಎಂದು ಹೇಳು", ಎಂದು ಪರಮೇಶ್ವರನ ವಚನ ಮುಟ್ಟಿತು.

[ಬೈಬಲ್ (ತೌ). ಸಾಮು. ದ್ವಿತೀಯ ಪುಸ್ತಕ:-ಪರ್ವ 7; ಆ. 4-6]

## (ಗುಡಾರದಲ್ಲಿ ಈಶ್ವರನಲ್ಲ; ಮನುಷ್ಯನೇ ಇರುತ್ತಾನೆ)

ಸಮೀಕ್ಷಕ:—ಕ್ರೈಸ್ತರ ಈಶ್ವರನು ಮನುಷ್ಯರಂತೆ ದೇಹಧಾರಿಯಾಗಿಲ್ಲ, ಎಂಬ ಸಂದೇಹ ಈಗ ಸ್ವಲ್ಪವೂ ಉಳಿಯಲಿಲ್ಲ.

ಮತ್ತು ಅವನು—"ನಾನು ಬಹಳ ಪರಿಶ್ರಮ ಪಟ್ಟೆನು. ಅತ್ತ-ಇತ್ತ ಅಲೆಯುತ್ತಾ ತಿರುಗಾಡಿದೆ. ಈಗ ದಾಊದನು ಮನೆ ಕಟ್ಟಿಸುವನಾದರೆ, ಅದರಲ್ಲಿ ವಿಶ್ರಾಂತಿ ಪಡೆದೇನು!", ಎಂದು ಹಂಬಲಿಸುತ್ತಾನೆ.

ಕ್ರೈಸ್ತರಿಗೆ ಇಂತಹ ಈಶ್ವರನನ್ನೂ ಮತ್ತು ಇಂತಹ ಪುಸ್ತಕವನ್ನೂ ಅಂಗೀಕರಿಸಲು ಲಜ್ಜೆ ಏಕೆ ಉಂಟಾಗುತ್ತಿಲ್ಲ?

ಆದರೆ, ಮಾಡುವರಾದರೂ ಏನನ್ನು? ಬಡಪಾಯಿಗಳು ಸಿಲುಕಿಕೊಂಡೇ ಬಿಟ್ಟರು! ಈಗ, ಹೊರಬರಲು ಬಹಳ ಪುರುಷಾರ್ಥ ಮಾಡುವುದು ಉಚಿತವಾಗಿದೆ! [58]

## ರಾಜರುಗಳ [ದ್ವಿತೀಯ] ಪುಸ್ತಕ

## (ಪರಮೇಶ್ವರನ ಮನೆ ಮತ್ತು ಜೆರೂಸಲೇಮಿನ ನಾಶ)

[59] ಮತ್ತು 'ಬಾಬುಲ'[1]ದ ರಾಜನಾದ 'ನಬೂಖುದ್‌ನಜರ'[2]ನ ರಾಜ್ಯದಲ್ಲಿ ಹತ್ತೊಂಬತ್ತನೆಯ ವರ್ಷದ, ಐದನೆಯ ತಿಂಗಳ, ಆರನೆಯ ದಿನಾಂಕದಂದು, ಬಾಬುಲದ ರಾಜನ ಒಬ್ಬ ಸೇವಕನೂ, ಸ್ವಸೈನ್ಯದ ಪ್ರಧಾನಾಧ್ಯಕ್ಷನೂ ಆದ 'ನಬೂಸರ್ ಅದ್ದಾನ'[3]ನು 'ಜೆರೂಸಲೇಮ್'[4]ಗೆ ಬಂದನು.

ಮತ್ತು ಅವನು ಪರಮೇಶ್ವರನ ದೇವಾಲಯುವನ್ನೂ ಮತ್ತು ರಾಜನ ಅರಮನೆಯನ್ನೂ ಮತ್ತು ಜೆರೂಸಲೇಮಿನ ಎಲ್ಲ ಮನೆಗಳನ್ನೂ ಮತ್ತು ಪ್ರತಿಯೊಂದು ದೊಡ್ಡ ಮನೆಯನ್ನೂ ಸುಟ್ಟು ಹಾಕಿದನು.

ಮತ್ತು ಆ ಸ್ವಸೇನೆಯ ಅಧ್ಯಕ್ಷನೊಂದಿಗೆ ಇದ್ದ 'ಕಸದಿಯ'[5]ರ ಸಮಸ್ತ ಸೇನೆಯೂ ಜೆರೂಸಲೇಮಿನ ಗೋಡೆಗಳನ್ನು ನಾಲ್ಕು ಕಡೆಯಿಂದಲೂ ಕೆಡಹಿಬಿಟ್ಟಿತು.

[ಬೈಬಲ್. (ತೌ) ರಾಜ. ಪುಸ್ತಕ (2):— ಪರ್ವ. 25; ಆ. 8-10]

---

1. Babylon 2. Nabuchodonosor
3. Nabuzardan 4. Jerusalem 5. Chaldees

### (ತನ್ನ ಮನೆಯನ್ನೇ ರಕ್ಷಿಸಲಸಮರ್ಥನಾದ ಈಶ್ವರನೆಂತಹವನು ?)

ಸಮೀಕ್ಷಕ :—ಮಾಡಲ್ಪಡುವುದಾದರೂ ಏನು ? ಕ್ರೈಸ್ತರ ಈಶ್ವರನೇನೋ ದಾಊದ ಮೊದಲಾದವರಿಂದ ಮನೆ ಕಟ್ಟಿಸಿಕೊಂಡಿದ್ದನು. ಅದರಲ್ಲಿ ವಿಶ್ರಾಂತಿ ಪಡೆದುಕೊಳ್ಳುತ್ತಾ ಇದ್ದನೇನೋ ? ಆದರೆ, ನಬೂಸರ್‌ಅದ್ದಾನನು ಈಶ್ವರನ ಮನೆಯನ್ನು ಧ್ವಂಸ-ಪ್ರಧ್ವಂಸ ಮಾಡಿಬಿಟ್ಟನು. ಮತ್ತು ಈಶ್ವರನು ಅಥವಾ ಅವನ ದೂತರ ಸೈನ್ಯವು ಏನನ್ನು ಮಾಡಲೂ ಶಕ್ತವಾಗಲಿಲ್ಲ!

ಮೊದಲೇನೋ ಇವರ ಈಶ್ವರನು ದೊಡ್ಡ ಯುದ್ಧಗಳನ್ನು ಮಾಡುತ್ತಿದ್ದನು. ಮತ್ತು ಜಯಶಾಲಿಯೂ ಆಗುತ್ತಿದ್ದನು. ಆದರೆ, ಈಗ **ತನ್ನ ಮನೆಯನ್ನು ಸುಡಿಸಿಕೊಂಡು–ಮುರಿಸಿಕೊಂಡು ಕುಳಿತನು !** ಸುಮ್ಮನೆ ಮೌನತಾಳಿ, ಅದೇಕೆ ಕುಳಿತುಕೊಂಡಿದ್ದನೋ ತಿಳಿಯದು. ಮತ್ತು ಅವನ ದೂತರು ಎಲ್ಲಿ ಓಡಿಹೋದರೋ, ಅದೂ ಕೂಡ ಗೊತ್ತಿಲ್ಲ! ಇಂತಹ ಸಮಯದಲ್ಲಿ ಯಾವನೂ ಕೆಲಸಕ್ಕೆ ಬಾರಲಿಲ್ಲ. ಮತ್ತು **ಈಶ್ವರನ ಪರಾಕ್ರಮವೂ ಎಲ್ಲಿ ಹಾರಿಹೋಯಿತೋ, ತಿಳಿಯದು!** ಈ ಮಾತು ಸತ್ಯವಾಗಿರುವುದಾದರೆ. ಯಾವ ಯಾವ ವಿಜಯದ ಮಾತುಗಳನ್ನು ಮೊದಲು ಬರೆದರೋ, ಅವೆಲ್ಲವೂ ಈಗ ವ್ಯರ್ಥವಾಗಿ ಹೋದುವು!

ಇಜಿಪ್ತದೇಶದ ಹುಡುಗರು–ಹುಡುಗಿಯರನ್ನು ಸಾಯಿಸುವುದರಲ್ಲಿ ಮಾತ್ರ ಶೂರ-ವೀರನಾಗಿದ್ದನೋ ? ಈಗ ಶೂರ–ವೀರರ ಮುಂದೆ ಮಾತನಾಡದೇ ಕುಳಿತನು!

**ಕ್ರೈಸ್ತರ ಈಶ್ವರನು ಈ ರೀತಿ ತನಗೆ ನಿಂದೆಯನ್ನೂ, ಅವಮರ್ಯಾದೆಯನ್ನೂ ಮಾಡಿಸಿಕೊಂಡನು! ಈ ಪುಸ್ತಕದಲ್ಲಿ ಇದೇ ರೀತಿ ಸಾವಿರಾರು ನಿಷ್ಪ್ರಯೋಜಕವಾದ ಕತೆಗಳು ತುಂಬಿವೆ.** [59]

## ಜಬೂರನ ದ್ವಿತೀಯ ಭಾಗ
## ಕಾಲ ವೃತ್ತಾಂತದ ಪ್ರಥಮ ಪುಸ್ತಕ[1]

### (ಮಾರಿಯನ್ನು ಕಳುಹಿಸಿ 70 ಸಾವಿರ ಜನರನ್ನು ಕೊಲ್ಲುವುದು)

**[60]** ಹೀಗೆ ನನ್ನ ಈಶ್ವರನಾದ ಪರಮೇಶ್ವರನು 'ಇಸ್ರಾಯೇಲ್'ನ ಮೇಲೆ ಮಾರಿಯನ್ನು ಕಳುಹಿಸಿದನು. ಮತ್ತು ಇಸ್ರಾಯೇಲರೊಳಗಿನಿಂದ **70,000** ಪುರುಷರು ಬಿದ್ದು ಹೋದರು.

[ಬೈಬಲ್. (ತೌ) ಜಬೂರ –2, ಕಾಲ (1):– ಪರ್ವ. 21; ಆ. 14]

1. The First Book of Paralipomenon.

## (ತನ್ನ ಭಕ್ತರನ್ನೇ ಕೊಲ್ಲುವುದು ಈಶ್ವರನ ಕೆಲಸವಲ್ಲ)

ಸಮೀಕ್ಷಕ:—ಈಗ ನೋಡಿರಿ. ಇಸ್ರಾಯೇಲನ ಕ್ರೈಸ್ತರ ಈಶ್ವರನ ಲೀಲೆಯನ್ನು! ಯಾವ ಇಸ್ರಾಯೇಲ ಕುಲಕ್ಕೆ ಬಹಳ ವರಗಳನ್ನು ಕೊಟ್ಟಿದ್ದನೋ, ಮತ್ತು ಹಗಲಿರುಳೂ ಯಾರ ಪಾಲನೆಯಲ್ಲಿ ಅಡ್ಡಾಡುತ್ತಿದ್ದನೋ, ಈಗ, ಅವರ ಮೇಲೆಯೇ ಕ್ರುದ್ಧನಾಗಿ, ಮಾರಿಯನ್ನು ಕಳುಹಿಸಿ, 70,000 ಜನರನ್ನು ಸಾಯಿಸಿಬಿಟ್ಟನು! ಯಾವನೋ ಕವಿಯು ಬರೆದಿರುವ ಈ ಕೆಳಗಿನ ಮಾತು ಸತ್ಯವಾಗಿದೆ.—

**ಕ್ಷಣೇ ರುಷ್ಟಃ ಕ್ಷಣೇ ತುಷ್ಟೋ ರುಷ್ಟಸ್ತುಷ್ಟಃ ಕ್ಷಣೇ ಕ್ಷಣೇ ।**
**ಅವ್ಯವಸ್ಥಿತಚಿತ್ತಸ್ಯ ಪ್ರಸಾದೋಽಪಿ ಭಯಂಕರಃ ॥***

ಯಾವನು ಕ್ಷಣದಲ್ಲಿ ಕ್ರುದ್ಧನೂ, ಕ್ಷಣದಲ್ಲಿ ಪ್ರಸನ್ನನೂ ಆಗುತ್ತಾನೋ, ಎಂದರೆ ಕ್ಷಣ-ಕ್ಷಣದಲ್ಲಿ ಪ್ರಸನ್ನನೂ-ಅಪ್ರಸನ್ನನೂ ಆಗುತ್ತಾನೋ, ಅವನ ಪ್ರಸನ್ನತೆಯೂ ಕೂಡ ಭಯದಾಯಕವಾಗಿರುತ್ತದೆ!

ಅಂತಹುದೇ ಲೀಲೆ ಕ್ರೈಸ್ತರ ಈಶ್ವರನದಾಗಿದೆ ! [60]

## ಅಯ್ಯೂಬನ ಪುಸ್ತಕ[1]

## (ಅಯ್ಯೂಬನ ಪ್ರಾಣ ಭಿಕ್ಷೆ, ಶೈತಾನನೊಡನೆ)

**[61] ಮತ್ತು ಒಂದು ದಿನ ಹೇಗೆ ನಡೆಯಿತೆಂದರೆ :—**

**ಪರಮೇಶ್ವರನ ಮುಂದೆ ಈಶ್ವರನ ಮಕ್ಕಳು ಬಂದು ನಿಂತರು. ಮತ್ತು ಶೈತಾನನೂ ಕೂಡ, ಅವರ ನಡುವೆ ಪರಮೇಶ್ವರನ ಮುಂದೆ ಬಂದು ನಿಂತನು.**

**ಮತ್ತು ಪರಮೇಶ್ವರನು ಶೈತಾನನನ್ನು—"ನೀನು ಎಲ್ಲಿಂದ ಬರುತ್ತಿದ್ದೀಯೆ?", ಎಂದು ಕೇಳಿದನು.**

**ಆಗ ಶೈತಾನನು ಉತ್ತರವಿತ್ತು, ಪರಮೇಶ್ವರನಿಗೆ—"ಪೃಥಿವಿಯ ಮೇಲೆ ತಿರುಗಾಡುತ್ತಾ, ಮತ್ತು ಅತ್ತಣಿಂದ ಇತ್ತಣಿಂದ ಸುತ್ತಾಡುತ್ತಾ ಹೊರಟು ಬರುತ್ತಿದ್ದೇನೆ.", ಎಂದು ಹೇಳಿದನು.**

**ಆಗ ಪರಮೇಶ್ವರನು ಶೈತಾನನಿಗೆ —**

**"ನೀನು ನನ್ನ ದಾಸನಾದ ಅಯ್ಯೂಬನನ್ನು 'ಅವನಿಗೆ ಸಮಾನನಾದವನು ಪೃಥಿವಿಯಲ್ಲಿ ಯಾವನೂ ಇಲ್ಲ', ಎಂದು ಪರೀಕ್ಷಿಸಿದ್ದೀಯೇನು ? ಅವನು ಸಿದ್ಧನು**

---

*'ಸುಭಾಷಿತರತ್ನಭಾಂಡಾಗಾರಮ್', ಸಾಮಾನ್ಯ ನೀತಿ. ಶ್ಲೋಕ. 174
—ಯು.ಮೀ.

1. The Book of Job.

ಮತ್ತು ಚೊಕ್ಕ ಮನುಷ್ಯನು. ಈಶ್ವರನಿಗೆ ಅಂಜುತ್ತಾನೆ ಮತ್ತು ಪಾಪದಿಂದ ದೂರ ಇರುತ್ತಾನೆ. ಮತ್ತು ಈವರೆಗೆ ತನ್ನ ಪ್ರಾಮಾಣಿಕತ್ವವನ್ನು ಕಾಪಾಡಿಕೊಂಡಿದ್ದಾನೆ. ಮತ್ತು ನೀನು ನನ್ನನ್ನು ನಿಷ್ಕಾರಣವಾಗಿ ಅವನನ್ನು ನಾಶಪಡಿಸಲು ಉದ್ರೇಕಿಸುತ್ತಿದ್ದೀಯೆ.", ಎಂದು ಹೇಳಿದನು.

ಆಗ, ಶೈತಾನನು ಉತ್ತರವಿತ್ತು, ಪರಮೇಶ್ವರನಿಗೆ—"ಚರ್ಮಕ್ಕೆ ಚರ್ಮ! ಸರಿ! ಮನುಷ್ಯನದಾಗಿದ್ದರೆ, ಅದನ್ನು ತನ್ನ ಪ್ರಾಣಕ್ಕಾಗಿ ಕೊಡುವನು.

"ಆದರೆ, ಈಗ ನಿನ್ನ ಕೈಯನ್ನು ನೀಡು. ಮತ್ತು ಅವನ ಮೂಳೆ-ಮಾಂಸಗಳನ್ನು ಸ್ಪರ್ಶಿಸು. ಆಗ ಅವನು ನಿಸ್ಸಂದೇಹವಾಗಿ ನಿನ್ನನ್ನು ನಿನ್ನ ಮುಂದೆಯೇ ತ್ಯಜಿಸುವನು.", ಎಂದು ಹೇಳಿದನು.

ಆಗ ಪರಮೇಶ್ವರನು ಶೈತಾನನಿಗೆ—

"ನೋಡು! ಅವನು ನಿನ್ನ ಕೈಯಲ್ಲಿದ್ದಾನೆ. ಕೇವಲ ಅವನ ಪ್ರಾಣವನ್ನು ರಕ್ಷಿಸು.", ಎಂದನು.

ಆಗ ಶೈತಾನನು ಪರಮೇಶ್ವರನ ಮುಂದಿನಿಂದ ಹೊರಟು ಹೋದನು. ಮತ್ತು ಅಯ್ಯೂಬನನ್ನು, ತಲೆಯಿಂದ ಕಾಲಿನ ತಳದವರೆಗೆ ಕೆಟ್ಟ ಕುರುಗಳನ್ನುಂಟುಮಾಡಿ ಸಾಯಿಸಿದನು.

[**ಬೈಬಲ್** (ತೌ). ಅಯ್ಯೂಬ :- ಪರ್ವ. 2; ಆ. 1-7]

## (ಶೈತಾನನಿಂದ ಭಕ್ತರನ್ನು ರಕ್ಷಿಸಲಾರದವನೆಂತಹ ಈಶ್ವರನು?)

**ಸಮೀಕ್ಷಕ:**—ಈಗ ನೋಡಿರಿ, ಕ್ರೈಸ್ತರ ಈಶ್ವರನ ಸಾಮರ್ಥ್ಯವನ್ನು! ಶೈತಾನನು ಅವನ ಮುಂದೆ ಅವನ ಭಕ್ತರಿಗೆ ದುಃಖವನ್ನುಂಟುಮಾಡುತ್ತಾನೆ. ಶೈತಾನನಿಗೆ ಶಿಕ್ಷೆಯನ್ನೂ ಕೊಡುವುದಿಲ್ಲ! ತನ್ನ ಭಕ್ತರನ್ನು ರಕ್ಷಿಸಲೂ ಶಕ್ತನಾಗಿಲ್ಲ! ಮತ್ತು ದೂತರಲ್ಲಿಯೂ ಕೂಡ, ಯಾವನೂ ಅವನನ್ನು ಎದುರಿಸಲಾರನು! ಒಬ್ಬ ಶೈತಾನ ಎಲ್ಲರನ್ನೂ ಭಯಭೀತರನ್ನಾಗಿ ಮಾಡಿಟ್ಟಿದ್ದಾನೆ!

ಮತ್ತು ಕ್ರೈಸ್ತರ ಈಶ್ವರನೂ ಕೂಡ, ಸರ್ವಜ್ಞನಾಗಿಲ್ಲ. ಮತ್ತು ಸರ್ವಜ್ಞನಾಗಿದ್ದಿದ್ದರೆ, ಅಯ್ಯೂಬನ ಪರೀಕ್ಷೆಯನ್ನು ಶೈತಾನನಿಂದ ಏಕೆ ಮಾಡಿಸುತ್ತಿದ್ದನು? [61]

## ಉಪದೇಶದ ಪುಸ್ತಕ

## (ಬುದ್ಧಿವೃದ್ಧಿಯಿಂದ ಶೋಕವೃದ್ಧಿ)

[62] ಅಹುದು! ನನ್ನ ಅಂತಃಕರಣವು ಬುದ್ಧಿ ಮತ್ತು ಜ್ಞಾನವನ್ನು ಚೆನ್ನಾಗಿ ತಿಳಿದುಕೊಂಡಿದೆ.

ಮತ್ತು ನಾನು ಬುದ್ಧಿ ಮತ್ತು ಉನ್ಮಾದ, ಮತ್ತು ಮೂಢತನವನ್ನು ತಿಳಿಯಲು ಮನಸ್ಸನ್ನು ನಿಯೋಜಿಸಿದ್ದೇನೆ. ನಾನು—'ಇದೂ ಕೂಡ ಮನಸ್ಸಿನ ಜಂಜಾಟ'. ಎಂಬುದನ್ನು ಅರಿತುಕೊಂಡೆನು.

ಏಕೆಂದರೆ, ಅಧಿಕಬುದ್ಧಿಯಲ್ಲಿ ಮಹಾ ದುಃಖವಿದೆ. ಮತ್ತು ಯಾವನು ಜ್ಞಾನದಲ್ಲಿ ವೃದ್ಧಿ ಹೊಂದುತ್ತಾನೋ, ಅವನು ದುಃಖದಲ್ಲಿಯೂ ವೃದ್ಧಿ ಹೊಂದುತ್ತಾನೆ.

[ಬೈಬಲ್ (ತೌ). ಉಪದೇಶ :-ಪರ್ವ. 1; ಆ. 16-18]

## (ಬುದ್ಧಿವೃದ್ಧಿಯಿಂದ ಶೋಕವೃದ್ಧಿ, ಎಂದು ತಿಳಿಯುವುದು ಮೂರ್ಖತನ)

**ಸಮೀಕ್ಷಕ:**—ಈಗ ನೋಡಿರಿ ! ಬುದ್ಧಿ ಮತ್ತು ಜ್ಞಾನ ಪರ್ಯಾಯವಾಚಕಗಳಾಗಿವೆ. ಅವನ್ನು ಎರಡೆಂದು ತಿಳಿದಿದ್ದಾರೆ! ಮತ್ತು ಬುದ್ಧಿವೃದ್ಧಿಯಲ್ಲಿ ಶೋಕ, ಹಾಗೂ ದುಃಖವಿದೆ, ಎಂದು ಬರೆಯುವುದು, ಅವಿದ್ವಾಂಸರ ಹೊರತು ಬೇರೆ ಯಾವನಿಗೆ ಶಕ್ಯ ? ಇಂತಹ ಲೇಖನವನ್ನು ಬೇರೆ ಯಾವನು ರಚಿಸಬಲ್ಲನು ?

ಆದುದರಿಂದ, ಈ ಬೈಬಲ್ ಈಶ್ವರನು ರಚಿಸಿದನು, ಎನ್ನುವುದೇನು ? ಯಾವನಾದರೂ ವಿದ್ವಾಂಸನು ರಚಿಸಿದುದೂ ಕೂಡ, ಅಲ್ಲ ! [62]

ಹೀಗೆ, ಸ್ವಲ್ಪ ತೌರೇತ್*-ಜಬೂರ್‌ಗಳ ಬಗೆಗೆ ಬರೆದಿದ್ದೇವೆ. ಇದರಿಂದ ಮುಂದಕ್ಕೆ. ಮ್ಯಾಥ್ಯೂ ರಚಿತವೇ ಮೊದಲಾದ ಇಂಜೀಲ್†ನ ವಿಷಯದಲ್ಲಿ ಬರೆಯಲ್ಪಡುತ್ತದೆ. ಅವನ್ನು ಕ್ರೈಸ್ತರು ಬಹಳ ಪ್ರಮಾಣಭೂತವೆಂದು ಅಂಗೀಕರಿಸುತ್ತಾರೆ. ಯಾವುದರ ಹೆಸರನ್ನು "ಇಂಜೀಲ್", ಎಂದಿಟ್ಟಿದ್ದಾರೋ ಅದು ಹೇಗಿದೆ, ಎಂದು ಅದರ ಪರೀಕ್ಷೆಯನ್ನು ಸ್ವಲ್ಪ ಬರೆಯುತ್ತೇವೆ.

## ಮ್ಯಾಥ್ಯೂ[1] ರಚಿತ ಇಂಜೀಲ್

## (ಕುಮಾರಿ ಮೇರಿಯಲ್ಲಿ ಏಸುಕ್ರಿಸ್ತನ ಜನನ)

[63] 'ಏಸುಕ್ರಿಸ್ತ'[2]ನ ಜನ್ಮ ಹೀಗೆ ಆಯಿತು—

ಅವನ ತಾಯಿ 'ಮೇರಿ'[3]ಯು ನಿಶ್ಚಿತಾರ್ಥ 'ಜೋಸೆಫ್'[4]ನೊಂದಿಗೆ ಆಗಿದ್ದಿತು, ಆದರೆ. ಅವರು ಒಂದುಗೂಡುವ ಮುನ್ನವೇ ಪವಿತ್ರಾತ್ಮನಿಂದ ಅವಳು ಗರ್ಭವತಿಯಾಗಿ ಕಂಡುಬಂದಳು.

---

*'ತೌರೇತ್', ಎಂದರೆ, ಬೈಬಲಿನ 'ಹಳೆಯ ನಿಯಮ' (Old Testament). ಇದರ ಸಂಬಂಧ ಯಹೂದ್ಯರೊಂದಿಗಿದೆ.

†'ಇಂಜೀಲ', ಎಂದರೆ, ಬೈಬಲಿನ 'ಹೊಸ ನಿಯಮ' (New Testament). ಯಹೂದ್ಯರು 'ಹೊಸ ನಿಯಮ'ವನ್ನು ಒಪ್ಪುವುದಿಲ್ಲ. ಕ್ರೈಸ್ತರು ಎರಡನ್ನೂ ಒಪ್ಪುತ್ತಾರೆ.—ಸಂ.

1. Mathew 2. Jesus Christ 3. Mary 4. Joseph

ನೋಡಿರಿ, ಪರಮೇಶ್ವರನ ದೂತನೊಬ್ಬನು ಸ್ವಪ್ನದಲ್ಲವನಿಗೆ ದರ್ಶನವಿತ್ತು—

"ಓ ದಾಊದನ ಸಂತತಿಯಾದ ಜೋಸೆಫನೇ ! ನೀನು ನಿನ್ನ ಹೆಂಡತಿಯಾದ ಮೇರಿಯನ್ನು ಇಲ್ಲಿಗೆ ಕರೆತರಲು ಹೆದರಬೇಡ. ಏಕೆಂದರೆ, ಅವಳಲ್ಲಿ ಯಾವ ಗರ್ಭ ನಿಂತಿದೆಯೋ, ಅದು ಪವಿತ್ರಾತ್ಮನಿಂದ ಆಗಿದೆ"*, ಎಂದು ಹೇಳಿದನು.

[ಬೈಬಲ್ (ಇಂ). ಮತ್ತಾಯ :- ಪರ್ವ. 1; ಆ. 18, 20]

## (ಕುಮಾರಿ†ಯಿಂದ ಪುತ್ರೋತ್ಪತ್ತಿ ಸೃಷ್ಟಿವಿರುದ್ಧ)

**ಸಮೀಕ್ಷಕ:**—ಯಾವುವು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಗೆ ಮತ್ತು ಸೃಷ್ಟಿ ಕ್ರಮಕ್ಕೆ ವಿರುದ್ಧವಾಗಿವೆಯೋ, ಅಂತಹ ಈ ಮಾತುಗಳನ್ನು ಯಾವ ವಿದ್ವಾಂಸನೂ ಅಂಗೀಕರಿಸಲಾರನು. ಈ ಮಾತುಗಳನ್ನು ಅಂಗೀಕರಿಸುವುದು ಮೂರ್ಖ ಮಾನವ ರಾದ ಕಾಡಾಡಿಗಳ ಕೆಲಸ! ಸಭ್ಯ ವಿದ್ವಾಂಸರದಲ್ಲ!

ಭಲೇ ! ಪರಮೇಶ್ವರನ ನಿಯಮವಾವುದಿದೆಯೋ, ಅದನ್ನು ಯಾವನಾದರೂ ಮುರಿಯಬಲ್ಲನೇನು? ಪರಮೇಶ್ವರನೂ ಕೂಡ, ನಿಯಮವನ್ನು ತಲೆಕೆಳಗುಮಾಡುವ ನಾದರೆ, ಅವನ ಆಜ್ಞೆಯನ್ನು ಯಾವನೂ ಅಂಗೀಕರಿಸನು.

ಅಲ್ಲದೇ ಅವನು ಸರ್ವಜ್ಞನು ಮತ್ತು ನಿರ್ಭ್ರಮನು ಕೂಡ ಆಗಿದ್ದಾನೆ.

ಹೀಗೆ ಒಪ್ಪುವುದಾದರೆ, ಯಾವ ಯಾವ ಕುಮಾರಿಯು ಗರ್ಭ ನಿಲ್ಲುವುದೋ, ಆಗ ಎಲ್ಲರೂ ಕೂಡ—'ಇವಳಲ್ಲಿ ಗರ್ಭ ನಿಂತುದು ಈಶ್ವರನ ಕಡೆಯಿಂದ.', ಎಂದು ಹೇಳಬಹುದು!

---

*ಪಾಶ್ಚಿಮಾತ್ಯರಲ್ಲಿ, ವಿಶೇಷವಾಗಿ ಅಮೇರಿಕಾದಲ್ಲಿ, ಅವಿವಾಹಿತ ಸ್ತ್ರೀಯರ ಗರ್ಭಧಾರಣೆಯ ಆಧಿಕ್ಯಕ್ಕೆ ಇದೂ ಒಂದು ಕಾರಣ. ಅಂತೆಯೇ, ಗರ್ಭಸ್ರಾವ ಮಾಡಿಸಿಕೊಳ್ಳುವ ಕುಮಾರೀ ಹೆಂಗಳೆಯರ ಆಧಿಕ್ಯತೆ ಅಲ್ಲಿ ಪ್ರಬಲ.

ಇಂಗ್ಲೆಂಡಿನ ಬಾಲ-ಬಾಲಿಕಾ ಅನಾಥಾಲಯದ ವ್ಯವಸ್ಥಾಪಕನೊಬ್ಬನು ಭಾರತೀಯ ಅನಾಥಾಲಯಗಳ ನಿರೀಕ್ಷಣೆ ಮಾಡುತ್ತಾ—'ನಮ್ಮ ದೇಶದಲ್ಲಿ ಅನಾಥಾಲಯಗಳು ಬಹಳ ಉತ್ತಮ ಸ್ಥಿತಿಯಲ್ಲಿವೆ. ಅವುಗಳ ಸಂಖ್ಯೆಯೂ ಹೆಚ್ಚಾಗಿವೆ. ನಿಮ್ಮ ಭಾರತದಲ್ಲಿ ಹಾಗಿಲ್ಲ', ಎಂದು ಆಕ್ಷೇಪಿಸಿದನು.

ಭಾರತೀಯ ಅನಾಥಾಲಯದ ವ್ಯವಸ್ಥಾಪಕನು ತನ್ನ ಸರಳವಾದ ಬುದ್ಧಿಯಿಂದ—'ನಮ್ಮ ದೇಶದಲ್ಲಿ ತಂದೆಯ ಹೆಸರನ್ನರಿಯದ ಹಸುಳೆಗಳು ಹುಟ್ಟುವುದೇ ಕಡಿಮೆ. ಹಾಗೆ ಹಲವು ಹುಟ್ಟಿ ದರೂ ಕೂಡ, ಅವುಗಳನ್ನು ಕೂಡಲೇ ನಮ್ಮ ಜನರು ಸಾಯಿಸಿಬಿಡುತ್ತಾರೆ', ಎಂದು ಆಕ್ಷೇಪಣೆಗೆ ಉತ್ತರ ಕೊಟ್ಟನು.—ಸಂ.

†'ಕುಮಾರಿ', ಎಂದರೆ ಇಲ್ಲಿ ರಜೋಧರ್ಮ ಆರಂಭವಾಗದವಳು, ಎಂದರ್ಥ. ಅವಿವಾಹಿತಳು, ಎಂಬ ರೂಢಿಯಲ್ಲಿರುವ ಅರ್ಥವಲ್ಲ.—ಸಂ.

ಮತ್ತು ಸುಳ್ಳು ಸುಳ್ಳಾಗಿಯೇ—“ಪರಮೇಶ್ವರನ ದೂತನು ನನಗೆ ಸ್ವಪ್ನದಲ್ಲಿ ‘ಈ ಗರ್ಭ ಪರಮಾತ್ಮನ ಕಡೆಯಿಂದ ಆಗಿದೆ’, ಎಂದು ಹೇಳಬಹುದು.

ಈ ಅಸಂಭವವಾದ ಪ್ರಪಂಚವನ್ನು ರಚಿಸಿರುವ ಹಾಗೆಯೇ, ಸೂರ್ಯನಿಂದ ಕುಂತೀ ಗರ್ಭವತಿಯಾಗುವ ಅಸಂಭವವಾದ ಮಾತನ್ನು ಪುರಾಣಗಳಲ್ಲಿ ಬರೆದಿದ್ದಾರೆ. ಇಂತಿಂತಹ ಮಾತುಗಳನ್ನು **‘ಕಣ್ಣಿದ್ದೂ ನೋಡಲಾರದ, ದುಡ್ಡಿನ ದೊಡ್ಡಪ್ಪಂದಿರು’** ಒಪ್ಪಿಕೊಂಡು ಭ್ರಮಜಾಲದಲ್ಲಿ ಬೀಳುತ್ತಾರೆ!

ಘಟನೆ ಹೇಗೆ ನಡೆದಿರಬಹುದೆಂದರೆ—

**ಯಾವನೋ ಪುರುಷನೊಂದಿಗೆ ಸಮಾಗಮವಾದುದರಿಂದ ಮೇರಿಯು ಗರ್ಭವತಿಯಾಗಿರಬಹುದು. ಅವಳು ಅಥವಾ ಬೇರೆ ಯಾವನಾದರೊಬ್ಬನು—“ಇವಳಲ್ಲಿ ಗರ್ಭ ಈಶ್ವರನ ಕಡೆಯಿಂದ ಆಗಿದೆ.”,** ಎಂದು ಅಸಂಭವವಾದ ಸುದ್ದಿಯನ್ನು ಹಾರಿಸಿಬಿಟ್ಟಿರಬಹುದು! [63]

## (ಏಸುವಿನ ಪರೀಕ್ಷೆ)

**[64] ಆಗ ಆತ್ಮನು ಏಸುವನ್ನು, ಶೈತಾನನಿಂದ ಅವನ ಪರೀಕ್ಷೆ ಮಾಡಿಸುವುದಕ್ಕೋಸ್ಕರ ಕಾಡಿಗೆ ಕರೆದೊಯ್ದನು.**

**ಅವನು ನಲವತ್ತು ಹಗಲು ಮತ್ತು ನಲವತ್ತು ರಾತ್ರಿ ಉಪವಾಸ ಮಾಡಿ, ಆಮೇಲೆ ಹಸಿದನು.**

**ಆಗ ಪರೀಕ್ಷಕನು—**

**“ನೀನು ಈಶ್ವರನ ಪುತ್ರನಾಗಿದ್ದರೆ, ‘ಕಲ್ಲುಗಳು ರೊಟ್ಟಿಗಳಾಗಿ ಹೋಗಲಿ!’, ಎಂದು ಹೇಳಿಬಿಡು.”, ಎಂದು ಹೇಳಿದನು.**

**[ಬೈಬಲ್ (ಇಂ). ಮ್ಯಾಥ್ಯೂ:- ಪರ್ವ. 4; ಆ. 1-3]**

## (ಈಶ್ವರನು ಏಸುವಿನ ಪರೀಕ್ಷೆಯನ್ನು ಶೈತಾನನಿಂದ ಏಕೆ ಮಾಡಿಸಿದ?)

**ಸಮೀಕ್ಷಕ:—** ಕ್ರೈಸ್ತರ ಈಶ್ವರನು ಸರ್ವಜ್ಞನಲ್ಲವೆಂದು ಇದರಿಂದ ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಏಕೆಂದರೆ, ಸರ್ವಜ್ಞನಾಗಿದ್ದಿದ್ದರೆ, ಅವನ ಪರೀಕ್ಷೆಯನ್ನು ಶೈತಾನನಿಂದ ಏಕೆ ಮಾಡಿಸುತ್ತಿದ್ದನು ? ಸ್ವತಃ ತಿಳಿದುಕೊಂಡುಬಿಡುತ್ತಿದ್ದನು !

ಅಲ್ಲಾ ! ಯಾವನಾದರೂ ಕ್ರೈಸ್ತನನ್ನು ಈ ಕಾಲದಲ್ಲಿ ನಲವತ್ತು ರಾತ್ರಿ-ನಲವತ್ತು ಹಗಲು ಉಪವಾಸವಿಟ್ಟರೆ, ಅವನು ಎಂದಿಗಾದರೂ ಉಳಿಯಬಲ್ಲನೇ ?

ಮತ್ತು ಇದರಿಂದ, ‘ಅವನು ಈಶ್ವರನ ಮಗನೂ ಅಲ್ಲ; ಮತ್ತು ಅವನಲ್ಲಿ ಯಾವ ಚಮತ್ಕಾರವೂ, ಎಂದರೆ ಸಿದ್ಧಿಯೂ ಇರಲಿಲ್ಲ’, ಎಂದು ಸಿದ್ಧವಾಯಿತು.

ಹಾಗಲ್ಲದಿದ್ದರೆ, ಶೈತಾನನ ಸಮ್ಮುಖದಲ್ಲಿ ಕಲ್ಲುಗಳನ್ನು ರೊಟ್ಟಿಗಳನ್ನಾಗಿ ಏಕೆ ಮಾರ್ಪಡಿಸದೇ ಇದ್ದನು? ಮತ್ತು ತಾನೇಕೆ ಹಸಿದಿರುತ್ತಿದ್ದನು?

ಮತ್ತು ಸಿದ್ಧಾಂತವೇನೆಂದರೆ—**ಪರಮೇಶ್ವರನು ಯಾವ ಕಲ್ಲುಗಳನ್ನು ಸೃಜಿಸಿದ್ದಾನೋ, ಅವುಗಳನ್ನು ಯಾವನೂ ರೊಟ್ಟಿಗಳನ್ನಾಗಿ ಮಾಡಲಾರನು!**

**ಮತ್ತು ಈಶ್ವರನೂ ಕೂಡ, ಪೂರ್ವಕೃತ ನಿಯಮವನ್ನು ತಲೆಕೆಳಗಾಗಿ ಮಾಡಲಾರನು. ಏಕೆಂದರೆ, ಅವನು ಸರ್ವಜ್ಞನು; ಮತ್ತು ಅವನ ಕೆಲಸಗಳೆಲ್ಲವೂ ಲೋಪದೋಷಗಳಿಲ್ಲದವಾಗಿವೆ!** [64]

### (ಬೆಸ್ತರನ್ನು ಮಾನವರ ಬಲೆಗಾರರನ್ನಾಗಿ ಮಾಡುವುದು)

**[65] ಅವನು ಅವರಿಗೆ—"ನನ್ನ ಹಿಂದೆ ಬನ್ನಿರಿ. ನಾನು ನಿಮ್ಮನ್ನು ಮಾನವರ ಬೆಸ್ತರನ್ನಾಗಿ ಮಾಡುತ್ತೇನೆ.", ಎಂದು ಹೇಳಿದನು.**
**ಅವರು ತತ್‍ಕ್ಷಣ ಬಲೆಗಳನ್ನು ಬಿಟ್ಟು, ಅವನ ಹಿಂದೆ ನಡೆದರು.**

**[ಬೈಬಲ್ (ಇಂ). ಮ್ಯಾಥ್ಯೂ:–ಪರ್ವ. 4; ಆ. 19–20]**

### (ಕ್ರೈಸ್ತರು ಬಡವರನ್ನು ತಮ್ಮ ಬಲೆಗೆ ಹಾಕಿಕೊಳ್ಳುತ್ತಾರೆ)

**ಸಮೀಕ್ಷಕ:**—ಇದರಿಂದ, ತೌರೇತಿನಲ್ಲಿ ದಶ ಆಜ್ಞೆಗಳ* ಪ್ರಸಂಗದಲ್ಲಿ, ಎಂದರೆ—

**'ಮಕ್ಕಳು ತಮ್ಮ ಆಯುಸ್ಸು ವರ್ಧಿಸುವ ಸಲುವಾಗಿ ಮಾತಾಪಿತೃಗಳ ಸೇವೆಯನ್ನೂ ಮತ್ತು ಸಮ್ಮಾನವನ್ನೂ ಮಾಡಬೇಕು'.**

ಎಂದು ಬರೆದಿರುವುದಕ್ಕೆ ವಿರುದ್ಧವಾಗಿ, ಏಸುವು ಅದೇ ಪಾಪವನ್ನು [ಮಾಡಿದನೆಂದು ಗೊತ್ತಾಗುತ್ತದೆ.] ಅವನು ತನ್ನ ತಾಯಿ–ತಂದೆಗಳಿಗೆ ಸೇವೆಯನ್ನು ತಾನೂ ಮಾಡಲಿಲ್ಲ, ಮತ್ತು ಅನ್ಯರನ್ನೂ ಮಾತಾಪಿತೃಗಳ ಸೇವೆಯಿಂದ ಬಿಡುಗಡೆ ಮಾಡಿದನು! ಇದೇ ಅಪರಾಧದಿಂದ ಅವನು ಚಿರಂಜೀವಿಯಾಗಲಿಲ್ಲ.

ಮತ್ತು ಏಸುವು ಜಾಲದಲ್ಲಿ ಮೀನುಗಳನ್ನು ಸಿಕ್ಕಿಸಿಕೊಳ್ಳುವಂತೆ ಮಾನವರನ್ನು ತನ್ನ ಮತದಲ್ಲಿ ಸಿಕ್ಕಿಸಿಕೊಂಡು, ತನ್ನ ಸ್ವಾರ್ಥವು ಸಿದ್ಧಿಸುವಂತೆ ಮಾನವರನ್ನು ಸಿಕ್ಕಿಸಿಕೊಳ್ಳುವುದಕ್ಕಾಗಿ ಒಂದು ಮತವನ್ನು ಪ್ರತಿಷ್ಠಾಪಿಸಿದ್ದಾನೆ; ಎಂಬುದೂ ಕೂಡ, ವಿದಿತವಾಯಿತು. ಏಸುವೇ ಹೀಗಿದ್ದನೆಂದಾಗ, ಆಧುನಿಕ ಪಾದರಿಗಳು ತಮ್ಮ ಬಲೆಯಲ್ಲಿ ಮಾನವರನ್ನು ಸಿಕ್ಕಿಸಿಕೊಂಡರೆ, ಆಶ್ಚರ್ಯವೇನು?

---

*Ten Commandments.—ಸಂ.

ಏಕೆಂದರೆ, ಹೇಗೆ ದೊಡ್ಡ ದೊಡ್ಡ, ಮತ್ತು ಬಹಳ ಮೀನುಗಳನ್ನು ಬಲೆಯಲ್ಲಿ ಸಿಕ್ಕಿಸಿಕೊಳ್ಳುವವನ ಪ್ರತಿಷ್ಠೆ ಮತ್ತು ಜೀವನ ನಿರ್ವಾಹ ಒಳಿತಾಗಿ ಆಗುತ್ತದೋ, ಹಾಗೆಯೇ ಯಾವನು ಬಹುಜನರನ್ನು ತನ್ನ ಮತದಲ್ಲಿ ಸಿಕ್ಕಿಸಿಕೊಳ್ಳುವನೋ, ಅವನಿಗೆ ಅಧಿಕ ಪ್ರತಿಷ್ಠೆ, ಹಾಗೂ ಜೀವನ–ನಿರ್ವಾಹಗಳು ಲಭಿಸುತ್ತವೆ!

**(ಆರ್ಯರು ಸರಳಮನುಷ್ಯರನ್ನು ಕ್ರೈಸ್ತರಾಗುವಿಕೆಯಿಂದ ಉಳಿಸಬೇಕು)**

ಇದೇ ಕಾರಣದಿಂದ, ಈ ಜನರು, ವೇದಗಳನ್ನು ಮತ್ತು ಶಾಸ್ತ್ರಗಳನ್ನು ಓದಿಲ್ಲದಂತಹ ಬಡಪಾಯಿಗಳಾದ ಮುಗ್ಧಜನರನ್ನು ತಮ್ಮ ಜಾಲಕ್ಕೆ ಸಿಕ್ಕಿಸಿಕೊಂಡು, ಅವರ ತಾಯಿ, ತಂದೆ, ಕುಟುಂಬ ಮೊದಲಾದವರಿಂದ ಬೇರ್ಪಡಿಸಿಬಿಡುತ್ತಾರೆ. ಆದುದರಿಂದ, ವಿದ್ವಾಂಸರಾದ ಆರ್ಯರೆಲ್ಲರೂ ಸ್ವತಃ ಇವರ ಜಾಲದಿಂದ ಉಳಿದು, ತಮ್ಮ ಬೇರೆಯ ಮುಗ್ಧಬಂಧುಗಳನ್ನೂ ರಕ್ಷಿಸುವುದರಲ್ಲಿ ತತ್ಪರರಾಗಿರಬೇಕಾದುದು ಉಚಿತವಾಗಿರುತ್ತದೆ! [65]

**(ಏಸುವು ಎಲ್ಲ ರೋಗಿಗಳನ್ನೂ ಗುಣಪಡಿಸುವುದು)**

[66] ಆಗ, ಏಸುವು ಸಮಗ್ರ 'ಗೆಲಿಲೀ'* ದೇಶದಲ್ಲಿ, ಅವರ ಸಭೆಗಳಲ್ಲಿ ಉಪದೇಶ ಮಾಡುತ್ತಾ, ಮತ್ತು ರಾಜ್ಯದ ಸುಸಮಾಚಾರದ ಪ್ರಚಾರ ಮಾಡುತ್ತಾ, ಮತ್ತು ಜನರಲ್ಲಿ ಪ್ರತಿಯೊಂದು ರೋಗವನ್ನೂ ಮತ್ತು ಪ್ರತಿಯೊಂದು ಮನೋವಿಕಾರವನ್ನೂ ವಾಸಿ ಮಾಡುತ್ತಾ, ಸಂಚರಿಸುತ್ತಾ ನಡೆದನು.

[ಜನರು] ನಾನಾಪ್ರಕಾರದ ರೋಗಗಳಿಂದಲೂ ಮತ್ತು ನೋವುಗಳಿಂದಲೂ ದುಃಖಿತರಾಗಿದ್ದ ಸಮಸ್ತ ಅಸ್ವಸ್ಥರನ್ನೂ, ಮತ್ತು ಪಾರ್ಶ್ವಘಾತಕ್ಕೆ ಸಿಲುಕಿದವರನ್ನೂ ಅವನ ಬಳಿಗೆ ಕರೆತಂದರು. ಮತ್ತು ಅವನು ಅವರನ್ನು ಗುಣಪಡಿಸಿದನು.

[ಬೈಬಲ್ (ಇಂ). ಮ್ಯಾಥ್ಯೂ:–ಪರ್ವ. 4; ಆ. 23–24]

**(ರೋಗಿಗಳನ್ನು ಗುಣಪಡಿಸುವ ಪ್ರಚಾರ ಪಾಖಂಡ)**

**ಸಮೀಕ್ಷಕ:**—ಈ ದಿನಗಳ ಪೋಪಲೀಲೆಯ ಆಡಂಬರಗಳೂ, ಮಂತ್ರ ಪುರಶ್ಚರಣ, ಆಶೀರ್ವಾದ, ತಾಬೀಜ† ಮತ್ತು ಭಸ್ಮದ ಚಟಿಕೆಗಳನ್ನು ಕೊಡುವುದರಿಂದ, ಭೂತಗಳನ್ನು ಹೊರದೂಡುವುದೂ, ರೋಗಗಳನ್ನು ವಾಸಿಮಾಡುವುದೂ ಸತ್ಯವಾಗಿದ್ದರೆ, ಈ ಇಂಜೀಲಿನ ಮಾತೂ ಕೂಡ, ಸತ್ಯವಾದೀತು! ಆದುದರಿಂದ, ಮುಗ್ಧಮಾನವರನ್ನು ಜಾಲಕ್ಕೆ ಸಿಕ್ಕಿಸಿಕೊಳ್ಳುವ ಸಲುವಾಗಿ ಈ ಮಾತುಗಳಿವೆ!

---

*Galilee.

†ಎಂದರೆ, ಕೊರಳಿಗೆ ಕಟ್ಟುವ 'ತಾಯತ'—ಸಂ.

ಕ್ರೈಸ್ತರು ಏಸುವಿನ ಮಾತನ್ನು ಅಂಗೀಕರಿಸುತ್ತಾರಾದರೆ, ಇಲ್ಲಿನ ದೇವೀ-ಉಪಾಸಕರ ಮಾತುಗಳನ್ನೇಕೆ ಅಂಗೀಕರಿಸುವುದಿಲ್ಲ ? ಏಕೆಂದರೆ, ಆ ಮಾತುಗಳು ಈ ಉಪಾಸಕರದ ಹಾಗೆಯೇ ಇವೆ! [66]

### (ಮನದಲ್ಲಿ ದೀನರಾಗಿರುವವರಿಗೇ ಸ್ವರ್ಗ!)

[67] ಯಾರು ಮನದಲ್ಲಿ 'ದೀನ'ರಾಗಿದ್ದಾರೋ, ಅವರು ಧನ್ಯರು! ಏಕೆಂದರೆ, ಸ್ವರ್ಗದ ರಾಜ್ಯ ಅವರದೇ ಆಗಿದೆ!

"ಏಕೆಂದರೆ, ಎಂದಿನವರೆಗೆ ಆಕಾಶ ಮತ್ತು ಪೃಥಿವೀ ಕದಲಿ ಹೋಗುವುದಿಲ್ಲವೋ, ಅಂದಿನವರೆಗೆ ವ್ಯವಸ್ಥೆಯಿಂದ ಒಂದೇ ಒಂದು ಗುಣಿಸು ಅಥವಾ ಒಂದು ಬಿಂದು ಪೂರ್ಣವಾಗದೇ ತಪ್ಪಿಹೋಗುವುದಿಲ್ಲ.". ಎಂದು ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ.

"ಆದುದರಿಂದ. [ಯಾವನಾದರೂ] ಈ ಅತಿ ಚಿಕ್ಕ ಆಜ್ಞೆಗಳಲ್ಲಿ ಒಂದನ್ನು ಭಂಗಿಸಿ, ಮತ್ತು ಅನ್ಯಜನರಿಗೂ ಹಾಗೆಯೇ ಕಲಿಸುವನೋ, ಅವನು ಸ್ವರ್ಗರಾಜ್ಯದಲ್ಲಿ ಎಲ್ಲರಿಗಿಂತಲೂ ಚಿಕ್ಕವನೆನಿಸುವನು."

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 5; ಆ. 3,18,19]

### (ದೀನರೆಲ್ಲ ಸ್ವರ್ಗಕ್ಕೆ ಹೋದರೆ, ಅಲ್ಲಿ ರಾಜ್ಯಾಧಿಕಾರ ಯಾರಿಗೆ ?)

ಸಮೀಕ್ಷಕ:—ಸ್ವರ್ಗ ಒಂದೇ ಇರುವುದಾದಲ್ಲಿ, ರಾಜನೂ ಒಬ್ಬನೇ ಆಗಬೇಕು. ಆದುದರಿಂದ, ಎಷ್ಟು ಜನ 'ದೀನ'ರಿದ್ದಾರೋ, ಅವರೆಲ್ಲರೂ ಸ್ವರ್ಗಕ್ಕೆ ಹೋಗುವವರಾದರೆ. ಸ್ವರ್ಗದಲ್ಲಿ ರಾಜ್ಯದ ಅಧಿಕಾರ ಯಾವನಿಗೆ ದಕ್ಕುವುದು? ಎಂದರೆ, ಪರಸ್ಪರ ಜಗಳ-ಕದನಗಳನ್ನು ಮಾಡುವರು. ಮತ್ತು ರಾಜ್ಯದ ವ್ಯವಸ್ಥೆ ದಿಕ್ಕುದೆಸೆಯಿಲ್ಲದೇ ಹೋಗುವುದು.

ಮತ್ತು 'ದೀನರು', ಎಂದರೆ ದರಿದ್ರರು ಎಂದು ಗ್ರಹಣಮಾಡುವಿರಾದರೆ, ಅದೂ ಕೂಡ ಸರಿಯಲ್ಲ!

'ನಿರಭಿಮಾನರು', ಎಂದು ಗ್ರಹಿಸುವಿರಾದರೆ, ಆಗಲೂ ಸರಿಹೋಗದು. ಏಕೆಂದರೆ, ದೈನ್ಯತೆ, ಹಾಗೂ ನಿರಭಿಮಾನತೆಗಳ ಅರ್ಥ ಒಂದೇ ಅಲ್ಲ.

ಏಕೆಂದರೆ, ಯಾವನು ಮನಸ್ಸಿನಲ್ಲಿ ದೀನನಾಗಿರುತ್ತಾನೋ, ಅವನಿಗೆ ಸಂತೋಷವೆಂದಿಗೂ ಉಂಟಾಗದು.* ಆದುದರಿಂದ, ಈ ಮಾತು ಸರಿಯಲ್ಲ.

---

*'ಅದೀನಾಃ ಸ್ಯಾಮ ಶರದಃ ಶತಮ್', (ಯಜು. 36. 24)—ಯು.ಮೀ.

'ಯಾವಾಗ ಆಕಾಶ-ಪೃಥಿವಿಗಳು ಕವಲಿ ಹೋಗುವುವೋ, ಆಗ ವ್ಯವಸ್ಥೆಯೂ ಕೂಡ. ಕವಲಿ ಹೋಗುವುದು!' ಇಂತಹ ಅನಿತ್ಯವಾದ ವ್ಯವಸ್ಥೆಯು ಮಾನವರದಾಗಿರುತ್ತದೆ: ಸರ್ವಜ್ಞನಾದ ಈಶ್ವರನದಲ್ಲ! ಮತ್ತು 'ಈ ಆಜ್ಞೆಗಳನ್ನು ಒಪ್ಪಿಕೊಳ್ಳದವನು ಸ್ವರ್ಗದಲ್ಲಿ ಎಲ್ಲರಿಗಿಂತ ಅಲ್ಪನೆಂದು ಎಣಿಸಲ್ಪಡುವನು', ಎಂದು ಒಂದು ಪ್ರಲೋಭನವನ್ನು ಮತ್ತು ಭಯವನ್ನು ಮಾತ್ರ ತೋರಿಸಿದ್ದಾರೆ! [67]

## (ರೊಟ್ಟಿಕೊಡು ; ಧನಸಂಚಯ ಮಾಡಬೇಡ)

**[68] 'ನಮ್ಮ' ದಿವಸಪೂರ್ತಿಯ ರೊಟ್ಟಿಯನ್ನು ನಮಗೆ ಇಂದು ಕೊಟ್ಟು ಬಿಡು!**

**ತನಗಾಗಿ ಪೃಥಿವಿಯಲ್ಲಿ ಧನಸಂಚಯ ಮಾಡಬೇಡ!**

**[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ. 6; ಆ. 11, 19]**

## (ಮತ್ತೆ ಕ್ರೈಸ್ತರು ಧನಸಂಚಯವನ್ನೇಕೆ ಮಾಡುತ್ತಾರೆ?)

**ಸಮೀಕ್ಷಕ:**—ಇದರಿಂದ, ಯಾವ ಕಾಲದಲ್ಲಿ ಏಸುವಿನ ಜನನವಾಗಿತ್ತೋ, ಆ ಕಾಲದಲ್ಲಿ ಜನರು ಕಾಡಾಡಿಗಳು, ಮತ್ತು ದರಿದ್ರರು ಆಗಿದ್ದರು, ಎಂದು ತಿಳಿದುಬರುತ್ತದೆ. ಮತ್ತು ಏಸುವೂ ಕೂಡ ದರಿದ್ರನಾಗಿದ್ದನು! ಈ ಕಾರಣದಿಂದಲೇ, **ತಾನೇ ದಿನಪೂರ್ತಿಯ ರೊಟ್ಟಿಯ ಪ್ರಾಪ್ತಿಗಾಗಿ ಈಶ್ವರನಲ್ಲಿ ಪ್ರಾರ್ಥಿಸುತ್ತಾನೆ!** ಮತ್ತು [ಹಾಗೆಯೇ ಮಾಡಲು] ಕಲಿಸುತ್ತಾನೆ.

ಮತ್ತು, ಹೀಗೆ ಇರುವುದಾದರೆ, **ಕ್ರೈಸ್ತರು ಧನ-ಸಂಚಯವನ್ನೇಕೆ ಮಾಡುತ್ತಾರೆ?** ಅವರು ಏಸುವಿನ ವಚನಕ್ಕೆ ವಿರುದ್ಧವಾಗಿ ನಡೆಯದೇ, **ಎಲ್ಲವನ್ನೂ ದಾನ-ಪುಣ್ಯ ಮಾಡಿ, ಬಡವರಾಗಿ ಹೋಗಲಿ!** [68]

## (ಏಸುವನ್ನು 'ಪ್ರಭು', ಎಂದು ಕರೆಯುವವನು ಸ್ವರ್ಗಕ್ಕೆ ಹೋಗಲಾರ)

**[69] ನನ್ನನ್ನು 'ಪ್ರಭು! ಪ್ರಭು!!, ಎಂದು ಕರೆಯುವ ಪ್ರತಿಯೊಬ್ಬನೂ ಸ್ವರ್ಗದ ರಾಜ್ಯದಲ್ಲಿ ಪ್ರವೇಶಮಾಡುವುದಿಲ್ಲ.**

**[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ. 7; ಆ. 21]**

**ಸಮೀಕ್ಷಕ:**—ಈಗ ಆಲೋಚಿಸಿರಿ! ದೊಡ್ಡ ಪಾದರಿಗಳೂ, ಬಿಶಪ್ ಮಹೋದಯರೂ, ಮತ್ತು ಕ್ರೈಸ್ತರೂ, ಏಸುವಿನ ಈ ವಾಕ್ಯವನ್ನು ಸತ್ಯವೆಂದು ತಿಳಿಯುವವರಾದರೆ, ಏಸುವನ್ನು 'ಪ್ರಭು', ಅಂದರೆ, ಈಶ್ವರನೆಂದು ಎಂದಿಗೂ ಹೇಳಬಾರದು. **ಈ ಮಾತನ್ನು ಒಪ್ಪುವುದಿಲ್ಲವಾದರೆ, ಪಾಪದಿಂದ ಎಂದಿಗೂ ಬಿಡುಗಡೆ ಹೊಂದಲಾರರು.** [69]

## (ಏಸುವು ಸ್ವರ್ಗದಲ್ಲಿ ಕುಕರ್ಮಿಗಳಿಗೆ ಸಹಯೋಗ ಕೊಡನು)

[70] ಆ ದಿನದಂದು ಬಹುಮಂದಿ ನನ್ನನ್ನು ಬೇಡುವರು.

ಆಗ ನಾನು ತೆರೆದ ನುಡಿಯಲ್ಲಿ—"ನಾನು ನಿಮ್ಮನ್ನು ತಿಳಿದಿಲ್ಲ. ದುಷ್ಕರ್ಮ ಮಾಡುವವರು ನನ್ನಿಂದ ದೂರಹೋಗಿರಿ". ಎಂದು ಹೇಳುವೆನು.

[ಬೈಬಲ್ (ಇಂ). ಮ್ಯಾಥ್ಯೂ:- ಪರ್ವ. 7; ಆ. 22,23]

## (ಇದು ಮುಗ್ಧರಿಗೆ ಪ್ರಲೋಭನ ನೀಡುವ ಮಾತು)

**ಸಮೀಕ್ಷಕ:**—ನೋಡಿರಿ! ಏಸುವು ಕಾಪಾಡಿ ಮನುಷ್ಯರಿಗೆ ಭರವಸೆ ಕೊಡುವುದಕ್ಕಾಗಿ, ಸ್ವರ್ಗದಲ್ಲಿ ನ್ಯಾಯಾಧೀಶನಾಗಲು ಇಚ್ಛಿಸುತ್ತಿದ್ದನು.

ಇದು ಕೇವಲ ಮುಗ್ಧ ಮಾನವರಿಗೆ ಪ್ರಲೋಭನ ಒಡ್ಡುವ ಸಂಗತಿಯಾಗಿದೆ. [70]

## (ಕೈಯಿಂದ ಮುಟ್ಟಿದೊಡನೆಯೇ ಕುಷ್ಠರೋಗ ದೂರವಾಯಿತು)

[71] ಮತ್ತು ನೋಡಿರಿ! ಒಬ್ಬ ಕುಷ್ಠರೋಗಿಯು ಬಂದು, ಪ್ರಣಾಮ ಮಾಡಿ—"ಓ ಪ್ರಭೋ! ತಾವು ಇಚ್ಛಿಸುವಿರಾದರೆ, ನನ್ನನ್ನು ಶುದ್ಧೀಕರಿಸಬಲ್ಲಿರಿ.", ಎಂದನು.

ಏಸುವು ಕೈಚಾಚಿ, ಅವನನ್ನು ಸ್ಪರ್ಶಿಸಿ—

"ನಾನಂತೂ ನೀನು ಶುದ್ಧನಾಗಬೇಕೆಂದು* ಆಶಿಸುತ್ತೇನೆ.", ಎಂದನು.

ಮತ್ತು ಅವನ ಕುಷ್ಠ ರೋಗವು ತತ್ಕ್ಷಣ ವಾಸಿಯಾಗಿಹೋಯಿತು!

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 8; ಆ. 2,3]

## (ಮತ್ತೆ ಪುರಾಣಗಳ ಇಂತಹ ಮಾತುಗಳು ಅಸತ್ಯವೇಕೆ?)

**ಸಮೀಕ್ಷಕ:**—ಈ ಮಾತುಗಳೆಲ್ಲವೂ ಮುಗ್ಧಮಾನವರನ್ನು ಸಿಕ್ಕಿಸಿಕೊಳ್ಳುವುವಾಗಿವೆ. ಏಕೆಂದರೆ, ಕ್ರೈಸರು ಈ ವಿದ್ಯಾ–ಸೃಷ್ಟಿಕ್ರಮಕ್ಕೆ ವಿರುದ್ಧವಾದ ಮಾತುಗಳನ್ನು ಸತ್ಯವೆಂದು ಒಪ್ಪಿಕೊಳ್ಳುತ್ತಾರೆ, ಎಂದಾಗ—

**ಶುಕ್ರಾಚಾರ್ಯ, ಧನ್ವಂತರಿ, ಕಶ್ಯಪ** ಮೊದಲಾದವರ ವಿಷಯದಲ್ಲಿ; ಮತ್ತು [ಮಹಾ] ಭಾರತದಲ್ಲಿ—

"ಅನೇಕ ದೈತ್ಯರ ಮೃತಸೈನ್ಯವನ್ನು ಬದುಕಿಸಿಬಿಟ್ಟರು!

---

*ರೋಗರಹಿತನಾಗಬೇಕೆಂದು—ಅನು.

"ಬೃಹಸ್ಪತಿಯು ಮಗನಾದ ಕಚನನ್ನು ಚೂರು ಚೂರು ಮಾಡಿ, ಪ್ರಾಣಿಗಳಿಗೂ ಮತ್ತು ಮೀನುಗಳಿಗೂ ತಿನ್ನಿಸಿಬಿಟ್ಟರು. ಆಗಲೂ ಕೂಡ, ಶುಕ್ರಾಚಾರ್ಯನು ಅವನನ್ನು ಜೀವಂತನನ್ನಾಗಿ ಮಾಡಿದನು! ಆಮೇಲೆ ಕಚನನ್ನು ಕೊಂದು, ಶುಕ್ರಾಚಾರ್ಯನಿಗೆ ತಿನ್ನಿಸಿದರು. ಆದರೂ ಕೂಡ, ಅವನನ್ನು ಹೊಟ್ಟೆಯಲ್ಲಿ ಜೀವಂತನನ್ನಾಗಿ ಮಾಡಿ, ಹೊರತೆಗೆದನು! ತಾನೇ ಸತ್ತು ಹೋದನು! ಕಚನು ಅವನನ್ನು ಬದುಕಿಸಿದನು!

"ಕಶ್ಯಪ ಋಷಿಯು, ಮನುಷ್ಯಸಹಿತವಾದ ವೃಕ್ಷವು ತಕ್ಷಕನಿಂದ ಭಸ್ಮವಾದ ಮೇಲೆ, ಪುನಃ ವೃಕ್ಷವನ್ನು ಮತ್ತು ಮನುಷ್ಯನನ್ನು ಬದುಕಿಸಿದನು!

"ಧನ್ವಂತರಿಯು ಲಕ್ಷಾಂತರ ಶವಗಳನ್ನು ಸಜೀವಗೊಳಿಸಿದನು! ಲಕ್ಷಾಂತರ ಜನ ಕುಷ್ಠರೋಗಿಗಳೇ ಮೊದಲಾದ ಅಸ್ವಸ್ಥರನ್ನು ಗುಣಪಡಿಸಿದನು! ಲಕ್ಷಾಂತರ ಕುರುಡರಿಗೆ ಮತ್ತು ಕಿವುಡರಿಗೆ ಕಣ್ಣುಗಳನ್ನೂ ಮತ್ತು ಕಿವಿಗಳನ್ನೂ ಕೊಟ್ಟನು!"

ಈ ಮೊದಲಾದ ಕಥೆಗಳನ್ನು ಸುಳ್ಳೆಂದು ಏಕೆ ಹೇಳುತ್ತೀರಿ? ಮೇಲೆ ಹೇಳಿದ ಮಾತುಗಳು ಸುಳ್ಳಾಗಿದ್ದರೆ, ಏಸುವಿನ ಮಾತೇಕೆ ಸುಳ್ಳಲ್ಲ?

ಅನ್ಯರ ಮಾತನ್ನು ಸುಳ್ಳೆಂದೂ, ಮತ್ತು ತಮ್ಮ ಸುಳ್ಳು ಮಾತನ್ನೂ ಕೂಡ, ಸತ್ಯವೆಂದೂ ಹೇಳುವುದಾದರೆ, [ನೀವು] ಹಠಮಾರಿಗಳಲ್ಲದೇ ಮತ್ತೇನು? ಆದುದರಿಂದ, ಕ್ರೈಸ್ತರ ಮಾತುಗಳು ಹಠಮಾರಿತನದ, ಹಾಗೂ ಬಾಲಭಾಷಿತನಂತಹವಾಗಿವೆ! [71]

### (ತಥಾಕಥಿತ ಭೂತಗಳನ್ನು ಹಂದಿಗಳಲ್ಲಿ ಪ್ರವೇಶಿಸುವುದು)

[72] ಅವರಿಗೆ ಆ ಮಾರ್ಗದಿಂದ ಯಾವನೂ ಹೋಗಲೂ ಕೂಡ, ಶಕ್ಯವಿಲ್ಲದಂತೆ ಅತಿ ಪ್ರಚಂಡರಾಗಿದ್ದ [ಇಬ್ಬರು] ಭೂತಗ್ರಸ್ತಮಾನರು ಆಗ ಸ್ಮಶಾನದಿಂದ ಹೊರಟುಬಂದು, ಅವನನ್ನು ಸಂಧಿಸಿದರು.

ಮತ್ತು, ನೋಡಿರಿ! ಅವರು ಗಟ್ಟಿಯಾಗಿ—

"ಓ ಏಸು! ಈಶ್ವರ ಪುತ್ರ! ತಮಗೆ ನಮ್ಮ ಬಳಿ ಕೆಲಸವೇನಿದೆ? ಅವಧಿಗೆ ಮುನ್ನವೇ ತಾವು ನಮಗೆ ನೋವನ್ನು ಕೊಡಲು ಇಲ್ಲಿಗೆ ಬಂದಿದ್ದೀರೇನು?", ಎಂದು ಕೇಳಿದರು.

[ಅವರಲ್ಲಿನ] ಭೂತಗಳು—

"ತಾವು ನಮ್ಮನ್ನು ಉಚ್ಚಾಟಿಸುವಿರಾದರೆ, ಹಂದಿಗಳ ಗುಂಪಿನಲ್ಲಿ ನಮ್ಮನ್ನು ಸೇರಿಕೊಳ್ಳಲುಬಿಡಿರಿ.", ಎಂದು ವಿನಂತಿಮಾಡಿಕೊಂಡವು.

ಅವನು ಅವಕ್ಕೆ — "ಹೋಗಿರಿ.", ಎಂದು ಹೇಳಿದನು. ಮತ್ತು ಅವು ತೆರಳಿ ಹಂದಿಗಳ ಗುಂಪಿನಲ್ಲಿ ಸೇರಿಕೊಂಡವು.

ಮತ್ತು ನೋಡಿರಿ! ಹಂದಿಗಳ ಸಮಸ್ತ ಗುಂಪೂ ಇಳಿಜಾರಾದ ಗುಡ್ಡದಿಂದ ಸಮುದ್ರಕ್ಕೆ ಓಡಿಹೋಯಿತು. ಮತ್ತು ನೀರಿನಲ್ಲಿ ಮುಳುಗಿ ಸತ್ತಿತು!

[ಬೈಬಲ್ (ಇಂ.) ಮ್ಯಾಥ್ಯೂ :-ಪರ್ವ 8; ಆ. 28,29,31,32]

## (ಹೆಣಗಳು ಗೋರಿಯಿಂದ ಹೊರ ಬರುವುದು ಅಸಂಭವ)

**ಸಮೀಕ್ಷಕ:**—ಅಲ್ಲಾ ! ಈ ಸ್ಥಳದಲ್ಲಿ ಸ್ವಲ್ಪ ಆಲೋಚಿಸುವುದಾದರೆ, ಈ ಮಾತುಗಳೆಲ್ಲಾ ಸುಳ್ಳಾಗಿವೆ ! ಏಕೆಂದರೆ, ಮೃತನಾದ ಮನುಷ್ಯನು ರುದ್ರಭೂಮಿಯಿಂದ ಎಂದಿಗೂ ಹೊರಟು ಬರಲಾರನು. ಅವರು ಯಾವನ ಮೈಮೇಲೆಯೂ ಬರುವುದಿಲ್ಲ; ಸಂವಾದವನ್ನೂ ಮಾಡುವುದಿಲ್ಲ. ಈ ಮಾತುಗಳೆಲ್ಲವೂ ಅಜ್ಞಾನಿಗಳವು.

**ಯಾರು ಮಹಾ ಕಾಡಾಡಿಗಳಾಗಿರುತ್ತಾರೋ, ಅವರು ಇಂತಹ ಮಾತುಗಳ ಮೇಲೆ ನಂಬಿಕೆಯಿಡುತ್ತಾರೆ!**

ಮತ್ತು ಆ ಹಂದಿಗಳ ಕೊಲೆ ಮಾಡಿಸಿದನು! ಹಂದಿಯುವರಿಗೆ ಹಾನಿಯುನ್ನುಂಟು ಮಾಡುವ ಪಾಪವು ಏಸುವಿಗೆ ತಗಲಿರಬಹುದು !

ಮತ್ತು ಕ್ರೈಸ್ತರು ಏಸುವನ್ನು "ಪಾಪವನ್ನು ಕ್ಷಮಿಸುವವನು ಮತ್ತು ಪವಿತ್ರಗೊಳಿಸುವವನು", ಎಂದು ಅಂಗೀಕರಿಸುತ್ತಾರೆ. ಹಾಗಾದರೆ. ಆ ಭೂತಗಳನ್ನು ಪವಿತ್ರಗೊಳಿಸಲಾರದೇ ಹೋದನೇಕೆ ? ಮತ್ತು ಹಂದಿಯುವರ ನಷ್ಟವನ್ನು ತುಂಬಿ ಕೊಡಲಿಲ್ಲವೇಕೆ ?

**ಆಧುನಿಕಕಾಲದ ಸುಶಿಕ್ಷಿತರಾದ ಕ್ರೈಸ್ತ ಆಂಗ್ಲ ಜನರು ಈ ಬುರುಡೆಗಳನ್ನೂ ಒಪ್ಪಿಕೊಳ್ಳುತ್ತಿರಬಹುದೇನು ? ಒಪ್ಪಿಕೊಳ್ಳುವವರಾದರೆ, ಭ್ರಮಜಾಲದಲ್ಲಿ ಬಿದ್ದಿದ್ದಾರೆ !** [72]

## (ಪಾರ್ಶ್ವಘಾತದ ರೋಗಿಯ ರೋಗ ದೂರ)

[73] ನೋಡಿರಿ! ಮಂಚದ ಮೇಲೆ ಒರಗಿದ್ದ ಪಾರ್ಶ್ವಘಾತದ ಒಬ್ಬ ರೋಗಿಯನ್ನು ಜನರು ಅವನ ಬಳಿ ಕರೆತಂದರು. ಮತ್ತು ಏಸುವು ಅವರ ನಂಬಿಕೆಯನ್ನು ನೋಡಿ, ಆ ಪಾರ್ಶ್ವಘಾತದ ರೋಗಿಗೆ—

"ಓ ಮಗನೇ ! ಧೈರ್ಯಧರಿಸು. ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ.

"ನಾನು ಧಾರ್ಮಿಕರನ್ನಲ್ಲ ; ಆದರೆ, ಪಾಪಿಗಳನ್ನು ಪಶ್ಚಾತ್ತಾಪ ಪಡಲು ಕರೆಯುವುದಕ್ಕಾಗಿ ಬಂದಿದ್ದೇನೆ.", ಎಂದು ಹೇಳಿದನು.

[ಬೈಬಲ್ (ಇಂ). ಮ್ಯಾಥ್ಯೂ :- ಪರ್ವ. 9; ಆ. 2, 13]

## (ಪಾಪಕ್ಕೆಂದಿಗೂ ಕ್ಷಮೆ ಇಲ್ಲ)

ಸಮೀಕ್ಷಕ:—ಹಿಂದೆ ನಾವು ಹೇಗೆ ಬರೆದಿದ್ದೇವೋ, ಈ ಮಾತೂ ಕೂಡ, ಹಾಗೆಯೇ ಅಸಂಭವವಾಗಿದೆ.

ಮತ್ತು, ಪಾಪವನ್ನು ಕ್ಷಮಿಸುವ ಮಾತಂತೂ ಕೇವಲ ಮುಗ್ಧ ಮಾನವರಿಗೆ ಪ್ರಲೋಭನವನ್ನೊಡ್ಡಿ, ಸಿಕ್ಕಿಸಿಕೊಳ್ಳುವಂತಹುದೇ ಆಗಿದೆ. ಹೇಗೆ ಒಬ್ಬನು ಸೇವಿಸಿದ ಮದಿರಾ, ಭಂಗಿ ಹಾಗೂ ಅಫೀಮುಗಳಿಂದ, ಬೇರೆಯವನಿಗೆ ಮದವೇರುವುದಿಲ್ಲವೋ, ಹಾಗೆಯೇ ಯಾವನೋ ಮಾಡಿದ ಪಾಪವು ಮತ್ತಾವನೋ ಒಬ್ಬನ ಬಳಿಗೆ ಹೋಗುವುದಿಲ್ಲ! ಆದರೆ, ಯಾವನು ಮಾಡುತ್ತಾನೋ, ಅವನೇ ಅನುಭವಿಸುತ್ತಾನೆ! ಇದೇ ಈಶ್ವರನ ನ್ಯಾಯವಾಗಿದೆ.

ಒಬ್ಬನು ಮಾಡಿದ ಪಾಪ-ಪುಣ್ಯಗಳು ಮತ್ತೊಬ್ಬನಿಗೆ ತಗಲುವುವಾದರೆ, ಅಥವಾ ನ್ಯಾಯಾಧೀಶನೇ ಸ್ವತಃ ಗ್ರಹಿಸುವುದಾದರೆ, ಅಥವಾ ಕರ್ತೃಗಳಿಗೆಯೇ ಸಿಕ್ಕಬೇಕಾದ ಫಲಗಳನ್ನು ಈಶ್ವರನು [ಅವರಿಗೆ] ಕೊಡದಿದ್ದರೆ, ಅವನು ಅನ್ಯಾಯಕಾರಿಯಾಗಿ ಹೋದಾನು !

ನೋಡಿರಿ! ಧರ್ಮವೇ ಕಲ್ಯಾಣಕಾರಕವಾಗಿದೆ ; ಏಸು ಅಥವಾ ಬೇರೆ ಯಾರೂ ಅಲ್ಲ! ಮತ್ತು ಧರ್ಮಾತ್ಮರಿಗೆ ಏಸು ಮೊದಲಾದವರ ಆವಶ್ಯಕತೆಯೂ ಕೂಡ, ಇಲ್ಲ! ಮತ್ತು ಪಾಪಿಗಳಿಗೂ ಇಲ್ಲ ! ಏಕೆಂದರೆ, ಯಾವನ ಪಾಪವೂ ಕೂಡ, [ಫಲಭೋಗವಿಲ್ಲದೇ] ಬಿಟ್ಟು ಹೋಗಲಾರದು! [73]

## (ಹನ್ನೆರಡು ಮಂದಿ ಶಿಷ್ಯರಿಗೆ ಭೂತಗಳ ಮೇಲೆ ಅಧಿಕಾರ)

[74] ಏಸುವು ತನ್ನ 12 ಮಂದಿ ಶಿಷ್ಯರನ್ನು ತನ್ನ ಬಳಿಗೆ ಕರೆಯಿಸಿಕೊಂಡು, ಅವರಿಗೆ ಅಪವಿತ್ರ ಭೂತಗಳ ಮೇಲೆ, ಅವುಗಳನ್ನು ಉಚ್ಚಾಟಿಸುವುದಕ್ಕಾಗಿಯೂ, ಹಾಗೂ ಪ್ರತಿಯೊಂದು ರೋಗವನ್ನೂ, ಪ್ರತಿಯೊಂದು ವ್ಯಾಧಿಯನ್ನೂ ವಾಸಿ ಮಾಡುವ ಸಲುವಾಗಿಯೂ, ಅಧಿಕಾರವನ್ನಿತ್ತನು.

ಮಾತನಾಡುವವರು ನೀವೇನೂ ಅಲ್ಲ ; ಆದರೆ, ನಿಮ್ಮ ತಂದೆಯ ಆತ್ಮ ನಿಮ್ಮೊಳಗಿನಿಂದ ಮಾತನಾಡುತ್ತಾನೆ.

ನಾನು ಪೃಥಿವಿಯ ಮೇಲೆ ಒಂದುಗೂಡಿಸಲು ಬಂದಿದ್ದೇನೆ, ಎಂದು ತಿಳಿಯಬೇಡಿ! [ನಾನು ಒಂದುಗೂಡಿಸುವುದಕ್ಕಾಗಿ] ಅಲ್ಲ : ಆದರೆ, ಖಡ್ಗವನ್ನು ಪ್ರಯೋಗಿಸಲು ಪ್ರೇರಿಸುವುದಕ್ಕಾಗಿ ಬಂದಿದ್ದೇನೆ !

ನಾನು ಮಗನನ್ನು ಅವನ ತಂದೆಯಿಂದ, ಮತ್ತು ಮಗಳನ್ನು ಅವಳ ತಾಯಿಯಿಂದ, ಮತ್ತು ಸೊಸೆಯನ್ನು ಅವಳ ಅತ್ತೆಯಿಂದ ಬೇರೆಮಾಡಲು ಬಂದಿದ್ದೇನೆ !

ಮಾನವನ ಮನೆಯ ಜನರೇ ಅವನ ವೈರಿಗಳಾಗುವರು !

[ಬೈಬಲ್ (ಇಂ). ಮ್ಯಾಥ್ಯೂ. :– ಪ. 10; ಆ. 1,20,34-36]

## (ಭೂತಪ್ರವೇಶ ; ಮತ್ತು ಚಿಕಿತ್ಸೆಯಿಲ್ಲದೇ ರೋಗ ದೂರವಾಗುವುದು ಅಸಂಭವ)

**ಸಮೀಕ್ಷಕ:**—ಯಾರಲ್ಲಿ ಒಬ್ಬನು 30 ರೂಪಾಯಿಗಳ ಲೋಭದಿಂದ ಏಸುವನ್ನು ಹಿಡಿಯಿಸುವನೋ, ಮತ್ತು ಅನ್ಯರು ಪರಿವರ್ತಿತರಾಗಿ ಬೇರೆ ಬೇರೆ ಓಡಿ ಹೋಗುವರೋ, ಆ ಶಿಷ್ಯರೇ ಇವರಾಗಿದ್ದಾರೆ !

ಅಲ್ಲಾ ! ಭೂತಗಳ ಆಗಮನ ಅಥವಾ ನಿರ್ವಾಸನ; ಔಷಧವಿಲ್ಲದೇ, ಅಥವಾ ಪಥ್ಯವಿಲ್ಲದೇ ವ್ಯಾಧಿಗಳು ದೂರವಾಗುವುದು, ಎಂಬ ಮಾತು ವಿದ್ಯೆಗೇ ವಿರುದ್ಧವಾಗಿರುವುದರಿಂದ, ಸೃಷ್ಟಿಕ್ರಮದ ದೃಷ್ಟಿಯಿಂದ ಅಸಂಭವವಾಗಿದೆ! ಆದುದರಿಂದ, ಇಂತಿಂತಹ ಮಾತುಗಳನ್ನಂಗೀಕರಿಸುವುದು ಅಜ್ಞಾನಿಗಳ ಕೆಲಸವಾಗಿದೆ.

## (ಜೀವರಲ್ಲಿ ಈಶ್ವರನು ಮಾತನಾಡುವವನಾದರೆ, ಫಲವೂ ಅವನೇ ಭೋಗಿಸಬೇಕು)

ಜೀವರು ಮಾತನಾಡುವವರಲ್ಲವಾದರೆ, ಈಶ್ವರನು ಮಾತನಾಡುವವನಾದರೆ, ಜೀವರೇನು ಕೆಲಸ ಮಾಡುತ್ತಾರೆ ? ಮತ್ತು ಸತ್ಯದ ಅಥವಾ ಮಿಥ್ಯಾಭಾಷಣದ ಫಲವಾದ ಸುಖವನ್ನು, ಅಥವಾ ದುಃಖವನ್ನು, ಈಶ್ವರನೇ ಅನುಭವಿಸುತ್ತಿರಬಹುದಲ್ಲ ! ಇದೂ ಕೂಡ, ಒಂದು ಅನುಚಿತವಾದ ಕಥನವೇ ಸರಿ!

## (ಜನರಲ್ಲಿ ಒಡಕನ್ನುಂಟುಮಾಡುವುದು ಕೆಟ್ಟಕೆಲಸ)

ಮತ್ತು ಏಸುವು ಒಡಕು ಹುಟ್ಟಿಸಲು, ಮತ್ತು ಹೋರಾಡಿಸಲು ಬಂದಿದ್ದನು, ಎಂಬ ಹೇಳಿಕೆಯಂತೆಯೇ ಈ ದಿನಗಳಲ್ಲಿ ಜನರಲ್ಲಿ ಜಗಳ ನಡೆಯುತ್ತಿದೆ!

ಒಡಕು ಹುಟ್ಟಿಸುವುದರಿಂದ, ಸರ್ವಥಾ ಮಾನವರಿಗೆ ದುಃಖವಾಗುತ್ತದೆ! ಇದೆಂತಹ ಮಹಾ ಕೆಡುಕು ಮಾತು ?

ಮತ್ತು ಕ್ರೈಸ್ತರು ಇದನ್ನೇ ಗುರುಮಂತ್ರ*ವೆಂದು ತಿಳಿದುಕೊಂಡಿದ್ದಾರೇನೋ? ಏಕೆಂದರೆ, ಒಬ್ಬರಿಂದ ಇನ್ನೊಬ್ಬರನ್ನು ಒಡೆಯುವುದನ್ನು ಏಸುವೇ ಒಳ್ಳೆಯದೆಂದು ತಿಳಿಯುತ್ತಿದ್ದಾಗ, ಇವರು ಏತಕ್ಕೆ ಒಪ್ಪಿಕೊಳ್ಳದೇ ಇದ್ದಾರು ?

---

*ಯಾವ ಜನಾಂಗದವರ ಸ್ವಭಾವ ಹೇಗಿರುತ್ತದೆ, ಎಂದರಿಯಬೇಕಾದರೆ, ಅವರು ಅಂಗೀಕರಿಸುವ ಧರ್ಮ(?)ಗ್ರಂಥಗಳ 'ತಪ್ಪು-ಒಪ್ಪು'ಗಳಿಂದ ಕೂಡಿದ ಉಪದೇಶವನ್ನು ಅಧ್ಯಯನ ಮಾಡಬೇಕು. ಉದಾಹರಣೆಗೆ - ಹಿಂದುಗಳ ಸ್ವಭಾವ ಪುರಾಣಗಳಿಂದ; ಕ್ರೈಸ್ತರ ಸ್ವಭಾವ ಬೈಬಲಿನಿಂದ; ಮತ್ತು ಮುಸಲ್ಮಾನರ ಸ್ವಭಾವ ಕುರಾನಿನಿಂದ ಅರಿವಾಗುತ್ತದೆ. —ಸಂ.

ಮನೆಯ ಜನರನ್ನೇ ಮನೆಯವರ ಶತ್ರುಗಳನ್ನಾಗಿ ಮಾಡುವುದು ಏಸುವಿನದೇ ಕಾರ್ಯವಿದ್ದೀತು!* ಇದು ಶ್ರೇಷ್ಠ ಪುರುಷರ ಕೆಲಸವಲ್ಲ. [74]

## (ಏಳು ರೊಟ್ಟಿಗಳಿಂದ ನಾಲ್ಕು ಸಾವಿರ ಜನರ ತೃಪ್ತಿ)

[75] ಆಗ ಏಸುವು—"ನಿಮ್ಮ ಬಳಿ, ಎಷ್ಟು ರೊಟ್ಟಿಗಳಿವೆ?', ಎಂದು ಕೇಳಿದನು.

ಆಗ ಅವರು—"ಏಳು ಇವೆ. ಮತ್ತು [ಸ್ವಲ್ಪ]ಚಿಕ್ಕ ಮೀನುಗಳಿವೆ.", ಎಂದರು.

ಆಗ, ಅವನು ಜನರಿಗೆ ನೆಲದ ಮೇಲೆ ಕುಳಿತುಕೊಳ್ಳಲು ಆಜ್ಞೆ ಮಾಡಿದನು.

ಆಗ, ಅವನು ಏಳು ರೊಟ್ಟಿಗಳನ್ನು ಮತ್ತು ಮೀನುಗಳನ್ನು [ತೆಗೆದುಕೊಂಡು], ಧನ್ಯವೆಂದು ಭಾವಿಸಿ, ಮುರಿದನು. ಮತ್ತು ತನ್ನ ಶಿಷ್ಯರಿಗೆ ಕೊಟ್ಟನು. ಮತ್ತು ಶಿಷ್ಯರು ಜನರಿಗೆ ಕೊಟ್ಟರು. ಹೀಗೆ, ಎಲ್ಲರೂ ಉಂಡು ತೃಪ್ತರಾದರು!

ಮತ್ತು ಯಾವ ತುಣುಕುಗಳು ಉಳಿದವೋ, ಅವುಗಳಿಂದ ತುಂಬಿಸಿದ ಏಳು ಬುಟ್ಟಿಗಳನ್ನು, ಎತ್ತಿದರು!

ಯಾರು ಊಟಮಾಡಿದರೋ, ಅವರು, ಹೆಂಗಸರು-ಮಕ್ಕಳನ್ನು ಬಿಟ್ಟು, ನಾಲ್ಕು ಸಾವಿರ ಪುರುಷರಿದ್ದರು!

[ಬೈಬಲ್ (ಇಂ). ಮ್ಯಾಥ್ಯೂ :- ಪ. 15; ಆ. 34-38]

## (ಏಸುವು ಇಂತಹ ಸಿದ್ಧನಾಗಿದ್ದಿದ್ದರೆ, ಅತ್ತಿಯ ಹಣ್ಣುಗಳನ್ನೇಕೆ ತಿನ್ನುತ್ತಿದ್ದನು?)

**ಸಮೀಕ್ಷಕ:**—ಈಗ ನೋಡಿರಿ! ಇದು ಆಧುನಿಕ ಆಷಾಢಭೂತಿಸಿದ್ಧರು ಮತ್ತು ಇಂದ್ರಜಾಲ ಮಾಡುವವರು ಮೊದಲಾದವರ ಮಾತಿಗೆ ಸಮನಾದ ಛಲದ ಮಾತಲ್ಲವೇನು?

---

*ಈ ಕಾರಣದಿಂದಲೇ, ಆಂಗ್ಲರು ಮೊದಲಾದ ಪಶ್ಚಿಮದೇಶೀಯ ಕ್ರೈಸ್ತರು ಜಗತ್ತಿನಲ್ಲಿ ಎಲ್ಲಿ-ಎಲ್ಲಿಗೆ ಹೋದರೋ, ಅಲ್ಲಿ-ಅಲ್ಲಿ ವಾಸ ಮಾಡುತ್ತಿದ್ದ ವಿಭಿನ್ನ ಜಾತಿಗಳ ಮತ್ತು ಜನಾಂಗಗಳ ನಡುವೆ ಪರಸ್ಪರ ದ್ವೇಷ ಹುಟ್ಟಿಸಿ, ಕಾದಾಡಿಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಂಡರು.
—ಯು.ಮೀ.

ಆದ್ದರಿಂದಲೇ, ಮಹರ್ಷಿ ದಯಾನಂದರು ಭಾರತದ ಅವನತಿಗೆ, ಪರಾಧೀನತೆಗೆ ಪರಸ್ಪರ ಒಡಕೇ ಕಾರಣವೆಂದು ಘೋಷಿಸಿ, ಅದನ್ನು ಹೋಗಲಾಡಿಸಲು ಅದರ ಉಪಾಯಗಳನ್ನು 'ಸತ್ಯಾರ್ಥಪ್ರಕಾಶ' ಗ್ರಂಥದಲ್ಲಿ ಸರ್ವತ್ರ ಚಿತ್ರಿಸಿದ್ದಾರೆ. ಆದರೆ, ಸಂಘಟನೆಗೆ ಶತ್ರುಗಳಾದ, ಮತ್ತು ವೈಯಕ್ತಿಕ ಪ್ರಧಾನತೆಗಾಗಿ ಹೋರಾಡುವ ಭಾರತೀಯ ಹಿಂದುಗಳು ಅವರ ಮಾತನ್ನೇಕೆ ಕೇಳುವರು? ಯಾವನು ಸಂಘಟನೆಗಾಗಿ ವೈಯಕ್ತಿಕ ಮತ್ತು ಸಾಂಪ್ರದಾಯಿಕ ಚಿಹ್ನೆಗಳನ್ನು ಅಳಿಸಲು ಹೇಳುವನೋ, ಅವನೇ ಇವರಿಗೆ ಶತ್ರುವಾಗಿ ಕಾಣಿಸುತ್ತಾನೆ! —ಸಂ.

ಆ ರೊಟ್ಟಿಗಳಲ್ಲಿ ಬೇರೆ ರೊಟ್ಟಿಗಳು ಎಲ್ಲಿಂದ ಬಂದವು? ಏಸುವಿನಲ್ಲಿ ಇಂತಹ ಸಿದ್ಧಿಗಳಿದ್ದಲ್ಲಿ, ತಾನು ಹಸಿದವನಾಗಿ, ಅತ್ತಿಯ ಹಣ್ಣುಗಳನ್ನು ತಿನ್ನಲು ಅಲೆದಾಡುತ್ತಿದ್ದನಾದರೂ ಏಕೆ? ತನ್ನ ಸಲುವಾಗಿ ಮಣ್ಣು, ನೀರು ಮತ್ತು ಕಲ್ಲು ಮೊದಲಾದುದರಿಂದ ಮೋಹನಭೋಗ*. ರೊಟ್ಟಿಗಳನ್ನು ಏಕೆ ಮಾಡಿಕೊಳ್ಳಲಿಲ್ಲ? ಈ ಮಾತುಗಳೆಲ್ಲವೂ ಬಾಲಕರ ಎಳೆಯಾಟವಾಗಿವೆ!

ಹೇಗೆ, ಎಷ್ಟೋ ಮಂದಿ ಸಾಧು-ವೈರಾಗಿಗಳು ಇಂತಹದೇ ಛಲದ ವ್ಯವಹಾರ ಮಾಡಿ, ಮುಗ್ಧ ಮಾನವರನ್ನು ವಂಚಿಸುತ್ತಾರೋ, ಹಾಗೆಯೇ, ಇವುಗಳೂ ಕೂಡ, ಇವೆ. [75]

## (ಪ್ರತಿಯೊಬ್ಬನೂ ಕರ್ಮಾನುಸಾರ ಫಲ ಪಡೆಯುವನು)

**[76]** **ಮತ್ತು, ಆಗ ಅವನು ಪ್ರತಿಯೊಬ್ಬ ಮಾನವನಿಗೂ ಅವನ ಕಾರ್ಯಕ್ಕೆ ಅನುಸಾರವಾಗಿ ಫಲವನ್ನು ಕೊಡುವನು.**

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ. 16; ಆ. 27]

## (ಹಾಗಾದರೆ, ಪಾಪ ಕ್ಷಮಿಸುವ ಮಾತು ವ್ಯರ್ಥ)

**ಸಮೀಕ್ಷಕ:**—ಕರ್ಮಾನುಸಾರ ಫಲ ಕೊಡಲ್ಪಡುವುದು, ಎಂದಾಗ, ಕ್ರೈಸ್ತರು ಪಾಪ ಕ್ಷಮಿಸಲ್ಪಡುವುದೆಂದು ಉಪದೇಶಿಸುವುದು ವ್ಯರ್ಥವಾಗಿದೆ. ಮತ್ತು, ಅದು ಸತ್ಯವಾದರೆ, ಇದು ಸುಳ್ಳಾಗುವುದು!

ಯಾವನಾದರೂ—'ಕ್ಷಮಿಸಲು ಯೋಗ್ಯವಾದುವು ಕ್ಷಮಿಸಲ್ಪಡುತ್ತವೆ, ಮತ್ತು ಕ್ಷಮಿಸಲು ಯೋಗ್ಯವಲ್ಲದುವು ಕ್ಷಮಿಸಲ್ಪಡುವುದಿಲ್ಲ', ಎಂದು ಹೇಳುವನಾದರೆ ಇದೂ ಕೂಡ ಸರಿಯಲ್ಲ!

ಏಕೆಂದರೆ, ಎಲ್ಲ ಕರ್ಮಗಳ ಫಲಗಳನ್ನೂ ಯಥಾಯೋಗ್ಯವಾಗಿ ಕೊಡುವುದರಿಂದಲೇ, ನ್ಯಾಯ ಮತ್ತು ಪೂರ್ಣ ದಯೆ ಸಿದ್ಧಿಸುವುದು. [76]

## (ಸ್ವಲ್ಪ ವಿಶ್ವಾಸದಿಂದ ಅಸಂಭವವೂ ಸಂಭವ ?)

**[77]** **ಓ ನಂಬಿಕೆಯಿಲ್ಲದ ಮತ್ತು ಹಠವಾದಿಗಳಾದ ಜನರೇ! ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ. ನಿಮಗೆ ಸಾಸಿವೆಯ ಒಂದು ಕಾಳಿನಷ್ಟು ನಂಬಿಕೆ ಇದ್ದರೆ, ನೀವು ಈ ಪರ್ವತಕ್ಕೆ—'ಇಲ್ಲಿಂದ ಅಲ್ಲಿಗೆ ಹೊರಟು ಹೋಗು', ಎಂದು ಹೇಳುವಿರಾದರೆ, ಅದು ಹೊರಟುಹೋಗುವುದು!**

**ಮತ್ತು ಯಾವ ಕೆಲಸವೂ ನಿಮಗೆ ಅಸಾಧ್ಯವಾಗುವುದಿಲ್ಲ.**

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 17; ಆ. 17,20]

---

*ಎಂದರೆ ತುಪ್ಪದ ಸಿಹಿ ಸಜ್ಜಿಗೆ.—ಸಂ.

**(ವಿಶ್ವಾಸ ಹುಟ್ಟಿಸಿ ಶಿಷ್ಯರನ್ನು ಪವಿತ್ರರನ್ನಾಗಿ ಏಕೆ ಮಾಡಲಿಲ್ಲ?)**

**ಸಮೀಕ್ಷಕ:—**ಈಗ ಕ್ರೈಸ್ತರು—

'ಬನ್ನಿರಿ, ನಮ್ಮ ಮತದಲ್ಲಿ! ಪಾಪಗಳನ್ನು ಕ್ಷಮೆ ಮಾಡಿಸಿ ಕೊಳ್ಳಿರಿ! ಮುಕ್ತಿಯನ್ನು ಗಳಿಸಿರಿ!', ಎಂದು ಮೊದಲಾಗಿ, ಉಪದೇಶಿಸುತ್ತಾ ತಿರುಗುತ್ತಾರಲ್ಲ! ಅದೆಲ್ಲವೂ ಮಿಥ್ಯೆಯೇ ಆಗಿದೆ.

ಏಕೆಂದರೆ, **ಏಸುವಿನಲ್ಲಿ ಪಾಪವನ್ನು ಬಿಡಿಸುವ, ನಂಬಿಕೆಯನ್ನು ಮೂಡಿಸುವ ಮತ್ತು ಪವಿತ್ರಗೊಳಿಸುವ ಸಾಮರ್ಥ್ಯವಿದ್ದಿದ್ದರೆ, ತನ್ನ ಶಿಷ್ಯರ ಆತ್ಮಗಳನ್ನು ನಿಷ್ಪಾಪಗಳನ್ನಾಗಿಯೂ, ಶ್ರದ್ಧಾಳುಗಳನ್ನಾಗಿಯೂ, ಪವಿತ್ರವಾದುವುಗಳ ನ್ನಾಗಿಯೂ ಮಾಡುತ್ತಿರಲಿಲ್ಲವೇಕೆ?**

ಯಾರು ಏಸುವಿನ ಜೊತೆ–ಜೊತೆಯಲ್ಲಿಯೇ ತಿರುಗಾಡುತ್ತಿದ್ದರೋ, ಅವರನ್ನೂ ಕೂಡ, ಶುದ್ಧರನ್ನಾಗಿಯೂ, ನಂಬಿಕೆಯುಳ್ಳವರನ್ನಾಗಿಯೂ, ಕಲ್ಯಾಣ ಕಾರಿಗಳನ್ನಾಗಿಯೂ ಮಾಡಲಾರದೇ ಹೋದನು; ಎಂದ ಮೇಲೆ, ಅವನು ಮೃತ ನಾದ ಮೇಲೆ ಎಲ್ಲಿದ್ದಾನೋ ತಿಳಿಯದು? ಈ ಕಾಲದಲ್ಲಿ ಯಾವನನ್ನೂ ಪವಿತ್ರ ಗೊಳಿಸಲಾರನು!

**(ವಿಶ್ವಾಸರಹಿತ ಶಿಷ್ಯರಿಂದ ರಚಿತವಾದ 'ಇಂಜೀಲ್'' ಪ್ರಮಾಣಕ್ಕೆ ಅಯೋಗ್ಯ)**

ಏಸುವಿನ ಅನುಯಾಯಿಗಳು ಸಾಸಿವೆಯಷ್ಟು ನಂಬಿಕೆಯನ್ನೂ ಹೊಂದಿರದವ ರಾಗಿದ್ದರು! ಮತ್ತು ಅವರೇ ಈ **'ಇಂಜೀಲ್'** ಪುಸ್ತಕವನ್ನು ರಚಿಸಿದ್ದಾರೆ; ಎಂದ ಮೇಲೆ, ಇದರ ಪ್ರಾಮಾಣ್ಯವಾಗಲಾರದು!

ಏಕೆಂದರೆ, **ನಂಬಿಕೆಯಿಲ್ಲದವರೂ, ಅಪವಿತ್ರಾತ್ಮರೂ, ಅಧರ್ಮಿಗಳೂ ಆದ ಮಾನವರ ಲೇಖನದ ಮೇಲೆ ನಂಬಿಕೆಯನ್ನಿಡುವುದು ಆತ್ಮಕಲ್ಯಾಣವನ್ನಿಚ್ಛಿಸುವ ಮಾನವರ ಕಾರ್ಯವಲ್ಲ.**

ಮತ್ತು ಇವರಿಂದಲೇ, ಏಸುವಿನ ಈ ಮಾತು ಸತ್ಯವಾಗಿರುವುದಾದರೆ, ಯಾವ ಕ್ರೈಸ್ತನಲ್ಲಿಯೂ ಒಂದು ಸಾಸಿವೆಯ ಕಾಳಿನಷ್ಟೂ ಕೂಡ, ವಿಶ್ವಾಸವು, ಎಂದರೆ ನಂಬಿಕೆಯು ಇಲ್ಲವೆಂದೂ ಕೂಡ, ಸಿದ್ಧವಾಗಬಲ್ಲದು.

**(ವಿಶ್ವಾಸೀ ಕ್ರೈಸ್ತರು ಪರ್ವತವನ್ನು ದೂರ ಸರಿಸಬಲ್ಲರೇನು?)**

ಯಾವನೇ ಅವರೊಬ್ಬನು—'ನಮ್ಮಲ್ಲಿ ಪೂರ್ಣ ಅಥವಾ ಸ್ವಲ್ಪ ನಂಬಿಕೆ ಯಿದೆ.', ಎನ್ನುವನಾದರೆ, ಅವನಿಗೆ—'ಈ ಪರ್ವತವನ್ನು ಮಾರ್ಗದಿಂದ ದೂರ ಜರುಗಿಸು.', ಎಂದು ಹೇಳಬೇಕು.

ಅವನು ಜರುಗಿಸುವುದರಿಂದ, [ಪರ್ವತವು] ಜರುಗಿ ಹೋದರೂ ಕೂಡ, ಅದು **ಪೂರ್ಣವಾದ** ನಂಬಿಕೆಯಲ್ಲ; ಆದರೆ, ಒಂದು **ಸಾಸಿವೆಯ ಕಾಳಿಗೆ** ಸಮ ನಾದಷ್ಟು ಮಾತ್ರ!

ಮತ್ತು ಜರುಗಿಸಲಾರದೇ ಹೋದರೆ, ಒಂದು ತುಣುಕಿನಷ್ಟೂ ಕೂಡ, ನಂಬಿಕೆ, ವಿಶ್ವಾಸ, ಎಂದರೆ, ಧರ್ಮ ಕ್ರೈಸ್ತರಲ್ಲಿಲ್ಲ, ಎಂದು ತಿಳಿಯಿರಿ!

## (ಅಸಂಭವ ಮಾತುಗಳನ್ನು ಹೇಳುವುದರಿಂದ ಏಸುವಿನ ಅಜ್ಞಾನತೆ ಪ್ರಕಟವಾಗುತ್ತದೆ)

ಯಾವನಾದರೂ—'ಈ ಸ್ಥಳದಲ್ಲಿ ಅಭಿಮಾನ ಮೊದಲಾದ ದೋಷಗಳ ಹೆಸರು ಪರ್ವತ'*, ಎಂದು ಹೇಳುವನಾದರೆ, ಅದೂ ಕೂಡ, ಸರಿಯಲ್ಲ!

ಏಕೆಂದರೆ, ಹೀಗಾಗಿದ್ದರೆ, ಹೆಣಗಳು, [ಮತ್ತು] ಕುರುಡರು, ಕುಷ್ಠರೋಗಿ ಗಳು, ಭೂತಗ್ರಸ್ತರು ಇವರನ್ನು ಸ್ವಸ್ಥರನ್ನಾಗಿಮಾಡುವ ಮೂಲಕ ಸೋಮಾರಿ ಗಳಿಗೂ, ಕುರುಡರಿಗೂ, ಕುಷ್ಠರೋಗಿಗಳಿಗೂ, ವಿಷಯಾಸಕ್ತರಿಗೂ ಮತ್ತು ಭ್ರಾಂತ ರಿಗೂ ಜ್ಞಾನವನ್ನುಂಟುಮಾಡಿ, ಜಾಗ್ರತರನ್ನಾಗಿಯೂ, ಕುಶಲರನ್ನಾಗಿಯೂ ಮಾಡಿರಬಹುದಷ್ಟೇ, ಎಂದು ಹೀಗೆ ಒಪ್ಪಿದರೂ: ಅದೂ ಕೂಡ, ಸರಿಯಲ್ಲ!

ಏಕೆಂದರೆ, ಹೀಗೆಯೇ ಇದ್ದಲ್ಲಿ, ತನ್ನ ಸ್ವತಃ ಶಿಷ್ಯರನ್ನು ಹಾಗೆ ಮಾಡಲು ಶಕ್ತನಾಗಲಿಲ್ಲವೇಕೆ?

**ಆದುದರಿಂದ, ಅಸಂಭವವಾದ ಮಾತನ್ನಾಡುವುದು ಏಸುವಿನ ಅಜ್ಞಾನತ್ವ ವನ್ನು ಪ್ರಕಾಶಪಡಿಸುತ್ತದೆ.**

---

*ಮಹರ್ಷಿ ದಯಾನಂದರಿಂದ ತಂತ್ರಗಳು, ಜೈನ–ಬೌದ್ಧಗ್ರಂಥಗಳು, ಬೈಬಲ್, ಕುರಾನ್ ಮೊದಲಾದ ಮತೀಯರ ಗ್ರಂಥಗಳಲ್ಲಿನ ಜ್ಞಾನವಿರುದ್ಧ ಮಾತುಗಳ ಖಂಡನೆಯನ್ನು ತಮ್ಮ ಪ್ರವಚನಗಳಲ್ಲೂ, ಶಾಸ್ತ್ರಾರ್ಥಗಳಲ್ಲೂ ಮಾಡಲಾರಂಭಿಸಿದ ಮೇಲೆ, ಆದರಿಂದ ಸಂಕೋಚಕ್ಕಿಡಾದ ಮತೀಯ ವಿದ್ವಾಂಸರು ತಮ್ಮ ಗ್ರಂಥಗಳಲ್ಲಿನ ಅವೈಜ್ಞಾನಿಕ, ಅಯಥಾರ್ಥ ಮಾತುಗಳ ಪರಂಪರಾಗತ ಸರಳ ಅರ್ಥಗಳನ್ನು ಬದಲಿಸಿ, ಯೌಗಿಕ, ಹಾಗೂ ಪಾರಿಭಾಷಿಕ ಅರ್ಥ ಗಳನ್ನು ಕಲ್ಪಿಸಿಕೊಂಡು, ತಮ್ಮ ಗ್ರಂಥಸ್ಥ ವಾಕ್ಯಗಳನ್ನೂ ಘಟನೆಗಳನ್ನೂ ಸಮರ್ಥಿಸ ತೊಡಗಿದರು.

ವಾಮಮಾರ್ಗಿಗಳು ಇಂತಹ ಪ್ರಯತ್ನವನ್ನು ಮೊದಲು ಮಾಡಿದರು. ನಂತರ, ಕ್ರೈಸ್ತರು; ಮತ್ತೆ, ಮುಸಲ್ಮಾನರು! 'ಸತ್ಯಾರ್ಥಪ್ರಕಾಶ'ವು ಪ್ರಕಟಿತವಾದ ಮೇಲೆ, ಕ್ರೈಸ್ತ ಮತ್ತು ಮುಸಲ್ಮಾನ ವಿದ್ವಾಂಸರು ತಮ್ಮ ಗ್ರಂಥಗಳಿಗೆ ಹೊಸ ಭಾಷ್ಯಗಳನ್ನೇ ಬರೆದು ಬಿಟ್ಟರು. ಈಗ, ಈ ಕೆಲಸವನ್ನು ಪೌರಾಣಿಕ ವಿದ್ವಾಂಸರು ತಮ್ಮ ಗ್ರಂಥಗಳ ಬಗೆಗೆ ಮಾಡುತ್ತಿದ್ದಾರೆ.
—ಸಂ.

### (ಇಂದಿನ ವಿದ್ಯೆಯ ಯುಗದಲ್ಲಿ ಏಸುವಿನದೇನು ಗಣನೆ?)

ಅಲ್ಲಾ! ಸ್ವಲ್ಪವಾದರೂ ವಿದ್ಯೆ ಏಸುವಿನಲ್ಲಿ ಇದ್ದಿದ್ದರೆ, ಇಂತಹ ತಲೆ-ಬಾಲಗಳಿಲ್ಲದ ಕಾಡಾಡಿತನದ ಮಾತುಗಳನ್ನು ಹೇಳುತ್ತಿದ್ದನೇತಕ್ಕೆ? ಆದರೂ, ಹೇಗೆ—

'ಯತ್ರ ದೇಶೇ ದ್ರುಮೋ ನಾಸ್ತಿ ತತ್ರೈರಂಡೋಽಪಿ ದ್ರುಮಾಯತೇ.'

ಯಾವ ದೇಶದಲ್ಲಿ ಯಾವುದೇ ವೃಕ್ಷವೂ ಇಲ್ಲವೋ, ಆ ದೇಶದಲ್ಲಿ ಹರಳಿನ ಗಿಡವೇ ಎಲ್ಲಕ್ಕಿಂತ ದೊಡ್ಡದು ಮತ್ತು ಒಳ್ಳೆಯದೆಂದು ಎಣಿಸಲ್ಪಡುತ್ತದೆ! ಹಾಗೆಯೇ, ಮಹಾಕಾಡಾಡಿಗಳಾದ [ಅವಿದ್ವಾಂಸರ] ದೇಶದಲ್ಲಿ ಏಸುವಿನ ಇರುವಿಕೆಯೂ ಸರಿಯಾಗಿದ್ದಿತು!

ಆದರೆ, ಈ ದಿನಗಳಲ್ಲಿ ಏಸುವಿನ ಗಣನೆಯಾದರೂ ಏನಾಗಬಲ್ಲದು? [77]

### (ಬಾಲಕನಂತಾಗದೇ ಸ್ವರ್ಗವಿಲ್ಲ)

[78] ನಾನು ನಿಮಗೆ ಸತ್ಯವನ್ನು ಹೇಳುತ್ತೇನೆಂದರೆ—

"ನೀವು ಮನಸ್ಸನ್ನು ಬದಲಾಯಿಸದೇ ಇದ್ದರೆ, ಮತ್ತು ಬಾಲಕರಿಗೆ ಸಮಾನರಾಗಿ ಆಗದೇ ಇದ್ದರೆ, ಸ್ವರ್ಗದ ರಾಜ್ಯದಲ್ಲಿ ಪ್ರವೇಶಿಸಲಾರಿರಿ."

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 18; ಆ. 3]

### (ವಿದ್ಯಾ-ವಿರುದ್ಧ ಮಾತುಗಳನ್ನು ಬಾಲಬುದ್ಧಿಗಳೇ ಒಪ್ಪಬಲ್ಲರು)

**ಸಮೀಕ್ಷಕ:**—ತನ್ನ ಇಚ್ಛೆಯಿಂದಲೇ ಮನಸ್ಸನ್ನು ತಿರುಗಿಸುವುದು ಸ್ವರ್ಗದ ಕಾರಣವೂ; ಮತ್ತು ತಿರುಗಿಸದಿರುವುದು ನರಕದ ಕಾರಣವೂ ಆಗಿರುವುದಾದರೆ, ಯಾವನೂ ಯಾವನ ಪಾಪ-ಪುಣ್ಯಗಳನ್ನೂ ಯಾವ ಕಾಲಕ್ಕೂ ತೆಗೆದುಕೊಳ್ಳಲಾರನು, ಎಂದು ಸಿದ್ಧವಾಗುತ್ತದೆ.

ಮತ್ತು ಬಾಲಕನಿಗೆ ಸಮಾನರಾಗಬೇಕೆಂಬ ಬರೆಹದಿಂದ, ಏಸುವಿನ ಮಾತುಗಳು ವಿದ್ಯೆ ಮತ್ತು ಸೃಷ್ಟಿಕ್ರಮಕ್ಕೆ ಬಹಳ ವಿರುದ್ಧವಾಗಿದ್ದವೆಂದು ವಿದಿತವಾಗುತ್ತದೆ. ಮತ್ತು ಅವನ ಮನಸ್ಸಿನಲ್ಲಿ—'ಜನರು ನನ್ನ ಮಾತುಗಳನ್ನು ಬಾಲಕರಂತೆ ಒಪ್ಪಿಕೊಂಡುಬಿಡಲಿ! ಕೇಳುವುದು-ಹೇಳುವುದು ಏನೂ ಬೇಡ! ಕಣ್ಣುಗಳನ್ನು ಮುಚ್ಚಿಕೊಂಡು ಅಂಗೀಕರಿಸಿಬಿಡಲಿ!', ಎಂದೂ ಕೂಡ ಇದ್ದಿತು.

ಬಹುಮಂದಿ ಕ್ರೈಸ್ತರ ನಡವಳಿಕೆ ಬಾಲಬುದ್ಧಿಗೆ ತಕ್ಕಂತೆ ಇದೆ! ಇಲ್ಲದಿದ್ದರೆ, ಇಂತಹ ಯುಕ್ತಿ, ವಿದ್ಯೆಗೆ ವಿರುದ್ಧವಾದ ಮಾತುಗಳನ್ನು ಒಪ್ಪುತ್ತಿದ್ದರೇಕೆ ?

ಮತ್ತು ಏಸುವು, ತಾನೇ ವಿದ್ಯಾಹೀನನೂ, ಬಾಲಬುದ್ಧಿಯೂ ಆಗಿರದಿದ್ದರೆ, ಬೇರೆಯವರಿಗೆ ಬಾಲಕರಂತೆ ಆಗುವ ಉಪದೇಶವನ್ನು ಏಕೆ ಮಾಡುತ್ತಿದ್ದನು?

ಏಕೆಂದರೆ, ಯಾವನು ಹೇಗೆ ಇರುತ್ತಾನೋ, ಅವನು ಬೇರೆಯವನನ್ನೂ ಕೂಡ, ತನ್ನ ಹಾಗೆಯೇ ಮಾಡಲು ಅಪೇಕ್ಷಿಸಿಯೇ ತೀರುತ್ತಾನೆ!* [78]

## (ಈಶ್ವರನ ರಾಜ್ಯದಲ್ಲಿ ಧನವಂತರ ಪ್ರವೇಶವಿಲ್ಲ)

**[79]** ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ.—'ಧನವಂತರು ಸ್ವರ್ಗದ ರಾಜ್ಯದಲ್ಲಿ ಪ್ರವೇಶಿಸುವುದು ಕಠಿಣವಾಗುವುದು'.

ಮತ್ತೂ ಕೂಡ, ನಾನು ನಿಮಗೆ ಹೇಳುತ್ತೇನೆ.—'ಈಶ್ವರನ ರಾಜ್ಯದಲ್ಲಿ ಧನವಂತನು ಪ್ರವೇಶಿಸುವುದಕ್ಕಿಂತ, ಒಂಟೆಯು ಸೂಜಿಯ ಕಣ್ಣಿನಲ್ಲಿಂದ ತೂರಿ ಹೋಗುವುದು ಸಹಜ.'

[ಬೈಬಲ್ (ಇಂ). ಮ್ಯಾಥ್ಯೂ:—ಪರ್ವ. 19. ಆ. 23, 24]

**ಸಮೀಕ್ಷಕ:**—ಇದರಿಂದ, ಏಸು ದರಿದ್ರನಾಗಿದ್ದನೆಂದು ಸಿದ್ಧವಾಗುತ್ತದೆ! ಧನವಂತರಾದ ಜನರು ಅವನನ್ನು ಗೌರವಿಸದೇ ಇದ್ದಿರಬಹುದು! ಆದುದರಿಂದ, ಇದನ್ನು ಬರೆದಿರಬಹುದು! ಆದರೆ, ಈ ಮಾತು ಸತ್ಯವಲ್ಲ.

ಏಕೆಂದರೆ, ಧನಾಢ್ಯರಲ್ಲಿಯೂ, ಮತ್ತು ದರಿದ್ರರಲ್ಲಿಯೂ ಕೂಡ, ಒಳ್ಳೆಯವರೂ-ಕೆಟ್ಟವರೂ ಇರುತ್ತಾರೆ.

ಯಾವನು ಒಳ್ಳೆಯ ಕೆಲಸ ಮಾಡುತ್ತಾನೋ, ಅವನು ಒಳ್ಳೆಯ, ಮತ್ತು ಯಾವನು ಕೆಟ್ಟಕೆಲಸವನ್ನು ಮಾಡುವನೋ, ಅವನು ಕೆಟ್ಟ ಫಲವನ್ನು ಪಡೆದು ಕೊಳ್ಳುತ್ತಾನೆ.

## (ಈಶ್ವರನ ರಾಜ್ಯವು ಸರ್ವತ್ರ ಇರಲಿಲ್ಲವೇನು?)

ಮತ್ತು ಇದರಿಂದ, ಏಸುವು ಈಶ್ವರನ ರಾಜ್ಯವನ್ನು ಯಾವುದೋ ಒಂದು ದೇಶದಲ್ಲಿದೆ, ಎಂದು ತಿಳಿಯುತ್ತಿದ್ದನು; ಸರ್ವತ್ರವಲ್ಲ, ಎಂದೂ ಕೂಡ, ಸಿದ್ಧವಾಗುತ್ತದೆ. ಹೀಗೆ ಇರುವುದಾದರೆ, ಅವನು ಈಶ್ವರನೇ ಅಲ್ಲ!

---

*ಸಂಪ್ರದಾಯ-ಪ್ರವರ್ತನೆ, ಮತಗಳು, ಮಠಾಧಿಪತಿಗಳು, ಮತ್ತು ಅವರ ಹಿಂಬಾಲಕರು ಹೀಗೆಯೇ ಆದವರು! ಆದ್ದರಿಂದಲೇ, ಮಹರ್ಷಿ ದಯಾನಂದರು ಯಾವ ಸಂಪ್ರದಾಯವನ್ನೂ ಪ್ರವರ್ತಿಸಲಿಲ್ಲ; ಯಾವ ಮಠವನ್ನೂ ಕಟ್ಟಲಿಲ್ಲ!—ಸಂ.

ಯಾವನು ಈಶ್ವರನಾಗಿದ್ದಾನೋ, ಅವನ ರಾಜ್ಯ ಎಲ್ಲೆಡೆಯೂ ಇದೆ ! ಎಂದ ಮೇಲೆ, 'ಅದರಲ್ಲಿ ಪ್ರವೇಶಿಸುವನು, ಅಥವಾ ಪ್ರವೇಶಿಸುವುದಿಲ್ಲ', ಎಂದು ಹೇಳುವುದು ಕೇವಲ ಅವಿದ್ಯೆಯ ಮಾತಾಗಿರುತ್ತದೆ !

## (ಏಸುವಿನ ಹೇಳಿಕೆಯಂತೆ ಧನಿಕ ಕ್ರೈಸ್ತರೆಲ್ಲಾ ನರಕಕ್ಕೆ ಹೋಗಿರಬೇಕು)

ಮತ್ತು ಇದರಿಂದ, 'ಎಷ್ಟು ಜನ ಕ್ರೈಸ್ತರು ಧನಾಢ್ಯರಾಗಿದ್ದಾರೋ, ಅವರೆಲ್ಲರೂ ನರಕಕ್ಕೇ ಹೋಗುವರೇನು ?' ಮತ್ತು 'ದರಿದ್ರರೆಲ್ಲಾ ಸ್ವರ್ಗಕ್ಕೇ ಹೋಗುವರೇನು?', ಎಂಬ [ಪ್ರಶ್ನೆಯೂ ಕೂಡ], ಏಳುತ್ತದೆ.

ಅಲ್ಲಾ! ಧನಾಢ್ಯರ ಬಳಿ ಎಷ್ಟು ಸಾಮಗ್ರಿಗಳಿರುತ್ತವೋ, ಅಷ್ಟು ದರಿದ್ರರ ಬಳಿ ಇರುವುದಿಲ್ಲ, ಎಂದು ಏಸು ಪ್ರವಾದಿಯು ಸ್ವಲ್ಪವಾದರೂ ಯೋಚಿಸಬಹುದಿತ್ತು! ಧನಾಢ್ಯರಾದ ಜನರು ವಿವೇಕದಿಂದ ಧರ್ಮಮಾರ್ಗದಲ್ಲಿ ವ್ಯಯಿಸುವರಾದರೆ, ದರಿದ್ರರು ನೀಚಗತಿಯಲ್ಲಿ [ಏಕೆ] ಉಳಿದು ಹೋಗಬೇಕು ?

ಮತ್ತು ಧನಾಢ್ಯರು ಉತ್ತಮ ಗತಿಯನ್ನು ಹೊಂದಬಲ್ಲರು! [79]

## (ಕ್ರೈಸ್ತರಿಗೆ ಸ್ವರ್ಗದಲ್ಲಿ ಸಿಂಹಾಸನ; ತ್ಯಾಗದಿಂದ ನೂರರಷ್ಟು ಫಲ)

**[80] ಏಸುವು ಅವರಿಗೆ ಹೇಳಿದನು. ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ—**

**"ಹೊಸ ಸೃಷ್ಟಿಯಲ್ಲಿ ಯಾವಾಗ ಮಾನವನ ಪುತ್ರನು ತನ್ನ ಐಶ್ವರ್ಯದ ಸಿಂಹಾಸನದ ಮೇಲೆ ಕುಳಿತುಕೊಳ್ಳುವನೋ, ಆಗ ನನ್ನನ್ನು ಹಿಂಬಾಲಿಸಿ ಬಂದಿರುವ ನೀವೂ ಕೂಡ, ಹನ್ನೆರಡು ಸಿಂಹಾಸನಗಳ ಮೇಲೆ ಕುಳಿತು, ಇಸ್ರಾಏಲದ ಹನ್ನೆರಡು ಕುಲಗಳ ಮೇಲೆ ನ್ಯಾಯಮಾಡುವಿರಿ!**

**"ಯಾವ ಯಾವನು ನನ್ನ ಹೆಸರಿಗಾಗಿ ಮನೆಗಳನ್ನು, ಅಥವಾ ಸೋದರರನ್ನು, ಅಥವಾ ತಾಯಿ-ತಂದೆಗಳನ್ನು, ಅಥವಾ ಹೆಂಡತಿಯರನ್ನು, ಅಥವಾ ಮಕ್ಕಳನ್ನು, ಅಥವಾ ಭೂಮಿಯನ್ನು ತ್ಯಜಿಸಿದ್ದಾನೋ, ಅವನು ನೂರರಷ್ಟು ಪಡೆದುಕೊಳ್ಳುವನು. ಮತ್ತು ಅನಂತಜೀವನದ ಅಧಿಕಾರಿಯಾಗುವನು."***

**[ಬೈಬಲ್ (ಇಂ). ಮ್ಯಾಥ್ಯೂ:—ಪರ್ವ. 19. ಆ. 28, 29]**

## (ಸ್ವರ್ಗದಲ್ಲಿ ಕ್ರೈಸ್ತರಿಗೇ ಸಿಂಹಾಸನದ ಮಾತು ಪಕ್ಷಪಾತ)

**ಸಮೀಕ್ಷಕ:**—ಈಗ ನೋಡಿರಿ, ಏಸುವಿನ ಆಂತರಿಕ ಲೀಲೆಯನ್ನು! ಎಂದರೆ, ತನ್ನ ಜಾಲದಿಂದ, [ತಾನು] ಸತ್ತಮೇಲೆಯೂ ಕೂಡ, ಜನರು ಹೊರಬೀಳಬಾರದು !

---

*ಸಂಪ್ರದಾಯ–ಪ್ರವರ್ತಕರು, ಮಠಾಧೀಶರೆಲ್ಲ ಹೀಗೆ ಹೇಳಿಯೇ, ಅನುಯಾಯಿಗಳ ಹಿಂಡನ್ನು ಒದಗಿಸಿಕೊಂಡಿರುವುದು!—ಸಂ.

ಮತ್ತು ಯಾವನು 30 ರೂಪಾಯಿಗಳ ಲೋಭದಿಂದ ತನ್ನ ಗುರುವನ್ನು ಹಿಡಿಸಿ, ಸಾಯಿಸಿದನೋ, ಅವನಂತಹ ಪಾಪಿಗಳೂ ಕೂಡ, ಇವನ ಹತ್ತಿರ ಸಿಂಹಾಸನದ ಮೇಲೆ ಕುಳಿತುಕೊಳ್ಳುವರು!

## (ಇಸ್ರಾಯಿಲ್ ಕುಲದ ನ್ಯಾಯವನ್ನೇಕೆ ಮಾಡಲಾಗದು?)

ಮತ್ತು ಇಸ್ರಾಯಿಲ್ ಕುಲದ ನ್ಯಾಯವು ಪಕ್ಷಪಾತದ ಕಾರಣದಿಂದಾಗಿ ಮಾಡಲ್ಪಡುವುದೇ ಇಲ್ಲ ! ಮತ್ತು ಅವರ ಅಪರಾಧಗಳೆಲ್ಲಾ ಕ್ಷಮಿಸಲ್ಪಡುವುವು ! ಮತ್ತು ಬೇರೆ ಕುಲಗಳ ನ್ಯಾಯವನ್ನು ಮಾಡುವರು!

ಇದೇ ಕಾರಣದಿಂದ, ಕ್ರೈಸ್ತರು ಕ್ರೈಸ್ತರುಗಳ ಬಗೆಗೆ ಬಹಳ ಪಕ್ಷಪಾತ ಮಾಡಿ, ಯಾವನಾದರೂ ಬಿಳಿಯನು* ಕರಿಯವನನ್ನು† ಸಂಹರಿಸಿಯೋ ಬಿಟ್ಟಿದ್ದರೂ ಕೂಡ, ಬಹುತೇಕವಾಗಿ ಪಕ್ಷಪಾತದಿಂದ ನಿರಪರಾಧಿಯೆಂದು ತೀರ್ಮಾನಿಸಿ ಬಿಟ್ಟುಬಿಡುತ್ತಾರೆ, ಎಂದು ಊಹಿಸಬಹುದಾಗಿದೆ!‡

ಹೀಗೆಯೇ ಏಸುವಿನ ಸ್ವರ್ಗದ ನ್ಯಾಯವೂ ಇರಬಹುದು!

---

*ಎಂದರೆ, ಆಂಗ್ಲನು.—ಸಂ.

†ಎಂದರೆ, ಭಾರತೀಯನನ್ನು.—ಸಂ.

‡ಆಂಗ್ಲರ ಆಡಳಿತದ ಬ್ರಿಟಿಷ್ ಭಾರತದ ಪ್ರಾಂತಗಳಲ್ಲಿ ಪರಿಸ್ಥಿತಿ ಹೀಗೆಯೇ ಇದ್ದಿತು. ಈ ಮಾತನ್ನು ಜಾಲಂಧರದ ಒಂದು ಸಭೆಯಲ್ಲಿ ಆಂಗ್ಲರೆದುರಿಗೇ ಮಹರ್ಷಿ ದಯಾನಂದರು ಹೇಳಿ, ಛೀಮಾರಿ ಹಾಕುವಷ್ಟು ನಿರ್ಭೀಕತೆ ತೋರಿಸಿದ್ದರು. 1857ನೇ ಇಸವಿಯ ಸ್ವಾತಂತ್ರ್ಯ ಸಮರಕ್ಕೆ ಇದೂ ಒಂದು ಕಾರಣವಾಗಿದ್ದಿತು. ಈ ತರಹದ ಅನ್ಯಪ್ರಸಂಗಗಳಿಗೆ, ಪಂ. ಲೇಖರಾಮ್ ಬರೆದ 'ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'ವನ್ನು ಓದಿ. ಕೆಳಗೆ ಒಂದು ಘಟನೆಯನ್ನು ಮಾತ್ರ ಕೊಡಲಾಗಿದೆ—

ದಿನಾಂಕ 18 9.1877ರಂದು ಜಾಲಂಧರ್‌ನಲ್ಲಿ ಪ್ರವಚನ ನೀಡುತ್ತಾ ಮಹರ್ಷಿ ದಯಾನಂದರು ಹೀಗೆಂದರು—

"ಈ ಕಾಲದಲ್ಲಿ ನಮ್ಮ ದೇಶದ ರಾಜರ ಸ್ಥಿತಿ ಏನಾಗಿದೆ? ಆಂಗ್ಲರು ತಮ್ಮ ಜಾತಿಯ ಮನುಷ್ಯರ ಬಗ್ಗೆ ಬಹಳ ದಯೆ ತೋರುತ್ತಾರೆ. ಯಾವನಾದರೂ ಬಿಳಿ ಮನುಷ್ಯನು ಅಥವಾ 'ಫಿರಂಗಿ'ಯು ಭಾರತವಾಸಿಯನ್ನು ಕೊಲೆಮಾಡಿ, ನ್ಯಾಯಾಲಯದಲ್ಲಿ—'ನಾನು ಕೊಲೆಮಾಡುವ ಸಮಯದಲ್ಲಿ ಮದ್ಯಪಾನ ಮಾಡಿದ್ದೆ', ಎಂದು ಹೇಳಿಕೆ ಕೊಟ್ಟು ಬಿಟ್ಟರೆ, ಅವನನ್ನು ಬಿಡುಗಡೆ ಮಾಡಿಬಿಡುತ್ತಾರೆ! ಇದು ಮಹಾ ಅನ್ಯಾಯ!

"ದುರ್ಯೋಧನನ ಸ್ಥಿತಿಯೂ ಹೀಗೆಯೇ ಇದ್ದಿತು. ಅವನ ಕಣ್ಣುಗಳು ತನ್ನ ಸ್ಥಾನದಿಂದ ಮೇಲೇರಿ. ಹಣೆಯ ಮೇಲೆ ಹೋದಾಗ, ಅವನ ರಾಜ್ಯ ನಾಶವಾಯಿತು!

"ಲಕ್ನೋದಲ್ಲಿ ಸಿಪಾಯಿ ವಿದ್ರೋಹದ ಸಂದರ್ಭದಲ್ಲಿ ಜನರು ಸ್ವಲ್ಪ ಆಂಗ್ಲರನ್ನು ಕೊಂದಾಗ, ಅದಕ್ಕೆ ಮುಯ್ಯಿ ತೀರಿಸುವ ಸಲುವಾಗಿ, ಬಹಳ ಮಂದಿ ಅಜ್ಞಾನೀ ಮತ್ತು ಅನಾಥ →

**(ಒಂದೇ ಜೊತೆ ಎಲ್ಲರ ನ್ಯಾಯವಾಗುವುದು ಅನ್ಯಾಯ)**

ಮತ್ತು ಇದರಿಂದ ದೊಡ್ಡ ದೋಷ ಉಂಟಾಗುತ್ತದೆ. ಏಕೆಂದರೆ, ಒಬ್ಬನು ಸೃಷ್ಟಿಯ ಆದಿಯಲ್ಲಿ ಸತ್ತನು; ಮತ್ತೊಬ್ಬನು ಪ್ರಳಯದ ರಾತ್ರಿಯ ಹತ್ತಿರದ ದಿನ ಸತ್ತನು! ಒಬ್ಬನಂತೂ ಆದಿಯಿಂದ ಅಂತದವರೆಗೆ 'ಎಂದಿಗೆ ನ್ಯಾಯವಾಗುವುದೋ', ಎಂಬ ನಿರೀಕ್ಷಣೆಯಲ್ಲಿಯೇ ಬಿದ್ದಿದ್ದನು. ಮತ್ತು ಇನ್ನೊಬ್ಬನ ನ್ಯಾಯವು ಆ ಸಮಯದಲ್ಲಿಯೇ ಆಗಿಹೋಯಿತು! ಇದೆಷ್ಟು ದೊಡ್ಡ ಅನ್ಯಾಯ?

**(ಸದಾ ಸ್ವರ್ಗ-ನರಕ ಪ್ರಾಪ್ತಿ ದೋಷಪೂರ್ಣ)**

ಮತ್ತು ಯಾವನು ನರಕಕ್ಕೆ ಹೋಗುವನೋ, ಅವನು ಅನಂತಕಾಲದವರೆಗೆ ನರಕವನ್ನು ಅನುಭವಿಸುವನು! ಮತ್ತು ಯಾವನು ಸ್ವರ್ಗಕ್ಕೆ ಹೋಗುವನೋ, ಅವನು ಸದಾ ಸ್ವರ್ಗವನ್ನು ಅನುಭವಿಸುವನು! ಇದೂ ಕೂಡ, ದೊಡ್ಡ ಅನ್ಯಾಯವಾಗಿದೆ !

ಏಕೆಂದರೆ, **ಕೊನೆಯುಳ್ಳ ಸಾಧನದ ಮತ್ತು ಕರ್ಮಗಳ ಫಲವು ಕೊನೆಯನ್ನುಳ್ಳದ್ದೇ ಆಗಿರಬೇಕು!**

**(ಎಲ್ಲರ ಕರ್ಮ ಸಮಾನವಿಲ್ಲದಾಗ ಫಲ ಹೇಗೆ ಸಮಾನ?)**

ಮತ್ತು **ಯಾವುದೇ ಎರಡು ಆತ್ಮಗಳ ಪಾಪ ಅಥವಾ ಪುಣ್ಯ ಎಂದಿಗೂ ಸಮಾನವಾಗಿರಲಾರದು.** ಆದಕಾರಣ, ತಾರತಮ್ಯಾನುಸಾರ, ಹೆಚ್ಚು ಅಥವಾ ಕಡಿಮೆ ಸುಖ-ದುಃಖಸಹಿತವಾದ ಅನೇಕ ಸ್ವರ್ಗಗಳು ಮತ್ತು ನರಕಗಳು ಇರಬೇಕು ! ಆಗಮಾತ್ರ [ಕರ್ಮಕ್ಕನುಸಾರವಾಗಿ] ಸುಖ-ದುಃಖಗಳನ್ನು ಅನುಭವಿಸಲಾದೀತು! ಹೀಗೆ, ಕ್ರೈಸ್ತರ ಪುಸ್ತಕದಲ್ಲಿ ಎಲ್ಲಿಯೂ ವ್ಯವಸ್ಥೆಯಿಲ್ಲ.

**ಆದುದರಿಂದ, ಈ ಪುಸ್ತಕವು ಈಶ್ವರಕೃತವಲ್ಲ! ಏಸುವು ಈಶ್ವರನ ಮಗನೆಂದಿಗೂ ಆಗಲಾರನು!**

**(ಸ್ವರ್ಗದಲ್ಲಿ ಪ್ರತಿವಸ್ತುವಿಗೆ ನೂರರಷ್ಟು ಸಿಗುವುದು ಹಾಸ್ಯಜನಕ)**

ಮಹಾನ್ ಅನರ್ಥದ ಸಂಗತಿ ಏನಾಗಿದೆಯೆಂದರೆ, ಎಂದಿಗೂ ಯಾವನಿಗೂ ತಾಯಿ-ತಂದೆಗಳು ನೂರು ನೂರು ಮಂದಿ ಇರಲಾರರು. ಆದರೆ, ಒಬ್ಬನಿಗೆ ಒಬ್ಬನೇ ತಾಯಿ ಇರುತ್ತಾಳೆ; ಮತ್ತು ಒಬ್ಬನೇ ತಂದೆ ಇರುತ್ತಾನೆ.

---

→ಭಾರತೀಯರನ್ನು ಇಂಗ್ಲಿಷರು ಕೊಂದು ಹಾಕಿದರು. ಈ ರೀತಿ, ಈ ಶಾಸಕರು ಅನ್ಯಾಯ ಮಾಡುತ್ತಾ ಹೋದರೆ, ಅವರ ರಾಜ್ಯವೂ ಕೂಡ, ಹೆಚ್ಚು ದಿನ ನಡೆಯುವುದಿಲ್ಲ."

["ಮಹರ್ಷಿ ದಯಾನಂದ ಕಾ ಜೀವನಚರಿತ್ರ"—ಪಂ. ಲೇಖರಾಮ್; ಪುಟ. 355]
—ಸಂ.

ಮುಸಲ್ಮಾನರು—'ಒಬ್ಬನಿಗೆ 72 ಮಂದಿ ನಾರಿಯರು ಸ್ವರ್ಗದಲ್ಲಿ ಸಿಕ್ಕುತ್ತಾರೆ', ಎಂದು ಬರೆದಿರುವುದನ್ನು ಇದರಿಂದಲೇ ತೆಗೆದುಕೊಂಡಿರಬಹುದು, ಎಂದು ತೋರುತ್ತದೆ. [80]

## (ಅತ್ತಿಯ ಮರಕ್ಕೆ ಶಾಪ)

[81] ಮುಂಬೆಳಗು ಅವನು ನಗರಕ್ಕೆ ತಿರುಗಿ ಹೋಗುತ್ತಿದ್ದಾಗ, ಅವನಿಗೆ ಹಸಿವಾಯಿತು.

ಮತ್ತು ಮಾರ್ಗದಲ್ಲಿ ಒಂದು ಅತ್ತಿಯ ಮರವನ್ನು ನೋಡಿ, ಅವನು ಅದರ ಬಳಿಗೆ ಬಂದನು. ಆದರೆ, ಅದರಲ್ಲಿ, ಕೇವಲ ಎಲೆಗಳ ಹೊರತು, ಮತ್ತೇನನ್ನೂ ಪಡೆಯಲಿಲ್ಲ. ಮತ್ತು ಅದಕ್ಕೆ—

"ನಿನ್ನಲ್ಲಿ ಮತ್ತೆಂದಿಗೂ ಹಣ್ಣುಗಳು ಬಿಡುವುದಿಲ್ಲ.", ಎಂದು ಹೇಳಿದನು. ಇದರ ಮೇಲೆ, ಅತ್ತಿಯ ಮರ ಕೂಡಲೇ ಒಣಗಿ ಹೋಯಿತು.!

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ. 21; ಆ. 18-19]

## (ಮರಗಳಿಗೂ ಕೂಡ, ಶಾಪ ಕೊಡುವುದು ಕ್ರೋಧದ ಅತಿಮಿತಿ)

ಸಮೀಕ್ಷಕ:—ಸಮಸ್ತ ಪಾದರಿಗಳೂ, ಕ್ರೈಸ್ತರೂ ಅವನು* ಬಹಳ ಶಾಂತನೂ ಶಮಾನ್ವಿತನೂ ಮತ್ತು ಕ್ರೋಧವೇ ಮೊದಲಾದ ದೋಷಗಳಿಂದ ರಹಿತನೂ ಆಗಿದ್ದನೆಂದು ಹೇಳುತ್ತಾರೆ. ಆದರೆ, ಈ ವಿಷಯವನ್ನು ನೋಡಿದರೆ, ಏಸುವು ಕ್ರೋಧಿಯೂ. [ಮತ್ತು] ಋತುವಿನ ಜ್ಞಾನವಿಲ್ಲದವನೂ ಆಗಿದ್ದನು, ಮತ್ತು ಅವನು ಕಾಡುಮನುಷ್ಯತನದ ಸ್ವಭಾವದಿಂದ ಯುಕ್ತನಾಗಿ ವರ್ತಿಸುತ್ತಿದ್ದನು, ಎಂದು ತಿಳಿದು ಬರುತ್ತದೆ.

ಭಲೇ! ಅದಕ್ಕೆ ಶಾಪವನ್ನಿತ್ತನು, ಎನ್ನಲು, ಜಡ ಪದಾರ್ಥವಾಗಿದ್ದ ಆ ವೃಕ್ಷದ ಅಪರಾಧವೇನಿದ್ದಿತು? ಮತ್ತು ಅದು ಒಣಗಿಹೋಯಿತೇನು?

ಅವನ ಶಾಪದಿಂದಲಂತೂ ಒಣಗಿಹೋಗಿರಲಾರದು! ಆದರೆ, ಯಾವುದಾದರೂ ಅಂತಹ [ಘಾತಕವಾದ] ಔಷಧಿ ಹಾಕುವುದರಿಂದ ಒಣಗಿಹೋಗಿದ್ದರೆ, ಆಶ್ಚರ್ಯವೇನೂ ಇಲ್ಲ! [81]

## (ನಕ್ಷತ್ರಗಳ ಪತನ; ಆಕಾಶದ ಸೇನೆಯ ಸರಿಸುವಿಕೆ)

[82] ಆ ದಿನಗಳಲ್ಲಿ ಕ್ಲೇಶದ ನಂತರ, ಸೂರ್ಯನು ಕಾರ್ಗಪ್ಪಾಗಿ ಹೋಗುವನು. ಮತ್ತು ಚಂದ್ರನು ತನ್ನ ಜ್ಯೋತಿಯನ್ನು ಕೊಡುವುದಿಲ್ಲ. ನಕ್ಷತ್ರಗಳು

*ಎಂದರೆ, ಏಸುವು—ಸಂ.

ಆಕಾಶದಿಂದ ಬಿದ್ದು ಹೋಗುವುವು. ಮತ್ತು ಆಕಾಶದ ಸೇನೆ ಕದಡಿಹೋಗುವುದು!

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 24; ಆ. 29]

**ಸಮೀಕ್ಷಕ:**—ಛೇಷ್ ! ಏಸು ಮಹೋದಯರೇ ! ಯಾವ ವಿದ್ಯೆಯಿಂದ, ನಕ್ಷತ್ರಗಳು ಬಿದ್ದು ಹೋಗುವುದನ್ನು ತಾವು ತಿಳಿದಿರಿ? ಮತ್ತು ಕದಡಿಹೋಗುವಂತಹ ಆ ಆಕಾಶದ ಸೇನೆ ಯಾವುದು ?

ಎಂದಾದರೂ ಸ್ವಲ್ಪವಾದರೂ ವಿದ್ಯೆಯನ್ನು ಏಸುವು ಓದಿದ್ದರೆ—'ಈ ನಕ್ಷತ್ರಗಳೆಲ್ಲವೂ ಭೂಮಿಯ ಗೋಳಗಳಾಗಿವೆ; ಬೀಳುವುವಾದರೂ ಏಕೆ?', ಎಂದು ಅವಶ್ಯವಾಗಿ ತಿಳಿದುಕೊಳ್ಳುತ್ತಿದ್ದನು.

ಇದರಿಂದ, ತಿಳಿದುಬರುವುದೇನೆಂದರೆ—ಏಸುವು ಬಡಗಿಯ ಕುಲದಲ್ಲಿ ಹುಟ್ಟಿದ್ದನು. ಸದಾ ತೊಲೆಗಳನ್ನು ಸೀಳುವುದು, ತೊಗಟೆ ತೆಗೆಯುವುದು, ಕತ್ತರಿಸುವುದು, ಮತ್ತು ಜೋಡಿಸುವುದು, ಇವನ್ನು ಮಾಡುತ್ತಾ ಇದ್ದಿರಬಹುದು. 'ನಾನೂ ಕೂಡ, ಈ ಕಾಡುಜನರ ದೇಶದಲ್ಲಿ ಪ್ರವಾದಿಯಾಗಬಲ್ಲೆನು', ಎಂಬ ಹುರುಪು ಮೂಡಿದಾಗ, ಮಾತನಾಡತೊಡಗಿದನು!

**ಎಷ್ಟೋ ಮಾತುಗಳು ಅವನ ಬಾಯಿನಿಂದ ಒಳ್ಳೆಯವೂ ಹೊರಟವು; ಮತ್ತು ಬಹಳವಾಗಿ ತಪ್ಪಾದವೂ ಕೂಡ! ಅಲ್ಲಿನ ಜನರು ಅನಾಗರಿಕರಾಗಿದ್ದರು! ಒಪ್ಪಿಕೊಂಡು ಬಿಟ್ಟರು !!**

**ಈ ದಿನಗಳಲ್ಲಿ ಯೂರೋಪ್‌ದೇಶ ಉನ್ನತಿಯುಕ್ತವಾಗಿರುವ ಹಾಗೆ ಮೊದಲು ಇದ್ದಿದ್ದರೆ, ಇವನ ಸಿದ್ಧತ್ವ ಏನೇನೂ ನಡೆಯುತ್ತಿರಲಿಲ್ಲ! ಈಗ ಸ್ವಲ್ಪ ವಿದ್ಯೆ ಪ್ರಸರಿತವಾದ ಮೇಲೆಯೂ ಕೂಡ, ವ್ಯಾವಹಾರಿಕ ತೊಡಕು ಮತ್ತು ಹಠದಿಂದ ಈ ಪೊಳ್ಳು ಮತವನ್ನು ಬಿಡದೇ, ಸರ್ವಥಾ ಸತ್ಯವಾದ ವೇದಮಾರ್ಗದೆಡೆಗೆ ಒಲುತ್ತಿಲ್ಲ! ಇದೇ ಇವರಲ್ಲಿರುವ ನ್ಯೂನತೆಯಾಗಿದೆ.** [82]

**(ನನ್ನ ಮಾತುಗಳೆಂದಿಗೂ ತಪ್ಪಾಗದು)**

[83] **ಆಕಾಶ ಮತ್ತು ಪೃಥಿವೀ ಕದಲಿ ಹೋಗುವುವು! ಆದರೆ, ನನ್ನ ಮಾತುಗಳು ಎಂದಿಗೂ ತಪ್ಪಾಗುವುದಿಲ್ಲ!**

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 24; ಆ. 35]

## (ಆಕಾಶ ಕದಲುವುದೆಂದರೇನು?)

**ಸಮೀಕ್ಷಕ:**—ಈ ಮಾತೂ ಕೂಡ, ಅವಿದ್ಯೆಯ ಮತ್ತು ಮೂರ್ಖತೆಯದಾಗಿದೆ. ಅಲ್ಲಾ! ಆಕಾಶವು ಕದಲಿ ಎಲ್ಲಿಗೆ ಹೋಗುವುದು? ಆಕಾಶವು ಅತಿ ಸೂಕ್ಷ್ಮವಾಗಿರುವುದರಿಂದ, ನೇತ್ರಕ್ಕೆ ಕಾಣದಿರುವಾಗ, ಇದರ ಕದಲುವಿಕೆಯನ್ನು ಯಾವನು ನೋಡಬಲ್ಲನು?

ಮತ್ತು ತನ್ನ ಬಾಯಿನಿಂದ ತನ್ನ ಹಿರಿಮೆಯನ್ನು ತೋಡಿಕೊಳ್ಳುವುದು ಒಳ್ಳೆಯ ಮನುಷ್ಯರ ಕೆಲಸವಲ್ಲ! [83]

## (ಎಡಗಡೆಗೆ ಇರುವವರು ನರಕದ ಅನಂತವಾದ ಅಗ್ನಿಗೆ)

[84] ಆಗ ಅವನು ಎಡಗಡೆಗೆ ಇರುವವರಿಗೆ—

"ಓ ಅಭಿಶಪ್ತ ಜನರೇ! ಶೈತಾನನ ಮತ್ತು ಅವನ ದೂತರ ಸಲುವಾಗಿ ಸಿದ್ಧಗೊಳಿಸಲ್ಪಟ್ಟಿರುವ ಅನಂತವಾದ ಅಗ್ನಿಗೆ ನನ್ನ ಹತ್ತಿರದಿಂದ ಹೋಗಿರಿ.", ಎಂದು ಹೇಳುವನು.

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 25; ಆ. 41]

## (ಶಿಷ್ಯರನ್ನು ಸ್ವರ್ಗಕ್ಕೂ, ಇತರರನ್ನು ನರಕಕ್ಕೂ ಕಳಿಸುವುದು ಪಕ್ಷಪಾತ)

**ಸಮೀಕ್ಷಕ:**—ಅಲ್ಲಾ! ತನ್ನ ಶಿಷ್ಯರಾಗಿರುವವರನ್ನು ಸ್ವರ್ಗಕ್ಕೆ [ಕಳುಹಿಸುವುದು] ಮತ್ತು ಬೇರೆಯವರಾಗಿರುವವರನ್ನು ಅನಂತ ಅಗ್ನಿಯಲ್ಲಿ ಕೆಡಹುವುದು ಇದೆಷ್ಟು ದೊಡ್ಡ ಪಕ್ಷಪಾತದ ಮಾತಾಗಿದೆ? ಆದರೆ, ಆಕಾಶವೇ ಇರುವುದಿಲ್ಲವೆಂದು ಬರೆದಿರುವಾಗ, ಅನಂತ ಅಗ್ನಿ. ನರಕ, ಸ್ವರ್ಗ ಎಲ್ಲಿರುವುವು?

## (ಶೈತಾನನನ್ನು ವಶಪಡಿಸಿಕೊಳ್ಳದವನೆಂತಹ ಈಶ್ವರ?)

ಶೈತಾನನನ್ನೂ, ಮತ್ತು ಅವನ ದೂತರನ್ನೂ ಈಶ್ವರನು ಸೃಜಿಸದೇ ಇದ್ದಿದ್ದರೆ, ಇಷ್ಟೊಂದು ನರಕದ ಸನ್ನಾಹವನ್ನು ಏಕೆ ಮಾಡಬೇಕಾಗಿರುತ್ತಿದ್ದಿತು? ಮತ್ತು ಒಬ್ಬ ಶೈತಾನನೇ ಈಶ್ವರನ ಭಯದಿಂದ ಭೀತನಾಗಲಿಲ್ಲ, ಎಂದ ಮೇಲೆ, ಅವನು ಈಶ್ವರನೇ ಏನಾದನು ?

ಏಕೆಂದರೆ, [ಶೈತಾನನು] ಅವನ ದೂತನೇ ಆಗಿಯೂ ಕೂಡ, ದಂಗೆಕೋರನಾಗಿ ಹೋದನು !

ಮತ್ತು ಈಶ್ವರನು ಅವನನ್ನು ಮೊದಲೇ ಹಿಡಿದು, ಕಾರಾಗಾರದಲ್ಲಿ ಹಾಕಲೂ ಶಕ್ತನಾಗಲಿಲ್ಲ; ಕೊಲ್ಲಲೂ ಶಕ್ತನಾಗಲಿಲ್ಲ! ಮತ್ತೆ, ಅವನ ಈಶ್ವರತ್ವ ಏನಾಯಿತು ?

ಅವನು ಏಸುವಿಗೂ ಕೂಡ, ನಲವತ್ತು ದಿನ ದುಃಖವಿತ್ತನು ! ಏಸುವೂ ಅವನಿಗೆ ಏನನ್ನೂ ಮಾಡಲಾರದೇ ಹೋದನು, ಎಂದ ಮೇಲೆ [ಅವನು] 'ಈಶ್ವರನ ಪುತ್ರ'ನಾದುದು ವ್ಯರ್ಥವಾಯಿತು!

ಆದುದರಿಂದ, ಏಸುವು ಈಶ್ವರನ ಮಗನೂ ಅಲ್ಲ! ಮತ್ತು ಬೈಬಲಿನ ಈಶ್ವರನು ಈಶ್ವರನೂ ಆಗಲಾರನು! [84]

**(ಒಬ್ಬ ಶಿಷ್ಯನು ಲೋಭದಿಂದ ಏಸುವನ್ನು ಹಿಡಿಸಿಕೊಟ್ಟನು)**

[85] ಆಗ ಹನ್ನೆರಡು ಜನ ಶಿಷ್ಯರಲ್ಲಿ ಒಬ್ಬನಾದ 'ಯುಹೂದಾ ಇಸ್ಕರಿಯೋತಿ'* ಎಂಬ ಹೆಸರಿನ ಪುರುಷನು ಪ್ರಧಾನ ಯಾಜಕರ ಬಳಿಗೆ ಹೋದನು. ಮತ್ತು—

"ನಾನು ಏಸುವನ್ನು ತಮ್ಮಗಳ ಕೈಗೆ ಹಿಡಿಸಿಕೊಟ್ಟರೆ, ತಾವುಗಳು ನನಗೆ ಏನು ಕೊಡುವಿರಿ?", ಎಂದು ಕೇಳಿದನು.

ಅವರು ಅವನಿಗೆ ಮೂವತ್ತು ರೂಪಾಯಿಗಳನ್ನು ಕೊಡಲು ನಿರ್ಧರಿಸಿದರು.

[ಬೈಬಲ್ (ಇಂ). ವ್ಯಾ.ಥ್ಯೂ:-ಪರ್ವ. 26; ಆ. 14,15]

**(ಯಾವನ ಶಿಷ್ಯನೂ ಪವಿತ್ರನಾಗಲಿಲ್ಲವೋ,**
**ಅವನೆಂತಹ ಚಮತ್ಕಾರೀ ಪುರುಷ?)**

**ಸಮೀಕ್ಷಕ:**—ಈಗ ನೋಡಿರಿ ! ಏಸುವಿನ ಸಮಸ್ತ ಚಮತ್ಕಾರಗಳೂ, ಹಾಗೂ ಈಶ್ವರತ್ವವೂ ಇಲ್ಲಿ ಬಯಲಾಯಿತು! ಏಕೆಂದರೆ, ಯಾವನು ಅವನ ಪ್ರಧಾನ ಶಿಷ್ಯನಾಗಿದ್ದನೋ, ಅವನೂ ಕೂಡ, ಅವನ ಸಾಕ್ಷಾತ್ ಸಂಗದಿಂದ ಪವಿತ್ರಾತ್ಮನಾಗಲಿಲ್ಲ, ಎಂದ ಮೇಲೆ, ಅನ್ಯರನ್ನು, ಅವನು ಮೃತನಾದ ಮೇಲೆ, ಪವಿತ್ರಾತ್ಮರನ್ನಾಗಿ ಏನು ತಾನೇ ಮಾಡಬಲ್ಲನು? ಮತ್ತು ಅವನಲ್ಲಿ ನಂಬಿಕೆಯುಳ್ಳ ಜನರು ಅವನ ಭರವಸೆಯಿಂದ ಎಷ್ಟು ವಂಚಿಸಲ್ಪಡುತ್ತಾರೆ?

ಏಕೆಂದರೆ, ಯಾವನು ಸಾಕ್ಷಾತ್ ಸಂಬಂಧದಲ್ಲಿಯೂ ಶಿಷ್ಯನಿಗೆ ಏನು ಹಿತವನ್ನೂ ಮಾಡಲಿಲ್ಲವೋ, ಅವನು ಮೃತನಾದ ಮೇಲೆ, ಯಾವನಿಗಾದರೂ ಏನು ಕಲ್ಯಾಣವನ್ನು ತಾನೇ ಮಾಡಬಲ್ಲನು? [85]

**(ರೊಟ್ಟಿಯು ನನ್ನ ದೇಹ; ನೀರು ನನ್ನ ರಕ್ತ!)**

[86] ಯಾವಾಗ ಅವರು ಭುಂಜಿಸುತ್ತಿದ್ದರೋ, ಆಗ ಏಸುವು ರೊಟ್ಟಿಯನ್ನು ತೆಗೆದುಕೊಂಡು ಆಶೀರ್ವದಿಸಿದನು. ಮತ್ತು ಅದನ್ನು ಮುರಿದು, ಶಿಷ್ಯರಿಗೆ ಕೊಟ್ಟನು. ಮತ್ತು—

---

*Judas Iscariot

"ತೆಗೆದುಕೊಳ್ಳಿರಿ, ತಿನ್ನಿರಿ. ಇದು ನನ್ನ ದೇಹವಾಗಿದೆ.", ಎಂದನು.

ಮತ್ತು ಅವನು ಬಟ್ಟಲನ್ನು ತೆಗೆದುಕೊಂಡು, ವಂದಿಸಿದನು. ಮತ್ತು ಅವರಿಗೆ ಕೊಟ್ಟು—

"ನೀವೆಲ್ಲರೂ ಇದರಲ್ಲಿನಿಂದ ಕುಡಿಯಿರಿ.

"ಏಕೆಂದರೆ, ಇದು ನನ್ನ ರಕ್ತವಾಗಿದೆ. ಎಂದರೆ, ನೂತನ ನಿಯಮದ [ರಕ್ತ] ವಾಗಿದೆ", ಎಂದು ಹೇಳಿದನು.

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 26; ಆ. 26-28]

## (ಗುರುವಿನ ಮಾಂಸ-ರಕ್ತದಲ್ಲಿ ತಿನ್ನುವ-ಕುಡಿಯುವ ಭಾವನೆ ಅರಣ್ಯತ್ವ)

ಸಮೀಕ್ಷಕ:—ಅಲ್ಲಾ! ಯಾವನಾದರೂ ಸಭ್ಯನು ಇಂತಹ ಮಾತನ್ನಾಡುವ ನೇನು? ಅವಿದ್ವಾಂಸನೂ, ಕಾಡಾಡಿಯೂ ಆದ ಮನುಷ್ಯನ ಹೊರತು, ಬೇರೆ ಯಾವನೂ ತನ್ನ ಶಿಷ್ಯರಿಗೆ ಅವರು ತಿನ್ನುವ ವಸ್ತು ತನ್ನ ಮಾಂಸ; ಹಾಗೂ ಕುಡಿಯುವ ವಸ್ತುಗಳು ತನ್ನ ರಕ್ತ. ಎಂದು ಹೇಳಲಾರನು!

ಮತ್ತು ಇದೇ ಮಾತನ್ನು ಈ ಕಾಲದ ಕ್ರೈಸ್ತರುಗಳು 'ಪ್ರಭು ಭೋಜನ', ಎನ್ನುತ್ತಾರೆ ! ಎಂದರೆ, ತಿನ್ನುವ-ಕುಡಿಯುವ ವಸ್ತುಗಳಲ್ಲಿ ಮಾಂಸದ ಮತ್ತು ರಕ್ತದ ಭಾವನೆ ಮಾಡಿಕೊಂಡು ತಿನ್ನುತ್ತಾರೆ-ಕುಡಿಯುತ್ತಾರೆ! ಇದು ಎಷ್ಟು ಹೊಲಸು ವಿಷಯ? ಯಾರು ತಮ್ಮ ಗುರುವಿನ ಮಾಂಸ-ರಕ್ತವನ್ನೂ ಕೂಡ, ತಿನ್ನುವ-ಕುಡಿಯುವ ಭಾವನೆಯಿಂದ ಬಿಡಲಿಲ್ಲವೋ, ಅವರು ಅನ್ಯರನ್ನು ಹೇಗೆ ಬಿಡಬಲ್ಲರು? [86]

## (ಏಸುವಿನ ಶೋಕ ಮತ್ತು ಉದಾಸೀನತೆ)

[87] ಮತ್ತು ಅವನು 'ಪೀಟರ್'* ನನ್ನೂ, ಮತ್ತು 'ಜಬದೋ'† ನ ಇಬ್ಬರು ಮಕ್ಕಳನ್ನೂ ತನ್ನ ಸಂಗಡ ಕರೆದೊಯ್ದನು. ಮತ್ತು ಶೋಕಿಸಲೂ, ಹಾಗೂ ಅತ್ಯಂತ ನಿರುತ್ಸಾಹನಾಗಲೂ ತೊಡಗಿದನು.

ಆಗ ಅವನು ಅವರಿಗೆ—

"ನನ್ನ ಮನಸ್ಸು ನಾನು ಸಾಯುವಷ್ಟು ಮಟ್ಟಿಗೆ, ಅತಿ ಉದಾಸವಾಗಿದೆ.", ಎಂದು ಹೇಳಿದನು.

ಮತ್ತು ಸ್ವಲ್ಪ ಮುಂದುವರಿದು, ಅವನು ಮುಖ ಕೆಳಗಾಗಿ ಬಿದ್ದನು. ಮತ್ತು—

---

*Peter †Zabedee

"ಓ ನನ್ನ ತಂದೆ! ಸಾಧ್ಯವಾದಲ್ಲಿ, ಈ ಬಟ್ಟಲು ನನ್ನಿಂದ ಸರಿದುಹೋಗಲಿ!", ಎಂದು ಪ್ರಾರ್ಥನೆ ಮಾಡಿದನು.

[ಬೈಬಲ್ (ಇಂ). ಮ್ಯಾಥ್ಯೂ :- ಪರ್ವ. 26; ಆ. 37-39]

## (ಏಸುವಿನ ಎಲ್ಲ ಚಮತ್ಕಾರ ಧರಾಶಾಯಿಯಾಯಿತು)

**ಸಮೀಕ್ಷಕ:**—ನೋಡಿರಿ! ಅವನು ಕೇವಲ ಮನುಷ್ಯನಾಗಿರದೇ ಈಶ್ವರನ ಪುತ್ರನೂ, ಮತ್ತು ತ್ರಿಕಾಲದರ್ಶಿಯೂ, ಹಾಗೂ ವಿದ್ವಾಂಸನೂ ಆಗಿದ್ದಿದ್ದರೆ, ಇಂತಹ ಅಯೋಗ್ಯವಾದ ವರ್ತನೆಯನ್ನು ಮಾಡುತ್ತಿರಲಿಲ್ಲ. ಇದರಿಂದ ಸ್ಪಷ್ಟವಾಗಿ, ಏಸುವು ಅಥವಾ ಅವನ ಅನುಯಾಯಿಗಳು—'ಅವನು ಈಶ್ವರನ ಮಗನಾಗಿದ್ದಾನೆ. ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದವನೂ ಮತ್ತು ಪಾಪವನ್ನು ಕ್ಷಮಿಸುವವನೂ ಆಗಿದ್ದಾನೆ.', ಎಂಬ ಮಿಥ್ಯಾಪ್ರಪಂಚವನ್ನು ಸುಳ್ಳು-ಸುಳ್ಳೇ ರಚಿಸಿದ್ದಾರೆ, ಎಂದು ಗೊತ್ತಾಗುತ್ತದೆ.

ಇದರಿಂದ, ಅವನು ಕೇವಲ ಸಾಧಾರಣನೂ, ಮುಗ್ಧನೂ, ಸರಳನೂ ಆದ ಅವಿದ್ವಾಂಸನಾಗಿದ್ದನು, ಎಂದು ತಿಳಿದುಕೊಳ್ಳಬೇಕು. **[ಅವನು] ವಿದ್ವಾಂಸನೂ ಆಗಿರಲಿಲ್ಲ! ಯೋಗಿಯೂ ಆಗಿರಲಿಲ್ಲ! ಸಿದ್ಧನೂ ಆಗಿರಲಿಲ್ಲ!** [87]

## (ಶಿಷ್ಯನು ಏಸುವನ್ನು ಹಿಡಿಸಿಕೊಟ್ಟನು; ಬಹಳ ದುರ್ಗತಿಯಾಯಿತು)

**[88] ಅವನು ಮಾತನಾಡುತ್ತಲೇ ಇದ್ದನು. ನೋಡಿರಿ! ಅಷ್ಟರಲ್ಲಿ ಹನ್ನೆರಡು ಜನ ಶಿಷ್ಯರಲ್ಲಿ ಒಬ್ಬನಾಗಿದ್ದ 'ಯಹೂದಾ,'* ಬಂದು ಸೇರಿದನು. ಮತ್ತು ಜನರ ಪ್ರಧಾನ ಯಾಜಕರ ಮತ್ತು ಪ್ರಾಚೀನರ ಕಡೆಯಿಂದ ಬಹುಮಂದಿ ಖಡ್ಗಗಳನ್ನು ಮತ್ತು ದಂಡಗಳನ್ನು ಹಿಡಿದು ಅವನೊಂದಿಗೆ ಇದ್ದರು.**

**ಏಸುವನ್ನು ಸೆರೆಹಿಡಿಸುವವನು—**

**'ಯಾವನಿಗೆ ನಾನು ಮುತ್ತಿಡುವೆನೋ, ಅವನನ್ನು ಹಿಡಿಯಿರಿ.', ಎಂದು ಸಂಕೇತವನ್ನು ಮಾಡಿದ್ದನು.**

**ಮತ್ತು ಅವನು ಕೂಡಲೇ ಏಸುವಿನ ಹತ್ತಿರ ಬಂದು—"ಹೇ ಗುರು! ಪ್ರಣಾಮ!!", ಎಂದನು. ಮತ್ತು ಅವನಿಗೆ ಮುತ್ತನ್ನು ಕೊಟ್ಟನು!**

**ಆಗ, ಅವರು ಏಸುವಿನ ಮೇಲೆ ಕೈಹಾಕಿ, ಅವನನ್ನು ಹಿಡಿದರು!**

**ಆಗ ಎಲ್ಲ ಶಿಷ್ಯರೂ ಅವನನ್ನು ಬಿಟ್ಟು ಓಡಿದರು!**

---

*Judas

ಕೊನೆಗೆ ಇಬ್ಬರು ಸುಳ್ಳು ಸಾಕ್ಷಿಗಳು ಬಂದು—"ಇವನು—'ನಾನು ಈಶ್ವರನ ಮಂದಿರವನ್ನು ಕೆಡಹಬಲ್ಲೆನು. ಮತ್ತೆ, ಅದನ್ನು ಮೂರು ದಿನಗಳಲ್ಲಿ ನಿರ್ಮಿಸಬಲ್ಲೆನು', ಎಂದು ಹೇಳಿದನು", ಎಂದು ನುಡಿದರು.

ಆಗ ಮಹಾಯಾಜಕನು ಎದ್ದು ನಿಂತು, ಏಸುವಿಗೆ—

"ನೀನು ಏನೂ ಉತ್ತರವನ್ನು ಕೊಡುವುದಿಲ್ಲವೇನು ? ಈ ಜನರು ನಿನಗೆ ವಿರುದ್ಧವಾಗಿ ಯಾವ ಸಾಕ್ಷ್ಯವನ್ನು ಕೊಡುತ್ತಿದ್ದಾರೆ?", ಎಂದು ಪ್ರಶ್ನೆಹಾಕಿದನು.

ಆದರೆ, ಏಸುವು ಸುಮ್ಮನೇ ಇದ್ದನು! ಇದರ ಮೇಲೆ, ಮಹಾಯಾಜಕನು ಅವನಿಗೆ—

"ನಾನು ನಿನ್ನನ್ನು ಜೀವಂತ ಈಶ್ವರನ ಮೇಲೆ ಆಣೆಯಿಟ್ಟು ಆರೋಪಿಸುತ್ತೇನೆ. ನೀನು ಈಶ್ವರನ ಮಗನಾದ ಕ್ರಿಸ್ತನಹುದೋ, ಅಲ್ಲವೋ, ಎಂಬುದನ್ನು ನಮಗೆ ಹೇಳು.", ಎಂದು ಹೇಳಿದನು.

ಏಸುವು ಅವನಿಗೆ—"ನೀನು ಹೇಳಿಯೇ ಬಿಟ್ಟೆಯಲ್ಲ!", ಎಂದನು.

ಆಗ ಮಹಾಯಾಜಕನು ತನ್ನ ವಸ್ತ್ರಗಳನ್ನು ಹರಿದು,—

"ಇವನು ಈಶ್ವರನ ನಿಂದೆಯನ್ನು ಮಾಡಿದ್ದಾಗಿದೆ. ಈಗ ನಮಗೆ ಸಾಕ್ಷಿಗಳ ಉಪಯೋಗ ಇನ್ನೇನಿದೆ? ನೋಡಿರಿ! ನೀವು ಈಗ ತಾನೇ ಅವನ ಬಾಯಿನಿಂದ ಈಶ್ವರನ ನಿಂದೆಯನ್ನು ಆಲಿಸಿದ್ದೀರಿ.

"ಈಗ ಏನು ಆಲೋಚಿಸುತ್ತೀರಿ?", ಎಂದು ಪ್ರಶ್ನಿಸಿದನು.

ಆಗ ಅವರು—"ಅವನು ವಧಾರ್ಹನಾಗಿದ್ದಾನೆ", ಎಂದು ಉತ್ತರವಿತ್ತರು.

ಆಗ ಅವರು ಅವನ ಮುಖದ ಮೇಲೆ ಉಗುಳಿದರು. ಮತ್ತು ಅವನಿಗೆ ಗುದ್ದುಗಳನ್ನು ಹಾಕಿದರು.

ಬೇರೆಯವರು ಪೆಟ್ಟುಗಳನ್ನು ಬಿಗಿದು—

"ಓ ಕ್ರಿಸ್ತ! ನಮಗೆ ಭವಿಷ್ಯವಾಣಿಯನ್ನು ಹೇಳು. ಯಾವನು ನಿನ್ನನ್ನು ಹೊಡೆದನು?", ಎಂದು ಕೇಳಿದರು.

'ಪೀಟರ'*ನು ಹೊರಗೆ ಅಂಗಳದಲ್ಲಿ ಕುಳಿತಿದ್ದನು. ಮತ್ತು ಒಬ್ಬಳು ದಾಸಿಯು ಅವನ ಬಳಿ ಬಂದು—

"ನೀನೂ ಕೂಡ, ಗಾಲೀಲಿಯ ಏಸುವಿನ ಜೊತೆಯಲ್ಲಿದ್ದೆ!", ಎಂದಳು.

ಅವನು ಎಲ್ಲರ ಮುಂದೆಯೂ ಮರೆಮಾಚಿ,—"ನೀನು ಏನೆನ್ನುತ್ತೀಯೋ, ನನಗೆ ತಿಳಿಯದು.", ಎಂದನು.

ಅವನು ಹೊರಗೆ ಹೊಸ್ತಿಲ ಬಳಿ ಹೋದಾಗ, ಮತ್ತೊಬ್ಬಳು ದಾಸಿಯು ಅವನನ್ನು ನೋಡಿ, ಅಲ್ಲಿದ್ದ ಜನರಿಗೆ—

---

*Peter

"ಇವನೂ ಕೂಡ, 'ನಜರೇತಿ'*ನ ಏಸುವಿನ ಸಂಗಡ ಇದ್ದನು!", ಎಂದಳು.

ಅವನು ಆಣೆಯಿಟ್ಟು, ಪುನಃ—

"ಆ ಮನುಷ್ಯನನ್ನು ನಾನು ಅರಿಯೆನು.", ಎಂದು ಮರೆಮಾಚಿದನು.

ಆಗ ಅವನು—"ನಾನು ಆ ಮನುಷ್ಯನನ್ನು ತಿಳಿಯೆನು.", ಎಂದು ಧಿಕ್ಕರಿಸಲು ಮತ್ತು ಆಣೆಯಿಡಲು ಆರಂಭಿಸಿದನು!

[ಬೈಬಲ್ (ಇಂ). ಮ್ಯಾಥ್ಯೂ:—ಪರ್ವ. 26; ಆ. 47-50,53,61-72,74]

## (ಕೊನೆಯ ಸಮಯದಲ್ಲಿ ಒಬ್ಬ ಶಿಷ್ಯನೂ ಜೊತೆ ಕೊಡಲಿಲ್ಲ)

**ಸಮೀಕ್ಷಕ:**—ಈಗ ನೋಡಿರಿ! ಅವನಿಗೆ ತನ್ನ ಶಿಷ್ಯರಿಗೆ ದೃಢವಾದ ನಂಬಿಕೆ ಹುಟ್ಟಿಸಬಲ್ಲಷ್ಟು ಸಾಮರ್ಥ್ಯವೂ ಅಥವಾ ಪ್ರತಾಪವೂ ಇರಲಿಲ್ಲ. ಮತ್ತು ಆ ಶಿಷ್ಯರು, ಪ್ರಾಣವೇ ಬೇಕಾದರೂ ಹೊರಟುಹೋಗಲೊಲ್ಲದೇಕೆ? ಆಗಲೂ ತಮ್ಮ ಗುರುವನ್ನು ಲೋಭದಿಂದ ಹಿಡಿಸಬಾರದಾಗಿತ್ತು! ಕೈಬಿಡಬಾರದಾಗಿತ್ತು! ಸುಳ್ಳು ಮಾತನ್ನಾಡ ಬಾರದಾಗಿತ್ತು! ಸುಳ್ಳು ಆಣೆಗಳನ್ನಿಡಬಾರದಾಗಿತ್ತು!

## (ಏಸುವೂ ತನ್ನ ಚಮತ್ಕಾರವನ್ನು ತೋರಿಸಲಾರದವನಾದನು)

ಮತ್ತು ಏಸುವೂ ಕೂಡ, ಸ್ವಲ್ಪವೂ ಚಾಮತ್ಕಾರಿಕನಾಗಿರಲಿಲ್ಲ! ಹೇಗೆಂದರೆ, **'ತೌರೇತಿ'**†ನಲ್ಲಿ ಬರೆದಿರುವಂತೆ—'ಲೂತನ ಮನೆಗೆ ಅತಿಥಿಗಳನ್ನು ಕೊಲ್ಲಲು ಬಹು ಮಂದಿ ಏರಿ ಬಂದಿದ್ದರು. ಅಲ್ಲಿ ಈಶ್ವರನ ದೂತರಿಬ್ಬರಿದ್ದರು. ಅವರು ಅವರುಗಳನ್ನೇ ಕುರುಡರನ್ನಾಗಿ ಮಾಡಿಬಿಟ್ಟರು!'

ಈ ಮೇಲಿನ ಮಾತೂ ಕೂಡ, ಅಸಂಭವವೇ ಆಗಿದ್ದರೂ, ಏಸುವಿಗೆ ಇಷ್ಟು ಸಾಮರ್ಥ್ಯವೂ ಕೂಡ, ಇರಲಿಲ್ಲ!

## (ಈ ದುರ್ಗತಿಯನ್ನನುಭವಿಸುವ ಬದಲು ಯೋಗದಿಂದ ಪ್ರಾಣ ಬಿಡುವುದು ಒಳಿತಾಗಿತ್ತು)

ಮತ್ತು ಈ ದಿನಗಳಲ್ಲಿ ಅವನ ಹೆಸರಿನ ಮೇಲೆ ಕ್ರೈಸ್ತರು ಅದೆಷ್ಟು ವ್ಯರ್ಥದ ಆಡಂಬರವನ್ನು ಹರಡಿದ್ದಾರೆ! ಅಲ್ಲಾ! ಇಂತಹ ದುರವಸ್ಥೆಯಲ್ಲಿ ಸಾಯುವುದಕ್ಕಿಂತ, ಸ್ವತಃ ಹೋರಾಡುತ್ತಾ, ಅಥವಾ ಸಮಾಧಿಸ್ಥನಾಗಿ, ಇಲ್ಲವೇ, ಬೇರೆ ಯಾವುದಾದರೂ

*Nazareth

†ಬೈಬಲಿನ 'ಹಳೆಯ ನಿಯಮ'ದ ಪುಸ್ತಕ —ಸಂ.

ರೀತಿಯಲ್ಲಿ ಪ್ರಾಣತ್ಯಾಗ ಮಾಡಿದ್ದರೆ, ಒಳಿತಾಗಿರುತ್ತಿದ್ದಿತು! ಆದರೆ, ಆ ಬುದ್ಧಿಯು ವಿದ್ಯೆಯಿಲ್ಲದೇ ಬರುವುದಾದರೂ ಎಲ್ಲಿನಿಂದ?* [88]

## (ಯಾಜಕರನ್ನು ಏಸುವು ಹೆದರಿಸುವುದು)

ಆ ಏಸುವು ಇನ್ನೂ ಏನು ಹೇಳುತ್ತಾನೆಂದರೆ—

[89] "ನಾನು ಈಗಲೇ ನನ್ನ ತಂದೆಯಲ್ಲಿ ವಿನಂತಿ ಮಾಡಿಕೊಳ್ಳಲಾರೆನೆಂದು [ನೀನು ತಿಳಿದಿದ್ದೀಯೇನು?] ಮತ್ತು ಅವನು ನನ್ನ ಬಳಿಗೆ ಹನ್ನೆರಡಕ್ಕಿಂತ ಹೆಚ್ಚು ಸ್ವರ್ಗದ ದೂತರುಗಳ ಸೈನ್ಯಗಳನ್ನು ತಲುಪಿಸಿ ಬಿಡನೇನು?"

[ಬೈಬಲ್ (ಇಂ.) ಮ್ಯಾಥ್ಯೂ:-ಪರ್ವ. 26; ಆ. 58]

## (ಏಸುವು ಸತ್ಯವನ್ನೇಕೆ ಹೇಳಲಿಲ್ಲ?)

**ಸಮೀಕ್ಷಕ:**— ಹೆದರಿಸುತ್ತಲೂ ಹೋಗುತ್ತಾನೆ! ತನ್ನ, ಮತ್ತು ತನ್ನ ತಂದೆಯ ಹಿರಿಮೆಯನ್ನು ಕೊಚ್ಚಿಕೊಳ್ಳುತ್ತಲೂ ಹೋಗುತ್ತಾನೆ! ಆದರೆ, ಏನನ್ನೂ ಮಾಡಲಾರದವನೂ ಆಗಿದ್ದಾನೆ! ಆಶ್ಚರ್ಯದ ಮಾತನ್ನು ನೋಡಿರಿ! ಮಹಾಯಾಜಕನು—

'ಈ ಜನರು ನಿನಗೆ ವಿರುದ್ಧವಾಗಿ ಸಾಕ್ಷ್ಯವನ್ನು ಕೊಡುತ್ತಿದ್ದಾರೆ. ಇದಕ್ಕೆ ಉತ್ತರವನ್ನು ಕೊಡು.', ಎಂದು ಹೇಳಿದ್ದಾಗಲೂ ಕೂಡ, ಏಸು ಸುಮ್ಮನೆ ಇದ್ದನು.

ಏಸುವು ಹೀಗೆ ಮಾಡಿದುದೂ ಕೂಡ, ಸರಿಯಲ್ಲ. ಏಕೆಂದರೆ, **ಸತ್ಯವಾಗಿದ್ದುದನ್ನು ಅಲ್ಲಿ ಅವಶ್ಯವಾಗಿಯೂ ಹೇಳಿ ಬಿಡುತ್ತಿದ್ದರೆ, ಆಗಲೂ ಕೂಡ, ಒಳ್ಳೆಯದಾಗುತ್ತಿದ್ದಿತು!** ಇಂತಹ ಬಹಳವಾದ ತನ್ನ ಜಂಬದ ಮಾತುಗಳನ್ನು ಆಡುವುದು ಉಚಿತವಾಗಿರಲಿಲ್ಲ.

---

*ಶತ್ರುಗಳ ಕೈಯಿನಿಂದ ದೊರಕುವ ಅಪಮಾನಜನಕವಾದ ಮೃತ್ಯುವನ್ನು ನಿರುಪಾಯನಾಗಿ ವರಿಸುವ ಬದಲು, ಸಂಘರ್ಷದಿಂದ ಹೋರಾಡುತ್ತಾ, ಅಥವಾ ಸಮಾಧಿಸ್ಥನಾಗಿ, ಪ್ರಾಣವನ್ನು ನಿರೋಧಿಸಿ, ಅಥವಾ ಇನ್ನಾವುದಾದರೂ ಸಮ್ಮಾನಜನಕ ರೀತಿಯಿಂದ, ತಾನೇ ಮೃತ್ಯುವನ್ನು ಆಲಂಗಿಸುವುದು ಧೀರರಿಗೆ ಉಚಿತವಾದುದೆಂದು ಮಹರ್ಷಿ ದಯಾನಂದರು ಇಲ್ಲಿ ಸಲಹೆ ಕೊಟ್ಟಿದ್ದಾರೆ. ಭಾರತದ ಇತಿಹಾಸದಲ್ಲಿ ಕ್ಷತ್ರಿಯರು ಈ ರೀತಿಯ ಮೃತ್ಯುವನ್ನು ಬಯಸುತ್ತಿದ್ದರು, ಮತ್ತು ಹೊಂದುತ್ತಿದ್ದರು. ಈ ತರಹದ ಮೃತ್ಯುವನ್ನೇ ಸರ್ವವರ್ಣಸ್ಥರೂ ಅನುಭವಿಸಬೇಕೆಂದು ಮಹರ್ಷಿ ದಯಾನಂದರು ನಿರ್ದೇಶಿಸುತ್ತಾರೆ. ಸೃಷ್ಟಿಕರ್ತನಾದ ನಿರಾಕಾರ ಪರಮೇಶ್ವರನ ಮತ್ತು ಅವನ ಕೃತಿಯಾದ ವೇದಗಳ ಮೇಲೆ ವಿಶ್ವಾಸವಿಟ್ಟವರಿಗೆ ಮಾತ್ರ ಈ ಪೌರುಷ ಬರುತ್ತದೆ! ಅನ್ಯರಿಗೆ—ಅವರು ವಿಶ್ವಾಸನಿಡುವ 'ಇಷ್ಟದೈವ'ದ, ಮತ್ತು ಅವರು ಒಪ್ಪುವ 'ಧರ್ಮಗ್ರಂಥ'ದ ಮೇರೆಗೆ ಅವರ ಭಾವನೆ ಮತ್ತು ವರ್ತನೆ ಉಂಟಾಗುತ್ತದೆ—ಸಂ.

**(ಸುಳ್ಳು ದೋಷಾರೋಪಣೆ ಹಾಕಿ ಏಸುವನ್ನು ಕೊಂದಿದ್ದು ಸರಿಯಲ್ಲ)**

ಮತ್ತು ಯಾರು ಏಸುವಿನ ಮೇಲೆ ಸುಳ್ಳು ದೋಷಗಳನ್ನಾರೋಪಿಸಿ, ಕೊಂದರೋ, ಅವರಿಗೂ ಅದು ತಕ್ಕುದಾಗಿರಲಿಲ್ಲ. ಏಕೆಂದರೆ, ಅವರು ಅವನ ಬಗೆಗೆ ಎಂತಹದನ್ನು ಮಾಡಿದರೋ, ಅಂತಹ ರೀತಿಯ ಅಪರಾಧ ಏಸುವಿನದಾಗಿರಲಿಲ್ಲ!

ಆದರೆ, ಅವರೂ ಕೂಡ, ಕಾಡಾಡಿಗಳೇ ಆಗಿದ್ದರಲ್ಲ! ನ್ಯಾಯದ ಮಾತುಗಳನ್ನು ಏನು ತಿಳಿಯಬಲ್ಲರು?

**(ಸುಳ್ಳು–ಸುಳ್ಳೇ ತನ್ನನ್ನು ಈಶ್ವರನ ಮಗನೆಂದು ಹೇಳಿಕೊಂಡಿದ್ದು ಸರಿಯಲ್ಲ)**

ಏಸುವು [ತನ್ನನ್ನು] ಸುಳ್ಳು–ಸುಳ್ಳೇ ಈಶ್ವರನ ಮಗನೆಂದು ಕರೆದುಕೊಳ್ಳದೇ ಇದ್ದಿದ್ದರೆ, ಮತ್ತು ಅವರು ಅವನೊಂದಿಗೆ ಇಂತಹ ಕೆಟ್ಟ ವರ್ತನೆಯನ್ನು ಮಾಡದೇ ಇದ್ದಿದ್ದರೆ, ಇಬ್ಬರಿಗೂ ಉತ್ತಮವಾದ ಕಾರ್ಯವೇ ಆಗುತ್ತಿತ್ತು. ಆದರೆ, ಇಷ್ಟು ವಿದ್ಯೆ, ಧರ್ಮಾತ್ಮತ್ವ ಮತ್ತು ನ್ಯಾಯಶೀಲತ್ವಗಳನ್ನು ಎಲ್ಲಿಂದ ತಂದಾರು? [89]

**(ಏಸುವಿನ ಮೇಲೆ ಅಭಿಯೋಗ ಮತ್ತು ಶಿಲುಬೆಯ ಮೇಲೆ ಏರಿಸುವುದು)**

**[90] ಏಸುವು ಅಧ್ಯಕ್ಷನ ಮುಂದೆ ನಿಂತನು. ಮತ್ತು ಅಧ್ಯಕ್ಷನು ಅವನನ್ನು—**

**"ನೀನು ಯಹೂದ್ಯರ ರಾಜನಾಗಿದ್ದೀಯೋ", ಎಂದು ಕೇಳಿದನು.**

**ಏಸುವು ಅವನಿಗೆ—"ತಾವೇ ಹೇಳುತ್ತಿದ್ದೀರಿ!", ಎಂದು ಹೇಳಿದನು.**

**ಯಾವಾಗ ಪ್ರಧಾನ ಯಾಜಕನು ಮತ್ತು ಪ್ರಾಚೀನ ಜನರು ಅವನ ಮೇಲೆ ದೋಷಾರೋಪಣೆ ಮಾಡುತ್ತಿದ್ದರೋ, ಆಗ ಅವನು ಏನೂ ಉತ್ತರವನ್ನು ಕೊಡಲಿಲ್ಲ!**

**ಆಗ 'ಪಿಲಾತ'*ನು—**

**"ಈ ಜನರು ನಿನಗೆ ವಿರುದ್ಧವಾಗಿ ಎಷ್ಟು ಸಾಕ್ಷ್ಯವನ್ನು ಕೊಡುತ್ತಿದ್ದಾರೆ, ಎಂಬುದನ್ನು ನೀನು ಆಲಿಸುವುದಿಲ್ಲವೇನು?", ಎಂದು ಅವನನ್ನು ಕೇಳಿದನು.**

**ಆದರೆ, ಅವನು ಒಂದು ಮಾತಿಗೂ ಸಹ ಅವನಿಗೆ ಉತ್ತರವನ್ನು ಕೊಡಲಿಲ್ಲ. ಎಲ್ಲಿಯ ತನಕ, ಎಂದರೆ ಅಧ್ಯಕ್ಷನು ಕೂಡ, ಬಹಳ ಆಶ್ಚರ್ಯಚಕಿತನಾದನು!**

**ಪಿಲಾತನು ಅವರನ್ನು—"ತನ್ನನ್ನು ಕ್ರಿಸ್ತನೆಂದು ಹೇಳಿಕೊಳ್ಳುವ ಏಸುವಿಗೆ ನಾನು ಏನು ಮಾಡಲಿ ?", ಎಂದು ಕೇಳಿದನು.**

**ಎಲ್ಲರೂ ಅವನಿಗೆ—"ಅವನು ಶಿಲುಬೆಯ ಮೇಲೆ ಏರಿಸಲ್ಪಡಲಿ.", ಎಂದು ಹೇಳಿದರು.**

---

*Pilate

ಮತ್ತು ಏಸುವಿಗೆ ಛಡಿ ಏಟುಗಳನ್ನು ಹಾಕಿ, ಶಿಲುಬೆಯ ಮೇಲೆ ಏರಿಸಲ್ಪಡುವುದಕ್ಕಾಗಿ ಒಪ್ಪಿಸಿಬಿಟ್ಟನು.

ಆಗ ಅಧ್ಯಕ್ಷನ ಸೈನಿಕರು ಏಸುವನ್ನು ಅಧ್ಯಕ್ಷನ ಗೃಹಕ್ಕೆ ಕರೆದೊಯ್ದು, ಸಮಸ್ತ ಸೈನ್ಯವನ್ನೂ ಅವನ ಬಳಿ ಒಟ್ಟುಗೂಡಿಸಿದರು. ಮತ್ತು ಅವರು ಅವನ ವಸ್ತ್ರಗಳನ್ನು ಕಳಚಿಹಾಕಿ, ಅವನಿಗೆ ಕೆಂಪು ನಿಲುವಂಗಿಯನ್ನು ತೊಡಿಸಿದರು. ಮತ್ತು ಮುಳ್ಳುಗಳ ಕಿರೀಟವನ್ನು ಹೆಣೆದು, ಅವನ ತಲೆಯ ಮೇಲೆ ಇಟ್ಟರು. ಮತ್ತು ಅವನ ಬಲಗೈಯಿಗೆ ಒಂದು ಕೊಂಬೆಯನ್ನು ಕೊಟ್ಟರು.

ಮತ್ತು ಅವನ ಮುಂದೆ, ಮೊಳಕಾಲೂರಿ ಕುಳಿತು—

"ಓ ಯಹೂದ್ಯರ ರಾಜನೇ! ಪ್ರಣಾಮ!!". ಎಂದು ಹೇಳಿ ಅಪಹಾಸ್ಯ ಮಾಡಿದರು.

ಮತ್ತು ಅವರು ಅವನ ಮೇಲೆ ಉಗುಳಿದರು. ಮತ್ತು ಆ ಕೊಂಬೆಯನ್ನು ತೆಗೆದುಕೊಂಡು, ಅವನ ತಲೆಯ ಮೇಲೆ ಹೊಡೆದರು!

ಅವರು ಅವನಿಗೆ ಅಪಹಾಸ್ಯಮಾಡಿ ಮುಗಿಸಿದ ಮೇಲೆ, ಆ ನಿಲುವಂಗಿಯನ್ನು ಅವನಿಂದ ಕಳಚಿಹಾಕಿ, ಅವನ ಬಟ್ಟೆಗಳನ್ನೇ ತೊಡಿಸಿ, ಅವನನ್ನು ಶಿಲುಬೆಯ ಮೇಲೆ ಏರಿಸುವುದಕ್ಕಾಗಿ ಕರೆದುಕೊಂಡು ಹೋದರು. ಆಗ ಅವರು 'ಗೋಲ್ಗೊಥಾ'*, ಎಂದರೆ ಕಪಾಲಕ್ಷೇತ್ರವೆಂದು ಕರೆಯಲ್ಪಡುವ ಸ್ಥಾನವೊಂದಕ್ಕೆ ತಲುಪಿದರು.

ಆಗ ಅವರು ಹುಳಿ ಮದ್ಯಕ್ಕೆ ಪಿತ್ತದ್ರವವನ್ನು ಸೇರಿಸಿ, ಅವನಿಗೆ ಕುಡಿಯಲು ಕೊಟ್ಟರು. ಆದರೆ, ಅವನು ಕಿರುಚಿಕೊಂಡು, ಕುಡಿಯಲು ಬಯಸಲಿಲ್ಲ!

ಆಗ ಅವರು ಅವನನ್ನು ಶಿಲುಬೆಯ ಮೇಲೆ ಏರಿಸಿದರು. ಮತ್ತು ಅವರು ಅವನ ಅಪರಾಧಪತ್ರವನ್ನು ಅವನ ತಲೆಯ ಮೇಲೆ ಹಚ್ಚಿದರು. ಆಗ, ಇಬ್ಬರು ದರೋಡೆಕೋರರು, ಒಬ್ಬನು ಬಲಗಡೆಗೂ, ಮತ್ತು ಇನ್ನೊಬ್ಬನು ಎಡಗಡೆಗೂ, ಅವನೊಂದಿಗೆ ಶಿಲುಬೆಗಳ ಮೇಲೆ ಏರಿಸಲ್ಪಟ್ಟರು!

ಆ ಎಡೆಯಿಂದ ಬರುತ್ತಾ-ಹೋಗುತ್ತಾ ಇದ್ದ ಜನರು ತಮ್ಮ ತಲೆಗಳನ್ನು ಅಲ್ಲಾಡಿಸಿ, ಈ ರೀತಿ ಹೇಳುತ್ತಾ ಅವನನ್ನು ನಿಂದಿಸಿದರು—

"ಓ ದೇಗುಲವನ್ನು ಕೆಡಹುವವನೇ! ನಿನ್ನನ್ನು ರಕ್ಷಿಸಿಕೋ! ನೀನು ಈಶ್ವರನ ಪುತ್ರನಾಗಿರುವೆಯಾದರೆ, ಶಿಲುಬೆಯಿಂದ ಇಳಿದುಬಾ !"

ಇದೇ ರೀತಿಯಲ್ಲಿ, ಪ್ರಧಾನ ಯಾಜಕರೂ, ಉಪದೇಶಕರೂ ಮತ್ತು ಪ್ರಾಚೀನರ ಸಂಗಾತಿಗಳೂ ಕೂಡ, ಅಪಹಾಸ್ಯ ಮಾಡಿ, ಹೀಗೆ ನುಡಿದರು—

*Golgotha

"ಅವನು ಅನ್ಯರನ್ನು ರಕ್ಷಿಸಿಕೊಳ್ಳಲಾರದವನಾಗಿದ್ದಾನೆ! ಅವನು ಇಸ್ರಾಏಲದ ರಾಜನಾಗಿದ್ದರೆ, ಶಿಲುಬೆಯಿಂದ ಈಗ ಇಳಿದುಬರಲಿ! ಮತ್ತು ನಾವು ಅವನಲ್ಲಿ ನಂಬಿಕೆ ಇಡುವೆವು.

"ಅವನು ಈಶ್ವರನ ಮೇಲೆ ಭರವಸೆಯಿಟ್ಟುಕೊಂಡಿದ್ದಾನೆ. ಈಶ್ವರನು ಅವನನ್ನು ಬಯಸುವನಾದರೆ, ಅವನನ್ನು ಈಗ ರಕ್ಷಿಸಲಿ! ಏಕೆಂದರೆ, ಅವನು—'ನಾನು ಈಶ್ವರನ ಮಗನಾಗಿದ್ದೇನೆ', ಎಂದು ಹೇಳಿದ್ದಾನೆ."

ಅವನ ಸಂಗಡ ಶಿಲುಬೆಗೆ ಏರಿಸಲ್ಪಟ್ಟಿದ್ದ ದರೋಡೆಕೋರರೂ ಕೂಡ, ಹೀಗೆಯೇ ಅವನ ನಿಂದೆಯನ್ನು ಮಾಡಿದರು.

ಎರಡನೆಯ ಪ್ರಹರದಿಂದ ಮೂರನೆಯ ಪ್ರಹರದವರೆಗೆ ಸಮಸ್ತ ದೇಶದಲ್ಲಿ ಅಂಧಕಾರ ಉಂಟಾಯಿತು! ಮೂರನೆಯ ಪ್ರಹರದ ಸುಮಾರಿಗೆ ಏಸುವು ಉಚ್ಚ ಸ್ವರದಿಂದ ಕೂಗಿ—

"ಏಲೀ ಏಲೀ ಲಾಮಾ ಸಬಕ್ತನೀ".*—

ಎಂದರೆ, "ಓ ನನ್ನ ಈಶ್ವರ! ಓ ನನ್ನ ಈಶ್ವರ!! ನೀನು ಏಕೆ ನನ್ನ ಕೈ ಬಿಟ್ಟಿದ್ದೀಯೇ?", ಎಂದು ಮೊರೆಯಿಟ್ಟನು.

ಅಲ್ಲಿ ನಿಂತಿದ್ದವರಲ್ಲಿ ಏಷ್ಟೋ ಜನರು ಇದನ್ನು ಆಲಿಸಿ—

"ಅವನು 'ಎಲಿಯಾಹ'[1]ನನ್ನು ಕರೆಯುತ್ತಾನೆ.", ಎಂದರು.

ಅವರಲ್ಲಿ ಒಬ್ಬನು ತಕ್ಷಣ ಓಡಿಹೋಗಿ, ಸ್ಪಂಜನ್ನು ತೆಗೆದುಕೊಂಡು, ಹುಳಿ ಮದ್ಯದಲ್ಲಿ ನೆನೆಯಿಸಿದನು.

ಮತ್ತು ನಳಿಕೆಯ ಮೇಲಿಟ್ಟು, ಅವನಿಗೆ ಕುಡಿಯಲು ಕೊಟ್ಟನು.

ಆಗ ಏಸುವು ಪುನಃ ಉಚ್ಚ ಸ್ವರದಿಂದ ಕೂಗಿ, ಪ್ರಾಣತ್ಯಾಗ ಮಾಡಿದನು!

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ 27; ಆ. 11-14,21-22,26-31,33,34,35, 37-48,50]

## (ಏಸುವು ತಾನು ಈಶ್ವರನ ಪುತ್ರನೆಂದು ಪ್ರಚಾರ ಮಾಡಬಾರದಿತ್ತು)

ಸಮೀಕ್ಷಕ:—ಆ ದುಷ್ಟರು ಏಸುವಿನೊಂದಿಗೆ ಸರ್ವಥಾ ದುರ್ವ್ಯವಹಾರವನ್ನು ಮಾಡಿದರು! ಆದರೆ, ಏಸುವಿನದೂ ದೋಷವಿದ್ದಿತು!

ಏಕೆಂದರೆ, ಈಶ್ವರನಿಗೆ ಯಾವ ಮಗನೂ ಇಲ್ಲ!† ಅವನು ಯಾರಿಗೂ ತಂದೆಯೂ ಅಲ್ಲ! ಅವನು ಯಾವನಿಗಾದರೂ ತಂದೆಯಾದರೆ, ಮತ್ತಾವನಿಗಾದರೂ ಮಾವನೋ, ಮೈದುನನೋ, ಬೀಗನೋ, ಮೊದಲಾದವನೂ ಕೂಡ, ಆಗಬೇಕಾದೀತು!

---

*Eli. Eli. Lama Sabachthani. 1. Elias

†ವೇದೋಕ್ತ ಆಧ್ಯಾತ್ಮಿಕದೃಷ್ಟಿಯಿಂದ, ಜೀವರೆಲ್ಲರೂ ಈಶ್ವರ-ಪುತ್ರರೇ! ಆದರೆ, ವ್ಯಾವಹಾರಿಕವಾಗಿ ಹಾಗಲ್ಲವೆಂದು ಇಲ್ಲಿ ವಿವೇಚನೆ.—ಅನು.

ಮತ್ತು ಅಧ್ಯಕ್ಷನು ಪ್ರಶ್ನಿಸಿದಾಗ, ಸತ್ಯಕ್ಕೆ ಅನುಸಾರ ಉತ್ತರವನ್ನು ಕೊಡಬೇಕಾಗಿತ್ತು! ಮತ್ತು, ಯಾವಾವುದೋ ಚಮತ್ಕಾರಗಳನ್ನು ಮೊದಲು ಮಾಡಿದ್ದುದು ಸತ್ಯವಾಗಿದ್ದಲ್ಲಿ, ಆಗಲೂ ಶಿಲುಬೆಯಿಂದ ಇಳಿದು ಬಂದು, ಎಲ್ಲರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಳ್ಳಬೇಕಾಗಿತ್ತು! ಮತ್ತು ಅವನು ಈಶ್ವರನ ಮಗನಾಗಿದ್ದಿದ್ದರೆ, ಈಶ್ವರನೂ ಅವನನ್ನು ಉಳಿಸಿಕೊಳ್ಳುತ್ತಿದ್ದನು!

ಅವನು ತ್ರಿಕಾಲದರ್ಶಿಯಾಗಿದ್ದಿದ್ದರೆ, ಹುಳಿ ಮದ್ಯದಲ್ಲಿ ಪಿತ್ತ ಬೆರತ ಮಿಶ್ರಣವನ್ನು ಕಿರುಚಿಕೊಂಡು ತ್ಯಜಿಸುತ್ತಿದ್ದನೇಕೆ? ಅವನು ಮೊದಲಿನಿಂದಲೇ ತಿಳಿದಿರಬೇಕಾಗಿದ್ದಿತು! ಮತ್ತು ಅವನು ಚಮತ್ಕಾರಿಕನಾಗಿದ್ದಲ್ಲಿ, ಕೂಗಿ-ಕೂಗಿ ಪ್ರಾಣವನ್ನೇಕೆ ಬಿಡುತ್ತಿದ್ದನು? ಇದರಿಂದ ತಿಳಿಯಬೇಕಾದುದೇನೆಂದರೆ—

**ಎಷ್ಟೇ ಚಾತುರ್ಯ ಬೇಕಾದರೂ ಮಾಡಲೀ! ಆದರೆ, ಕೊನೆಗೆ, ಸತ್ಯವು ಸತ್ಯವೆಂದೇ, ಮತ್ತು ಅಸತ್ಯವು ಅಸತ್ಯವೆಂದೇ ಸಿದ್ಧವಾಗುತ್ತದೆ !**

ಇದರಿಂದ, ಇದೂ ಕೂಡ, ಸಿದ್ಧವಾಯಿತೇನೆಂದರೆ—ಏಸುವು ಆ ಕಾಲದ ಕಾಡು ಮನುಷ್ಯರಲ್ಲಿ ಸ್ವಲ್ಪ ಒಳ್ಳೆಯವನಾಗಿದ್ದನು. ಎಂದಷ್ಟೇ!

ಅವನು ಚಮತ್ಕಾರಿಕನೂ ಆಗಿರಲಿಲ್ಲ! ಈಶ್ವರನ ಪುತ್ರನೂ ಆಗಿರಲಿಲ್ಲ! ಮತ್ತು ವಿದ್ವಾಂಸನೂ ಕೂಡ, ಆಗಿರಲಿಲ್ಲ!

**ಏಕೆಂದರೆ, ಹಾಗೆ ಆಗಿದ್ದಲ್ಲಿ, ಇಂತಹ ದುಃಖವನ್ನು ಅವನೇಕೆ ಅನುಭವಿಸುತ್ತಿದ್ದನು?** [90]

## (ಏಸುವು ಜೀವಂತನಾಗುವುದು, ಮತ್ತು ಪೃಥಿವೀ-ಸ್ವರ್ಗದ ರಾಜ್ಯ ಸಿಗುವುದು)

[91] ಮತ್ತು ನೋಡಿರಿ! ಮಹಾ ಭೂಕಂಪವಾಯಿತು! ಪರಮೇಶ್ವರನ ಒಬ್ಬ ದೂತನು ಇಳಿದನು. ಮತ್ತು ಬಂದು, ಸಮಾಧಿಯ ಬಾಗಿಲಿನಿಂದ ಕಲ್ಲನ್ನು ಉರುಳಿಸಿ, ಅದರ ಮೇಲೆ ಕುಳಿತನು.

**'ಅವನು ಇಲ್ಲಿ ಇಲ್ಲ! ಅವನು ಹೇಗೆ ಹೇಳಿದನೋ, ಹಾಗೆಯೇ ಜೀವಂತನಾಗಿ ಎದ್ದಿದ್ದಾನೆ!'**

**ನೋಡಿರಿ! ಅವನ ಶಿಷ್ಯರಿಗೆ ಸಂದೇಶ ಕೊಡಲು ಅವರು* ಹೋಗುತ್ತಿದ್ದಾಗ, ಏಸುವು ಅವರ ಬಳಿಗೆ ಬಂದು ಸಂಧಿಸಿದನು; [ಮತ್ತು] 'ಕಲ್ಯಾಣವಾಗಲಿ!',**

---

*ಎಂದರೆ, ಕಾವಲುಗಾರ ಸ್ತ್ರೀಯರು—ಯು.ವೀ.

ಎಂದನು. ಮತ್ತು ಅವರು ಹತ್ತಿರ ಬಂದು, ಅವನ ಪಾದಗಳನ್ನು ಹಿಡಿದುಕೊಂಡು, ಅವನಿಗೆ ಪ್ರಣಾಮವನ್ನು ಮಾಡಿದರು. ಆಗ ಏಸುವು—

"ಹೆದರಬೇಡಿ ! ಹೋಗಿ, ನನ್ನ ಸೋದರರಿಗೆ—'ಅವರು ಗಾಲೀಲೀ ದೇಶಕ್ಕೆ ಹೋಗಬೇಕು; ಮತ್ತು ಅಲ್ಲಿ ಅವರು ನನ್ನನ್ನು ನೋಡುವರು.', ಎಂದು ಹೇಳಿ ಬಿಡಿರಿ.", ಎಂದು ಹೇಳಿದನು.

ಹನ್ನೊಂದು ಮಂದಿ ಶಿಷ್ಯರು ಗಾಲೀಲೀ (ದೇಶಕ್ಕೆ), ಏಸುವು ಹೇಳಿದ್ದ ಆ ಪರ್ವತದ ಮೇಲಕ್ಕೆ ಹೋದರು.

ಮತ್ತು ಅವರು ಅವನನ್ನು ನೋಡಿ, ಅವನಿಗೆ ಪ್ರಣಾಮವನ್ನು ಮಾಡಿದರು. ಆದರೆ, ಎಷ್ಟೋ ಜನರಿಗೆ ಸಂದೇಹವಾಯಿತು.

ಏಸುವು ಅವರ ಬಳಿಗೆ ಬಂದು, ಅವರಿಗೆ—"ಸ್ವರ್ಗದಲ್ಲಿ ಮತ್ತು ಭೂಮಿಯ ಮೇಲೆ ಸಮಸ್ತ ಅಧಿಕಾರವೂ ನನಗೆ ಕೊಡಲ್ಪಟ್ಟಿದೆ.

"ಮತ್ತು ನೋಡಿರಿ! ನಾನು ಜಗತ್ತಿನ ಕೊನೆಯವರೆಗೆ ಎಲ್ಲ ದಿನಗಳಲ್ಲಿಯೂ ನಿಮ್ಮೊಂದಿಗಿರುತ್ತೇನೆ!", ಎಂದು ಹೇಳಿದನು.

[ಬೈಬಲ್ (ಇಂ). ಮ್ಯಾಥ್ಯೂ:-ಪರ್ವ. 28; ಆ. 2,6,9,10,16-18,20]

### (ಏಸುವು ಮತ್ತೆ ಜೀವಂತನಾಗುವ ಮಾತು ಬರೀ ಬುರುಡೆ)

**ಸಮೀಕ್ಷಕ:**—ಈ ಮಾತೂ ಕೂಡ, ಒಪ್ಪಲರ್ಹವಾದುದಲ್ಲ. ಏಕೆಂದರೆ, ಸೃಷ್ಟಿಕ್ರಮಕ್ಕೆ ಮತ್ತು ವಿದ್ಯೆಗೆ ವಿರುದ್ಧವಾಗಿದೆ! ಮೊದಲಾಗಿ, ಈಶ್ವರನ ಬಳಿ ದೂತರುಗಳಿರುವುದು, ಅವರನ್ನು ಅತ್ತ-ಇತ್ತ ಕಳುಹಿಸುವುದು, ಮೇಲಿನಿಂದ ಇಳಿಯು ವುದು, [ಇದೆಲ್ಲಾ ಏನು?] ತಹಸೀಲದಾರಗಿರಿ, ಕಲೆಕ್ಟರಗಿರಿಯ ಸಮಾನವಾಗಿ ಈಶ್ವರ ನನ್ನು ಮಾಡಿಬಿಟ್ಟರಲ್ಲಾ ?

ಅದೇ ಶರೀರದೊಂದಿಗೆ ಸ್ವರ್ಗಕ್ಕೆ ಹೋದನೋ, ಅಥವಾ ಜೀವಂತನಾಗಿ ಎದ್ದನೋ? ಏಕೆಂದರೆ, 'ಆ ಸ್ತ್ರೀಯರು ಅವನ ಪಾದಗಳನ್ನು ಹಿಡಿದು ಪ್ರಣಾಮವನ್ನು ಮಾಡಿದರು,' ಎನ್ನಲು, ಅದೇ ಶರೀರವಿದ್ದಿತೇನು ? ಮತ್ತು ಮೂರು ದಿನಗಳ ವರೆಗೆ ಅದು ಕೊಳೆತು ಹೋಗಲಿಲ್ಲವೇಕೆ ?

ಮತ್ತು ತನ್ನ ಬಾಯಿನಿಂದಲೇ ತಾನು ಎಲ್ಲರ ಅಧಿಕಾರಿಯೆಂದುಕೊಳ್ಳುವುದು ಕೇವಲ ಜಂಬದ ಮಾತಾಗಿದೆ !

ಶಿಷ್ಯರನ್ನು ಸಂಧಿಸುವುದು, ಮತ್ತು ಅವರೊಂದಿಗೆ ಮಾತುಗಳನ್ನಾಡುವುದು ಅಸಂಭವವಾಗಿದೆ. ಏಕೆಂದರೆ, ಈ ಮಾತು ಸತ್ಯವಾಗಿರುವುದಾದರೆ, ಈ ದಿನ ಗಳಲ್ಲಿಯೂ, ಕೂಡ, ಯಾರೂ ಏಕೆ ಜೀವಂತರಾಗಿ ಏಳುವುದಿಲ್ಲ? ಮತ್ತು ಅದೇ ಶರೀರದೊಂದಿಗೆ ಸ್ವರ್ಗಕ್ಕೇಕೆ ಹೋಗುವುದಿಲ್ಲ ? [91]

ಹೀಗೆ, ಮ್ಯಾಥ್ಯೂರಚಿತ ಇಂಜೀಲಿನ ವಿಷಯವಾಯಿತು. [ಈಗ] 'ಮಾರ್ಕ್' ರಚಿತ ಇಂಜೀಲಿನ ವಿಷಯದಲ್ಲಿ ಬರೆಯಲ್ಪಡುತ್ತದೆ.

## 'ಮಾರ್ಕ್'ರಚಿತ ಇಂಜೀಲ್*

### (ಬಡಗಿಯ ಪುತ್ರನು ಪ್ರವಾದಿಯಾಗಿ, ಈಶ್ವರನ ಪುತ್ರನೇ ಆಗಿ ಬಿಟ್ಟನು)

**[92]** ಇವನು ಬಡಗಿಯಲ್ಲವೇನು?

[ಬೈಬಲ್ (ಇಂ). ಮಾರ್ಕ್ :- ಪರ್ವ. 6; ಆ. 3]

**ಸಮೀಕ್ಷಕ:**—ವಸ್ತುತಃ 'ಯೂಸಫ್'† ಬಡಗಿಯಾಗಿದ್ದನು. ಆದುದರಿಂದ, ಏಸುವೂ ಕೂಡ, ಬಡಗಿಯಾಗಿದ್ದನು! ಎಷ್ಟೋ ವರ್ಷಗಳವರೆಗೆ ಬಡಗಿಯ ಕೆಲಸವನ್ನು ಮಾಡುತ್ತಿದ್ದನು. ಆಮೇಲೆ. ಪ್ರವಾದಿಯಾಗುತ್ತಾ-ಆಗುತ್ತಾ ಈಶ್ವರನ ಮಗನೇ ಆಗಿ ಬಿಟ್ಟನು ! ಮತ್ತು ಕಾಡುಜನರು ಮಾಡಿಟ್ಟರು ! ಆಗಲೇ ಭಾರೀ ಚಾತುರ್ಯಗಳನ್ನು ನಡೆಯಿಸಿದನು. ಕಡಿಯುವುದು-ಕುಟ್ಟುವುದು, ಸೀಳುವುದು-ಬೀಳಿಸುವುದು ಅವನ ಕೆಲಸವಾಗಿದೆ.‡ [92]

## 'ಲೂಕ್'ರಚಿತ ಇಂಜೀಲ್$

### (ಒಬ್ಬ ಈಶ್ವರನನ್ನು ಬಿಟ್ಟು ಮೂವರ ಕಲ್ಪನೆ ಏಕೆ?)

**[93]** ಏಸುವು ಅವನಿಗೆ—"ನೀನು ನನ್ನನ್ನು ಉತ್ತಮನೆಂದೇಕೆ ಹೇಳುತ್ತೀಯೋ ? [ಕೇವಲ] ಒಬ್ಬನ, ಎಂದರೆ ಈಶ್ವರನ ಹೊರತು, ಯಾವನೂ ಉತ್ತಮನಲ್ಲ.", ಎಂದು ಹೇಳಿದನು.

[ಬೈಬಲ್ (ಇಂ).ಲೂಕ್ :- ಪರ್ವ. 18; ಆ. 19]

**ಸಮೀಕ್ಷಕ:**—ಏಸುವೇ ಒಬ್ಬ ಅದ್ವಿತೀಯ ಈಶ್ವರನ ಬಗೆಗೆ ಹೇಳುತ್ತಿರುವಾಗ, ಕ್ರೈಸ್ತರು ಪವಿತ್ರಾತ್ಮಾ, ಪಿತಾ, ಹಾಗೂ ಪುತ್ರ-ಈ ಮೂವರನ್ನು ಎಲ್ಲಿಂದ ನಿರ್ಮಿಸಿಕೊಂಡರು ? [93]

---

*Gospel according to Mark †Joseph

‡ಇದು ಬಡಗಿಯ ಕೆಲಸವೂ ಹೌದು! ಬಡಗಿಯಾದ ಏಸುವಿನ ಕೆಲಸವೂ ಹೌದು! ಮತ್ತು ಏಸುವಿನ ಅನುಯಾಯಿಗಳಾದ ಕ್ರೈಸ್ತರೂ ಕೂಡ, ಅನ್ಯಮತೀಯರ ನಿಗ್ರಹಮಾಡಲು ಇದೇ ಕೆಲಸವನ್ನು ಮಾಡುತ್ತಾರೆ, ಎಂದು ಇಲ್ಲಿ ಅಭಿಪ್ರಾಯ. ಈ ಎಚ್ಚರಿಕೆಯನ್ನು ಮಹರ್ಷಿ ದಯಾನಂದರು ಏಕೆ ಕೊಟ್ಟರು ?—ಸಂ.

$Gospel according to Luke

## (‘ಹೆರೋದ’ನಿಗೆ ಚಮತ್ಕಾರವನ್ನೇಕೆ ತೋರಿಸಲಿಲ್ಲ?)

[94] ಆಗ ಅವನನ್ನು ‘ಹೆರೋದ’*ನ ಬಳಿಗೆ ಕಳುಹಿಸಿದರು.

ಹೆರೋದನು ಏಸುವನ್ನು ಕಂಡು ಬಹಳ ಆನಂದಿತನಾದನು. ಏಕೆಂದರೆ, ಅವನು ಅವನನ್ನು ಬಹಳ ದಿನಗಳಿಂದ ನೋಡಬಯಸುತ್ತಿದ್ದನು. ಏಕೆಂದರೆ, ಅವನ ಬಗೆಗೆ ಬಹಳ ಸಂಗತಿಗಳನ್ನು ಆಲಿಸಿದ್ದನು. ಮತ್ತು ಅವನ ಕೆಲವು ಚಮತ್ಕಾ ಗಳನ್ನು ನೋಡುವ ಆಸೆ ಅವನಿಗುಂಟಾಯಿತು.

ಅವನು ಬಹಳ ವಿಷಯಗಳ ಬಗೆಗೆ ಪ್ರಶ್ನಿಸಿದನು. ಆದರೆ, ಅವನು ಅವನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.

[ಬೈಬಲ್ (ಇಂ). ಲೂಕ್:– ಪರ್ವ. 23; ಆ.7–9]

ಸಮೀಕ್ಷಕ:—ಈ ಮಾತು ‘ಮ್ಯಾಥ್ಯೂ’ವಿನ ಕೃತಿಯಲ್ಲಿಲ್ಲ. ಆದುದರಿಂದ, ಈ ಸಾಕ್ಷಿಗಳು ಪ್ರತಿಕೂಲರಾದರು. ಏಕೆಂದರೆ, ಸಾಕ್ಷಿಗಳು ಏಕಪ್ರಕಾರವಾಗಿರಬೇಕು!

ಮತ್ತು ಏಸುವು ಚತುರನೂ, ಚಾಮತ್ಕಾರಿಕನೂ ಆಗಿದ್ದಿದ್ದರೆ, ಉತ್ತರವನ್ನು ಕೊಡುತ್ತಿದ್ದನು. ಮತ್ತು ಚಮತ್ಕಾರಗಳನ್ನೂ ತೋರಿಸುತ್ತಿದ್ದನು!

ಇದರಿಂದ, ಏಸುವಿನಲ್ಲಿ ವಿದ್ಯೆ ಮತ್ತು ಚಮತ್ಕಾರ ಸ್ವಲ್ಪವೂ ಇರಲಿಲ್ಲ, ಎಂದು ವಿದಿತವಾಗುತ್ತದೆ. [94]

## ಯೋಹನ†–ರಚಿತ ಸುಸಮಾಚಾರ

## (ಎಲ್ಲವೂ ವಚನದ ಮೂಲಕ ಆಯಿತು)

[95] ಆದಿಯಲ್ಲಿ ವಚನವಿತ್ತು. ಮತ್ತು ವಚನವು ಈಶ್ವರನ ಜೊತೆ ಯಲ್ಲಿತ್ತು. ಮತ್ತು ವಚನವು ಈಶ್ವರನಾಗಿತ್ತು.

ಅದು ಆದಿಯಲ್ಲಿ ಈಶ್ವರನೊಂದಿಗಿತ್ತು.

ಎಲ್ಲವೂ ಅದರ ಮೂಲಕ ಸೃಜಿಸಲ್ಪಟ್ಟಿತು.‡ ಮತ್ತು ಯಾವುದು ಸೃಜಿಸಲ್ಪಟ್ಟಿದೆಯೋ, ಅದು ಯಾವುದೂ ಕೂಡ, ಅದರ ಹೊರತು ಸೃಜಿಸಲ್ಪಡ ಲಿಲ್ಲ.

---

*Herod †John

‡ಭಾರತದಲ್ಲಿ ಮೊದಲು ‘ಶಬ್ದಬ್ರಹ್ಮವಾದ’, ಎಂಬ ಮತವಿತ್ತು. ಭರ್ತೃಹರಿಯು ತನ್ನ ‘ವಾಕ್ಯಪದೀಯ’ದ ಪ್ರಥಮ ಶ್ಲೋಕದಲ್ಲಿ ಇದರ ಸ್ಪಷ್ಟವರ್ಣನೆಯನ್ನು ಮಾಡಿದ್ದಾನೆ. ಈ ಮತವು ಭರ್ತೃಹರಿಗೆ ಮೊದಲಿಗಿಂತಲೂ ಪ್ರಚಲಿತವಾಗಿತ್ತು. ಇದರ ಅತಿ ಭ್ರಷ್ಟರೂಪವೇ ಈ ಆಯತುಗಳಲ್ಲಿದೆ.—ಯು.ಮೀ.

ಅದರಲ್ಲಿ ಜೀವನವಿತ್ತು. ಮತ್ತು ಆ ಜೀವನವು ಮಾನವರ ಬೆಳಕಾಗಿದ್ದಿತು.

[ಬೈಬಲ್ (ಇಂ). ಯೋಹನ:-ಪರ್ವ. 1; ಆ. 1-4]

**(ಕಾರಣವಿಲ್ಲದೇ, ವಚನದ ಮೂಲಕ ಸೃಷ್ಟಿಯಾಗಲಾರದು)**

**ಸಮೀಕ್ಷಕ:**—ಆದಿಯಲ್ಲಿ ವಚನವು ವಕ್ತೃವಿಲ್ಲದೇ ಆಗಲಾರದು. ಮತ್ತು ವಚನವು ಈಶ್ವರನೊಂದಿಗೆ ಇದ್ದಿತಾದರೆ, ಈ ಕಥನ ವ್ಯರ್ಥವಾಯಿತು. ಮತ್ತು **ವಚನವೆಂದಿಗೂ ಈಶ್ವರನಾಗಲಾರದು!** ಏಕೆಂದರೆ, ಅದು ಆದಿಯಲ್ಲಿ ಈಶ್ವರ ನೊಂದಿಗೆ ಇದ್ದಿತಾದರೆ, ಮೊದಲು ವಚನ[ವಿದ್ದಿತು]; ಅಥವಾ ಈಶ್ವರನಿದ್ದನು, ಎನ್ನುವುದು ಸಂಗತವಾಗಲಾರದು.

**ಎಂದಿನವರೆಗೆ ಅದಕ್ಕೆ ಕಾರಣವಿರುವುದಿಲ್ಲವೋ, ಅಂದಿನವರೆಗೆ ವಚನದ ಮೂಲಕ ಸೃಷ್ಟಿಯು ಎಂದಿಗೂ ಆಗಲಾರದು!** ಮತ್ತು ವಚನವಿಲ್ಲದೇ ಹೋದರೂ ಕೂಡ, ಮೌನದಿಂದಿದ್ದು, ಕರ್ತೃವು ಸೃಷ್ಟಿಯನ್ನು ಮಾಡಬಲ್ಲನು !

ಜೀವನ ಯಾವುದರಲ್ಲಿತ್ತು ಅಥವಾ ಏನಾಗಿತ್ತು? ಈ ಮಾತಿನಿಂದ, ಜೀವಾತ್ಮನು ಅನಾದಿಯೆಂದು ಒಪ್ಪಿಕೊಳ್ಳುವಿರಿ! ಅನಾದಿಯಾಗಿರುವನಾದರೆ, ಆದಮನ ಮೂಗಿನ ಹೊಳ್ಳೆಗಳಲ್ಲಿ ಉಸಿರನ್ನೂದುವುದು ಸುಳ್ಳಾಯಿತು!

**ಮತ್ತು ಜೀವನವು ಮಾನವರಿಗೆ ಮಾತ್ರ ಬೆಳಕೋ? ಪಶು ಮೊದಲಾದುವಕ್ಕೆ ಅಲ್ಲವೋ ?** [95]

**(ಶೈತಾನನು ಯಹೂದಾಗೆ ದಾರಿ ತಪ್ಪಿಸಿದನು)**

**[96] ಮತ್ತು ರಾತ್ರಿ ಭೋಜನ*ದ ವೇಳೆಯಲ್ಲಿ, ಶೈತಾನನು 'ಶಿಮೋನ'†ನ ಪುತ್ರನಾದ 'ಯಹೂದಾ ಇಸ್ಕರಿಯೋತಿ'ಯ ಮನದಲ್ಲಿ ಅವನನ್ನು ಹಿಡಿಯಿಸುವ ಅಭಿಪ್ರಾಯವನ್ನು ಮೂಡಿಸಿಯೇ ಬಿಟ್ಟಿದ್ದನು.**

[ಬೈಬಲ್ (ಇಂ). ಯೋಹನ:-ಪರ್ವ. 18; ಆ. 2]

**(ಶೈತಾನನನ್ನು ಯಾರು ಪಥಭ್ರಷ್ಟನನ್ನಾಗಿ ಮಾಡಿದರು?)**

**ಸಮೀಕ್ಷಕ:**—ಈ ಮಾತು ಸತ್ಯವಲ್ಲ. ಏಕೆಂದರೆ, ಯಾವನಾದರೂ ಕ್ರೈಸ್ತ ರನ್ನು—"ಶೈತಾನನು ಎಲ್ಲರನ್ನೂ ಪಥಭ್ರಷ್ಟರನ್ನಾಗಿ ಮಾಡುತ್ತಾನೆಯಾದರೆ, ಶೈತಾನನನ್ನು ಯಾವನು ಪಥಭ್ರಷ್ಟನನ್ನಾಗಿ ಮಾಡುತ್ತಾನೆ?", ಎಂದು ಕೇಳಬೇಕು.

---

*Supper †Simon

"ಶೈತಾನನು ತನ್ನಷ್ಟಕ್ಕೆ ತಾನೇ ಪಥಭ್ರಷ್ಟನಾಗುತ್ತಾನೆ.", ಎನ್ನುವಿರಾದರೆ, ಮಾನವರೂ ಕೂಡ, ತಮ್ಮಷ್ಟಕ್ಕೆ ತಾವೇ ಪಥಭ್ರಷ್ಟರಾಗಬಲ್ಲರು! ಇನ್ನು ಶೈತಾನನ ಕೆಲಸವೇನಿದೆ?

ಮತ್ತು ಶೈತಾನನನ್ನು ಸೃಜಿಸುವವನೂ ಮತ್ತು ದಾರಿ ತಪ್ಪಿಸುವವನೂ ಪರಮೇಶ್ವರನಾದರೆ, ಕ್ರೈಸ್ತರ ಅದೇ ಈಶ್ವರನು ಶೈತಾನನಿಗೂ ಶೈತಾನನಾಗಿ ಕುಳಿತನು! ಪರಮೇಶ್ವರನೇ ಎಲ್ಲರನ್ನೂ ಅವನ ಮೂಲಕ ಪಥಭ್ರಷ್ಟರನ್ನಾಗಿ ಮಾಡಿದನು!

ಅಲ್ಲಾ! ಇಂತಹ ಕೆಲಸಗಳು ಈಶ್ವರನವಾಗಬಲ್ಲವೇ? ನಿಜವೇನೆಂದರೆ, ಕ್ರೈಸ್ತರ ಈ ಪುಸ್ತಕ ಮತ್ತು ಏಸುವನ್ನು ಈಶ್ವರನ ಮಗನೆಂದೂ ಮಾಡಿಟ್ಟ ಮಂದಿಗಳು ಶೈತಾನರಾಗಿದ್ದರೆ, ಆಗಿರಬಹುದು! ಆದರೆ, ಅದು ಈಶ್ವರಕೃತವಾದ ಪುಸ್ತಕವೂ ಅಲ್ಲ; ಮತ್ತು ಏಸುವು ಈಶ್ವರನ ಮಗನೂ ಅಲ್ಲ! [96]

## (ನಾನಿಲ್ಲದೇ ಈಶ್ವರನ ಬಳಿಗೆ ಹೋಗಲಾರಿರಿ)

[97] ನಿಮ್ಮ ಮನಸ್ಸು ವ್ಯಾಕುಲವಾಗದಿರಲಿ! ಈಶ್ವರನ ಮೇಲೆ ನಂಬಿಕೆಯನ್ನಿಡಿರಿ!

ನನ್ನ ತಂದೆಯ ಮನೆಯಲ್ಲಿ ಬಹಳ ನಿವಾಸಸ್ಥಾನಗಳಿವೆ. ಇಲ್ಲದೇ ಇದ್ದಲ್ಲಿ, ನಾನು ನಿಮಗೆ—

'ನಾನು ನಿಮಗಾಗಿ ಸ್ಥಳವನ್ನು ಸಿದ್ಧಗೊಳಿಸಲು ಹೋಗುತ್ತೇನೆ.', ಎಂದು ಹೇಳುತ್ತಿದ್ದೆನು.

ಮತ್ತು ನಾನು ಹೋಗಿ ನಿಮಗಾಗಿ ಸ್ಥಳವನ್ನು ಮಾಡುವೆನಾದರೆ, ಮರಳಿ ಬಂದು ನಾನು ಇರುವಲ್ಲಿಯೇ ನೀವೂ ಇರಲಾಗುವಂತೆ, ನಿಮ್ಮನ್ನು ನನ್ನೆಡೆಗೆ ಕರೆದೊಯ್ಯುವೆನು.

ಏಸುವು ಅವನಿಗೆ—

"ನಾನೇ ಮಾರ್ಗ; ಮತ್ತು ಸತ್ಯ, ಮತ್ತು ಜೀವನವಾಗಿದ್ದೇನೆ! ನನ್ನ ಮೂಲಕವಲ್ಲದೇ, ಯಾವನೂ ತಂದೆಯ ಬಳಿ ಸೇರಲಾರನು!

"ನೀವು ನನ್ನನ್ನು ತಿಳಿಯುವಿರಾದರೆ, ನನ್ನ ತಂದೆಯನ್ನೂ ತಿಳಿಯುವಿರಿ.", ಎಂದು ಹೇಳಿದನು.

[ಬೈಬಲ್ (ಇಂ). ಯೋಹಸ:-ಪರ್ವ. 14; ಆ. 1-3,6,7]

## (ಏಸುವು ಈಶ್ವರನ ಗುತ್ತಿಗೆ ತೆಗೆದುಕೊಂಡಿದ್ದನೇನು?)

**ಸಮೀಕ್ಷಕ:**—ಈಗ ನೋಡಿರಿ! ಏಸುವಿನ ಈ ವಚನಗಳು ಪೋಪಲೀಲೆಗಿಂತ ಕಡಿಮೆಯೇನು? ಇಂತಹ ಪ್ರಪಂಚವನ್ನು ರಚಿಸದೇ ಇದ್ದರೆ, ಅವನ ಮತದಲ್ಲಿ ಯಾವನು ತಾನೇ ಸಿಕ್ಕಿಕೊಳ್ಳುತ್ತಿದ್ದನು?

ಏಸುವು ತನ್ನ ತಂದೆಯನ್ನು ಗುತ್ತಿಗೆಗೆ ತೆಗೆದುಕೊಂಡಿದ್ದಾನೇನು? ಮತ್ತು ಅವನು ಏಸುವಿಗೆ ಪರೀಭೂತನಾಗಿರುವನಾದರೆ, ಪರಾಧೀನನಾದುದರಿಂದ, ಅವನು **ಈಶ್ವರನೇ ಅಲ್ಲ! ಏಕೆಂದರೆ, ಈಶ್ವರನು ಯಾವನ ಒತ್ತಾಸೆಗೂ ಕಿವಿಗೊಡನು!**

ಏಸುವಿಗಿಂತ ಮುನ್ನ, ಯಾವನೂ ಈಶ್ವರನನ್ನು ಕಂಡುಕೊಂಡಿರಲಿಲ್ಲವೇನು? ಇಂತಹ ಸ್ಥಾನ, ಮೊದಲಾದುದರ ಪ್ರಲೋಭನವನ್ನೊಡ್ಡುವವನು. ಮತ್ತು ತನ್ನ ಬಾಯಿನಿಂದಲೇ ತಾನೇ ಮಾರ್ಗ, ಸತ್ಯ, ಮತ್ತು ಜೀವನವಾಗಿದ್ದೇನೆಂದು ಕೊಚ್ಚಿಕೊಳ್ಳುವವನು ಎಲ್ಲ ರೀತಿಯಿಂದಲೂ ದಾಂಭಿಕನೆನಿಸುತ್ತಾನೆ! **ಆದುದರಿಂದ, ಈ ಮಾತು ಎಂದಿಗೂ ಸತ್ಯವಾಗಲಾರದು.** [97]

### (ನನ್ನ ಮೇಲೆ ವಿಶ್ವಾಸವಿಟ್ಟರೆ, ನನ್ನಂತೆ ಕೆಲಸ ಮಾಡುವಿರಿ)

**[98]** **ನಾನು ನಿಮಗೆ ಸತ್ಯವನ್ನೇ ಹೇಳುತ್ತೇನೆ—'ನನ್ನ ಮೇಲೆ ನಂಬಿಕೆಯನ್ನಿಡುವವನು, ಯಾವ ಕೆಲಸಗಳನ್ನು ನಾನು ಮಾಡುತ್ತೇನೋ, ಅವನ್ನು ಅವನೂ ಕೂಡ, ಮಾಡುವನು. ಮತ್ತು ಅವಕ್ಕಿಂತ ದೊಡ್ಡ ಕಾರ್ಯಗಳನ್ನು ಮಾಡುವನು'.**

[ಬೈಬಲ್ (ಇಂ). ಯೋಹನ:-ಪರ್ವ. 14; ಆ. 12]

### (ಏಸುವಿನ ಮೇಲೆ ವಿಶ್ವಾಸ; ಆದರೆ, ಚಮತ್ಕಾರದ ಕಾರ್ಯವೇನೂ ಇಲ್ಲ)

**ಸಮೀಕ್ಷಕ:**—ಈಗ ನೋಡಿರಿ! ಏಸುವಿನ ಮೇಲೆ ನಂಬಿಕೆಯನ್ನಿಡುವ ಕ್ರೈಸ್ತರು ಹೆಣಗಳನ್ನು ಜೀವಂತಗೊಳಿಸುವುದೇ ಮೊದಲಾದ ಕೆಲಸಗಳನ್ನು ಮಾಡಲಾರರೇತಕ್ಕೆ? ಮತ್ತು ನಂಬಿಕೆಯಿಂದಲೂ ಕೂಡ, ಆಶ್ಚರ್ಯಯುಕ್ತವಾದ ಕರ್ಮಗಳನ್ನು ಮಾಡಿರಲಿಲ್ಲವೆಂದೇ ನಿಶ್ಚಿತವಾಗಿ ತಿಳಿದುಕೊಳ್ಳಬೇಕು.

ಏಕೆಂದರೆ, ಸ್ವತಃ ಏಸುವೇ—'ನೀವೂ ಕೂಡ, ಆಶ್ಚರ್ಯಕರ ಕರ್ಮಗಳನ್ನು ಮಾಡುವಿರಿ', ಎಂದು ಹೇಳುತ್ತಾನೆ. ಆದರೂ ಕೂಡ, ಈಗ [ಯಾವ] ಕ್ರೈಸ್ತನೂ ಅಂತಹದೊಂದನ್ನೂ ಮಾಡಲಾರನು!

ಅಂದ ಮೇಲೆ, ಏಸುವನ್ನು, ಶವಗಳನ್ನು ಸಜೀವಗೊಳಿಸುವುದೇ ಮೊದಲಾದ ಕಾರ್ಯಗಳನ್ನು ಮಾಡುವವನೆಂದು ಒಪ್ಪಿಕೊಳ್ಳಲು ಯಾವನ ಹೃದಯದ ಕಣ್ಣು ಒಡೆದು ಹೋಗಿದೆ? [98]

### (ಅದ್ವೈತ, ಎಂದ ಮೇಲೆ ಮೂವರನ್ನೇಕೆ ಒಪ್ಪುತ್ತೀರಿ?)

**[99]** **ಅವನು ಅದ್ವೈತ, ಸತ್ಯ ಈಶ್ವರನಾಗಿದ್ದಾನೆ.**

[ಬೈಬಲ್ (ಇಂ). ಯೋಹನ:-ಪರ್ವ. 17; ಆ. 3]

ಸಮೀಕ್ಷಕ:—ಅದ್ವೈತನಾದ ಏಕಮಾತ್ರ ಈಶ್ವರನಿರುವುದಾದರೆ, ಕ್ರೈಸ್ತರು ಮೂವರನ್ನು* ವರ್ಣಿಸುವುದು ಸರ್ವಥಾ ಅರ್ಥಹೀನವಾಗಿದೆ. [99]

ಇದೇ ರೀತಿ, ಬಹಳ ಕಡೆ 'ಇಂಜೀಲಿ'ನಲ್ಲಿ ನಿರರ್ಥಕ ಸಂಗತಿಗಳು ತುಂಬಿವೆ!

## 'ಯೋಹನ'ನ ಪ್ರಕಾಶಿತ ವಾಕ್ಯಗಳು

ಈಗ ಯೋಹನನ ಅದ್ಭುತ ವಚನಗಳನ್ನು ಆಲಿಸಿರಿ—

### (ಯೋಹನನ ಸ್ವರ್ಗದ ರೀತಿ)

**[100] ಮತ್ತು ತಮ್ಮ-ತಮ್ಮ ತಲೆಗಳ ಮೇಲೆ ಚಿನ್ನದ ಕಿರೀಟಗಳನ್ನು ಇಟ್ಟು ಕೊಂಡಿದ್ದರು.**

**ಮತ್ತು ಈಶ್ವರನ ಏಳೂ ಆತ್ಮಗಳಾದ ಏಳು ಅಗ್ನಿದೀಪಗಳು ಸಿಂಹಾಸನದ ಮುಂದೆ ಉರಿಯುತ್ತಿದ್ದವು.**

**ಮತ್ತು ಸಿಂಹಾಸನದ ಮುಂದೆ ಗಾಜಿನ ಸಮುದ್ರವಿದೆ. ಮತ್ತು ಸಿಂಹಾಸನದ ಅಕ್ಕ-ಪಕ್ಕಗಳಲ್ಲಿ, ಹಿಂದೆ-ಮುಂದೆ ಕಣ್ಣುಗಳನ್ನುಳ್ಳ ನಾಲ್ಕು ಪ್ರಾಣಿಗಳಿವೆ.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ.4; ಆ. 4-6]

### (ಹಿಂದೆ-ಮುಂದೆ ಕಣ್ಣುಗಳಿರುವುದು ಅಸಂಭವ)

ಸಮೀಕ್ಷಕ:—ಈಗ ನೋಡಿರಿ! ಕ್ರೈಸ್ತರ ಸ್ವರ್ಗ ಒಂದು ನಗರಕ್ಕೆ ಸಮ ವಾಗಿದೆ! ಮತ್ತು ಇವರ ಈಶ್ವರನೂ ಕೂಡ, ದೀಪಕ್ಕೆ ಸಮಾನವಾದ ಅಗ್ನಿ ಯಾಗಿದ್ದಾನೆ! ಮತ್ತು ಚಿನ್ನದ ಕಿರೀಟ ಮೊದಲಾದ ಒಡವೆಗಳನ್ನು ಧಾರಣ ಮಾಡುವುದು ಮತ್ತು ಮುಂದೆ-ಹಿಂದೆ ಕಣ್ಣುಗಳಿರುವುದು ಅಸಂಭವವಾಗಿದೆ. ಈ ಮಾತುಗಳನ್ನು ಯಾವನು ಒಪ್ಪಬಲ್ಲನು?

ಮತ್ತು ಅಲ್ಲಿ ಸಿಂಹವೇ ಮೊದಲಾದ ನಾಲ್ಕು ಪಶುಗಳು [ಇರುತ್ತವೆ, ಎಂದು] ಬರೆಯಲ್ಪಟ್ಟಿದೆ! [100]

### (ಏಳು ಮುದ್ರಿಕೆಗಳಲ್ಲಿ ಮುಚ್ಚಿದ್ದ ಪುಸ್ತಕ)

**[101] ಮತ್ತು ನಾನು ಸಿಂಹಾಸನದ ಮೇಲೆ ಕುಳಿತವನ ಬಲಗೈಯಲ್ಲಿ, ಒಳಗೆ ಮತ್ತು ಹಿಂಬದಿಯಲ್ಲಿ ಬರೆಯಲ್ಪಟ್ಟಿದ್ದ ಒಂದು ಪುಸ್ತಕವನ್ನು ನೋಡಿದೆನು. ಮತ್ತು ಏಳು ಮುದ್ರಿಕೆಗಳಿಂದ ಅದರ ಮೇಲೆ ಮುದ್ರೆಯೊತ್ತಿದ್ದಿತು.**

---

*ಎಂದರೆ, ತಂದೆ, ಮಗ ಮತ್ತು ಪವಿತ್ರಾತ್ಮಾ—ಅನು.

ಈ ಪುಸ್ತಕವನ್ನು ತೆರೆಯುಲೂ, ಮತ್ತು ಅದರ ಮುದ್ರೆಗಳನ್ನು ಒಡೆಯುಲೂ ಯೋಗ್ಯನಾದವನು ಯಾವನು?

ಮತ್ತು ಆ ಪುಸ್ತಕವನ್ನು ತೆರೆಯುಲು, ಅಥವಾ ಅದನ್ನು ನೋಡಲು ಸಮರ್ಥನಾದವನು ಸ್ವರ್ಗದಲ್ಲಿಯೂ ಇಲ್ಲ; ಪೃಥಿವಿಯ ಮೇಲೂ ಇಲ್ಲ; ಪೃಥಿವಿಯಿಂದ ಕೆಳಗೂ ಯಾವನೂ ಇಲ್ಲ!

ಮತ್ತು ಆ ಪುಸ್ತಕವನ್ನು ತೆರೆಯುಲು, ಅಥವಾ ಓದಲು, ಅಥವಾ ಅದನ್ನು ನೋಡಲು ಯೋಗ್ಯನಾದವನು ಯಾವನೂ ಸಿಕ್ಕಲಿಲ್ಲವೆಂದು ನಾನು ಬಹಳವಾಗಿ ಅಳತೊಡಗಿದೆನು.

[ಬೈಬಲ್ (ಇಂ). ಯೋಹನ–ಪ್ರಕಾಶಿತ:–ಪರ್ವ. 5; ಆ. 1–4]

## (ಆ ಪುಸ್ತಕವನ್ನು ಏಸುವೇ ತೆರೆಯಬೇಕಿತ್ತೋ?)

**ಸಮೀಕ್ಷಕ:**—ಈಗ ನೋಡಿರಿ! ಕ್ರೈಸ್ತರ ಸ್ವರ್ಗದಲ್ಲಿ ಸಿಂಹಾಸನಗಳ ಮತ್ತು ಮನುಷ್ಯರ ವೈಭವ! ಮತ್ತು ಯಾವುದನ್ನು ತೆರೆಯುವುದೇ ಮೊದಲಾದ ಕೆಲಸ ಮಾಡುವವನು ಸ್ವರ್ಗದಲ್ಲಿ ಮತ್ತು ಪೃಥಿವಿಯ ಮೇಲ್ ಯಾವನೂ ಸಿಕ್ಕಲಿಲ್ಲವೋ, ಅಂತಹ ಅನೇಕ ಮುದ್ರಿಕೆಗಳಿಂದ ಮುಚ್ಚಲ್ಪಟ್ಟ ಪುಸ್ತಕ!!

ಯೋಹನನ ರೋದನ! ಮತ್ತು ಆ ಮೇಲೆ ಪ್ರಾಚೀನನೊಬ್ಬನು—'ಆ ಏಸುವೇ ತೆರೆಯುವವನಾಗಿದ್ದಾನೆ', ಎಂದು ಹೇಳಿದನು.

'ಯಾವನ ಮದುವೆಯೋ, ಅವನದೇ ಹಾಡು!', ಎಂಬುದೇ ತಾತ್ಪರ್ಯ!

ನೋಡಿರಿ! ಏಸುವಿನ ಮೇಲೆಯೇ ಎಲ್ಲ ಹಿರಿಮೆಗಳೂ ವಾಲಿಸಲ್ಪಡುತ್ತವೆ! ಆದರೆ, ಈ ಮಾತುಗಳು ಕೇವಲ ಕಥನಮಾತ್ರವಾಗಿವೆ. [101]

## (ಮೇಕೆಯ ಮರಿಗೆ ಏಳುಕೊಂಬು; ಏಳು ಕಣ್ಣು!)

**[102]** ಮತ್ತು ನಾನು ದೃಷ್ಟಿ ಬೀರಿದೆನು. ಮತ್ತು ನೋಡಿರಿ! ಸಿಂಹಾಸನದ ಮತ್ತು ನಾಲ್ಕು ಕಡೆಯ ಪ್ರಾಣಿಗಳ ಮಧ್ಯೆ, ಮತ್ತು ಪ್ರಾಚೀನರ ನಡುವೆ, ಮೇಕೆಯ ಮರಿಯೊಂದು ವಧಿಸಲ್ಪಟ್ಟುದೋ, ಎಂಬಂತೆ ನಿಂತಿದೆ! ಅದು ಸಮಸ್ತ ಭೂಮಿಯ ಮೇಲಕ್ಕೆ ಕಳುಹಿಸಲ್ಪಟ್ಟ, ಈಶ್ವರನ ಏಳೂ ಆತ್ಮಗಳಾದ, ಏಳು ಕೊಂಬುಗಳನ್ನೂ ಮತ್ತು ಏಳು ನೇತ್ರಗಳನ್ನೂ ಹೊಂದಿದೆ.

[ಬೈಬಲ್ (ಇಂ). ಯೋಹನ–ಪ್ರಕಾಶಿತ:–ಪರ್ವ. 5; ಆ. 6]

## (ಸ್ವರ್ಗದಲ್ಲಿ ಏಸುವಿಗೆ ಏಳು ಕೊಂಬು, ಏಳು ಕಣ್ಣು)

ಸಮೀಕ್ಷಕ:—ಈಗ ನೋಡಿರಿ! ಈ ಯೋಹನನ ಸ್ವಪ್ನದ ಮನೋವ್ಯಾಪಾರವನ್ನು! ಆ ಸ್ವರ್ಗದ ನಡುವೆ ಎಲ್ಲ ಕ್ರೈಸ್ತರೂ, ಹಾಗೂ ನಾಲ್ಕು ಪಶುಗಳೂ; ಮತ್ತು ಏಸುವೂ ಕೂಡ, ಇದ್ದಾರೆ; ಮತ್ತೆ ಯಾರೂ ಇಲ್ಲ!

ಇಲ್ಲಿಯಂತೂ ಏಸುವಿಗೆ ಎರಡು ಕಣ್ಣುಗಳಿದ್ದವು. ಮತ್ತು ಕೊಂಬಿನ ಹೆಸರೂ ಕೂಡ, ಇರಲಿಲ್ಲ! ಮತ್ತು ಸ್ವರ್ಗದಲ್ಲಿ ಹೋಗಿ, ಏಳು ಕೊಂಬುಗಳನ್ನುಳ್ಳವನೂ ಮತ್ತು ಏಳು ಕಣ್ಣುಗಳನ್ನುಳ್ಳವನೂ ಆದನೆಂಬುದು ಮಹದದ್ಭುತವಾದ ಸಂಗತಿಯಾಯಿತು! ಮತ್ತು ಈಶ್ವರನ ಆ ಏಳು ಆತ್ಮಗಳು ಏಸುವಿನ ಕೊಂಬುಗಳು ಮತ್ತು ನೇತ್ರಗಳಾಗಿ ಹೋಗಿದ್ದವು!

ಅಯ್ಯೋ! ಇಂತಹ ಮಾತುಗಳನ್ನು ಕ್ರೈಸ್ತರು ಏತಕ್ಕೆ ಒಪ್ಪಿಕೊಂಡುಬಿಟ್ಟರು? ಆಹಾ! ಸ್ವಲ್ಪವಾದರೂ ಬುದ್ಧಿಯನ್ನು ಬಳಸಬಹುದಾಗಿತ್ತಲ್ಲಾ! [102]

## (ಮೋಕೆಯು ಮರಿಯು ಎದುರಿಗೆ ಬಿದ್ದರು)

[103] ಮತ್ತು ಅವನು ಪುಸ್ತಕವನ್ನು ತೆಗೆದುಕೊಂಡಾಗ, ನಾಲ್ವರು ಪ್ರಾಣಿಗಳೂ ಮತ್ತು ಇಪ್ಪತ್ತನಾಲ್ಕು ಜನ ಪ್ರಾಚೀನರೂ ಮೋಕೆಯು ಮರಿಯ ಮುಂದೆ ಬಿದ್ದುಬಿಟ್ಟರು. ಮತ್ತು ಪ್ರತಿಯೊಬ್ಬನ ಬಳಿಯೂ ಪುಂಗಿಯಿದ್ದಿತು. ಮತ್ತು ಪವಿತ್ರರಾದವರ ಪ್ರಾರ್ಥನಾರೂಪವಾದ ಧೂಪದಿಂದ ತುಂಬಿದ ಚಿನ್ನದ ಬಟ್ಟಲುಗಳಿದ್ದವು.

[ಬೈಬಲ್ (ಇಂ.) ಯೋಹನ-ಪ್ರಕಾಶಿತ:-ಪರ್ವ. 5; ಆ. 8]

## (ಕ್ರೈಸ್ತರ ಸ್ವರ್ಗ ಮೂರ್ತಿಪೂಜಕನ ಮನೆಯೇ!)

ಸಮೀಕ್ಷಕ:—ಭಲೇ! ಏಸುವು ಸ್ವರ್ಗದಲ್ಲಿ ಇಲ್ಲದಿರುವಾಗ ಈ ಬಡಪಾಯಿಗಳು ಧೂಪ-ದೀಪ-ನೈವೇದ್ಯ-ಆರತೀ ಮೊದಲಾದ ಪೂಜೆಗಳನ್ನು ಯಾರಿಗೆ ಮಾಡುತ್ತಿರಬಹುದು?

ಮತ್ತು ಇಲ್ಲಿ "ಪ್ರಾಟೆಸ್ಟೆಂಟ್"[1] ಕ್ರೈಸ್ತರುಗಳು ಮೂರ್ತಿಪೂಜೆಯನ್ನೇನೋ ಖಂಡಿಸುತ್ತಾರೆ! ಆದರೆ, ಇವರ ಸ್ವರ್ಗವು ಮೂರ್ತಿಪೂಜೆಯ ಮನೆಯಾಗಿ ಬಿಟ್ಟಿದೆ! [103]

1. Protestant

### (ಸ್ವಪ್ನದಲ್ಲಿ ಪುಸ್ತಕದೊಳಗಿನಿಂದ ಕುದುರೆ ಬರುವುದು)

[104] ಮತ್ತು ಮೇಕೆಯು ಮರಿಯು ಮುದ್ರೆಗಳಲ್ಲೊಂದನ್ನು ತೆರೆದಾಗ, ನಾನು ದೃಷ್ಟಿ ಬೀರಿದೆನು! ನಾಲ್ಕು ಪ್ರಾಣಿಗಳಲ್ಲೊಂದು ಮೇಘಗರ್ಜನದಂತಹ ಧ್ವನಿಯಿಂದ—'ಬಾ ಮತ್ತು ನೋಡು', ಎಂದು ಹೇಳುತ್ತಿದ್ದುದನ್ನು ಕೇಳಿದೆನು.

ಮತ್ತು ನಾನು ನಿಟ್ಟಿಸಿ ನೋಡಿದೆನು. ಮತ್ತು ನೋಡಿರಿ! ಬಿಳಿಯದೊಂದು ಕುದುರೆಯಿದೆ! ಮತ್ತು ಅದರ ಮೇಲೆ ಕುಳಿತಿದ್ದವನ ಬಿಳಿ ಬಿಲ್ಲು ಇದೆ. ಮತ್ತು ಅವನಿಗೆ ಕಿರೀಟ ಕೊಡಲ್ಪಟ್ಟಿತು. ಮತ್ತು ಅವನು ಜಯಕಾರ ಮಾಡುತ್ತಾ. ಜಯವನ್ನು ಸಾಧಿಸಲು ಹೊರಟನು.

ಮತ್ತು ಅದು ಎರಡನೆಯ ಮುದ್ರಿಕೆಯನ್ನು ತೆರೆಯಿತು.

ಕೆಂಪು ಬಣ್ಣದ ಎರಡನೆಯ ಕುದುರೆಯು ಹೊರ ಹೊರಟಿತು. ಅದಕ್ಕೆ ಪೃಥಿವಿಯ ಮೇಲಿನ 'ಒಗ್ಗಟ್ಟನ್ನು' ತೊಡೆದು ಹಾಕುವ ಕಾರ್ಯ ಕೊಡಲ್ಪಟ್ಟಿತು.

ಮತ್ತು ಅದು ಮೂರನೆಯ ಮುದ್ರಿಕೆಯನ್ನು ತೆರೆದಾಗ, ನೋಡಿರಿ! ಒಂದು ಕರಿಯ ಕುದುರೆಯಿದೆ!

ಮತ್ತು ಅದು ನಾಲ್ಕನೆಯ ಮುದ್ರಿಕೆಯನ್ನು ತೆರೆಯಿತು.

ಇನ್ನಷ್ಟು ಈಕ್ಷಿಸಿರಿ! ಹಳದಿಯಂತಹ ಕುದುರೆಯೊಂದಿದೆ! ಮತ್ತು ಅದರ ಮೇಲೆ ಕುಳಿತಿದ್ದವನ ಹೆಸರು 'ಮೃತ್ಯು', ಎಂದಾಗಿದೆ. ಇತ್ಯಾದಿ.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 6; ಆ. 1—5,7,8]

### (ಸ್ವಪ್ನದ ಮಾತುಗಳ ಮೇಲೆ ನಂಬಿಕೆ ಅಜ್ಞಾನದ ಪರಾಕಾಷ್ಠೆ)

ಸಮೀಕ್ಷಕ:—ಈಗ ನೋಡಿರಿ! ಇದು ಪುರಾಣಗಳಿಗಿಂತಲೂ ಹೆಚ್ಚು ಸುಳ್ಳು ಲೀಲೆಯಾಗಿದೆಯೋ. ಇಲ್ಲವೋ? ಅಲ್ಲಾ! ಪುಸ್ತಕಗಳ ಬಂಧನಗಳ ಮುದ್ರಿಕೆಗಳೊಳಗೆ ಕುದುರೆ ಸವಾರರು ಹೇಗೆ ಇರಬಲ್ಲವರಾಗಿದ್ದರು?

ಇದು ಕನಸಿನ ಒದರಾಟವಷ್ಟೇ! ಯಾರು ಇದನ್ನೂ ಕೂಡ, ಸತ್ಯವೆಂದು ಒಪ್ಪಿದ್ದಾರೋ, ಅವರಲ್ಲಿ ಅವಿದ್ಯೆ ಎಷ್ಟಿದೆ, ಎಂದರೆ ಅಷ್ಟೂ ಕಡಿಮೆಯೇ! [104]

### (ಸ್ವರ್ಗದಲ್ಲಿ ನ್ಯಾಯಕ್ಕಾಗಿ ಕಾದಿರುವಿಕೆ)

[105] ಮತ್ತು ಅವರು ಉಚ್ಚ ಸ್ವರದಿಂದ—

"ಓ ಸ್ವಾಮಿ ! ಪವಿತ್ರ [ದೇವ] ಮತ್ತು ಸತ್ಯ [ಸ್ವರೂಪ!] ಎಂದಿನ ವರೆಗೆ ನೀನು ನ್ಯಾಯ ಮಾಡುವುದಿಲ್ಲ? ಮತ್ತು ಪೃಥಿವಿಯ ನಿವಾಸಿಗಳಿಂದ ನಮ್ಮ ರಕ್ತದ ಮುಯ್ಯಿ ತೀರಿಸಿಕೊಳ್ಳುವುದಿಲ್ಲ?", ಎಂದು ಕೂಗುತ್ತಿದ್ದರು.

ಮತ್ತು ಪ್ರತಿಯೊಬ್ಬನಿಗೂ ಸ್ವಚ್ಛ ವಸ್ತ್ರಗಳು ಕೊಡಲ್ಪಟ್ಟುವು. ಮತ್ತು ಅವರಿಗೆ—

"ನಿಮ್ಮ ಸಂಗಾತಿಗಳೂ, ದಾಸರೂ, ಮತ್ತು ನಿಮ್ಮಂತೆಯೇ ವಧಿಸಲ್ಪಡಲಿರುವ ನಿಮ್ಮ ಸೋದರರೂ ಪೂರ್ತಿಯಾಗಿ [ಬರುವವರೆಗೆ] ಮತ್ತೂ ಸ್ವಲ್ಪಕಾಲ ವಿಶ್ರಮಿಸಿಕೊಳ್ಳಿರಿ.", ಎಂದು ಹೇಳಲ್ಪಟ್ಟಿತು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 6; ಆ. 10,11]

**(ಕ್ರೈಸ್ತರು ನ್ಯಾಯಕ್ಕಾಗಿ ಅಳುತ್ತಲೇ ಇರುವರು)**

**ಸಮೀಕ್ಷಕ:**—ಯಾರಾರು ಕ್ರೈಸ್ತರಾಗುವರೋ, ಅವರು ವಿಚಾರಾಧೀನರಾಗಿ, ಹೀಗೆ, ನ್ಯಾಯ ಮಾಡಿಸಿಕೊಳ್ಳುವುದಕ್ಕಾಗಿ ರೋದಿಸುತ್ತಾ ಇರುವರು!

ಯಾವನು ವೇದಮಾರ್ಗವನ್ನು ಸ್ವೀಕರಿಸುವನೋ, ಅವನ ನ್ಯಾಯ ತೀರ್ಮಾನವಾಗುವುದರಲ್ಲಿ ಸ್ವಲ್ಪವೂ ತಡವಾಗುವುದಿಲ್ಲ! ಕ್ರೈಸ್ತರನ್ನು—

"ಈಶ್ವರನ ನ್ಯಾಯಾಲಯವು ಈ ದಿನಗಳಲ್ಲಿ ಮುಚ್ಚಿದೆಯೇನು? ಮತ್ತು ನ್ಯಾಯದ ಕಾರ್ಯವೂ ಆಗುತ್ತಿಲ್ಲ[ವಾದ್ದರಿಂದ], ನ್ಯಾಯಾಧೀಶರು ನಿಷ್ಕರ್ಮರಾಗಿ ಕುಳಿತಿದ್ದಾರೇನು?", ಎಂದು ಕೇಳಬೇಕು.

ಆಗ ಸ್ವಲ್ಪವೂ ಸಮಂಜಸವಾದ ಉತ್ತರವನ್ನು ಕೊಡಲಾರರು!

**(ಈ ಜನರು ಸದಾ ಅಶಾಂತರಾಗಿಯೇ ಇರುತ್ತಾರೆ)**

ಮತ್ತು ಈಶ್ವರನನ್ನೂ ದಾರಿ ತಪ್ಪಿಸುತ್ತಾರೆ! ಮತ್ತು ಇವರ ಈಶ್ವರನು ದಾರಿ ತಪ್ಪಿಯೂ ಹೋಗುತ್ತಾನೆ! ಏಕೆಂದರೆ, ಇವರ ಹೇಳಿಕೆಯಿಂದ, [ಅವನು] ತತ್ಕ್ಷಣ ಇವರ ಶತ್ರುವಿನಿಂದ ಮುಯ್ಯಿ ತೀರಿಸಿಕೊಳ್ಳತೊಡಗುತ್ತಾನೆ! ಶಾಂತಿ ಸ್ವಲ್ಪವೂ ಇಲ್ಲ!

ಮತ್ತು ಎಲ್ಲಿ ಶಾಂತಿಯಿಲ್ಲವೋ, ಅಲ್ಲಿ ದುಃಖದ ಇತಿ-ಮಿತಿಯಾದರೂ ಏನಿದ್ದೀತು? [105]

**(ನಕ್ಷತ್ರ ಬೀಳುವುದು; ಆಕಾಶದ ಸುರುಳಿ!)**

[106] ಮತ್ತು ಬಿರುಗಾಳಿಯಿಂದ ಅಲುಗಾಡಿಸಲ್ಪಟ್ಟ ಅತ್ತಿಯ ಮರದಿಂದ ಅದರ ಕಸುಗಾಯಿಗಳು ಉದುರಿಹೋಗುವ ಹಾಗೆ, ಆಕಾಶದ ನಕ್ಷತ್ರಗಳು ಭೂಮಿಯ ಮೇಲೆ ಬಿದ್ದು ಹೋದುವು!

ಮತ್ತು ಸುರುಳಿಯಂತೆ ಸುತ್ತಲ್ಪಡುವ ಆಕಾಶವು ಬೇರೆಯಾಗಿ ಹೋಯಿತು!

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 6; ಆ. 13, 14]

### (ನಕ್ಷತ್ರಗಳು ಪೃಥಿವಿಯ ಮೇಲೆ ಹೇಗೆ ಬೀಳಬಲ್ಲವು?)

**ಸಮೀಕ್ಷಕ:**—ಈಗ ನೋಡಿರಿ! ಭವಿಷ್ಯವ್ಯಕ್ತವಾದ ಯೋಹಾನನು ವಿದ್ಯೆ ಇಲ್ಲದವರಿಂದಲೇ, ಇಂತಹ ತಲೆ-ಬಾಲಗಳಿಲ್ಲದ ಕಥೆಯನ್ನು ಹಾಡಿದನು!

ಭಲೇ! ನಕ್ಷತ್ರಗಳೆಲ್ಲವೂ ಭೂಮಿಯಂತಹ ಗೋಳಗಳಾಗಿವೆ! ಒಂದು ಪೃಥಿವಿಯ ಮೇಲೆ ಬೀಳಬಲ್ಲವಾದರೂ ಹೇಗೆ? ಮತ್ತು ಸೂರ್ಯ ಮೊದಲಾದುವುಗಳ ಆಕರ್ಷಣವು ಅವುಗಳನ್ನು ಅತ್ತ-ಇತ್ತ ಬರಲು-ಹೋಗಲು ಏಕೆ ಬಿಡುವುದು?

ಮತ್ತು ಆಕಾಶವನ್ನು ಚಾಪೆಯ ಹಾಗೆಂದು ತಿಳಿದಿರುತ್ತಾನೇನು? ಈ ಆಕಾಶವು ಯಾವನಾದರೂ ಸುರುಳಿ ಸುತ್ತಲು ಅಥವಾ ರಾಶಿಹಾಕಲು ಶಕ್ಯನಾಗುವಂತಹ ಸಾಕಾರ ಪದಾರ್ಥವಲ್ಲ! **ಆದಕಾರಣ, ಯೋಹನ ಮೊದಲಾದವರೆಲ್ಲರೂ ಕಾಡುಮನುಷ್ಯರಾಗಿದ್ದರು! ಅವರಿಗೆ ಈ ವಿಷಯಗಳ ಅರಿವು ತಾನೇ ಏನಿದ್ದೀತು?** [106]

### (ಇಸ್ರಾಏಲ್ ಮತ್ತು ಯಹೂದಾನ ಕುಲಗಳ ಮೇಲೆ ಮುದ್ರೆ)

**[107] ನಾನು ಅವರ ಸಂಖ್ಯೆಯನ್ನು ಆಲಿಸಿದೆ. ಇಸ್ರಾಯೇಲನ ಸಂತತಿಯ ಸಮಸ್ತ ಕುಲಗಳಲ್ಲಿ ಒಂದು ಲಕ್ಷ ನಲವತ್ತನಾಲ್ಕು ಸಾವಿರ ಜನರ ಮೇಲೆ ಮುದ್ರೆಯೊತ್ತಲ್ಪಟ್ಟಿತು.**

**ಯಹೂದಾನ ಕುಲದಲ್ಲಿ ಹನ್ನೆರಡು ಸಾವಿರ ಜನರ ಮೇಲೆ ಮೊಹರು ಹಾಕಲ್ಪಟ್ಟಿತು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ.7; ಆ. 4,5]

### (ಬೈಬಲಿನ ಈಶ್ವರನು ಕೇವಲ ಇಸ್ರಾಏಲರಿಗೆ ಮಾತ್ರವೇನು?)

**ಸಮೀಕ್ಷಕ:**—ಬೈಬಲಿನಲ್ಲಿ ವರ್ಣಿತನಾಗಿರುವ ಈಶ್ವರನು ಕೇವಲ ಇಸ್ರಾಯೇಲ್ ಮೊದಲಾದ ಕುಲಗಳಿಗೆ ಮಾತ್ರ ಸ್ವಾಮಿಯೋ, ಅಥವಾ ಸಮಸ್ತ ಜಗತ್ತಿನ ಸ್ವಾಮಿಯೋ? ಹಾಗೆ ಇಲ್ಲವಾಗಿದ್ದಲ್ಲಿ, ಅದೇ ಕಾಡಾಡಿಗಳಿಗೇಕೆ ನೆರವು ನೀಡುತ್ತಿದ್ದನು? ಮತ್ತು, ಅವರಿಗೆ ಮಾತ್ರವೇ ಸಹಾಯ ಮಾಡುತ್ತಿದ್ದನು? ಅನ್ಯರ ನಾಮ-ಸಂಕೇತಗಳನ್ನೂ ಕೂಡ, ಎತ್ತುತ್ತಿರಲಿಲ್ಲ! **ಇದರಿಂದ, ಅವನು ಈಶ್ವರನೇ ಅಲ್ಲವೆಂದು ಸಿದ್ಧವಾಗುತ್ತದೆ!**

ಮತ್ತು ಇಸ್ರಾಯೇಲ್ ಮೊದಲಾದ ಕುಲಗಳ ಮಾನವರ ಮೇಲೆ ಮುದ್ರೆಯೊತ್ತುವುದು ಅಲ್ಪಜ್ಞತ್ವದ [ಕುರುಹಪ್ಪೇ]! ಅಥವಾ ಇದು ಯೋಹನನ ಮಿಥ್ಯಾ-ಕಲ್ಪನೆ ಮಾತ್ರವಾಗಿದೆ! [107]

## (ಹಗಲು-ರಾತ್ರಿ ಈಶ್ವರನಿಗೆ ಸೇವೆ)

[108] ಈ ಕಾರಣದಿಂದ, ಅವರು ಈಶ್ವರನ ಸಿಂಹಾಸನದ ಮುಂದೆ ಇದ್ದಾರೆ. ಮತ್ತು ಅವನ ಮಂದಿರದಲ್ಲಿ ರಾತ್ರಿ ಮತ್ತು ಹಗಲು ಅವನ ಸೇವೆಯನ್ನು ಮಾಡುತ್ತಾರೆ.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 7; ಆ. 15]

ಸಮೀಕ್ಷಕ:—ಇದು ದೊಡ್ಡ ಪ್ರತಿಮಾ-ಪೂಜನವಲ್ಲವೇನು? ಅಥವಾ ಅವರ ಈಶ್ವರನು ದೇಹಧಾರಿಯಾದ ಮಾನವನಂತೆ ಏಕದೇಶೀಯನಲ್ಲವೇನು?

ಮತ್ತು ಕ್ರೈಸ್ತರ ಈಶ್ವರನು ರಾತ್ರಿಯಲ್ಲಿ ನಿದ್ರಿಸುವುದೂ ಇಲ್ಲ! ಮತ್ತು ನಿದ್ರಿಸುತ್ತಾನಾದರೆ, ರಾತ್ರಿಯಲ್ಲಿ ಪೂಜೆಯನ್ನು ಹೇಗೆ ಮಾಡುತ್ತಿರಬಹುದು? ಮತ್ತು ಅವನ ನಿದ್ರೆಯೂ ಹಾರಿಹೋಗುತ್ತಿರಬಹುದು!

ಮತ್ತು ರಾತ್ರಿ-ಹಗಲು ಎಚ್ಚರವಾಗಿರುವನಾದರೆ, ವಿಕ್ಷಿಪ್ತನಾಗಿ, ಅಥವಾ ಅತಿ ರೋಗಿಯಾಗಿರಬಹುದು! [108]

## (ವೇದಿಯ ಅಗ್ನಿಯಿಂದ ಗರ್ಜನೆ ಮತ್ತು ಭೂಕಂಪ)

[109] ಮತ್ತು, ಚಿನ್ನದ ಧೂಪ-ಪಾತ್ರವನ್ನು ತನ್ನ ಬಳಿ ಹೊಂದಿದ್ದ ಎರಡನೆಯ ದೂತನು ಬಂದು ವೇದಿಯ ಹತ್ತಿರ ನಿಂತನು. ಮತ್ತು ಅವನಿಗೆ ಬಹಳ ಧೂಪ ಕೊಡಲ್ಪಟ್ಟಿತು.

ಮತ್ತು ಧೂಪದ ಹೊಗೆ ಪವಿತ್ರವಾದ ಜನರ ಪ್ರಾರ್ಥನೆಗಳೊಂದಿಗೆ ದೂತನ ಹಸ್ತದಿಂದ ಈಶ್ವರನ ಮುಂದೆ ಏರಿತು.

ಮತ್ತು ದೂತನು ಆ ಧೂಪಪಾತ್ರವನ್ನು ತೆಗೆದುಕೊಂಡು, ಅದರಲ್ಲಿ ವೇದಿಯ ಬೆಂಕಿಯನ್ನು ತುಂಬಿಸಿ, ಅದನ್ನು ಪೃಥಿವಿಯ ಮೇಲೆ ಹಾಕಿದನು. ಮತ್ತು ಶಬ್ದ, ಮತ್ತು ಗರ್ಜನೆ, ಮತ್ತು ಮಿಂಚುಗಳು ಮತ್ತು ಭೂಕಂಪ ಉಂಟಾದುವು !

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 8; ಆ. 3.5]

## (ಬೈರಾಗಿಗಳ ಮಂದಿರಕ್ಕಿಂತ ಕ್ರೈಸ್ತರ ಸ್ವರ್ಗ ಕಡಿಮೆಯೇ ?)

ಸಮೀಕ್ಷಕ:—ಈಗ ನೋಡಿರಿ! ಸ್ವರ್ಗದವರೆಗೂ ವೇದಿ, ಧೂಪ, ದೀಪ, ನೈವೇದ್ಯ, ತುತ್ತೂರಿಯ ಶಬ್ದ ಆಗುತ್ತವೆ. ಬೈರಾಗಿಗಳ ಮಂದಿರಕ್ಕಿಂತ ಕ್ರೈಸ್ತರ ಸ್ವರ್ಗ ಕಡಿಮೆಯಾಗಿದೆಯೇನು ? ವಿಜೃಂಭಣೆ ಸ್ವಲ್ಪ ಹೆಚ್ಚೇ ಆಗಿದೆ! [109]

## (ಮೊದಲ ದೂತನು ಪೃಥಿವಿಯ ಮೇಲೆ ಆಲಿಕಲ್ಲು ಸುರಿಸಿದನು)

**[110]** ಮೊದಲನೆಯ ದೂತನು ತುತ್ತೂರಿಯನ್ನು ಊದಿದನು. ಮತ್ತು ರಕ್ತಮಿಶ್ರಿತವಾದ ಆಲಿಕಲ್ಲುಗಳು ಮತ್ತು ಬೆಂಕಿ ಸುರಿದವು. ಮತ್ತು ಅವು ಪೃಥಿವಿಯ ಮೇಲೆ ಹಾಕಲ್ಪಟ್ಟವು. ಮತ್ತು ಪೃಥಿವಿಯ ಮೂರನೆಯ ಒಂದು ಭಾಗ ಸುಟ್ಟುಹೋಯಿತು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:- ಪರ್ವ. 8; ಆ. 7]

## (ಯೋಹನನಿಗೆ ಪ್ರಳಯವೆಂದರೆ ಗೊತ್ತಿರಲಿಲ್ಲ)

**ಸಮೀಕ್ಷಕ:**—ಭೇಷ್ ! ಕ್ರೈಸ್ತರ ಭವಿಷ್ಯದ್ವಕ್ತೃವೇ ! ಈಶ್ವರ, ಈಶ್ವರನ ದೂತರು, ತುತ್ತೂರಿಯ ಕೂಗು, ಮತ್ತು ಪ್ರಳಯದ ಲೀಲೆ ಕೇವಲ ಬಾಲಕರ ಆಟದಂತೆಯೇ ಕಾಣುತ್ತವೆ! ಇದು ಪ್ರಳಯದ ಮಾತಾಗಬಲ್ಲದೇನು ? [110]

## (ಐದನೆಯ ದೂತನಿಂದ ಪೃಥಿವಿಯ ಮೇಲೆ ಮಿಡಿತೆಗಳ ಪ್ರಸಾರ)

**[111]** ಮತ್ತು ಐದನೆಯ ದೂತನು ತುತ್ತೂರಿಯನ್ನು ಊದಿದನು. ಮತ್ತು ಸ್ವರ್ಗದಲ್ಲಿಂದ ಪೃಥಿವಿಯ ಮೇಲೆ ಬಿದ್ದಿದ್ದ ನಕ್ಷತ್ರ ಒಂದನ್ನು ನಾನು ನೋಡಿದೆನು. ಮತ್ತು ತಳವಿಲ್ಲದ ಕುಂಡದ ಭಾವಿಯ ಕೀಲಿಯು ಅವನಿಗೇ ಕೊಡಲ್ಪಟ್ಟಿತು.

ಮತ್ತು ಅವನು ತಳವಿಲ್ಲದ ಕುಂಡದ ಭಾವಿಯನ್ನು ತೆರೆದನು. ಮತ್ತು ಕೂಪದ ಒಳಗಿನಿಂದ, ದೊಡ್ಡ ಕುಲುಮೆಯ ಹೊಗೆಯಂತೆ, ಹೊಗೆ ಎದ್ದಿತು.

ಮತ್ತು ಆ ಹೊಗೆಯೊಳಗಿನಿಂದ ಮಿಡಿತೆಗಳು ಪೃಥಿವಿಯ ಮೇಲೆ ಪಸರಿಸಿದುವು. ಮತ್ತು ಹೇಗೆ ಪೃಥಿವಿಯ ಚೇಳುಗಳಿಗೆ ಅಧಿಕಾರವಿರುತ್ತದೋ, ಹಾಗೆ ಅವಕ್ಕೆ ಅಧಿಕಾರ ಕೊಡಲ್ಪಟ್ಟಿತು.

ಮತ್ತು ಅವಕ್ಕೆ—"ಯಾರ ಹಣೆಯ ಮೇಲೆ ಈಶ್ವರನ ಮುದ್ರೆಯಿಲ್ಲವೋ!

"ಆ ಮಾನವರಿಗೆ ಐದು ತಿಂಗಳು ನೋವು ಕೊಡಲ್ಪಡಲಿ", ಎಂದು ಹೇಳಲ್ಪಟ್ಟಿತು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 9; ಆ. 1-5]

**ಸಮೀಕ್ಷಕ:**—ತುತ್ತೂರಿಯ ಶಬ್ದ ಕೇಳಿ, ನಕ್ಷತ್ರಗಳು ಆ ದೂತರ ಮೇಲೆಯೇ ಮತ್ತು ಆ ಸ್ವರ್ಗದಲ್ಲಿಯೇ ಬಿದ್ದಿರಬಹುದೇನೋ ? ಇಲ್ಲಂತೂ ಬೀಳಲಿಲ್ಲ!

ಭಲೇ! ಈ ಕೂಪವನ್ನೂ ಅಥವಾ ಮಿಡಿತೆಗಳನ್ನೂ ಕೂಡ, ಪ್ರಳಯಕ್ಕಾಗಿ ಈಶ್ವರನು ಪಾಲಿಸಿಟ್ಟುಕೊಂಡಿರಬಹುದೇನೋ ?

ಮತ್ತು ಮುದ್ರೆಯನ್ನು ನೋಡಿ, ಮುದ್ರಾಂಕಿತರನ್ನು ಕಚ್ಚಬಾರದೆಂಬ [ಆದೇಶವನ್ನು] ಓದಿಕೊಂಡೂ ಬಿಡಬಹುದು!

ಇದು ಕೇವಲ ಮುಗ್ಧ ಜನರನ್ನು—'ನೀವು ಕ್ರೈಸ್ತರಾಗದಿದ್ದರೆ, ಮಿಡತೆಗಳು ನಿಮ್ಮನ್ನು ಕಚ್ಚುವುವು!', ಎಂದು ಹೆದರಿಸಿ, ಕ್ರೈಸ್ತರನ್ನಾಗಿ, ಮಾಡಿಕೊಳ್ಳುವ ವಂಚನೆಯ ಕಾರ್ಯಮಾತ್ರವಷ್ಟೇ!

**ಇಂತಹ ಮಾತುಗಳು ವಿದ್ಯಾಹೀನವಾದ ದೇಶಗಳಲ್ಲಿ ನಡೆಯಲು ಶಕ್ಯವಾಗಿದೆ; ಆರ್ಯಾವರ್ತದಲ್ಲಿ ಅಲ್ಲ !** [111]

## (20 ಕೋಟಿ ಅಶ್ವಗಳ ಲದ್ದಿಯಿಂದ ಸ್ವರ್ಗವೂ ನರಕವಾಗಿ ಹೋಗಿರಬಹುದು)

**[112] ಮತ್ತು ಅಶ್ವಾರೋಹಿಗಳ ಸೈನ್ಯಗಳ ಸಂಖ್ಯೆ ಇಪ್ಪತ್ತು ಕೋಟಿ ಇದ್ದಿತು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 9; ಆ. 16]

**ಸಮೀಕ್ಷಕ:**—ಆಹಾ! ಇಷ್ಟು ಕುದುರೆಗಳು ಸ್ವರ್ಗದಲ್ಲಿ ಎಲ್ಲಿ ಬೀಡು ಬಿಟ್ಟಿದ್ದುವು ? ಎಲ್ಲಿ ಮೇಯುತ್ತಿದ್ದವು ? ಎಲ್ಲಿ ತಂಗುತ್ತಿದ್ದವು ? ಎಲ್ಲಿ ಲದ್ದಿ ಹಾಕುತ್ತಿದ್ದವು ? ಮತ್ತು ಅವರ ದುರ್ಗಂಧವೂ ಸ್ವರ್ಗದಲ್ಲಿ ಎಷ್ಟು [ಹರಡುತ್ತಾ] ಇರಬಹುದು ?

**ಸಾಕು! ಇಂತಹ ಸ್ವರ್ಗಕ್ಕೂ, ಇಂತಹ ಈಶ್ವರನಿಗೂ, ಮತ್ತು ಇಂತಹ ಮತಕ್ಕೂ ಆರ್ಯರಾದ ನಾವೆಲ್ಲರೂ ತಿಲಾಂಜಲಿ ಕೊಟ್ಟು*ಬಿಟ್ಟಿದ್ದೇವೆ!**

**ಸರ್ವಶಕ್ತಿಮಾನ್ [ಪರಮಾತ್ಮ]ನ ಕೃಪೆಯಿಂದ ಕ್ರೈಸ್ತರ ತಲೆಗಳ ಮೇಲಿನಿಂದಲೂ ಈ ನಿರರ್ಥಕವಾದ ಹೊರೆ ಇಳಿದು ಹೋಗುವುದಾದರೆ, ಬಹಳ ಒಳ್ಳೆಯದಾದೀತು!** [112]

## (ಮೇಘವನ್ನು ಹೊದೆದಿದ್ದ ಸ್ವರ್ಗದೂತ)

**[113] ಮತ್ತು ನಾನು, ಮೇಘವನ್ನು ಹೊದೆದಿದ್ದ ಆ ಎರಡನೆಯ ಪರಾಕ್ರಮೀ ದೂತನನ್ನು ಸ್ವರ್ಗದಿಂದ ಇಳಿಯುತ್ತಿರುವಾಗ ನೋಡಿದೆನು. ಮತ್ತು ಅವನ ತಲೆಯ ಮೇಲೆ ಕಾಮನಬಿಲ್ಲು ಇದ್ದಿತು. ಮತ್ತು ಅವನ ಮುಖ ಸೂರ್ಯನ ಹಾಗೆಯೂ. ಮತ್ತು ಅವನ ಕಾಲುಗಳು ಬೆಂಕಿಯ ಕಂಬಗಳ ಹಾಗೆಯೂ ಇದ್ದವು.**

---

*ಇದು ಲೋಕೋಕ್ತಿ! ಇದರ ಅರ್ಥ ಕ್ರೈಸ್ತಮತವನ್ನು ಮೃತವೆಂದು ಘೋಷಿಸಿದ್ದೇವೆ, ಎಂದು—ಸಂ.

ಮತ್ತು ಅವನು ತನ್ನ ಬಲಪಾದವನ್ನು ಸಮುದ್ರದ ಮೇಲೆ, ಮತ್ತು ಎಡ ಪಾದವನ್ನು ಪೃಥಿವಿಯ ಮೇಲೆ ಇಟ್ಟನು.

[ಬೈಬಲ್ (ಇಂ). ಯೋಹನ-ಪ್ರಕಾಶಿತ :-ಪರ್ವ. 10; ಆ. 1, 2]

ಸಮೀಕ್ಷಕ:—ಪುರಾಣಗಳ ಅಥವಾ ಹೊಗಳುಭಟ್ಟರ ಕಥೆಗಳನ್ನೂ ಮೀರಿಸು ವಂತಹ ಈ ದೂತರ ಕತೆಯನ್ನು ಈಗ ನೋಡಿರಿ! [113]

## (ಸ್ವರ್ಗದಲ್ಲಿ ಈಶ್ವರನ ಮಂದಿರ ಮತ್ತು ವೇದಿ)

**[114] ಮತ್ತು ದೋಟಿಯಂತಹ ಒಂದು ಕೊಂಬೆ ನನಗೆ ಕೊಡಲ್ಪಟ್ಟಿತು. ಮತ್ತು—"ಏಳು! ಈಶ್ವರನ ಮಂದಿರವನ್ನೂ ಮತ್ತು ವೇದಿಕೆಯನ್ನೂ ಮತ್ತು ಅದರಲ್ಲಿನ ಭಜನೀಕರನ್ನೂ ಅಳತೆಮಾಡು.", ಎಂದು ಹೇಳಲ್ಪಟ್ಟಿತು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 11; ಆ. 1]

## (ಸ್ವರ್ಗವೂ ಮೂರ್ತಿಪೂಜಕರಿಂದ ಉಳಿಯಲಿಲ್ಲ)

ಸಮೀಕ್ಷಕ:—ಇಲ್ಲಿಯೇ ಏನು ? ಅದರೆ, ಕ್ರೈಸ್ತರ ಸ್ವರ್ಗದಲ್ಲಿಯೂ ಕೂಡ, ಮಂದಿರಗಳು ಕಟ್ಟಲ್ಪಡುತ್ತವೆ! ಮತ್ತು ಅಳೆಯಲ್ಪಡುತ್ತವೆ ! ಒಳ್ಳೆಯದೇ! ಅವರ ಸ್ವರ್ಗ ಎಂತಹುದೋ, ಅಂತಹವೇ ಮಾತುಗಳು ಆಗಿವೆ !

ಆದುದರಿಂದ, ಇಲ್ಲಿ 'ಪ್ರಭುಭೋಜನ'ದಲ್ಲಿ ಏಸುವಿನ ಶರೀರಾವಯವದ ಮಾಂಸ-ರಕ್ತಗಳ ಭಾವನೆಯನ್ನು ಮಾಡಿಕೊಂಡು, ತಿನ್ನುತ್ತಾರೆ-ಕುಡಿಯುತ್ತಾರೆ!

ಮತ್ತು ಚರ್ಚುಗಳಲ್ಲಿಯೂ ಕೂಡ, ಶಿಲುಬೆ ಮೊದಲಾದುದರ ಆಕಾರಗಳನ್ನು ನಿರ್ಮಿಸುವುದು ಮೊದಲಾದುದೂ ಕೂಡ. ಮೂರ್ತಿ-ಪೂಜೆಯೇ ಆಗಿದೆ! [114]

## (ಸ್ವರ್ಗದಲ್ಲಿ ನಿಯಮಗಳ ಪೆಟ್ಟಿಗೆ)

**[115] ಮತ್ತು ಸ್ವರ್ಗದಲ್ಲಿ ಈಶ್ವರನ ಮಂದಿರ ತೆರೆಯಲ್ಪಟ್ಟಿತು. ಮತ್ತು ಅವನ ನಿಯಮದ ಪೆಟ್ಟಿಗೆಯು ಅವನ ಮಂದಿರದಲ್ಲಿ ಕಾಣಿಸಿತು!**

[ಬೈಬಲ್ (ಇಂ). ಯೋಹನ-ಪ್ರಕಾಶಿತ :-ಪರ್ವ. 11; ಆ. 19]

## (ಪರಮೇಶ್ವರನ ಮಂದಿರವಿರಬಲ್ಲುದೇನು ?)

ಸಮೀಕ್ಷಕ:—ಸ್ವರ್ಗದಲ್ಲಿರುವ ಮಂದಿರವು ಎಲ್ಲ ಕಾಲಗಳಲ್ಲಿಯೂ ಮುಚ್ಚಲ್ಪ ಟ್ಟಿರಬಹುದು ! ಒಂದೊಂದು ಸಾರಿ ತೆರೆಯಲ್ಪಡುತ್ತಿರಬಹುದು !

ಪರಮೇಶ್ವರನಿಗೂ ಯಾವುದಾದರೂ ಮಂದಿರವಿರಬಲ್ಲುದೇನು? ವೇದೋಕ್ತ ನಾದ ಸರ್ವವ್ಯಾಪಕ ಪರಮಾತ್ಮನ ಯಾವುದೇ ಮಂದಿರವೂ ಇರಲಾರದು!

ಅಹುದು! ಕ್ರೈಸ್ತರ ಸಾಕಾರನಾದ ಪರಮೇಶ್ವರನ ಮಂದಿರವು. ಹೇಕಾದರೆ, ಸ್ವರ್ಗದಲ್ಲಿಯೂ ಇರಬಹುದು! ಭೂಮಿಯ ಮೇಲೂ ಇರಬಹುದು! ಮತ್ತು ಹೇಗೆ ಇಲ್ಲಿ 'ಟನ್-ಟನ್, ಪೂಂ-ಪೂಂ'* ಲೀಲೆ ನಡೆಯುತ್ತದೋ, ಹಾಗೆಯೇ ಕ್ರೈಸ್ತರ ಸ್ವರ್ಗದಲ್ಲಿಯೂ ನಡೆಯುತ್ತಿರಬಹುದು!

ಮತ್ತು ನಿಯಮದ ಪೆಟ್ಟಿಗೆಯನ್ನೂ ಕೂಡ, ಒಂದೊಂದು ಸಾರಿ ಕ್ರೈಸ್ತರು ನೋಡುತ್ತಿರಬಹುದು! ಅದರಿಂದ ಏನು ಉಪಯೋಗ ಪಡೆದುಕೊಳ್ಳುತ್ತಿರಬಹುದೋ, ತಿಳಿಯದು! ಈ ಎಲ್ಲ ಮಾತುಗಳೂ ಮಾನವರನ್ನು ದಾರಿತಪ್ಪಿಸುವಂತಹವಾಗಿವೆ, ಎನ್ನುವುದು ಮಾತ್ರ ಸತ್ಯವಾಗಿದೆ!

## (ಸ್ವರ್ಗದ ಎರಡು ಆಶ್ಚರ್ಯ)

**[116]** ಮತ್ತು ಒಂದು ದೊಡ್ಡ ಆಶ್ಚರ್ಯವು ಸ್ವರ್ಗದಲ್ಲಿ ಕಾಣಿಸಿತು! ಎಂದರೆ, ಸೂರ್ಯನನ್ನು ಧರಿಸಿರುವ ಮತ್ತು ತನ್ನ ಕಾಲುಗಳ ಕೆಳಗೆ ಚಂದ್ರನನ್ನಿಟ್ಟುಕೊಂಡಿರುವ ನಾರಿ ಒಬ್ಬಳಿದ್ದಾಳೆ! ಮತ್ತು ಅವಳ ತಲೆಯ ಮೇಲೆ ಹನ್ನೆರಡು ನಕ್ಷತ್ರಗಳ ಕಿರೀಟವಿದೆ.

ಮತ್ತು ಅವಳು ಗರ್ಭವತಿಯಾಗಿ ಕಿರುಚುತ್ತಾಳೆ. ಏಕೆಂದರೆ, ಅವಳಿಗೆ ಪ್ರಸವವೇದನೆ ಪ್ರಾರಂಭವಾಗಿದೆ. ಮತ್ತು ಅವಳು ಹೆರಲು ನೋವನ್ನನುಭವಿಸುತ್ತಿದ್ದಾಳೆ.

ಮತ್ತು, ಸ್ವರ್ಗದಲ್ಲಿ ಎರಡನೆಯ ಆಶ್ಚರ್ಯವು ಕಾಣಿಸಿತು! ಮತ್ತು ನೋಡಿರಿ! ಏಳು ತಲೆಗಳನ್ನೂ ಮತ್ತು ಹತ್ತು ಕೊಂಬುಗಳನ್ನೂ ಹೊಂದಿರುವ ಒಂದು ದೊಡ್ಡ ಕೆಂಪು ಹೆಬ್ಬಾವಿದೆ! ಮತ್ತು ಅದರ ತಲೆಗಳ ಮೇಲೆ ಏಳು ರಾಜ-ಮುಕುಟಗಳಿವೆ.

ಮತ್ತು ಅದರ ಬಾಲವು ಆಕಾಶದ ನಕ್ಷತ್ರಗಳ ಮೂರನೆಯ ಒಂದು ಭಾಗವನ್ನು ಎಳೆದುಕೊಂಡು, ಅವುಗಳನ್ನು ಪೃಥಿವಿಯ ಮೇಲೆ ಹಾಕಿತು!

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 12; ಆ. 1-4]

## (ಸಣ್ಣ ಪೃಥಿವಿಯ ಮೇಲೆ ಇಷ್ಟೊಂದು ನಕ್ಷತ್ರಗಳು ಹೇಗೆ ಸಾಧ್ಯ?)

**ಸಮೀಕ್ಷಕ:** —ಈಗ ನೋಡಿರಿ, ಉದ್ದ-ಅಗಲವಾದ ಹರಟೆಗಳನ್ನು! ಇವರ ಸ್ವರ್ಗದಲ್ಲಿಯೂ ಬಡಪಾಯಿ ನಾರಿ ಕೂಗಿಕೊಳ್ಳುತ್ತಾಳೆ! ಅವಳ ದುಃಖವನ್ನು ಯಾವನೂ ಆಲಿಸುವುದಿಲ್ಲ; ದೂರೀಕರಿಸಲೂ ಶಕ್ತನಲ್ಲ!

ಮತ್ತು ನಕ್ಷತ್ರಗಳ ಮೂರನೆಯ ಒಂದು ಭಾಗವನ್ನು ಪೃಥಿವಿಯ ಮೇಲೆ ಹಾಕಿದ ಆ ಹೆಬ್ಬಾವಿನ ಬಾಲ ಎಷ್ಟು ದೊಡ್ಡದಾಗಿತ್ತು? ಅಲ್ಲಾ! ಪೃಥಿವಿಯಂತೂ

---

*ಘಂಟೆ.ಜಾಗಟೆ.ಶಂಖಗಳ ಲೀಲೆ —ಅನು.

**ಚಿಕ್ಕದಾಗಿದೆ. ಮತ್ತು ನಕ್ಷತ್ರಗಳೂ ಕೂಡ, ದೊಡ್ಡ ದೊಡ್ಡ ಲೋಕಗಳಾಗಿವೆ! ಈ ಪೃಥಿವಿಯ ಮೇಲೆ ಒಂದೂ ಕೂಡ, ಹಿಡಿಸಲಾರದು!**

ಆದರೆ, ಈ ಸ್ಥಳದಲ್ಲಿ, ಈ ನಕ್ಷತ್ರಗಳ ಮೂರನೆಯ ಒಂದು ಭಾಗ ಈ ಮಾತನ್ನು ಬರೆಯುವವನ ಮನೆಯ ಮೇಲೆ ಬಿದ್ದಿರಬಹುದೆಂದೇ ಊಹಿಸಬೇಕು!

ಮತ್ತು ಸಮಸ್ತ ನಕ್ಷತ್ರಗಳ ಮೂರನೆಯ ಒಂದು ಭಾಗವನ್ನು ಸುತ್ತಿ. ಭೂಮಿಯ ಮೇಲೆ ಬೀಳಿಸಿಬಿಡುವಷ್ಟು ದೊಡ್ಡದಾದ ಬಾಲವನ್ನು ಹೊಂದಿದ್ದ ಆ ಹೆಬ್ಬಾವೂ ಕೂಡ, ಅವನ ಮನೆಯಲ್ಲೇ ಬೀಡುಬಿಟ್ಟಿರಬಹುದೇನೋ? [116]

## (ಸ್ವರ್ಗದಲ್ಲಿ ಉಪದ್ರವವಿದ್ದರೆ, ಅದೆಂತಹ ಸ್ವರ್ಗ?)

**[117] ಮತ್ತು ಸ್ವರ್ಗದಲ್ಲಿ ಯುದ್ಧವಾಯಿತು. 'ಮೈಕೇಲ್'[1] ಮತ್ತು ಅವನ ದೂತರು ಹೆಬ್ಬಾವಿನೊಂದಿಗೆ ಕಾದಾಡಿದರು. ಮತ್ತು ಹೆಬ್ಬಾವೂ ಮತ್ತು ಅದರ ದೂತರೂ ಕಾದಾಡಿದರು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 12; ಆ.7]

**ಸಮೀಕ್ಷಕ:**—ಯಾವನಾದರೂ ಕ್ರೈಸ್ತರ ಸ್ವರ್ಗಕ್ಕೆ ಹೋಗುತ್ತಿರಬಹುದೋ, ಅವನೂ ಕೂಡ, ಯುದ್ಧದಲ್ಲಿ ದುಃಖ ಪಡುತ್ತಿರಬಹುದು! ಇಲ್ಲಿಂದಲೇ ಇಂತಹ ಸ್ವರ್ಗದ ಆಸೆಯನ್ನು ಬಿಟ್ಟು, ಕೈಜೋಡಿಸಿ ಕುಳಿತುಕೊಳ್ಳಿರಿ! ಎಲ್ಲಿ **ಶಾಂತಿಭಂಗ ಮತ್ತು ಉಪದ್ರವ ಆಗುತ್ತಿರುವುದೋ, ಆ ಸ್ಥಳ ಕ್ರೈಸ್ತರಿಗೇ ಯೋಗ್ಯವಾಗಿದೆ!**

[117]

## (ಶೈತಾನನನ್ನು ಭೂಮಿಯ ಮೇಲೆ ಬೀಳಿಸುವುದು)

**[118] ಮತ್ತು ಆ ದೊಡ್ಡ ಹೆಬ್ಬಾವು ಬೀಳಿಸಲ್ಪಟ್ಟಿತು. ಅಹುದು! ಯಾವುದು ದೆವ್ವ[2] ಮತ್ತು ಶೈತಾನ[3], ಎನ್ನಿಸಿಕೊಳ್ಳುತ್ತದೋ, ಯಾವುದು ಸಮಸ್ತ ಜಗತ್ತನ್ನೂ ಭ್ರಾಂತ ಗೊಳಿಸುವಂತಹದಾಗಿದೆಯೋ, ಅದು ಪ್ರಾಚೀನ ಸರ್ಪ!**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 12; ಆ. 9]

## (ಶೈತಾನನು ಸ್ವರ್ಗದಲ್ಲೂ ಜನರನ್ನು ದಾರಿ ತಪ್ಪಿಸುತ್ತಿರಬಹುದು)

**ಸಮೀಕ್ಷಕ:**—ಆ ಶೈತಾನನು ಸ್ವರ್ಗದಲ್ಲಿದ್ದಾಗ ಜನರನ್ನು ಭ್ರಾಂತಗೊಳಿಸುತ್ತಿರ ಲಿಲ್ಲವೇನು? ಮತ್ತು ಅವನನ್ನು ಜನ್ಮಪೂರ್ತ ಹಿಡಿದು ಬಂಧಿಸಲಿಲ್ಲವೇಕೆ? ಅಥವಾ ಕೊಂದು ಬಿಡಲಿಲ್ಲವೇಕೆ? ಅವನನ್ನು ಪೃಥಿವಿಯ ಮೇಲೆ ಏಕೆ ಹಾಕಿಬಿಟ್ಟರು?

---

1. Michael 2. Devil 3. Satan

ಸಮಸ್ತ ಜಗತ್ತನ್ನೂ ಭ್ರಾಂತಗೊಳಿಸುವವನು ಶೈತಾನನಾದರೆ, ಶೈತಾನನನ್ನು ಭ್ರಾಂತಗೊಳಿಸುವವನು ಯಾವನು? ಶೈತಾನನು ಸ್ವತಃ ಭ್ರಾಂತನಾಗಿದ್ದಾನಾದರೆ, ಶೈತಾನನಿಲ್ಲದೆಯೇ ಭ್ರಾಂತರಾಗುವವರು, ಭ್ರಾಂತರಾಗುವರು! ಮತ್ತು **ಅವನನ್ನು ಭ್ರಾಂತಗೊಳಿಸುವವನು ಪರಮೇಶ್ವರನಾದರೆ, ಅವನು ಈಶ್ವರನೇ ಆಗಿ ಉಳಿಯಲಿಲ್ಲ!**

ಕ್ರೈಸ್ತರ ಈಶ್ವರನೂ ಕೂಡ, ಶೈತಾನನಿಗೆ ಹೆದರುತ್ತಾ ಇರಬಹುದೆಂದು ವಿದಿತವಾಗುತ್ತದೆ! ಏಕೆಂದರೆ, ಶೈತಾನನಿಗಿಂತ ಪ್ರಬಲನಾಗಿದ್ದಿದ್ದರೆ, ಈಶ್ವರನು ಅವನಿಗೆ ಅಪರಾಧವನ್ನು ಮಾಡುವ ಕಾಲದಲ್ಲಿಯೇ ಶಿಕ್ಷೆಯನ್ನೇಕೆ ಕೊಡಲಿಲ್ಲ?

**ಜಗತ್ತಿನಲ್ಲಿ ಶೈತಾನನ ರಾಜ್ಯವೆಷ್ಟಿದೆಯೋ, ಅದರ ಸಹಸ್ರಾಂಶದಷ್ಟೂ ಕೂಡ, ಕ್ರೈಸ್ತರ ಈಶ್ವರನ ರಾಜ್ಯವಿಲ್ಲ!** ಆದುದರಿಂದ, ಕ್ರೈಸ್ತರ ಈಶ್ವರನು ಅವನನ್ನು ದೂರ ಸರಿಸಲಾರದೇ ಹೋಗಿರಬಹುದು!

ಇದರಿಂದ, ಹೇಗೆ ಈ ಕಾಲದ ರಾಜ್ಯಾಧಿಕಾರಿಗಳಾದ ಕ್ರೈಸ್ತರು ಡಕಾಯಿತರು, ಕಳ್ಳರು ಮೊದಲಾದವರಿಗೆ ಶೀಘ್ರವಾಗಿ ಶಿಕ್ಷೆ ಕೊಡುತ್ತಾರೋ, ಹಾಗೆಯೂ ಕೂಡ, ಕ್ರೈಸ್ತರ ಈಶ್ವರನು [ಮಾಡುವುದು] ಇಲ್ಲ, ಎಂದು ಸಿದ್ಧವಾಯಿತು. **ಮತ್ತೆ, ವೈದಿಕಮತನ್ನು ತ್ಯಜಿಸಿ, ಈ ಟೊಳ್ಳಾದ ಕ್ರೈಸ್ತಮತವನ್ನು ಸ್ವೀಕರಿಸುವ ಬುದ್ಧಿ-ಹೀನನಾದ ಮನುಷ್ಯನು ಯಾವನಿದ್ದಾನೆ?** [118]

### (ಶೈತಾನನು ಪೃಥಿವಿಯ ಮೇಲೆ)

**[119] ಅಯ್ಯೋ! ಪೃಥಿವಿಯ ಮತ್ತು ಸಮುದ್ರದ ನಿವಾಸಿಗಳೇ! ಏಕೆಂದರೆ, ಶೈತಾನನು ನಿಮ್ಮ ಬಳಿ ಇಳಿದಿದ್ದಾನೆ!**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 12; ಆ. 12]

### (ಶೈತಾನನನ್ನು ಪೃಥಿವಿಯ ಮೇಲೆ ಏಕೆ ಕಳುಹಿಸಿದ? ಏಕೆ ಸಾಯಿಸಲಿಲ್ಲ?)

**ಸಮೀಕ್ಷಕ:—** ಆ ಈಶ್ವರನು ಕೇವಲ ಅಲ್ಲಿನ ರಕ್ಷಕ, ಹಾಗೂ ಸ್ವಾಮಿ ಆಗಿದ್ದಾನೇನು? ಪೃಥಿವೀ, ಮನುಷ್ಯರು ಮೊದಲಾದ ಪ್ರಾಣಿಗಳ ರಕ್ಷಕನೂ ಮತ್ತು ಸ್ವಾಮಿಯೂ ಅಲ್ಲವೇನು? ಭೂಮಿಗೂ ಕೂಡ, ರಾಜನಾಗಿದ್ದಾನಾದರೆ, ಶೈತಾನನನ್ನು ಸಾಯಿಸಲಾರದೇ ಹೋದನೇಕೆ?

ಈಶ್ವರನು ನೋಡುತ್ತಾ ಇರುತ್ತಾನೆ! ಮತ್ತು ಶೈತಾನನು ಭ್ರಾಂತರನ್ನಾಗಿ ಮಾಡುತ್ತಾ ತಿರುಗುತ್ತಾನೆ! ಆದರೂ ಕೂಡ, ಅವನನ್ನು ನಿಷೇಧಿಸುವುದಿಲ್ಲ! ಒಬ್ಬನು ಒಳ್ಳೆಯ ಈಶ್ವರ! ಆದರೆ, ಇನ್ನೊಬ್ಬನು ಸಮರ್ಥನೂ, ಹಾಗೂ ದುಷ್ಟನೂ ಆದ ಎರಡನೆಯ ಈಶ್ವರ ಆಗುತ್ತಿದ್ದಾನೆಂದು ವಿದಿತವಾಗುತ್ತದೆ! [119]

### (ಶೈತಾನನಿಗೆ ಯುದ್ಧಮಾಡುವ ಅಧಿಕಾರ)

[120] ಮತ್ತು ನಲವತ್ತೆರಡು ಮಾಸಗಳವರೆಗೆ ಯುದ್ಧಮಾಡುವ ಅಧಿಕಾರ ಅವನಿಗೆ ಕೊಡಲ್ಪಟ್ಟಿತು.

ಮತ್ತು ಅವನು ಈಶ್ವರನಿಗೆ ವಿರುದ್ಧವಾಗಿ ನಿಂದೆಮಾಡಲು, ಅವನ ಹೆಸರನ್ನೂ, ಮತ್ತು ಅವನ ಗುಡಾರವನ್ನೂ, ಮತ್ತು ಸ್ವರ್ಗದಲ್ಲಿ ವಾಸಿಸುವವರನ್ನೂ ನಿಂದಿಸಲು, ತನ್ನ ಬಾಯನ್ನು ತೆರೆದನು.

ಮತ್ತು ಅವನಿಗೆ ಪವಿತ್ರ ಪುರುಷರ ಮೇಲೆ ಹೋರಾಡುವ, ಮತ್ತು ಅವರನ್ನು ಗೆಲ್ಲುವ, [ಅಧಿಕಾರ] ಕೊಡಲ್ಪಟ್ಟಿತು. ಮತ್ತು ಪ್ರತಿಯೊಂದು ಕುಲದ, ಮತ್ತು ಭಾಷೆಯ, ಹಾಗೂ ದೇಶದ ಮೇಲೆ ಅಧಿಕಾರ ಕೊಡಲ್ಪಟ್ಟಿತು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 13; ಆ: 5-7]

### (ಕ್ರೈಸ್ತರ ಈಶ್ವರ ಡಕಾಯಿತರ ಸರದಾರನಂತೆ)

**ಸಮೀಕ್ಷಕ:**—ಅಲ್ಲಾ! ಪೃಥಿವಿಯ ಜನರನ್ನು ಭ್ರಾಂತಗೊಳಿಸುವುದಕ್ಕಾಗಿ ಶೈತಾನನನ್ನು ಮತ್ತು ಪಶು ಮೊದಲಾದುವನ್ನು ಕಳುಹಿಸಿದನು! ಮತ್ತು ಪವಿತ್ರರಾದ ಮಾನವರೊಂದಿಗೆ ಯುದ್ಧಮಾಡಿಸುವನು! ಈ ಕೆಲಸವು ಡಕಾಯಿತರ ಸರದಾರನ [ಕೆಲಸಕ್ಕೆ] ಸಮವಾಗಿದೆಯೋ, ಅಥವಾ ಇಲ್ಲವೋ ? ಇಂತಹ ಕೆಲಸವು ಈಶ್ವರನದು ಅಥವಾ ಈಶ್ವರನ ಭಕ್ತರದು ಎಂದಿಗೂ ಆಗಲಾರದು! [120]

### (ಸಿಯೋನ್ ಪರ್ವತದ ಮೇಲೆ ಮೇಕೆಯ ಮರಿ)

[121] ಮತ್ತು ನಾನು ದೃಷ್ಟಿಬೀರಿದೆನು. ಮತ್ತು ನೋಡಿರಿ! ಮೇಕೆಯ ಮರಿಯು 'ಸಿಯೋನ್'' ಪರ್ವತದ ಮೇಲೆ ನಿಂತಿದೆ. ಮತ್ತು ಅದರೊಂದಿಗೆ ಒಂದು ಲಕ್ಷ ನಲವತ್ತನಾಲ್ಕು ಸಾವಿರ [ಜನ]ರಿದ್ದರು! ಅವರ ಹಣೆಗಳ ಮೇಲೆ ಅದರ ಹೆಸರನ್ನು ಮತ್ತು ಅದರ ತಂದೆಯ ಹೆಸರನ್ನು ಬರೆದಿದ್ದಾರೆ.

[ಬೈಬಲ್ (ಇಂ). ಯೋಹನ-ಪ್ರಕಾಶಿತ:- ಪರ್ವ. 14; ಆ. 1]

### (ಈ ಲಕ್ಷಾಂತರ ಜನರು ಸ್ವರ್ಗದಿಂದ ಪೃಥಿವಿಯ ಮೇಲೆ ಹೇಗೆ ಬಂದರು ?)

**ಸಮೀಕ್ಷಕ:**—ಈಗ ನೋಡಿರಿ! ಎಲ್ಲಿ ಏಸುವಿನ ತಂದೆ ಇರುತ್ತಿದ್ದನೋ, ಅಲ್ಲಿಯೇ, ಅದೇ 'ಸಿಯೋನ್' ಪರ್ವತದ ಮೇಲೆ ಅವನ ಮಗನೂ ಕೂಡ, ಇರುತ್ತಿದ್ದನು. ಆದರೆ, ಒಂದು ಲಕ್ಷ ನಲವತ್ತನಾಲ್ಕು ಸಾವಿರ ಜನರ ಗಣನೆಯನ್ನು ಹೇಗೆ ಮಾಡಲಾಯಿತು ? ಒಂದು ಲಕ್ಷ ನಲವತ್ತನಾಲ್ಕು ಸಾವಿರ ಮಾತ್ರವೇ ಸ್ವರ್ಗದ ವಾಸಿಗಳಾದರು! ಉಳಿದ ಕೋಟ್ಯಂತರ ಕ್ರೈಸ್ತರ ತಲೆಯ ಮೇಲೆ ಮುದ್ರೆ ಬೀಳಲಿಲ್ಲವೇನು? ಇವರೆಲ್ಲರೂ ನರಕಕ್ಕೆ ಹೋದರೇನು?

ಕ್ರೈಸ್ತರು ಸಿಯೋನ್ ಪರ್ವತದ ಮೇಲೆ ಹೋಗಿ, ಏಸುವಿನ ತಂದೆ ಮತ್ತು ಅವರ ಸೈನ್ಯವು, ಅಲ್ಲಿದೆಯೋ ಅಥವಾ ಇಲ್ಲವೋ, ಎಂಬುವನ್ನು ನೋಡಬೇಕು! ಇರುವರಾದರೆ, ಈ ಬರೆಪ ಸರಿ! ಇಲ್ಲವಾದರೆ, ಸುಳ್ಳು!

ಎಲ್ಲಿಂದಲಾದರೂ ಅಲ್ಲಿಗೆ ಬಂದನಾದರೆ, ಎಲ್ಲಿಂದ ಬಂದನು ? "ಸ್ವರ್ಗ ದಿಂದ", ಎನ್ನುವಿರಾದರೆ, ಇಷ್ಟು ದೊಡ್ಡ ಸೈನ್ಯ ಮತ್ತು ಸ್ವತಃ ಮೇಲೆ–ಕೆಳಗೆ ಹಾರಿ, ಬಂದು–ಹೋಗಿ ಮಾಡಲು ಅವರು ಪಕ್ಷಿಗಳೇನು ?

ಅವನು ಬಂದು–ಹೋಗಿ ಮಾಡುತ್ತಾನೆಯಾದರೆ, ಒಂದು ಜಿಲ್ಲೆಯ ನ್ಯಾಯಾ ಧೀಶನಿಗೆ ಸಮಾನನಾದನು! ಮತ್ತು ಅವನು ಒಬ್ಬನು, ಇಬ್ಬರು ಅಥವಾ ಮೂವ ರಾದರೆ, ಸಾಧ್ಯವಾಗುವುದಿಲ್ಲ. ಆದರೆ, ಕನಿಷ್ಟ ಪಕ್ಷ ಒಂದೊಂದು ಭೂಗೋಳಕ್ಕೆ ಒಬ್ಬೊಬ್ಬ ಈಶ್ವರನಿರಬೇಕು!

**ಏಕೆಂದರೆ, ಒಬ್ಬನು, ಇಬ್ಬರು, ಮೂವರು ಅನೇಕ ಬ್ರಹ್ಮಾಂಡಗಳಿಗೆ ನ್ಯಾಯ ವನ್ನು ಮಾಡಲು, ಮತ್ತು ಎಲ್ಲೆಡೆಯೂ ಒಂದೇ ಕಾಲದಲ್ಲಿ ತಿರುಗಾಡಲು ಎಂದಿಗೂ ಸಮರ್ಥರಾಗಲಾರರು!** [121]

## (ಆತ್ಮನ ಕರ್ಮ ಆತ್ಮನ ಸಂಗಡ)

**[122] ಆತ್ಮನು—"ಅಹುದು! ಅವರು ತಮ್ಮ ಪರಿಶ್ರಮದಿಂದ ವಿಶ್ರಾಮ ಹೊಂದುವರು. ಆದರೆ, ಅವರ ಕಾರ್ಯಗಳು ಅವರೊಂದಿಗೇ ಹೋಗುತ್ತವೆ.", ಎಂದು ಹೇಳುತ್ತಾನೆ.**

**[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 14; ಆ. 8]**

## (ಕರ್ಮಾನುಸಾರ ಫಲ ಸಿಕ್ಕರೆ, ಪಾಪದ ಕ್ಷಮೆ ವ್ಯರ್ಥ)

**ಸಮೀಕ್ಷಕ:**—ನೋಡಿರಿ! ಕ್ರೈಸ್ತರ ಈಶ್ವರನಾದರೋ—"ಅವರ ಕರ್ಮಗಳು ಅವರೊಂದಿಗೆ ಇರುವುವು. ಎಂದರೆ, ಕರ್ಮಾನುಸಾರವಾಗಿ ಫಲಗಳು ಎಲ್ಲರಿಗೂ ಕೊಡ ಲ್ಪಡುವುವು.", ಎಂದು ಹೇಳುತ್ತಾನೆ.

ಮತ್ತು ಈ ಜನರು—"ಏಸುವು ಪಾಪಗಳನ್ನು ತೆಗೆದುಕೊಳ್ಳುವನು. ಮತ್ತು ಕ್ಷಮಿಸಲ್ಪಡುವರೂ ಕೂಡ!", ಎನ್ನುತ್ತಾರೆ.

ಇಲ್ಲಿ ಬುದ್ಧಿವಂತರು—'ಈಶ್ವರನ ವಚನ ಸತ್ಯವೋ ಅಥವಾ ಕ್ರೈಸ್ತರದೋ?', ಎಂದು ಆಲೋಚಿಸಬೇಕು. ಒಂದು ಮಾತಿನಲ್ಲಿ ಇಬ್ಬರಂತೂ ಸತ್ಯವಂತರಾಗಿರಲು ಶಕ್ಯವೇ ಇಲ್ಲ! ಇಬ್ಬರಲ್ಲಿ ಒಬ್ಬನು ಅವಶ್ಯವಾಗಿ ಸುಳ್ಳಾಗಿರುವನು!

ಬೇಕಾದರೆ, ಕ್ರೈಸ್ತರ ಈಶ್ವರನಾದರೂ ಸುಳ್ಳಾಗಿರಲೀ; ಅಥವಾ ಕ್ರೈಸ್ತರೇ ಸುಳ್ಳಾಗಿರಲೀ; [ಅದರಿಂದ] ನಮಗೇನು? [122]

## (ಈಶ್ವರನ ಕೋಪದ ಕುಂಡ)

**[123]** ಮತ್ತು ಅವನನ್ನು ಕೋಪದ 'ಮಹಾರಸದ ಕುಂಡ'*ದಲ್ಲಿ ಹಾಕಿದರು. ಮತ್ತು ರಸದ ಕುಂಡದ ದ್ರವವನ್ನು ಹರಿಯ ಬಿಡಲಾಯಿತು! ಮತ್ತು ರಸದ ಕುಂಡದೊಳಗಿನಿಂದ ಕುದುರೆಯ ಲಗಾಮಿನವರೆಗೆ, ರಕ್ತವು ಒಂದು ನೂರು ಕ್ರೋಶಗಳವರೆಗೆ† ಹರಿದು ಹೊರಟಿತು.

[ಬೈಬಲ್ (ಇಂ). ಯೋಹನ–ಪ್ರಕಾಶಿತ:–ಪರ್ವ. 14; ಆ 19,20]

## (ಈಶ್ವರನ ಕೋಪವು ದ್ರವಪದಾರ್ಥವೇನು?)

**ಸಮೀಕ್ಷಕ:**—ಈಗ, ಇವರ ಬುರುಡೆಗಳು ಪುರಾಣಗಳ [ಬುರುಡೆಗಳಿಗಿಂತ] ಹೆಚ್ಚಾಗಿವೆಯೋ, ಅಥವಾ ಇಲ್ಲವೋ, ನೋಡಿರಿ! ಕ್ರೈಸ್ತರ ಈಶ್ವರನು ಕೋಪ ಮಾಡಿಕೊಳ್ಳುವಾಗ ಬಹಳ ದುಃಖಿತನಾಗುತ್ತಿರಬಹುದು!

ಮತ್ತು ಅವನ ಕೋಪ-ಕುಂಡಗಳು ತುಂಬಿವೆ, ಎನ್ನಲು ಅವನ ಕೋಪವು ಜಲವೇನು? ಅಥವಾ ಕುಂಡಗಳಲ್ಲಿ ತುಂಬಿಕೊಳ್ಳುವಂತಹ ಇನ್ನೇನಾದರೂ ದ್ರವಿತ ಪದಾರ್ಥವೋ?

ಮತ್ತು ನೂರು ಕ್ರೋಶಗಳವರೆಗೆ ರಕ್ತವು ಹರಿಯುವುದು ಅಸಂಭವವಾಗಿದೆ! ಏಕೆಂದರೆ, **ರಕ್ತವು ಗಾಳಿ ತಗಲುವುದರಿಂದ, ಕೂಡಲೇ ಹೆಪ್ಪುಗಟ್ಟುತ್ತದೆ! ಇನ್ನು ಹರಿಯಬಲ್ಲುದೆಂತು?** ಆದುದರಿಂದ, ಇಂತಹ ಮಾತುಗಳು ಸುಳ್ಳಾಗಿರುತ್ತವೆ! [123]

## (ಸ್ವರ್ಗದಲ್ಲಿ ಸಾಕ್ಷಿಗಳ ಗುಡಾರ)

**[124]** ಮತ್ತು ನೋಡಿರಿ! ಸ್ವರ್ಗದಲ್ಲಿ ಸಾಕ್ಷಿಗಳ ಗುಡಾರದ ಮಂದಿರ ತೆರೆಯಲ್ಪಟ್ಟಿತು.

[ಬೈಬಲ್ (ಇಂ). ಯೋಹನ–ಪ್ರಕಾಶಿತ:–ಪರ್ವ. 15; ಆ. 5]

## (ಈಶ್ವರನಿಗೆ ಸಾಕ್ಷಿಗಳ ಆವಶ್ಯಕತೆ ಏನಿದೆ?)

**ಸಮೀಕ್ಷಕ:**—ಕ್ರೈಸ್ತರ ಈಶ್ವರನು ಸರ್ವಜ್ಞನಾಗಿದ್ದಿದ್ದರೆ, ಸಾಕ್ಷಿಗಳ ಕೆಲಸವೇನು? ಏಕೆಂದರೆ, ಅವನು ಸ್ವತಃ ಎಲ್ಲವನ್ನೂ ತಿಳಿದಿರುತ್ತಿದ್ದನು. ಇದರಿಂದ

---

*The Great Wine Press †200 ಮೈಲಿ—ಅನು.

ಸರ್ವಥಾ 'ಇವರ ಈಶ್ವರನು ಸರ್ವಜ್ಞನಲ್ಲ', ಎಂದೇ ಸಿದ್ಧ ಯವಾಗುತ್ತದೆ. ಏಕೆಂದರೆ, ಯಾವನು ಮನುಷ್ಯನಂತೆ ಅಲ್ಪಜ್ಞನಾಗಿರುತ್ತಾನೋ, ಅವನು ಈಶ್ವರತ್ವದ ಯಾವ ಕೆಲಸವನ್ನು ತಾನೇ ಮಾಡಬಲ್ಲನು? ಇಲ್ಲ! ಇಲ್ಲ! ಇಲ್ಲ!

ಮತ್ತು ಇದೇ ಪ್ರಕರಣದಲ್ಲಿ ದೂತರ ದೊಡ್ಡ ದೊಡ್ಡ ಅಸಂಭವವಾದ ವಾರ್ತೆಗಳನ್ನು ಬರೆದಿದ್ದಾರೆ. ಅವುಗಳನ್ನು ಸತ್ಯವೆಂದು ಯಾವನೂ ಅಂಗೀಕರಿಸಲಾರನು! ಎಲ್ಲಿಯ ವರೆಗೆ ಬರೆಯೋಣ! ಈ ಪ್ರಕರಣದಲ್ಲಿ ಸರ್ವಥಾ ಇಂತಹ ಮಾತುಗಳೇ ತುಂಬಿವೆ. [124]

### (ಕರ್ಮಗಳಿಗೆ ಎರಡರಷ್ಟು ಫಲ)

**[125] ಮತ್ತು ಈಶ್ವರನು ಅವನ ಕುಕರ್ಮಗಳನ್ನು ಸ್ಮರಿಸಿದನು. ಹೇಗೆ ಅವನು ನಿಮಗೆ ಕೊಟ್ಟಿದ್ದಾನೋ, ಹಾಗೆ ಅವನಿಗೆ ತುಂಬಿಸಿಕೊಡಿರಿ. ಮತ್ತು ಅವನ ಕರ್ಮಾನುಸಾರ ಎರಡರಷ್ಟನ್ನು ಅವನಿಗೆ ಕೊಟ್ಟು ಬಿಡಿರಿ.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 18; ಆ. 5, 6]

### (ಎರಡರಷ್ಟು ಫಲ ಅನ್ಯಾಯ)

**ಸಮೀಕ್ಷಕ:**—ನೋಡಿರಿ, ಪ್ರತ್ಯಕ್ಷವಾಗಿಯೇ ಕ್ರೈಸ್ತರ ದೇವರು ಅನ್ಯಾಯಕಾರಿಯಾಗಿದ್ದಾನೆ! ಏಕೆಂದರೆ—

**ಯಾವನು ಎಂತಹ, ಅಥವಾ ಎಷ್ಟು ಕರ್ಮವನ್ನು ಮಾಡಿದ್ದಾನೋ, ಅವನಿಗೆ ಅಂತಹ, ಮತ್ತು ಅಷ್ಟೇ ಫಲವನ್ನು ಕೊಡುವುದನ್ನೇ 'ನ್ಯಾಯ', ಎನ್ನುತ್ತಾರೆ! ಅದಕ್ಕಿಂತ ಹೆಚ್ಚಾಗಿ, ಕಡಿಮೆಯಾಗಿ ಕೊಡುವುದು ಅನ್ಯಾಯವಾಗಿರುತ್ತದೆ.**

**ಯಾರು ಅನ್ಯಾಯಕಾರಿಯ ಉಪಾಸನೆಯನ್ನು ಮಾಡುತ್ತಾರೋ, ಅವರು ಅನ್ಯಾಯಕಾರಿಗಳೇತಕ್ಕೆ ಅಲ್ಲ?** [125]

### (ಮೇಕೆಯ ಮರಿಯ ವಿವಾಹ)

[126] ಏಕೆಂದರೆ, ಮೇಕೆಯ ಮರಿಯ ವಿವಾಹ ಹತ್ತಿರ ಬಂದಿದೆ. ಮತ್ತು ಅದರ ಪತ್ನಿಯು ತನ್ನನ್ನು ಸಿದ್ಧಪಡಿಸಿಕೊಂಡಿದ್ದಾಳೆ.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 19; ಆ. 7]

### (ಸ್ವರ್ಗದಲ್ಲಿ ವಿವಾಹ, ಮಾವ-ಅತ್ತೆ ಯಾರು?)

**ಸಮೀಕ್ಷಕ:**—ಈಗ ಆಲಿಸಿರಿ! ಕ್ರೈಸ್ತರ ಸ್ವರ್ಗದಲ್ಲಿ ವಿವಾಹಗಳೂ ಕೂಡ, ಆಗುತ್ತವೆ! ಏಕೆಂದರೆ, ಏಸುವಿನ ವಿವಾಹವನ್ನು ಈಶ್ವರನು ಅಲ್ಲಿಯೇ ಮಾಡಿದನು!

'ಅವನ ಮಾವ, ಅತ್ತೆ. ಮೈದುನ ಮೊದಲಾದವರು ಯಾರಾಗಿದ್ದರು? ಮತ್ತು ಮಕ್ಕಳು-ಮರಿಗಳು ಎಷ್ಟಾದರು?'. ಎಂದು ಕೇಳಬೇಕು. ಮತ್ತು ವೀರ್ಯದ ನಾಶವಾಗುವುದರಿಂದ ಬಲ, ಬುದ್ಧಿ, ಪರಾಕ್ರಮ, ಆಯುಸ್ಸು ಮೊದಲಾದುವುಗಳೂ ಕಡಿಮೆಯಾಗುವುದರಿಂದ, ಈ ವರೆಗೆ ಏಸುವು ಅಲ್ಲಿ ಶರೀರತ್ಯಾಗವನ್ನು ಮಾಡಿರಬಹುದು! ಏಕೆಂದರೆ—

ಸಂಯೋಗಜನ್ಯವಾದ ಪದಾರ್ಥದ ವಿಯೋಗ ಅವಶ್ಯವಾಗಿ ಆಗುತ್ತದೆ!

ಈ ವರೆಗೆ ಕ್ರೈಸ್ತರು ಅವನ ನಂಬಿಕೆಯಲ್ಲಿ ಮೋಸಹೋದರು. ಮತ್ತು ಎಲ್ಲಿಯವರೆಗೆ ಮೋಸದಲ್ಲಿಯೇ ಇರುವರೋ. ತಿಳಿಯದು! [126]

## (ಶೈತಾನನನ್ನು ಮುಚ್ಚಿ, ಮುದ್ರೆಹಾಕಿದನು)

[127] ಮತ್ತು ಅವನು ಹೆಬ್ಬಾವನ್ನು, ಎಂದರೆ ದೆವ್ವ ಮತ್ತು ಶೈತಾನನಾಗಿರುವ ಆ ಪ್ರಾಚೀನ ಸರ್ಪವನ್ನು ಹಿಡಿದು. ಅದನ್ನು ಸಾವಿರ ವರ್ಷಗಳ ವರೆಗೆ ಬಂಧನದಲ್ಲಿಟ್ಟನು.

ಮತ್ತು ಅದನ್ನು ತಳವಿಲ್ಲದ ಕುಂಡದಲ್ಲಿ ಹಾಕಿದನು. ಮತ್ತು ಮುಚ್ಚಿಟ್ಟು, ಎಂದಿನ ವರೆಗೆ ಸಾವಿರ ವರ್ಷಗಳು ಪೂರ್ಣವಾಗುವುದಿಲ್ಲವೋ, ಆ ವರೆಗೆ ಪುನಃ ದೇಶಗಳ ಜನರುಗಳನ್ನು ಭ್ರಾಂತಗೊಳಿಸದೇ ಇರಲೆಂದು, ಅದಕ್ಕೆ ಮುದ್ರೆಯೊತ್ತಿದನು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 20; ಆ. 2, 3]

## (ಶೈತಾನನನ್ನು ಯಾವಾಗಲೂ ಬಂಧನದಲ್ಲೇಕೆ ಇಡಲಿಲ್ಲ?)

**ಸಮೀಕ್ಷಕ:**—ನೋಡಿರಿ! 'ಸತ್ತೆ, ಸತ್ತೆ', ಎಂದುಕೊಂಡು ಶೈತಾನನನ್ನು ಹಿಡಿದನು! ಮತ್ತು ಸಾವಿರ ವರ್ಷಗಳ ವರೆಗೆ ಬಂಧಿಸಿಟ್ಟನು.

ಮತ್ತೆಯೂ ಹೊರಬರುವನು ! [ಎಂದ ಮೇಲೆ], ಮತ್ತೆ ಭ್ರಾಂತಗೊಳಿಸುವುದಿಲ್ಲವೇನು ? ಇಂತಹ ದುಷ್ಟನನ್ನಂತೂ ಕಾರಾಗಾರದಲ್ಲಿಯೇ ಇಡಬೇಕಾಗಿತ್ತು! ಅಥವಾ ಸಾಯಿಸದೇ ಬಿಡಲೇಬಾರದಾಗಿತ್ತು!

## (ಶೈತಾನನ ಬೆದರಿಕೆ ತೋರಿಸಿ, ಮುಗ್ಧರನ್ನು ಸಿಕ್ಕಿಸುವುದು)

ಆದರೆ, ಈ ಶೈತಾನನ ಇರುವಿಕೆಯೂ ಕ್ರೈಸ್ತರ ಭ್ರಾಂತಿಮಾತ್ರವಾಗಿದೆ. ವಸ್ತುತಃ ಏನೇನೂ ಇಲ್ಲ! ಕೇವಲ ಜನರನ್ನು ಹೆದರಿಸಿ, ತಮ್ಮ ಜಾಲದಲ್ಲಿ ಕೆಡಹಿಕೊಳ್ಳುವ ಉಪಾಯವನ್ನು ಮಾಡಿದ್ದಾರೆ. ಉದಾಹರಣೆಗೆ—

ಯಾವನೋ ಧೂರ್ತನೊಬ್ಬನು ಯಾರೋ ಮುಗ್ಧರಾದ ಮಾನವರಿಗೆ—"ನಡೆಯಿರಿ, ನಿಮಗೆ ದೇವತಾ-ದರ್ಶನ ಮಾಡಿಸುವೆನು", ಎಂದು ಹೇಳಿದನು.

ಯಾವುದೋ ಏಕಾಂತ ಸ್ಥಾನಕ್ಕೆ ಕರೆದೊಯ್ದು, ಒಬ್ಬ ಮನುಷ್ಯನನ್ನು ಚತುರ್ಭುಜನನ್ನಾಗಿ ಮಾಡಿದನು. ಪೊದೆಯಲ್ಲಿ ನಿಲ್ಲಿಸಿ—

"ಕಣ್ಣು ಮುಚ್ಚಿಕೊಳ್ಳಿರಿ. ಯಾವಾಗ ನಾನು ಹೇಳುವೆನೋ, ಆಗ ತೆರೆಯಬೇಕು. ಮತ್ತು ಪುನಃ ಯಾವಾಗ ಹೇಳುವೆನೋ, ಆಗಲೇ ಮುಚ್ಚಿಕೊಳ್ಳಬೇಕು. **ಯಾವನು ಮುಚ್ಚಿಕೊಳ್ಳುವುದಿಲ್ಲವೋ, ಅವನು ಕುರುಡನಾಗಿ ಹೋಗುವನು!"**, ಎಂದು ಹೇಳಿದನು.

ಯಾವಾಗ ಅವನು ಮುಂದೆ ಬಂದನೋ, ಆಗ—"**ನೋಡಿ!**", ಎಂದನು.

ಮತ್ತು ಪುನಃ ಬೇಗನೇ—"**ಮುಚ್ಚಿಕೊಳ್ಳಿರಿ!**", ಎಂದನು.

ಯಾವಾಗ ಮತ್ತೆ, ಪೊದೆಯಲ್ಲಿ ಮುದುಗಿಕೊಂಡನೋ, ಆಗ—

"ತೆರೆಯಿರಿ! ನೋಡಿದಿರಾ ನಾರಾಯಣನನ್ನು?* ಎಲ್ಲರೂ ದರ್ಶನಮಾಡಿದಿರಾ?", ಎಂದನು.

ಇಂತಹ ಲೀಲೆ ಈ ಮತವಾದಿಗಳದಾಗಿದೆ. 'ಯಾವನು ನಮ್ಮ ಮತವನ್ನು ಒಪ್ಪುವುದಿಲ್ಲವೋ, ಅವನು ಶೈತಾನನಿಂದ ಭ್ರಾಂತಗೊಳಿಸಲ್ಪಟ್ಟಿದ್ದಾನೆ', ಎಂಬಂತೆ ಈ ಮತವಾದಿಗಳ ಮಾತುಗಳು ಇವೆ. **ಆದುದರಿಂದ, ಇವರ ಮಾಯೆಯಲ್ಲಿ ಯಾವನೂ ಸಿಕ್ಕಿಕೊಳ್ಳಬಾರದು!** [127]

## (ಪೃಥಿವಿ, ಆಕಾಶಗಳ ಓಟ)

**[128] ಯಾವನ ಎದುರಿನಿಂದ ಪೃಥಿವೀ ಮತ್ತು ಆಕಾಶ ಓಡಿಹೋದುವೋ, [ಅವನೇ ಈಶ್ವರನು]. ಮತ್ತು ಅವುಗಳಿಗೆ ಸ್ಥಳ ಸಿಕ್ಕಲಿಲ್ಲ.**

**ಮತ್ತು ನಾನು—ಚಿಕ್ಕವರೇನು, ದೊಡ್ಡವರೇನು—ಎಲ್ಲ ಮೃತರೂ ಈಶ್ವರನ ಮುಂದೆ ನಿಂತಿರುವುದನ್ನು ನೋಡಿದೆನು. ಮತ್ತು ಪುಸ್ತಕಗಳು ತೆರೆಯಲ್ಪಟ್ಟವು. ಮತ್ತು ಇನ್ನೊಂದು ಪುಸ್ತಕ, ಎಂದರೆ ಜೀವನದ ಪುಸ್ತಕವು ತೆರೆಯಲ್ಪಟ್ಟಿತು. ಮತ್ತು ಪುಸ್ತಕಗಳಲ್ಲಿ ಬರೆಯಲ್ಪಟ್ಟ ಮಾತುಗಳಿಂದ ಮೃತರ ವಿಚಾರಣೆ ಅವರ ಕರ್ಮಗಳಿಗೆ ಅನುಸಾರ ಮಾಡಲ್ಪಟ್ಟಿತು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 20; ಆ. 11, 12]

---

*ಇದು ಸ್ವಾಮಿ ನಾರಾಯಣ ಮತದ ಬಗ್ಗೆ ಕೊಟ್ಟಿರುವ ದೃಷ್ಟಾಂತ. ಈ ಗ್ರಂಥದ ಏಕಾದಶ ಸಮುಲ್ಲಾಸದ ಪುಟ 808ನ್ನು ನೋಡಿ—ಸಂ.

**ಸಮೀಕ್ಷಕ:**—ಹುಡುಗುತನದ ಈ ಮಾತನ್ನು ನೋಡಿರಿ! ಅಲ್ಲಾ! ಪೃಥಿವೀ ಮತ್ತು ಆಕಾಶ ಹೇಗೆ ಓಡಬಲ್ಲವು? ಮತ್ತು ಯಾರ ಮುಂದಿನಿಂದ ಓಡಿದವೋ, ಅವು ಯಾವುದರ ಮೇಲೆ ನಿಲ್ಲುವುವು? ಅವನ ಸಿಂಹಾಸನ [ಎಲ್ಲಿ ನಿಂತಿತು?] ಮತ್ತು ಅವನು ಎಲ್ಲಿ ನಿಂತನು?

## (ಈಶ್ವರನ ಬಳಿ ಲೆಕ್ಕದ ಪುಸ್ತಕವಿದೆಯೇನು !)

ಮತ್ತು ಶವಗಳು ಪರಮೇಶ್ವರನ ಮುಂದೆ ನಿಲ್ಲಿಸಲ್ಪಟ್ಟವಾದರೆ, ಪರಮೇಶ್ವರನೂ ಕೂಡ ಕುಳಿತೋ, ಅಥವಾ ನಿಂತೋ ಇರಬಹುದು! ಪುಸ್ತಕದಲ್ಲಿನ ಲೇಖಕ್ಕನುಸಾರ ನಡೆಯುತ್ತದೆ, ಎನ್ನಲು **ಈಶ್ವರನ ವ್ಯವಹಾರವು ಇಲ್ಲಿನ ನ್ಯಾಯಾಲಯ ಮತ್ತು ಅಂಗಡಿಗಳಿಗೆ ಸಮಾನವಾಗಿರುವುದೇನು ?**

ಮತ್ತು ಸಮಸ್ತ ಜೀವರ ವೃತ್ತಾಂತವನ್ನೂ ಈಶ್ವರನು ಬರೆದನೋ, ಅಥವಾ ಅವನ ಗುಮಾಸ್ತರೋ ?

**ಇಂತಿಂತಹ ಮಾತುಗಳಿಂದ ಕ್ರೈಸ್ತರೇ ಮೊದಲಾದ ಮತವಾದಿಗಳು ಅನೀಶ್ವರನನ್ನು ಈಶ್ವರನನ್ನಾಗಿಯೂ, ಮತ್ತು ಈಶ್ವರನನ್ನು ಅನೀಶ್ವರನನ್ನಾಗಿಯೂ ಮಾಡಿಬಿಟ್ಟಿದ್ದಾರೆ!** [128]

## (ನೌಕೆಯು ಮರಿಯು ಪತ್ನಿ)

**[129] ಅವರಲ್ಲಿ ಒಬ್ಬನು ನನ್ನ ಬಳಿ ಬಂದನು. ಮತ್ತು ನನಗೆ—**

**"ಬಾ! ನಾನು ಮದುಮಗಳನ್ನು, ಎಂದರೆ ಮೇಕೆಯ ಮರಿಯ ಪತ್ನಿಯನ್ನು ನಿನಗೆ ತೋರಿಸುವೆನು.", ಎಂದು ಹೇಳಿದನು.**

[ಬೈಬಲ್ (ಇಂ). ಯೋಹನ–ಪ್ರಕಾಶಿತ:–ಪರ್ವ. 21; ಆ. 9]

## (ಏಸುವು ಸ್ವರ್ಗಕ್ಕೆ ಹೋಗಿ ವಿಷಯಭೋಗದಲ್ಲೇಕೆ ಬಿದ್ದ?)

**ಸಮೀಕ್ಷಕ:**—ಒಳ್ಳೆಯದೇ [ಆಯಿತು]! ಏಸುವು ಸ್ವರ್ಗದಲ್ಲಿ ಮದುಮಗಳನ್ನು, ಎಂದರೆ ಪತ್ನಿಯನ್ನು ಸೊಗಸಾಗಿ ಗಳಿಸಿಕೊಂಡನು! ಅಲ್ಲಿ ಮಜಾಮಾಡುತ್ತಿರಬಹುದು! ಅಲ್ಲಿಗೆ ಯಾವ–ಯಾವ ಕ್ರೈಸ್ತರು ಹೋಗುತ್ತಾರೋ, ಅವರಿಗೂ ನಾರಿಯರು ಸಿಕ್ಕುತ್ತಿರಬಹುದು! ಮತ್ತು ಮಕ್ಕಳು-ಮರಿಗಳೂ ಆಗುತ್ತಿರಬಹುದು! **ಮತ್ತು ಬಹಳ ಗುಂಪು ಕೂಡುವುದರಿಂದ, ರೋಗೋತ್ಪತ್ತಿಯಾಗಿ ಸಾಯುತ್ತಲೂ ಇರಬಹುದು!**

## (ಕ್ರೈಸ್ತರ ಸ್ವರ್ಗದ ರಚನೆ)

[130] ಮತ್ತು ಅವನು ಆ ನಳಿಕೆಯಿಂದ ನಗರವನ್ನಳೆದನು. ಅದು ಏಳು ನೂರ ಐವತ್ತು ಕ್ರೋಶದಷ್ಟಾಗಿದೆ. ಅದರ ಉದ್ದ ಮತ್ತು ಅಗಲ ಮತ್ತು ಎತ್ತರ ಒಂದೇ ಸಮನಾಗಿದೆ, [ಎಂದರಿತನು].

ಮತ್ತು ಅವನು ಅದರ ಗೋಡೆಯನ್ನು ಮನುಷ್ಯನ. ಎಂದರೆ ದೂತನ ಅಳತೆಯಿಂದ, ನೂರ ನಲವತ್ತನಾಲ್ಕು ಮೊಳವಿದೆ, ಎಂದು ಅಳೆದನು.

ಮತ್ತು ಅದರ ಗೋಡೆಯು ಜೋಡಣೆ 'ಸೂರ್ಯಕಾಂತ ಶಿಲೆ'ಯದಾಗಿದ್ದಿತು. ಮತ್ತು ನಗರವೂ ನಿರ್ಮಲವಾದ ಗಾಜಿಗೆ ಸಮಾನವಾಗಿ ಶುದ್ಧ ಸ್ವರ್ಣದ್ದಾಗಿದ್ದಿತು.

ಮತ್ತು ನಗರದ ಗೋಡೆಯು ತಳಪಾಯಗಳು ಒಂದೊಂದು ಕೂಡ, ಬಹುಮೂಲ್ಯವಾದ ಕಲ್ಲಿನಿಂದ ಶೃಂಗರಿಸಲ್ಪಟ್ಟಿದ್ದುವು. ಮೊದಲನೆಯ ತಳಹದಿ 'ಸೂರ್ಯಕಾಂತಶಿಲೆ'ಯದೂ : ಎರಡನೆಯದು 'ನೀಲಮಣಿ'ಯದೂ; ಮೂರನೆಯದು 'ಕೆಂಪುಕಲ್ಲಿ'ನದೂ; ನಾಲ್ಕನೆಯದು 'ಮರತಕಶಿಲೆ'ಯದೂ; [ಆಗಿದ್ದಿತು].

ಐದನೆಯದು 'ಗೋಮೇಧಿಕಶಿಲೆ'ಯದೂ; ಆರನೆಯದು 'ಮಾಣಿಕ್ಯ'ದ್ದೂ; ಏಳನೆಯದು 'ಪೀತಮಣಿ'ಯದೂ; ಎಂಟನೆಯದು 'ಪಚ್ಚೆ'ಯದೂ; ಒಂಬತ್ತನೆಯದು 'ಪುಷ್ಪರಾಗಶಿಲೆ'ಯದೂ; ಹತ್ತನೆಯದು 'ಬೂದುಶಿಲೆ'ಯದೂ; ಹನ್ನೊಂದನೆಯದು 'ಧೂಮ್ರಕಾಂತಶಿಲೆ'ಯದೂ; ಹನ್ನೆರಡನೆಯದು 'ನೀಲಸ್ಫಟಿಕಮಣಿ'ಯದೂ [ಆಗಿದ್ದಿತು].

ಮತ್ತು ಹನ್ನೆರಡು ಹೆಬ್ಬಾಗಿಲುಗಳು ಹನ್ನೆರಡು 'ಮುತ್ತು'ಗಳದೂ ಆಗಿದ್ದುವು! ಒಂದೊಂದು ಮುತ್ತಿನಿಂದ ಒಂದೊಂದು ಹೆಬ್ಬಾಗಿಲು ನಿರ್ಮಿತವಾಗಿದ್ದಿತು. ಮತ್ತು ನಗರದ ಬೀದಿಗಳು ಸ್ವಚ್ಛವಾದ ಗಾಜಿನಂತಹ, ನಿರ್ಮಲವಾದ ಚಿನ್ನದವಾಗಿದ್ದುವು!

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 21; ಆ. 16-21]

## (ಸೀಮಿತ ನಗರದಲ್ಲಿ ಅಪಾರ ಜನಸಮೂಹ ಹೇಗೆ?)

ಸಮೀಕ್ಷಕ:—ಆಲಿಸಿರಿ, ಕ್ರೈಸ್ತರ ಸ್ವರ್ಗದ ವರ್ಣನೆಯನ್ನು! ಕ್ರೈಸ್ತರು ಸಾಯುತ್ತಾ ಹೋಗುತ್ತಾರೆಯಾದರೆ, ಮತ್ತು ಅಲ್ಲಿ ಜನಿಸುತ್ತಾ ಹೋಗುತ್ತಾರೆಯಾದರೆ, ಇಷ್ಟು ವಿಸ್ತಾರವಾದ ನಗರದಲ್ಲಿಯೂ [ಕೂಡ], ಹೇಗೆ ಹಿಡಿಸಬಲ್ಲರು? ಏಕೆಂದರೆ, ಅದರಲ್ಲಿ ಮಾನವರ ಆಗಮನವೇನೋ ಆಗುತ್ತದೆ; ಆದರೆ, ಅದರಿಂದ ನಿರ್ಗಮನವಿಲ್ಲ!

### (ನಗರದ ನಿರ್ಮಾಣ ಮತ್ತು ಆಡಂಬರದ ವರ್ಣನೆ ಕಲ್ಪಿತವಾದದ್ದು)

ಮತ್ತು ಅದು ಬಹುಮೂಲ್ಯರತ್ನಗಳಿಂದ ಜಟಿತವಾದ ನಗರಿ, ಎಂದೊಪ್ಪಿ ಕೊಂಡಿದ್ದಾರೆ! ಮತ್ತು 'ಅದೆಲ್ಲವೂ ಚಿನ್ನದ್ದು', ಎಂದು ಮೊದಲಾಗಿ ಬರೆದಿರುವುದು ಕೇವಲ ಮುಗ್ಧ ಮಾನವರನ್ನು ಭ್ರಾಂತಗೊಳಿಸಿ, ಸಿಕ್ಕಿಸಿಕೊಳ್ಳುವ ಲೀಲೆಯಾಗಿದೆ!

ಒಳ್ಳೆಯದು! ಆ ನಗರದ ಉದ್ದ-ಅಗಲಗಳೇನೋ ಹೇಗೆ ಬರೆದಿದ್ದಾರೋ, ಹಾಗೆ ಇರುವುದು ಶಕ್ಯ! ಎತ್ತರ ಏಳು ನೂರ ಐವತ್ತು ಕ್ರೋಶ ಹೇಗೆ ತಾನೇ ಆಗ ಬಲ್ಲದು? ಇದು ಸರ್ವಥಾ ಮಿಥ್ಯಾ ಕಪೋಲಕಲ್ಪನೆಯು ಮಾತ್ರವಾಗಿದೆ!

ಮತ್ತು ಇಷ್ಟು ದೊಡ್ಡ ಮುತ್ತುಗಳು ಎಲ್ಲಿಂದ ಬಂದಿರಬಹುದು? ಈ ಲೇಖನವನ್ನು ಬರೆಯುವವನ ಮನೆಯ ಗಡಿಗೆಯೊಳಗಿನಿಂದ ಬಂದಿರಬಹುದೇನೋ? ಈ ಬುರುಡೆಯು ಪುರಾಣಕ್ಕೂ ಅಪ್ಪನಾಗಿದೆ! [130]

### (ಘೃಣಿತಕರ್ಮಿ ಮತ್ತು ಅಸತ್ಯವಾದಿಗೆ ಸ್ವರ್ಗವಿಲ್ಲ)

**[131] ಮತ್ತು ಯಾವುದಾದರೂ ಅಪವಿತ್ರ ವಸ್ತು ಅಥವಾ ಘೃಣಿತ ಕರ್ಮವನ್ನು ಮಾಡುವವನು, ಇಲ್ಲವೇ ಅಸತ್ಯ ವ್ಯವಹಾರ ಮಾಡುವವನು ಅದರಲ್ಲಿ ಯಾವುದೇ ರೀತಿಯಿಂದಲೂ ಪ್ರವೇಶಿಸಲಾರನು.**

[ಬೈಬಲ್ (ಇಂ). ಯೋಹನ-ಪ್ರಕಾಶಿತ:-ಪರ್ವ. 21; ಆ. 27]

### (ಯೋಹನನಂತಹ ಅಸತ್ಯವಾದಿಗೆ ಸ್ವರ್ಗ ಹೇಗೆ ಸಿಕ್ಕಿತು?)

**ಸಮೀಕ್ಷಕ:**—ವಿಷಯ ಹೀಗಿರುವುದಾದರೆ, ಕ್ರೈಸ್ತರುಗಳು—"ಪಾಪಿ ಜನರು ಕೂಡ, ಕ್ರೈಸ್ತರಾಗುವುದರಿಂದ ಸ್ವರ್ಗಕ್ಕೆ ಹೋಗಬಲ್ಲರು", ಎಂದೇಕೆ ಹೇಳು ತ್ತಾರೆ? ಈ ಮಾತು ಸರಿಯಾದುದಲ್ಲ! ಹೀಗಿರುವುದಾದರೆ, ಸ್ವಪ್ನದ ಸುಳ್ಳು ಮಾತುಗಳನ್ನಾಡುವವನಾದ ಯೋಹನನು ಸ್ವರ್ಗದಲ್ಲಿ ಪ್ರವೇಶಮಾಡಲು ಎಂದಿಗೂ ಶಕ್ತನಾಗಿರಲಾರನು!

ಮತ್ತು ಏಸುವು ಕೂಡ. ಸ್ವರ್ಗಕ್ಕೆ ಹೋಗಿರಲಾರನು! ಏಕೆಂದರೆ, ಒಬ್ಬನೇ ಪಾಪಿಯೂ ಸ್ವರ್ಗಕ್ಕೆ ಹೋಗಲಾರನು. ಎಂದಮೇಲೆ, ಅನೇಕ ಪಾಪಿಗಳ ಪಾಪದ ಭಾರದಿಂದ ಯುಕ್ತನಾಗಿರುವವನು ಹೇಗೆ ತಾನೇ ಸ್ವರ್ಗವಾಸಿಯಾಗಬಲ್ಲನು?

[131]

(ಕ್ರೈಸ್ತರ ಸ್ವರ್ಗದಲ್ಲಿ ಏನೇನಾಗುವುದು?)

[132] ಮತ್ತು, ಈಗ ಯಾವ ಶಾಪವೂ ಇರುವುದಿಲ್ಲ. ಮತ್ತು ಈಶ್ವರನ ಮತ್ತು ಮೇಕೆಯ ಮರಿಯ ಸಿಂಹಾಸನ ಅವರಲ್ಲಿರುವುದು. ಮತ್ತು ಅವನ ದಾಸರು ಅವನಿಗೆ ಸೇವೆ ಮಾಡುವರು.

ಮತ್ತು ಅವನ* ಮುಖವನ್ನು ನೋಡುವರು. ಮತ್ತು ಅವನ ಹೆಸರು ಅವರ ಹಣೆಯ ಮೇಲೆ ಇರುವುದು.

ಮತ್ತು ಅಲ್ಲಿ ರಾತ್ರಿಯಾಗುವುದಿಲ್ಲ. ಮತ್ತು ಅವರಿಗೆ ದೀಪದ ಅಥವಾ ಸೂರ್ಯನ ಜ್ಯೋತಿಯ ಆವಶ್ಯಕತೆ ಇರುವುದಿಲ್ಲ. ಏಕೆಂದರೆ, ಪರಮೇಶ್ವರ ಈಶ್ವರನು ಅವರಿಗೆ ಬೆಳಕನ್ನು ಕೊಡುವನು. ಅವರು ಸದಾ-ಸರ್ವದಾ ರಾಜ್ಯವನ್ನಾಳುವರು.

[ಬೈಬಲ್ (ಇಂ). ಯೋಹನ-ಪ್ರಕಾಶಿತ:– ಪರ್ವ.22; ಆ. 3-5]

(ಕ್ರೈಸ್ತರ ಈಶ್ವರನ ಮುಖದ ಬಣ್ಣ ಯಾವುದು ?)

ಸಮೀಕ್ಷಕ:– ನೋಡಿರಿ, ಇದೇ ಕ್ರೈಸ್ತರ ಸ್ವರ್ಗವಾಸ! ಈಶ್ವರನು ಮತ್ತು ಏಸುವು ಸಿಂಹಾಸನದ ಮೇಲೆ ನಿರಂತರವಾಗಿ ಕುಳಿತಿರುವರೇನು? ಮತ್ತು ಅವರ ದಾಸರು ಅವರ ಮುಂದೆ ಸದಾ ಮುಖವನ್ನು ನೋಡುತ್ತಾ ಇರುವರೇನು? ಈಗ ಇದನ್ನಾದರೂ ಹೇಳಿರಿ! ನಿಮ್ಮ ಈಶ್ವರನ ಮುಖ ಐರೋಪ್ಯರದರಂತೆ ಬೆಳ್ಳಗಿದೆಯೋ? ಅಥವಾ ಆಫ್ರಿಕನ್ನರದರ ಹಾಗೆ ಕಪ್ಪಗಿದೆಯೋ? ಇಲ್ಲವೇ, ಬೇರೆಯ ದೇಶದವರದಂತೆ ಇದೆಯೋ?

ನಿಮ್ಮ ಈ ಸ್ವರ್ಗವೂ ಬಂಧನವೇ ಆಗಿದೆ! ಏಕೆಂದರೆ, ಎಲ್ಲಿ ಕಿರಿಮೆ–ಹಿರಿಮೆ ಇರುವುದೋ, ಹಾಗೂ ಅದೊಂದೇ ನಗರದಲ್ಲಿರಬೇಕಾದ ಆವಶ್ಯಕತೆ ಇರುವುದೋ, ದುಃಖವಾಗದೇ ಇರುವುದಾದರೂ ಹೇಗೆ?

ಮತ್ತು ಯಾವನು ಮುಖವುಳ್ಳವನೋ, ಅವನು ಈಶ್ವರನೂ, ಸರ್ವಜ್ಞನೂ, ಪರಮೇಶ್ವರನೂ ಎಂದಿಗೂ ಆಗಲಾರನು! [132]

(ಕರ್ಮಾನುಸಾರವಾಗಿಯೇ ಫಲ)

[133] ನೋಡು! ನಾನು ಬೇಗ ಬರುತ್ತೇನೆ. ಪ್ರತಿಯೊಬ್ಬನಿಗೂ ಅವನ ಕಾರ್ಯಕ್ಕೆ ಅನುರೂಪವಾಗಿ ಫಲಗಳನ್ನು ಕೊಡುವ ಸಲುವಾಗಿ, ನನ್ನ ಪ್ರತಿಫಲಗಳು ನನ್ನ ಸಂಗಡವೇ ಇವೆ.

[ಬೈಬಲ್ (ಇಂ). ಯೋಹನ-ಪ್ರಕಾಶಿತ:–ಪರ್ವ. 22; ಆ. 12]

*ಎಂದರೆ, ಈಶ್ವರನ –ಯು.ಮೀ.

## (ಹಾಗಾದರೆ, ಪಾಪ-ಕ್ಷಮೆಯ ಮಾತು ವ್ಯರ್ಥ)

**ಸಮೀಕ್ಷಕ:—ಕರ್ಮಾನುಸಾರವಾಗಿ ಫಲಗಳನ್ನು ಪಡೆಯುತ್ತಾರೆ, ಎನ್ನುವುದೇ ಮಾತಾಗಿರುವಾಗ, ಪಾಪಗಳ ಕ್ಷಮೆ ಎಂದಿಗೂ ಆಗುವುದಿಲ್ಲ!** ಮತ್ತು ಕ್ಷಮೆಯಾಗುವುದಾದರೆ, ಇಂಜೀಲಿನ ಮಾತುಗಳು ಸುಳ್ಳಾಗಿವೆ! ಯಾವನಾದರೂ—"ಕ್ಷಮೆ ಮಾಡುವುದನ್ನೂ ಕೂಡ, ಇಂಜೀಲಿನಲ್ಲಿ ಬರೆದಿದೆ", ಎಂದು ಹೇಳುವನಾದರೆ, **ಪೂರ್ವಾಪರ**-ವಿರುದ್ಧ, ಎಂದರೆ **'ವದತೋ ವ್ಯಾಘಾತ'** ಆಯಿತು! ಆದುದರಿಂದ, ಸುಳ್ಳುಆಯಿತು!

**ಇದನ್ನು ಒಪ್ಪುವುದನ್ನು ಬಿಟ್ಟು ಬಿಡಿರಿ!**

ಇನ್ನು ಎಲ್ಲಿಯ ವರೆಗೆ ಬರೆಯೋಣ? **ಇವರ ಬೈಬಲ್‌ನಲ್ಲಿ ಲಕ್ಷಾಂತರ ಮಾತುಗಳು ಖಂಡನೀಯವಾಗಿವೆ!**

ಹೀಗೆ. ಏನೋ ಸ್ವಲ್ಪ ಸಂಕೇತಮಾತ್ರವಾಗಿ. ಕ್ರೈಸ್ತರ ಬೈಬಲ್ ಗ್ರಂಥದ ಬಗ್ಗೆ ತೋರಿಸಿದ್ದೇವೆ. ಇಷ್ಟರಿಂದಲೇ. ಬುದ್ಧಿವಂತರಾದ ಜನರು ಬಹಳ ತಿಳಿದುಕೊಳ್ಳುವರು !

**ಸ್ವಲ್ಪ ಮಾತುಗಳನ್ನುಳಿದು, ಉಳಿದುದೆಲ್ಲಾ ಸುಳ್ಳೇ ತುಂಬಿಕೊಂಡಿದೆ! ಹೇಗೆ** ಅಸತ್ಯದ ಸಂಗದಿಂದ ಸತ್ಯವೂ ಕೂಡ, ಶುದ್ಧವಾಗಿ ಉಳಿಯದೋ, **ಹಾಗೆಯೇ ಬೈಬಲ್ ಗ್ರಂಥವೂ ಕೂಡ, ಮಾನನೀಯವಾಗಲಾರದು!**

**ಆದರೆ, ಆ [ಬೈಬಲಿನಲ್ಲಿರುವ]** ಸತ್ಯವು ವೇದಗಳ ಸ್ವೀಕೃತಿಯಲ್ಲಿ ಗೃಹೀತ **ವಾಗಿಯೇ ಆಗುತ್ತದೆ!** [133]

[ಇಷ್ಟುಮಾತ್ರ ಬೈಬಲಿನ ಸಂಬಂಧವಾಗಿ ಬರೆಯಲಾಗಿದೆ. ಬುದ್ಧಿವಂತರ ಎದುರಿಗೆ ಹೆಚ್ಚು ಬರೆಯುವುದು ಅನಾವಶ್ಯಕ. ಇದರ ಮುಂದೆ, ಮುಸಲ್ಮಾನರ ಮತದ ವಿಷಯದಲ್ಲಿ ಬರೆಯಲಾಗುವುದು].

**ಇತಿ ಶ್ರೀಮದ್ದಯಾನಂದಸರಸ್ವತೀಸ್ವಾಮಿನಿರ್ಮಿತೇ ಸತ್ಯಾರ್ಥಪ್ರಕಾಶೇ**

**ಸುಭಾಷಾವಿಭೂಷಿತೇ ಕೃಶ್ಚೀನಮತವಿಷಯೇ**

**ತ್ರಯೋದಶಃ ಸಮುಲ್ಲಾಸಃ ಸಂಪೂರ್ಣಃ ॥೧೩॥**





## ಅನುಭೂಮಿಕಾ [೪]

### (ಮುಸಲ್ಮಾನರಿಗೆ ಕುರಾನಿನ ಮೇಲೇ ಪೂರ್ಣ ನಂಬಿಕೆ)

ಮುಸಲ್ಮಾನರ ಮತದ ವಿಷಯದಲ್ಲಿ ಬರೆದಿರುವ ಈ 14 ನೆಯ ಸಮುಲ್ಲಾಸವನ್ನು ಕೇವಲ 'ಕುರಾನಿ'*ನ ಅಭಿಪ್ರಾಯಕ್ಕೆ ಅನುಸಾರವಾಗಿ ಬರೆದಿದ್ದೇವೆ ; ಬೇರೆ ಯಾವುದೇ ಗ್ರಂಥದ ಮತಕ್ಕೆ ಅನುಸಾರವಾಗಿ ಅಲ್ಲ! **ಏಕೆಂದರೆ, ಮುಸಲ್ಮಾನರು ಕುರಾನಿನ ಮೇಲೆಯೇ ಪೂರ್ಣವಾಗಿ ನಂಬಿಕೆಯನ್ನಿಡುತ್ತಾರೆ.**

ಸಂಪ್ರದಾಯಗಳ ಅಸ್ತಿತ್ವದಿಂದಾಗಿ, ಯಾವುದಾದರೂ ಶಬ್ದದ ಅರ್ಥ ಮೊದಲಾದುವುಗಳ ಬಗೆಗೆ ಪರಸ್ಪರ ವಿರುದ್ಧವಾಗಿದ್ದರೂ, ಕುರಾನಿನ ಮೇಲೆ ಎಲ್ಲರೂ ಏಕಮತರಾಗಿದ್ದಾರೆ.

ಅರಬ್ಬೀ ಭಾಷೆಯಲ್ಲಿರುವ ಕುರಾನಿಗೆ ಮೌಲವಿಗಳು ಉರ್ದುವಿನಲ್ಲಿ ಅರ್ಥ ಬರೆದಿದ್ದಾರೆ. ಆ ಅರ್ಥವನ್ನು ದೇವನಾಗರೀ ಲಿಪಿಯಲ್ಲಿ ಮತ್ತು ಆರ್ಯ ಭಾಷೆಯಲ್ಲಿ† ಭಾಷಾಂತರ ಮಾಡಿಸಿ, ಆಮೇಲೆ, ಅರಬ್ಬಿಯ ದೊಡ್ಡ ದೊಡ್ಡ ವಿದ್ವಾಂಸರಿಂದ ಸಂಶೋಧನ ಮಾಡಿಸಿ, ಬರೆದಿದ್ದೇವೆ. ಯಾರಾದರೂ—'ಈ ಅರ್ಥ ಸರಿಯಲ್ಲ', ಎನ್ನುವುದಾದರೆ, ಮೌಲವೀ ಸಾಹೇಬರುಗಳ ಭಾಷಾಂತರಗಳನ್ನು‡ ಮೊದಲು ಖಂಡಿಸುವುದು ಅವರಿಗೆ ಉಚಿತವಾಗಿರುತ್ತದೆ. ಆ ಮೇಲೆ, ಈ ವಿಷಯದಲ್ಲಿ ಬರೆಯಲಿ!

### (ಪಕ್ಷಪಾತದಿಂದ ಜಗತ್ತಿನಲ್ಲಿ ಅನರ್ಥ)

ಏಕೆಂದರೆ, ಈ ಲೇಖನವು ಕೇವಲ ಮಾನವರ ಉನ್ನತಿ ಮತ್ತು ಸತ್ಯಾಸತ್ಯದ ನಿರ್ಣಯಕ್ಕಾಗಿ, [ಇದೆ. ಎಂದರೆ], ಎಲ್ಲ ಮತಗಳ ವಿಷಯಗಳ ಜ್ಞಾನವೂ ಸ್ವಲ್ಪ ಸ್ವಲ್ಪವಾಗಲಿ ; ಇದರಿಂದ ಮಾನವರಿಗೆ ಪರಸ್ಪರ ಸಮಾಲೋಚನೆ ಮಾಡುವ ಸಮಯ ಸಿಕ್ಕಲಿ; ಮತ್ತು ಒಬ್ಬರು ಇನ್ನೊಬ್ಬರ ದೋಷಗಳ ಖಂಡನವನ್ನು ಮಾಡಿ; ಗುಣಗಳನ್ನು

---

*ವಾಸ್ತವವಾಗಿ, ಈ ಶಬ್ದ 'ಕುರ್‌ಆನ್' ಎಂದಿದೆ. ಬಳಕೆಯಲ್ಲಿ 'ಕುರಾನ್' ಆಗಿದೆ. —ಯು.ಮೀ.

†ಎಂದರೆ, ಹಿಂದೀ ಭಾಷೆಯಲ್ಲಿ—ಸಂ.

‡ಈ ದೇವನಾಗರೀ ಲಿಪಿಯ ಕುರಾನ್ ಗ್ರಂಥವು ಪರೋಪಕಾರಿಣೀ ಸಭಾ, ಅಜಮೇರಿನವರ ಆಧೀನದಲ್ಲಿ ಸುರಕ್ಷಿತವಾಗಿದೆ. —ಯು.ಮೀ.

ಗ್ರಹಿಸಲಿ! ಯಾವುದೇ ಬೇರೆಯ ಮತದ ಮೇಲೆಯಾಗಲೀ, [ಅಥವಾ] ಈ ಮತದ ಮೇಲೆಯೇ ಆಗಲೀ, ಸುಳ್ಳು–ಸುಳ್ಳೇ ದೋಷವನ್ನೋ, ಸ್ತುತಿಯನ್ನೋ ಹಾಕುವುದು ಉದ್ದೇಶ್ಯವಲ್ಲ!

ಆದರೆ, ಒಳಿತಾದುದೆಲ್ಲವೂ ಒಳಿತೇ, ಎಂದೂ, ಮತ್ತು ಕೆಡುಕೆಲ್ಲವೂ ಕೆಡುಕೇ, ಎಂದೂ ಎಲ್ಲರಿಗೂ ತಿಳಿಯಬೇಕು!

ಯಾವನೂ ಯಾವನ ಮೇಲೆಯೂ ಸುಳ್ಳು ವ್ಯವಹಾರ ನಡೆಸಲು ಶಕ್ಯವಾಗ ಬಾರದು! ಮತ್ತು ಸತ್ಯವನ್ನು ನಿರೋಧಿಸಲೂ ಶಕ್ಯವಾಗಬಾರದು!

ಮತ್ತು, ಸತ್ಯಾಸತ್ಯ ವಿಷಯವನ್ನು ಪ್ರಕಾಶಪಡಿಸಿದ ಮೇಲೆಯೂ ಕೂಡ, ಯಾವನಿಗೆ ಇಚ್ಛೆ ಇದೆಯೋ, ಅವನು [ಬೇಕಾದರೆ], ಒಪ್ಪದಿರಲಿ, ಅಥವಾ ಒಪ್ಪಲಿ!* ಯಾರ ಮೇಲೆಯೂ ಬಲಾತ್ಕಾರ ಮಾಡಲ್ಪಡುವುದಿಲ್ಲ!

ಮತ್ತು, ತಮ್ಮ ಮತ್ತು ಅನ್ಯರ ದೋಷಗಳನ್ನು ದೋಷಗಳೆಂದೂ, ಮತ್ತು ಗುಣಗಳನ್ನು ಗುಣಗಳೆಂದೂ, ತಿಳಿದು, ಗುಣಗಳ ಸ್ವೀಕಾರವನ್ನೂ, ಮತ್ತು ದೋಷಗಳ ತ್ಯಾಗವನ್ನೂ ಮಾಡುವುದೇ ಸಜ್ಜನರ ರೀತಿಯಾಗಿದೆ! ಮತ್ತು ಹಠವಾದಿಗಳ ಹಠ ವನ್ನೂ, ದುರಾಗ್ರಹವನ್ನೂ ಕಡಿಮೆ ಮಾಡಬೇಕು—ಮಾಡಿಸಬೇಕು! ಏಕೆಂದರೆ, ಪಕ್ಷಪಾತದಿಂದ ಎಂತೆಂತಹ ಅನರ್ಥಗಳು ಜಗತ್ತಿನಲ್ಲಿ ಆಗಿಲ್ಲ? ಮತ್ತು ಆಗುವುದಿಲ್ಲ?

ಸತ್ಯವಾದುದೇನೆಂದರೆ, ಈ ಅನಿಶ್ಚಿತವೂ, ಕ್ಷಣಭಂಗುರವೂ ಆದ ಜೀವನದಲ್ಲಿ, ಅನ್ಯರಿಗೆ ಹಾನಿಯನ್ನುಂಟುಮಾಡಿ, ತಾವೂ ಲಾಭರಹಿತರಾಗಿರುವುದು; ಮತ್ತು ಅನ್ಯ ರನ್ನೂ ಲಾಭರಹಿತರನ್ನಾಗಿಡುವುದು ಮಾನವತೆಯಿಂದ ಹೊರಗಾದಂತೆಯೇ ಸೈ!

## (ವಿರೋಧವನ್ನು ಕಡಿಮೆ ಮಾಡುವುದೇ ಉದ್ದೇಶ್ಯ)

ಇದರಲ್ಲಿ ಏನಾದರೂ ವಿರುದ್ಧವಾಗಿ ಬರೆಯಲ್ಪಟ್ಟಿದ್ದರೆ, ಅದನ್ನು ಸಜ್ಜನರು ತಿಳುಹಿಸಲಿ ! ಆಮೇಲೆ, ಯಾವುದು ಉಚಿತವಾಗಿರುವುದೋ, ಅದು ಒಪ್ಪಿಕೊಳ್ಳ ಲ್ಪಡುವುದು.

ಏಕೆಂದರೆ, ಈ ಲೇಖನವು ಹಠ, ದುರಾಗ್ರಹ, ಈರ್ಷ್ಯೆ, ದ್ವೇಷ, ವಾದ-ವಿವಾದ ಮತ್ತು ವಿರೋಧವನ್ನು ಕಡಿಮೆ ಮಾಡುವುದಕ್ಕಾಗಿ ಬರೆಯಲ್ಪಟ್ಟಿದೆಯೇ ಹೊರತು,

---

*ಕುರಾನಿನ ಮೇಲೆ ಮಹರ್ಷಿ ದಯಾನಂದರ ಈ ಸಮೀಕ್ಷೆ ಪ್ರಕಟವಾದ ಮೇಲೆ ಮೌಲವಿ ಗಳು ಕುರಾನಿಗೆ ಹೊಸ ಭಾಷ್ಯಗಳನ್ನು ರಚಿಸಿ, ಆರೋಪಿತ ದೋಷಗಳನ್ನು ದೂರಮಾಡಲಾರಂಭಿಸಿ ದರು. ಮಹರ್ಷಿ ದಯಾನಂದರ ಕಾರ್ಯಗಳು ಮತ್ತು ಕೃತಿಗಳು ಸಾರ್ಥಕ, ಎಂಬುದಕ್ಕೆ ಬೇರೆ ಪ್ರಮಾಣ ಬೇಕಿಲ್ಲ! —ಸಂ.

ಇವುಗಳನ್ನು ಹೆಚ್ಚಿಸುವುದಕ್ಕಾಗಿ ಅಲ್ಲ ! ಏಕೆಂದರೆ, ಒಬ್ಬರು ಇನ್ನೊಬ್ಬರಿಗೆ ಹಾನಿಯೊಡ್ಡುವುದರಿಂದ ದೂರವಿದ್ದು, ಪರಸ್ಪರರಿಗೆ ಲಾಭವನ್ನುಂಟು ಮಾಡುವುದು ನಮ್ಮ ಮುಖ್ಯ ಕರ್ಮವಾಗಿದೆ !

ಈಗ, ಈ 14 ನೆಯ ಸಮುಲ್ಲಾಸದಲ್ಲಿ ಮುಸಲ್ಮಾನರ ಮತದ ವಿಷಯವನ್ನು ಸಕಲ ಸಜ್ಜನರ ಸಮ್ಮುಖದಲ್ಲಿ ನಿವೇದಿಸಿಕೊಳ್ಳುತ್ತೇನೆ. ವಿಮರ್ಶಿಸಿ, ಇಷ್ಟವಾದುದರ ಸ್ವೀಕಾರವನ್ನೂ, ಅನಿಷ್ಟವಾದುದರ ಪರಿತ್ಯಾಗವನ್ನೂ ಮಾಡಿರಿ !

**ಅಲಮತಿವಿಸ್ತರೇಣ ಬುದ್ಧಿಮದ್ವರ್ಯೇಷು ॥**

**ಇತ್ಯನುಭೂಮಿಕಾ. ॥**



# ಅಥ ಚತುರ್ದಶ-ಸಮುಲ್ಲಾಸಾರಂಭಃ

## ಅಥ ಯವನಮತವಿಷಯಂ ವ್ಯಾಖ್ಯಾಸ್ಯಾಮಃ

ಇದರ ಮುಂದೆ ಮುಸಲ್ಮಾನರ ಮತ-ವಿಷಯದಲ್ಲಿ ಬರೆಯುವೆವು—

### (ಅಲ್ಲಾಹನ ಹೆಸರಿನೊಂದಿಗೆ ಆರಂಭ)

[1] ಆರಂಭ, ಕ್ಷಮೆ ಮಾಡುವ ದಯಾಳು ಅಲ್ಲಾಹನ ಹೆಸರಿನೊಂದಿಗೆ.

[ಕುರಾನ್:-ಮಂಜಿಲ್ 1; ಸಿಪಾರಾ 1; ಸೂರತ್ 1]

### (ಅಲ್ಲಾಹನ ಹೆಸರಿನೊಂದಿಗೆ ಆರಂಭ ಮಾಡುವವನು ಯಾವನು?)

**ಸಮೀಕ್ಷಕ:**—ಮುಸಲ್ಮಾನರು ಈ **ಕುರಾನ್** ಖುದಾ ಹೇಳಿದುದು, ಎಂದು ಹೇಳುತ್ತಾರೆ. ಆದರೆ, ಈ ವಚನದಿಂದ ಇದನ್ನು ರಚಿಸುವವನು ಯಾವನೋ ಬೇರೆ ಯವನೆಂದು ವಿದಿತವಾಗುತ್ತದೆ. ಏಕೆಂದರೆ, **ಪರಮೇಶ್ವರನು ರಚಿಸಿದುದಾಗಿದ್ದರೆ**— **'ಆರಂಭ, ಅಲ್ಲಾಹನ ಹೆಸರಿನೊಂದಿಗೆ'**, ಎಂದು ಹೇಳುತ್ತಿರಲಿಲ್ಲ! ಆದರೆ, **'ಆರಂಭ, ಮಾನವರ ಉಪದೇಶಕ್ಕಾಗಿ'**, ಎಂದು ಹೇಳುತ್ತಿದ್ದನು.* 'ನೀವು ಹೀಗೆ ಹೇಳಿರಿ', ಎಂದು ಮಾನವರಿಗೆ ಶಿಕ್ಷಣವನ್ನು ಕೊಡುತ್ತಾನೆಯಾದರೆ, ಅದೂ ಕೂಡ, ಸರಿಯಲ್ಲ. ಏಕೆಂದರೆ, ಇದರಿಂದ ಪಾಪದ ಆರಂಭವೂ ಕೂಡ, ಖುದಾನ ಹೆಸರಿನಿಂದ ಆಗಿ, ಅವನ ಹೆಸರೂ ಕೂಡ, ದೂಷಿತವಾಗಿ ಹೋಗುವುದು!

### (ದಯಾಳುವು ಮಾಂಸ ತಿನ್ನುವ ಆದೇಶ ಕೊಡಲಾರ)

**ಅವನು ಕ್ಷಮೆಯನ್ನು ಮಾಡುವವನೂ, ದಯೆಯನ್ನು ಮಾಡುವವನೂ ಆಗಿರುವನಾದರೆ, ಅವನು ತನ್ನ ಸೃಷ್ಟಿಯಲ್ಲಿ ಮಾನವರ ಸುಖದ ಸಲುವಾಗಿ ಬೇರೆಯ ಪ್ರಾಣಿಗಳನ್ನು ಕೊಂದು, ದಾರುಣವಾದ ವೇದನೆಯನ್ನಿತ್ತು, ಸಾಯಿಸಿ, ಮಾಂಸವನ್ನು ತಿನ್ನುವ ಅನುಮತಿಯನ್ನು ಕೊಟ್ಟನೇತಕ್ಕೆ?** ಆ ಪ್ರಾಣಿಗಳು ನಿರಪರಾಧವೂ ಪರಮೇಶ್ವರನಿಂದ ಸೃಜಿಸಲ್ಪಟ್ಟವೂ ಆಗಿಲ್ಲವೇನು?

---

*ಮಹರ್ಷಿ ದಯಾನಂದರ ಈ ಟೀಕೆ ಪ್ರಕಟವಾದ ಮೇಲೆ, ಯಾರಾದರೂ ಕಾರ್ಯಾರಂಭವನ್ನೇ ತಪ್ಪಾಗಿ ಮಾಡಿದಾಗ, ಅದನ್ನು ಸೂಚಿಸಲು, ಉತ್ತರ ಭಾರತದಲ್ಲಿ - "ಬಿಸ್ಮಿಲ್ಲಾಹ್ ಹೀ ಗಲತ್", ಎಂಬ ವಾಗ್ರೂಢಿಯೊಂದು ಪ್ರಚಲಿತವಾಯಿತು. ಈ ಗಾದೆಯನ್ನು ಮುಸಲ್ಮಾನರೂ ಕೂಡ, ಬಳಸುತ್ತಾರೆ—ಸಂ.

### (ಪಾಪಕರ್ಮಗಳನ್ನೂ ಈಶ್ವರನ ಹೆಸರಿನ ಮೇಲೆ ಮಾಡಬೇಕೇನು?)

ಮತ್ತು—"ಪರಮೇಶ್ವರನ ಹೆಸರಿನ ಮೇಲೆ ಒಳ್ಳೆಯ ಕಾರ್ಯಗಳ ಆರಂಭ; ಕೆಟ್ಟ ಕಾರ್ಯಗಳದಲ್ಲ!", ಎಂದು ಕೂಡ, ಹೇಳಬೇಕಾಗಿತ್ತು!

ಈ ಮಾತಿನಲ್ಲಿ* ತಿರುಗು ಮುರುಗಿದೆ. ಕಳವು, ವ್ಯಭಿಚಾರ, ಮಿಥ್ಯಾಭಾಷಣ ಮೊದಲಾದ ಅಧರ್ಮದ ಆರಂಭವನ್ನೂ ಕೂಡ, ಪರಮೇಶ್ವರನ ಹೆಸರಿನ ಮೇಲೆ ಮಾಡಬೇಕೇನು ?

ಇದೇ ಕಾರಣದಿಂದ, ನೋಡಿರಿ! **ಕಟುಕರೇ ಮೊದಲಾದ ಮುಸಲ್ಮಾನರು ಹಸು ಮೊದಲಾದುವುಗಳ ಕೊರಳನ್ನು ಕತ್ತರಿಸುವಲ್ಲಿಯೂ "ಬಿಸ್ಮಿಲ್ಲಾಹ್!", ಎಂಬ ವಚನವನ್ನು ಉಚ್ಚರಿಸುತ್ತಾರೆ !** ಇದೇ ಇದರ ಪೂರ್ವೋಕ್ತವಾದ ಅರ್ಥವಾದರೆ, ಕೆಡುಕುಗಳ ಆರಂಭವನ್ನು ಕೂಡ, ಪರಮೇಶ್ವರನ ಹೆಸರಿನ ಮೇಲೆ ಮುಸಲ್ಮಾನರು ಮಾಡುತ್ತಾರೆ !

### (ಹಿಂಸೆಯ ಆದೇಶ ಕೊಡುವುದರಿಂದ ಖುದಾ 'ದಯಾಳು' ಆಗಲಾರನು)

ಮತ್ತು ಮುಸಲ್ಮಾನರ 'ಖುದಾ' ದಯಾಳುವೂ ಕೂಡ, ಆಗಿರುವುದಿಲ್ಲ ! ಏಕೆಂದರೆ. ಅವನ ದಯೆ ಆ ಪಶುಗಳ ಮೇಲೆ ಉಳಿಯಲಿಲ್ಲ! ಮತ್ತು ಮುಸಲ್ಮಾನರುಗಳು ಇದರ ಅರ್ಥವನ್ನು ತಿಳಿದಿಲ್ಲವಾದರೆ, ಈ ವಚನದ ಪ್ರಕಟನೆ ವ್ಯರ್ಥವಾಗಿದೆ. ಒಂದು ವೇಳೆ, ಮುಸಲ್ಮಾನರು ಇದರ ಅರ್ಥವನ್ನು ಬೇರೆ ರೀತಿಯಲ್ಲಿ ಮಾಡುತ್ತಾರೆಯಾದರೆ, ನೇರವಾದ ಅರ್ಥವೇನು? ಇತ್ಯಾದಿ. [1]

### (ಖುದಾ ಪಾಲಕನು ಮತ್ತು ದಯಾಳು)

[2] **ಸ್ತುತಿಗಳೆಲ್ಲವೂ—ಸರ್ವರಕ್ಷಕನ, ಎಂದರೆ ಸಮಸ್ತ ಜಗತ್ತಿನ ಪಾಲನೆಯನ್ನು ಮಾಡುವವನಾದ ಪರಮೇಶ್ವರನ ಸಲುವಾಗಿಯೇ ಇವೆ.**

**ಕ್ಷಮೆಯನ್ನು ಮಾಡುವವನಾಗಿದ್ದಾನೆ; ದಯಾಳುವಾಗಿದ್ದಾನೆ.**

[ಕುರಾನ್:–ಮಂಜಿಲ್ 1; ಸಿಪಾರಾ. 1; ಸೂರತ್ ಉಲ್ ಫಾತಿಹಾ; ಆಯತ್.1,2]

### (ಪಾಲಕನಾಗಿದ್ದರೆ, ಬೇರೆ ಮತದವರನ್ನು ಕೊಲ್ಲಲು ಆಜ್ಞೆಯನ್ನೇಕೆ ಇತ್ತನು?)

**ಸಮೀಕ್ಷಕ:**—ಕುರಾನಿನ ಖುದಾ ಜಗತ್ತಿನ ಪಾಲನ ಮಾಡುವವನಾಗಿದ್ದರೆ, ಮತ್ತು ಎಲ್ಲರ ಮೇಲೆಯೂ ಕ್ಷಮೆಯನ್ನು ಮತ್ತು ದಯೆಯನ್ನು ಮಾಡುತ್ತಾ

---

*ಎಂದರೆ, ಕುರಾನಿನ ಈ ಆಯತ್ತಿನಲ್ಲಿ—ಯು.ಮೀ.

ಇದ್ದಿದ್ದರೆ, ಅನ್ಯಮತೀಯರನ್ನು ಮತ್ತು ಪಶುವೇ ಮೊದಲಾದುವನ್ನು ಮುಸಲ್ಮಾನರ ಕೈಯಿಂದ ಸಾಯಿಸುವ ಆಜ್ಞೆಯನ್ನು ಕೊಡುತ್ತಿರಲಿಲ್ಲ !

## (ಪಾಪಿಗಳನ್ನೂ ಕ್ಷಮಿಸುವನೇನು?)

ಕ್ಷಮೆ ಮಾಡುವವನಾಗಿದ್ದರೆ, ಪಾಪಿಗಳನ್ನೂ ಕೂಡ, ಕ್ಷಮಿಸುವನೇನು? ಮತ್ತು ಹಾಗೆ ಇರುವನಾದರೆ, ಮುಂದೆ ಬರೆಯಲಿರುವಂತೆ,—

**"ಕಾಫಿರರನ್ನು ಕೊಂದು ಹಾಕಿರಿ!",**

ಎಂದರೆ, 'ಯಾರು ಕುರಾನನ್ನು ಮತ್ತು ಪೈಗಂಬರರನ್ನು ಒಪ್ಪುವುದಿಲ್ಲವೋ. **ಅವರು ಕಾಫಿರರು!'**, ಎಂದೇಕೆ ಹೇಳುತ್ತಿದ್ದನು ?

**ಆದುದರಿಂದ, ಕುರಾನ್ ಈಶ್ವರಕೃತವೆಂದು ಕಾಣುವುದಿಲ್ಲ!** [2]

## (ಈಶ್ವರನಿಂದಲೇ ಸಹಾಯ ಕೋರುವುದು)

**[3] ನ್ಯಾಯ-ದಿನದ ಸ್ವಾಮಿಯು!**
**ನಿನ್ನಲ್ಲಿಯೇ ನಾವು ಭಕ್ತಿಯನ್ನಿಡುತ್ತೇವೆ. ಮತ್ತು ನಿನ್ನಿಂದಲೇ ಸಹಾಯವನ್ನು ಬಯಸುತ್ತೇವೆ.**
**ತೋರಿಸು, ನಮಗೆ ನೇರವಾದ ಮಾರ್ಗವನ್ನು!**

[ಕುರಾನ್:-ಮಂ.1; ಸಿ.1; ಸೂ.1; ಆ.3-5]

## (ನ್ಯಾಯವನ್ನು ನಿತ್ಯವೂ ಏಕೆ ಮಾಡುವುದಿಲ್ಲ ?)

**ಸಮೀಕ್ಷಕ:**—ಖುದಾ, ನಿತ್ಯವೂ ನ್ಯಾಯ ಮಾಡುವುದಿಲ್ಲವೇನು? ಯಾವುದೋ ಒಂದು ದಿನ ನ್ಯಾಯ ಮಾಡುತ್ತಾನೇನು! ಇದರಿಂದಲಂತೂ ಅನ್ಯಾಯವೇ ಕಂಡು ಬರುತ್ತದೆ !

ಅವನಲ್ಲಿಯೇ ಭಕ್ತಿಯನ್ನಿಡುವುದು ಮತ್ತು ಅವನಿಂದಲೇ ಸಹಾಯ ಬಯಸುವುದೇನೋ ಸರಿಯೇ! ಆದರೆ, **ಕೆಟ್ಟ ಕೆಲಸಕ್ಕೂ ಸಹಾಯ ಬಯಸಬೇಕೇನು?**

## (ಮತ್ತೆ, ಮುಸಲ್ಮಾನರು ನೇರವಾದ ಮಾರ್ಗವನ್ನು ಏಕೆ ಅನುಸರಿಸುವುದಿಲ್ಲ ?)

ಮತ್ತು ನೇರವಾದ ಮಾರ್ಗವು ಮುಸಲ್ಮಾನರದೊಂದೇ ಇದೆಯೋ, ಅಥವಾ ಬೇರೆಯುವರದೂ ಇದೆಯೋ? **ನೇರವಾದ ಮಾರ್ಗವನ್ನು ಮುಸಲ್ಮಾನರೇಕೆ ಗ್ರಹಿಸುವುದಿಲ್ಲ?** ಕೇಡಿನ ಕಡೆಯ ನೇರವಾದ ಮಾರ್ಗವನ್ನು ಅಪೇಕ್ಷಿಸುವುದಿಲ್ಲ ತಾನೇ?

ಒಳಿತು ಎಲ್ಲರದೂ ಒಂದೇ ಆಗಿರುವುದಾದರೆ, ಮತ್ತೆ, ಮುಸಲ್ಮಾನರಲ್ಲಿನದೇ ಆದ ವಿಶೇಷವೇನೂ ಉಳಿಯುಲಿಲ್ಲ. ಮತ್ತು ಬೇರೆಯುವರ ಒಳಿತನ್ನು ಅಂಗೀಕರಿಸು ವುದಿಲ್ಲವಾದರೆ, ಪಕ್ಷಪಾತಿಗಳಾಗಿರುತ್ತಾರೆ ! [3]

**(ನಮಗೆ ಶ್ರೇಷ್ಠರ ಮಾರ್ಗವನ್ನು ತೋರಿಸು; ದುಷ್ಟರ ಮಾರ್ಗವನ್ನಲ್ಲ)**

**[4] ಯಾರ ಮೇಲೆ ನೀನು ಕರುಣೆಯುನ್ನು ಮಾಡಿದೆಯೋ, ಆ ಜನರ ಮಾರ್ಗವನ್ನು [ತೋರಿಸು].**

**ಮತ್ತು ಯಾರ ಮೇಲೆ ನೀನು ಭಯಾನಕ ಕೋಪವನ್ನು, ಎಂದರೆ ಅತ್ಯಂತ ಕ್ರೋಧದ ದೃಷ್ಟಿಯುನ್ನು ಬೀರಿದ್ದೀಯೋ, ಅವರ ಮಾರ್ಗವನ್ನು ತೋರಿಸಬೇಡ. ಮತ್ತು ಪ್ರಥಭ್ರಷ್ಟರ ಮಾರ್ಗವನ್ನೂ ನಮಗೆ ತೋರಿಸಬೇಡ.**

**[ಕುರಾನ್:-ಮಂ.1; ಸಿ.1; ಸೂ. 1; ಆ.6]**

**(ಪೂರ್ವಜನ್ಮದ ಪಾಪ–ಪುಣ್ಯವಿಲ್ಲದೇ ಶ್ರೇಷ್ಠ ಮತ್ತು ದುಷ್ಟರು ಹೇಗೆ?)**

**ಸಮೀಕ್ಷಕ:**—ಮುಸಲ್ಮಾನರು ಪೂರ್ವಜನ್ಮವನ್ನು ಮತ್ತು ಪೂರ್ವಕೃತ ಪಾಪ–ಪುಣ್ಯಗಳನ್ನು ಒಪ್ಪದಿರುವಾಗ, ಯಾರ ಮೇಲಾದರೂ ಮಹಾಪ್ರಸಾದವನ್ನು, ಎಂದರೆ ಅನುಕಂಪವನ್ನು ಅಥವಾ ದಯೆಯುನ್ನು ಮಾಡುವುದರಿಂದ, ಮತ್ತು ಯಾರ ಮೇಲಾದರೂ ಮಾಡದಿರುವುದರಿಂದ, ಖುದಾ ಪಕ್ಷಪಾತಿಯಾಗಿ ಹೋಗುವನು !

**ಏಕೆಂದರೆ, ಪಾಪ-ಪುಣ್ಯಗಳಿಲ್ಲದೇ ಸುಖ-ದುಃಖಗಳನ್ನು ಕೊಡುವುದು ಕೇವಲ ಅನ್ಯಾಯುದ ಸಂಗತಿಯಾಗಿದೆ!**

**(ನಿಷ್ಕಾರಣವಾಗಿ ದಯೆ ಮತ್ತು ಕೋಪವನ್ನು ಈಶ್ವರನು ಮಾಡುವುದಿಲ್ಲ)**

ಮತ್ತು ಕಾರಣವಿಲ್ಲದೇ, ಯಾವನ ಮೇಲೆ ದಯೆಯುನ್ನೂ, ಮತ್ತು ಯಾವನ ಮೇಲಾದರೂ ಕ್ರೋಧದೃಷ್ಟಿಯುನ್ನೂ ಮಾಡುವುದೂ ಕೂಡ,[ಈಶ್ವರನ] ಸ್ವಭಾವಕ್ಕೆ ಹೊರಗಾಗಿರುತ್ತದೆ. ಅವನು ದಯೆಯುನ್ನು ಅಥವಾ ಕ್ರೋಧವನ್ನು ಮಾಡಲಾರನು! ಮತ್ತು ಅವರ ಪೂರ್ವಸಂಚಿತ ಪುಣ್ಯ-ಪಾಪಗಳೇ ಇಲ್ಲದಿರುವಾಗ, ಯಾವನ ಮೇಲಾದರೂ ದಯೆಯುನ್ನೂ, ಮತ್ತು ಯಾವನ ಮೇಲಾದರೂ ಕ್ರೋಧವನ್ನೂ ಮಾಡುವುದು ಶಕ್ಯವಾಗಿರುವುದಿಲ್ಲ.

### (ಈ 'ಸೂರಃ'ವನ್ನು ಮನುಷ್ಯರಿಂದ ಹೇಗೆ ಹೇಳಿಸಿದನು ?)

ಮತ್ತು ಈ ಸೂರತ್ತಿನ ಟಿಪ್ಪಣಿಯಲ್ಲಿ— "ಈ ಸೂರಃ*ವನ್ನು ಅಲ್ಲಾಹ್ ಸಾಹೇಬರು ಮಾನವರ ಮುಖದಿಂದ—'ಸದಾ ಈ ರೀತಿ ಹೇಳುತ್ತಾ ಇರಬೇಕು!,' ಎಂದು ಹೇಳಿದರು.", ಎಂದು ಬರೆದಿದೆ.

ಈ ಮಾತು ಸರಿಯಾದರೆ, "ಅಲಿಫ್, ಬೇ" ಮೊದಲಾದ ಅಕ್ಷರಗಳನ್ನೂ ಕೂಡ, ಖುದಾನೇ ಓದಿಸಿರಬಹುದು! ['ಇಲ್ಲ'], ಎನ್ನುವಿರಾದರೆ, ಅಕ್ಷರಜ್ಞಾನ ವಿಲ್ಲದೇ ಈ ಸೂರಃವನ್ನು ಹೇಗೆ ಓದಬಲ್ಲವರಾದರು ? ಕೇವಲ ಕಂಠದಿಂದಲೇ ಹೇಳಿಸಿದರೇನು ? ಮತ್ತು ಹೇಳುತ್ತಾ ಹೋದರೇನು? ಹೀಗೆಯೇ ಇದ್ದರೆ, ಸಮಸ್ತ ಕುರಾನನ್ನೂ ಕಂಠಪಾಠದ ಮೂಲಕವೇ ಓದಿಸಿರಬಹುದು!†

### (ದೇಶವಿಶೇಷದ ಭಾಷೆಯಲ್ಲಿ ಜ್ಞಾನ ಕೊಡುವುದು ಈಶ್ವರನ ಪಕ್ಷಪಾತ)

ಇದರಿಂದ, ಪಕ್ಷಪಾತದ ಮಾತುಗಳು ಕಂಡುಬರುವಂತಹ ಪುಸ್ತಕವು ಈಶ್ವರ ಕೃತವಾಗಲಾರದು, ಎಂದು ತಿಳಿದುಕೊಳ್ಳಬೇಕು ! ಉದಾಹರಣೆಗೆ—

ಅರಬ್ಬೀ ಭಾಷೆಯಲ್ಲಿ ಇಳಿಸಿರುವುದರಿಂದ. ಅರಬರಿಗೆ ಇದನ್ನು ಓದುವುದು ಸುಗಮವೂ, ಅನ್ಯಭಾಷಾಭಾಷಿಗಳಿಗೆ ಕಠಿಣವೂ ಆಗುತ್ತದೆ. ಇದರಿಂದ, ಖುದಾ ನಲ್ಲಿ ಪಕ್ಷಪಾತ ಉಂಟಾಗುತ್ತದೆ !

ಮತ್ತು ಹೇಗೆ ಪರಮೇಶ್ವರನು ಸೃಷ್ಟಿಯಲ್ಲಿರುವ ಸಮಸ್ತ ದೇಶೀಯ ಮಾನವರ ಮೇಲೆಯೂ ನ್ಯಾಯ–ದೃಷ್ಟಿಯಿಂದ, ಎಲ್ಲ ದೇಶಭಾಷೆಗಳಿಂದಲೂ ವಿಲಕ್ಷಣವಾದ, ಮತ್ತು ಎಲ್ಲ ದೇಶದವರಿಗೂ ಒಂದೇ ಸಮನಾದ ಪರಿಶ್ರಮದಿಂದ ಗೊತ್ತಾಗುವ ಸಂಸ್ಕೃತ‡ ಭಾಷೆಯಲ್ಲಿಯೇ ವೇದಗಳ ಪ್ರಕಾಶವನ್ನು ಮಾಡಿದ್ದಾನೋ, ಹಾಗೆ [ಈ ಖುದಾ] ಮಾಡಿದ್ದಿದ್ದರೆ, ಯಾವ ದೋಷವೂ ಆಗುತ್ತಿರಲಿಲ್ಲ ! [4]

### (ಕುರಾನ್ ನಿಷ್ಠಾವಂತರಿಗೇ ಮಾರ್ಗದರ್ಶಕ)

[5] ಸಂದೇಹವಿಲ್ಲದಂತಹ ಈ ಪುಸ್ತಕವು ನಿಷ್ಠಾವಂತರಿಗೆ ಮಾರ್ಗ ತೋರಿಸುತ್ತದೆ.

---

*ಎಂದರೆ, ಶ್ಲೋಕವನ್ನು—ಸಂ.

†ಈ ದೋಷವು ವೇದಗಳ ಪ್ರಾದುರ್ಭಾವದ ಜಗೆಗೆ ಬರುವುದಿಲ್ಲ. ಏಕೆಂದರೆ,ಪರಮೇಶ್ವರನು ವೇದಗಳ ಜ್ಞಾನವನ್ನು ಆದಿ ಋಷಿಗಳ ಅಂತಃಕರಣದಲ್ಲಿ ಅಥವಾ ಜ್ಞಾನದಲ್ಲಿ ಪ್ರೇರೇಪಿಸಿದನು. ಋಗ್ವೇದದ ಮಂತ್ರ(1.71.1)ನ್ನು ನೋಡಿ. ಸಪ್ತಮ ಸಮುಲ್ಲಾಸದಲ್ಲಿ ಪುಟ 379ನ್ನು ನೋಡಿ.

‡ವೈದಿಕ ಸಂಸ್ಕೃತ ಭಾಷೆ—ಅನು. —ಸಂ.

ಯಾರು ಪರೋಕ್ಷದ ಮೇಲೆ ನಂಬಿಕೆಯಿಡುತ್ತಾರೋ, ನಮಾಜನ್ನು ಮಾಡು ತ್ತಾರೋ, ಮತ್ತು ನಾವು ಕೊಟ್ಟಿರುವ ವಸ್ತುವಿನಿಂದ ವ್ಯಯ ಮಾಡುತ್ತಾರೋ,

ಮತ್ತು ಯಾರು ನಿನ್ನ ಮೇಲೆ, ಅಥವಾ ನಿನಗಿಂತ ಮೊದಲು ಇಳಿದ ಪುಸ್ತಕದ ಮೇಲೆ ನಂಬಿಕೆಯಿಡುತ್ತಾರೋ, ಮತ್ತು, 'ಕಯಾಮತ್ತಿ'*ನ ಮೇಲೆಯೂ ವಿಶ್ವಾಸವಿಡುತ್ತಾರೋ,

ಅಂತಹ ಈ ಜನರು ಸ್ವಾಮಿಯ ಶಾಸನದ ಅಧೀನದಲ್ಲಿದ್ದಾರೆ. ಮತ್ತು ಇವರೇ ಮುಕ್ತಿ ಪಡೆಯುವವರಾಗಿದ್ದಾರೆ.

ನಿಜವಾಗಿಯೂ ಯಾರು ಕಾಫಿರರಾದರೋ, ಮತ್ತು ಯಾರನ್ನು ಹೆದರಿಸುವುದು-ಹೆದರಿಸದಿರುವುದು ಸಮಾನವಾಗಿರುತ್ತದೋ, ಅವರು ನಂಬಿಕೆಯನ್ನು ಇಡುವುದಿಲ್ಲ.

ಅಲ್ಲಾಹನು ಅವರ ಹೃದಯಗಳ-ಕಿವಿಗಳ ಮೇಲೆ ಮುದ್ರೆಯೊತ್ತಿಬಿಟ್ಟಿದ್ದಾನೆ! ಮತ್ತು ಅವರ ಕಣ್ಣುಗಳ ಮೇಲೆ ತೆರೆಯಿದೆ. ಮತ್ತು ಅವರ ಸಲುವಾಗಿ ಮಹದಭಿಶಾಪವಿದೆ.

[ಕುರಾನ್:-ಮಂ. 1; ಸಿ-1; ಸೂ. 2; ಆ. 2-7]

## (ಮಾರ್ಗದರ್ಶನವಂತೂ ಪಥಭ್ರಷ್ಟರಿಗೆ ಆವಶ್ಯಕ)

**ಸಮೀಕ್ಷಕ:**—ತನ್ನ ಬಾಯಿನಿಂದಲೇ ತನ್ನ ಪುಸ್ತಕದ ಪ್ರಶಂಸೆಯನ್ನು ಮಾಡು ವುದು ಖುದಾನ ದಂಭದ ಮಾತಲ್ಲವೇನು? ನಿಷ್ಠಾವಂತರು, ಎಂದರೆ ಧಾರ್ಮಿಕರಾದ ಜನರುಗಳಂತೂ ಸ್ವತಃ ಸತ್ಯದ ಮಾರ್ಗದಲ್ಲಿದ್ದಾರೆ. ಮತ್ತು ಯಾರು ಅಸತ್ಯದ ಮಾರ್ಗದಲ್ಲಿದ್ದಾರೋ, ಅವರಿಗೆ ಈ ಕುರಾನ್ ಮಾರ್ಗವನ್ನೇ ತೋರಿಸಲಾರದು ! ಮತ್ತೆ, ಯಾವ ಕೆಲಸಕ್ಕಾಗಿದೆ, ಅದು?

ಪಾಪ-ಪುಣ್ಯಗಳೂ ಮತ್ತು ಪುರುಷಾರ್ಥವೂ ಇಲ್ಲದೇ, ಖುದಾ ತನ್ನ ಖಜಾನೆ ಯಿಂದಲೇ ವ್ಯಯಮಾಡಲು ಕೊಡುತ್ತಾನೇನು? ಹಾಗೆ ಕೊಡುತ್ತಾನೆಯಾದರೆ, ಎಲ್ಲರಿಗೂ ಕೊಡುವುದಿಲ್ಲವೇಕೆ ? ಮತ್ತು ಮುಸಲ್ಮಾನರು ಪರಿಶ್ರಮವನ್ನೇಕೆ ಮಾಡುತ್ತಾರೆ?

## (ಖುದಾ ಮೊದಲಿನ ಪುಸ್ತಕದಲ್ಲಿ ಬರೆಯುವುದನ್ನು ಮರೆತು ಹೋಗಿದ್ದನೋ?)

ಮತ್ತು ಬೈಬಲ್, ಇಂಜೀಲ್ ಮೊದಲಾದುದರ ಮೇಲೆ ನಂಬಿಕೆಯಿಡುವುದು ಯೋಗ್ಯವಾದರೆ, ಮುಸಲ್ಮಾನರು, ಹೇಗೆ ಕುರಾನಿನ ಮೇಲೆ ನಂಬಿಕೆ ಇಡುತ್ತಾರೋ, ಹಾಗೆ ಇಂಜೀಲ್ ಮೊದಲಾದುವುಗಳ ಮೇಲೆ ಇಡುವುದಿಲ್ಲವೇಕೆ ? ಮತ್ತು

---

*ಪ್ರಳಯ, ನ್ಯಾಯಮಾಡಲು, ಸೃಷ್ಟಿಯ ಕೊನೆಯ ದಿನ.—ಸಂ.

ಇಡುತ್ತಾರೆಯಾದರೆ, ಕುರಾನಿನ ಇರುವಿಕೆ ಏತಕ್ಕಾಗಿ ? 'ಕುರಾನಿನಲ್ಲಿ ಹೆಚ್ಚು ವಿಷಯ ಗಳಿವೆ', ಎನ್ನುವರಾದರೆ, ಮೊದಲಿನ ಪುಸ್ತಕದಲ್ಲಿ ಬರೆಯುವುದನ್ನು ಖುದಾ ಮರೆತು ಹೋಗಿರಬಹುದು ! ಮತ್ತು, ಮರೆತಿಲ್ಲವಾದರೆ, ಕುರಾನನ್ನು ರಚಿಸುವುದು ನಿಷ್ಪ್ರಯೋಜನವಾಗಿದೆ!

## (ವೇದವಿರುವಂತೆ ಒಂದೇ ಪುಸ್ತಕವನ್ನೇಕೆ ರಚಿಸಲಿಲ್ಲ?)

ಮತ್ತು ನಾವು ನೋಡುವಂತೆ, ಬೈಬಲ್ ಮತ್ತು ಕುರಾನ್‌ನ ಮಾತುಗಳಲ್ಲಿ, ಎಲ್ಲಿಯೋ ಒಂದೊಂದು ಬೇರೆ-ಬೇರೆಯಾಗಿರಬಹುದು! ಅನ್ಯಥಾ ಎಲ್ಲವೂ ಹೊಂದಿ ಕೊಂಡೇ ಇವೆ! ವೇದವಿರುವಂತೆ ಒಂದೇ ಪುಸ್ತಕವನ್ನು ಏಕೆ ರಚಿಸಲಿಲ್ಲ ?

ಕಯಾಮತ್ತಿನ ಮೇಲೆಯೇ ನಂಬಿಕೆ ಇಡಬೇಕೇನು ? ಬೇರೆಯವರ ಮೇಲೆ ಕೂಡದೇ ?

ಕ್ರೈಸ್ತರು ಮತ್ತು ಮುಸಲ್ಮಾನರು ಮಾತ್ರ ಖುದಾನ ಪ್ರಶಾಸನದಲ್ಲಿದ್ದಾರೇನು? ಅವರಲ್ಲಿ ಯಾರೂ ಪಾಪಿಗಳಿಲ್ಲವೇನು ? ಯಾವ ಕ್ರೈಸ್ತರು ಮತ್ತು ಮುಸಲ್ಮಾನರು ಅಧರ್ಮಿಗಳಾಗಿದ್ದಾರೋ, ಅವರೂ ಕೂಡ, ಬಿಡುಗಡೆ ಹೊಂದುವ ರಾದರೆ, ಮತ್ತು ಅನ್ಯಧರ್ಮಾತ್ಮರೂ ಕೂಡ. ಹೊಂದದೇ ಹೋದರೆ, ಮಹಾ ಅನ್ಯಾಯದ ಮತ್ತು ಗೊಂದಲದ ಮಾತಲ್ಲವೇ ಇದು ?

## (ಇತರ ಮತಸ್ಥರನ್ನು 'ಕಾಫಿರ', ಎನ್ನುವುದು ಸರಿಯಲ್ಲ)

ಮತ್ತು ಯಾವ ಜನರು ಮುಸಲ್ಮಾನೀ ಮತವನ್ನು ಅಂಗೀಕರಿಸುವುದಿಲ್ಲವೋ, ಅವರನ್ನು ಮಾತ್ರ 'ಕಾಫಿರರು', ಎನ್ನುವುದು ಏಕಪಕ್ಷೀಯ ತೀರ್ಮಾನವಲ್ಲವೇನು?

ಪರಮೇಶ್ವರನೇ ಅವರ ಅಂತಃಕರಣದ ಮತ್ತು ಕಿವಿಗಳ ಮೇಲೆ ಮುದ್ರೆ ಯನ್ನೊತ್ತಿದ್ದರೆ, ಮತ್ತು ಅದೇ ಕಾರಣದಿಂದ, ಅವರು ಪಾಪ ಮಾಡುತ್ತಾರೆ ಯಾದರೆ, ಅವರ ದೋಷವು ಸ್ವಲ್ಪವೂ ಇಲ್ಲ ! ಈ ದೋಷ ಖುದಾನದೇ ಆಗಿದೆ! ಮತ್ತೆ, ಅವರಿಗೆ ಸುಖ-ದುಃಖಗಳು ಅಥವಾ ಪಾಪ-ಪುಣ್ಯಗಳು ತಗುಲಲಾರವು. ಇನ್ನು ಅವರಿಗೆ ಶಿಕ್ಷೆ-ದೀಕ್ಷೆಗಳನ್ನು ಕೊಡುತ್ತಾನೇತಕ್ಕೆ? ಏಕೆಂದರೆ, ಅವರು ಪಾಪವನ್ನು ಅಥವಾ ಪುಣ್ಯವನ್ನು ಸ್ವಾತಂತ್ರ್ಯದಿಂದ ಮಾಡಲಿಲ್ಲ! [5]

## (ಅಲ್ಲಾಹನು ರೋಗವನ್ನು ಹೆಚ್ಚಿಸಿದನು)

**[6] ಅವರ ಹೃದಯಗಳಲ್ಲಿ ರೋಗವಿದೆ. ಅಲ್ಲಾಹನು ಅವರ ರೋಗವನ್ನು ಹೆಚ್ಚಿಸಿಬಿಟ್ಟನು.**

[ಕುರಾನ್:-ಮಂ. 1; ಸಿ. 1; ಸೂ. 2; ಆ. 10]

### (ಅಪರಾಧವಿಲ್ಲದೇ ರೋಗ ಹೆಚ್ಚಿಸುವುದು ಅನ್ಯಾಯ)

ಸಮೀಕ್ಷಕ:—ಅಲ್ಲಾ ! ಅಪರಾಧವಿಲ್ಲದೇ ಖುದಾ ಅವರ ರೋಗವನ್ನು ಹೆಚ್ಚಿಸಿದನು! ದಯೆ ಬಾರಲಿಲ್ಲ? ಆ ಬಡಪಾಯಿಗಳಿಗೆ ಬಹಳ ದುಃಖವಾಗಿರಬಹುದು! ಇದು ಶೈತಾನನನ್ನೂ ಮೀರಿಸುವ ಶೈತಾನತನದ ಕೆಲಸವಲ್ಲವೇನು? ಯಾವನಾದರೂ ಒಬ್ಬನ ಮನಸ್ಸಿನ ಮೇಲೆ ಮುದ್ರೆಯೊತ್ತುವುದು. ಯಾವನೋ ಒಬ್ಬನ ರೋಗವನ್ನು ಹೆಚ್ಚಿಸುವುದು ಖುದಾನ ಕೆಲಸವಾಗಿರಲಾರದು! ಏಕೆಂದರೆ, ರೋಗ ಹೆಚ್ಚುವುದು ತನ್ನ ಪಾಪಗಳಿಂದ [ಆಗುತ್ತದೆ]. [6]

### (ಪೃಥಿವೀ ಹಾಸಿಗೆ; ಆಕಾಶ ಚಾವಣಿ)

**[7] ಯಾವನು ನಿಮ್ಮ ಸಲುವಾಗಿ ಪೃಥಿವಿಯೆಂಬ ಹಾಸಿಗೆಯನ್ನೂ ಮತ್ತು ಆಕಾಶದ ಚಾವಣಿಯನ್ನೂ ನಿರ್ಮಿಸಿದನೋ.**

[ಕುರಾನ್:–ಮಂ. 1; ಸಿ. 1; ಸೂ. 2; ಆ. 22]

### (ಆಕಾಶವನ್ನು ಚಾವಣಿ, ಎನ್ನುವುದು ಅವಿದ್ಯೆಯ ಮಾತು)

ಸಮೀಕ್ಷಕ: ಅಲ್ಲಾ! ಆಕಾಶ ಯಾವನಿಗಾದರೂ ಚಾವಣಿಯಾಗಬಲ್ಲದೇನು ? ಇದು ಅವಿದ್ಯೆಯ ಮಾತಾಗಿದೆ! ಆಕಾಶವನ್ನು ಚಾವಣಿಗೆ ಸಮಾನವೆಂದು ಅಂಗೀಕರಿಸುವುದು ನಗೆಯಾಟದ ಮಾತು! ಯಾವುದಾದರೂ ಪ್ರಕಾರದ ಪೃಥಿವಿಯನ್ನು ಆಕಾಶವೆಂದು ಗ್ರಹಿಸುತ್ತಾರೆಯಾದರೆ, ಅದು ಅವರ ಮನೆಯ ಮಾತು ಮಾತ್ರ! [7]

### (ಅದರಂತಹ ಸೂರತನ್ನು ತನ್ನಿರಿ)

**[8] ನಾವು ಯಾವುದನ್ನು ನಮ್ಮ ಪೈಗಂಬರನ ಮೇಲೆ ಇಳಿಸಿದ್ದೇವೋ, ಆ ವಸ್ತುವಿನ ಬಗೆಗೆ ನೀವು ಸಂದೇಹದಲ್ಲಿರುವಿರಾದರೆ, ಅದರಂತಹ ಒಂದು 'ಸೂರತ'ನ್ನು ತೆಗೆದುಕೊಂಡು ಬನ್ನಿರಿ ! ಮತ್ತು ಅಲ್ಲಾಹನ ಹೊರತು ನೀವು ಸತ್ಯವಂತರಾಗಿರುವಿರಾದರೆ, ನಿಮ್ಮ ಸಾಕ್ಷಿಗಳನ್ನು ಕರೆಯಿರಿ!**

**ಮತ್ತು ನೀವು [ಹಾಗೆ ಮಾಡುವುದಿಲ್ಲವಾದರೆ]; ಎಂದಿಗೂ ಮಾಡುವುದಿಲ್ಲ; ಯಾವುದರ ಕಾಷ್ಠ ಮನುಷ್ಯನೋ, ಆ ಬೆಂಕಿಗೆ ಹೆದರಿರಿ ! ಮತ್ತು ಕಾಫಿರರ ಸಲುವಾಗಿ ಕಲ್ಲುಗಳು ಸಿದ್ಧಗೊಳಿಸಲ್ಪಟ್ಟಿವೆ.**

[ಕುರಾನ್:-ಮಂ. 1; ಸಿ. 1; ಸೂ. 2; ಆ. 23, 24]

### (ಕುರಾನಿನಂತಹ ಸೂರತನ್ನು ರಚಿಸುವುದು ಶಕ್ಯ)

ಸಮೀಕ್ಷಕ:—ಭಲೇ! ಅದರಂತಹ ಯಾವ ಸೂರತವೂ ರಚಿಸಲಾಗದು, ಎನ್ನುವುದು ಏನು ಮಹಾ ವಿಷಯ?

ಅಕ್ಬರ್ ಬಾದಶಾಹನ ಕಾಲದಲ್ಲಿ ಮೌಲವೀ ಫೈಜೀ [ಎಂಬುವನು] ಬಿಂದುವೇ ಇಲ್ಲದ ಕುರಾನನ್ನು ನಿರ್ಮಿಸಿಬಿಟ್ಟಿರಲಿಲ್ಲವೇನು ?

ಅದು ಯಾವ ನರಕದ ಬೆಂಕಿ? ಈ* ಬೆಂಕಿಗೆ ಹೆದರಬಾರದೇನು ? ಯಾವುದು [ಅದರಲ್ಲಿ] ಬಿದ್ದರೂ, ಅದೆಲ್ಲವೂ ಇದಕ್ಕೂ ಕೂಡ, ಕಾಷ್ಠವೇ!

ಹೇಗೆ, ಕುರಾನಿನಲ್ಲಿ ಕಾಫಿರರ ಸಲುವಾಗಿ ಕಲ್ಲುಗಳು ಸಿದ್ಧಪಡಿಸಲ್ಪಟ್ಟಿವೆ, ಎಂದು ಬರೆದಿದೆಯೋ, ಹಾಗೆ, ಪುರಾಣಗಳಲ್ಲಿ ಮ್ಲೇಚ್ಛರಿಗಾಗಿ ಘೋರವಾದ ನರಕವಿದೆ, ಎಂದು ಬರೆದಿದೆ! ಈಗ ಹೇಳಿರಿ! ಯಾವನ ಮಾತು ಸತ್ಯವೆಂದು ಒಪ್ಪಲ್ಪಡಬೇಕು?

ತಮ್ಮ ತಮ್ಮ ವಚನದಿಂದ, ಇಬ್ಬರೂ ಸ್ವರ್ಗಗಾಮಿಗಳು; ಮತ್ತು ಅನ್ಯರ ಮತದಿಂದ ಇಬ್ಬರೂ ನರಕಗಾಮಿಗಳಾಗುತ್ತಾರೆ! ಆದುದರಿಂದ, ಇವರೆಲ್ಲರ ಜಗಳವೂ ಸುಳ್ಳಾಗಿದೆ!

ಆದರೆ, ಎಲ್ಲ ಮತಗಳಲ್ಲಿಯೂ ಯಾರು ಧಾರ್ಮಿಕರಾಗಿದ್ದಾರೋ, ಅವರು ಸುಖವನ್ನೂ, ಮತ್ತು ಯಾರು ಪಾಪಿಗಳಾಗಿದ್ದಾರೋ, ಅವರು ದುಃಖವನ್ನೂ ಹೊಂದುವರು! [8]

## (ಮುಸಲ್ಮಾನರ ಸ್ವರ್ಗ)

[9] ಮತ್ತು ನಂಬಿಕೆಯನ್ನಿಡುವಂತಹ ಜನರಿಗೆ ಆನಂದದ ಸಂದೇಶವನ್ನು ಕೊಡು. ಮತ್ತು ಉತ್ತಮ ಕರ್ಮ ಮಾಡಿದವರಿಗೆ, ಯಾವುದರ ಕೆಳಗೆ ನಾಲೆಗಳು ಹರಿಯುತ್ತವೋ, ಅಂತಹ ಸ್ವರ್ಗಗಳಿವೆ. ಯಾವಾಗ ಅದರೊಳಗಿನಿಂದ ಒಣಹಣ್ಣುಗಳ ಭೋಜನ ಕೊಡಲ್ಪಡುವುದೋ, ಆಗ—'ಯಾವುವು ನಮಗೆ ಇದಕ್ಕಿಂತ ಮೊದಲು ಕೊಡಲ್ಪಟ್ಟಿದ್ದುವೋ, ಆ ವಸ್ತುಗಳು ಇವು', ಎನ್ನುವರು ! ಮತ್ತು ಅವರಿಗಾಗಿ ಪವಿತ್ರರಾದ ನಾರಿಯರು ಸದಾ ಅಲ್ಲಿ ಇರುವವರಾಗಿದ್ದಾರೆ.

[ಕುರಾನ್:-ಮಂ. 1; ಸಿ. 1; ಸೂ. 2; ಆ. 25]

## (ಸ್ವರ್ಗದಲ್ಲಿ ಸ್ತ್ರೀಯರ ಕಾಲಯಾಪನೆ ಹೇಗೆ?)

ಸಮೀಕ್ಷಕ:—ಭಲೇ! ಕುರಾನಿನ ಈ ಸ್ವರ್ಗವು ಜಗತ್ತಿಗಿಂತ ಯಾವ ಉತ್ತಮ ವಿಷಯದಿಂದ ಯುಕ್ತವಾಗಿದೆ? ಏಕೆಂದರೆ, ಯಾವ ಪದಾರ್ಥಗಳು ಜಗತ್ತಿನಲ್ಲಿವೆಯೋ, ಅವೇ ಮುಸಲ್ಮಾನರ ಸ್ವರ್ಗದಲ್ಲೂ ಇವೆ! ಮತ್ತು ಇಲ್ಲಿ ಹೇಗೆ ಪುರುಷರು ಹುಟ್ಟುತ್ತಾರೋ-ಸಾಯುತ್ತಾರೋ, ಮತ್ತು ಬರುತ್ತಾರೋ-ಹೋಗುತ್ತಾರೋ, ಅದೇ ರೀತಿ ಸ್ವರ್ಗದಲ್ಲಿಲ್ಲ, ಎನ್ನುವುದಿಷ್ಟೇ ವಿಶೇಷವಾಗಿದೆ !

---

*ಎಂದರೆ, ಪೃಥಿವಿಯ — ಯು.ಮೀ.

ಆದರೆ, ಇಲ್ಲಿನ ಸ್ತ್ರೀಯರು ಸದಾ ಇರುವುದಿಲ್ಲ. ಮತ್ತು ಅಲ್ಲಿ, ಹೆಂಡಿರು, ಎಂದರೆ ಉತ್ತಮ ಸ್ತ್ರೀಯರು ಸದಾ ಕಾಲವೂ ಇರುತ್ತಾರೆ! ಅಂದರೆ, ಎಂದಿನವರೆಗೆ ಕಯಾಮತ್ತಿನ ರಾತ್ರಿ ಬಾರದೋ, ಆವರೆಗೆ ಆ ಬಡಪಾಯಿನಿಯರ ದಿನಗಳು ಹೇಗೆ ಕಳೆಯುತ್ತಿರಬಹುದು ? ಅಹುದು! ಖುದಾನ 'ಕೃಪೆ' ಅವರ ಮೇಲೆ ಆಗುತ್ತಿರಬಹುದು! ಮತ್ತು ಖುದಾನ ಆಶ್ರಯದಲ್ಲಿಯೇ ಕಾಲ ಕಳೆಯುತ್ತಿರಬಹುದಾದರೆ, ಸರಿ!

## (ಸ್ವರ್ಗದಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆ ; ಪುರುಷರಿಗಲ್ಲ)

ಏಕೆಂದರೆ, ಮುಸಲ್ಮಾನರ ಈ ಸ್ವರ್ಗವು ಗೋಕುಲೀಯ ಗೋಸಾಯಿಗಳ ಗೋಲೋಕದ ಮತ್ತು ಮಂದಿರದ ಹಾಗೆ ಕಾಣಿಸುತ್ತದೆ! ಏಕೆಂದರೆ, **ಅಲ್ಲಿ ಸ್ತ್ರೀಯರಿಗೆ ಮಾನ್ಯತೆ ಬಹಳವಾಗಿದೆ; ಪುರುಷರಿಗಿಲ್ಲ!** ಹಾಗೆಯೇ ಖುದಾನ ಮನೆಯಲ್ಲಿ ಸ್ತ್ರೀಯರಿಗೆ ಮಾನ್ಯತೆ ಹೆಚ್ಚು. ಮತ್ತು ಅವರ ಮೇಲೆ ಖುದಾನ ಪ್ರೇಮವೂ ಕೂಡ, ಬಹಳವಾಗಿದೆ; ಆ ಪುರುಷರ ಮೇಲೆ ಇಲ್ಲ! ಏಕೆಂದರೆ, ಬೀಬಿಯರನ್ನು ಖುದಾ ಸದಾ ಸ್ವರ್ಗದಲ್ಲಿಟ್ಟಿದ್ದಾನೆ; ಮತ್ತು ಪುರುಷರನ್ನಲ್ಲ! ಆ ಬೀಬಿಯರು ಖುದಾನ ಇಚ್ಛೆಯಿಲ್ಲದೇ ಸ್ವರ್ಗದಲ್ಲಿ ಹೇಗೆ ಇರಬಲ್ಲರು ?

**ಒಂದು ವೇಳೆ, ಸಂಗತಿ ಹೀಗೆಯೇ ಇರುವುದಾದರೆ, ಖುದಾ ಸ್ತ್ರೀಯರಲ್ಲಿ ಸಿಕ್ಕಿಹಾಕಿಕೊಂಡಾನು !** [9]

## (ದೇವದೂತರಿಗೆ ಖುದಾ ಮೋಸ ಮಾಡುವುದು)

**[10] ಆದಮನಿಗೆ ಹೆಸರುಗಳನ್ನೆಲ್ಲಾ ಕಲಿಸಿದನು. ಮತ್ತೆ, ದೇವದೂತರ ಮುಂದೆ ಪ್ರಸ್ತುತಗೊಳಿಸಿ—"ನೀನು ಸತ್ಯವಂತನಾಗಿರುವೆಯಾದರೆ, ನನಗೆ ಅವರ ಹೆಸರುಗಳನ್ನು ಹೇಳು", ಎಂದನು.**

**"ಓ ಆದಮ್! ಅವರಿಗೆ ಅವರ ಹೆಸರುಗಳನ್ನು ಹೇಳಿಬಿಡು.", ಎಂದನು. ಆಗ ಅವನು ಹೇಳಿಬಿಟ್ಟನು!**

**[ಆಗ ಖುದಾ ದೇವದೂತರನ್ನು]—"ನಾನು ನಿಮಗೆ ನಿಶ್ಚಯವಾಗಿಯೂ—'ನಾನು ಪೃಥಿವಿಯ ಮತ್ತು ಆಕಾಶದ ಗುಪ್ತ ವಸ್ತುಗಳನ್ನೂ ಮತ್ತು ಪ್ರಕಟವಾದ, ಹಾಗೂ ಗುಪ್ತವಾದ ಕರ್ಮಗಳನ್ನೂ ತಿಳಿದಿರುತ್ತೇನೆ', ಎಂದು ಹೇಳಿರಲಿಲ್ಲವೋ?", ಎಂದು ಕೇಳಿದನು.**

[ಕುರಾನ್:-ಮಂ. 1; ಸಿ. 1; ಸೂ. 2; ಆ. 31, 33]

## (ಮೋಸ ಮಾಡುವುದು ಈಶ್ವರನ ಕೆಲಸವಲ್ಲ)

**ಸಮೀಕ್ಷಕ:**— ಅಲ್ಲಾ! ಹೀಗೆ ದೇವದೂತರಿಗೆ ಮೋಸ ಮಾಡಿ, ತನ್ನ ಹಿರಿಮೆಯನ್ನು ತೋಡಿಕೊಳ್ಳುವುದು ಖುದಾನ ಕೆಲಸವಾಗಬಲ್ಲದೇನು ? ಇದಂತೂ ಒಂದು

ವಂಚನ ಮಾತಾಗಿದೆ ! ಇದನ್ನು ಯಾವ ವಿದ್ವಾಂಸನೂ ಒಪ್ಪಿಕೊಳ್ಳಲಾರನು. ಮತ್ತು ಹೀಗೆ ಅಭಿಮಾನವನ್ನೂ ಪಡುವುದಿಲ್ಲ. ಇಂತಹ ಮಾತುಗಳಿಂದಲೇ ಖುದಾ ತನ್ನ ಸಿದ್ಧಿಯನ್ನು ಬೇರೂರಿಸಲು ಬಯಸುತ್ತಾನೇನು?

ಅಹುದು! ಕಾಡುಜನರಲ್ಲಿ ಯಾವನು ಎಂತಹ ಪಾಖಂಡವನ್ನು ಪ್ರಚಲಿತ ಗೊಳಿಸಿದರೂ, ಪ್ರಚಲಿತವಾಗಬಲ್ಲದು! ಸಭ್ಯಜನರಲ್ಲಿ ಅಲ್ಲ! [10]

## (ಶೈತಾನನು ಖುದಾನ ಮಾತನ್ನು ಒಪ್ಪಲಿಲ್ಲ)

[11] ಯಾವಾಗ ನಾವು ದೇವದೂತರಿಗೆ—"ಬಾಬಾ ಆದಮನಿಗೆ ದಂಡವತ್ ಪ್ರಣಾಮ ಮಾಡಿರಿ!", ಎಂದು ಹೇಳಿದವೋ, ಆಗ ನೋಡಿದಿರಾ? ಎಲ್ಲರೂ ದಂಡವತ್ ಮಾಡಿದರು! ಆದರೆ. ಶೈತಾನನು ಒಪ್ಪಲಿಲ್ಲ. ಮತ್ತು ಅಭಿಮಾನಪಟ್ಟನು. ಏಕೆಂದರೆ, ಅವನೂ ಒಬ್ಬ 'ಕಾಫಿರ'ನಾಗಿದ್ದನು.

[ಕುರಾನ್:-ಮಂ. 1; ಸಿ. 1; ಸೂ. 2; ಆ. 84]

## (ಖುದಾ ಶೈತಾನನಿಗೆ ಏನೂ ಶಿಕ್ಷೆ ಕೊಡಲಾಗಲಿಲ್ಲ)

ಸಮೀಕ್ಷಕ:—ಇದರಿಂದ, ಖುದಾ ಸರ್ವಜ್ಞನಲ್ಲ ಎಂದರೆ, ಭೂತ. ಭವಿಷ್ಯತ್ ಮತ್ತು ವರ್ತಮಾನದ ಪೂರ್ಣ ವಿಷಯಗಳನ್ನು ತಿಳಿದುಕೊಂಡಿಲ್ಲ. [ಎಂದು ಗೊತ್ತಾಗುತ್ತದೆ]. ತಿಳಿದಿದ್ದರೆ, ಶೈತಾನನನ್ನು ಸೃಜಿಸಿದನಾದರೂ ಏತಕ್ಕೆ?

ಮತ್ತು ಖುದಾನಲ್ಲಿ ತೇಜಸ್ಸು ಸ್ವಲ್ಪವೂ ಕೂಡ, ಇರಲಿಲ್ಲ. ಏಕೆಂದರೆ, ಶೈತಾನನು ಖುದಾನ ಆಜ್ಞೆಯನ್ನೇ ಪಾಲಿಸಲಿಲ್ಲ! ಮತ್ತು ಖುದಾ ಅವನಿಗೆ ಏನನ್ನು ಮಾಡಲೂ ಶಕ್ತನಾಗಲಿಲ್ಲ!

## (ಕೋಟ್ಯಂತರ 'ಕಾಫಿರ'ರ ಮುಂದೆ ಮುಸಲ್ಮಾನರದು ಏನು ನಡೆದೀತು?)

ಮತ್ತು ನೋಡಿರಿ! ಒಬ್ಬ ಶೈತಾನ ಕಾಫಿರನು ಖುದಾನ ಮದವನ್ನೂ ಇಳಿಸಿ ಬಿಟ್ಟನು! ಎಂದ ಮೇಲೆ, ಮುಸಲ್ಮಾನರ ಕಥನಾನುಸಾರವಾಗಿ, [ಅವನಿಂದ] ಬೇರೆ ಯಾಗಿ ಕೋಟ್ಯಂತರ ಕಾಫಿರರು ಎಲ್ಲಿದ್ದಾರೋ, ಅಲ್ಲಿ ಮುಸಲ್ಮಾನರ ಖುದಾನ, ಮತ್ತು ಮುಸಲ್ಮಾನರ [ಗತ್ತು] ಏನು ನಡೆದೀತು?*

*ಸಂಘಟನರಹಿತರಾದ ಮತ್ತು ಪರಕೀಯರ ತೇಜೋವಧೆಗೀಡಾದ ಹಿಂದುಗಳನ್ನು ಹುರಿ ದುಂಬಿಸಲು ಮುಸಲ್ಮಾನರ ಕುರಾನಿನ ಆಧಾರವನ್ನು ತೆಗೆದುಕೊಂಡೇ ಮಹರ್ಷಿ ದಯಾನಂದರು ಎಂತಹ ತೇಜಸ್ವೀ ದೃಷ್ಟಾಂತವನ್ನು ಇಲ್ಲಿ ಕೊಟ್ಟಿದ್ದಾರೆಂಬುದನ್ನು ಗಮನಿಸಿರಿ! →

ಒಂದೊಂದು ಸಾರಿ, ಖುದಾ ಕೂಡ, ಯಾವನದಾದರೂ ರೋಗವನ್ನು ಹೆಚ್ಚಿಸಿಬಿಡುತ್ತಾನೆ! ಯಾವನನ್ನಾದರೂ ಪಥಭ್ರಷ್ಟನನ್ನಾಗಿ ಮಾಡಿಬಿಡುತ್ತಾನೆ! ಖುದಾ ಈ ವಿಷಯವನ್ನು ಶೈತಾನನಿಂದ ಕಲಿತಿರಬಹುದು! ಮತ್ತು ಶೈತಾನನು ಖುದಾನಿಂದ! ಏಕೆಂದರೆ, ಖುದಾನ ಹೊರತು, ಶೈತಾನನ 'ಗುರು' ಮತ್ತಾವನೂ ಆಗಲಾರನು! [11]

## (ಶೈತಾನನಿಂದ ಮಾರ್ಗಭ್ರಷ್ಟನಾಗಿ ಆದಮನು ಪೃಥಿವಿಗೆ ಬಂದನು)

[12] ನಾವು—"ಓ ಆದಮ್! ನೀನು ಮತ್ತು ನಿನ್ನ ಹೆಂಡತಿ ಸ್ವರ್ಗದಲ್ಲಿದ್ದು, ಆನಂದದಿಂದ, ಎಲ್ಲಿ ಬೇಕೋ, ಅಲ್ಲಿ ತಿನ್ನಿರಿ. ಆದರೆ, ಹೋಗಬೇಡಿರಿ ಆ ವೃಕ್ಷದ ಬಳಿಗೆ! ಪಾಪಿಗಳಾಗಿ ಹೋದೀರಿ!", ಎಂದೆವು.

ಶೈತಾನನು ಅವರನ್ನು ಚಂಚಲಗೊಳಿಸಿದನು. ಮತ್ತು ಅವರನ್ನು ಸ್ವರ್ಗದ ಆನಂದದಿಂದ ವಂಚಿಸಿದನು. ಆಗ ನಾವು—"ಇಳಿಯಿರಿ! ನಿಮ್ಮ ಮಧ್ಯೆ ಯಾರೋ ಪರಸ್ಪರ ಶತ್ರುಗಳಿದ್ದಾರೆ. ನಿಮ್ಮ ನೆಲೆ ಪೃಥಿವಿಯಾಗಿದೆ. ಮತ್ತು ಒಂದು ಅವಧಿಯ ವರೆಗೆ ಲಾಭವಿದೆ", ಎಂದೆವು.

ಆದಮನು ತನ್ನ ಸ್ವಾಮಿಯಿಂದ ಹಲವು ಮಾತುಗಳನ್ನು ಕಲಿತು, ಪೃಥಿವಿಗೆ ಬಂದು ಬಿಟ್ಟನು.

[ಕುರಾನ್:-ಮಂ. 1; ಸಿ. 1; ಸೂ. 2; ಆ. 85-87]

## (ಶೈತಾನನು ಆದಮನನ್ನು ಪಥಭ್ರಷ್ಟನನ್ನಾಗಿ ಮಾಡುವನೆಂದು ಖುದಾ ತಿಳಿದಿರಲಿಲ್ಲವೇನು?)

**ಸಮೀಕ್ಷಕ:**—ಈಗ ನೋಡಿರಿ, ಖುದಾನ ಅಲ್ಪಜ್ಞತ್ವವನ್ನು! ಈಗ ತಾನೇ ಸ್ವರ್ಗದಲ್ಲಿರುವಂತೆ ಆಶೀರ್ವಾದವಿತ್ತನು. ಮತ್ತು ಪುನಃ ಸ್ವಲ್ಪ ಹೊತ್ತಿನಲ್ಲಿ—"ಹೊರಡು!", ಎಂದನು, ಭವಿಷ್ಯತ್ತಿನ ಮಾತುಗಳನ್ನು ತಿಳಿದವನಾಗಿದ್ದಿದ್ದರೆ, ವರವನ್ನು ತಾನೇ ಏಕೆ ಕೊಡುತ್ತಿದ್ದನು?

ಮತ್ತು ಪಥಭ್ರಷ್ಟಗೊಳಿಸುವ ಶೈತಾನನಿಗೆ ಶಿಕ್ಷೆ ಕೊಡದಿರುವುದರಿಂದ, ಅಸಮರ್ಥನಾಗಿಯೂ ಕಾಣಿಸುತ್ತಾನೆ!

---

→ಸ್ವಾತಂತ್ರ್ಯಯೋಧರಾದ ಬಿಪಿನ್‌ಚಂದ್ರ ಪಾಲರು ವಿರಾಟ್ ಸಭೆಯೊಂದರಲ್ಲಿ ಮಾತನಾಡುತ್ತಾ—"ಬ್ರಿಟಿಷರಿಗೆ ಏಕೆ ಹೆದರುತ್ತೀರಿ? ನಮ್ಮ ಮುಂದೆ ಅವರೇನು? ನಲವತ್ತುಕೋಟಿ ಜನ ಭಾರತೀಯರು ಒಮ್ಮೆಲೇ ಬ್ರಿಟಿಷ್ ದ್ವೀಪಗಳ ಮೇಲೆ ಉಗುಳಲಾರಂಭಿಸಿದರೆ, ಆ ದ್ವೀಪಗಳು ಅಟ್ಲಾಂಟಿಕ್ ಸಾಗರದಲ್ಲಿ ಮುಳುಗಿಹೋಗುವುವು!", ಎಂದು ಹೇಳಿದ್ದರು.—ಸಂ.

ಮತ್ತು ಆ ವೃಕ್ಷವನ್ನು ಏತಕ್ಕಾಗಿ ಉತ್ಪನ್ನಮಾಡಿದ್ದನು? ತನಗಾಗಿಯೋ ? ಅಥವಾ ಅನ್ಯರಿಗಾಗಿಯೋ? ಬೇರೆಯವರಿಗಾಗಿ ಇದ್ದರೆ, ತಡೆದನೇತಕ್ಕೆ? ಆದಕಾರಣ, **ಇಂತಹ ಮಾತುಗಳು ಖುದಾನದಾಗಿರಲಾರವು! ಮತ್ತು ಅವನು ರಚಿಸಿದ ಪುಸ್ತಕದಲ್ಲಿ ಇರಲಾರವು !**

## (ಆದಮ್ ಸಾಹೇಬರು ಸ್ವರ್ಗದಿಂದ ಪೃಥಿವಿಗೆ ಹೇಗೆ ಬಂದರು?)

ಆದಮ್ ಸಾಹೇಬರು ಖುದಾನಿಂದ ಎಷ್ಟು ಮಾತುಗಳನ್ನು ಕಲಿತುಕೊಂಡು ಬಂದರು ? ಮತ್ತು ಯಾವಾಗ ಆದಮ್ ಸಾಹೇಬರು ಪೃಥಿವಿಯ ಮೇಲೆ ಬಂದರೋ, ಆಗ ಯಾವ ರೀತಿಯಿಂದ ಬಂದರು ?

ಆ ಸ್ವರ್ಗ ಪರ್ವತದ ಮೇಲಿದೆಯೋ, ಅಥವಾ ಆಕಾಶದ ಮೇಲೆಯೋ? ಅದರಿಂದ, ಹೇಗೆ ಇಳಿದು ಬಂದರು? ಪಕ್ಷಿಯಂತೆ ಹಾರಿ ಬಂದರೋ ? ಅಥವಾ ಮೇಲಿನಿಂದ ಕಲ್ಲಿನಂತೆ ಬಿದ್ದರೋ?

ಅಲ್ಲದೇ, ಆದಮ್ ಸಾಹೇಬರು ಮಣ್ಣಿನಿಂದ ನಿರ್ಮಿಸಲ್ಪಟ್ಟರು. ಎಂದಾಗ, ಇವರ ಸ್ವರ್ಗದಲ್ಲಿಯೂ ಮಣ್ಣು ಇರಬೇಕು, ಎಂದು ವಿದಿತವಾಗುತ್ತದಲ್ಲವೇ? ಮತ್ತು ಎಷ್ಟು ಜನ ಅಲ್ಲಿ ಇನ್ನೂ ಇದ್ದಾರೋ, ಆ ದೇವದೂತರು ಮೊದಲಾದವರೂ ಕೂಡ, ಮಣ್ಣಿನಿಂದಲೇ ಆಗಿದ್ದಾರು! ಏಕೆಂದರೆ. **ಮಣ್ಣಿನ ಶರೀರವಿಲ್ಲದೇ, ಇಂದ್ರಿಯಭೋಗ ಆಗಲಾರದು !**

ಪಾರ್ಥಿವ ಶರೀರವಿರುವಾಗ, ಮೃತ್ಯುವೂ ಅವಶ್ಯವಾಗಿ ಇರಬೇಕು! ಮೃತ್ಯು ಆಗುವುದಾದರೆ, ಅವರು ಅಲ್ಲಿಂದ ಎಲ್ಲಿಗೆ ಹೋಗುತ್ತಾರೆ ? ಮತ್ತು ಮೃತ್ಯು ಆಗುವುದಿಲ್ಲವಾದರೆ, ಅವರ ಜನ್ಮವೂ ಕೂಡ, ಆಗಲಿಲ್ಲ. **ಜನ್ಮವಿರುವಾಗ, ಮೃತ್ಯುವೂ ಅವಶ್ಯವಾಗಿ ಇರುತ್ತದೆ!**

ಹೀಗಿರುವುದಾದರೆ, ಬೀಬಿಯರು ಸರ್ವದಾ ಸ್ವರ್ಗದಲ್ಲಿರುತ್ತಾರೆ, ಎಂದು ಕುರಾನ್‌ನಲ್ಲಿ ಬರೆದಿದೆ. ಅದು ಸುಳ್ಳಾಗಿ ಹೋಗುವುದು! ಏಕೆಂದರೆ, ಅವರ ಮೃತ್ಯುವೂ ಅವಶ್ಯವಾಗಿ ಆಗುವುದು. ಹೀಗಿರುವುದಾದರೆ, ಸ್ವರ್ಗಕ್ಕೆ ಹೋಗುವವರ ಮೃತ್ಯುವೂ ಅವಶ್ಯವಾಗಿ ಆಗುವುದು! [12]

## (ಕಯಾಮತ್ತಿನ ದಿನಕ್ಕೆ ಅಂಜಿರಿ)

[13] ಯಾವ ದಿವಸ ಯಾವ ಜೀವನೂ ಯಾವ ಜೀವನ ಮೇಲೆಯೂ ಭರವಸೆಯನ್ನಿಡನೋ, ಅವನ ಪರವಾಗಿ ನುಡಿದ ಶಿಫಾರಸಿನ ಮಾತೂ ಸ್ವೀಕರಿಸಲ್ಪಡುವುದಿಲ್ಲವೋ, ಮತ್ತು ಸಹಾಯವನ್ನೂ ಪಡೆದುಕೊಳ್ಳರೋ, ಆ ದಿವಸಕ್ಕೆ ಅಂಜಿರಿ!

[ಕುರಾನ್:–ಮಂ. 1; ಸಿ. 1; ಸೂ. 2; ಆ. 48]

## (ಕೆಟ್ಟ ಕೆಲಸ ಮಾಡುವುದಕ್ಕೆ ಎಲ್ಲ ದಿನವೂ ಅಂಜಬೇಕು)

**ಸಮೀಕ್ಷಕ:**—ಈಗಿನ ದಿನಗಳಲ್ಲಿ ಹೆದರಬಾರದೇನು? **ಕೇಡನ್ನು ಮಾಡಲು ಎಲ್ಲ ದಿನಗಳಲ್ಲಿಯೂ ಹೆದರಬೇಕು!** ಯಾವಾಗ ಶಿಫಾರಿಸು ಅಂಗೀಕರಿಸಲ್ಪಡುವುದಿಲ್ಲವೋ, ಆಗ ಮತ್ತೆ. ಪೈಗಂಬರರ ಸಾಕ್ಷ್ಯದಿಂದ, ಶಿಫಾರಿಸಿನಿಂದ ಖುದಾ ಸ್ವರ್ಗವನ್ನು ಕೊಡುವನು, ಎಂಬ ಮಾತು ಹೇಗೆ ಸತ್ಯವಾಗಬಲ್ಲದು? ಖುದಾ ಸ್ವರ್ಗದವರಿಗೆ ಮಾತ್ರವೇ ಸಹಾಯಕನೇನು? ನರಕದವರಿಗೆ ಅಲ್ಲವೇನು? **ಹೀಗಿರುವುದಾದರೆ, ಖುದಾ ಪಕ್ಷಪಾತಿಯಾಗಿದ್ದಾನೆ!** [13]

## (ಮೂಸಾಗೆ ಪುಸ್ತಕ ಮತ್ತು ಚಮತ್ಕಾರ ಕೊಡುವುದು)

**[14] ನಾವು ಮೂಸಾಗೆ ಪುಸ್ತಕವನ್ನೂ ಮತ್ತು ಚಮತ್ಕಾರವನ್ನೂ ಕೊಟ್ಟೆವು.**

[ಕುರಾನ್:-ಮಂ. 1; ಸಿ. 1; ಸೂ. 2; ಆ.58]

**ಸಮೀಕ್ಷಕ:—ಮೂಸಾಗೆ ಪುಸ್ತಕಗಳನ್ನು ಕೊಟ್ಟನಾದರೆ, ಕುರಾನಿನ ಇರುವಿಕೆ ನಿರರ್ಥಕವಾಗಿದೆ !** ಮತ್ತು ಅವನಿಗೆ ಆಶ್ಚರ್ಯಕರ ಶಕ್ತಿಯನ್ನು ಕೊಟ್ಟನು, ಎಂದು ಬೈಬಲ್ ಮತ್ತು ಕುರಾನ್‌ನಲ್ಲಿಯೂ ಬರೆದಿದೆ. ಆದರೆ, ಈ ಮಾತು ಒಪ್ಪಲು ಯೋಗ್ಯವಾದುದಲ್ಲ. ಏಕೆಂದರೆ, ಹಾಗೆ ಆಗಿದ್ದ ಪಕ್ಷದಲ್ಲಿ, ಈಗಲೂ ಆಗುತ್ತಿತ್ತು! ಈಗ ಆಗುವುದಿಲ್ಲವಾದುದರಿಂದ, ಮೊದಲೂ ಕೂಡ, ಆಗಿರಲಿಲ್ಲ!

## (ಚಮತ್ಕಾರ-ಶಕ್ತಿಯನ್ನು ಖುದಾ ಈಗೇಕೆ ಕೊಡುವುದಿಲ್ಲ?)

**ಸ್ವಾರ್ಥೀ ಜನರು ಈ ದಿನಗಳಲ್ಲಿಯೂ ಕೂಡ, ಅವಿದ್ವಾಂಸರ ಮುಂದೆ ವಿದ್ವಾಂಸರಾಗಿ ತೋರಿಸಿಕೊಳ್ಳುವಂತೆ, ಆ ಕಾಲದಲ್ಲಿಯೂ ಕಪಟಗಳನ್ನು ಮಾಡಿರಬಹುದು !** ಏಕೆಂದರೆ, ಖುದಾ ಮತ್ತು ಅವನ ಸೇವಕರು ಈಗಲೂ ವಿದ್ಯಮಾನರಾಗಿದ್ದಾರೆ.

ಮತ್ತೆ **ಈಗ** ಖುದಾ **ಆಶ್ಚರ್ಯಶಕ್ತಿಯನ್ನೇಕೆ ಕೊಡುವುದಿಲ್ಲ ?** ಮತ್ತು [ಆಶ್ಚರ್ಯ ಕರ್ಮಗಳನ್ನು] ಮಾಡಲಾರರೇಕೆ ?

ಮೂಸಾಗೆ ಪುಸ್ತಕವನ್ನು ಕೊಟ್ಟಿದ್ದನಾದರೆ, ಮತ್ತೆ ಕುರಾನನ್ನು ಕೊಡುವುದು ಆವಶ್ಯಕವಾಗಿತ್ತೇನು? ಏಕೆಂದರೆ, ಒಳಿತುಗಳನ್ನು ಮಾಡಬೇಕು; ಕೆಡುಕುಗಳನ್ನು ಮಾಡಬಾರದು, ಎಂಬ ಉಪದೇಶಗಳು ಎಲ್ಲೆಡೆಯೂ ಒಂದೇ ಬಗೆಯದಿರುವುದಾದರೆ. ಪುನಃ ಬೇರೆ ಬೇರೆ ಪುಸ್ತಕಗಳನ್ನು ರಚಿಸುವುದರಿಂದ, ಪುನರುಕ್ತ ದೋಷ ಉಂಟಾಗುತ್ತದೆ !

ಮೂಸಾ ಮಹಾಶಯ ಮೊದಲಾದವರಿಗೆ ಕೊಟ್ಟ ಪುಸ್ತಕದಲ್ಲಿ ಖುದಾ [ಏನನ್ನಾದರೂ] ಮರೆತುಬಿಟ್ಟಿದ್ದನೇನು ? [14]

## (ಪಾಪ ಕ್ಷಮಿಸಲ್ಪಡುವುದು)

**[15] ಮತ್ತೆ ಹೇಳಿರಿ—'ನಾವು ಕ್ಷಮೆ ಬೇಡುತ್ತೇವೆ', ಎಂದು. ನಾವು ನಿಮ್ಮ ಪಾಪಗಳನ್ನು, ಮತ್ತು ಹೆಚ್ಚು ಒಳಿತು ಮಾಡುವವರನ್ನು ಕ್ಷಮಿಸುತ್ತೇವೆ.**

[ಕುರಾನ್:–ಮಂ. 1; ಸಿ. 1; ಸೂ. 2; ಆ. 58]

## (ಪಾಪದ ಕ್ಷಮೆಯಿಂದ ಪಾಪದ ವೃದ್ಧಿಯಾಗುತ್ತದೆ)

**ಸಮೀಕ್ಷಕ:**—ಅಲ್ಲಾ! ಖುದಾನ ಈ ಉಪದೇಶವು ಎಲ್ಲರನ್ನೂ ಪಾಪಿಗಳನ್ನಾಗಿ, ಮಾಡುವುದೋ, ಅಥವಾ ಇಲ್ಲವೋ? ಏಕೆಂದರೆ, **ಪಾಪದ ಕ್ಷಮೆಯಾಗುವ ಆಶ್ರಯ ಮನುಷ್ಯರಿಗೆ ಸಿಕ್ಕಿಬಿಟ್ಟರೆ, ಪಾಪ ಮಾಡಲು ಯಾವನೂ ಹೆದರುವುದಿಲ್ಲ!** ಆದ್ದರಿಂದ, ಹೀಗೆ ಹೇಳುವವನು ಈಶ್ವರನೂ ; ಮತ್ತು, ಈ ಪುಸ್ತಕವು ಈಶ್ವರಕೃತವೂ ಆಗಲಾರದು !

ಏಕೆಂದರೆ, ಅವನು ನ್ಯಾಯಕಾರಿಯಾಗಿದ್ದಾನೆ! ಅನ್ಯಾಯವನ್ನೆಂದಿಗೂ ಮಾಡುವುದಿಲ್ಲ. ಮತ್ತು ಪಾಪವನ್ನು ಕ್ಷಮಿಸುವುದರಿಂದ, ಅನ್ಯಾಯಕಾರಿಯಾಗಿ ಬಿಡುತ್ತಾನೆ. ಆದರೆ, ಅಪರಾಧಕ್ಕನುಸಾರವಾಗಿ ಶಿಕ್ಷೆ ಕೊಡುವುದರಿಂದಲೇ ನ್ಯಾಯಕಾರಿಯಾಗಬಲ್ಲನು ! [15]

## (ಕಲ್ಲಿನ ಮೇಲೆ ಕೋಲನ್ನು ಹೊಡೆದಾಗ 12 ಚಿಲುಮೆಗಳು ಎದ್ದವು)

**[16] ಯಾವಾಗ ಮೂಸಾ ತನ್ನ ಜನಾಂಗಕ್ಕಾಗಿ ನೀರನ್ನು ಕೇಳಿದನೋ, ಆಗ ನಾವು—'ನಿನ್ನ ಕೋಲನ್ನು ಕಲ್ಲಿನ ಮೇಲೆ ಹೊಡೆ', ಎಂದು ಹೇಳಿದೆವು. ಅದರಲ್ಲಿಂದ ಹನ್ನೆರಡು ಚಿಲುಮೆಗಳು ಹರಿದು ಬಂದವು.**

[ಕುರಾನ್:–ಮಂ. 1; ಸಿ. 1; ಸೂ. 2; ಆ. 60]

## (ಕೋಲನ್ನು ಹೊಡೆಯುವುದರಿಂದ ಚಿಲುಮೆ ಏಳುವುದು ಸರ್ವಥಾ ಅಸಂಭವ)

**ಸಮೀಕ್ಷಕ:**—ಈಗ ನೋಡಿರಿ! ಈ ಅಸಂಭವ ಮಾತುಗಳ ಸಮಾನವಾಗಿ ಬೇರೆ ಯಾವನಾದರೂ ಹೇಳುವನೇನು? ಒಂದು ಕಲ್ಲಿನ ಬಂಡೆಯ ಮೇಲೆ ಕೋಲಿನಿಂದ ಹೊಡೆಯುವುದರಿಂದ ಹನ್ನೆರಡು ಚಿಲುಮೆಗಳು ಹೊರಡುವುದು ಸರ್ವಥಾ ಅಸಂಭವ. ಹೌದು! ಆ ಕಲ್ಲಿನಲ್ಲಿ ಒಳಗಿನಿಂದ ಟೊಳ್ಳುಮಾಡಿ, ಅದರಲ್ಲಿ ನೀರನ್ನು ತುಂಬಿ, ಹನ್ನೆರಡು ತೂತುಗಳನ್ನು ಮಾಡುವುದರಿಂದ, ಇದು ಸಂಭವವಾಗಬಹುದು! ಅನ್ಯಥಾ ಇಲ್ಲ. [16]

## (ನೀವು ಕಪಿಗಳಾಗಿಬಿಡಿರಿ)

[17] ನಾವು ಅವರಿಗೆ—"ನೀವು ನಿಂದಿತರಾದ ಕಪಿಗಳಾಗಿ ಹೋಗಿರಿ", ಎಂದು ಹೇಳಿದೆವು.

ಯಾರು ಅವರ ಮುಂದೆ ಮತ್ತು ಹಿಂದೆ ಇದ್ದರೋ, ಅವರಿಗೆ ಇದೊಂದು ಭಯವನ್ನು ಹುಟ್ಟಿಸಿದೆವು. ಮತ್ತು ನಂಬಿಕೆಯುಳ್ಳವರಿಗೆ ಶಿಕ್ಷಣವನ್ನಿತ್ತೆವು.

[ಕುರಾನ್:-ಮಂ. 1; ಸಿ. 1; ಸೂ. 2; ಆ. 65,66]

## (ಸುಳ್ಳು ಹೆದರಿಕೆ ತೋರಿಸುವುದು ಈಶ್ವರನ ಕೆಲಸವಲ್ಲ)

[ಸಮೀಕ್ಷಕ:—] ಖುದಾ ಕೇವಲ ಭಯವನ್ನು ಹುಟ್ಟಿಸುವುದಕ್ಕಾಗಿ ನಿಂದಿತ ಮಂಗಗಳಾಗುವ ಮಾತನ್ನು ಹೇಳಿದ್ದನಾದರೆ, ಅವನ ಹೇಳಿಕೆ ಸುಳ್ಳಾಯಿತು! ಅಥವಾ ಛಲವನ್ನು ಮಾಡಿದನು! ಇಂತಹ ಮಾತುಗಳನ್ನಾಡುವವನು ದೇವರೂ ಅಲ್ಲ! ಮತ್ತು ಇಂತಹ ಮಾತುಗಳನ್ನುಳ್ಳ ಪುಸ್ತಕ ಖುದಾ-ರಚಿಸಿದುದೂ ಆಗಿರಲಾರದು! [17]

## (ಖುದಾ ಹೆಣಗಳನ್ನು ಜೀವಿಸುವುದು)

[18] ಈ ರೀತಿ. ಖುದಾ ಶವಗಳನ್ನು ಸಜೀವಗೊಳಿಸುತ್ತಾನೆ. ಮತ್ತು ನಿಮಗೆ, ನೀವು ತಿಳಿದುಕೊಳ್ಳಲಿ, ಎಂದು ತನ್ನ ಸ್ಮೃತಿ-ಚಿಹ್ನೆಗಳನ್ನು ತೋರಿಸುತ್ತಾನೆ.

[ಕುರಾನ್:-ಮಂ. 1; ಸಿ. 1; ಸೂ. 2; ಆ. 78]

## (ಖುದಾ ಹೆಣಗಳನ್ನು ಈಗೇಕೆ ಸಜೀವಗೊಳಿಸುತ್ತಿಲ್ಲ?)

ಸಮೀಕ್ಷಕ:—ಖುದಾ ಶವಗಳನ್ನು ಸಜೀವಗೊಳಿಸುತ್ತಿದ್ದನೇನು? ಹಾಗಾದರೆ, ಈಗ ಏತಕ್ಕೆ ಸಜೀವಗೊಳಿಸುವುದಿಲ್ಲ?

ಕಯಾಮತ್ತಿನ ರಾತ್ರಿಯವರೆಗೆ ಗೋರಿಗಳಲ್ಲಿ ಬಿದ್ದಿರುವರೇನು? ಈ ದಿನಗಳಲ್ಲಿ 'ವಿಚಾರಾಧೀನಸ್ಥಿತಿ'ಯೋ?

ಈಶ್ವರನ ಸ್ಮೃತಿ-ಚಿಹ್ನೆಗಳು ಇಷ್ಟು ಮಾತ್ರವೇ ಏನು? ಪೃಥಿವೀ, ಸೂರ್ಯ, ಚಂದ್ರ, ಮೊದಲಾದುವು ಸ್ಮೃತಿ-ಚಿಹ್ನೆಗಳಲ್ಲವೇನು? ಜಗತ್ತಿನಲ್ಲಿ ಯಾವ ವಿಧ-ವಿಧದ ರಚನಾವಿಶೇಷಗಳು ಪ್ರತ್ಯಕ್ಷವಾಗಿ ಕಾಣಿಸುತ್ತಿವೆಯೋ, ಈ ಸ್ಮೃತಿ-ಚಿಹ್ನೆಗಳು ಕಡಿಮೆಯಾಗಿವೆ ಏನು? [18]

## (ಸ್ವರ್ಗದಲ್ಲಿ ಸದಾ ಇರುವುದು)

[19] ಅವರು ಸದಾ ಕಾಲಕ್ಕೂ ಸ್ವರ್ಗದಲ್ಲಿ, ಎಂದರೆ ವೈಕುಂಠದಲ್ಲಿ ವಾಸ ಮಾಡುವವರಾಗಿದ್ದಾರೆ.

[ಕುರಾನ್:-ಮಂ. 1; ಸಿ. 1; ಸೂ. 2; ಆ. 82]

## (ಸ್ವರ್ಗ-ನರಕ ಅನಂತ ಕಾಲದವರೆಗೆ ಆಗಲಾರದು)

**ಸಮೀಕ್ಷಕ:**—ಯಾವ ಜೀವನೂ ಅನಂತವಾದ ಪಾಪ-ಪುಣ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಆದುದರಿಂದ, **ಸರ್ವದಾ ಸ್ವರ್ಗದಲ್ಲಿ [ಅಥವಾ] ನರಕದಲ್ಲಿ ಇರಲಾರರು !** ಮತ್ತು ಖುದಾ ಹೀಗೆ ಮಾಡುವುದಾದರೆ, ಅವನು ಅನ್ಯಾಯಕಾರಿಯೂ, ಮತ್ತು ಅವಿದ್ವಾಂಸನೂ ಆಗಿ ಹೋಗುವನು!

## (ಎಲ್ಲರ ಪಾಪ-ಪುಣ್ಯ ಸಮಾನವಾಗಿರದ್ದರಿಂದ ಸಮಾನಫಲವೂ ಇಲ್ಲ?)

ಕಯಾಮತ್ತಿನ ರಾತ್ರಿ ನ್ಯಾಯ ತೀರ್ಮಾನವಾಗುವುದಾದರೆ, ಮಾನವರ ಪಾಪ-ಪುಣ್ಯಗಳು ಸಮವಾಗಿಯೇ ಇರಬೇಕಾದುದು ಉಚಿತವಾಗಿರುತ್ತದೆ. **ಅನಂತ ವಲ್ಲದುದರ ಫಲ ಅನಂತವಾಗಬಲ್ಲುದಾದರೂ ಹೇಗೆ?**

ಮತ್ತು, ಏಳೆಂಟು ಸಾವಿರ ವರ್ಷಗಳ ಈಚೆಗೇ ಸೃಷ್ಟಿ ಆಗಿದೆಯೆಂದು ಹೇಳುತ್ತಾರೆ. ಇದಕ್ಕೆ ಮೊದಲು ಖುದಾ ನಿಷ್ಕರ್ಮನಾಗಿ ಕುಳಿತಿದ್ದನೇನು? ಮತ್ತು ಕಯಾಮತ್ತಿನ ನಂತರವೂ ಕೂಡ, ನಿಷ್ಕರ್ಮನಾಗಿರುವನೇನು? ಈ ಮಾತುಗಳೆಲ್ಲವೂ ಬಾಲಕರದರಹಾಗೆ ಇವೆ! ಏಕೆಂದರೆ, ಪರಮೇಶ್ವರನ ಕಾರ್ಯಗಳು ಸರ್ವದಾ ಪ್ರಚಲನೆಯಲ್ಲಿರುತ್ತವೆ. ಮತ್ತು **ಯಾವನ ಪಾಪ-ಪುಣ್ಯಗಳು ಎಷ್ಟಿರುತ್ತವೋ, ಅಷ್ಟೇ ಫಲವನ್ನು ಕೊಡುತ್ತಾನೆ!** ಆದುದರಿಂದ, ಕುರಾನಿನ **ಈ ಮಾತು ಸತ್ಯವಲ್ಲ.** [19]

## (ಮುಸಲ್ಮಾನರು ಪರಸ್ಪರ ಕಾದಾಡಬಾರದು)

**[20] ನಾವು ನಿಮ್ಮಿಂದ—"ಪರಸ್ಪರರ ರಕ್ತವನ್ನು ಹರಿಸಬಾರದು ; ಮತ್ತು ಪರಸ್ಪರ ನಿಮ್ಮವನಾವನನ್ನೂ ಮನೆಯಿಂದ ಹೊರ ಹೊರಡಿಸಬಾರದು.", ಎಂದು ಪ್ರತಿಜ್ಞೆ ಮಾಡಿಸಿದೆವು. ಆಗ ಪ್ರತಿಜ್ಞೆಯನ್ನು ಮಾಡಿದಿರಿ ನೀವು! ಇದಕ್ಕೆ ನೀವೇ ಸಾಕ್ಷಿಗಳಾಗಿದ್ದೀರಿ!**

**ಆದರೂ [ಕೂಡ,] ಪರಸ್ಪರ ತಮ್ಮವರನ್ನೇ ಸಾಯಿಸುವ ಜನರು ನೀವಾಗಿದ್ದೀರಿ! ನಿಮ್ಮಲ್ಲಿಯೇ ಒಂದು ಗುಂಪಿನವರನ್ನು ಅವರ ಮನೆಗಳಿಂದ ಓಡಿಸಿ ಬಿಡುತ್ತೀರಿ*.**

[ಕುರಾನ್:-ಮಂ. 1; ಸಿ. 1; ಸೂ. 2; ಆ. 84, 85]

---

*ಈ ಆಯತ್ತು ಮುಹಮ್ಮದ್ ಸಾಹೇಬರ ಜೀವನದ ಘಟನೆಯ ಸಂಕೇತ ಮಾಡುತ್ತಿದೆ. ಮುಂದೆ ಈ ತರಹದ ಆಯತ್ತುಗಳನ್ನು ಎಲ್ಲರೂ ಗುರುತಿಸಬಹುದು. ಇವಕ್ಕೆ ಖುದಾನ ಪ್ರೇರಣೆ ಅನಾವಶ್ಯಕ—ಸಂ.

**(ಇತರರನ್ನು ಕೊಲ್ಲುವುದು, ಮನೆಯಿಂದ ಹೊರದೂಡುವುದು ಅನ್ಯಾಯ)**

**ಸಮೀಕ್ಷಕ:**—ಅಲ್ಲಾ! ಪ್ರತಿಜ್ಞೆಯನ್ನು ಮಾಡಿಸುವುದು ಮತ್ತು ಮಾಡುವುದು ಅಲ್ಪಜ್ಞರ ವಿಷಯವೋ, ಅಥವಾ ಪರಮಾತ್ಮನದೋ? ಪರಮೇಶ್ವರನು ಸರ್ವಜ್ಞನಾಗಿರುವಾಗ, ಕೇವಲ ವ್ಯಾವಹಾರಿಕ ಸಂಸಾರೀ ಮನುಷ್ಯನಿಗೆ ಸಮನಾಗಿ ಹೀಗೇಕೆ ವರ್ತಿಸುವನು?

ಅಲ್ಲಾ! ತಮ್ಮ-ತಮ್ಮಲ್ಲಿ ರಕ್ತಪಾತ ಮಾಡಬಾರದು; ತಮ್ಮ ಮತದವರನ್ನು ಮನೆಯಿಂದ ಹೊರದೂಡಬಾರದು, ಎನ್ನುವುದು ಯಾವ ಮಹಾ ಒಳ್ಳೆಯ ಮಾತು? **ಎಂದರೆ, ಬೇರೆಯ ಮತದವರ ರಕ್ತವನ್ನು ಹರಿಸಬಹುದೋ? ಮತ್ತು ಮನೆಯಿಂದ, ಹೊರದೂಡಿಬಿಡಬಹುದೋ ? ಇದು ಮಿಥ್ಯೆಯ, ಮೂರ್ಖತ್ವದ, ಮತ್ತು ಪಕ್ಷಪಾತದ ಮಾತಾಗಿದೆ !**

**(ಕುರಾನ್ ಸ್ವತಂತ್ರ ಗ್ರಂಥವಾಗಿರಲಾರದು)**

ಪರಮೇಶ್ವರನು ಮೊದಲೇ—"ಇವರು ಪ್ರತಿಜ್ಞೆಗೆ ವಿರುದ್ಧವಾಗಿ ನಡೆಯುವರು", ಎಂದು ತಿಳಿದುಕೊಂಡಿರಲಿಲ್ಲವೇನು? ಇದರಿಂದ, ಮುಸಲ್ಮಾನರ ಖುದಾ ಕೂಡ, ಕ್ರೈಸ್ತರ ಸಂಗಡ ಬಹಳ ಸಾದೃಶ್ಯ ಹೊಂದಿದ್ದಾನೆಂದು ವಿದಿತವಾಗುತ್ತದೆ !

ಮತ್ತು **ಈ ಕುರಾನ್ ಸ್ವತಂತ್ರವಾಗಿ ರಚಿತವಾಗಿರಲಾರದು ! ಏಕೆಂದರೆ, ಇದರಲ್ಲಿ ಸ್ವಲ್ಪ ಮಾತುಗಳನ್ನು ಬಿಟ್ಟು, ಉಳಿದ ಮಾತುಗಳೆಲ್ಲವೂ ಬೈಬಲಿನವೇ ಆಗಿವೆ!*** [20]

**(ಪಾಪ ಹಗುರಮಾಡಲ್ಪಡುವುದಿಲ್ಲ)**

**[21] ಪರಲೋಕಕ್ಕೆ ಪ್ರತಿಯಾಗಿ ಈ ಲೋಕದ ಜೀವನವನ್ನು ಕೊಂಡುಕೊಂಡ ಜನರು ಇವರು! ಅವರೊಂದಿಗೆ ಪಾಪವೆಂದಿಗೂ ಹಗುರವಾಗಿ ಮಾಡಲ್ಪಡುವುದಿಲ್ಲ; ಮತ್ತು ಅವರಿಗೆ ಸಹಾಯವೂ ಕೊಡಲ್ಪಡುವುದಿಲ್ಲ.**

[ಕುರಾನ್:-ಮಂ. 1; ಸಿ. 1; ಸೂ. 2; ಆ. 86]

**(ಭೋಗಿಸದೇ ಪಾಪ-ಪುಣ್ಯ ಹಗುರವಾಗಲಾರದು)**

**ಸಮೀಕ್ಷಕ:**—ಆಹಾ! ಇಂತಹ ಈರ್ಷ್ಯಾ-ದ್ವೇಷದ ಮಾತುಗಳು ಎಂದಿಗಾದರೂ ಈಶ್ವರನ ಕಡೆಯಿಂದ ಬರಬಲ್ಲವೇನು ? ಯಾವ ಜನರ ಪಾಪಗಳು ಹಗುರವಾಗಿ ಮಾಡಲ್ಪಡುವುವೋ, ಅಥವಾ ಯಾರಿಗೆ ಸಹಾಯ ಕೊಡಲ್ಪಡುವುದೋ, ಅವರು

*ಇದು ಕ್ರೈಸ್ತರೂ, ಮುಸಲ್ಮಾನರೂ ಮತ್ತು ಹಿಂದುಗಳೂ ಗಮನಿಸಬೇಕಾದ ವಿಷಯ. —ಸಂ.

ಯಾರು? ಅವರು ಪಾಪಿಗಳಾಗಿರುವರಾದರೆ, ಮತ್ತು ಪಾಪಗಳಿಗಾಗಿ ಶಿಕ್ಷೆಯನ್ನು ಕೊಡದೆಯೇ, ಅವು ಹಗುರ ಮಾಡಲ್ಪಡುವುವಾದರೆ, ಅನ್ಯಾಯವಾಗುವುದು! ಶಿಕ್ಷೆಯನ್ನಿತ್ತು ಹಗುರಮಾಡಲ್ಪಡುವುವಾದರೆ, ಯಾರ ವರ್ಣನೆ ಈ ಆಯತ್ತಿನಲ್ಲಿ ದೆಯೋ, ಅವರೂ ಕೂಡ, ಶಿಕ್ಷೆಯನ್ನು ಪಡೆದು ಹಗುರವಾಗಬಲ್ಲರು. ಮತ್ತು ಶಿಕ್ಷೆಯನ್ನು ಕೊಟ್ಟೂ ಕೂಡ, ಹಗುರವಾಗಿ ಮಾಡಲ್ಪಡರಾದರೆ, ಆಗಲೂ ಕೂಡ, ಅನ್ಯಾಯವಾಗುವುದು!

ಪಾಪಗಳಿಂದ ಹಗುರಮಾಡಲ್ಪಡುವವರು, ಎಂಬುದರ ತಾತ್ಪರ್ಯ 'ಧರ್ಮಾತ್ಮರು', ಎಂದಾದರೆ, ಅವರ ಪಾಪಗಳಂತೂ ಸ್ವತಃ ಹಗುರವಾಗಿರುತ್ತವೆ! ಖುದಾ ಏನು ಮಾಡುವನು? ಆದುದರಿಂದ, ಈ ಬರೆಹ ವಿದ್ವಾಂಸನದಲ್ಲ!

ಮತ್ತು ವಾಸ್ತವವಾಗಿ ಧಾರ್ಮಿಕರಿಗೆ ಸುಖವೂ ಮತ್ತು ಅಧಾರ್ಮಿಕರಿಗೆ ದುಃಖವೂ ಅವರ ಕರ್ಮಗಳಿಗನುಸಾರವಾಗಿ ಸರ್ವದಾ ಲಭಿಸಬೇಕು! [21]

## (ಮೂಸಾ ಮತ್ತು ಏಸುವಿಗೆ ಪುಸ್ತಕ-ಪ್ರದಾನ)

**[22]** ನಿಶ್ಚಯವಾಗಿ ನಾವು ಮೂಸಾಗೆ ಪುಸ್ತಕವನ್ನು ಕೊಟ್ಟೆವು. ಮತ್ತು ಅವನ ನಂತರ, ನಾವು ಪೈಗಂಬರನನ್ನು ತಂದೆವು. ಮತ್ತು ಮೇರಿಯ ಪುತ್ರನಾದ ಏಸುವಿಗೆ ಸ್ಪಷ್ಟವಾಗಿ ಚಮತ್ಕಾರಗಳನ್ನು, ಎಂದರೆ ದೈವೀಶಕ್ತಿಯನ್ನು ಮತ್ತು ಸಾಮರ್ಥ್ಯವನ್ನು ಕೊಟ್ಟೆವು! 'ರೂಹ್-ಉಲ್-ಕುದ್ಸ್'*ನ ಸಂಗಡ, ತನ್ನೊಂದಿಗೆ ನಿಮ್ಮ ಹೃದಯವು ಅಪೇಕ್ಷಿಸದ ವಸ್ತುಸಹಿತ ಪೈಗಂಬರನು ಬಂದಾಗ, ನೀವು ಮತ್ತೆ ದುರಭಿಮಾನವನ್ನು ತೋರಿಸಿದಿರಿ. ಒಂದು ಮತವನ್ನು ಸುಳ್ಳಾಗಿಸಿದಿರಿ; ಮತ್ತು ಒಂದನ್ನು ನಾಶಮಾಡಿಬಿಡುತ್ತೀರಿ.

[ಕುರಾನ್:-ಮಂ. 1; ಸಿ. 1; ಸೂ. 2; ಆ. 87]

## (ಬೈಬಲ್ ಕೂಡ ಮುಸಲ್ಮಾನರ ಧರ್ಮಗ್ರಂಥ)

**ಸಮೀಕ್ಷಕ:**—ಕುರಾನಿನಲ್ಲಿ 'ಮೂಸಾಗೆ ಪುಸ್ತಕವನ್ನು ಕೊಟ್ಟೆವು', ಎಂದು ಸಾಕ್ಷ್ಯವಿರುವಾಗ, ಅದನ್ನು ಅಂಗೀಕರಿಸುವುದು ಮುಸಲ್ಮಾನರಿಗೆ ಆವಶ್ಯಕವಾಯಿತು! ಮತ್ತು ಆ ಪುಸ್ತಕದಲ್ಲಿ ಯಾವ ಯಾವ ದೋಷಗಳಿವೆಯೋ, ಅವೆಲ್ಲವೂ ಮುಸಲ್ಮಾನರ ಮತಕ್ಕೆ ಬಂದು ಬಿದ್ದವು!

---

*'ರೂಹ್-ಉಲ್-ಕುದ್ಸ್', ಎಂದು ಗೇಬ್ರಿಯಲ್‌ಗೆ ಹೇಳುತ್ತಾರೆ. ಇವನು ಯಾವಾಗಲೂ ಏಸುವಿನ ಜೊತೆಗಿರುತ್ತಿದ್ದನು.—ದ.ಸ.

## (ಚಮತ್ಕಾರಗಳು ಈಗಿಲ್ಲವಾದುದರಿಂದ, ಆಗೂ ಇರಲಿಲ್ಲ)

ಮತ್ತು ಚಮತ್ಕಾರಗಳು, ಎಂದರೆ ದೈವೀಶಕ್ತಿಯ ಮಾತುಗಳು ಎಲ್ಲವೂ ತೋರಿಕೆಗಳಾಗಿವೆ! ಮುಗ್ಧಮಾನವರನ್ನು ಪಥಭ್ರಷ್ಟರನ್ನಾಗಿ ಮಾಡಲು ಸುಳ್ಳು-ಸುಳ್ಳೇ ಪ್ರಚಲಿತಗೊಳಿಸಿಕೊಂಡಿದ್ದಾರೆ! **ಏಕೆಂದರೆ, ಸೃಷ್ಟಿಕ್ರಮ ಮತ್ತು ವಿದ್ಯೆಗೆ ವಿರುದ್ಧವಾದ ಮಾತುಗಳೆಲ್ಲವೂ ಸುಳ್ಳೇ ಆಗಿರುತ್ತವೆ!**

ಆ ಸಮಯದಲ್ಲಿ ಚಮತ್ಕಾರಗಳು ಇದ್ದುವಾದರೆ, ಈ ಸಮಯದಲ್ಲಿ ಏಕಿಲ್ಲ? **ಈ ಸಮಯದಲ್ಲಿ ಇಲ್ಲವಾಗಿರುವಾಗ, ಆ ಸಮಯದಲ್ಲಿಯೂ ಇರಲಿಲ್ಲ!** ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. [22]

## (ಕಾಫಿರರ ಮೇಲೆ ಖುದಾನ ಧಿಕ್ಕಾರ)

[23] ಮತ್ತು ಇದಕ್ಕಿಂತ ಮೊದಲು **'ಕಾಫಿರ'ರ ಮೇಲೆ** ವಿಜಯವನ್ನು ಬಯಸುತ್ತಿದ್ದೆವು. **ಅವರು ಕಂಡುಕೊಂಡಿದ್ದುದು ಅವರ ಬಳಿ ಬಂದಾಗ, ಕೂಡಲೇ ಅವರು 'ಕಾಫಿರ'ರಾಗಿ ಹೋದರು. 'ಕಾಫಿರ'ರ ಮೇಲೆ ಅಲ್ಲಾಹನ ಅಭಿಶಾಪವಿದೆ!**

[ಕುರಾನ್:-ಮಂ. 1; ಸಿ. 1; ಸೂ. 2; ಆ. 88]

## (ಪರಸ್ಪರ ಒಬ್ಬರನ್ನೊಬ್ಬರು 'ಕಾಫಿರ', ಎನ್ನುವುದು ಮೂರ್ಖತನ)

**ಸಮೀಕ್ಷಕ:**—ಹೇಗೆ ನೀವು ಅನ್ಯಮತೀಯರನ್ನು 'ಕಾಫಿರ'ರೆನ್ನುತ್ತೀರೋ, ಹಾಗೆ ಅವರು ನಿಮ್ಮನ್ನು 'ಕಾಫಿರ'ರೆನ್ನುವುದಿಲ್ಲವೇನು?* ಮತ್ತು ಅವರು ತಮ್ಮ ಮತದ ಈಶ್ವರನ ಕಡೆಯಿಂದ ಧಿಕ್ಕಾರವನ್ನು ಕೊಡುತ್ತಾರೆ! ಮತ್ತೆ ಹೇಳಿರಿ! ಯಾವನು ಸತ್ಯವಂತ, ಯಾವನು ಸುಳ್ಳುಗಾರ?

---

*ಹಿಂದುಗಳು ಕ್ರೈಸ್ತರನ್ನು, ಮುಸಲ್ಮಾನರನ್ನು "ಮ್ಲೇಚ್ಛರು", ಎಂದು ಕರೆಯುತ್ತಾರೆ. ಇವಕ್ಕೆ ಹಿಂದೂ ಪಂಡಿತರು ಕೊಡುವ ಕಾರಣವೇನೆಂದರೆ, 'ಕ್ರೈಸ್ತರು-ಮುಸಲ್ಮಾನರು ಆಚಾರ ಹೀನರು; ಮದ್ಯಮಾಂಸಗಳ ಸೇವನೆ ಮಾಡುತ್ತಾರೆ'; ಎಂದು. ಆದರೆ, ಇದು ತಪ್ಪು ತಿಳಿವಳಿಕೆ! ಆಚಾರಹೀನತೆ, ಮದ್ಯ-ಮಾಂಸ ಸೇವನೆ ಹಿಂದುಗಳಲ್ಲೂ ಇವೆ. ಸರಿಯಾದ ಕಾರಣವೇನೆಂದರೆ—

"ಮ್ಲೇಚ್ಛ ಅವ್ಯಕ್ತೇ ಶಬ್ದೇ; ಅವ್ಯಕ್ತಾಯಾಂ ವಾಚಿ ವಾ". (ಧಾತುಪಾಠ 1.121)

ಎಂದರೆ, ಅಸ್ಪಷ್ಟ ಶಬ್ದೋಚ್ಚಾರಣೆ ಮಾಡುವವನಿಗೆ 'ಮ್ಲೇಚ್ಛ', ಎಂದು ಹೆಸರು. ಇಂಗ್ಲಿಷ್ ಮೊದಲಾದ ಐರೋಪ್ಯ ಭಾಷೆಗಳಲ್ಲೂ, ಅರಬಿ, ಉರ್ದು ಮೊದಲಾದ ಮುಸಲ್ಮಾನರ ಪ್ರಿಯ ಭಾಷೆಗಳಲ್ಲೂ, ದೇವನಾಗರೀ ಲಿಪಿಯಲ್ಲಿರುವಂತಹ ಸ್ಫುಟ, ಸಂಪೂರ್ಣ, ಸಮರ್ಪಕ ವರ್ಣಮಾಲೆ ಇಲ್ಲದಿರುವುದರಿಂದ, ಅವರ ಉಚ್ಚಾರಣೆ ಭ್ರಷ್ಟ, ಎಂಬುದು ಜಗದ್ವಿಖ್ಯಾತವಾಗಿದೆ. ಇದೇ ಕಳಂಕವು ಮಹಾಪ್ರಾಣದ ಅಕ್ಷರಗಳಿಲ್ಲದ ಮತ್ತು 'ಕ-ಗ' ಭೇದಗಳಿಲ್ಲದ ತಮಿಳು ಮತ್ತು ಪಂಜಾಬೀ ಭಾಷೆಗಳಿಗೂ ಹತ್ತುತ್ತದೆ.—ಸಂ.

ಪರ್ಯಾಲೋಚನೆ ಮಾಡಿ ನೋಡುತ್ತೇವೆಯಾದರೆ, ಎಲ್ಲ ಮತದವರಲ್ಲಿಯೂ ಸುಳ್ಳು ಕಂಡುಬರುತ್ತದೆ! ಮತ್ತು ಯಾವುದು ಸತ್ಯವಾಗಿರುತ್ತದೋ, ಅದು ಎಲ್ಲದರಲ್ಲಿಯೂ ಒಂದೇ ಬಗೆಯಾಗಿದೆ. ಈ ಎಲ್ಲ ಕಾದಾಟಗಳೂ ಮೂರ್ಖತ್ವದವಾಗಿವೆ! [23]

## (ಅಲ್ಲಾಹನು ಕಾಫಿರರ ಶತ್ರು)

[24] ಆನಂದದ ಸಂದೇಶ ನಂಬಿಕೆಯುಳ್ಳವರಿಗೆ.

ಯಾವನು ಅಲ್ಲಾಹನ, ದೇವದೂತರುಗಳ, ಪೈಗಂಬರರ, 'ಗೇಬ್ರಿಯಲ್'[1]ನ ಮತ್ತು 'ಮೈಕೇಲ'[2]ನ ಶತ್ರುವೋ, ಅಲ್ಲಾಹನೂ ಕೂಡ, ಅವನಂತಹ ಕಾಫಿರರಿಗೆ ಶತ್ರುವಾಗಿದ್ದಾನೆ.

[ಕುರಾನ್:-ಮಂ. 1; ಸಿ. 1; ಸೂ. 2; ಆ. 97, 98]

## (ಈಶ್ವರನು ಯಾರ ಶತ್ರುವೂ ಆಗಲಾರನು)

**ಸಮೀಕ್ಷಕ:**—ಮುಸಲ್ಮಾನರು—ಖುದಾ "ಲಾಶರೀಕ್"*,ಎನ್ನುತ್ತಾರೆ. ಮತ್ತೆ, ಈ ಸೈನ್ಯಕ್ಕೆ ಸೈನ್ಯವನ್ನೇ ಎಲ್ಲಿಂದ ಕೂಡಿಸಿದನು? ಅನ್ಯರಿಗೆ ಶತ್ರುವಾಗಿರುವವನು ಖುದಾನಿಗೂ ಶತ್ರುವಾಗಿರುತ್ತಾನೇನು? ಸ್ಥಿತಿಯು ಹೀಗೆ ಇರುವುದಾದರೆ, ಅದು ಸರಿಯಲ್ಲ! ಏಕೆಂದರೆ, ಈಶ್ವರನು ಯಾರ ಶತ್ರುವೂ ಆಗಿರಲಾರನು! [24]

## (ತನಗೆ ಬೇಕಾದವರಿಗೆ ಅಲ್ಲಾಹನು ವಿಶಿಷ್ಟರನ್ನಾಗಿ ಮಾಡುತ್ತಾನೆ)

[25] ಮತ್ತು ಅಲ್ಲಾಹನು ತನಗೆ ಬೇಕಾದವನನ್ನು ತನ್ನ ದಯೆಯಿಂದ ವಿಶಿಷ್ಟನನ್ನಾಗಿ ಮಾಡುತ್ತಾನೆ.

[ಕುರಾನ್:-ಮಂ. 1; ಸಿ. 1; ಸೂ. 2; ಆ.105]

## (ಎಲ್ಲವೂ ಖುದಾನ ಮರ್ಜಿಯಿಂದಲೇ ಆದರೆ, ಒಳ್ಳೆಯ ಕೆಲಸ ಯಾರು ಮಾಡುವರು?)

**ಸಮೀಕ್ಷಕ:**—ಯಾವನು ಮುಖ್ಯನಾಗಲೂ, ದಯೆಗೆ ಪಾತ್ರನೂ ಅಲ್ಲವೋ, ಅವನನ್ನು ಕೂಡ, ಪ್ರಧಾನನನ್ನಾಗಿ ಮಾಡುತ್ತಾನೋ? ಮತ್ತು ಅವನ ಮೇಲೆ ದಯೆಯನ್ನು ಮಾಡುತ್ತಾನೋ? ಹೀಗೆ ವರ್ತಿಸುವವನಾದರೆ, ಖುದಾ ಮಹಾ ಅವ್ಯವಸ್ಥಾಕಾರಿಯಾಗಿರುತ್ತಾನೆ! ಏಕೆಂದರೆ, ಮತ್ತೆ ಒಳ್ಳೆಯ ಕಾರ್ಯವನ್ನು

---

1. Gabriel 2. Michael

*ಎಂದರೆ 'ಅದ್ವಿತೀಯನು', ಅಥವಾ ಕೇವಲನು; ಮಿಶ್ರರಹಿತನು—ಅನು.

ಯಾವನು ತಾನೇ ಮಾಡುವನು? ಮತ್ತು ದುಷ್ಕರ್ಮಗಳನ್ನು ಯಾವನು ತಾನೇ ಬಿಟ್ಟಾನು? ಏಕೆಂದರೆ, [ಎಲ್ಲರೂ] ಖುದಾನ ಪ್ರಸನ್ನತೆಯನ್ನು ಮಾತ್ರ ಅವ ಲಂಬಿಸಿರುತ್ತಾರೆ : ಕರ್ಮಫಲವನ್ನಲ್ಲ! ಇದರಿಂದ, ಎಲ್ಲರಿಗೂ ನಂಬಿಕೆ ತಪ್ಪಿಹೋಗಿ, ಕರ್ಮೋಚ್ಛೇದದ ಪ್ರಸಂಗ ಬರುವುದು! [25]

## (ಕಾಫಿರರಿಂದ ನಂಬಿಕೆ ಕೆಡಿಸುವ ಹೆದರಿಕೆ)

[26] ಕಾಫಿರ ಜನರು ಈರ್ಷ್ಯೆ ಮಾಡಿ ನಿಮ್ಮನ್ನು ನಂಬಿಕೆಯಿಂದ ಕದಲಿಸಿ ಬಿಡುವಂತೆ ಆಗದಿರಲಿ! ಏಕೆಂದರೆ, ಅವರುಗಳಲ್ಲಿ 'ನಂಬಿಕೆಯುಳ್ಳವರ' ಮಿತ್ರರುಗಳು ಬಹು ಮಂದಿ ಇದ್ದಾರೆ.

[ಕುರಾನ್:–ಮಂ. 1; ಸಿ. 1; ಸೂ. 2; ಆ.109]

## (ಕಾಫಿರರ ಬಗ್ಗೆ ಈಶ್ವರನಿಗೆ ಸರಿಯಾಗಿ ಗೊತ್ತಿರಲಿಲ್ಲ)

**ಸಮೀಕ್ಷಕ:**—ಈಗ ನೋಡಿರಿ! ಖುದಾನೇ—"ನಿಮ್ಮ ನಂಬಿಕೆಯನ್ನು ಕಾಫಿರರು ಕದಲಿಸದಿರಲಿ!", ಎಂದು ಅವರನ್ನು ಎಚ್ಚರಿಸುತ್ತಾನೆ. ಅವನು ಸರ್ವಜ್ಞನಲ್ಲವೇನು? ಇಂತಹ ಮಾತುಗಳು ಖುದಾನದಾಗಿರಲಾರವು! [26]

## (ಅಲ್ಲಾಹನ ಮುಖ ಎಲ್ಲಡೆ ಇದೆ)

[27] ನೀವು ಯಾವ ಕಡೆಗೆ ಮುಖ ತಿರುಗಿಸುತ್ತೀರೋ, ಆ ಕಡೆಗೇ ಖುದಾನ ಮುಖವಿದೆ!

[ಕುರಾನ್:–ಮಂ. 1; ಸಿ. 1; ಸೂ.2; ಆ. 115]

## (ಮತ್ತೆ, ಮುಸಲ್ಮಾನರು ಕಿಬಲೆಯ ಕಡೆಗೇಕೆ ಮುಖ ಮಾಡುತ್ತಾರೆ?)

**ಸಮೀಕ್ಷಕ:**—ಈ ಮಾತು ಸತ್ಯವಾಗಿರುವುದಾದರೆ, ಮುಸಲ್ಮಾನರು ಕಿಬಲೆ*ಯ ಕಡೆಗೆ ಮುಖವನ್ನೇಕೆ ತಿರುಗಿಸುತ್ತಾರೆ?

'ನಮಗೆ ಕಿಬಲೆಯ ಕಡೆಗೆ ಮುಖವನ್ನು ತಿರುಹಬೇಕೆಂಬ ಆಜ್ಞೆ ಇದೆ', ಎನ್ನುವಿರಾದರೆ, ಯಾವ ಕಡೆಗೆ ಬೇಕಾದರೂ ಮುಖ ತಿರುಗಿಸಿರಿ, ಎಂಬ ಆಜ್ಞೆಯೂ ಕೂಡ, ಇದೆ! ಒಂದು ಮಾತು ಸತ್ಯ ಮತ್ತು ಎರಡನೆಯದು ಸುಳ್ಳು ಆಗಿರುವುದೇನು?

---

*'ಕಿಬಲಾ', ಎಂದರೆ 'ಪಶ್ಚಿಮ ದಿಕ್ಕು'; 'ಕುತುಬ್', ಎಂದರೆ ಉತ್ತರ ದಿಕ್ಕು—ಸಂ.

ಮತ್ತು ಅಲ್ಲಾಹನಿಗೆ ಮುಖವಿರುವುದಾದರೆ, ಅದು ಎಲ್ಲ ಕಡೆಗೂ ಇರಲೇ ಲಾರದು.* ಏಕೆಂದರೆ, ಒಂದು ಮುಖ ಒಂದು ಕಡೆಗೆ ಇರುವುದು! ಎಲ್ಲೆಡೆಗೂ ಹೇಗೆ ತಾನೇ ಇರಬಲ್ಲದು? ಆದುದರಿಂದ, ಇದು ಸಂಗತವಲ್ಲ! [27]

### ('ಆಗಿ ಹೋಗು', ಎಂದ ಮಾತ್ರಕ್ಕೆ ಸೃಷ್ಟಿರಚನೆ)

**[28] ಯಾವನು ಆಕಾಶದ ಮತ್ತು ಭೂಮಿಯ ಉತ್ಪತ್ತಿ ಮಾಡುವವ ನಾಗಿರುವನೋ, ಅವನು ಏನನ್ನಾದರೂ ಮಾಡಲು ಬಯಸುವಾಗ, ಅವನು ಅದನ್ನು 'ಮಾಡಬೇಕಾಗುವುದಿಲ್ಲ!' ಆದರೆ, ಅದಕ್ಕೆ—"ಆಗಿ ಹೋಗು", ಎನ್ನುತ್ತಾನೆ ಅಷ್ಟೇ! 'ಆಗಿ ಹೋಗುತ್ತದೆ!'†**

**[ಕುರಾನ್:- ಮಂ. 1; ಸಿ. 1; ಸೂ. 2; ಆ. 117]**

### (ಖುದಾ ಯಾರಿಗೆ ಅಪ್ಪಣೆಯಿತ್ತನು ? ಯಾರು ಆಲಿಸಿದರು)

ಸಮೀಕ್ಷಕ:—ಭಲೇ, ಖುದಾ—**'ಆಗಿ ಹೋಗು'**, ಎಂದು ಅಪ್ಪಣೆ ಮಾಡಿದ ನಾದರೆ, ಅಪ್ಪಣೆಯನ್ನು ಆಲಿಸಿದುದು ಯಾವುದು? ಮತ್ತು ಯಾವುದಕ್ಕೆ ಶ್ರವಣ ಮಾಡಿಸಿದನು? ಮತ್ತು ಯಾವುದು ಆಗಿಹೋಯಿತು? ಯಾವ **'ಕಾರಣದಿಂದ'** ಮಾಡಿದನು?

'ಸೃಷ್ಟಿಗೆ ಮುನ್ನ, ಖುದಾನ ಹೊರತು, ಯಾವುದೇ ಎರಡನೆಯ ವಸ್ತುವೂ ಇರಲಿಲ್ಲ', ಎಂದು ಬರೆಯುತ್ತಾರೆ! ಎಂದ ಮೇಲೆ, ಈ ಜಗತ್ತು ಎಲ್ಲಿಂದ ಬಂದಿತು? **ಕಾರಣವಿಲ್ಲದೇ, ಯಾವುದೇ ಕಾರ್ಯವೂ ಆಗುವುದಿಲ್ಲ!** ಎಂದಿರುವಾಗ, ಇಷ್ಟು ದೊಡ್ಡ ಜಗತ್ತು ಕಾರಣವಿಲ್ಲದೇ, ಎಲ್ಲಿಂದ ಆಯಿತು? ಈ ಮಾತು ಕೇವಲ ಹುಡುಗತನದ್ದಾಗಿದೆ!

---

*ಪೌರಾಣಿಕರು ಪೈಗಂಬರರಿಗಿಂತ ಬುದ್ಧಿವಂತರು ! ಅವರು ತ್ರಿಶಿರನಿಗೆ ಮೂರು; ದತ್ತಾತ್ರೇಯನಿಗೆ ಮೂರು; ಬ್ರಹ್ಮನಿಗೆ ನಾಲ್ಕು; ಹನುಮಂತನಿಗೆ ಐದು; ಷಣ್ಮುಖನಿಗೆ ಆರು; ರಾವಣನಿಗೆ ಹತ್ತು; ಮತ್ತು ಶ್ರೀಕೃಷ್ಣನ ವಿಶ್ವರೂಪಕ್ಕೆ ಸಾವಿರ ಮುಖಗಳನ್ನು ಅಳವಡಿಸಿದ್ದಾರೆ! ಇದು ಮನುಷ್ಯಮುಖಗಳ ಮಾತಾಯಿತು! ಇನ್ನು ಮನುಷ್ಯದೇಹಕ್ಕೆ ಪ್ರಾಣಿ-ಪಶುಗಳ ಮುಖ ಗಳನ್ನು ಹಚ್ಚುವ, ಎಂದರೆ ಕುದುರೆ, ಎತ್ತು, ಕೋತಿ, ಸಿಂಹ, ಹಂದಿ, ಆನೆ, ಮೊದಲಾದುವುಗಳ ರಚನಾಕೌಶಲ್ಯಕ್ಕೇನು ಹೇಳುವಿರಿ! ಎರಡು, ನಾಲ್ಕು, ಆರು, ಎಂಟು, ಹತ್ತು ಇಪ್ಪತ್ತು ಮತ್ತು ಸಾವಿರ ಕೈಗಳ ನಿರ್ಮಾಣ ಮತ್ತು ಅವುಗಳಿಗೆ ಆವಶ್ಯಕವಾದ ಆಯುಧಾದಿಗಳ ವ್ಯವಸ್ಥೆ ಸಾಮಾನ್ಯ ವಾದ ಮಾತೇನು? ಪೌರಾಣಿಕರ ಈ ಬುದ್ಧಿವಂತಿಕೆಗಳ (?) ಕಾರಣದಿಂದಲೇ, ಎಲ್ಲರೂ ಸಾವಿರಾರು ವರ್ಷಗಳಿಂದ ಪುರಾಣಗಳ ಅನುಯಾಯಿಗಳಾಗಿದ್ದಾರೆ!—ಸಂ.

†ಇದೇ ಭಾವನೆ ಬೈಬಲಿನಲ್ಲೂ ಇದೆ.—ಯು.ಮೀ

**(ಯಾವ ಪದಾರ್ಥವೂ ಮೂರು ಕಾರಣಗಳಿಲ್ಲದೇ ಆಗುವುದಿಲ್ಲ)**

**ಪೂರ್ವಪಕ್ಷೀಯ:***—ಇಲ್ಲ, ಇಲ್ಲ! ಖುದಾನ ಇಚ್ಛೆಯಿಂದ [ಆಯಿತು!]

**ಉತ್ತರಪಕ್ಷೀಯ:**—ಖುದಾನ ಇಚ್ಛೆಯಿಂದ ಈ ಸಮಸ್ತ ಜಗತ್ತೂ ಆಗಿ ಹೋಯಿತು, ಎಂದು ಹೇಳುತ್ತೀರಲ್ಲ! [ಹಾಗಾದರೆ,] ನಿಮ್ಮ ಇಚ್ಛೆಯಿಂದ ಒಂದು ನೊಣದ ಕಾಲಾದರೂ ಕೂಡ, ನಿರ್ಮಿತವಾಗಬಲ್ಲದೇನು?

**ಪೂರ್ವಪಕ್ಷೀಯ:**— ಖುದಾ ಸರ್ವಶಕ್ತಿಮಂತನಾಗಿದ್ದಾನೆ. ಆದುದರಿಂದ, ಏನು ಬಯಸುತ್ತಾನೋ, ಅದನ್ನು ಮಾಡಿಕೊಳ್ಳುತ್ತಾನೆ!

**ಉತ್ತರಪಕ್ಷೀಯ:**—**'ಸರ್ವಶಕ್ತಿಮಂತ'**, ಎಂಬುದರ ಅರ್ಥವೇನು?

**ಪೂರ್ವಪಕ್ಷೀಯ:**—ಏನನ್ನು ಬಯಸುತ್ತಾನೋ, ಅದನ್ನು ಮಾಡಬಲ್ಲವನು!

**ಉತ್ತರಪಕ್ಷೀಯ:**—ಖುದಾ ಎರಡನೆಯ ಖುದಾನನ್ನು ಕೂಡ, ನಿರ್ಮಿಸ ಬಲ್ಲನೇನು? ತನ್ನಷ್ಟಕ್ಕೆ ತಾನು ಸಾಯಬಲ್ಲನೇನು? ಮೂರ್ಖನೂ, ರೋಗಿಯೂ ಮತ್ತು ಅಜ್ಞಾನಿಯೂ ಆಗಬಲ್ಲನೇನು?†

**ಪೂರ್ವಪಕ್ಷೀಯ:**—ಹೀಗೆ ಎಂದಿಗೂ ಆಗಲಾರನು!

**ಉತ್ತರಪಕ್ಷೀಯ:**—ಆದುದರಿಂದ, ಪರಮೇಶ್ವರನು ತನ್ನ, ಮತ್ತು ಅನ್ಯರ, ಗುಣ–ಕರ್ಮ–ಸ್ವಭಾವಗಳಿಗೆ ವಿರುದ್ಧವಾಗಿ ಏನನ್ನೂ ಮಾಡಲಾರನು. ಉದಾ ಹರಣೆಗಾಗಿ—

ಜಗತ್ತಿನ ಯಾವುದಾದರೂ **ವಸ್ತುವಿನ ಆಗುವಿಕೆ-ಮಾಡುವಿಕೆಗಳಲ್ಲಿ ಮೊದಲು ಮೂರು ಪದಾರ್ಥಗಳು ಅವಶ್ಯವಾಗಿರುತ್ತವೆ.**

ಒಂದನೆಯದಾಗಿ—**ನಿರ್ಮಾಣ ಮಾಡುವವನು, ಎಂದರೆ ಕುಂಬಾರ!**

ಎರಡನೆಯದಾಗಿ—**ಘಟವನ್ನು ನಿರ್ಮಿಸಲು ಬೇಕಾದ ಮಣ್ಣು!**‡

---

*ಎಂದರೆ, ಮುಸಲ್ಮಾನ ಅಥವಾ ಮೌಲವೀ. —ಸಂ.

†ಈ ಬಗ್ಗೆ ಸಪ್ತಮ, ಅಷ್ಟಮ ಸಮುಲ್ಲಾಸಗಳಲ್ಲಿ ಮೊದಲೇ ವಿವೇಚನೆ ಮಾಡಲಾಗಿದೆ. ಪುಟ 330 ಮತ್ತು 405ನ್ನು ನೋಡಿ. —ಸಂ.

‡ಎಂದರೆ ಉಪಾದಾನ ಕಾರಣ—ಅನು.

ಪೂರನೆಯದಾಗಿ—**ಘಟದ ನಿರ್ಮಾಣಕ್ಕೆ ಸಹಾಯಕವಾಗುವ ಬೇರೆಯ ಸಲಕರಣೆಗಳು!**

ಹೇಗೆ ಕುಂಬಾರ, ಮಣ್ಣು ಮತ್ತು ಸಲಕರಣೆಗಳಿಂದ ಘಟವು ನಿರ್ಮಿತವಾಗುವುದೋ, ಮತ್ತು ನಿರ್ಮಿತವಾಗುವ ಘಟಕ್ಕಿಂತ ಮುನ್ನವೇ ಕುಂಬಾರ, ಮತ್ತು ಸಲಕರಣೆಗಳು ಇರುವುವೋ, ಹಾಗೆಯೇ, ಜಗದ್ರಚನೆಗೆ ಮುನ್ನ, ಜಗತ್ತಿನ [ಉಪಾದಾನ] ಕಾರಣವಾದ ಪ್ರಕೃತಿ, [ಪರಮಾತ್ಮ] ಮತ್ತು ಅವನ ಗುಣ-ಕರ್ಮ-ಸ್ವಭಾವಗಳು ಅನಾದಿಯಾಗಿ ಇರುತ್ತವೆ.

ಆದಕಾರಣ, ಕುರಾನಿನ ಈ ಮಾತು ಅಸಂಭವವಾಗಿರುತ್ತದೆ. [28]

## (ಕಾಬೆಯನ್ನು ಪವಿತ್ರಸ್ಥಾನವನ್ನಾಗಿ ಮಾಡಿದನು)

**[29] ನಾವು ಜನರ ಸಲುವಾಗಿ 'ಕಾಬಾ'*ದ ಸುಖದಾಯಕವಾದ ಪವಿತ್ರ ಸ್ಥಾನವನ್ನು ನಿರ್ಮಿಸಿದ್ದೇವೆ. ನೀವು ನಮಾಜಿಗಾಗಿ ಇಬ್ರಾಹೀಮನ ಸ್ಥಾನವನ್ನು ಗ್ರಹಿಸಿರಿ.**

**[ಕುರಾನ್:-ಮಂ. 1; ಸಿ. 1; ಸೂ. 2; ಆ. 125]**

## (ಕಾಬಾಕ್ಕೆ ಮೊದಲು ಪವಿತ್ರಸ್ಥಾನವನ್ನೇಕೆ ಮಾಡಲಿಲ್ಲ?)

**ಸಮೀಕ್ಷಕ:—**'ಕಾಬಾ'ಕ್ಕಿಂತ ಮುನ್ನ, ಪವಿತ್ರಸ್ಥಾನವಾವುದನ್ನೂ ಖುದಾ ನಿರ್ಮಿಸಿರಲಿಲ್ಲವೇನು? ನಿರ್ಮಿಸಿದ್ದನಾದರೆ, 'ಕಾಬಾ'ವನ್ನು ನಿರ್ಮಿಸುವ ಅವಶ್ಯಕತೆ ಏನೇನೂ ಇರಲಿಲ್ಲ! ನಿರ್ಮಿಸಿರಲಿಲ್ಲವಾದರೆ, ಬಡಪಾಯಿಗಳಾದ ಪೂರ್ವಜರನ್ನು ಪವಿತ್ರಸ್ಥಾನವಿಲ್ಲದೇ, ಇಟ್ಟಿದ್ದನೇನು? ಮೊದಲು, ಈಶ್ವರನಿಗೆ ಪವಿತ್ರಸ್ಥಾನವನ್ನು ನಿರ್ಮಿಸಬೇಕೆಂಬುವರ ನೆನಪೇ ಬಾರದೇ ಹೋಗಿರಬಹುದು! [29]

## (ಇಬ್ರಾಹೀಮನ ಧರ್ಮದಿಂದ ವಿಮುಖರಾಗಬೇಡಿ)

**[30] ಯಾವನು ಪ್ರಾಣವನ್ನು ಮೌಢ್ಯಕ್ಕೆ ಈಡಾಗಿಸಿಕೊಂಡಿದ್ದಾನೋ, ಅವನ ಹೊರತು, ಇಬ್ರಾಹೀಮನ ಧರ್ಮದಿಂದ ವಿಮುಖನಾಗುವ ಮಾನವನಾದರೂ ಯಾವನಿದ್ದಾನು? ಮತ್ತು ನಾವು ನಿಶ್ಚಯವಾಗಿಯೂ ಪ್ರಪಂಚದಲ್ಲಿ ಅವನನ್ನೇ ಅಂಗೀಕರಿಸಿದೆವು. ಮತ್ತು ನಿಶ್ಚಯವಾಗಿ ಪರಲೋಕದಲ್ಲಿ ಅವನೇ ಪುಣ್ಯಶಾಲಿಯಾಗಿದ್ದಾನೆ.**

**[ಕುರಾನ್:-ಮಂ. 1; ಸಿ. 1; ಸೂ. 2; ಆ. 130]**

---

*ಮುಕ್ಕಾ ಪಟ್ಟಣದ ಪವಿತ್ರ ದೇಗುಲ—ಸಂ.

## (ಇಬ್ರಾಹೀಮನನ್ನೇ ಖುದಾ ಏಕೆ ಅಂಗೀಕರಿಸಿದ?)

**ಸಮೀಕ್ಷಕ:**—[ಯಾರು] ಇಬ್ರಾಹೀಮನ ಧರ್ಮವನ್ನು ಅಂಗೀಕರಿಸು ವುದಿಲ್ಲವೋ. ಅವರೆಲ್ಲರೂ ಮೂರ್ಖರು, ಎನ್ನುವುದು ಹೇಗೆ ಸಂಭವವಾದೀತು? ಇಬ್ರಾಹೀಮನನ್ನೇ ಖುದಾ ಅಂಗೀಕರಿಸಿದನು! ಇದಕ್ಕೆ ಕಾರಣವೇನು? ಧರ್ಮಾತ್ಮ ನಾಗಿದ್ದ ಕಾರಣ ಅಂಗೀಕರಿಸಿದನೆಂದರೆ, ಧರ್ಮಾತ್ಮರು ಇನ್ನೂ ಬಹುಮಂದಿ ಇರಬಲ್ಲ ರಲ್ಲ? ಒಂದುವೇಳೆ, ಧರ್ಮಾತ್ಮನಾಗದೇ ಇದ್ದರೂ ಕೂಡ, ಅಂಗೀಕರಿಸಿದನಾದರೆ, ಅನ್ಯಾಯವಾದೀತು!

**ಹೌದು! ಯಾವನು ಧರ್ಮಾತ್ಮನಾಗಿರುತ್ತಾನೋ, ಅವನೇ ಈಶ್ವರನಿಗೆ ಪ್ರಿಯ ನಾಗುತ್ತಾನೆ: ಅಧರ್ಮಿಯಲ್ಲ, ಎನ್ನುವುದೇನೋ ಸರಿಯಾಗಿದೆ!** [30]

## (ಕಿಬಲೆಯ ಕಡೆ ಮುಖ ತಿರುಗಿಸು)

**[31] ನಿಶ್ಚಯವಾಗಿ ನಾವು ನಿನ್ನ ಮುಖವು ಆಕಾಶದತ್ತ ತಿರುಗುವುದನ್ನು ನೋಡುತ್ತೇವೆ. ಅವಶ್ಯವಾಗಿ ನಾವು ನಿನ್ನನ್ನು, ನೀನು ಅದನ್ನು ಅಂಗೀಕರಿಸು ವಂತಾಗಲಿ, ಎಂದು, ಆ 'ಕಿಬಲೆ'ಯ ಕಡೆಗೆ ತಿರುಗಿಸುತ್ತೇವೆ. ಆಯಿತು! ನಿನ್ನ ಮುಖವನ್ನು 'ಮಸ್‌ಜಿದ್-ಉಲ್-ಹರಾಮ್'ನ ಕಡೆಗೆ ತಿರುಗಿಸು. ನೀನು ಎಲ್ಲಿ ಬೇಕಾದರೂ ಇರು! ನಿನ್ನ ಮುಖವನ್ನು ಅದರ ಕಡೆಗೆ ತಿರುಗಿಸು!**

[ಕುರಾನ್:–ಮಂ. 1; ಸಿ. 2; ಸೂ. 2; ಆ. 144]

## (ಕಿಬಲೆಯ ಕಡೆ ಮುಖ ತಿರುಗಿಸುವುದು ವಿಗ್ರಹಾರಾಧನೆ)

**ಸಮೀಕ್ಷಕ:**—ಇದು ಚಿಕ್ಕ ವಿಗ್ರಹಾರಾಧನೆಯೇನು? ಅಲ್ಲ; ದೊಡ್ಡದೇ!

**ಪೂರ್ವಪಕ್ಷೀಯ:—ಮುಸಲ್ಮಾನರಾದ ನಾವು ಮೂರ್ತಿಪೂಜಕರಲ್ಲ! ಆದರೆ, "ಬುತ್‌ಶಿಕನ್", ಎಂದರೆ ಮೂರ್ತಿಭಂಜಕರಾಗಿದ್ದೇವೆ!** ಏಕೆಂದರೆ, ನಾವು ಕಿಬಲೆ ಯನ್ನು **'ಖುದಾ'**, ಎಂದು ತಿಳಿಯುವುದಿಲ್ಲ!

**ಉತ್ತರಪಕ್ಷೀಯ:**—ಯಾರನ್ನು ನೀವು ಮೂರ್ತಿಪೂಜಕರೆಂದು ತಿಳಿಯು ತ್ತೀರೋ, ಅವರು ಕೂಡ, ಮೂರ್ತಿಗಳನ್ನು **'ಈಶ್ವರ'**, ಎಂದು ತಿಳಿಯುವುದಿಲ್ಲ! ಆದರೆ, ಅವುಗಳ ಮುಂದೆ ಈಶ್ವರನಿಗೆ ಭಕ್ತಿಯನ್ನು ಸಲ್ಲಿಸುತ್ತಾರೆ.

ನೀವು ಮೂರ್ತಿಗಳನ್ನು ಒಡೆಯುವವರಾದರೆ, ಕಿಬಲಾ, ಎಂಬ ಆ ಮಸೀದಿಯ [ರೂಪದಲ್ಲಿರುವ] ಮಹಾಮೂರ್ತಿಯನ್ನು ಒಡೆಯಲಿಲ್ಲವೇಕೆ?

## (ಮುಸಲ್ಮಾನರು ವಿಗ್ರಹಾರಾಧನೆಯಲ್ಲಿ ಪೌರಾಣಿಕರಿಗಿಂತ ಕಡಿಮೆ ಇಲ್ಲ)

**ಪೂರ್ವಪಕ್ಷೀಯ:**—ಅಲ್ಲಾ, ಸ್ವಾಮೀ! ನಮಗಂತೂ ಕಿಬಲೆಯ ಕಡೆಗೆ ಮುಖ ತಿರುಗಿಸಬೇಕೆಂಬ ಅಪ್ಪಣೆ ಕುರಾನಿನಲ್ಲಿದೆ! ಮತ್ತು ಇವರಿಗೆ* ವೇದದಲ್ಲಿಲ್ಲ! ಮತ್ತೆ, ಅವರು ಮೂರ್ತಿಪೂಜಕರೇಕೆ ಅಲ್ಲ? ಮತ್ತು ನಾವೇಕೆ [ಮೂರ್ತಿಪೂಜಕರು]? ಏಕೆಂದರೆ, ನಮಗೆ ಖುದಾನ ಆಜ್ಞೆಯನ್ನು ಪಾಲಿಸುವುದು ಅವಶ್ಯವಾಗಿದೆ!

**ಉತ್ತರಪಕ್ಷೀಯ:**—ಹೇಗೆ ನಿಮಗೆ ಕುರಾನಿನಲ್ಲಿ ಆಜ್ಞೆಯಿದೆಯೋ, ಹಾಗೆ ಇವರಿಗೆ ಪುರಾಣಗಳಲ್ಲಿ ಆಜ್ಞೆಯಿದೆ! ಹೇಗೆ ನೀವು ಕುರಾನನ್ನು ಖುದಾನ ಕೃತಿಯೆಂದು ತಿಳಿಯುತ್ತೀರೋ, ಹಾಗೆ ಪೌರಾಣಿಕರು ಪುರಾಣಗಳನ್ನು ಖುದಾನ ಅವತಾರವಾದ ವ್ಯಾಸರ ವಚನವೆಂದು ತಿಳಿಯುತ್ತಾರೆ!

ನಿಮ್ಮ ಮತ್ತು ಇವರ ನಡುವೆ ಮೂರ್ತಿಪೂಜೆಯ ಬಗೆಗೆ ಭಿನ್ನಭಾವವಿಲ್ಲ! ಆದರೆ, ನೀವು ದೊಡ್ಡ ವಿಗ್ರಹಾರಾಧಕರು! ಮತ್ತು ಇವರು ಚಿಕ್ಕ ವಿಗ್ರಹಾರಾಧಕರು! [ಅಷ್ಟೇ!]

## (ಮಕ್ಕೆಯ ಮಸೀದಿಯೂ ಕೂಡ, ದೊಡ್ಡ ವಿಗ್ರಹವೇ!)

ಏಕೆಂದರೆ, [ಉದಾಹರಣೆಗಾಗಿ—]ಯಾವನೋ ಒಬ್ಬನು ತನ್ನ ಮನೆಗೆ ನುಗ್ಗಿದ ಬೆಕ್ಕನ್ನು ಹೊರದೂಡತೊಡಗಿದಾಗ, ಅಷ್ಟರಲ್ಲಿ ಅವನ ಮನೆಯೊಳಗೆ ಒಂದು ಒಂಟೆಯೇ ನುಗ್ಗಿಬಂದಂತಾಯಿತು! ಹಾಗೆಯೇ, ಮುಹಮ್ಮದ್ ಸಾಹೇಬರು ಚಿಕ್ಕ ವಿಗ್ರಹವನ್ನು ಮುಸಲ್ಮಾನ ಮತದಿಂದ ಹೊರಹಾಕಿದರು! ಆದರೆ, ದೊಡ್ಡ ವಿಗ್ರಹವಾದ ಪರ್ವತದಂತಿರುವ ಮಕ್ಕಾ ಮಸೀದಿಯೆಲ್ಲವನ್ನೂ ಮುಸಲ್ಮಾನ ಮತದಲ್ಲಿ ತೂರಿಸಿಯೇ ಬಿಟ್ಟರು! ಇದೇನು ಚಿಕ್ಕ ವಿಗ್ರಹಾರಾಧನೆಯೇ?

## (ಮೂರ್ತಿಪೂಜೆಯನ್ನು ಖಂಡಿಸುವ ಅಧಿಕಾರ ಮುಸಲ್ಮಾನರಿಗಿಲ್ಲ)

ಅಹುದು! ನಾವುಗಳು ವೈದಿಕರು† ಆಗಿರುವ ಹಾಗೆಯೇ, ನೀವುಗಳು ಕೂಡ, ವೈದಿಕರಾಗಿ ಹೋಗುವಿರಾದರೆ, ಮೂರ್ತಿಪೂಜೆ ಮೊದಲಾದ ಕೆಡಕುಗಳಿಂದ ದೂರ ಉಳಿಯಬಲ್ಲಿರಿ! ಹಾಗಲ್ಲದೇ ಸಾಧ್ಯವಿಲ್ಲ. ಎಂದಿನವರೆಗೆ ನೀವು ನಿಮ್ಮ ಈ ದೊಡ್ಡ

---

*ಎಂದರೆ, ಹಿಂದುಗಳಿಗೆ—ಸಂ.

†ವೈದಿಕರು, ಎಂದರೆ ವೇದದ ಧರ್ಮವನ್ನು ಪಾಲಿಸುವವರು. ಎಂಬರ್ಥ! ಪುರಾಣಗಳ-ತಂತ್ರಗಳ ಅನುಯಾಯಿಗಳಾದ ವಿಗ್ರಹರಾಧಕರೂ, ಪೂಜಾ-ಪಾಠವಮಾಡುವವರೂ, ಮೃತಕ ಶ್ರಾದ್ಧದ ಕೂಳು ತಿನ್ನುವವರೂ ಆದ ಬ್ರಾಹ್ಮಣರಿಗೆ ವೈದಿಕರು, ಎಂಬ ಮನ್ನಣೆಯನ್ನು ದಕ್ಷಿಣ ಭಾರತದಲ್ಲಿ ಕೊಟ್ಟಿರುವುದು, ಎಂತಹ ಅಸಂಬದ್ಧ ಬಿರುದು!—ಸಂ.

ವಿಗ್ರಹಾರಾಧನೆಯನ್ನು ಹೊರದೂಡುವುದಿಲ್ಲವೋ, ಅಂದಿನ ತನಕ ಬೇರೆಯ ಅಲ್ಪವಾದ ವಿಗ್ರಹಗಳ ಪೂಜಕರನ್ನು ಖಂಡಿಸುವಲ್ಲಿ ನಾಚಿಕೆಪಟ್ಟು, [ಇದರಿಂದ] ನಿವೃತ್ತರಾಗುವುದೇ* ಲೇಸು!

ಮತ್ತು ತಮ್ಮನ್ನು ಸ್ವತಃ ಮೂರ್ತಿಪೂಜೆಯಿಂದ ದೂರವಿಟ್ಟುಕೊಂಡೇ ಪವಿತ್ರರಾಗಿ ಮಾಡಿಕೊಳ್ಳಬೇಕು ! [31]

## (ಅಲ್ಲಾಹನ ಮಾರ್ಗದಲ್ಲಿ ಸತ್ತವರು ಜೀವಿತರೇ!)

[32] ಅಲ್ಲಾಹನ ಮಾರ್ಗದಲ್ಲಿ ಹತರಾಗುವವರ ಬಗೆಗೆ—"ಇವರು ಮೃತರಾಗಿದ್ದಾರೆ.", ಎನ್ನಬೇಡಿರಿ, ಏಕೆಂದರೆ, ಅವರು ಜೀವಂತರಾಗಿದ್ದಾರೆ!

[ಕುರಾನ್:-ಮಂ. 1; ಸಿ. 2; ಸೂ.2; ಆ. 154]

## (ಈಶ್ವರನ ಮಾರ್ಗದಲ್ಲಿ ಸಾಯುವ, ಸಾಯಿಸುವ ಆವಶ್ಯಕತೆ ಏನು?)

ಸಮೀಕ್ಷಕ:—ಛಲೇ ! ಈಶ್ವರನ ಮಾರ್ಗದಲ್ಲಿ ಸಾಯುವ-ಸಾಯಿಸುವ ಆವಶ್ಯಕತೆಯಾದರೂ ಏನಿದೆ?

"ಈ ಲೋಭವನ್ನೊಡ್ಡುವುದರಿಂದ, ಜನರು ಚೆನ್ನಾಗಿ ಹೋರಾಡುವರು! ತಮಗೆ ಜಯವಾಗುವುದು. ಕೊಲ್ಲುವುದಕ್ಕೆ ಹೆದರುವುದಿಲ್ಲ. ಕೊಳ್ಳೆಹೊಡೆಯುವುದರಿಂದ ಐಶ್ವರ್ಯ ಲಭಿಸುವುದು ! ಆಮೇಲೆ ವಿಷಯಾನಂದವನ್ನು ಅನುಭವಿಸುವೆವು", ಎಂಬ ಈ ಮಾತು ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವುದಕ್ಕಾಗಿಯೇ ಇದೆ, ಎಂದು ಹೇಳುವುದಿಲ್ಲವೇಕೆ ?

ಈ ಮೊದಲಾದ ವಿಪರೀತ ವ್ಯವಹಾರವನ್ನು ತಮ್ಮ ಸ್ವಾರ್ಥಕ್ಕಾಗಿ ನಡೆಯಿಸಿದ್ದಾರೆ ! [32]

## (ಶೈತಾನನ ಹಿಂದೆ ನಡೆಯಬೇಡಿ)

[33] ಮತ್ತೇನೆಂದರೆ—ಅಲ್ಲಾಹನು ಕಠೋರವಾದ ದುಃಖವನ್ನು ಕೊಡುವವನಾಗಿದ್ದಾನೆ. ಶೈತಾನನ ಹಿಂದೆ ನಡೆಯಬೇಡಿರಿ. ನಿಶ್ಚಯವಾಗಿ ಅವನು ನಿಮ್ಮ ಸಾಕ್ಷಾತ್ ಶತ್ರುವಾಗಿದ್ದಾನೆ.

---

*ಎಂದರೆ, ಮೂರ್ತಿಗಳನ್ನು ಒಡೆದು ಹಾಕುವ ಕರ್ಮದಿಂದ ದೂರ ಇರಬೇಕು, ಎಂದು ಅಭಿಪ್ರಾಯ.—ಯು.ಮೀ.

ಅವನು ಕೇಡಿನ ಮತ್ತು ನಿರ್ಲಜ್ಜತೆಯ ಆಜ್ಞೆಯನ್ನು ಕೊಡುವುದನ್ನು ಬಿಟ್ಟರೆ, ಮತ್ತು ನಿಮಗೆ ಗೊತ್ತಿಲ್ಲದುದನ್ನು ಅಲ್ಲಾಹನ ಬಗೆಗೆ ಆಡಿಸುವುದನ್ನುಳಿದರೆ, ಮತ್ತೆ ಏನನ್ನೂ ಮಾಡುವುದಿಲ್ಲ.

[ಕುರಾನ್:–ಮಂ. 1; ಸಿ. 2; ಸೂ. 2; ಆ. 165, 168, 169]

## (ಅನ್ಯಮತಸ್ಥ ಧರ್ಮಾತ್ಮರಿಗೂ ಖುದಾ ಕಷ್ಟಕೊಡುವನೇನು?)

ಸಮೀಕ್ಷಕ:—ಕಠೋರವಾದ ದುಃಖವನ್ನು ಕೊಡುವ ಖುದಾ ಪಾಪಿಗಳ, ಹಾಗೂ ಪುಣ್ಯಾತ್ಮರುಗಳ ವಿಷಯದಲ್ಲಿ ದಯಾಳುವಾಗಿದ್ದಾನೋ? ಅಥವಾ ಮುಸಲ್ಮಾನರ ಮೇಲೆ ದಯಾಳುವೂ, ಮತ್ತು ಅನ್ಯರ ಮೇಲೆ ದಯಾಹೀನನೂ ಆಗಿದ್ದಾನೋ? ಹೀಗೆ ಇರುವನಾದರೆ, ಅವನು ಈಶ್ವರನೇ ಆಗಲಾರನು!

ಮತ್ತು ಪಕ್ಷಪಾತಿಯಾಗಿರುವುದಿಲ್ಲವಾದರೆ, ಯಾವ ಮನುಷ್ಯನು ಎಲ್ಲಿಯಾದರೂ ಧರ್ಮವನ್ನಾಚರಿಸುವನೋ, ಅವನ ಬಗೆಗೆ ಈಶ್ವರನು ದಯಾಳುವೂ, ಮತ್ತು ಯಾವನು ಅಧರ್ಮವನ್ನು ಮಾಡುವನೋ, ಅವನನ್ನು ದಂಡಿಸುವವನೂ ಆಗಿರುವನು! ಎಂದ ಮೇಲೆ, ಮತ್ತೆ, ನಡುವೆ ಮುಹಮ್ಮದ್ ಸಾಹೇಬರನ್ನೂ ಮತ್ತು ಕುರಾನನ್ನೂ ಒಪ್ಪಿಕೊಳ್ಳುವುದು ಆವಶ್ಯಕವಾಗಲಿಲ್ಲ!

## (ಪಥಭ್ರಷ್ಟಕನಾದ ಶೈತಾನನನ್ನು ಸೃಜಿಸಿದನೇಕೆ?)

ಮತ್ತು ಎಲ್ಲರಿಗೂ ಕೆಡುಕನ್ನು ಮಾಡುವ, ಮಾನವಮಾತ್ರರ ಶತ್ರುವಾದ ಶೈತಾನನನ್ನು ಖುದಾ ಉತ್ಪನ್ನಮಾಡಿದನಾದರೂ ಏಕೆ? ಅವನು ಭವಿಷ್ಯತ್ತಿನ ಮಾತನ್ನು ತಿಳಿದಿರಲಿಲ್ಲವೇನು?

"ತಿಳಿಯುತ್ತಲೇನೋ ಇದ್ದನು. ಆದರೆ, ಪರೀಕ್ಷೆಗಾಗಿ ಸೃಜಿಸಿದನು.", ಎನ್ನುವಿರಾದರೆ, ಅದೂ ಕೂಡ, ಸರಿಯಾಗಲಾರದು! ಏಕೆಂದರೆ, ಪರೀಕ್ಷಿಸುವುದು ಅಲ್ಪಜ್ಞನ ಕಾರ್ಯವಾಗಿದೆ. ಸರ್ವಜ್ಞನಂತೂ ಸರ್ವಜೀವರ ಶುಭಾಶುಭ ಕರ್ಮಗಳನ್ನು ಸದಾ ಸರಿ-ಸರಿಯಾಗಿ ತಿಳಿದಿರುತ್ತಾನೆ.

ಮತ್ತು ಶೈತಾನನು ಸರ್ವರನ್ನೂ ಪಥಭ್ರಷ್ಟರನ್ನಾಗಿ ಮಾಡುತ್ತಾನೆಯಾದರೆ, ಶೈತಾನನನ್ನು ಯಾವನು ಪಥಭ್ರಷ್ಟನನ್ನಾಗಿ ಮಾಡಿದನು? ಶೈತಾನನು ತನ್ನಷ್ಟಕ್ಕೆ ತಾನೇ ಪಥಭ್ರಷ್ಟನಾಗುತ್ತಾನೆಯಾದರೆ, ಅನ್ಯರೂ ತಮ್ಮಷ್ಟಕ್ಕೆ ತಾವೇ ಪಥಭ್ರಷ್ಟರಾಗಬಲ್ಲರು! ನಡುವೆ ಶೈತಾನನಿಗೆ ಏನು ಕೆಲಸವಿದೆ?

ಮತ್ತು ಖುದಾ ಸ್ವತಃ ಶೈತಾನನನ್ನು ಪಥಭ್ರಷ್ಟನನ್ನಾಗಿ ಮಾಡಿದನಾದರೆ, ಖುದಾ ಶೈತಾನನಿಗೂ ಶೈತಾನನಾಗಿ ಉಳಿಯುವನು! ಇಂತಹ ಮಾತು ಈಶ್ವರನದಾಗಲಾರದು!

ಮತ್ತು ಯಾವನೇ ಆಗಲೀ, ಪಥಭ್ರಷ್ಟಕನಾಗುತ್ತಾನೆಯಾದರೆ, ಅವನು ದುಃಸಂಗ ಮತ್ತು ಅವಿದ್ಯೆಯಿಂದ ಭ್ರಾಂತನಾಗಿ, ಹಾಗೆ ಆಗುತ್ತಾನೆ, ಅಷ್ಟೇ! [33]

## (ಹೆಣ, ರಕ್ತ ಮತ್ತು ಹಂದಿಯ ಮಾಂಸ ವರ್ಜ್ಯ)

[34] ಶವ, ರಕ್ತ ಮತ್ತು ಹಂದಿಯ ಮಾಂಸ ಮತ್ತು ಯಾವುದರ ಮೇಲೆ ಅಲ್ಲಾಹನ ಹೊರತು, ಬೇರೇನಾದರೂ ಉಚ್ಚರಿಸಿರುತ್ತಾರೋ, ಆ ವಸ್ತು ನಿಮ್ಮ ಪಾಲಿಗೆ ವರ್ಜ್ಯ*ವಾಗಿದೆ.

[ಕುರಾನ್:-ಮಂ. 1; ಸಿ. 2; ಸೂ. 2; ಆ. 178]

## (ಮನುಷ್ಯನ ಮಾಂಸ ತಿನ್ನಲು ಸಾಧ್ಯವೋ?)

ಸಮೀಕ್ಷಕ:—ಈ ಸ್ಥಳದಲ್ಲಿ, ಯಾವುದಾದರೂ ಪ್ರಾಣಿಯು ತಾನೇ ಸತ್ತಿರಲೀ, ಅಥವಾ ಅನ್ಯರಿಂದ ಸಾಯಿಸಲ್ಪಡಲೀ; ಎರಡು ಸ್ಥಿತಿಯಲ್ಲಿಯೂ ಸಮಾನವೇ!†, ಎಂದು ನಿರ್ಧರಿಸಬೇಕು!

ಅಹುದು! ಇವುಗಳಲ್ಲಿ ಸ್ವಲ್ಪ ಭೇದವು ಇರುತ್ತದೆ. ಆದರೆ, ಮೃತಕತ್ವದಲ್ಲಿ ವ್ಯತ್ಯಾಸವೇನೂ ಇಲ್ಲ.

ಮತ್ತು ಹಂದಿಯ ಮಾಂಸವನ್ನು ನಿಷೇಧಿಸಿರುವುದರಿಂದ, ಮನುಷ್ಯನ ಮಾಂಸ-ಭಕ್ಷಣ ಉಚಿತವಾಗಿರುವುದೇನು ?

## (ಅನ್ಯಮತಸ್ಥರು ಈಶ್ವರನ ಪುತ್ರರಲ್ಲವೇ?)

ಪರಮೇಶ್ವರನ ಹೆಸರಿನಲ್ಲಿ, ಶತ್ರುಗಳೆನಿಸಿದವರೇ ಮೊದಲಾದವರಿಗೆ, ಅತಿ ದುಃಖವಿತ್ತು ಪ್ರಾಣಹತ್ಯೆ ಮಾಡುವುದು ಒಳ್ಳೆಯ ವಿಷಯವಾಗಲು ಶಕ್ಯವೇನು ? ಇದರಿಂದ ಈಶ್ವರನ ಹೆಸರು ಕಳಂಕಿತವಾಗಿ ಹೋಗುತ್ತದೆ ! ಅಲ್ಲಾ ! ಈಶ್ವರನು ಪೂರ್ವಜನ್ಮದ ಅಪರಾಧವಿಲ್ಲದೇ, ಮುಸಲ್ಮಾನರ ಕೈಯಿಂದ ದಾರುಣ ದುಃಖವನ್ನೇಕೆ ಕೊಡಿಸಿದನು? ಅವುಗಳ ಪಾಲಿಗೆ ದಯಾಳುವಲ್ಲವೇನು? ಅವನ್ನು ಮಕ್ಕಳಂತೆ ತಿಳಿದು ಕೊಳ್ಳುವುದಿಲ್ಲವೇನು?

## (ಉಪಕಾರೀ ಹಸು ಮೊದಲಾದುವನ್ನು ಕೊಲ್ಲುವುದು ಪಾಪ)

ಯಾವ ವಸ್ತುಗಳಿಂದ ಅಧಿಕ ಉಪಕಾರವಾಗುವುದೋ, ಅಂತಹ ಹಸುಗಳು ಮೊದಲಾದುವುಗಳ ಕೊಲೆಯ ನಿಷೇಧವನ್ನು ಮಾಡದಿರುವುದೆಂದರೆ, ಕೊಲೆಯನ್ನು

*ಇಲ್ಲಿ 'ಹರಾಮ್', ಎಂಬ ಪ್ರಯೋಗವಿದೆ. ಎಂದರೆ, ಅಪವಿತ್ರ, ಎಂದರ್ಥ—ಸಂ.

†ಶವವು ಶವವೇ, ಎಂದರ್ಥ.—ಅನು.

ಮಾಡಿಸಿ, ಖುದಾ ಜಗತ್ತಿಗೆ ಹಾನಿಕಾರಕನಾಗಿದ್ದಾನೆಂದೇ ತಿಳಿಯಿರಿ! [ಮತ್ತು ಅವನು] ಹಿಂಸೆಯೆಂಬ ಪಾಪದಿಂದ ಕಳಂಕಿತನೂ ಆಗಿ ಹೋಗುತ್ತಾನೆ!

ಇಂತಹ ಮಾತುಗಳು ಖುದಾನವು ಮತ್ತು ಖುದಾನ ಪುಸ್ತಕದವು ಎಂದಿಗೂ ಆಗಲಾರವು! [34]

## ('ರೋಜಾ'ದ ರಾತ್ರಿ 'ಇವು' ವಿಧಿಸಮ್ಮತ)

[35] 'ರೋಜಾ'*ದ ರಾತ್ರಿಯು ನಿಮಗಾಗಿ ಪವಿತ್ರೀಕರಿಸಲ್ಪಟ್ಟಿದೆ.† ನಿಮ್ಮ ಪತ್ನಿಯರೊಂದಿಗೆ ಮದನೋತ್ಸವವನ್ನಾಚರಿಸಿರಿ. ಅವರು ನಿಮಗೆ ಆಚ್ಛಾದನವಾಗಿದ್ದಾರೆ. ಮತ್ತು ನೀವು ಅವರಿಗಾಗಿ ಆಚ್ಛಾದನವಾಗಿದ್ದೀರಿ.

ಅಲ್ಲಾಹನು ನೀವು ಕಳ್ಳತನವನ್ನು, ಎಂದರೆ ವ್ಯಭಿಚಾರವನ್ನು ಮಾಡುತ್ತೀರಿ, ಎಂದು ತಿಳಿದನು. ಆಯಿತು! ಅಲ್ಲಾಹನು ನಿಮ್ಮನ್ನು ಕ್ಷಮಿಸಿದನು! ನೀವಂತೂ, ಅವರೊಂದಿಗೆ ಸೇರಿರಿ, ಸಾಕು! ಮತ್ತು ಯಾವುದನ್ನು ನಿಮಗಾಗಿ ಬರೆದು ಬಿಟ್ಟಿದ್ದಾನೋ, ಅದನ್ನು, ಎಂದರೆ ಸಂತತಿಯನ್ನು ಹುಡುಕಿರಿ.

ನಿಮಗೆ ಕರಿಯ ದಾರದಿಂದ ಬಿಳಿಯ ದಾರ ಬೇರೆ, ಎಂದು ಕಾಣುವವರೆಗೆ, ಅಥವಾ ರಾತ್ರಿಯಿಂದ ಮುಂಬೆಳಗು ಸ್ಫುಟವಾಗಿ ಗೋಚರಿಸುವವರೆಗೆ, ತಿನ್ನಿರಿ! ಕುಡಿಯಿರಿ!

[ಕುರಾನ್:-ಮಂ. 1; ಸಿ. 2; ಸೂ. 2; ಆ. 187]

## ('ರೋಜಾ' ಪೌರಾಣಿಕರ ಚಾಂದ್ರಾಯಣವ್ರತದ ವಿಕೃತರೂಪ)

**ಸಮೀಕ್ಷಕ:**—ಯಾವಾಗ ಮುಸಲ್ಮಾನರ ಮತ ಹೊರಟಿತೋ, ಆಗ, ಅಥವಾ ಅದಕ್ಕಿಂತ ಮೊದಲು, ಯಾವನೋ ಒಬ್ಬನು ಯಾವನೋ ಪೌರಾಣಿಕನನ್ನು—"ಮಾಸಪೂರ್ತಿ ನಡೆಯುವ **'ಚಾಂದ್ರಾಯಣವ್ರತ'**ದ ವಿಧಿ ಏನು?", ಎಂದು ಕೇಳಿರಬಹುದು!

ಈ ಶಾಸ್ತ್ರವಿಧಿಯಲ್ಲಿ ಎಂದರೆ ಚಂದ್ರಕಲೆಯ ಹ್ರಾಸ-ವಿಕಾಸವಾಗುವುದಕ್ಕನುಸಾರವಾಗಿ ಗ್ರಾಸವನ್ನು, ಕುಗ್ಗಿಸುವುದು-ಹಿಗ್ಗಿಸುವುದು, ಮತ್ತು ನಡುಹಗಲು ಊಟ ಮಾಡಬೇಕೆಂದೇನು ಬರೆದಿದಿಯೋ, ಅದನ್ನು ತಿಳಿದುಕೊಳ್ಳಲಾರದೇ, [ಅವನು] 'ಚಂದ್ರದರ್ಶನಮಾಡಿ ಭುಂಜಿಸಬೇಕು', ಎಂದು ಹೇಳಿರಬಹುದು! ಅದನ್ನು ಈ ಮುಸಲ್ಮಾನರು ಈ ರೀತಿಯಲ್ಲಿ ಮಾಡಿಕೊಂಡರು!

---

*ಉಪವಾಸದ.—ಸಂ.

†ಇಲ್ಲಿ 'ಹಲಾಲ್', ಎಂಬ ಪ್ರಯೋಗವಿದೆ. ಎಂದರೆ, ಪವಿತ್ರ, ಎಂದರ್ಥ—ಸಂ.

ವ್ರತದಲ್ಲಿ ಸ್ತ್ರೀ-ಸಮಾಗಮದ ತ್ಯಾಗವಿರುತ್ತದೆ ! ಆದರೆ, ಖುದಾ ಆ ಮಾತಿನ ಮೇಲೂ ಮುಂದೆ ಹೋಗಿ—

"ನೀವು ಸ್ತ್ರೀ-ಸಮಾಗಮವನ್ನೂ ಕೂಡ, ಮಾಡುತ್ತಾ ಹೋಗಿರಿ! ಮತ್ತು ರಾತ್ರಿಯಲ್ಲಿ, ಬೇಕಾದರೆ, ಅನೇಕ ಸಾರಿ ತಿನ್ನಿರಿ !", ಎಂದು ಹೇಳಿಬಿಟ್ಟನು.

ಅಲ್ಲಾ! ಈ ವ್ರತ ಆಯಿತಾದರೂ ಏನು? ಹಗಲಿನಲ್ಲಿ ತಿನ್ನಲಿಲ್ಲ! ರಾತ್ರಿ ತಿನ್ನುತ್ತಾ ಹೋದರು!

ಹಗಲಿನಲ್ಲಿ ತಿನ್ನದಿರುವುದು ಮತ್ತು ರಾತ್ರಿಯಲ್ಲಿ ತಿನ್ನುವುದು ಸೃಷ್ಟಿಕ್ರಮಕ್ಕೆ ವಿರುದ್ಧವಾಗಿರುತ್ತದೆ! [35]

## (ಎಲ್ಲಿ ಸಿಕ್ಕುವರೋ, ಅಲ್ಲಿ 'ಕಾಫಿರ'ರನ್ನು ಸಾಯಿಸಿಬಿಡಿ !)

**[36] ಯಾರು ನಿಮ್ಮೊಡನೆ ಹೋರಾಡುತ್ತಾರೋ, ಅವರೊಂದಿಗೆ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ.**

**ಎಲ್ಲಿ ಸಿಕ್ಕುವರೋ, ಅಲ್ಲಿ ನೀವು ಅವರನ್ನು ಸಾಯಿಸಿಬಿಡಿರಿ!**

**ಕೊಲೆಗಿಂತ ಕಾಫಿರತನ ಕೆಟ್ಟದು!***

**ಕಾಫಿರತನ ಧ್ವಂಸವಾಗುವವರೆಗೆ, ಮತ್ತು ಅಲ್ಲಾಹನ ಧರ್ಮ ನೆಲೆಗೊಳ್ಳುವವರೆಗೆ ಅವರೊಂದಿಗೆ ಕಾದಾಡಿರಿ.**

**ಅವರು ನಿಮ್ಮ ಮೇಲೆ ಎಷ್ಟು ಅತ್ಯಾಚಾರ ಮಾಡಿದರೋ, ಅವರ ಮೇಲೆ ನೀವೂ ಅಷ್ಟೇ ಅತ್ಯಾಚಾರ ಮಾಡಿರಿ.**

[ಕುರಾನ್:-ಮಂ. 1; ಸಿ. 2; ಸೂ. 2; ಆ. 190,191,193,194]

## (ಕುರಾನಿನ ಈ ಶಿಕ್ಷಣದಿಂದ ವಿರೋಧವೇ ಹೆಚ್ಚಿತು)

**ಸಮೀಕ್ಷಕ:—ಕುರಾನಿನಲ್ಲಿ ಇಂತಹ ಮಾತುಗಳಿಲ್ಲದೇ ಇದ್ದಿದ್ದರೆ, ಮುಸಲ್ಮಾನರು ಅನ್ಯಮತೀಯರ ಮೇಲೆ ಮಾಡಿರುವಷ್ಟು ದೊಡ್ಡ ಅಪರಾಧಗಳನ್ನು ಮಾಡುತ್ತಿರಲಿಲ್ಲ! ಮತ್ತು ನಿರಪರಾಧರನ್ನು ಕೊಲ್ಲುವುದು ಅವರ ದೊಡ್ಡ ಪಾಪವಾಗಿದೆ!**

ಮುಸಲ್ಮಾನರ ಮತವನ್ನು ಗ್ರಹಿಸದಿರುವುದನ್ನು **'ಕುಫ್ರ್'**,† ಎನ್ನುತ್ತಾರೆ, ಎಂದರೆ, **ಕಾಫಿರತನಕ್ಕಿಂತ ಕೊಲೆಯನ್ನು ಒಳ್ಳೆಯದೆಂದು ಮುಸಲ್ಮಾನರು ಅಂಗೀಕರಿಸುತ್ತಾರೆ!** ಎಂದರೆ,—

*ಇಲ್ಲಿ 'ಕತ್ಲ್ ಸೇ ಕುಫ್ರ್ ಬುರಾ ಹೈ', ಎಂಬ ಪ್ರಯೋಗವಿದೆ.—ಸಂ.

†ಕಾಫಿರತನ—ಅನು.

"ಯಾವನು ನಮ್ಮ ಮತವನ್ನು ಒಪ್ಪಿಕೊಳ್ಳುವುದಿಲ್ಲವೋ, ಅವನನ್ನು ನಾವು ಕೊಲ್ಲುವೆವು.", ಎನ್ನುತ್ತಾರೆ !

ಹಾಗೆಯೇ ಮಾಡುತ್ತಲೂ ಬಂದಿದ್ದಾರೆ ! ಮತಕ್ಕಾಗಿ ಕಾದಾಡುತ್ತಾ-ಕಾದಾಡುತ್ತಾ ತಾವೇ ರಾಜ್ಯ ಮೊದಲಾದುವುಗಳಿಂದ ಚ್ಯುತರಾಗಿ ಹೋದರು!

ಮತ್ತು ಅವರ ಮತ ಅನ್ಯಮತೀಯರ ಬಗೆಗೆ ಅತಿ ಕಠೋರವಾಗಿರುತ್ತದೆ !

ಕಳುವಿಗೆ ಮುಯ್ಯಿ ಕಳುವೇನು? ನಮಗೆ ಕಳ್ಳರೇ ಮೊದಲಾದವರು ಕಳ್ಳತನದ ಮೂಲಕ ಎಷ್ಟು ಅಪರಾಧಗಳನ್ನು ಮಾಡುವರೋ, ನಾವೂ ಕೂಡ, [ಅಷ್ಟೇ] ಕಳುವನ್ನು ಮಾಡಬೇಕೇನು? ಇದು ಸರ್ವಥಾ ಅನ್ಯಾಯದ ವರ್ತನೆಯಾಗಿದೆ ! ಯಾವನಾದರೂ ಅಜ್ಞಾನಿಯು ನಮ್ಮನ್ನು ಬೈದರೆ. ನಾವೂ ಕೂಡ, ಅವನನ್ನು ಬೈಯಬೇಕೇನು?

ಈ ವಚನವು ಈಶ್ವರನದಲ್ಲ ! ಮತ್ತು ಈಶ್ವರಭಕ್ತನಾದ ವಿದ್ವಾಂಸನದೂ ಅಲ್ಲ! ಹಾಗೂ ಈಶ್ವರೋಕ್ತವಾದ ಪುಸ್ತಕದ್ದಂತೂ ಆಗಲು ಶಕ್ಯವೇ ಇಲ್ಲ! ಇದು ಕೇವಲ ಸ್ವಾರ್ಥಿಗಳೂ, ಅಜ್ಞಾನಿಗಳೂ ಆದ ಮಾನವರದಾಗಿದೆ. [36]

### (ಇಸ್ಲಾಮಿನಲ್ಲಿ ಪ್ರವೇಶಿಸಿರಿ)

[37] ಅಲ್ಲಾಹನು ಕಲಹವನ್ನು ಸಖಿನನ್ನಾಗಿಟ್ಟುಕೊಳ್ಳನು.
ಓ ಮಾನವರೇ! ನಂಬಿಕೆ ಹೊಂದಿರುವಿರಾದರೆ, ಇಸ್ಲಾಮಿನಲ್ಲಿ ಪ್ರವೇಶಿಸಿರಿ.

[ಕುರಾನ್:-ಮಂ. 1; ಸಿ.2; ಸೂ. 2; ಆ. 205, 208]

### (ಖುದಾ ಕಲಹವನ್ನು ಒಪ್ಪದಿದ್ದರೆ, ಅದಕ್ಕಾಗಿ ಪ್ರೇರಿಸುತ್ತಾನೇಕೆ?)

**ಸಮೀಕ್ಷಕ:**—ಖುದಾ ಕಲಹವನ್ನು ಸಖ್ಯಭಾವದಿಂದ ನೋಡನಾದರೆ, ಮುಸಲ್ಮಾನರಿಗೆ ಜಗಳವಾಡಲು ತಾನೇ ಏಕೆ ಪ್ರೇರಣೆ ಕೊಡುತ್ತಾನೆ ? ಮತ್ತು ಜಗಳಗಂಟೀ ಮುಸಲ್ಮಾನರೊಂದಿಗೆ ಮೈತ್ರಿಯನ್ನೇಕೆ ಮಾಡಿಕೊಳ್ಳುತ್ತಾನೆ ?

ಮುಸಲ್ಮಾನ ಮತದಲ್ಲಿ ಸೇರುವುದರಿಂದಲೇ ಖುದಾ ಪ್ರಸನ್ನನಾಗುತ್ತಾನೇನು? ಹಾಗಾದರೆ, ಕೇವಲ ಮುಸಲ್ಮಾನರ ಪಕ್ಷಪಾತಿಯಾಗಿದ್ದಾನೆ; ಸಮಸ್ತ ಜಗತ್ತಿನ ಈಶ್ವರನಲ್ಲ!

ಈ ಕಾರಣದಿಂದ, ಇಲ್ಲಿ ಕುರಾನ್ ಈಶ್ವರಕೃತವಲ್ಲ ! ಮತ್ತು ಇದರಲ್ಲಿ ಹೇಳಲ್ಪಟ್ಟಿರುವ [ಈಶ್ವರನು] ಈಶ್ವರನೂ ಆಗಿರಲಾರನು, ಎಂದೇ ಸಿದ್ಧವಾಗುತ್ತದೆ. [37]

### (ಅನಂತ ಜೀವಿಕೆ)

[38] ಖುದಾ ಯಾವನನ್ನು ಬಯಸುವನೋ, ಅವನಿಗೆ ಅನಂತ ಜೀವಿಕೆಯನ್ನು ಕೊಡುವನು.

[ಕುರಾನ್:-ಮಂ. 1; ಸಿ. 2; ಸೂ. 2; ಆ. 212]

### (ಖುದಾನ ಮರ್ಜಿಯಿಂದಲೇ ಪದಾರ್ಥ ಸಿಕ್ಕರೆ, ಪರಿಶ್ರಮ ವ್ಯರ್ಥ)

ಸಮೀಕ್ಷಕ:—ಪಾಪ-ಪುಣ್ಯಗಳಿಲ್ಲದೇ, ಖುದಾ ಹೀಗೆಯೇ ಅನಂತ ಜೀವಿಕೆಯನ್ನು ಕೊಡುತ್ತಾನೇನು? ಮತ್ತೆ, ಒಳಿತು-ಕೆಡುಕುಗಳನ್ನು ಮಾಡುವುದು ಒಂದೇ ಸಮವಾಯಿತಲ್ಲ! ಏಕೆಂದರೆ, ಸುಖ-ದುಃಖಗಳ ಪ್ರಾಪ್ತಿಯಾಗುವುದು ಅವನ ಇಚ್ಛೆಯಿಂದಲೇ ಆಯಿತು. ಇದರಿಂದ, ಧರ್ಮಕ್ಕೆ ವಿಮುಖರಾಗಿ ಮುಸಲ್ಮಾನರು ತಮಗೆ ಇಷ್ಟ ಬಂದಂತೆ ಆಚರಣವನ್ನು ಮಾಡುತ್ತಾರೆ !

ಮತ್ತು ಒಬ್ಬೊಬ್ಬರು ಈ ವಚನದ ಮೇಲೆ ನಂಬಿಕೆಯಿಡದೇ, ಧರ್ಮಾತ್ಮರೂ ಆಗಿರುತ್ತಾರೆ! [38]

### (ರಜಸ್ವಲೆಯಿಂದ ದೂರ ಇರಿ; ಪತ್ನಿಯರು 'ಹೊಲ'ಗಳಾಗಿದ್ದಾರೆ!)

[39] ಪ್ರಶ್ನಿಸುತ್ತೇವೆ ನಿನ್ನನ್ನು. ರಜಸ್ವಲೆಯರಿಗೆ—'ಅವರು ಅಪವಿತ್ರರಾಗಿದ್ದಾರೆ', ಎಂದು ಹೇಳು. ದೂರವಿರಿ ಋತುಕಾಲದಲ್ಲಿ! ಎಂದಿನ ವರೆಗೆ ಅವರು ಪವಿತ್ರರಾಗುವುದಿಲ್ಲವೋ, ಅಂದಿನ ವರೆಗೆ ಅವರ ಹತ್ತಿರ ಹೋಗಬೇಡಿರಿ. ಅವರು ಮಿಂದು, ಮೈಲಿಗೆ ಕಳೆದುಕೊಂಡಾಗ ಅವರ ಬಳಿ ಆ ಎಡೆಯಿಂದ ಹೋಗಿರಿ. ಖುದಾ ಅಪ್ಪಣೆ ಕೊಟ್ಟಿದ್ದಾನೆ.

ನಿಮ್ಮ ಪತ್ನಿಯರು ನಿಮಗೆ ಹೊಲಗಳಾಗಿದ್ದಾರೆ. ಬಿಡಾರಹಾಕಿರಿ, ಹೇಗೆ ಬೇಕೋ ಹಾಗೆ, ನಿಮ್ಮ ಹೊಲದಲ್ಲಿ!

ನಿಮ್ಮನ್ನು ಅಲ್ಲಾಹನು ವ್ಯರ್ಥವಾದ ಶಪಥಗಳಲ್ಲಿ ಹಿಡಿಯುವುದಿಲ್ಲ.

[ಕುರಾನ್:-ಮಂ. 1; ಸಿ. 2; ಸೂ. 2; ಆ. 222, 223, 225]

### (ಸ್ತ್ರೀಯರನ್ನು ಹೊಲಗಳೆಂದು ಕರೆಯುವುದು ಸರಿಯಲ್ಲ)

ಸಮೀಕ್ಷಕ:—ರಜಸ್ವಲೆಯ ಸ್ಪರ್ಶದ, ಸಂಗದ ನಿಷೇಧದ ಉಲ್ಲೇಖ ಒಳ್ಳೆಯ ಮಾತಾಗಿದೆ.

ಆದರೆ, ಸ್ತ್ರೀಯರನ್ನು ಹೊಲಗಳಿಗೆ ಸಮವೆಂದು ಬರೆದಿರುವುದೂ, ಮತ್ತು ಹೇಗೆ ಯಾವ ರೀತಿಯಿಂದ ಬೇಕಾದರೂ 'ಹೋಗಿರಿ', ಎಂದು ಹೇಳಿರುವುದೂ ಮಾನವರನ್ನು ವಿಷಯಿಗಳನ್ನಾಗಿ ಮಾಡುವುದಕ್ಕೆ ಕಾರಣವಾಗಿದೆ!

ಖುದಾ ವ್ಯರ್ಥವಾದ ಶಪಥಗಳಲ್ಲಿ ಹಿಡಿಯುವುದಿಲ್ಲ, ಎಂದರೆ, ಎಲ್ಲರೂ ಸುಳ್ಳನ್ನಾಡುವರು! ಶಪಥಗಳನ್ನು ಮುರಿಯುವರು! ಇದರಿಂದ ಖುದಾ ಸುಳ್ಳಿನ ಪ್ರವರ್ತಕನಾಗುವನು! [39]

## (ಖುದಾ ಸಾಲವನ್ನು ಕೇಳುತ್ತಾನೆ)

[40] ಅಲ್ಲಾಹನಿಗೆ ಸಾಲ ಕೊಡುವ ಮಾನವನು ಅವನು ಯಾವನು? ಸರಿ. ಆಯಿತು! ಅಲ್ಲಾಹನು ಅದನ್ನು ದ್ವಿಗುಣಗೊಳಿಸುವನು ಅವನ ಸಲುವಾಗಿ.

[ಕುರಾನ್:-ಮಂ. 1; ಸಿ. 2; ಸೂ. 2; ಆ. 245]

## (ಖುದಾ ದಿವಾಳಿಯಾಗಿಬಿಟ್ಟಿದ್ದನೇನು?)

**ಸಮೀಕ್ಷಕ:**—ಚೆನ್ನಾಯಿತು! ಖುದಾನಿಗೆ ಸಾಲ ತೆಗೆದುಕೊಳ್ಳುವ* ಪ್ರಯೋಜನ ಏನಿದೆ? ಯಾವನು ಸಮಸ್ತ ಜಗತ್ತನ್ನೂ ಸೃಜಿಸಿದನೋ, ಅವನು ಮಾನವನಿಂದ ಸಾಲ ತೆಗೆದುಕೊಳ್ಳುತ್ತಾನೇನು? ಎಂದಿಗೂ ಇಲ್ಲ! ತಿಳುವಳಿಕೆ ಇಲ್ಲದೇ, ಹೀಗೆ ಏನೇನೋ ಹೇಳಲ್ಪಡಬಹುದು!

ಅವನ ಖಜಾನೆಯು ಖಾಲಿಯಾಗಿ ಹೋಗಿದ್ದಿತೇನು? ಸಾಲವೆತ್ತಲಾರಂಭಿಸಲು ಅವನು ಹುಂಡಿ-ಸಟ್ಟಾ-ವ್ಯಾಪಾರ ಮೊದಲಾದುವುದಕ್ಕೇನಾದರೂ ಕೈಹಾಕಿ, ನಷ್ಟಕ್ಕೀಡಾಗಿದ್ದನೇನು?

ಅಲ್ಲದೇ, ಒಂದಕ್ಕೆ ಎರಡು ಪಟ್ಟು ಕೊಡಲು ಬೇರೆ ಒಪ್ಪಿಕೊಳ್ಳುತ್ತಾನಲ್ಲ! ಇದು ಸಾಹುಕಾರನ ಕೆಲಸವೇನು? ಆದರೆ, ಇಂತಹ ಕೆಲಸವನ್ನು ದಿವಾಳಿಯೆದ್ದವರು, ಅಥವಾ ದುಂದುವೆಚ್ಚ ಮಾಡುವವರು, ಮತ್ತು ಆದಾಯ ಕಡಿಮೆ ಇರುವವರು ಮಾಡಬೇಕಾಗುತ್ತದೆ. [ಆ ಸ್ಥಿತಿ] ಈಶ್ವರನಿಗೆಂದೂ ಬಾರದು! [40]

---

*ಇದೇ ಆಯತ್ತಿನ ಭಾಷ್ಯದಲ್ಲಿ 'ತಫಸೀರ್ ಹುಸೇನೀ'ಯಲ್ಲಿ ಬರೆಯಲಾಗಿದೆಯೇನೆಂದರೆ—

"ಒಬ್ಬ ಮನುಷ್ಯನು ಮುಹಮ್ಮದ ಸಾಹೇಬರ ಬಳಿಗೆ ಬಂದನು. ಅವನು—'ಓ ರಸೂಲಲ್ಲಾಹ! ಖುದಾ ಸಾಲವನ್ನೇತಕ್ಕೆ ಕೇಳುತ್ತಾನೆ?", ಎಂದು ಕೇಳಿದನು.

ಅವರು ಉತ್ತರ ಕೊಟ್ಟರು—'ನಿನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ', ಎಂದು.

ಅವನು—'ನೀವು ಜಾಮೀನು ತೆಗೆದುಕೊಂಡರೆ, ನಾನು ಕೊಡುತ್ತೇನೆ', ಎಂದು. ಹೇಳಿದನು.

ಮುಹಮ್ಮದ ಸಾಹೇಬರು ಅವನ ಜಾಮೀನನ್ನು ತೆಗೆದುಕೊಂಡುಬಿಟ್ಟರು."

ಖುದಾನ ಮೇಲೆ ಭರವಸೆ ಬರಲಿಲ್ಲ; ಅವನ ದೂತನ ಮೇಲೆ ಬಂದಿತು! — ದ.ಸ.

### (ಅಲ್ಲಾಹನು ಇಷ್ಟ ಬಂದಂತೆ ಮಾಡುತ್ತಾನೆ)

**[41]** **ಅವರಲ್ಲಿ ಯಾವನೂ ನಂಬಿಕೆಯನ್ನಿಡಲಿಲ್ಲ. ಮತ್ತು ಯಾವನೋ ಕಾಫಿರನಾದನು. ಅಲ್ಲಾಹನು ಬಯಸದಿದ್ದಲ್ಲಿ, ಹೋರಾಡುತ್ತಿರಲಿಲ್ಲ. ಅಲ್ಲಾಹನು ತನಗೆ ಇಷ್ಟ ಬಂದಂತೆ ಮಾಡುತ್ತಾನೆ.**

[ಕುರಾನ್:-ಮಂ. 1; ಸಿ. 3; ಸೂ. 2; ಆ. 253]

### (ಯುದ್ಧಗಳೆಲ್ಲಾ ಈಶ್ವರೇಚ್ಛೆಯಿಂದ ಆಗುತ್ತವೋ?)

**ಸಮೀಕ್ಷಕ:**—ನಡೆಯುವ ಯುದ್ಧಗಳಷ್ಟೂ ಈಶ್ವರೇಚ್ಛೆಯಿಂದಲೇ ಆಗುತ್ತವೆ ಏನು? ಅವನು ಅಧರ್ಮ ಮಾಡಬಯಸುತ್ತಾನಾದರೆ, ಮಾಡಬಲ್ಲನೇನು? ಸ್ಥಿತಿ ಹೀಗಿದ್ದಲ್ಲಿ ಅವನು ಖುದಾನೇ ಅಲ್ಲ! ಏಕೆಂದರೆ, **ಶಾಂತಿಭಂಗಮಾಡಿ, ಯುದ್ಧಮಾಡಿಸುವುದು, ಉತ್ತಮವಾದ ಮಾನವನ ಕರ್ಮವಲ್ಲ!** ಇದರಿಂದ, ಈ ಕುರಾನ್ ಈಶ್ವರ ರಚಿತವೂ ಅಲ್ಲ. ಮತ್ತು **ಯಾವ ಧಾರ್ಮಿಕನಾದ ಪುರುಷನ ರಚನೆಯೂ ಅಲ್ಲ, ಎಂದು ವಿದಿತವಾಗುತ್ತದೆ!** [41]

### (ಸೃಷ್ಟಿಯ ಪದಾರ್ಥಗಳೆಲ್ಲವೂ ಖುದಾಗೆ ಮಾತ್ರ)

**[42]** **ಅವನ ಇಚ್ಛೆಯಂತೆ, ಆಕಾಶದಲ್ಲಿ ಮತ್ತು ಪೃಥಿವಿಯ ಮೇಲೆ ಏನೇನಿದೆಯೋ, ಅದೆಲ್ಲವೂ ಅವನಿಗಾಗಿಯೇ ಇದೆ. ಅವನ ಕುರ್ಚಿಯು ಆಕಾಶ ಮತ್ತು ಪೃಥಿವಿಯನ್ನು ವ್ಯಾಪಿಸಿಕೊಂಡಿದೆ.**

[ಕುರಾನ್:-ಮಂ. 1; ಸಿ. 3; ಸೂ. 2; ಆ. 255]

### (ಸೃಷ್ಟಿಯ ಪದಾರ್ಥಗಳೆಲ್ಲವೂ ಜೀವರಿಗಾಗಿವೆ)

**ಆಕಾಶದಲ್ಲಿ, ಹಾಗೂ ಭೂಮಿಯ ಮೇಲೆ ಇರುವ ಪದಾರ್ಥಗಳನ್ನೆಲ್ಲವನ್ನೂ, ಜೀವರಿಗಾಗಿ ಪರಮಾತ್ಮನು ಉತ್ಪನ್ನಮಾಡಿದ್ದಾನೆ; ತನಗಾಗಿ ಅಲ್ಲ! ಏಕೆಂದರೆ, ಅವನು ಪೂರ್ಣಕಾಮನಾಗಿದ್ದಾನೆ!** ಅವನಿಗೆ ಯಾವುದೇ ಪದಾರ್ಥದ ಅಪೇಕ್ಷೆಯೂ ಇಲ್ಲ!

ಅವನಿಗೆ ಕುರ್ಚಿ ಇರುವುದಾದರೆ, ಅವನು ಏಕದೇಶೀಯನಾಗಿರಬೇಕಾದೀತು !

ಯಾವನು ಏಕದೇಶೀಯನಾಗಿರುತ್ತಾನೋ, ಅವನು **ಈಶ್ವರನೆನಿಸಿಕೊಳ್ಳುವುದಿಲ್ಲ!** ಏಕೆಂದರೆ, ಈಶ್ವರನಾದರೋ ವ್ಯಾಪಕನಾಗಿದ್ದಾನೆ. [42]

### (ಖುದಾ ಪಾಪಿಗಳಿಗೆ ಮಾರ್ಗ ತೋರಿಸುವುದಿಲ್ಲ)

**[43]** **ಅಲ್ಲಾಹನು ಸೂರ್ಯನನ್ನು ಪೂರ್ವದಿಂದ ತರುತ್ತಾನೆ. ಸರಿ ! ನೀನು ಪಶ್ಚಿಮದಿಂದ ಕರೆದು ತಾ ! ಆಯಿತು ! ಕಾಫಿರನಾಗಿದ್ದವನು**

ದಿಗ್ಭ್ರಾಂತನಾಗಿದ್ದನು. ನಿಶ್ಚಯವಾಗಿ ಅಲ್ಲಾಹನು ಪಾಪಿಗಳಿಗೆ ಮಾರ್ಗವನ್ನು ತೋರಿಸುವುದಿಲ್ಲ.

[ಕುರಾನ್:-ಮಂ. 1; ಸಿ. 3; ಸೂ. 2; ಆ. 258]

ಸಮೀಕ್ಷಕ:—ಈಗ ನೋಡಿರಿ. ಈ ಅವಿದ್ಯೆಯ ಮಾತನ್ನು! ಸೂರ್ಯನು ಪೂರ್ವದಿಂದ ಪಶ್ಚಿಮಕ್ಕೂ; ಮತ್ತು ಪಶ್ಚಿಮದಿಂದ ಪೂರ್ವಕ್ಕೂ ಎಂದಿಗೂ ಬರುವುದಿಲ್ಲ-ಹೋಗುವುದಿಲ್ಲ! ಅವನಂತೂ ತನ್ನ ಪರಿಧಿಯಲ್ಲಿ ತಿರುಗುತ್ತಾ ಇರುತ್ತಾನೆ!

ಇದರಿಂದ, ಕುರಾನಿನ ಲೇಖಕನಿಗೆ ಖಗೋಳ ವಿದ್ಯೆಯೂ ಬರುತ್ತಿರಲಿಲ್ಲ; ಮತ್ತು ಭೂಗೋಳ ವಿದ್ಯೆಯೂ ಬರುತ್ತಿರಲಿಲ್ಲ. ಎಂದು ನಿಶ್ಚಯವಾಗಿ ತಿಳಿಯಲ್ಪಡುತ್ತದೆ!

## (ಪಾಪಿಗಳಿಗೇನೇ ಮಾರ್ಗದರ್ಶನದ ಆವಶ್ಯಕತೆ ಇದೆ)

ಪಾಪಿಗಳಿಗೆ ಮಾರ್ಗವನ್ನು ತೋರಿಸುವುದಿಲ್ಲವಾದರೆ, ಪುಣ್ಯಾತ್ಮರುಗಳಿಗಂತೂ ಮುಸಲ್ಮಾನರ ಖುದಾನ ಆವಶ್ಯಕತೆ ಇಲ್ಲ! ಏಕೆಂದರೆ, ಧರ್ಮಾತ್ಮರಂತೂ ಧರ್ಮಮಾರ್ಗದಲ್ಲಿಯೇ ಇರುತ್ತಾರೆ! ಮಾರ್ಗವನ್ನಂತೂ ಧರ್ಮದಿಂದ ಭ್ರಷ್ಟರಾದ ಮನುಷ್ಯರಿಗಾಗಿಯೇ ತಾನೇ ತೋರಿಸಬೇಕಾಗುವುದು ? ಆದುದರಿಂದ, ಕರ್ತವ್ಯವನ್ನು ಮಾಡದಿರುವುದರಿಂದ, ಕುರಾನಿನ ಕರ್ತೃವಿಗೆ ದೊಡ್ಡ ದೋಷ ತಟ್ಟುತ್ತದೆ. [43]

## (ಖುದಾನ ಜಾದೂಗರೀ)

[44] ಹೇಳಿದನು—'ನಾಲ್ಕು ಪ್ರಾಣಿಗಳಲ್ಲಿಂದ ಆರಿಸಿಕೋ. ಅವುಗಳ ಲಕ್ಷಣವನ್ನು ಗುರುತಿಟ್ಟುಕೋ. ಮತ್ತು ಪ್ರತಿಯೊಂದು ಪರ್ವತದ ಮೇಲೆಯೂ ಅವುಗಳಲ್ಲಿಂದ ಒಂದೊಂದು ತುಂಡನ್ನು ಇಟ್ಟುಬಿಡು. ಮತ್ತೆ, ಅವುಗಳನ್ನು ಕರೆ! ಓಡುತ್ತಾ ನಿನ್ನ ಹತ್ತಿರ ಹೊರಟು ಬರುವುವು.'

[ಕುರಾನ್:-ಮಂ. 1; ಸಿ. 3; ಸೂ. 2; ಆ. 260]

## (ಇಂತಹ ಆಟಗಳಿಂದಲೇ ಏನು, ಖುದಾನ ಖುದಾತ್ವ?)

ಸಮೀಕ್ಷಕ:—ಭೇಷ್! ಭೇಷ್!! ನೋಡಿ ಸ್ವಾಮಿ! ಮುಸಲ್ಮಾನರ ಖುದಾ ಐಂದ್ರಜಾಲಿಕನಂತೆ ಆಟವಾಡುತ್ತಿದ್ದಾನೆ! ಇಂತಹ ಮಾತುಗಳಿಂದಲೇ ಖುದಾನ ಖುದಾತ್ವ ಸಿದ್ಧಿಸುತ್ತದೆಯೇನು?

ಬುದ್ಧಿಶಾಲಿಗಳಾದ ಜನರು ಇಂತಹ ಖುದಾನಿಗೆ ತಿಲಾಂಜಲಿಯಿತ್ತು, ದೂರ ವಿರುವರು! ಮತ್ತು ಮೂರ್ಖ ಜನರು ಸಿಕ್ಕಿಹಾಕಿಕೊಳ್ಳುವರು! ಇದರಿಂದ, ಖುದಾನ ಹಿರಿಮೆ ವ್ಯಕ್ತವಾಗುವ ಬದಲು, ಕಿರಿಮೆಯೇ ಗಂಟು ಬೀಳುತ್ತದೆ. [44]

## (ಇಷ್ಟ ಬಂದವರಿಗೆ ನೀತಿ ಕೊಡುವುದು ಈಶ್ವರನ ಕೆಲಸವಲ್ಲ)

**[45] ಯಾವನನ್ನು ಬಯಸುತ್ತಾನೋ, ಅವನಿಗೆ ನೀತಿಯನ್ನು ಕೊಡುತ್ತಾನೆ.** [ಕುರಾನ್:-ಮಂ. 1; ಸಿ. 8; ಸೂ. 2; ಆ. 269]

**ಸಮೀಕ್ಷಕ:**—ಯಾವನನ್ನು ಬಯಸುತ್ತಾನೋ, ಅವನಿಗೆ ನೀತಿಯನ್ನು ಕೊಡುತ್ತಾನೆಯಾದರೆ, ಯಾವನನ್ನು ಬಯಸುವುದಿಲ್ಲವೋ, ಅವನಿಗೆ ಅನೀತಿಯನ್ನು ಕೊಡುತ್ತಿರಬಹುದು! ಈ ವಿಷಯ ಈಶ್ವರತ್ವವಲ್ಲ! ಆದರೆ, **ಯಾವನು ಪಕ್ಷಪಾತವನ್ನು ಬಿಟ್ಟು, ಎಲ್ಲರಿಗೂ ನೀತಿಯ ಉಪದೇಶವನ್ನು ಮಾಡುತ್ತಾನೋ, ಅವನೇ ಈಶ್ವರನೂ ಮತ್ತು ಆಪ್ತನೂ ಆಗಬಲ್ಲನು; ಬೇರೆಯವನಲ್ಲ!** [45]

## (ಬಡ್ಡಿಖೋರರು ಸದಾ ಗೋರಿಯಲ್ಲಿರುವರೇನು?)

**[46] ಯಾರು ಬಡ್ಡಿ ತಿನ್ನುತ್ತಾರೋ, ಅವರು ಗೋರಿಗಳಿಂದ ಮೇಲೇಳುವುದಿಲ್ಲ.**

[ಕುರಾನ್:-ಮಂ. 1; ಸಿ. 8; ಸೂ. 2; ಆ. 275]

**ಸಮೀಕ್ಷಕ:**—ಅವರು ಗೋರಿಗಳಲ್ಲೇ ಬಿದ್ದಿರುವರೇನು? ಮತ್ತು, ಬಿದ್ದಿರುವವರಾದರೆ, ಎಂದಿನ ತನಕ? ಇಂತಹ ಅಸಂಭವದ ಮಾತುಗಳು ಈಶ್ವರನ ಪುಸ್ತಕದವಂತೂ ಆಗಲಾರವು. ಆದರೆ, ಬಾಲಬುದ್ಧಿಯವರದಂತೂ ಆಗಬಹುದು! [46]

## (ಖುದಾನ ಇಚ್ಛೆಯಂತೆ ಕ್ಷಮೆ ಮತ್ತು ದಂಡ)

**[47] ಯಾವನನ್ನು ಇಚ್ಛಿಸುವನೋ, ಅವನನ್ನು ಕ್ಷಮಿಸುವನು. ಯಾವನನ್ನು [ದಂಡಿಸ]ಬಯಸುವನೋ, ಅವನಿಗೆ ಶಿಕ್ಷೆಯನ್ನು ಕೊಡುವನು. ಏಕೆಂದರೆ, ಅವನು ಎಲ್ಲ ವಸ್ತುಗಳಿಗಿಂತ ಬಲಶಾಲಿಯಾಗಿದ್ದಾನೆ.**

[ಕುರಾನ್:-ಮಂ. 1; ಸಿ. 8; ಸೂ. 2; ಆ. 284]

## (ಯಥಾಯೋಗ್ಯ ನ್ಯಾಯ ಮಾಡದಿದ್ದರೆ, ಖುದಾ ಸ್ವಯಂ ಪಾಪಿಯಾಗುವನು)

**ಸಮೀಕ್ಷಕ:**—ಕ್ಷಮಾಯೋಗ್ಯನಾದವನನ್ನು ಕ್ಷಮಿಸದಿರುವುದು. ಅಯೋಗ್ಯನನ್ನು ಕ್ಷಮಿಸುವುದು ಐಲು **ದೊರೆಯವರಂತಹ*** ಕರ್ಮವಲ್ಲವೇನು? ಈಶ್ವರನು ಯಾವನನ್ನು ಅಪೇಕ್ಷಿಸುತ್ತಾನೋ, ಅವನನ್ನು ಪಾಪಿಯನ್ನಾಗಿ, ಅಥವಾ ಪುಣ್ಯಾತ್ಮನನ್ನಾಗಿ ಮಾಡುತ್ತಾನೆಯಾದರೆ, ಜೀವನಿಗೆ ಪಾಪ–ಪುಣ್ಯ ತಗಲಲೇಬಾರದು!

---

*ಐಲು ದೊರೆಯ ಕತೆಯನ್ನು ಗ್ರಂಥಕರ್ತರು ತಮ್ಮ 'ವ್ಯವಹಾರಭಾನು', ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. —ಯು.ಮೀ.

ಈಶ್ವರನು ಅವನನ್ನು ಹಾಗೆಯೇ ಮಾಡಿದನಾದರೆ, ಜೀವನಿಗೆ ಸುಖ-ದುಃಖ ಗಳೂ ಉಂಟಾಗಬಾರದು. ಹೇಗೆ ಸೇನಾಪತಿಯ ಆಜ್ಞೆಯಂತೆ ಯಾವನಾದರೂ ಭೃತ್ಯನು ಯಾವನನ್ನಾದರೂ ಸಂಹರಿಸಿದರೆ, ಅಥವಾ ರಕ್ಷಿಸಿದರೆ, ಅದಕ್ಕೆ ಅವನು ಹೊಣೆಗಾರನಾಗುವುದಿಲ್ಲವೋ, ಹಾಗೆಯೇ ಅವರೂ ಕೂಡ, [ಫಲಭೋಕ್ತೃಗಳು] ಆಗುವುದಿಲ್ಲ! [47]

## (ಮುಸಲ್ಮಾನರ ಸ್ವರ್ಗ; ಕಾಲುವೆ, ಬೀಬಿಗಳು, ಸೇವಕರು!)

**[48] ಇದಕ್ಕಿಂತ ಒಳ್ಳೆಯ ಯಾವ ಸಮಾಚಾರವನ್ನು ನಿಷ್ಠಾವಂತರಿಗೆ ಕೊಡಲಿ? ಹೇಳು! ಎಂದರೆ—**

**ಯಾವವುಗಳಲ್ಲಿ ಕಾಲುವೆಗಳು ಹರಿಯುತ್ತವೋ, ಅಂತಹ ಸ್ವರ್ಗಗಳು ಅಲ್ಲಾಹನ ಕಡೆಯಿಂದ ಸಿಕ್ಕುತ್ತವೆ! ಅವುಗಳಲ್ಲಿಯೇ ಸರ್ವದಾ ಇರುವ ಶುದ್ಧರಾದ 'ಬೀಬಿ' ಗಳು ಅಲ್ಲಾಹನ ಪ್ರಸನ್ನತೆಯಿಂದ ಇರುವರು. ಅಲ್ಲಾಹನು ಅವರನ್ನು ಸೇವಕರೊಂದಿಗೆ ನೋಡುವವನಾಗಿದ್ದಾನೆ!**

**[ಕುರಾನ್:-ಮಂ. 1; ಸಿ. 3; ಸೂ. 3; ಆ. 14]**

## (ಇದು ಸ್ವರ್ಗವೋ? ಅಥವಾ ವೇಶ್ಯಾವಾಟಿಕೆಯೋ?)

**ಸಮೀಕ್ಷಕ:**—ಅಲ್ಲಾ! ಇದು ಸ್ವರ್ಗವೋ, ಅಥವಾ ವೇಶ್ಯಾವಾಟಿಕೆಯೋ? ಇವನನ್ನು ಈಶ್ವರನೆನ್ನಬೇಕೋ ಅಥವಾ ಸ್ತ್ರೈಣನೆನ್ನಬೇಕೋ? ಯಾವುದರಲ್ಲಿ ಇಂತಹ ಮಾತುಗಳಿರುತ್ತವೋ, ಅದನ್ನು ಈಶ್ವರರಚಿತವಾದುದೆಂದು ಯಾವನಾದರೂ ಬುದ್ಧಿ ಶಾಲಿಯು ಅಂಗೀಕರಿಸಬಲ್ಲನೇನು?

ಈ ಪಕ್ಷಪಾತವನ್ನೇಕೆ ಮಾಡುತ್ತಾನೆ? ಯಾವ ಬೀಬಿಗಳು* ಸದಾ ಸ್ವರ್ಗದಲ್ಲಿರುತ್ತಾರೋ, ಅವರು ಇಲ್ಲಿ ಜನ್ಮವೆತ್ತಿ ಅಲ್ಲಿಗೆ ಹೋಗಿದ್ದಾರೋ, ಅಥವಾ ಅಲ್ಲಿಯೇ ಉತ್ಪನ್ನರಾಗಿದ್ದಾರೋ? ಇಲ್ಲಿ ಜನ್ಮವೆತ್ತಿ ಅಲ್ಲಿಗೆ ಹೋಗಿರುವರಾದರೆ, ಮತ್ತು ಕಯಾಮತ್ತಿನ ರಾತ್ರಿಗೆ ಮೊದಲೇ ಅಲ್ಲಿಗೆ ಬೀಬಿಗಳನ್ನು ಕರೆಯಿಸಿಕೊಂಡು ಬಿಟ್ಟಿದ್ದರೆ, ಅವರುಗಳ ಗಂಡಂದಿರನ್ನೇಕೆ ಕರೆಯಿಸಿಕೊಳ್ಳಲಿಲ್ಲ? ಮತ್ತು ಕಯಾಮತ್ತಿನ ರಾತ್ರಿಯಲ್ಲಿ ಎಲ್ಲರ ನ್ಯಾಯವೂ ತೀರ್ಮಾನಿಸಲ್ಪಡುವುದು, ಎಂಬ ನಿಯಮವನ್ನೇಕೆ ಮುರಿದನು?

ಅಲ್ಲಿಯೇ ಹುಟ್ಟಿದವರಾಗಿದ್ದರೆ, ಕಯಾಮತ್ತಿನವರೆಗೆ ಅವರು ಹೇಗೆ ನಿರ್ವಾಹ ಮಾಡುತ್ತಾರೆ? ಅವರುಗಳಿಗೆ ಪುರುಷರುಗಳೂ ಇದ್ದಾರೆಯಾದರೆ, ಇಲ್ಲಿಂದ ಸ್ವರ್ಗಕ್ಕೆ

---

***'ಬೀಬೀ', ಎಂದರೆ ಹೆಂಡತಿ—ಸಂ.**

ಕರೆದೊಯ್ಯಲ್ಪಡುವ ಮುಸಲ್ಮಾನರಿಗೆ ಖುದಾ ಬೀಬಿಗಳನ್ನು ಎಲ್ಲಿನಿಂದ ಒದಗಿಸುವನು?

ಮತ್ತು ಬೀಬಿಗಳನ್ನು ಸ್ವರ್ಗದಲ್ಲಿ ಸದಾ ಇರುವಂತೆ ಹೇಗೆ ಮಾಡಿದನೋ, ಹಾಗೆ ಗಂಡಂದಿರನ್ನು ಅಲ್ಲಿ ಸದಾ ಇರುವಂತೆ ಏಕೆ ಮಾಡಲಿಲ್ಲ? ಆದುದರಿಂದ, ಮುಸಲ್ಮಾನರ ಖುದಾ ಅನ್ಯಾಯಕಾರಿ ಮತ್ತು ತಿಳಿಗೇಡಿಯಾಗಿದ್ದಾನೆ! [48]

## (ಇಸ್ಲಾಂಗೆ ಮೊದಲು ಯಾವ ಈಶ್ವರೀಯ ಮತವೂ ಇರಲಿಲ್ಲವೇ?)

[49] ನಿಶ್ಚಯವಾಗಿ ಅಲ್ಲಾಹನ ಕಡೆಯಿಂದ ಇಸ್ಲಾಂ ಧರ್ಮವಿದೆ.

[ಕುರಾನ್:-ಮಂ. 1; ಸಿ. 3; ಸೂ. 3; ಆ. 18]

**ಸಮೀಕ್ಷಕ:**—ಅಲ್ಲಾಹನು ಮುಸಲ್ಮಾನರಿಗೆ ಮಾತ್ರವಿದ್ದಾನೆಯೋ? ಬೇರೆಯವರಿಗೆ ಇಲ್ಲವೇ? ಸಾವಿರದ ಮುನ್ನೂರು ವರ್ಷಗಳಿಗಿಂತ ಮುಂಚೆ, ಈಶ್ವರೀಯ ಮತವು ಇದ್ದೇ ಇರಲಿಲ್ಲವೇನು?

ಇದೇ ಕಾರಣದಿಂದ, ಈ ಕುರಾನ್ ಈಶ್ವರನು ರಚಿಸಿದುದಂತೂ ಅಲ್ಲ. ಆದರೆ, ಯಾವನೋ ಪಕ್ಷಪಾತಿಯು ರಚಿಸಿದುದಾಗಿದೆ, ಎಂದು ತೋರುತ್ತದೆ. [49]

## (ಖುದಾನ ಮರ್ಜಿಯಂತೆ ನ್ಯಾಯ)

[50] ಯಾವ ಯಾವ ಜೀವನು ಏನೇನನ್ನು ಸಂಪಾದಿಸಿದನೋ, ಅವನವನಿಗೆ ಅದು ಪೂರ್ತಿಯಾಗಿ ಕೊಡಲ್ಪಡುವುದು. ಮತ್ತು ಅವರಿಗೆ ಅನ್ಯಾಯ ಮಾಡಲ್ಪಡುವುದಿಲ್ಲ. ಹೇಳು—

"ಓ ಅಲ್ಲಾಹ್! ನೀನೇ ದೇಶದ ಸ್ವಾಮಿಯಾಗಿದ್ದೀಯೆ. ಯಾವನನ್ನು ಬಯಸುವೆಯೋ, ಅವನಿಗೆ ಕೊಡುತ್ತೀಯೆ. ಯಾವನಿಂದ ಬೇಕೋ, ಅವನಿಂದ ಕಿತ್ತುಕೊಳ್ಳುವೆ. ಬೇಕಾದವನಿಗೆ ಪ್ರತಿಷ್ಠೆಯನ್ನು ಕೊಡುತ್ತೀಯೆ. ಬೇಕಾದವನಿಗೆ ಅಗೌರವವನ್ನೂ ಉಂಟುಮಾಡುವೆ. ಎಲ್ಲವೂ ನಿನ್ನ ಕೈಯಲ್ಲಿಯೇ ಇದೆ. ಸರ್ವ ವಸ್ತುಗಳಿಗಿಂತಲೂ ನೀನೇ ಬಲಶಾಲಿಯಾಗಿರುವೆ.

"ರಾತ್ರಿಯಲ್ಲಿ ಹಗಲನ್ನೂ, ಹಗಲಿನಲ್ಲಿ ರಾತ್ರಿಯನ್ನೂ ಅಳವಡಿಸುತ್ತೀಯೆ. ಮತ್ತು ಸತ್ತವನನ್ನು ಜೀವಿತನಿಂದಲೂ, ಮತ್ತು ಜೀವಿತನನ್ನು ಸತ್ತವನಿಂದಲೂ ಹೊರ ತರುತ್ತೀಯೆ. ಮತ್ತು ಬೇಕಾದವನಿಗೆ ಅನಂತ ಭೋಜನವನ್ನು ಕೊಡುತ್ತೀಯೆ", ಎಂದು ಹೇಳು.

(‘ಕಾಫಿರ’ರನ್ನು ಮಿತ್ರನನ್ನಾಗಿ ಮಾಡಿಕೊಳ್ಳಬೇಡ)

‘ಮುಸಲ್ಮಾನರ ಹೊರತು, ಕಾಫಿರರನ್ನು ಮಿತ್ರನನ್ನಾಗಿ ಮಾಡಿಕೊಳ್ಳದಿರುವುದು ಮುಸಲ್ಮಾನರಿಗೆ ಉಚಿತವಾಗಿರುತ್ತದೆ. ಯಾವನಾದರೂ ಹೀಗೆ ಮಾಡಿದನಾದರೆ, ತೀರಿತು; ಅವನು ಅಲ್ಲಾಹನ ಕಡೆಯುವನಲ್ಲ!

ಹೇಳು! ನೀನು ಅಲ್ಲಾಹನನ್ನು ಬಯಸುವೆಯಾದರೆ, ನನ್ನ ಪಕ್ಷವನ್ನು ವಹಿಸು. ಅಲ್ಲಾಹನು ನಿನ್ನನ್ನು ಬಯಸುವನು. ಮತ್ತು ನಿನ್ನ ಪಾಪವನ್ನು ಕ್ಷಮಿಸುವನು. ನಿಜವಾಗಿ ಕರುಣಾಮಯನಾಗಿದ್ದಾನೆ.

[ಕುರಾನ್:-ಮಂ. 1; ಸಿ. 3· ಸೂ. 3; ಆ. 24-27,30]

(ಉತ್ತಮ ಕರ್ಮಗಳಿಲ್ಲದೇ ರಾಜ್ಯಕೊಡುವುದೂ ಅನ್ಯಾಯ)

**ಸಮೀಕ್ಷಕ:**—ಪ್ರತಿಯೊಬ್ಬ ಜೀವನಿಗೂ ಕರ್ಮಗಳ ಪೂರ್ಣ-ಪೂರ್ಣ ಫಲ ಕೊಡಲ್ಪಡುವುದಾದರೆ, ಕ್ಷಮೆ ಮಾಡಲ್ಪಡುವುದಿಲ್ಲ. ಮತ್ತು ಕ್ಷಮೆ ಮಾಡಲ್ಪಡುವುದಾದರೆ, ಪೂರ್ಣ ಫಲ ಕೊಡಲ್ಪಡುವುದಿಲ್ಲ. ಮತ್ತು ಅನ್ಯಾಯವಾಗುವುದು!

ಮತ್ತು ಉತ್ತಮ ಕರ್ಮಗಳಿಲ್ಲದೇ ರಾಜ್ಯವನ್ನು ಕೊಡುವವನಾದರೂ, ಕೂಡ, ಅನ್ಯಾಯಕಾರಿಯಾಗಿ ಹೋಗುವನು !

(ಅಸಂಭವವಾದ ಕೆಲಸಗಳನ್ನು ಈಶ್ವರನೂ ಮಾಡಲಾರ)

ಅಲ್ಲಾ! ಜೀವಿತನಿಂದ ಮೃತಕನೂ. ಮತ್ತು ಮೃತಕನಿಂದ ಜೀವಿತನೂ ಎಂದಾದರೂ ಆಗಬಲ್ಲನೇ? ಏಕೆಂದರೆ, ಈಶ್ವರನ ವ್ಯವಸ್ಥೆಯು ತುಂಡರಿಸಲು ಮತ್ತು ಮುರಿಯಲು ಆಗದುದಾಗಿದೆ! ಎಂದಿಗೂ ಅದಲು-ಬದಲು ಆಗಲಾರದು!

(ಮುಸಲ್ಮಾನರ ಬಗ್ಗೆ ಪಕ್ಷಪಾತ ಈಶ್ವರತ್ವದಿಂದ ಚ್ಯುತಿ)

ಮುಸಲ್ಮಾನರ ಮತದಲ್ಲಿಲ್ಲದವರನ್ನು **‘ಕಾಫಿರ’**ರೆಂದು ನಿರ್ಧರಿಸುವ ಪಕ್ಷಪಾತದ ಮಾತುಗಳನ್ನೀಗ ನೋಡಿರಿ! ‘ಅವರಲ್ಲಿ* ಶ್ರೇಷ್ಠರಾದವರೊಂದಿಗೂ ಮೈತ್ರಿಯನ್ನಿಟ್ಟುಕೊಳ್ಳಬಾರದು; ಮತ್ತು ಮುಸಲ್ಮಾನರಲ್ಲಿ ದುಷ್ಟರೊಂದಿಗೂ ಕೂಡ, ಮೈತ್ರಿಯನ್ನಿಟ್ಟುಕೊಳ್ಳಬೇಕು’†, ಎಂದು ಉಪದೇಶಿಸುವುದು ಈಶ್ವರನನ್ನು ಈಶ್ವರತ್ವದಿಂದ ಹೊರದೂಡುತ್ತದೆ.

---

*ಎಂದರೆ, ಮುಸಲ್ಮಾನರಲ್ಲದವರಲ್ಲಿ—ಸಂ.

†ಖಿಲಾಫತ್ ಆಂದೋಲನದ ಪ್ರವರ್ತಕರಾದ ಶೌಕತ್ ಅಲೀ-ಮುಹಮ್ಮದ್ ಅಲೀ ಬಂಧುಗಳಲ್ಲೊಬ್ಬರು—“ಅತ್ಯಂತ ನಿಕೃಷ್ಟ ಮುಸಲ್ಮಾನನೂ ಕೂಡ, ಮಹಾತ್ಮಾ ಗಾಂಧಿಗಿಂತ ಉತ್ತಮನು, ಎಂದು ಹೇಳಿದ್ದರಂತೆ.—ಸಂ.

ಆದುದರಿಂದ, ಈ ಕುರಾನ್, ಕುರಾನಿನ ಖುದಾ ಮತ್ತು ಮುಸಲ್ಮಾನರು ಗಳು ಕೇವಲ ಪಕ್ಷಪಾತದಿಂದ, ಅವಿದ್ಯೆಯಿಂದ ಪೂರ್ಣರಾಗಿದ್ದಾರೆ. ಇದೇ ಕಾರಣ ದಿಂದ, ಮುಸಲ್ಮಾನರು ಅಂಧಕಾರದಲ್ಲಿದ್ದಾರೆ !

ಮತ್ತೂ ನೋಡಿರಿ. ಮುಹಮ್ಮದ್ ಸಾಹೇಬರ ಲೀಲೆಯನ್ನು! ಎಂದರೆ—

"ನೀವು ನನ್ನ ಪಕ್ಷವನ್ನು ಸೇರುವಿರಾದರೆ, ಖುದಾ ನಿಮ್ಮ ಪಕ್ಷ ವಹಿಸುವನು."

"ಮತ್ತು ನೀವು ಪಕ್ಷಪಾತವೆಂಬ ಪಾಪವನ್ನು ಮಾಡುವಿರಾದರೆ, ಅದನ್ನೂ ಕೂಡ, ಕ್ಷಮಿಸುವನು !"

ಇವರಿಂದ, ಮುಹಮ್ಮದ್ ಸಾಹೇಬರ ಅಂತಃಕರಣ ಶುದ್ಧವಾಗಿರಲಿಲ್ಲವೆಂದು ಸಿದ್ಧವಾಗುತ್ತದೆ. ಇದೇ ಕಾರಣದಿಂದ, ತಮ್ಮ ಸ್ವಾರ್ಥಸಾಧನೆಗಾಗಿ ಮುಹಮ್ಮದ್ ಸಾಹೇಬರು ಕುರಾನನ್ನು ರಚಿಸಿದರು: ಅಥವಾ ಬರೆಯಿಸಿದರು, ಎಂದು ವಿದಿತ ವಾಗುತ್ತದೆ! [50]

## (ಅಲ್ಲಾಹನು ಮೇರಿಯನ್ನು ಬಯಸಿದನು)

[51] ದೇವದೂತರು—"ಓ ಮೇರೀ! ನಿನ್ನನ್ನು ಅಲ್ಲಾಹನು ಬಯಸಿದನು. ಮತ್ತು ಜಗತ್ತಿನ ನಾರಿಯರೆಲ್ಲರಿಗಿಂತ ನಿನ್ನನ್ನು ಹೆಚ್ಚು ಪವಿತ್ರಳನ್ನಾಗಿ ಮಾಡಿದನು", ಎಂದಾಗ.

[ಕುರಾನ್:-ಮಂ. 1; ಸಿ. 3; ಸೂ. 3; ಆ. 41]

## (ಈಗ ಖುದಾ ಮತ್ತು ದೇವದೂತರು ಮಾತನಾಡರೇಕೆ?)

ಸಮೀಕ್ಷಕ:—ಭಲೇ! ಈ ದಿನಗಳಲ್ಲಿ ಖುದಾನ ದೇವದೂತರು ಮತ್ತು ಖುದಾ ಯಾರ ಸಂಗಡವೂ ಮಾತನಾಡಲು ಬರುವುದಿಲ್ಲವಾದರೆ, ಮೊದಲು ಹೇಗೆ ಬಂದಿರ ಬಹುದು? 'ಮೊದಲಿನ ಮಾನವರು ಪುಣ್ಯಾತ್ಮರಾಗಿದ್ದರು; ಇಂದಿನವರು ಇಲ್ಲ,' ಎನ್ನುವಿರಾದರೆ, ಈ ಮಾತು ಸುಳ್ಳು! ಏಕೆಂದರೆ—

ಯಾವಾಗ ಕ್ರೈಸ್ತರ ಮತ್ತು ಮುಸಲ್ಮಾನರ ಮತ ಪ್ರಚಲಿತವಾಗಿದ್ದಿತೋ, ಆ ಕಾಲದಲ್ಲಿ ಆ ದೇಶಗಳಲ್ಲಿ ಕಾಡಾಡಿಗಳೂ, ಮತ್ತು ವಿದ್ಯಾಹೀನರೂ ಆದ ಮಾನವರು ಹೆಚ್ಚಾಗಿದ್ದರು. ಇದೇ ಕಾರಣದಿಂದ, ಇಂತಹ ವಿದ್ಯಾವಿರುದ್ಧವಾದ ಮತಗಳು ಪ್ರಚಲಿತವಾಗಿ ಹೋದುವು! ಈಗ ವಿದ್ವಾಂಸರು ಅಧಿಕವಾಗಿದ್ದಾರೆ. ಆದುದರಿಂದಲೇ, ಪ್ರಚಲಿತವಾಗಲಾರದು.

ಅಲ್ಲದೇ, ಪ್ರಚಲಿತವಾಗಿರುವ ಇಂತಹ ಪೊಳ್ಳು ಸಂಪ್ರದಾಯಗಳೆಲ್ಲವೂ ಕೂಡ, ಅಸ್ತವಾಗುತ್ತಾ ಹೋಗುತ್ತಿವೆ. ವೃದ್ಧಿಯ ಕಥೆಯಾದರೂ ಏನು? [51]

### (ಅಲ್ಲಾಹನು 'ಆಗು', ಎಂದ; 'ಆಗಿಹೋಯಿತು')

**[52] ಅದಕ್ಕೆ—"ಆಗು", ಎನ್ನುತ್ತಾನೆ! ಸರಿ! ಅದು ಆಗಿಹೋಗುತ್ತದೆ! ಕಾಫಿರರು ಮೋಸಮಾಡಿದರು. ಈಶ್ವರನೂ ಮೋಸಮಾಡಿದನು. ಮಹಾ ವಂಚಕನಾಗಿದ್ದಾನೆ ಈಶ್ವರನು.**

[ಕುರಾನ್:- ಮಂ.1; ಸಿ. 8; ಸೂ. 8; ಆ.46, 58]

### (ಖುದಾ ಯಾರಿಗೆ ಹೇಳಿದ? ಯಾವುದಾಯಿತು?)

**ಸಮೀಕ್ಷಕ:**—ಮುಸಲ್ಮಾನರು ಖುದಾನ ಹೊರತು, ಅನ್ಯವಸ್ತುವನ್ನು ಒಪ್ಪದಿರುವಾಗ, ಖುದಾ ಯಾವುದಕ್ಕೆ ಹೇಳಿದನು? ಮತ್ತು ಅವನ ಹೇಳುವಿಕೆಯಿಂದ ಆಗಿಹೋದುದು ಯಾವುದು? ಇದರ ಉತ್ತರವನ್ನು ಮುಸಲ್ಮಾನರು ಏಳು ಜನ್ಮಗಳಲ್ಲಿಯೂ ಕೊಡಲಾರರು! ಏಕೆಂದರೆ, ಉಪಾದಾನ ಕಾರಣವಿಲ್ಲದೇ ಕಾರ್ಯವೆಂದಿಗೂ ಆಗಲಾರದು!

ಕಾರಣವಿಲ್ಲದೇ ಕಾರ್ಯವಾಗುತ್ತದೆ, ಎನ್ನುವುದು 'ನನ್ನ ತಂದೆ-ತಾಯಿಗಳಿಲ್ಲದೆಯೇ ನನ್ನ ಶರೀರವಾಗಿ ಹೋಯಿತು.', ಎನ್ನುವಂತಹ ಮಾತೇ ಆಗಿದೆ!

### (ವಂಚಕನೂ, ವಂಚಿಸಿಕೊಳ್ಳುವವನೂ ಈಶ್ವರನಲ್ಲ)

ಸ್ವತಃ ಮೋಸ ಹೋಗುವವನು, [ಮತ್ತು] ಮೋಸ ಮಾಡುವವನು. ಎಂದರೆ ಛಲವನ್ನು ಮತ್ತು ದಂಭವನ್ನು ಮಾಡುವವನು ಈಶ್ವರನಂತೂ ಎಂದಿಗೂ ಆಗಲಾರನು! ಮಾತ್ರವಲ್ಲ; ಉತ್ತಮನಾದ ಮಾನವನೂ ಕೂಡ, ಇಂತಹ ವ್ಯವಹಾರವನ್ನು ಮಾಡುವುದಿಲ್ಲ! [52]

### (ಮೂರು ಸಾವಿರ ದೇವದೂತರೊಂದಿಗೆ ಸಹಾಯ)

**[53] ಅಲ್ಲಾಹನು ನಿಮಗೆ ಮೂರು ಸಾವಿರ ದೇವದೂತರೊಂದಿಗೆ ಸಹಾಯ ಕೊಡುವನು, ಎನ್ನುವುದು ನಿಮಗೆ ದೊಡ್ಡ ವಿಷಯವೆಂದು ತೋರುವುದಿಲ್ಲವೋ?**

[ಕುರಾನ್:-ಮಂ. 1; ಸಿ. 4; ಸೂ. 8; ಆ. 123]

### (ಈಗ ಮುಸಲ್ಮಾನರಿಗೇಕೆ ಸಹಾಯ ಕೊಡುತ್ತಿಲ್ಲ?)

**ಸಮೀಕ್ಷಕ:**—ಮುಸಲ್ಮಾನರಿಗೆ ಮೂರು ಸಾವಿರ ದೇವದೂತರೊಂದಿಗೆ ಸಹಾಯವನ್ನು ಕೊಡುತ್ತಿದ್ದನಾದರೆ, ಈಗ ಮುಸಲ್ಮಾನರ ಸಾಮ್ರಾಜ್ಯ ಬಹಳ ನಾಶವಾಗಿ ಹೋಗಿದೆ! ಮತ್ತು ನಾಶವಾಗಿ ಹೋಗುತ್ತಲೂ ಇದೆ! ಸಹಾಯವನ್ನೇಕೆ ಕೊಡುತ್ತಿಲ್ಲ? ಆದುದರಿಂದ, ಇದು ಕೇವಲ ಲೋಭವನ್ನೊಡ್ಡಿ, ಮೂರ್ಖರನ್ನು ಸಿಕ್ಕಿಸಿಕೊಳ್ಳುವುದಕ್ಕಾಗಿ [ಬರೆದ] ಮಹಾ ಅನ್ಯಾಯದ ಮಾತಾಗಿದೆ ! [53]

## (ಕಾಫಿರರ ವಿರುದ್ಧ ನಮಗೆ ಸಹಾಯ ಮಾಡು)

[54] ಮತ್ತು ಕಾಫಿರರ ವಿರುದ್ಧ ನಮಗೆ ಸಹಾಯ ಮಾಡು.

ಅಲ್ಲಾಹನು ನಿಮ್ಮ ಉತ್ತಮ ಸಹಾಯಕನೂ ಮತ್ತು ನಿಯಾಮಕನೂ ಆಗಿದ್ದಾನೆ.

ನೀವು ಅಲ್ಲಾಹನ ಮಾರ್ಗದಲ್ಲಿ ಕೊಲ್ಲಲ್ಪಟ್ಟರೆ, ಅಥವಾ ಮೃತರಾದರೆ, ಅಲ್ಲಾಹನ ದಯೆ ಬಹಳ ಒಳಿತಾಗಿರುವುದು [ಸಿಕ್ಕುತ್ತದೆ].

[ಕುರಾನ್:-ಮಂ. 1; ಸಿ. 4; ಸೂ. 3; ಆ. 146, 149, 156]

## (ಇಂತಹ ಪ್ರಾರ್ಥನೆಯನ್ನು ಈಶ್ವರನೆಂದಿಗೂ ಆಲಿಸುವುದಿಲ್ಲ)

ಸಮೀಕ್ಷಕ:—ಈಗ ಮುಸಲ್ಮಾನರ ಲೋಪವನ್ನಾದರೂ ನೋಡಿರಿ! ತಮ್ಮ ಮತದಿಂದ ಬೇರೆಯಾಗಿರುವವರನ್ನು ಕೊಲ್ಲುವುದಕ್ಕಾಗಿ ಖುದಾನ ಪ್ರಾರ್ಥನೆಯನ್ನು ಮಾಡುತ್ತಾರೆ! ಇವರ ಮಾತುಗಳನ್ನೊಪ್ಪಿಕೊಳ್ಳಲು ಪರಮೇಶ್ವರನು ಮುಗ್ಧನಾಗಿದ್ದಾನೇನು? ಮುಸಲ್ಮಾನರ ನಿಯಾಮಕನು ಅಲ್ಲಾಹನೇ ಆಗಿರುವನಾದರೆ, ಮತ್ತೆ ಮುಸಲ್ಮಾನರ ಕಾರ್ಯಗಳು ಕೆಟ್ಟುಹೋಗುವುವೇತಕ್ಕೆ?

ಮತ್ತು ಖುದಾ ಕೂಡ, ಮುಸಲ್ಮಾನರ ಮೋಹಕ್ಕೆ ಸಿಕ್ಕಿಕೊಂಡಿರುವಂತೆ ಕಾಣಿಸುತ್ತಾನೆ! ಖುದಾ ಇಂತಹ ಪಕ್ಷಪಾತಿಯಾಗಿರುವನಾದರೆ, ಧರ್ಮಾತ್ಮರಾದವರಿಗೆ ಎಂದಿಗೂ ಉಪಾಸನೀಯನಾಗಲಾರನು. [54]

## (ಅಲ್ಲಾಹನಲ್ಲಿ ಮತ್ತು ಪೈಗಂಬರನಲ್ಲಿ ನಂಬಿಕೆ ಇಡಿ)

[55] ಮತ್ತು ಅಲ್ಲಾಹನು ನಿಮ್ಮನ್ನು ಪರೋಕ್ಷಜ್ಞ*ರನ್ನಾಗಿ ಮಾಡುವುದಿಲ್ಲ. ಆದರೆ, ತನ್ನ ಪೈಗಂಬರ†ರಲ್ಲಿ ತನಗೆ ಬೇಕಾದವರನ್ನು ಅಂಗೀಕರಿಸುತ್ತಾನೆ. ಸಾಕು! ನಂಬಿರಿ. ಅಲ್ಲಾಹನನ್ನು ಮತ್ತು ಅವನ ರಸೂಲ†ನನ್ನು.

[ಕುರಾನ್:-ಮಂ. 1; ಸಿ. 4; ಸೂ. 3; ಆ. 179]

## (ಮತ್ತೆ, ಖುದಾನನ್ನು 'ಲಾಶರೀಕ್', ಎನ್ನುವುದು ವ್ಯರ್ಥ)

ಸಮೀಕ್ಷಕ:—ಮುಸಲ್ಮಾನರು ಖುದಾನ ಹೊರತು, ಯಾವನ ಮೇಲೆಯೂ ನಂಬಿಕೆಯನ್ನಿಡದಿರುವಾಗ, ಮತ್ತು ಯಾವನನ್ನೂ ಖುದಾನ 'ಭಾಗೀದಾರ'ನೆಂದೂ ಒಪ್ಪದಿರುವಾಗ, ಪೈಗಂಬರ ಸಾಹೇಬರನ್ನು ನಂಬಿಕೆ [ಇಡುವುದ]ರಲ್ಲಿ ಖುದಾನೊಂದಿಗೆ ಸೇರಿಸಿದರೇಕೆ?

*ಅತೀಂದ್ರಿಯ ತತ್ತ್ವಗಳ ಜ್ಞಾನವನ್ನುಳ್ಳವರು.—ಅನು.

†ದೇವರ ಸಂದೇಶವಾಹಕ--ಸಂ.

ಅಲ್ಲಾಹನು ಪೈಗಂಬರರ ಮೇಲೆ ನಂಬಿಕೆಯಿಡಬೇಕೆಂದು ಬರೆದನು: ಇದರಿಂದಲೇ, ಪೈಗಂಬರರೂ ಕೂಡ, [ಖುದಾನ ಜೊತೆಗೆ] ಭಾಗೀದಾರರಾಗಿ ಹೋದರು. ಮತ್ತೆ, [ಖುದಾನನ್ನು] **'ಲಾಶರೀಕ್'**, ಎಂದರೆ 'ಭಾಗೀದಾರರಹಿತ', ಎನ್ನುವುದು ಯುಕ್ತವಾಗುವುದಿಲ್ಲ!

ಒಂದು ವೇಳೆ, 'ಮುಹಮ್ಮದ್ ಸಾಹೇಬರು ಪೈಗಂಬರರೆಂದು ವಿಶ್ವಾಸವಿಡಬೇಕೆಂದಿಷ್ಟೇ', ಇದರ ಅರ್ಥವೆಂದು ತಿಳಿಯಲ್ಪಟ್ಟರೂ ಕೂಡ, ಮುಹಮ್ಮದ್ ಸಾಹೇಬರ ಇರುವಿಕೆಯ ಆವಶ್ಯಕತೆ ಏನಿದೆ: ಎಂಬ ಪ್ರಶ್ನೆ ಉದ್ಭವಿಸುತ್ತದೆ. ಒಂದು ವೇಳೆ, **ಖುದಾ ಅವರನ್ನು 'ಪೈಗಂಬರ'ರನ್ನಾಗಿ ಮಾಡದೇ. ತನ್ನ ಅಭೀಷ್ಟವಾದ ಕಾರ್ಯವನ್ನು ಮಾಡಲಾರನಾದರೆ, ಅವಶ್ಯವಾಗಿಯೂ ಅಸಮರ್ಥನಾದನು!** [55]

## (ಯುದ್ಧದಲ್ಲಿ ನಿರತರಾಗಿರಿ)

**[56] ಓ ನಂಬಿಕೆಯುಳ್ಳವರೇ! ಸಂತೋಷಪಡಿರಿ. ಪರಸ್ಪರ ಆಶ್ರಯದಿಂದಿರಿ. ಮತ್ತು ಯುದ್ಧದಲ್ಲಿ ನಿರತರಾಗಿರಿ. ನೀವು ಮುಕ್ತರಾಗಲು ಸಾಧ್ಯವಾಗುವಂತೆ ಅಲ್ಲಾಹನಿಗೆ ಹೆದರಿರಿ?**

[ಕುರಾನ್:-ಮಂ. 1; ಸಿ. 4; ಸೂ. 3; ಆ. 200]

## (ಖುದಾ ಮತ್ತು ಪೈಗಂಬರ್ ಇಬ್ಬರೂ ಯುದ್ಧಾಪೇಕ್ಷಿಗಳು)

**ಸಮೀಕ್ಷಕ:—**ಈ ಕುರಾನಿನ ಖುದಾ ಮತ್ತು ಪೈಗಂಬರರಿಬ್ಬರೂ ಯುದ್ಧಾಪೇಕ್ಷಿಗಳಾಗಿದ್ದರು. **ಯಾವನು ಯುದ್ಧ ಮಾಡಲು ಆಜ್ಞೆ ಮಾಡುತ್ತಾನೋ, ಅವನು ಶಾಂತಿಭಂಗವನ್ನು ಮಾಡುವವನಾಗಿರುತ್ತಾನೆ!** ನಾಮಮಾತ್ರಕ್ಕೆ ಖುದಾನಿಂದ ಹೆದರುವುದರಿಂದ ಮೋಕ್ಷ ಪಡೆಯಲಾದೀತೇನು? ಅಥವಾ ಅಧರ್ಮಯುಕ್ತವಾದ ಯುದ್ಧ ಮೊದಲಾದುದಕ್ಕೆ ಅಂಜುವುದರಿಂದಲೋ?

ಮೊದಲ ಪಕ್ಷವಾದರೆ, ಹೆದರುವುದು-ಹೆದರದಿರುವುದು ಒಂದೇ ಸಮವೇ! ಎರಡನೆಯ ಪಕ್ಷವಾದರೆ, ಸರಿ! [56]

## (ಅಲ್ಲಾಹನ ಮತ್ತು ರಸೂಲನ ಭಕ್ತರಿಗೇ ಸ್ವರ್ಗ)

**[57] ಅಲ್ಲಾಹನ ಮತ್ತು ಅವನ ರಸೂಲನ ಕಥನವನ್ನೊಪ್ಪಿಕೊಳ್ಳುವವನು, ಎಲ್ಲಿ ಕಾಲುವೆಗಳು ಹರಿಯುವುವೋ, ಅಂತಹ ಸ್ವರ್ಗವನ್ನು ಸೇರುವನು, ಎನ್ನುವುದು ಅಲ್ಲಾಹನ [ಆಶ್ವಾಸನದ] ಪರಿಮಿತಿಯಾಗಿದೆ. ಮತ್ತು ಇದೇ ಪರಮಪ್ರಯೋಜನವಾಗಿದೆ.**

ಯಾವನು ಅಲ್ಲಾಹನ ಮತ್ತು ಅವನ ರಸೂಲನ ಆಜ್ಞೆಗಳನ್ನು ಮುರಿಯುವನೋ, ಹಾಗೂ ಎಲ್ಲೆಗಳನ್ನು ದಾಟುವನೋ, ಅವನು ಸದಾ ಇರುವ ಬೆಂಕಿಯಲ್ಲಿ ದಹಿಸಲ್ಪಡುವನು. ಮತ್ತು ಅವನ ಪಾಲಿಗೆ ಹಾನಿಕರವಾದ ದುಃಖವಿದೆ.

[ಕುರಾನ್:-ಮಂ. 1; ಸಿ. 4; ಸೂ.4; ಆ. 13,14]

## (ಸ್ವರ್ಗದಲ್ಲಿ ಪೈಗಂಬರನ ಸಹಭಾಗಿಯಾದ ಈಶ್ವರನು ಸ್ವತಂತ್ರನಲ್ಲ)

**ಸಮೀಕ್ಷಕ:**—ಖುದಾ ಸ್ವತಃ ಪೈಗಂಬರ್ ಮುಹಮ್ಮದ್ ಸಾಹೇಬರನ್ನು ತನ್ನ ಸಹಭಾಗಿಯನ್ನಾಗಿ ಮಾಡಿಕೊಂಡಿದ್ದಾನೆ. ಮತ್ತು ಸ್ವತಃ ಕುರಾನಿನಲ್ಲಿಯೇ ಬರೆದಿದೆ! ಖುದಾ ಪೈಗಂಬರರ ಜೊತೆ ಹೇಗೆ ಸಿಕ್ಕಿಹಾಕಿಕೊಂಡಿದ್ದಾನೆಂದರೆ, ನೋಡಿರಿ! ಅವನು ಸ್ವರ್ಗದಲ್ಲಿಯೂ ರಸೂಲರ ಸಹಭಾಗಿತ್ವಕ್ಕೆ ಕಟ್ಟುಬಿದ್ದಿದ್ದಾನೆ!

ಯಾವ ಒಂದು ವಿಷಯದಲ್ಲಿಯೂ ಮುಸ್ಲಿಮರ ಖುದಾ ಸ್ವತಂತ್ರನಾಗಿಲ್ಲದಿರುವಾಗ, 'ಲಾಶರೀಕ್',* ಎನ್ನುವುದು ಪೂರ್ಣತಃ ವ್ಯರ್ಥವಾಗಿದೆ. ಇಂತಿಂತಹ ಮಾತುಗಳು ಈಶ್ವರೋಕ್ತವಾದ ಪುಸ್ತಕದಲ್ಲಿರಲಾರವು! [57]

## (ಅಲ್ಲಾಹನು ಅನ್ಯಾಯ ಮಾಡುವುದಿಲ್ಲ)

[58] ಮತ್ತು ಅಲ್ಲಾಹನು ಒಂದು ತ್ರಸರೇಣುವಿನಷ್ಟು ಕೂಡ, ಅನ್ಯಾಯ ಮಾಡುವುದಿಲ್ಲ. ಮತ್ತು ಒಳಿತನ್ನು ದ್ವಿಗುಣಗೊಳಿಸುವನು.

[ಕುರಾನ್:-ಮಂ. 1; ಸಿ. 5; ಸೂ. 4; ಆ. 40]

## (ಹೆಚ್ಚು-ಕಡಿಮೆ ಫಲಕೊಟ್ಟರೆ, ಖುದಾ ಅನ್ಯಾಯಿಯಾಗಿ ಹೋದಾನು!)

**ಸಮೀಕ್ಷಕ:**—ಒಂದು ತ್ರಸರೇಣುವಿನಷ್ಟು ಕೂಡ, ಖುದಾ ಅನ್ಯಾಯವನ್ನು ಮಾಡುವುದಿಲ್ಲವಾದರೆ, ಪುಣ್ಯಕ್ಕೆ ಎರಡರಷ್ಟು [ಫಲ]ವನ್ನೇತಕ್ಕೆ ಕೊಡುತ್ತಾನೆ? ಮತ್ತು ಮುಸಲ್ಮಾನರ ಬಗೆಗೆ ಪಕ್ಷಪಾತವನ್ನೇತಕ್ಕೆ ಮಾಡುತ್ತಾನೆ? ವಾಸ್ತವವಾಗಿ ಎರಡರಷ್ಟು ಅಥವಾ ಕಡಿಮೆ ಫಲವನ್ನು ಕರ್ಮಗಳಿಗೆ ಕೊಡುವನಾದರೆ, ಖುದಾ ಅನ್ಯಾಯಕಾರಿಯಾಗಿ ಹೋದಾನು! [58]

## (ಖುದಾನಿಂದ ಪಥಭ್ರಷ್ಟರಾದವರಿಗೆ ಮಾರ್ಗವಿಲ್ಲ)

[59] ನಿನ್ನ ಬಳಿಯಿಂದ ಹೊರ ಹೊರಟ ಮೇಲೆ, ಜನರು ನಿನ್ನ ಕಥನಕ್ಕೆ ವಿಪರೀತವಾಗಿ ಆಲೋಚಿಸುತ್ತಾರೆ. ಅಲ್ಲಾಹನು ಅವರ ಸಲಹೆಗಳನ್ನು ಬರೆದಿಡುತ್ತಾನೆ.

---

*ಸಹಭಾಗಿರಹಿತ—ಅನು.

ಅಲ್ಲಾಹನು ಅವರು ಸಂಪಾದಿಸಿದ ವಸ್ತುವಿನ ಕಾರಣದಿಂದ, ಅವರನ್ನು ಮಗುಚಿಹಾಕಿದನು. ಅಲ್ಲಾಹನು ಪಥಭ್ರಷ್ಟರನ್ನಾಗಿ ಮಾಡಿದವರನ್ನು ಮಾರ್ಗಕ್ಕೆ ತರಬೇಕೆಂದು ನೀವು ಅಪೇಕ್ಷಿಸುತ್ತೀರೇನು? ಮುಗಿಯಿತು! ಖುದಾ ಯಾವನಿಗೆ ದಾರಿ ತಪ್ಪಿಸುವನೋ, ಅವನಿಗೆ ಎಂದಿಗೂ ಮಾರ್ಗ ಸಿಕ್ಕುವುದಿಲ್ಲ.

[ಕುರಾನ್:-ಮಂ. 1; ಸಿ. 5; ಸೂ. 4; .ಆ 81,88]

## (ಖುದಾ ದೊಡ್ಡ ಶೈತಾನ! ಶೈತಾನ ಚಿಕ್ಕ ಶೈತಾನ!)

**ಸಮೀಕ್ಷಕ:**—ಅಲ್ಲಾಹನು ಮಾತುಗಳನ್ನು ಬರೆದು. ಲೆಕ್ಕ-ಪತ್ರಗಳನ್ನು ನಿರ್ಮಿಸುತ್ತಾ ಹೋಗುವನಾದರೆ, ಅವನು ಸರ್ವಜ್ಞನಲ್ಲ! ಸರ್ವಜ್ಞನಾಗಿದ್ದರೆ. ಬರೆಯುವ ಕೆಲಸವಾದರೂ ಏನು?

ಮತ್ತು ಮುಸಲ್ಮಾನರು ಶೈತಾನನೇ ಎಲ್ಲರಿಗೂ ದುಷ್ಪ್ರೇರಣೆ ಮಾಡುವುದರಿಂದ ದುಷ್ಟನಾಗಿದ್ದಾನೆ. ಎನ್ನುತ್ತಾರಷ್ಟೇ? ಖುದಾ ಸ್ವತಃ ಜೀವರಿಗೆ ದಾರಿ ತಪ್ಪಿಸುತ್ತಾನಾದರೆ, ಖುದಾ ಮತ್ತು ಶೈತಾನರ ಮಧ್ಯೆ ವ್ಯತ್ಯಾಸವೇನುಳಿಯಿತು? ಅಹುದು! ಖುದಾ ದೊಡ್ಡ ಶೈತಾನನು! ಮತ್ತು ಅವನು ಚಿಕ್ಕ ಶೈತಾನನು!, ಎಂದಿಷ್ಟು ವ್ಯತ್ಯಾಸವನ್ನು ಹೇಳಬಹುದು. ಏಕೆಂದರೆ. ದಾರಿ ತಪ್ಪಿಸುವವನೇ 'ಶೈತಾನ'ನೆಂದು ಮುಸಲ್ಮಾನರ ಸಿದ್ಧಾಂತವಿದೆ. ಈ ಘೋಷಣೆಯಿಂದ ಖುದಾನನ್ನೂ ಕೂಡ. ಶೈತಾನನನ್ನಾಗಿ ಮಾಡಿಬಿಟ್ಟರು! [59]

## (ಕಾಫಿರರನ್ನು ಕೊಲ್ಲು; ಮುಸಲ್ಮಾನರನ್ನಲ್ಲ)

**[60]** ಮತ್ತು ತಮ್ಮ ಕೈಗಳನ್ನು ಹಿಂದೆಗೆದುಕೊಳ್ಳದೇ ಹೋದರೆ, ಅವರನ್ನು ಹಿಡಿದುಕೊಳ್ಳಿರಿ! ಮತ್ತು ಎಲ್ಲಿ ಸಿಕ್ಕುವರೋ, ಅಲ್ಲಿಯೇ ಸಾಯಿಸಿಬಿಡಿರಿ!

ಮುಸಲ್ಮಾನನನ್ನು ಮುಸಲ್ಮಾನನು ಕೊಲ್ಲುವುದು ಯೋಗ್ಯವಲ್ಲ! ತಿಳಿಯದೇ ಯಾವನಾದರೂ ಕೊಂದುಬಿಟ್ಟರೆ, ಒಬ್ಬ ಮುಸಲ್ಮಾನನ ಕೊರಳನ್ನು ಬಿಡಬೇಕು.* ಮತ್ತು ಬೇರೆಯವರ ಕೋಮಿನವರ ಕಡೆಯಿಂದ ರಕ್ತಪಾತವಾಗಿದ್ದರೆ, ಅವರೊಡನೆ ಸಂಧಿಯಾಗಬೇಕು. ಮತ್ತು ಶತ್ರುವಿನ ಕೋಮಿನವರಾಗಿದ್ದರೆ, ನಿಮಗಾಗಿ ದಾನ ಕೊಟ್ಟುಬಿಡುವರು.

ಮತ್ತು ಯಾವನಾದರೂ ಮುಸಲ್ಮಾನನನ್ನು ತಿಳಿದೂ-ತಿಳಿದೂ ಸಂಹರಿಸಿದರೆ. ಅವನು ಸದಾಕಾಲಕ್ಕೂ ನರಕದಲ್ಲಿರುವನು. ಅವನ ಮೇಲೆ ಅಲ್ಲಾಹನ ಕ್ರೋಧ ಮತ್ತು ಅಭಿಶಾಪವಿದೆ.

[ಕುರಾನ್:-ಮಂ. 1; ಸಿ. 5; ಸೂ. 4; ಆ. 91-98]

---

*ಎಂದರೆ, ಒಬ್ಬ ಮುಸಲ್ಮಾನನನ್ನು ದಾಸತ್ವದಿಂದ ಮುಕ್ತಮಾಡಬೇಕು —ಯು.ಮೀ.

## (ಇಂತಹ ಉಪದೇಶವನ್ನು ಭಾವಿಗೆ ಎಸೆಯಬೇಕು)

**ಸಮೀಕ್ಷಕ:**—ಈಗ ನೋಡಿರಿ. ಮಹಾಪಕ್ಷಪಾತದ ಮಾತನ್ನು! ಎಂದರೆ, 'ಯಾವನು ಮುಸಲ್ಮಾನನಲ್ಲವೋ, ಅವನನ್ನು ಎಲ್ಲಿ ಕಂಡರೂ ಕೊಂದು ಹಾಕಿರಿ! ಮತ್ತು ಮುಸಲ್ಮಾನರನ್ನು ಕೊಲ್ಲಬಾರದು!'

'ಅರಿವಿಲ್ಲದೇ ಮುಸಲ್ಮಾನರನ್ನು ಕೊಂದರೆ, ಪ್ರಾಯಶ್ಚಿತ್ತ! ಬೇರೆಯವರನ್ನು ಕೊಂದರೆ. ಸ್ವರ್ಗ ಸಿಕ್ಕುವುದು!'

**ಇಂತಹ ಉಪದೇಶವನ್ನು ಭಾವಿಗೆ ಎಸೆಯಬೇಕು!**

**ಇಂತಿಂತಹ ಪುಸ್ತಕಗಳು, ಇಂತಿಂತಹ ಪೈಗಂಬರರು, ಇಂತಿಂತಹ ಖುದಾಗಳು, ಮತ್ತು ಇಂತಿಂತಹ ಮತಗಳಿಂದ ಹಾನಿಯೇ ಹೊರತು. ಲಾಭವು ಸ್ವಲ್ಪವೂ ಇಲ್ಲ! ಇಂತಹವರು, ಇಲ್ಲದಿರುವುದೇ ಒಳ್ಳೆಯದು!**

ಮತ್ತು ಇಂತಹ ಪ್ರಮಾದಜನಿತ ಮತಗಳಿಂದ ಬುದ್ಧಿವಂತರು ದೂರವಿದ್ದು, ವೇದೋಕ್ತವಾದ ತತ್ತ್ವಗಳನ್ನೆಲ್ಲಾ ಅಂಗೀಕರಿಸಬೇಕು. ಏಕೆಂದರೆ. ಅದರಲ್ಲಿ ಅಸತ್ಯವು ಕಿಂಚಿನ್ಮಾತ್ರವೂ ಇಲ್ಲ! ಇವರು—

'ಮುಸಲ್ಮಾನನನ್ನು ಕೊಂದರೆ, ನರಕ ಸಿಕ್ಕುವುದು.'. [ಎಂದು ಹೇಳುತ್ತಾರೆ].

ಮತ್ತು ಅನ್ಯಮತೀಯರು ಅದಕ್ಕೆ ಪ್ರತಿಯಾಗಿ—"ಯಾವನು ಮುಸಲ್ಮಾನನನ್ನು ಕೊಲ್ಲುವನೋ. ಅವನಿಗೆ ಸ್ವರ್ಗ ಸಿಕ್ಕುವುದು.". ಎಂದು ಹೇಳುತ್ತಾರೆ.

ಈಗ ಈ ಎರಡು ಮತಗಳಲ್ಲಿ ಯಾವುದನ್ನು ಅಂಗೀಕರಿಸೋಣ? ಯಾವುದನ್ನು ವರ್ಜಿಸೋಣ? ನೀವೇ ಹೇಳಿರಿ!

ಆದರೆ. **ಅಂತಹ ಮೂರ್ಖರಿಂದ ಪ್ರಕಲ್ಪಿತವಾದ ಮತಗಳನ್ನು ಬಿಟ್ಟು, ವೇದೋಕ್ತವಾದ ಧರ್ಮಮಾತ್ರವೇ ಸರ್ವಮಾನವರಿಗೂ ಸ್ವೀಕರಣೀಯವಾಗಿದೆ. ಅದರಲ್ಲಿ "ಆರ್ಯ ಮಾರ್ಗ"*, ಎಂದರೆ ಶ್ರೇಷ್ಠ ಪುರುಷರ ಮಾರ್ಗದಲ್ಲಿ ನಡೆಯಬೇಕು. ಮತ್ತು 'ದಸ್ಯು', ಎಂದರೆ ದುಷ್ಟರ ಮಾರ್ಗದಿಂದ ದೂರವಿರಬೇಕು**, ಎಂದು ಬರೆಯಲಾಗಿದೆ. [ಆ ವೇದೋಕ್ತ ಧರ್ಮಮಾತ್ರ] ಸರ್ವೋತ್ತಮವಾಗಿದೆ! [60]

*"ವಿಜಾನೀಹ್ಯಾರ್ಯಾನ್ ಯೇ ಚ ದಸ್ಯವೋ ಬರ್ಹಿಷ್ಮತೇ ರಂಧಯಾ ಶಾಸದವ್ರತಾನ್" (ಋಗ್ವೇದ 1.51.8)—ಎಂದರೆ, ಹೇ ಜಗದ್ರಕ್ಷಕ ರಾಜನೇ! ನೀನು ಶ್ರೇಷ್ಠ ಮಾರ್ಗಿಗಳಾದವರ ಮತ್ತು ದುಷ್ಟ ಮಾರ್ಗಿಗಳಾದವರ ನಡುವಣ ಭೇದವನ್ನು ತಿಳಿ. ಮತ್ತು ದುಷ್ಟಮಾರ್ಗದಲ್ಲಿ ನಡೆಯುವವರನ್ನು ದಂಡಿಸು, ಎಂದು ಬರೆದಿದೆ. ಕುರಾನಿನಲ್ಲಿ ಬರೆದಿರುವಂತೆ ಸ್ವಮತಕ್ಕೆ ವಿರುದ್ಧರಾದವರನ್ನು ಕೊಲ್ಲಬೇಕು, ಎಂದಲ್ಲ!—ಯು.ವಿ.

## (ರಸೂಲನ ವಿರೋಧಿಗಳು ನರಕದಲ್ಲಿ)

**[61]** ಮತ್ತು ಶಾಸ್ತ್ರವು* ಪ್ರಕಟವಾದ ಮೇಲೆ, ರಸೂಲನನ್ನು ವಿರೋಧಿಸಿದವನನ್ನು ಮತ್ತು ಮುಸಲ್ಮಾನರಿಗೆ ವಿರುದ್ಧವಾದ ಪಕ್ಷ ಗ್ರಹಿಸಿದವನನ್ನು ನಾವು ಅವಶ್ಯವಾಗಿ ನರಕಕ್ಕೆ ಕಳುಹಿಸುವೆವು.

[ಕುರಾನ್:-ಮಂ. 1; ಸಿ. 5; ಸೂ. 4; ಆ. 115]

## (ಈ ಮಾತುಗಳೆಲ್ಲಾ 'ಅನಾಪ್ತ'ರದ್ದು)

**ಸಮೀಕ್ಷಕ:**—ಖುದಾನ ಮತ್ತು ರಸೂಲನ ಪಕ್ಷಪಾತದ ಮಾತುಗಳನ್ನೀಗ ನೋಡಿರಿ! ಮುಹಮ್ಮದ್ ಸಾಹೇಬರೇ ಮೊದಲಾದವರು—

"ಖುದಾನ ಹೆಸರಿನಿಂದ ನಾವು ಹೀಗೆ ಬರೆಯದಿದ್ದರೆ. ನಮ್ಮ ಮತ ಹರಡುವುದಿಲ್ಲ. ಮತ್ತು [ಭೋಗ್ಯ]ವಸ್ತುಗಳು ಸಿಕ್ಕುವುದಿಲ್ಲ. ಆನಂದಭೋಗ ಪ್ರಾಪ್ತವಾಗುವುದಿಲ್ಲ.", ಎಂದು ತಿಳಿದಿದ್ದರು.

ಆದುದರಿಂದಲೇ, ಅವರು ತಮ್ಮ ಸ್ವಾರ್ಥಸಾಧನೆಯಲ್ಲಿ, ಮತ್ತು ಅನ್ಯರ ಹಿತವನ್ನು ನಾಶಮಾಡುವುದರಲ್ಲಿ ಪೂರ್ಣ [ನಿಪುಣ]ರಾಗಿದ್ದರೆಂದು ವಿದಿತವಾಗುತ್ತದೆ. ಈ ಕಾರಣದಿಂದ, ಅವರು ಅನಾಪ್ತರು† ಆಗಿದ್ದರು. ಆಪ್ತ ವಿದ್ವಾಂಸರ ದೃಷ್ಟಿಯಲ್ಲಿ ಇವರ ವಚನಗಳಿಗೆ ಪ್ರಾಮಾಣ್ಯವೆಂದಿಗೂ ಸಲ್ಲದು! [61]

## (ಕಾಫಿರರನ್ನು ಅಲ್ಲಾಹನು ಕ್ಷಮಿಸುವುದಿಲ್ಲ)

**[62]** ಯಾವನು ಅಲ್ಲಾಹನ, ದೇವದೂತರ, ಪುಸ್ತಕಗಳ, ರಸೂಲನ ಮತ್ತು ಕಯಾಮತ್ತಿನ ಬಗೆಗೆ ಅವಿಶ್ವಾಸವನ್ನಿಡುವನೋ, ಅವನು ನಿಶ್ಚಯವಾಗಿಯೂ ಪಥಭ್ರಷ್ಟನಾಗಿದ್ದಾನೆ.

ನಿಜವಾಗಿ, ಯಾರು ನಂಬಿಕೆಯಿಟ್ಟರೋ, ಮತ್ತು ಕಾಫಿರರಾದರೋ; ಮರಳಿ-ಮರಳಿ ನಂಬಿಕೆಯಿಟ್ಟರೋ, ಪುನಃ ವಿಮುಖರಾದರೋ; ಮತ್ತು ಕಾಫಿರತನದಲ್ಲಿ ಬಹಳ ಮುಂದುವರಿದರೋ, ಅವರನ್ನು ಅಲ್ಲಾಹನೆಂದಿಗೂ ಕ್ಷಮಿಸುವುದಿಲ್ಲ. ಮತ್ತು ಮಾರ್ಗವನ್ನೂ ತೋರಿಸುವುದಿಲ್ಲ.

[ಕುರಾನ್:-ಮಂ. 1; ಸಿ. 5; ಸೂ. 4; ಆ. 136, 137]

---

*ಕುರಾನ್—ಅನು.

†ಎಂದರೆ ಪಕ್ಷಪಾತಿಗಳು, ಅಸತ್ಯವಚನಿಗಳು—ಅನು.

### (ದೇವದೂತರೂ ಜೊತೆಗಿದ್ದರೆ, ಖುದಾ 'ಲಾಶರೀಕ್' ಹೇಗೆ?)

**ಸಮೀಕ್ಷಕ:**—ಈಗಲೂ ಖುದಾ 'ಲಾಶರೀಕ್', ಎಂದರೆ ಸಹಭಾಗಿರಹಿತನಾಗಿ ಉಳಿಯಬಲ್ಲನೇ? ಭಾಗೀದಾರರಹಿತನೆನ್ನುತ್ತಾ ಹೋಗುವುದು. ಮತ್ತು ಅವನೊಂದಿಗೆ ಬಹು ಮಂದಿ ಭಾಗೀದಾರರನ್ನು ಒಪ್ಪಿಕೊಳ್ಳುತ್ತಾ ಹೋಗುವುದು ಪರಸ್ಪರ ವಿರುದ್ಧ ವಾದ ಮಾತಲ್ಲವೇ?

ಮೂರು ಸಾರಿ ಕ್ಷಮೆ ಮಾಡಿದ ಮೇಲೆ, ಖುದಾ ಕ್ಷಮೆಯನ್ನು ಮಾಡುವು ದಿಲ್ಲವೇನು? ಮತ್ತು ಮೂರು ಸಾರಿ ಕಾಫಿರತನವನ್ನು ಮಾಡಿದ ಮೇಲೆ ಮಾರ್ಗ ತೋರಿಸುತ್ತಾನೇನು? ಅಥವಾ ನಾಲ್ಕನೆಯ ಸಾರಿಯಿಂದ ಮುಂದಕ್ಕೆ ತೋರಿಸುವು ದಿಲ್ಲವೋ? ಒಂದು ವೇಳೆ, ನಾಲ್ಕು-ನಾಲ್ಕು ಸಾರಿಯೂ ಜನರೆಲ್ಲಾ 'ಕಾಫಿರತನ' ಮಾಡಿದರೂ ಕೂಡ, ಕಾಫಿರತನ ಬಹಳ ಹೆಚ್ಚಿ ಹೋದೀತು! [62]

### (ಕಾಫಿರರಿಗೆ ನರಕ; ಅವರೊಡನೆ ಸಖ್ಯ ಬೇಡ)

**[63] ನಿಶ್ಚಯವಾಗಿ ಅಲ್ಲಾಹನು ಕೆಟ್ಟ ಜನರನ್ನು ಮತ್ತು ಕಾಫಿರರನ್ನು ಕೂಡಿಹಾಕುವನು ನರಕದಲ್ಲಿ!**

**ನಿಶ್ಚಯವಾಗಿ, ಕೆಟ್ಟ ಜನರು ಮೋಸ ಮಾಡುತ್ತಾರೆ ಅಲ್ಲಾಹನಿಗೆ; ಮತ್ತು ಅವರಿಗೆ ಅವನು ಮೋಸ ಮಾಡುತ್ತಾನೆ.**

**ಓ ನಂಬಿಕೆಯುಳ್ಳವರೇ! ಮುಸಲ್ಮಾನರನ್ನು ಬಿಟ್ಟು, ಕಾಫಿರರನ್ನು ಮಿತ್ರ ರನ್ನಾಗಿ ಮಾಡಿಕೊಳ್ಳಬೇಡಿರಿ.**

[ಕುರಾನ್:-ಮಂ. 1; ಸಿ. 5; ಸೂ. 4; ಆ. 140, 142, 144]

### (ಯಾರ ಖುದಾ ವಂಚಕನೋ, ಅವರು ವಂಚಕರೇತಕ್ಕಲ್ಲ?)

**ಸಮೀಕ್ಷಕ:**—ಮುಸಲ್ಮಾನರು ಸ್ವರ್ಗಕ್ಕೂ, ಮತ್ತು ಅನ್ಯಜನರು ನರಕಕ್ಕೂ ಹೋಗುವರೆನ್ನಲು ಪ್ರಮಾಣವೇನಿದೆ?

ಭಾಪು! ಮಹಾಶಯ, ಭಾಪು!! **ಯಾವನು ಕೆಟ್ಟಜನರ ಮೋಸಕ್ಕೆ ಸಿಕ್ಕಿ ಕೊಳ್ಳುತ್ತಾನೋ, ಮತ್ತು ಅನ್ಯರಿಗೆ ಮೋಸ ಮಾಡುತ್ತಾನೋ, ಅಂತಹ ಖುದಾ ನಮ್ಮಿಂದ ದೂರವೇ** ಇರಲಿ! ಬೇಕಾದರೆ, ಯಾರು ಮೋಸಗಾರರಾಗಿದ್ದಾರೋ, ಅವರೊಂದಿಗೆ [ಖುದಾ] ಕೂಡಿಕೊಳ್ಳಲಿ! ಮತ್ತು ಅವರು ಅವನೊಂದಿಗೆ ಸೇರಿ ಕೊಳ್ಳಲಿ! ಏಕೆಂದರೆ—

"ಯಾದೃಶೀ ಶೀತಲಾದೇವೀ ತಾದೃಶೋ ವಾಹನಃ ಖರಃ".*

---

*ಮೂಲ ಗ್ರಂಥದಲ್ಲಿ—"ತಾದೃಶಃ ಖರವಾಹನಃ", ಎಂದಿದೆ—ಸಂ.

ಯಾವನು ಎಂತಹವನೋ, ಅವನಿಗೆ ಅಂತಹವನೇ ಗಂಟುಬಿದ್ದರೆ, ಸಂಟಸ್ತನ ಕೂಡಿಬರುತ್ತದೆ! ಯಾರ ಖುದಾ ಮೋಸಗಾರನೋ, ಅವರ ಉಪಾಸಕರು ಮೋಸಗಾರರಾಗಬಾರದೇಕೆ?

ದುಷ್ಟನಾದ ಮುಸಲ್ಮಾನನೊಂದಿಗೆ ಮೈತ್ರಿಯನ್ನೂ ಮತ್ತು ಮುಸಲ್ಮಾನರಿಂದ ಬೇರೆಯಾದ ಅನ್ಯಶ್ರೇಷ್ಠರೊಂದಿಗೆ ಶತ್ರುತ್ವವನ್ನೂ ಇಟ್ಟುಕೊಳ್ಳುವುದು ಯಾವನಿಗಾದರೂ ಯುಕ್ತವಾಗಬಲ್ಲದೇನು?* [63]

### (ಪೈಗಂಬರನ ಮೇಲೆ ನಂಬಿಕೆ ಇಡಿ)

**[64] ಓ ಜನರೇ! ನಿಶ್ಚಯವಾಗಿಯೂ ನಿಮ್ಮ ಬಳಿಗೆ ಸತ್ಯದೊಂದಿಗೆ ಖುದಾನ ಕಡೆಯಿಂದ ಪೈಗಂಬರನು ಬಂದನು. ಆಯಿತು! ನೀವು ಅವನ ಮೇಲೆ ನಂಬಿಕೆಯನ್ನಿಡಿರಿ.**

ಅಲ್ಲಾಹನು ಏಕಮಾತ್ರ ಉಪಾಸನೀಯನಾಗಿದ್ದಾನೆ.

[ಕುರಾನ್:–ಮಂ. 1; ಸಿ. 6; ಸೂ. 4; ಆ. 170,171]

### (ಪೈಗಂಬರನಿಲ್ಲದೇ ಖುದಾನ ಕೆಲಸ ನಡೆಯದೋ?)

**ಸಮೀಕ್ಷಕ:**—ಪೈಗಂಬರನಲ್ಲಿ ನಂಬಿಕೆಯಿಡಬೇಕೆಂದು ಬರೆದಿರುವಾಗ, ನಂಬಿಕೆಯಲ್ಲಿ ಪೈಗಂಬರನು ಖುದಾನ ಸಹಭಾಗಿ, ಎಂದರೆ, ಪಾಲುಗಾರನಾದವನೋ, ಅಥವಾ ಇಲ್ಲವೋ? ಅಲ್ಲಾಹನು ವ್ಯಾಪಕನಾಗಿರದೇ, ಏಕದೇಶೀಯನಾಗಿರುವುದರಿಂದ ತಾನೇ, ಅವನ ಬಳಿಯಿಂದ ಪೈಗಂಬರರು ಬಂದು-ಹೋಗಿ ಮಾಡುತ್ತಾರೆ! ಈ ಕಾರಣದಿಂದ, ಅವನ ಈಶ್ವರನೂ ಕೂಡ, ಆಗಿರಲಾರನು!

ಒಂದೆಡೆ [ಈಶ್ವರನನ್ನು] ಸರ್ವದೇಶೀಯನೆಂದೂ, ಮತ್ತೊಂದೆಡೆ ಏಕದೇಶೀಯನೆಂದೂ ಬರೆಯುತ್ತಾರೆ. ಇದರಿಂದ, ಕುರಾನ್ ಒಬ್ಬನಿಂದ ರಚಿತವಾದುದಲ್ಲ; ಆದರೆ, ಬಹು ಜನರು ಬರೆದಿದ್ದಾರೆ, ಎಂದು ವಿದಿತವಾಗುತ್ತದೆ! [64]

### (ಶವ, ರಕ್ತ, ಹಂದಿಯ ಮಾಂಸ ವರ್ಜ್ಯ)

**[65] ಶವ, ರಕ್ತ, ಹಂದಿಯ ಮಾಂಸ, ಅಲ್ಲಾಹನ ಹೊರತು, ಬೇರೆಯವನ ಹೆಸರನ್ನುಚ್ಚರಿಸಿ ಕೊಲ್ಲಲ್ಪಟ್ಟ ಪ್ರಾಣಿ, ಕುತ್ತಿಗೆ ಕಿವಿಚಲ್ಪಟ್ಟುದು, ದೊಣ್ಣೆಯಿಂದ ಹೊಡೆಯಲ್ಪಟ್ಟುದು, ಮೇಲಿನಿಂದ ಬಿದ್ದುದು, ಕೊಂಬಿನಿಂದ ತಿವಿಯಲ್ಪಟ್ಟುದು ಮತ್ತು ಹಿಂಸ್ರ ಪಶುವಿನಿಂದ ತಿನ್ನಲ್ಪಟ್ಟುದು—ಇವು ನಿಮಗೆ ವರ್ಜ್ಯವಾಗಿ ಮಾಡಲ್ಪಟ್ಟಿವೆ.**

[ಕುರಾನ್:–ಮಂ. 2; ಸಿ. 6; ಸೂ. 5; ಆ. 3]

---

*1190 ನೆಯ ಪುಟದ ಪಾದ ಟಿಪ್ಪಣಿಯನ್ನು ನೋಡಿ.—ಸಂ.

(ಹಲಾಲ್*-ಹರಾಮ್†, ಎಂಬ ಕಲ್ಪನೆ ಈಶ್ವರೀಯುವಲ್ಲ)

**ಸಮೀಕ್ಷಕ:**—ಇಷ್ಟೇ ಪದಾರ್ಥಗಳು ವರ್ಜ್ಯವೇನು ? ಬೇರೆ ಬಹಳ ಪಶುಗಳು, ಮತ್ತು ತಿರ್ಯಗ್ಜಂತುಗಳು, ಹುಳುಗಳು ಮೊದಲಾದುವು ಮುಸಲ್ಮಾನರುಗಳಿಗೆ ಗ್ರಾಹ್ಯವಾಗಿರುವುವೇನು ? ಆದುದರಿಂದ, ಇದು ಮನುಷ್ಯರ ಕಲ್ಪನೆಯಾಗಿದೆ; ಈಶ್ವರನದಲ್ಲ ! ಆದಕಾರಣ, ಇದು ಪ್ರಮಾಣವೂ ಅಲ್ಲ. [65]

(ಅಲ್ಲಾಹನಿಗೆ ಸಾಲಕೊಡಿ)

[66] ಮತ್ತು ಅಲ್ಲಾಹನಿಗೆ ಚೆನ್ನಾಗಿ ಸಾಲವನ್ನು ಕೊಡಿರಿ. ನಾನು ಕೆಡುಕನ್ನು ದೂರೀಕರಿಸುವೆನು. ಮತ್ತು ನಿಮ್ಮನ್ನು ಸ್ವರ್ಗಗಳಿಗೆ ಕಳುಹಿಸುವೆನು.

[ಕುರಾನ್:–ಮಂ. 2; ಸಿ. 6; ಸೂ. 5; ಆ. 12]

(ಖುದಾ ಕೂಡ, ದಿವಾಳಿಯಾದನೇನು ?)

**ಸಮೀಕ್ಷಕ:**—ಭೇಷ್ ಮಹಾಶಯ ! ಮುಸಲ್ಮಾನರ ಖುದಾನ ಮನೆಯಲ್ಲಿ ಸ್ವಲ್ಪವೂ ಧನ ಉಳಿದಿಲ್ಲದಿರಬಹುದು! ಉಳಿದಿದ್ದರೆ, ಸಾಲವನ್ನೇಕೆ ಬೇಡುತ್ತಿದ್ದನು?

ಮತ್ತು ನಿಮ್ಮ ಕೆಡುಕನ್ನು ದೂರೀಕರಿಸಿ, ನಿಮ್ಮನ್ನು ಸ್ವರ್ಗಕ್ಕೆ ಕಳುಹಿಸುವೆನೆಂದು ದಾರಿತಪ್ಪಿಸುತ್ತಿದ್ದನೇಕೆ ? ಇಲ್ಲಿ ಖುದಾನ ಹೆಸರಿನಿಂದ ಮುಹಮ್ಮದ್ ಸಾಹೇಬರು ತಮ್ಮ ಸ್ವಾರ್ಥವನ್ನು ಸಾಧಿಸಿಕೊಂಡಿರಬೇಕೆಂದು ವಿದಿತವಾಗುತ್ತದೆ! [67]

(ಖುದಾನ ಮರ್ಜಿಯಿಂದ ಕ್ಷಮೆ ಅಥವಾ ದಂಡನೆ)

[67] ಯಾವನನ್ನು ಅಪೇಕ್ಷಿಸುತ್ತಾನೋ, ಕ್ಷಮಿಸುತ್ತಾನೆ. ಯಾವನಿಗೆ ಬೇಕೋ, ಅವನಿಗೆ ದುಃಖವನ್ನು ಕೊಡುತ್ತಾನೆ.

ಯಾವುದನ್ನು ಯಾವನಿಗೂ ಕೊಡಲೇ ಇಲ್ಲವೋ, ಅದನ್ನು ನಿಮಗೆ ಕೊಟ್ಟನು.

[ಕುರಾನ್:–ಮಂ. 2; ಸಿ. 6; ಸೂ.5; ಆ. 18,20]

(ಮತ್ತೆ ಅಂತಹ ಸ್ವರ್ಗ–ನರಕಕ್ಕೆ ಖುದಾನೇ ಹೋಗಲಿ)

**ಸಮೀಕ್ಷಕ:**—ಹೇಗೆ ಶೈತಾನನು ತನಗೆ ಬೇಕೆನಿಸಿದವನನ್ನು ಪಾಪಿಯನ್ನಾಗಿ ಮಾಡುತ್ತಾನೋ, ಹಾಗೆಯೇ ಮುಸಲ್ಮಾನರ ಖುದಾ ಕೂಡ, ಶೈತಾನನ ಕೆಲಸವನ್ನೇ ಮಾಡುತ್ತಾನಲ್ಲವೇ? ಹೀಗೆ ಇರುವುದಾದರೆ, ಮತ್ತೆ ಸ್ವರ್ಗಕ್ಕೆ ಮತ್ತು ನರಕಕ್ಕೆ ಖುದಾ [ತಾನೇ] ಹೋಗಲಿ ! ಏಕೆಂದರೆ, ಅವನು ಪಾಪ–ಪುಣ್ಯಗಳನ್ನು ಮಾಡುವವನಾದನು; [ಮತ್ತು] ಜೀವರು ಪರಾಧೀನರಾದರು ! ಉದಾಹರಣೆಗಾಗಿ—

*ವಿಧಿ, ಪವಿತ್ರ.—ಸಂ.

†ವರ್ಜ್ಯ, ಅಪವಿತ್ರ.—ಸಂ.



ಸೈನ್ಯವು ಸೇನಾಪತಿಯ ಅಧೀನವಾಗಿದ್ದು ರಕ್ಷಿಸುತ್ತದೆ. ಮತ್ತು ಯಾವ ನನ್ನಾದರೂ ಕೊಲ್ಲುತ್ತದೆ. ಅದರ ಒಳಿತು-ಕೆಡುಕು ಸೇನಾಪತಿಗೆ ಸಲ್ಲುತ್ತದೆ; ಸೈನ್ಯಕ್ಕಲ್ಲ! [67]

## (ಅಲ್ಲಾಹನೊಂದಿಗೆ ರಸೂಲ)

**[68]** ಅಲ್ಲಾಹನ ಆಜ್ಞೆಯನ್ನು ಅಂಗೀಕರಿಸಿರಿ. ಮತ್ತು ರಸೂಲನ ಆಜ್ಞೆಯನ್ನು ಅಂಗೀಕರಿಸಿರಿ.

[ಕುರಾನ್:-ಮಂ. 2; ಸಿ. 7; ಸೂ. 5; ಆ. 92]

ಸಮೀಕ್ಷಕ:—ನೋಡಿರಿ, ಇದು ಖುದಾ ಭಾಗೀದಾರಸಹಿತನಾಗುವ ಮಾತಾಗಿದೆ! ಮತ್ತೆ ಖುದಾನನ್ನು ಭಾಗೀದಾರರಹಿತನೆನ್ನುವುದು ವ್ಯರ್ಥವಾಗಿದೆ. [68]

## (ಏನಾಯಿತೋ, ಅದನ್ನು ಖುದಾ ಕ್ಷಮಿಸಿದನು)

**[69]** ಏನು ನಡೆದು ಹೋಯಿತೋ, ಅದನ್ನು ಅಲ್ಲಾಹನು ಕ್ಷಮಿಸಿದ್ದಾನೆ. ಮತ್ತು ಯಾವನಾದರೂ ಪುನಃ ಮಾಡುವನಾದರೆ, ಅಲ್ಲಾಹನು ಅವನಿಂದ ಮುಯ್ಯಿ ತೀರಿಸಿಕೊಳ್ಳುವನು.

[ಕುರಾನ್:-ಮಂ. 2; ಸಿ. 7; ಸೂ. 5; ಆ. 95]

## (ಪಾಪದ ಕ್ಷಮೆಯ ಮಾತು ಈಶ್ವರನದಾಗಲಾರದು)

ಸಮೀಕ್ಷಕ:—ಮಾಡಿದ ಪಾಪಗಳನ್ನು ಕ್ಷಮಿಸುವುದೆಂದರೆ, ಪಾಪಗಳನ್ನು ಮಾಡುವುದಕ್ಕಾಗಿ ಅಪ್ಪಣೆಯಿತ್ತು (ಅದನ್ನು) ಹೆಚ್ಚಿಸುವುದೇ ಆಗಿದೆ! ಪಾಪವನ್ನು ಕ್ಷಮಿಸುವ ಮಾತು ಯಾವ ಪುಸ್ತಕದಲ್ಲಿರುವುದೋ, ಅದು ಈಶ್ವರನು ರಚಿಸಿದುದೂ ಅಲ್ಲ; ಮತ್ತು ಯಾವ ವಿದ್ವಾಂಸನು ರಚಿಸಿದುದೂ ಅಲ್ಲ! ಆದರೆ, ಪಾಪವರ್ಧಕ ವಾಗಿದೆ!

ಅಹುದು! ಮುಂದೆ ಆಗಬಹುದಾದ ಪಾಪಗಳನ್ನು ಬಿಡಿಸುವುದಕ್ಕಾಗಿ ಯಾರ ನ್ನಾದರೂ ಪ್ರಾರ್ಥಿಸುವುದು ಮತ್ತು ಸ್ವತಃ ಅವನ್ನು ಬಿಡುವುದಕ್ಕಾಗಿ ಪುರುಷಾರ್ಥ ವನ್ನೂ, [ಮತ್ತು] ಪಶ್ಚಾತ್ತಾಪವನ್ನೂ ಮಾಡುವುದು ಉಚಿತವಾಗಿರುತ್ತದೆ!

ಆದರೆ, ಕೇವಲ ಪಶ್ಚಾತ್ತಾಪವನ್ನು ಮಾತ್ರ ಮಾಡುತ್ತಿದ್ದು, [ಪಾಪವನ್ನು] ಬಿಡದೇ ಇದ್ದರೆ! ಇದರಿಂದಲೂ ಏನೂ ಆಗಲಾರದು! [69]

## (ನಕಲೀ ಪೈಗಂಬರನು ಪಾಪಿ)

**[70]** ಯಾವನು ಅಲ್ಲಾಹನ ಮೇಲೆ ಮಿಥ್ಯಾರೋಪವನ್ನು ಹೊರೆಸು ತ್ತಾನೋ, ಎಂದರೆ—

'ನನ್ನ ಮೇಲೆ ಪುಸ್ತಕ ಇಳಿಸಲ್ಪಟ್ಟಿದೆ', ಎಂದು ಹೇಳುತ್ತಾನೋ: ಆದರೆ, ಪುಸ್ತಕವು ಅವನ ಮೇಲೆ ಇಳಿಸಲ್ಪಡಲಿಲ್ಲ; ಮತ್ತು ಯಾವನು—'ಹೇಗೆ ಅಲ್ಲಾಹನು ಇಳಿಸುತ್ತಾನೋ, ಹಾಗೆ ನಾನೂ ಕೂಡ, ಇಳಿಸುತ್ತೇನೆ', ಎಂದು ಹೇಳುತ್ತಾನೋ, ಆ ಮನುಷ್ಯನಿಗಿಂತ ಅಧಿಕ ಪಾಪಿಯು ಯಾವನಿದ್ದಾನೆ ?

[ಕುರಾನ್:-ಮಂ. 2; ಸಿ. 7; ಸೂ. 6; ಆ. 94]

### (ಪೈಗಂಬರನಾಗಲು ಬೇರಾವನಾದರೂ ಯತ್ನಿಸಿದನೇನು?)

ಸಮೀಕ್ಷಕ:—ಈ ಮಾತಿನಿಂದ, ಯಾವಾಗ ಮುಹಮ್ಮದ್ ಸಾಹೇಬರು—

"ನನ್ನ ಬಳಿ ಖುದಾನ ಕಡೆಯಿಂದ ಆಯತ್ತುಗಳು ಬರುತ್ತವೆ.", ಎಂದು ಹೇಳುತ್ತಿದ್ದರೋ, ಆಗ ಯಾವನೋ ಬೇರೆಯವನೂ ಕೂಡ,—

"ನನ್ನ ಬಳಿಗೂ ಆಯುತ್ತುಗಳು ಇಳಿಯುತ್ತವೆ; ನನ್ನನ್ನೂ ಪೈಗಂಬರನೆಂದು ಒಪ್ಪಿಕೊಳ್ಳಿರಿ.", ಎಂದು ಮುಹಮ್ಮದ್ ಸಾಹೇಬರಂತೆ ಪ್ರಪಂಚವನ್ನು ರಚಿಸಿರಬಹುದು! ಇದನ್ನು ನಿವಾರಿಸಲು, ಮತ್ತು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಮುಹಮ್ಮದ್ ಸಾಹೇಬರು ಈ ಉಪಾಯವನ್ನು ಮಾಡಿರಬಹುದು, ಎಂದು ಸಿದ್ಧವಾಗುತ್ತದೆ!* [70]

### (ಖುದಾ ಮತ್ತು ಶೈತಾನರ ಜಗಳ)

[71] ಅವಶ್ಯವಾಗಿ ನಾವು ನಿಮ್ಮನ್ನು ಉತ್ಪನ್ನ ಮಾಡಿದೆವು. ಮತ್ತು ನಿಮ್ಮ ಆಕೃತಿಗಳನ್ನು ರಚಿಸಿದೆವು. ಮತ್ತೆ ನಾವು ದೇವದೂತರಿಗೆ—

"ಆದಮನಿಗೆ ಪ್ರಣಾಮ ಮಾಡಿರಿ.", ಎಂದೆವು.

ಆಯಿತು! ಅವರು ಪ್ರಣಾಮ ಮಾಡಿದರು! ಆದರೆ, ಶೈತಾನನು ಪ್ರಣಾಮ ಮಾಡುವವರಲ್ಲಿ ಸೇರಲಿಲ್ಲ.

"ಯಾವಾಗ ನಾನು ನಿನಗೆ ಆಜ್ಞೆಮಾಡಿದೆನೋ, ಆಗ ನೀನು ಪ್ರಣಾಮ ಮಾಡದಿರಲು ನಿನ್ನನ್ನಾವನು ತಡೆದನು?", ಎಂದು ಕೇಳಿದೆವು.

[ಅವನು]—"ನಾನು ಅವನಿಗಿಂತ ಉತ್ತಮನಾಗಿದ್ದೇನೆ. ನೀನು ನನ್ನನ್ನು ಬೆಂಕಿಯಿಂದ ಮತ್ತು ಅವನನ್ನು ಮಣ್ಣಿನಿಂದ ಉತ್ಪನ್ನ ಮಾಡಿದೆ.", ಎಂದನು.

[ನಾವು]—"ಸಾಕು! ಅದರಿಂದ† ಇಳಿ. ನೀನು ಆ ಬಗೆಗೆ ಅಭಿಮಾನ ಪಡುವುದು ನಿನಗೆ ಯೋಗ್ಯವಲ್ಲ", ಎಂದೆವು.

---

*ಇದರ ಐತಿಹಾಸಿಕತೆಯ ಅನುಸಂಧಾನವಾಗಬೇಕು.—ಸಂ.

†ಎಂದರೆ, ಸ್ವರ್ಗದಲ್ಲಿಂದ—ಯು.ಮೀ.

[ಅವನು]—"ಗೋರಿಗಳಿಂದ [ಜನರು] ಎಬ್ಬಿಸಲ್ಪಡುವ ದಿನದವರೆಗೆ ಅವಕಾಶ ಕೊಡು", ಎಂದು ಹೇಳಿದನು.

[ನಾವು]—"ನಿಶ್ಚಯವಾಗಿ ನೀನು ರಿಯಾಯತಿ ಮಾಡಲ್ಪಟ್ಟವರಲ್ಲಿದ್ದೀಯೆ", ಎಂದೆವು.

[ಅವನು]—"ಆಯಿತು! ನೀನು ನನ್ನನ್ನು ಪಥಭ್ರಷ್ಟನನ್ನಾಗಿ ಮಾಡಿದೆ, ಎಂಬುದಕ್ಕೆ ಇದೇ ಪ್ರಮಾಣವಾಗಿದೆ. ನಾನೂ ಕೂಡ, ಅವಶ್ಯವಾಗಿ ಅವರಿಗಾಗಿ, ನಿನ್ನ ನೇರವಾದ ಮಾರ್ಗದ ಮೇಲೆ ಕುಳಿತು ಕೊಳ್ಳುವೆನು".

"ಮತ್ತು ಪ್ರಾಯಶಃ ನೀನು ಅವರನ್ನು ಧನ್ಯವಾದ-ಸಮರ್ಪಿಸುವವರನ್ನಾಗಿ ಹೊಂದುವುದಿಲ್ಲ", ಎಂದನು.

[ನಾವು] ಅವನಿಗೆ—

"ದುಃಸ್ಥಿತಿಯೊಂದಿಗೆ ಹೊರಹೊರಡು. ಅವರುಗಳಲ್ಲಿ ಯಾವನಾದರೂ ನಿನ್ನ ಪಕ್ಷವನ್ನು ಅವಶ್ಯವಾಗಿ ಅವಲಂಬಿಸಿದರೆ, ನಿಮ್ಮೆಲ್ಲರಿಂದ ನರಕವನ್ನು ತುಂಬಿಸುವೆನು.", ಎಂದು ಹೇಳಿದೆವು.

[ಕುರಾನ್:-ಮಂ. 2; ಸಿ. 8; ಸೂ. 7; ಆ.11-18]

## (ಖುದಾ ಶೈತಾನನಿಗೆ ಏನನ್ನೂ ಮಾಡಲಾಗಲಿಲ್ಲ)

**ಸಮೀಕ್ಷಕ:**—ಈಗ ಗಮನವಿತ್ತು ಕೇಳಿರಿ, ಖುದಾ ಮತ್ತು ಶೈತಾನರ ಜಗಳವನ್ನು! ಕೇವಲ ಭೃತ್ಯನಂತಿರುವ ಒಬ್ಬ ದೇವದೂತನಿದ್ದನು. ಅವನೂ ಕೂಡ, ಖುದಾನ ಮುಂದೆ ಬಾಗಲಿಲ್ಲ! ಮತ್ತು ಖುದಾ ಅವನ ಆತ್ಮವನ್ನು ಪವಿತ್ರವಾಗಿಯೂ ಮಾಡಲಾರದೇ ಹೋದನು. ಮತ್ತೆ, ಪಾಪಿಯಾಗಿ ಮಾಡಿ, ದಂಗೆ ಮಾಡುವವನಾಗಿದ್ದ ಆ ದಂಗೆಕೋರನನ್ನು ಖುದಾ ಬಿಟ್ಟು ಬಿಟ್ಟನು! ಇದು ಖುದಾನ ದೊಡ್ಡ ತಪ್ಪಾಗಿದೆ!

ಶೈತಾನನಂತೂ ಎಲ್ಲರನ್ನೂ ಪಥಭ್ರಷ್ಟರನ್ನಾಗಿ ಮಾಡುವವನಾಗಿದ್ದಾನೆ. ಮತ್ತು ಖುದಾ ಶೈತಾನನನ್ನು ಪಥಭ್ರಷ್ಟನನ್ನಾಗಿ ಮಾಡುವವನಾಗಿರುವುದರಿಂದ, ಖುದಾ ಶೈತಾನನಿಗೂ ಶೈತಾನನಾಗಿದ್ದಾನೆ, ಎಂಬುದು ಸಿದ್ಧವಾಗುತ್ತದೆ! ಏಕೆಂದರೆ, ಶೈತಾನನು ಪ್ರತ್ಯಕ್ಷವಾಗಿ—

"ನೀನು ನನ್ನನ್ನು ಪಥಭ್ರಷ್ಟನನ್ನಾಗಿ ಮಾಡಿದೆ". ಎಂದು ಹೇಳುತ್ತಾನೆ. ಇದರಿಂದ, ಖುದಾನಲ್ಲಿ, ಪವಿತ್ರತೆಯೂ ಕಂಡು ಬರುವುದಿಲ್ಲ. ಮತ್ತು **ಸಮಸ್ತ ಕೆಡುಕುಗಳ ಪ್ರವರ್ತಕನಾದ ಮೂಲಕಾರಣನೂ ಖುದಾನೇ ಆದನು!**

**ಇಂತಹ ಖುದಾ ಮುಸಲ್ಮಾನರವನು ಮಾತ್ರ ಆಗಬಲ್ಲನು; ಬೇರೆಯ ಶ್ರೇಷ್ಠ ವಿದ್ವಾಂಸರುಗಳವನು ಅಲ್ಲ!**

ಮತ್ತು, ದೇವದೂತರೊಂದಿಗೆ ಮನುಷ್ಯರಂತೆ ವಾರ್ತಾಲಾಪ ಮಾಡುವುದರಿಂದ. ಮುಸಲ್ಮಾನರ ಖುದಾ ದೇಹಧಾರಿಯೂ, ಅಲ್ಪಜ್ಞನೂ ನ್ಯಾಯರಹಿತನೂ ಆಗಿದ್ದನೆಂದೇ ತೋರುತ್ತದೆ. ಆದುದರಿಂದಲೇ, ವಿದ್ವಜ್ಜನರು ಇಸ್ಲಾಮ್ ಮತವನ್ನು ಅಪೇಕ್ಷಿಸುವುದಿಲ್ಲ! [71]

### (ಆರು ದಿನಗಳಲ್ಲಿ ಜಗದುತ್ಪತ್ತಿ ಮಾಡಿ, ಮತ್ತೆ ವಿಶ್ರಾಮ)

**[72] ಆಕಾಶಗಳನ್ನೂ, ಪೃಥಿವಿಯನ್ನೂ ಆರು ದಿನಗಳಲ್ಲಿ ಉತ್ಪನ್ನ ಮಾಡಿದನು. ಮತ್ತು 'ಅರ್ಶ್'ನ ಮೇಲೆ ವಿಶ್ರಾಮ ತೆಗೆದುಕೊಂಡನು.**

**ನಿಮ್ಮ ಒಡೆಯನನ್ನು ದೈನ್ಯದಿಂದ ಕರೆಯಿರಿ.**

[ಕುರಾನ್:-ಮಂ. 2; ಸಿ. 8; ಸೂ. 7; ಆ. 54,55]

### (ಪಾಪ! ಆಯಾಸವಾಗಿರಬಹುದು)

**ಸಮೀಕ್ಷಕ:** --ಭಲೇ! ಆರು ದಿನಗಳಲ್ಲಿ ಜಗತ್ತನ್ನು ರಚಿಸುವ, **'ಅರ್ಶ್'**, ಎಂದರೆ ಊರ್ಧ್ವಾಕಾಶದಲ್ಲಿ ಸಿಂಹಾಸನದ ಮೇಲೆ ವಿಶ್ರಾಂತಿಯನ್ನು ಹೊಂದುವ, ಅವನು ಈಶ್ವರನೂ, ಸರ್ವಶಕ್ತಿಮಂತನೂ ಮತ್ತು ವ್ಯಾಪಕನೂ ಎಂದಿಗಾದರೂ ಆಗಬಲ್ಲನೇ? ಈ ಸ್ಥಿತಿ ಇಲ್ಲದಿರುವುದರಿಂದ, ಅವನು ಖುದಾ, ಎಂದು ಕೂಡ, ಹೇಳಿಸಿಕೊಳ್ಳಲಾರನು!

ಕೂಗುವುದರಿಂದ ಆಲಿಸುತ್ತಾನೆ, ಎನ್ನಲು ನಿಮ್ಮ ಖುದಾ ಕಿವುಡನಾಗಿದ್ದಾನೇನು? ಈ ಮಾತುಗಳೆಲ್ಲವೂ ಅನೀಶ್ವರಕೃತವಾಗಿವೆ! ಈ ಕಾರಣದಿಂದ, ಕುರಾನ್ ಈಶ್ವರಕೃತವಾಗಲಾರದು!

ಆರು ದಿನಗಳಲ್ಲಿ ಜಗತ್ತನ್ನು ಸೃಜಿಸಿದನು; ಏಳನೆಯ ದಿನ ಊರ್ಧ್ವಾಕಾಶದಲ್ಲಿ ವಿಶ್ರಾಂತಿಯನ್ನು ಪಡೆದನಾದರೆ, ಆಯಾಸಪಟ್ಟೂ ಇರಬಹುದು! ಮತ್ತು ಈ ವರೆಗೆ ನಿದ್ರಿಸುತ್ತಿದ್ದಾನೋ? ಅಥವಾ ಎಚ್ಚರವಾಗಿದ್ದಾನೆಯೋ? ಜಾಗ್ರತನಾಗಿದ್ದಾನೆಯಾದರೆ, ಈಗ ಏನಾದರೂ ಕೆಲಸ ಮಾಡುತ್ತಾನೋ, ಅಥವಾ ನಿಷ್ಕರ್ಮನಾಗಿ ಪ್ರವಾಸ ಮಾಡುತ್ತಾ ಮತ್ತು ಮಜಾ ಮಾಡುತ್ತಾ ತಿರುಗಾಡುತ್ತಿದ್ದಾನೋ? [72]

### (ಪೃಥಿವಿಯಲ್ಲಿ ಜಗಳವಾಡುತ್ತಿರಬೇಡಿ)

**[73] ತಿರುಗಾಡಬೇಡಿ ಪೃಥಿವಿಯಲ್ಲಿ ಜಗಳವಾಡುತ್ತಾ.**

[ಕುರಾನ್:-ಮಂ. 2; ಸಿ. 8; ಸೂ. 7; ಆ. 74]

**(ಜಗಳವಾಡಬಾರದು ಮತ್ತು 'ಜಿಹಾದ್', ಎರಡೂ ಪರಸ್ಪರ ವಿರುದ್ಧ)**

**ಸಮೀಕ್ಷಕ:**—ಈ ಮಾತೇನೋ ಚೆನ್ನಾಗಿದೆ. ಆದರೆ, ಇದಕ್ಕೆ ವಿರುದ್ಧವಾಗಿ ಬೇರೆಯ ಸ್ಥಾನದಲ್ಲಿ 'ಜಿಹಾದ್'* ಮಾಡುವುದು ಮತ್ತು ಕಾಫಿರರನ್ನು ಕೊಲ್ಲುವುದು ಕೂಡ, ಕರ್ತವ್ಯವೆಂದು ಬರೆದಿದ್ದಾರೆ!

ಈಗ ಹೇಳಿರಿ, [ಇವು] ಪೂರ್ವಾಪರ ವಿರುದ್ಧವಾಗಿಲ್ಲವೇನು? ಇದರಿಂದ, ಮುಹಮ್ಮದ್ ಸಾಹೇಬರು ಯಾವಾಗ ನಿರ್ಬಲರಾಗಿದ್ದಿರಬಹುದೋ, ಆಗ ಅವರು ಈ ಉಪಾಯವನ್ನು ರಚಿಸಿರಬಹುದೆಂದು ವಿದಿತವಾಗುತ್ತದೆ. ಮತ್ತು ಯಾವಾಗ ಸಬಲರಾಗಿರಬಹುದೋ, ಆಗ ಜಗಳ ತೆಗೆದಿರಬಹುದು! ಇದೇ ಕಾರಣದಿಂದ, ಈ ಮಾತುಗಳು ಪರಸ್ಪರ ವಿರುದ್ಧವಾಗಿರುವುದರಿಂದ, ಎರಡರಲ್ಲಿ ಯಾವುದೂ ಸತ್ಯವಾಗಿಲ್ಲ. [73]

**(ಕೋಲು ಹಾವಾಯಿತು)**

**[74] ಆಯಿತು! ಒಂದೇ ಸಾರಿ ತನ್ನ ಕೋಲನ್ನು ಎಸೆದನು. ಮತ್ತು ಅದು ಪ್ರತ್ಯಕ್ಷ ಹೆಬ್ಬಾವಾಗಿತ್ತು!** [ಕುರಾನ್:–ಮಂ. 2; ಸಿ. 9; ಸೂ. 7; ಆ. 107]

**(ಇಂತಹ ಸುಳ್ಳು ಮಾತುಗಳನ್ನು ಒಪ್ಪುವುದು ಅವಿದ್ಯೆ)**

**ಸಮೀಕ್ಷಕ:**—ಈಗ ಇದನ್ನು ಬರೆಯುವುದರಿಂದ, ಇಂತಹ ಸುಳ್ಳು ಮಾತುಗಳನ್ನು ಖುದಾ ಮತ್ತು ಮುಹಮ್ಮದ್ ಸಾಹೇಬರೂ ಕೂಡ, ಅಂಗೀಕರಿಸುತ್ತಿದ್ದರೆಂದು ವಿದಿತವಾಗುತ್ತದೆ. ಹೀಗಾಗಿದ್ದರೆ, ಇವರಿಬ್ಬರೂ ವಿದ್ವಾಂಸರಾಗಿರಲಿಲ್ಲ! ಏಕೆಂದರೆ, ಕಣ್ಣಿನಿಂದ ನೋಡುವುದನ್ನೂ, ಕಿವಿಯಿಂದ ಕೇಳುವುದನ್ನೂ ಯಾವನೂ ಅನ್ಯಥಾ ಮಾಡಲಾರನು! ಆದುದರಿಂದಲೇ, ಇವು 'ಇಂದ್ರಜಾಲ'ದ ಮಾತುಗಳಾಗಿವೆ. [74]

**(ಒಬ್ಬನನ್ನು ಮುಳುಗಿಸಿದ; ಇನ್ನೊಬ್ಬನನ್ನು ಪಾರಾಗಿಸಿದ)**

**[75] ಸರಿ! ನಾವು ಅವನ ಮೇಲೆ ಬಿರುಗಾಳಿಯನ್ನೂ, ಪಾತರಗಿತ್ತಿಯಂತಹ ಹುಳುಗಳನ್ನೂ, ಹೇನುಗಳನ್ನೂ, ಕಪ್ಪೆಗಳನ್ನೂ, ಮತ್ತು ರಕ್ತವನ್ನೂ ಸುರಿಸಿದೆವು.**

**ಆಯಿತು! ನಾವು ಅವರಿಂದ ಮುಯ್ಯಿ ತೀರಿಸಿಕೊಂಡೆವು. ಮತ್ತು ಅವರನ್ನು ನದಿಯಲ್ಲಿ ಮುಳುಗಿಸಿಬಿಟ್ಟೆವು.**

**ಮತ್ತು ನಾವು ಇಸ್ರಾಯೇಲನ ಸಂತಾನಗಳನ್ನು ನದೀ ತೀರಕ್ಕೆ ದಾಟಿಸಿದೆವು.**

**ಇವರಿರುವ ಆ ಧರ್ಮ ಸುಳ್ಳಾಗಿದೆ. ಮತ್ತು ಅವರ ಕಾರ್ಯವೂ ಕೂಡ, ಸುಳ್ಳಾಗಿದೆ.** [ಕುರಾನ್:–ಮಂ. 2; ಸಿ. 9; ಸೂ. 7; ಆ. 133,136,138,139]

---

*ಧರ್ಮಯುದ್ಧ —ಅನು.

## (ಇದು ಅಧರ್ಮ)

**ಸಮೀಕ್ಷಕ:**—ಈಗ ನೋಡಿರಿ, ಯಾವನಾದರೂ ಪಾಖಂಡಿಯು ಯಾವ ನಾದರೂ ಮುಗ್ಧನನ್ನು—"ನಾವು ನಿಮ್ಮ ಮೇಲೆ ಸರ್ಪಗಳನ್ನು [ನಿಮ್ಮನ್ನು] ಕೊಲ್ಲುವುದಕ್ಕಾಗಿ ಕಳುಹಿಸುವೆವು.", ಎಂದು ಹೆದರಿಸುವ ಮಾತಿನಂತೆಯೇ ಈ ಮಾತೂ ಇದೆ! ಒಂದು ಜಾತಿಯನ್ನು ಮುಳುಗಿಸುವಂತಹವನೂ ಮತ್ತು ಇನ್ನೊಂದನ್ನು ದಡೆ ಹಾಯಿಸುವಂತಹವನೂ ಆದ ಪಕ್ಷಪಾತಿಯಾಗಿರುವ ಖುದಾ ಅಧರ್ಮಿ ಏತಕ್ಕಲ್ಲ?

ಯಾವನು ಸಾವಿರಾರು, ಕೋಟ್ಯಂತರ ಜನರು ಇರುವ ಬೇರೆಯ ಮತಗಳನ್ನು ಸುಳ್ಳೆಂದು ಹೇಳುತ್ತಾನೋ, ಮತ್ತು ತನ್ನನ್ನು ತಾನೇ ಸತ್ಯವಂತನೆಂದು ಹೇಳಿಕೊಳ್ಳು ತ್ತಾನೋ, ಅವನ ಮತಕ್ಕಿಂತ ಹೆಚ್ಚು ಮಿಥ್ಯಾಮತ ಮತ್ತಾವುದು ಇರಬಲ್ಲದು?

**ಏಕೆಂದರೆ, ಯಾವುದೇ ಒಂದು ಮತದಲ್ಲಿಯೂ ಎಲ್ಲ ಮನುಷ್ಯರೂ ಕೆಟ್ಟವರು; ಅಥವಾ [ಎಲ್ಲರೂ] ಒಳ್ಳೆಯವರು ಆಗಿರಲಾರರು!** ಈ ರೀತಿಯಲ್ಲಿ ಏಕಪಕ್ಷೀಯವಾದ ನಿರ್ಣಯವನ್ನು ಮಾಡುವುದು ಮಹಾಮೂರ್ಖರಾದವರ ಮತಕ್ಕೆ ಯೋಗ್ಯವಾಗಿದೆ!

ಅವರದೇ ಆಗಿದ್ದ ತೌರೇತ್-ಜಬೂರ್‌ಗಳ ಮತ ಸುಳ್ಳಾಗಿ ಹೋಯಿತೇನು? ಅಥವಾ ಸುಳ್ಳೆಂದು ಸಾರುವ ಆ ಸಂಪ್ರದಾಯವು ಬೇರೆ ಯಾವುದಾದರೂ ಆಗಿದ್ದಿತೋ? ಮತ್ತು ಅನ್ಯಮತವಿದ್ದಿತಾದರೆ, ಅದಾವುದಾಗಿದ್ದಿತು? ಕುರಾನಿನಲ್ಲಿ ಅವರ ಹೆಸರೇನಾದರೂ ಇರಬಹುದಾದರೆ, ಅದನ್ನು ಹೇಳಿರಿ! [75]

## (ಖುದಾನನ್ನು ನೋಡಿ ಮೂಸಾ ಪ್ರಜ್ಞೆತಪ್ಪಿದನು)

**[76] ಯಾವಾಗ ಅವರ ಸ್ವಾಮಿಯು ಪರ್ವತದ ಕಡೆಗೆ ಬೆಳಕನ್ನು ಬೀರಿದನೋ, ಮತ್ತು ಅದನ್ನು ಪರಮಾಣು-ಪರಮಾಣುವಾಗಿ ಮಾಡಿದನೋ, ಆಗ ಮೂಸಾ ಪ್ರಜ್ಞೆತಪ್ಪಿ, ಬಿದ್ದುಹೋದನು. ಸಾಕು! ನನ್ನನ್ನಂತೂ [ನೀನು] ನಿಶ್ಚಯ ವಾಗಿ ನೋಡಬಲ್ಲೆ.**

**[ಕುರಾನ್:–ಮಂ. 2; ಸಿ. 9; ಸೂ. 7; ಆ. 148]**

## (ಖುದಾ ಈಗ ಚಮತ್ಕಾರವನ್ನೇಕೆ ತೋರಿಸುವುದಿಲ್ಲ?)

**ಸಮೀಕ್ಷಕ:**—ಯಾವನು ದೃಷ್ಟಿಗೋಚರನಾಗುತ್ತಾನೋ, ಅವನು ವ್ಯಾಪಕ ನಾಗಲಾರನು. ಮತ್ತು ಇಂತಹ ಚಮತ್ಕಾರಗಳನ್ನು ಮಾಡುತ್ತಾ ತಿರುಗಾಡುತ್ತಿದ್ದ ನಾದರೆ, ಖುದಾ ಈ ಕಾಲದಲ್ಲಿ ಇಂತಹ ಚಮತ್ಕಾರವನ್ನು ಯಾವನಿಗೂ ತೋರಿಸುವು ದಿಲ್ಲವೇಕೆ? ಸರ್ವಥಾ [ವಿದ್ಯಾ]-ವಿರುದ್ಧವಾಗಿರುವುದರಿಂದ, ಈ ಮಾತು ಒಪ್ಪಿಕೊಳ್ಳಲರ್ಹವಾಗಿರುವುದಿಲ್ಲ. [76]

### (ಹಗಲು-ಸಂಜೆ ಖುದಾನನ್ನು ಸ್ಮರಿಸು)

[77] ಮತ್ತು ನಿನ್ನ ಸ್ವಾಮಿಯನ್ನು ದೈನ್ಯದಿಂದ ಮತ್ತು ಭಯದಿಂದ ಮನಸ್ಸಿನಲ್ಲಿ ಇಳಿದನಿಯಿಂದ ಬೆಳಿಗ್ಗೆ ಮತ್ತು ಸಂಜೆ ಸ್ಮರಿಸು.

[ಕುರಾನ್:-ಮಂ. 2; ಸಿ. 9; ಸೂ.7; ಆ. 205]

### (ಇಳಿದನಿ-ಉಚ್ಚದನಿಯ ಕರೆಯಲ್ಲಿ ಏನು ಸತ್ಯವಿದೆ?)

ಸಮೀಕ್ಷಕ: —ಒಂದೊಂದು ಕಡೆ, ಕುರಾನಿನಲ್ಲಿ—"ಉಚ್ಚಸ್ವರದಲ್ಲಿ ನಿನ್ನ ಸ್ವಾಮಿಯನ್ನು ಕರೆ", ಎಂದು ಬರೆದಿದ್ದಾರೆ. ಮತ್ತು ಒಂದೊಂದು ಕಡೆ. "ಮೆಲ್ಲಮೆಲ್ಲನೆ ಈಶ್ವರನನ್ನು ಸ್ಮರಿಸು.", ಎಂದು. ಈಗ ಹೇಳಿರಿ. ಯಾವ ಮಾತು ಸತ್ಯವಾಗಿದೆ? ಮತ್ತು ಯಾವ ಮಾತು ಸುಳ್ಳಾಗಿದೆ?

ಒಂದು ಮಾತು ಇನ್ನೊಂದು ಮಾತನ್ನು ವಿರೋಧಿಸುತ್ತದೆಯಾದರೆ, ಆ ಮಾತು ಪ್ರಮತ್ತನ ಹಾಡಿಗೆ ಸಮಾನವಾಗಿರುತ್ತದೆ! ಯಾವುದಾದರೂ ಮಾತು ಭ್ರಾಂತಿಯಿಂದ. ವಿಪರೀತವಾಗಿ ಹೊರಟುಬಿಟ್ಟಾಗ, ಅದನ್ನು ಒಪ್ಪಿಕೊಂಡುಬಿಡುವುದಾದರೆ, ಏನೂ ಚಿಂತೆಯಿಲ್ಲ!* [77]

### (ಅಲ್ಲಾಹ ಮತ್ತು ರಸೂಲನಿಗೆ ಲೂಟಿಯ ಸಂಪತ್ತು)

[78] ಪ್ರಶ್ನಿಸುತ್ತೇವೆ ನಿನ್ನನ್ನು ಲೂಟಿಗಳ ಬಗ್ಗೆ. ಅಲ್ಲಾಹನ ಸಲುವಾಗಿ ಮತ್ತು ರಸೂಲನ ಸಲುವಾಗಿ ಲೂಟಿಗಳಿವೆ, ಎಂದು ಹೇಳಿರಿ. ಮತ್ತು ಹೆದರಿರಿ ಅಲ್ಲಾಹನಿಗೆ!

[ಕುರಾನ್:-ಮಂ. 2; ಸಿ. 9; ಸೂ. 8; ಆ.1]

---

*ಇದು ಮಹರ್ಷಿ ದಯಾನಂದರ ವೈಶಿಷ್ಟ್ಯ! ಗ್ವಾಲಿಯರ್‌ನಲ್ಲಿ ಅವರು ಪ್ರವಚನ ನೀಡುತ್ತಿದ್ದಾಗ, ಹೀಗೆ ತಪ್ಪನ್ನು ಒಪ್ಪಿಕೊಂಡು ಬಿಟ್ಟರು. ಈ ಗ್ರಂಥದ ಪುಟ 817ರ ಪಾದ ಟಿಪ್ಪಣಿಯನ್ನು ನೋಡಿ.

'ಪೂನಾ ಪ್ರವಚನ'ದಲ್ಲೂ ಇಂತಹ ಒಂದು ಪ್ರಸಂಗವಿದೆ. ಅಲ್ಲಿ ಮಹರ್ಷಿ ದಯಾನಂದರು ಪೌರಾಣಿಕ ಜನವೃಂದದೆದುರು ಪ್ರವಚನ ಕೊಡುತ್ತಾ—

"ನಾವೆಲ್ಲ ಹಿಂದುಗಳು—; ಇಲ್ಲ, ನಾನು ತಪ್ಪು ಮಾಡಿದೆ! ನಾವೆಲ್ಲ ಆರ್ಯರು—", ಎಂದು, ತಿದ್ದಿಕೊಳ್ಳುತ್ತಾರೆ.

ಸಾಧಾರಣ ಪಂಡಿತರಲ್ಲಿ–ವಿದ್ವಾಂಸರಲ್ಲಿ ಈ ಘನತೆ ಇರುವುದಿಲ್ಲ. ಪೌರಾಣಿಕ ವಿದ್ವಾಂಸರು ತಮ್ಮ ತಪ್ಪು ತಿಳಿವಳಿಕೆಯನ್ನು ಸರಿ, ಎಂದು ಸಾಧಿಸುವುದರಲ್ಲಿ ನಿಸ್ಸೀಮರು! ಸಾರಸ್ವತ ವ್ಯಾಕರಣದ ರಚನಾಕಾರನು 'ಪುಂಸು', ಎಂಬ ಸ್ಥಾನದಲ್ಲಿ 'ಪುಂಕ್ಷು', ಎಂಬ ರಚನೆ ಮಾಡಿ, ಇದಕ್ಕೆ ಒಂದು ಉದಾಹರಣೆಯನ್ನೇ ಸ್ಥಾಪಿಸಿದ್ದಾನೆ.—ಸಂ.

**(ಕೊಳ್ಳೆ-ಲೂಟಿ ಹೊಡೆಯುವುದು, ಉತ್ತಮ ಕರ್ಮವೇನು?)**

**ಸಮೀಕ್ಷಕ:—ಸೂರೆಯನ್ನೂ ಮಾಡುತ್ತಾರೆ! ಕೊಳ್ಳೆಗಾರರ ಕೃತ್ಯವನ್ನೂ ಮಾಡುತ್ತಾರೆ-ಮಾಡಿಸುತ್ತಾರೆ! ಆದರೂ ಸಹ, ಖುದಾ, ಪೈಗಂಬರ, ಮತ್ತು ಪ್ರಾಮಾಣಿಕರೂ ಆಗಿ ಕೂಡ, ಬೇರೆ ಮೆರೆಯುತ್ತಾರೆ, ಎಂಬುದು ಮಹದಾಶ್ಚರ್ಯದ ಸಂಗತಿಯಾಗಿದೆ!**

ಮತ್ತು ಅಲ್ಲಾಹನ ಭೀತಿಯನ್ನೂ ಬಿತ್ತುತ್ತಾರೆ!

ಮತ್ತು ದರೋಡೆ ಮೊದಲಾದ ದುಷ್ಕೃತ್ಯಗಳನ್ನೂ ಕೂಡ, ಮಾಡುತ್ತಾ ಹೋಗುತ್ತಾರೆ! ಆದರೂ,—**'ಉತ್ತಮ ಮತ ನಮ್ಮದು', ಎಂದು ಹೇಳುವುದಕ್ಕೆ ನಾಚಿಕೆಯೂ ಕೂಡ, ಇಲ್ಲ!**

ಮತವನ್ನು ಬಿಟ್ಟು, ಸತ್ಯವಾದ ವೇದಮತವನ್ನು ಗ್ರಹಿಸದಿದ್ದರೆ, ಇದಕ್ಕಿಂತ ಅಧಿಕವಾದ ಕೇಡು ಮತ್ತಾವುದು ಇದ್ದೀತು? [78]

**(ಕಾಫಿರರನ್ನು ಕೊಲ್ಲಿ! ನಾನು ಸಹಾಯ ಮಾಡುತ್ತೇನೆ)**

**[79] ಮತ್ತು ಕಾಫಿರರ ಬೇರನ್ನು ಕತ್ತರಿಸಿ ಹಾಕಿರಿ.**

**ನಾನು ನಿಮಗೆ, ಹಿಂದೆ-ಹಿಂದೆಯೇ ಬರುವ ಸಾವಿರ ದೇವದೂತರೊಂದಿಗೆ ಸಹಾಯ ಕೊಡುವೆನು.**

**ಅವಶ್ಯವಾಗಿ ನಾನು ಕಾಫಿರರ ಹೃದಯಗಳಲ್ಲಿ ಭಯವನ್ನು ಉಂಟು ಮಾಡುವೆನು.**

**ಸರಿ! ಹೊಡೆಯಿರಿ ಕೊರಳುಗಳ ಮೇಲೆ! ಹೊಡೆಯಿರಿ ಅವರ ಪ್ರತಿಯೊಂದು ಸಂಧಿಯ ಮೇಲೆಯೂ!**

**[ಕುರಾನ್:-ಮಂ. 2; ಸಿ. 9; ಸೂ. 8; ಆ. 7, 9, 12]**

**(ಹೊಡೆದಾಟದ ಮಾತುಗಳನ್ನು ಹೇಳುವ ಖುದಾ ಎಂತಹವನು?)**

**ಸಮೀಕ್ಷಕ:**—ಭಾಪು, ಸ್ವಾಮಿ! ಭಾಪು!! ಮುಸಲ್ಮಾನೀ ಮತದಿಂದ ಬೇರೆ ಯಾವ ಕಾಫಿರರ ಬೇರನ್ನು ಕತ್ತರಿಸಿ ಹಾಕಿಸುವ, ಖುದಾ ಎಂತಹವನು! ಮತ್ತು ಪೈಗಂಬರ್ ಎಂತಹ ನಿರ್ದಯೀ! ಮತ್ತು ಖುದಾ—

"ಅವರ ಕುತ್ತಿಗೆಯ [ಮೇಲೆ] ಹೊಡೆಯಿರಿ", ಎಂದು ಆಜ್ಞಾಪಿಸುತ್ತಾನೆ! ಮತ್ತು ಕೈಕಾಲುಗಳ ಸಂಧಿಗಳನ್ನು ಕತ್ತರಿಸಲು ಸಹಾಯವನ್ನೂ, ಸಮ್ಮತಿಯನ್ನೂ ಕೊಡುತ್ತಾನೆ!

ಇಂತಹ ಖುದಾ ಲಂಕಾಧೀಶ್ವರ*ನಿಗಿಂತ ಏನಾದರೂ ಕಡಿಮೆ ಇದ್ದಾನೇನು? ಈ ಎಲ್ಲ ಪ್ರಪಂಚವೂ ಕುರಾನಿನ ಕರ್ತೃವಿನದು†, ಖುದಾನದಲ್ಲ! ಒಂದು ವೇಳೆ, ಖುದಾನದಾಗಿರುವುದಾದರೆ, ಇಂತಹ ಖುದಾ ನಮ್ಮಿಂದ ದೂರವಿರಲಿ! ಮತ್ತು ನಾವು ಅವನಿಂದ ದೂರವಿರೋಣ! [79]

## (ಅಲ್ಲಾಹನನ್ನು ಮತ್ತು ರಸೂಲನನ್ನು ಕರೆಯಿರಿ)

[80] ಅಲ್ಲಾಹನು ಮುಸಲ್ಮಾನರೊಂದಿಗಿದ್ದಾನೆ.

ಓ ಜನರೇ! ನಂಬಿಕೆಯಿಟ್ಟಿರುವಿರಾದರೆ, ಅಲ್ಲಾಹನ ಸಲುವಾಗಿ, ಮತ್ತು ರಸೂಲನ ಸಲುವಾಗಿ ಕರೆಯುವುದನ್ನು ಸ್ವೀಕರಿಸಿರಿ.

ಓ ಜನರೇ! ನಂಬಿಕೆಯಿಟ್ಟಿರುವಿರಾದರೆ, ಅಲ್ಲಾಹನದನ್ನೂ, ರಸೂಲನದನ್ನೂ ಕದಿಯಬೇಡಿರಿ. ಮತ್ತು ನಿಮ್ಮ ಬಳಿ ಒತ್ತೆ ಇಟ್ಟಿರುವುದನ್ನೂ ಕದಿಯಬೇಡಿರಿ.

ಮತ್ತು ವಂಚಿಸುತ್ತಿದ್ದನು ಅಲ್ಲಾಹನು. ಮತ್ತು ಅಲ್ಲಾಹನು ಹೆಚ್ಚು ವಂಚಕರವನು ಆಗಿದ್ದಾನೆ.

[ಕುರಾನ್:-ಮಂ. 2; ಸಿ. 9; ಸೂ. 8; ಆ. 19, 24, 27, 30]

## (ಅಲ್ಲಾಹನು ಕಿವುಡನೇನು?)

**ಸಮೀಕ್ಷಕ:**—ಅಲ್ಲಾಹನು ಮುಸಲ್ಮಾನರ ಪಕ್ಷಪಾತಿಯೇನು? ಹಾಗಿದ್ದರೆ, ಅಧರ್ಮವನ್ನಾಚರಿಸುತ್ತಾನೆ! ಇಲ್ಲವಾದರೆ, ಈಶ್ವರನು ಸಂಪೂರ್ಣ ಸೃಷ್ಟಿಗೂ ಸಂಬಂಧಿಸಿದವನಾಗಿದ್ದಾನೆ.

ಕರೆಯದೇ ಇದ್ದರೆ, ಖುದಾ ಆಲಿಸಲಾರನೇನು? ಕಿವುಡನಾಗಿದ್ದಾನೇನು? ಮತ್ತು ಅವನೊಂದಿಗೆ ರಸೂಲನನ್ನು ಭಾಗೀದಾರನನ್ನಾಗಿ ಮಾಡುವುದು ಬಹಳ ಕೆಟ್ಟ ಸಂಗತಿಯಲ್ಲವೇನು?

## (ಕದಿಯುವುದಕ್ಕಾಗಿ ಅಲ್ಲಾಹನ ಮತ್ತು ರಸೂಲನ ಯಾವ ಖಜಾನೆ ತುಂಬಿದೆ?)

ಕದಿಯುವುದಕ್ಕೆ, ಅಲ್ಲಾಹನ ಯಾವ ಖಜಾನೆ ತುಂಬಿಕೊಂಡಿದೆ? ರಸೂಲನ, ಮತ್ತು ತನ್ನ ಬಳಿ ಒತ್ತೆಯಿಟ್ಟುದರ ಕಳುವನ್ನು ಬಿಟ್ಟು, ಬೇರೆ ಎಲ್ಲದರ ಕಳುವನ್ನೂ ಮಾಡುತ್ತಾ ಹೋಗಬಹುದೇನು? ಇಂತಹ ಉಪದೇಶ ಅವಿದ್ವಾಂಸರದು ಮತ್ತು ಅಧರ್ಮಿಗಳದು ಆಗಬಲ್ಲದು!

---

*ಎಂದರೆ, ರಾಕ್ಷಸನಿಗಿಂತ.—ಸಂ.

†ಕುರಾನಿನ ಕರ್ತೃ ಯಾರು? ಯೋಚಿಸಿ, ಹೇಳಿ.—ಸಂ.

ಅಲ್ಲಾ! ಯಾವನು ವಂಚಿಸುತ್ತಾನೋ, ಮತ್ತು ಯಾವನು ವಂಚಿಸುವವರ ಸಂಗಾತಿಯಾಗಿದ್ದಾನೋ, ಆ ಖುದಾ ಕಪಟಿಯೂ, ಛಲಿಯೂ ಮತ್ತು ಅಧರ್ಮಿಯೂ ಏತಕ್ಕಲ್ಲ?

ಆದುದರಿಂದ, ಈ ಕುರಾನ್ ಖುದಾ ರಚಿಸಿದುದಲ್ಲ! ಯಾವನೋ ಕಪಟಿಯೂ, ಛಲಿಯೂ ಆದವನು ರಚಿಸಿದುದಾಗಿರಬಹುದು! ಇಲ್ಲದಿದ್ದರೆ, ಇಂತಹ ಪ್ರತಿಕೂಲವಾದ ಮಾತುಗಳು ಬರೆಯಲ್ಪಡುತ್ತಿದ್ದವೇತಕ್ಕೆ? [80]

## (ಲೂಟಿಯ ಸಂಪತ್ತಿನಲ್ಲಿ ಖುದಾ ಮತ್ತು ರಸೂಲನ 1/5ಭಾಗ)

[81] ಮತ್ತು ಉಪದ್ರವವು ಎಂದರೆ ಕಾಫಿರರ ಬಲವು, ಧ್ವಂಸವಾಗುವವರೆಗೆ ಮತ್ತು ಸಮಸ್ತ ಧರ್ಮಗಳೂ ಅಲ್ಲಾಹನ ಸಲುವಾಗಿ ಆಗಿಹೋಗುವವರೆಗೆ, ಕಾದಾಡಿರಿ ಅವರೊಂದಿಗೆ!

ಮತ್ತು ಯಾವುದೇ ವಸ್ತುವಿನಿಂದ ನೀವೇನು ಕೊಳ್ಳೆ ಹೊಡೆಯುವಿರೋ, ಅದರ ಐದನೆಯ ಒಂದು ಭಾಗ ಅಲ್ಲಾಹನ ಸಲುವಾಗಿ, ಮತ್ತು ರಸೂಲನ ಸಲುವಾಗಿ ನಿಶ್ಚಯವಾಗಿಯೂ ಇರುತ್ತದೆ, ಎಂಬುದನ್ನು ನೀವು ತಿಳಿದುಕೊಳ್ಳಿರಿ.

[ಕುರಾನ್:-ಮಂ. 2; ಸಿ. 9; ಸೂ. 8; ಆ. 39, 41]

## (ಮತದ ಹೆಸರಿನಲ್ಲಿ ಹೊಡೆದಾಟ ಕಲಿಸುವುದು ಸರಿಯಲ್ಲ)

ಸಮೀಕ್ಷಕ:—ಇಂತಹ ಅನ್ಯಾಯದೊಂದಿಗೆ ಹೋರಾಡುವ, ಹೋರಾಡಿಸುವ, ಮುಸಲ್ಮಾನರ ಖುದಾನಿಗಿಂತ ಬೇರೆ ಶಾಂತಿಭಂಗ ಮಾಡುವ ಮತ್ತೊಬ್ಬನು ಯಾವನಿರಬಹುದು?

ಈಗ ನೋಡಿರಿ, ಈ ಮತವನ್ನು! ಎಂದರೆ, ಅಲ್ಲಾಹನಿಗಾಗಿ ಮತ್ತು ರಸೂಲನಿಗಾಗಿ ಸಮಸ್ತ ಜಗತ್ತನ್ನೂ ಕೊಳ್ಳೆ ಹೊಡೆಯುವುದು-ಹೊಡೆಯಿಸುವುದು ದರೋಡೆಕೋರರ ಕೆಲಸವಲ್ಲವೇನು?* ಮತ್ತು ಸೂರೆಯ ವಸ್ತುವಿನಲ್ಲಿ ಖುದಾ ಭಾಗೀದಾರನಾಗುವುದು, ದರೋಡೆಕೋರನಾಗುವಂತೆಯೇ ಸರಿ! ಮತ್ತು ಇಂತಹ ಸೂರೆ ಹೊಡೆಯುವವರ ಪಕ್ಷಪಾತಿಯಾಗಿರುವುದರಿಂದ, ಖುದಾ ತನ್ನ ಖುದಾತನಕ್ಕೆಯೇ ಕಳಂಕ ತಂದುಕೊಳ್ಳುತ್ತಾನೆ!

---

*ಮುಹಮ್ಮದ್ ಪೈಗಂಬರರ ಜನನ ಮತ್ತು ಇಸ್ಲಾಂ ಪ್ರಚಾರದ ಪರಿಣಾಮವಾಗಿ ಯೂರೋಪ್ ಮತ್ತು ಏಷ್ಯಾ ಖಂಡಗಳಲ್ಲಿ ಆದ ಶಾಂತಿಭಂಗ, ನರಸಂಹಾರ, ರಾಜ್ಯನಾಶಗಳ ಸಂಬಂಧದ ಐತಿಹಾಸಿಕ ಘಟನಾಚಕ್ರದ ಸಂಕೇತವನ್ನು ಪರಿಶಿಷ್ಟ-೬ ರಲ್ಲಿ ತೋರಿಸಲಾಗಿದೆ. —ಸಂ.

(ಇಂತಹ ಮತ ಪ್ರಚಲಿತವಾಗದಿದ್ದಿದ್ದರೆ, ಜಗತ್ತು ಆನಂದದಲ್ಲಿರುತ್ತಿತ್ತು)

ಇಂತಹ ಪುಸ್ತಕ, ಇಂತಹ ಖುದಾ, ಮತ್ತು ಇಂತಹ ಪೈಗಂಬರರು ಜಗತ್ತಿನಲ್ಲಿ ಇಂತಹ ಉಪದ್ರವವನ್ನು ಸೃಜಿಸಿ, ಮತ್ತು ಶಾಂತಿಭಂಗ ಮಾಡಿ, ಮಾನವರಿಗೆ ದುಃಖವನ್ನೀಯಲು ಎಲ್ಲಿಂದ ಬಂದರು, ಎಂಬುದೇ ದೊಡ್ಡ ಆಶ್ಚರ್ಯದ ಸಂಗತಿಯಾಗಿದೆ! ಇಂತಿಂತಹ ಮತಗಳು ಜಗತ್ತಿನಲ್ಲಿ ಪ್ರಚಲಿತವಾಗದೇ ಇದ್ದಿದ್ದರೆ, ಸಮಸ್ತ ಜಗತ್ತೂ ಆನಂದದಿಂದ ಇರುತ್ತಿದ್ದಿತು.* [81]

(ದೇವದೂತರಿಂದ ಕಾಫಿರರ ನಾಶ)

[82] ಮತ್ತು ದೇವದೂತರು ಕಾಫಿರರನ್ನು ವಶಪಡಿಸಿಕೊಳ್ಳುವುದನ್ನೂ, ಅವರ ಮುಖಗಳಿಗೆ ಮತ್ತು ಅವರ ಬೆನ್ನುಗಳಿಗೆ ಹೊಡೆಯುವುದನ್ನೂ ಮತ್ತು— 'ಸವಿಯಿರಿ ಸುಡುವ ಶಿಕ್ಷೆಯನ್ನು', ಎಂದು ಹೇಳುವುದನ್ನೂ ಎಂದಾದರೂ ನೋಡಿದ್ದೀರೋ?

ನಾವು ಅವರ ಪಾಪದಿಂದ ಅವರನ್ನು ಸಾಯಿಸಿದೆವು. ಮತ್ತು ನಾವು 'ಫಿರಾಓನ'†ನ ಜಾತಿಯನ್ನು ಮುಳುಗಿಸಿಬಿಟ್ಟೆವು.

ಮತ್ತು ನಿಮಗೆ ಎಷ್ಟು ಸಾಧ್ಯವೋ, ಅಷ್ಟು ಸನ್ನಾಹವನ್ನು ಮಾಡಿರಿ, ಅವರ ಸಲುವಾಗಿ.

[ಕುರಾನ್:-ಮಂ. 2; ಸಿ. 9; ಸೂ. 8; ಆ. 50, 54, 60]

(ಆ ದೇವದೂತರು ಈಗ ಎಲ್ಲಿ ನಿದ್ರಿಸುತ್ತಿದ್ದಾರೆ?)

**ಸಮೀಕ್ಷಕ:**—ಏನು ಸ್ವಾಮಿ? ಈ ದಿನಗಳಲ್ಲಿ ರಷ್ಯಾ ದೇಶವು ರೋಮ್ ಮೊದಲಾದುವನ್ನೂ, ಮತ್ತು ಇಂಗ್ಲೆಂಡ್ ದೇಶವು ಈಜಿಪ್ತನ್ನೂ ದುರ್ದಶಾಗ್ರಸ್ತವನ್ನಾಗಿ ಮಾಡಿಬಿಟ್ಟವಲ್ಲ! ದೇವದೂತರು ಎಲ್ಲಿ ನಿದ್ರಿಸಿದ್ದರು?

ಮತ್ತು ತನ್ನ ಸೇವಕರ ಶತ್ರುಗಳನ್ನು ಖುದಾ ಮೊದಲು ಸಾಯಿಸುತ್ತಾ-ಮುಳುಗಿಸುತ್ತಾ ಇದ್ದನು, ಎಂಬೀ ಮಾತು ಸತ್ಯವಾಗಿದ್ದರೆ, ಈ ದಿನಗಳಲ್ಲಿಯೂ ಹಾಗೆ ಮಾಡಬೇಕು! ಹೀಗೆ ಆಗದೇ ಇರುವುದರಿಂದ, ಈ ಮಾತು ನಂಬಲರ್ಹವಾಗಿಲ್ಲ!

ಈಗ ನೋಡಿರಿ, ಇದೆಂತಹ ಕೆಟ್ಟ ಆಜ್ಞೆಯಾಗಿದೆಯೆಂದರೆ—

"ನೀವು ಏನೇನು ಮಾಡಬಲ್ಲಿರೋ, ಆ ದುಃಖಪ್ರದವಾದ ಕರ್ಮಗಳನ್ನು ಅನ್ಯಮತೀಯರಿಗಾಗಿ ಮಾಡಿರಿ!"

---

*ಹಿಂದಿನ ಪುಟದ ಟಿಪ್ಪಣಿಯನ್ನು ಓದಿ.—ಸಂ.

†Pharaon

ಇಂತಹ ಆಜ್ಞೆ ವಿದ್ವಾಂಸನದೂ, ಮತ್ತು ಧಾರ್ಮಿಕನಾದ ದಯಾಳುವಿನದೂ ಆಗಲಾರದು!

ಮತ್ತೆ—‘ಖುದಾ ದಯಾಳು; ಮತ್ತು ನ್ಯಾಯಕಾರಿ’, ಎಂದು ಬರೆಯುತ್ತಾರೆ! ಇಂತಹ ಮಾತುಗಳಿಂದ ಮುಸಲ್ಮಾನರ ಖುದಾನಿಂದ ನ್ಯಾಯ ಮತ್ತು ದಯೆ, ಮೊದಲಾದ ಸದ್ಗುಣಗಳು ದೂರವೇ ಉಳಿಯುತ್ತವೆ! [82]

## (ನಬಿಗೆ ಯುದ್ಧಕ್ಕಾಗಿ ಹುರಿದುಂಬಿಸುವುದು)

**[83] ಓ ನಬೀ!* ಅಲ್ಲಾಹನು ನಿನ್ನ, ಮತ್ತು ಮುಸಲ್ಮಾನರಲ್ಲಿ ನಿನ್ನ ಪಕ್ಷವನ್ನು ವಹಿಸಿದವರ ಪಾಲಿಗೆ ಸಾಕಾಗಿದ್ದಾನೆ.**

**ಓ ನಬೀ! ಯುದ್ಧಕ್ಕಾಗಿ ಮುಸಲ್ಮಾನರನ್ನು ಹುರಿದುಂಬಿಸು. ನಿಮ್ಮಲ್ಲಿ 20 ಮಂದಿ ಸಂತುಷ್ಟರಾದವರಿದ್ದರೆ,† 200 ಜನರನ್ನು ಸೋಲಿಸಬಲ್ಲರು!**

**ನೀನು ನ್ಯಾಯಾನುಕೂಲವೂ, ಪವಿತ್ರವೂ ಆದ ಯಾವುದನ್ನು ಕೊಳ್ಳೆ ಹೊಡೆದಿದ್ದೀಯೋ, ಅದನ್ನು ಭಕ್ಷಿಸು. ಮತ್ತು ಹೆದರು ಅಲ್ಲಾಹನಿಗೆ. ಅವನು ಕ್ಷಮೆ ಮಾಡುವ ದಯಾಳುವಾಗಿದ್ದಾನೆ.**

**[ಕುರಾನ್:-ಮಂ. 2; ಸಿ. 10; ಸೂ. 8; ಆ. 64, 65, 69]**

## (ಯುದ್ಧ, ಲೂಟಿಗಳಿಗಾಗಿ ಹುರಿದುಂಬಿಸುವವನು ಖುದಾ ಹೇಗೆ?)

**ಸಮೀಕ್ಷಕ:—ಅಲ್ಲಾ!** ಯಾವನು ತನ್ನ ಪಕ್ಷವನ್ನೇ ವಹಿಸುವುದು, ಮತ್ತು ಅನ್ಯಾಯವನ್ನೇ ಮಾಡಿದರೂ ಕೂಡ, ಅವನ ಪಕ್ಷವನ್ನೇ ಗ್ರಹಿಸುವುದು, ಹಾಗೂ ಲಾಭವನ್ನೊದಗಿಸುವುದು ಯಾವ ನ್ಯಾಯದ, ವಿದ್ವತ್ತ್ವದ, ಮತ್ತು ಧರ್ಮದ ವಿಷಯವಾಗಿದೆ.

ಮತ್ತು **‘ಜನರಲ್ಲಿ ಶಾಂತಿಭಂಗವನ್ನೆಸಗಿ, ಯುದ್ಧಮಾಡುವವನೂ, ಮಾಡಿಸುವವನೂ, ಮತ್ತು ಕೊಳ್ಳೆ ಹೊಡೆದ-ಸೂರೆಗೈದ ಪದಾರ್ಥಗಳನ್ನು ಪವಿತ್ರ, ಎನ್ನುವವನೂ ಆದವನನ್ನು ಕ್ಷಮಾಶೀಲ, ದಯಾಳು, ಎಂದು ಬಣ್ಣಿಸುವುದು!’** ಇದು ಖುದಾನ ಮಾತೆನ್ನುವುದಿರಲೀ; ಯಾವನೇ ಸರಳ ಮಾನವನ ಮಾತೂ ಕೂಡ, ಆಗಲಾರದು!

ಇಂತಿಂತಹ ಮಾತುಗಳ ಇರುವಿಕೆಯಿಂದ ಕುರಾನ್ ಎಂದಿಗೂ ಈಶ್ವರವಾಕ್ಯವೆಂದು ಸಿದ್ಧವಾಗಲಾರದು. [83]

---

*ಪೈಗಂಬರ್—ಸಂ.

†ಎಂದರೆ, ಯುದ್ಧದಲ್ಲಿ ದೃಢವಾಗಿ ನಿಂತಿದ್ದರೆ—ಸಂ.

(ತಂದೆ-ಸೋದರರರನ್ನು ಹಿಡಿಯಬೇಡಿ; ಕಾಫಿರರೊಡನೆ ಕಾದಾಡಿ)

[84] ಸದಾ ಇರುವೆವು ಅದರ ನಡುವೆ, ಅಲ್ಲಾಹನ ಬಳಿ. ಮಹಾಭಾಗ್ಯ ಅವನದಾಗಿದೆ.

ಓ ಜನರೇ! ನಂಬಿಕೆಯಿಟ್ಟಿರುವಿರಾದರೆ, ನಿಮ್ಮ ಪಿತೃಗಳನ್ನೂ ಮತ್ತು ನಿಮ್ಮ ಸೋದರರನ್ನೂ, ಮತ್ತು ಕಾಫಿರತನವನ್ನು ನಂಬಿಕೆಗಿಂತ ಮೇಲೆಂದು ಗ್ರಹಿಸಿದರೂ, ಸಖ್ಯಭಾವದಿಂದಿರುವ ಮಿತ್ರರನ್ನೂ ಹಿಡಿದುಕೊಳ್ಳಬೇಡಿ.

ಅಲ್ಲಾಹನು ತನ್ನ ರಸೂಲನ ಮೇಲೆ, ಮತ್ತು ಮುಸಲ್ಮಾನರ ಮೇಲೆ ತನ್ನ ಸಾಂತ್ವನಾಕೃತಿಯನ್ನು* ಇಳಿಸಿದನು. ಮತ್ತು ಇಳಿಸಿದನು ಸೈನಿಕರನ್ನು! ನೋಡ ಲಿಲ್ಲವೇ, ನೀವು ಅವರನ್ನು? ಮತ್ತು ದಂಡವಿತ್ತನು ಆ ಮಂದಿಗೆ. ಮತ್ತು ಇದೇ ಶಿಕ್ಷೆಯಾಗಿದೆ ಕಾಫಿರರಿಗೆ.

ಮತ್ತೆ-ಮತ್ತೆ [ಇಚ್ಛೆ ಬಂದಂತೆ] ಆ ಮೇಲೆ ಅಲ್ಲಾಹನು ಬರುವನು ಅವನ ಮೇಲೆ!

ಮತ್ತು ನಂಬಿಕೆಯನ್ನಿಡದವರೊಂದಿಗೆ ಯುದ್ಧವನ್ನು ಮಾಡಿರಿ!

[ಕುರಾನ್:-ಮಂ. 2; ಸಿ. 10; ಸೂ. 9; ಆ. 22,23,26,27,29]

(ಈಗ ಖುದಾ ತನ್ನ ಸೇನೆ ತೆಗೆದುಕೊಂಡು ಏಕೆ ಬರುವುದಿಲ್ಲ?)

**ಸಮೀಕ್ಷಕ:**—ಅಲ್ಲಾ! ಸ್ವರ್ಗದವರ ಸಮೀಪದಲ್ಲಿ ಅಲ್ಲಾಹನು ಇರುತ್ತಾನೆ ಯಾದರೆ, ಸರ್ವವ್ಯಾಪಕನೆಂತಾಗಬಲ್ಲನು? ಸರ್ವವ್ಯಾಪಕನಲ್ಲವಾದರೆ, ಸೃಷ್ಟಿ-ಕರ್ತೃವೂ ಮತ್ತು ನ್ಯಾಯಾಧೀಶನೂ ಆಗಲಾರನು!

ಮತ್ತು ತನ್ನ ತಾಯಿ, ತಂದೆ, ಸೋದರರು ಮತ್ತು ಮಿತ್ರರನ್ನು ಬಿಡಿಸು ವುದು ಕೇವಲ ಅನ್ಯಾಯದ ಮಾತಾಗಿದೆ!

ಅಹುದು! ಯಾವ ದುರುಪದೇಶವನ್ನು ಮಾಡುತ್ತಾನೋ, ಅದನ್ನು ಒಪ್ಪಿ ಕೊಳ್ಳಬಾರದು! ಆದರೆ, ಅವರ ಸೇವೆಯನ್ನು ಸದಾ ಮಾಡಬೇಕು!

ಮೊದಲು, ಖುದಾ ಮುಸಲ್ಮಾನರ ಮೇಲೆ ಬಹಳ ಸಂತುಷ್ಟನಾಗಿದ್ದನು. ಮತ್ತು ಅವರ ಸಹಾಯಕ್ಕಾಗಿ ಸೇನೆಯನ್ನು ಇಳಿಸುತ್ತಿದ್ದನೆಂಬುದು ಸತ್ಯವಾಗಿದ್ದರೆ, ಈಗ ಏಕೆ ಹೀಗೆ ಮಾಡುವುದಿಲ್ಲ?

ಮತ್ತು ಮೊದಲು ಕಾಫಿರರಿಗೆ ಶಿಕ್ಷೆಯನ್ನು ಕೊಡುತ್ತಿದ್ದನು. ಮತ್ತು ಅವನ ಮೇಲೆ ಬರುತ್ತಿದ್ದನಾದರೆ, ಈಗ ಎಲ್ಲಿಗೆ ಹೋದನು?

---

*ಭರವಸೆಯ ಪುಸ್ತಕವನ್ನು—ಅನು.

ಬುದ್ಧಿವಿಲ್ಲದೇ ಖುದಾ ನಂಬಿಕೆಯನ್ನುಂಟುಮಾಡಲಾರನೇನು?

ಇಂತಹ ಖುದಾಗೆ ನಮ್ಮ ಕಡೆಯಿಂದ ಸದಾ ತಿಲಾಂಜಲಿಯಿದೆ! ಖುದಾ ಏನು? ಒಬ್ಬ ಆಟಗಾರಮಾತ್ರನಾಗಿದ್ದಾನೆ! [84]

## (ಅಲ್ಲಾಹನ ಆಜ್ಞೆಯ ಪ್ರತೀಕ್ಷೆ)

[85] ಅಲ್ಲಾಹನು ತನ್ನ ಬಳಿಯಿಂದ, ಅಥವಾ ನಮ್ಮ ಕೈಗಳಿಂದ, ನಿಮ್ಮ ಸಲುವಾಗಿ ನಿಮಗೆ ಶಿಕ್ಷೆ ವಿಧಿಸುವ ಮಾರ್ಗವನ್ನು ನಾವು ನೋಡುವವರಾಗಿದ್ದೇವೆ.
[ಕುರಾನ್:-ಮಂ.2; ಸಿ. 10; ಸೂ. 9; ಆ.52]

## (ಮುಸಲ್ಮಾನರು ಈಶ್ವರನ ಪೋಲೀಸರೇನು?)

**ಸಮೀಕ್ಷಕ:**—ತನ್ನ, ಅಥವಾ ಮುಸಲ್ಮಾನರ ಕೈಯಿಂದ, ಬೇರೆ ಯಾವುದಾವರೂ ಮತದವರನ್ನು ಹಿಡಿಯಿಸುತ್ತಾನೆ, ಎನ್ನಲು, ಮುಸಲ್ಮಾನರೇ ಅಲ್ಲಾಹನ ಪೋಲೀಸರಾಗಿಬಿಟ್ಟಿದ್ದಾರೇನು? ಬೇರೆ ಕೋಟ್ಯಂತರ ಜನರು ಈಶ್ವರನಿಗೆ ಅಪ್ರಿಯರೇನು?

ಮುಸಲ್ಮಾನರಲ್ಲಿ ಪಾಪಿಗಳೂ ಕೂಡ, ಪ್ರಿಯರಾಗಿರುತ್ತಾರೇನು? ಹೀಗಿರುವುದಾದರೆ, "ಮೊಬ್ಬಿನ ನಗರಿ; ಕೊಬ್ಬಿದ ರಾಜ"*, ಎಂಬಂತಹ ವ್ಯವಸ್ಥೆ ಕಂಡುಬರುತ್ತದೆ!

ಬುದ್ಧಿವಂತರಾದ ಮುಸಲ್ಮಾನರೂ† ಕೂಡ, ಈ ನಿರ್ಮೂಲವೂ ಯುಕ್ತಿಹೀನವೂ ಆದ ಮತವನ್ನು ಒಪ್ಪಿಕೊಳ್ಳುತ್ತಾರೆ, ಎಂಬುದೇ ಆಶ್ಚರ್ಯಕರವಾದ ವಿಷಯವಾಗಿದೆ! [85]

## (ಮುಸಲ್ಮಾನರ ಸ್ವರ್ಗ! ಅಲ್ಲಾಹನೊಡನೆ ಹಾಸ್ಯವಿನೋದ)

[86] ಅಲ್ಲಾಹನು ನಂಬಿಕೆಯನ್ನುಳ್ಳ ಪುರುಷರಿಗೆ ಮತ್ತು ಸ್ತ್ರೀಯರಿಗೆ ಸ್ವರ್ಗಗಳ [ವ್ಯವಸ್ಥೆಯ] ಪ್ರತಿಜ್ಞೆ ಮಾಡಿದ್ದಾನೆ. ಅವುಗಳ ಕೆಳಗಿನಿಂದ, ಸದಾ ಹರಿಯುತ್ತಿರುವ ಕಾಲುವೆಗಳಿವೆ. ಮತ್ತು ಏಡನ್ನಿನ ಸ್ವರ್ಗಗಳ [ಮಧ್ಯೆ] ಪವಿತ್ರವಾದ ಗೃಹಗಳಿವೆ. ಮತ್ತು ಅಲ್ಲಾಹನ ಪ್ರಸನ್ನತೆ [ಎಲ್ಲಕಿಂತ] ವಿಶಾಲವಾಗಿದೆ.

---

*ಹಿಂದಿಯಲ್ಲಿ "ಚಿನ್ನಕ್ಕೂ ಅಷ್ಟೇ ಬೆಲೆ; ಮಣ್ಣಿಗೂ ಅಷ್ಟೇ ಬೆಲೆ.", ಎಂದು ಸಾರಿದ ಮೂರ್ಖ ರಾಜನ ಕಟ್ಟುಕಥೆಯೊಂದಿದೆ. ಮಹರ್ಷಿ ಅದರ ಕಡೆ ನಿರ್ದೇಶಿಸಿದ್ದಾರೆ.—ಅನು.

ಈ ಕಥೆ ಗ್ರಂಥಕರ್ತರ 'ವ್ಯವಹಾರಭಾನು' ಎಂಬ, ಗ್ರಂಥದಲ್ಲಿದೆ.—ಸಂ.

†ಸರ್ ಸೈಯದ್ ಅಹಮದ್ ಖಾನರಂತಹ ಅನೇಕ ಮುಸಲ್ಮಾನ ವಿದ್ವಾಂಸರು ಮಹರ್ಷಿ ದಯಾನಂದರ ಜೊತೆ ಮೈತ್ರಿಯನ್ನಿಟ್ಟಿದ್ದರು. ಅವರ ಕಡೆಗೆ ಈ ಸಂಕೇತ.—ಸಂ.

ಮತ್ತು ಮನಸ್ಸಿನ ಆಕಾಂಕ್ಷೆಯನ್ನು ಪೂರೈಸಿಕೊಳ್ಳುವುದು ಅತ್ಯಂತ ಶ್ರೇಷ್ಠ ವಿಷಯ ವಾಗಿದೆ.

ಸರಿ! [ಯಾರು] ಅವನೊಂದಿಗೆ ನಗೆಯಾಟ ಮಾಡುತ್ತಾರೋ, ಅಲ್ಲಾಹನು ಅವರೊಂದಿಗೆ ನಗೆಯಾಟ ಮಾಡಿದನು.

[ಕುರಾನ್:-ಮಂ. 2; ಸಿ. 10; ಸೂ. 9; ಆ.72,79]

## (ಸ್ವರ್ಗದ ಪ್ರಲೋಭನವನ್ನು ಕೊಟ್ಟು ಸಿಕ್ಕಿಸಿಹಾಕುವುದು)

ಸಮೀಕ್ಷಕ:—ಇದು, ಖುದಾನ ಹೆಸರಿನಿಂದ ನರ-ನಾರಿಯರಿಗೆ ತನ್ನ ಸ್ವಾರ್ಥ ಸಾಧನೆಗಾಗಿ ಪ್ರಲೋಭನವನ್ನು ಒಡ್ಡುವ ಕೆಲಸವಾಗಿದೆ. ಏಕೆಂದರೆ, ಇಂತಹ ಪ್ರಲೋಭನವನ್ನು ಕೊಡದೇ ಇದ್ದರೆ, ಯಾವನೂ ಮುಹಮ್ಮದ್ ಸಾಹೇಬರ ಬಲೆಯಲ್ಲಿ ಸಿಕ್ಕಿಕೊಳ್ಳುತ್ತಿರಲಿಲ್ಲ! ಹೀಗೆಯೇ, ಅನ್ಯಮತೀಯರೂ ಕೂಡ, ಮಾಡು ತ್ತಿರುತ್ತಾರೆ!

ಮಾನವರಂತೂ ಪರಸ್ಪರ ನಗೆಯಾಟವಾಡಿಯೇ ಆಡುತ್ತಾರೆ! ಆದರೆ, ಖುದಾಗೆ ಯಾವನೊಂದಿಗೂ ನಗೆಯಾಟವಾಡುವುದು ಉಚಿತವಲ್ಲ. ಈ ಕುರಾನ್ ಏನು, ದೊಡ್ಡ ಆಟವಾಗಿದೆ! [86]

## (‘ಜಿಹಾದ್’ ಮಾಡುವವರು ಒಳ್ಳೆಯವರು)

[87] ಆದರೆ, ರಸೂಲನು ಮತ್ತು ಅವನೊಂದಿಗೆ ನಂಬಿಕೆಯನ್ನಿಟ್ಟ ಮಾನ ವರು ತಮ್ಮ ಧನದೊಂದಿಗೆ, ಮತ್ತು ಪ್ರಾಣದೊಂದಿಗೆ ಧರ್ಮಯುದ್ಧ*ವನ್ನು ಮಾಡಿದರು. ಮತ್ತು ಈ ಜನರಿಗಾಗಿಯೇ ಒಳಿತಿದೆ!

ಮತ್ತು ಅಲ್ಲಾಹನು ಅವರ ಹೃದಯಗಳ ಮೇಲೆ ಮುದ್ರೆಯೊತ್ತಿದನು. ತೀರಿತು! ಅವರು ಅರಿತುಕೊಳ್ಳುವುದಿಲ್ಲ.

[ಕುರಾನ್:-ಮಂ. 2; ಸಿ. 10; ಸೂ. 9; ಆ. 88,93]

## (ನಂಬಿಕೆ ಇಡದವರನ್ನು ಕೆಟ್ಟವರೆಂದು ಹೇಳುವುದು ಸರಿಯಲ್ಲ)

ಸಮೀಕ್ಷಕ:—ಈಗ ನೋಡಿರಿ! ಅನುಕೂಲಸಿಂಧುವಿನ ಮಾತನ್ನು! ಎಂದರೆ, ಮುಹಮ್ಮದ್ ಸಾಹೇಬರೊಂದಿಗೆ ನಂಬಿಕೆಯಿಟ್ಟ ಮಂದಿಗಳೇ ಒಳ್ಳೆಯವರು! ಮತ್ತು ನಂಬಿಕೆಯಿಡದವರೆಲ್ಲಾ ಕೆಟ್ಟವರು! ಈ ಮಾತು ಪಕ್ಷಪಾತದಿಂದ ಮತ್ತು ಅವಿದ್ಯೆಯಿಂದ ತುಂಬಿದುದಲ್ಲವೇನು?

---

*ಮೂಲಗ್ರಂಥದಲ್ಲಿ ‘ಜಿಹಾದ್’, ಎಂಬ ಶಬ್ದವಿದೆ.—ಸಂ.

ಖುದಾ ಸ್ವಯಂ ಮುದ್ರೆಯನ್ನೊತ್ತಿಬಿಟ್ಟನೆಂದ ಮೇಲೆ, ಪಾಪಮಾಡುವುದರಲ್ಲಿ ಅವರ ಅಪರಾಧವಾವುದೂ ಇಲ್ಲ. ಆದರೆ, ಅಪರಾಧ ಖುದಾನದೇ ಆಗಿದೆ! ಏಕೆಂದರೆ, ಹೃದಯಗಳ ಮೇಲೆ ಮುದ್ರೆಯನ್ನೊತ್ತಿ, ಆ ಬಡಪಾಯಿಗಳನ್ನು ಒಳಿತಿನಿಂದ ತಡೆದಿಟ್ಟನು. ಎಷ್ಟು ದೊಡ್ಡ ಅನ್ಯಾಯವಿದು? [87]

## (ಸಂಪತ್ತಿನ ಬದಲು ಪವಿತ್ರತೆ ಮತ್ತು ಸ್ವರ್ಗ)

[88] ಅವರನ್ನು ನೀನು ಪವಿತ್ರಗೊಳಿಸಲಾಗುವಂತೆ, ಅವರ ಸಂಪತ್ತಿನಿಂದ ದಾನ ಸ್ವೀಕರಿಸು. ಎಂದರೆ, ಹೊರಗಿನಿಂದ! ಅವರನ್ನು ಆ ಸಂಪತ್ತುಗಳಿಂದ ಪವಿತ್ರಗೊಳಿಸು. ಎಂದರೆ, ಒಳಗಿನಿಂದ!

ನಿಶ್ಚಯವಾಗಿಯೇ ಅಲ್ಲಾಹನು ಮುಸಲ್ಮಾನರಿಂದ ಅವರ ಪ್ರಾಣಗಳನ್ನು ಮತ್ತು ವಸ್ತುಗಳನ್ನು ಕೊಂಡುಕೊಂಡಿದ್ದಾನೆ. ಅವಕ್ಕೆ ಪ್ರತಿಯಾಗಿ ಅವರಿಗೆ ಸ್ವರ್ಗಗಳಿವೆ. ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುವರು. ಆಯಿತು! ಸಾಯಿಸುವರು ಮತ್ತು ಸಾಯುವರು.

[ಕುರಾನ್:-ಮಂ. 2; ಸಿ. 11; ಸೂ. 9; ಆ. 103,111]

## (ಸಂಪತ್ತನ್ನು ತೆಗೆದುಕೊಂಡು ಪವಿತ್ರಗೊಳಿಸುವುದು ಪೂರ್ತಿಯಾಗಿ ಪಾಖಂಡ)

**ಸಮೀಕ್ಷಕ:**—ಭಾಪು, ಮುಹಮ್ಮದ್ ಸಾಹೇಬರೇ! ಭಾಪು!! ತಾವಂತೂ ಗೋಕುಲೀಯ ಗೋಸಾಯಿಗಳಿಗೆ ಸಮನಾದಿರಿ! ಏಕೆಂದರೆ, ಅನ್ಯರ ವಸ್ತುಗಳನ್ನು ಗ್ರಹಿಸುವುದು ಮತ್ತು ಅವರನ್ನು ಪವಿತ್ರಗೊಳಿಸುವುದು-ಇದೇ ತಾನೇ ಗೋಸಾಯಿ ಗಳ ವರ್ತನೆ!

ಭೇಷ್, ಖುದಾ ಸಾಹೇಬರೇ! ತಾವು ಮುಸಲ್ಮಾನರ ಕೈಯಿನಿಂದ ಬೇರೆ ಬಡವರ ಪ್ರಾಣಗಳನ್ನು ತೆಗೆದುಕೊಳ್ಳುವುದನ್ನೇ ಲಾಭವೆಂದರಿತಿರಲ್ಲಾ! ಒಳ್ಳೆಯ ವ್ಯಾಪಾರವನ್ನೇ ಹೂಡಿದ್ದೀರಿ!

ಮತ್ತು ಆ ಅನಾಥರನ್ನು ಸಾಯಿಸಿ, ಆ ನಿರ್ದಯರಾದ ಮನುಷ್ಯರಿಗೆ ಸ್ವರ್ಗವನ್ನೀಯುವುದರಿಂದ, ದಯೆ ಮತ್ತು ನ್ಯಾಯಗಳಿಂದ ಕೈ ತೊಳೆದುಕೊಂಡು, ಕುಳಿತನು ಮುಸಲ್ಮಾನರ ಖುದಾ! ಮತ್ತು ತನ್ನ ಖುದಾತನಕ್ಕೂ ಕಳಂಕವನ್ನು ಹಚ್ಚಿ, ಬುದ್ಧಿವಂತರಾದ ಧಾರ್ಮಿಕರ ದೃಷ್ಟಿಯಲ್ಲಿ ತಿರಸ್ಕಾರಯೋಗ್ಯನಾಗಿ ಹೋದನು!

## (ನೆರೆಹೊರೆಯ ಕಾಫಿರರನ್ನು ಮೋಸದಿಂದ ಕೊಲ್ಲಿಸುವುದು)

[89] ಓ ಜನರೇ! ನಂಬಿಕೆ ಇಟ್ಟಿರುವಿರಾದರೆ, ನಿಮ್ಮ ಬಳಿ ಇರುವವರಲ್ಲಿನ ಕಾಫಿರರಾದವರೊಂದಿಗೆ ಯುದ್ಧಮಾಡಿರಿ. ಮತ್ತು ನಿಮ್ಮಲ್ಲಿ ದೃಢತೆ ಇರಬೇಕು.

ಪ್ರತಿ ವರ್ಷವೂ ಒಂದು ಸಾರಿ, ಅಥವಾ ಎರಡು ಸಾರಿ, ವಿಪತ್ತುಗಳಿಗೆ ಅವರು ಈಡುಮಾಡಲ್ಪಡುತ್ತಾರೆ; ಆದರೂ ಕೂಡ, ಅವರು ತೋಬಾ* ಮಾಡುವುದಿಲ್ಲ. ಮತ್ತು ಅವರು ಶಿಕ್ಷಣವನ್ನೂ ಗ್ರಹಿಸುವುದಿಲ್ಲ, ಎಂಬುದನ್ನು ನೀವು ನೋಡುವುದಿಲ್ಲವೇನು? [ಕುರಾನ್:-ಮಂ. 2; ಸಿ. 11; ಸೂ. 9; ಆ. 123,126]

## (ನೆರೆಹೊರೆಯುವರನ್ನು ಮೋಸದಿಂದ ಕೊಲ್ಲಿಸುವುದು ವಿಶ್ವಾಸಘಾತ)

ಸಮೀಕ್ಷಕ:—ನೋಡಿರಿ! ವಿಶ್ವಾಸಘಾತದ ಈ ಒಂದು ಮಾತನ್ನೂ ಮುಸಲ್ಮಾನರುಗಳಿಗೆ ಖುದಾ ಕಲಿಸುತ್ತಾನೆ! ಎಂದರೆ—ನೆರೆಯುವನೇ ಆಗಿರಲೀ, ಅಥವಾ ಯಾವನಾದರೂ ಸೇವಕನೇ ಆಗಿರಲೀ, ಅವಕಾಶ ಸಿಕ್ಕಿದ ಕೂಡಲೇ ಯುದ್ಧವನ್ನು ಮಾಡಬೇಕು; ಅಥವಾ ಪ್ರಹರಿಸಬೇಕು, ಎಂದು.

ಇದೇ ಕುರಾನಿನ ಉಪದೇಶದಿಂದಾಗಿ ಇಂತಹ ಘಟನೆಗಳು ಮುಸಲ್ಮಾನರಿಂದ ಬಹಳ ನಡೆದೂ ಇವೆ!

ಈಗಲಾದರೂ ಮುಸಲ್ಮಾನರು ತಿಳುವಳಿಕೆ ಪಡೆದು, ಕುರಾನಿನಲ್ಲಿ ಹೇಳಲ್ಪಟ್ಟಿರುವ ಈ ಕೇಡುಗಳನ್ನು ಬಿಟ್ಟುಬಿಡುವರಾದರೆ, ಬಹಳ ಒಳ್ಳೆಯದಾದೀತು! [89]

## (ಆರು ದಿನಗಳಲ್ಲಿ ಜಗತ್ತಿನ ರಚನೆ; ಮತ್ತೆ ವಿಶ್ರಾಮ)

[90] ಯಾವನು ಆಕಾಶಗಳನ್ನೂ, ಮತ್ತು ಪೃಥಿವಿಯನ್ನೂ ಆರು ದಿನಗಳೊಳಗೆ ಉತ್ಪನ್ನ ಮಾಡಿದನೋ, ಮತ್ತೆ ಊರ್ಧ್ವಾಕಾಶದಲ್ಲಿ ವಿಶ್ರಾಂತಿ ಪಡೆದನೋ, ಆ ನಿಮ್ಮ ಅಲ್ಲಾಹನು ನಿಶ್ಚಯವಾಗಿ ಸರ್ವರಕ್ಷಕನಾದ್ದಾನೆ. ಅವನು ಕಾರ್ಯದ ವ್ಯವಸ್ಥೆಯನ್ನು ಮಾಡುತ್ತಾನೆ.

[ಕುರಾನ್:-ಮಂ. 3; ಸಿ. 11; ಸೂ.10; ಆ.3]

## (ಆರು ದಿನಗಳಲ್ಲಿ ಜಗದ್ರಚನೆಯಾಯಿತೋ? ಅಥವಾ 'ಆಗು', ಎಂದ ತಕ್ಷಣವೋ?)

ಸಮೀಕ್ಷಕ:—ಆಕಾಶವಿರುವುದು ಒಂದು; ಮತ್ತು ರಚಿತವಲ್ಲದ ಅನಾದಿವಸ್ತು! ಅದರ ರಚನೆಯ ಬಗೆಗೆ ಬರೆದಿರುವುದರಿಂದ, ಆ ಕುರಾನ್-ಲೇಖಕನು ಪದಾರ್ಥವಿದ್ಯೆಯನ್ನು ತಿಳಿದವನಾಗಿರಲಿಲ್ಲವೆಂದು ನಿಶ್ಚಯವಾಯಿತು!

---

*ಪಶ್ಚಾತ್ತಾಪ—ಸಂ.

ಪರಮೇಶ್ವರನ ಮುಂದೆ ಆರು ದಿನಗಳವರೆಗೆ ರಚಿಸಬೇಕಾದ [ಸಮಸ್ಯೆ] ಇರುತ್ತದೆಯೇನು? ಹಾಗಾದರೆ—"ಆಗು ನನ್ನ ಆಜ್ಞೆಯಿಂದ, ಎಂದಾಗ ಆಗಿ ಹೋಯಿತು", ಎಂದು ಕುರಾನ್‌ನಲ್ಲಿ ಬರೆದಿರುವಾಗ, ಆರು ದಿನಗಳು ಎಂದಿಗೂ ತಗಲಲಾರವು! ಇದರಿಂದ, ಆರು ದಿನಗಳ ತಗಲುವಿಕೆ ಸುಳ್ಳಾಗಿದೆ.

ಅವನು ವ್ಯಾಪಕನಾಗಿ ಇದ್ದಿದ್ದರೆ, ಆಕಾಶದ ಮೇಲೆ* ಇರುತ್ತಿದ್ದನೇಕೆ? ಮತ್ತು ಕೆಲಸದ ವ್ಯವಸ್ಥೆಯನ್ನು ಮಾಡುತ್ತಾನೆಯಾದರೆ, ನಿಮ್ಮ ಖುದಾ ಮನುಷ್ಯನಿಗೆ ಸರಿಯಾಗಿ ಸಮಾನನಾಗಿದ್ದಾನೆ! ಏಕೆಂದರೆ, ಯಾವನು ಸರ್ವಜ್ಞನಾಗಿದ್ದಾನೋ, ಅವನು ಕುಳಿತು-ಕುಳಿತು ವ್ಯವಸ್ಥೆಯೇನನ್ನು ಮಾಡುವನು? **ಇದರಿಂದ, ಈಶ್ವರನನ್ನು ತಿಳಿಯದ ಕಾಡು ಜನರು ಈ ಪುಸ್ತಕವನ್ನು ರಚಿಸಿರಬಹುದೆಂದು ವಿದಿತವಾಗುತ್ತದೆ!** [90]

**(ಖುದಾನ ಶಿಕ್ಷಣ ಮತ್ತು ದಯೆ ಕೇವಲ ಮುಸಲ್ಮಾನರಿಗೆ ಮಾತ್ರವೋ?)**

**[91] ಶಿಕ್ಷಣ ಮತ್ತು ದಯೆ ಮುಸಲ್ಮಾನರ ಸಲುವಾಗಿ!**

**[ಕುರಾನ್:-ಮಂ. 8; ಸಿ. 11; ಸೂ. 10; ಆ. 57]**

**ಸಮೀಕ್ಷಕ:**—ಏನು? ಈ ಖುದಾ ಮುಸಲ್ಮಾನರಿಗೆ ಮಾತ್ರವೋ? ಬೇರೆಯವರಿಗೆ ಅಲ್ಲವೋ? ಮುಸಲ್ಮಾನರ ಮೇಲೆ ಮಾತ್ರ ದಯೆ ಮಾಡುವನಾದರೆ, [ಮತ್ತು] ಅನ್ಯ ಮಾನವರ ಮೇಲೆ ಮಾಡನಾದರೆ, ಪಕ್ಷಪಾತಿಯಾಗಿದ್ದಾನೆ!

ಒಂದು ವೇಳೆ, ನಂಬಿಕೆಯುಳ್ಳವರನ್ನು ಮುಸಲ್ಮಾನರೆಂದು ಹೇಳುವಿರಾದರೆ, ಅವರಿಗೆ ಶಿಕ್ಷಣದ ಆವಶ್ಯಕತೆಯೇ ಇಲ್ಲ! **ಮತ್ತು ಮುಸಲ್ಮಾನರಿಂದ ಬೇರೆಯಾದವರಿಗೆ ಉಪದೇಶಿಸುವುದಿಲ್ಲವಾದರೆ, ಖುದಾನ ವಿದ್ಯೆಯೇ ವ್ಯರ್ಥವಾಗಿದೆ!** [91]

**(ಕರ್ಮಗಳ ಪರೀಕ್ಷೆ)**

**[92] ಕರ್ಮಗಳಲ್ಲಿ, ನಿಮ್ಮಲ್ಲಿ ಯಾರು ಒಳ್ಳೆಯವರು ಎಂದು ನಿಮ್ಮನ್ನು ಪರೀಕ್ಷಿಸುವನು. ನೀನು ಹೇಳುವೆಯಾದರೆ, ಅವಶ್ಯವಾಗಿ ನೀವು ಎಬ್ಬಿಸಲ್ಪಡುವಿರಿ, ಮೃತ್ಯುವಿನ ನಂತರ!** [ಕುರಾನ್:-ಮಂ. **8; ಸಿ. 12; ಸೂ. 11; ಆ. 7**]

**ಸಮೀಕ್ಷಕ:**—ಕರ್ಮಗಳ ಪರೀಕ್ಷೆಯನ್ನು ಮಾಡುತ್ತಾನೆಯಾದರೆ, [ಅವನು] ಸರ್ವಜ್ಞನೇ ಅಲ್ಲ! ಮತ್ತು ಸಾವಿನ ನಂತರ, ಎಬ್ಬಿಸುವನಾದರೆ, ವಿಚಾರಾಧೀನವಾಗಿಡುತ್ತಾನೇನು? ಮತ್ತು, 'ಸತ್ತವರು ಬದುಕುವುದಿಲ್ಲ', ಎಂಬ ತನ್ನ ನಿಯಮವನ್ನು ಮುರಿಯುತ್ತಾನೆ. ಇದು ಖುದಾನಿಗೆ ಕಳಂಕಪ್ರಾಯವಾಗಿದೆ! [92]

---

***ಎಂದರೆ, ಸಿಂಹಾಸನದ ಮೇಲೆ—ಯು.ಮೀ.**

## (ಅಲ್ಲಾಹನ ಚಿಹ್ನೆ ಹೆಣ್ಣು ಒಂಟೆ)

[93] ಮತ್ತು—"ಓ ಪೃಥಿವಿ! ನಿನ್ನ ನೀರನ್ನು ನುಂಗಿಕೊಂಡು ಬಿಡು. ಮತ್ತು ಓ ಆಕಾಶ! ಸಾಕುಮಾಡು", ಎಂದು ಹೇಳಲ್ಪಟ್ಟಿತು. ಮತ್ತು ನೀರು ಬತ್ತಿಹೋಯಿತು!

ಮತ್ತು, ಓ ಜನಾಂಗದರೇ! ಈ ಹೆಣ್ಣು ಒಂಟೆ ನಿಮ್ಮ ಸಲುವಾಗಿ ಅಲ್ಲಾಹನ ಚಿಹ್ನೆಯಾಗಿದೆ. ಸಾಕು! ಪೃಥಿವಿಯ ನಡುವೆ ತಿಂದು ತಿರುಗಾಡಲಿ!, ಎಂದು ಅದನ್ನು ಅಲ್ಲಾಹನ ಪೃಥಿವಿಯ ಮಧ್ಯೆ ಬಿಟ್ಟುಬಿಡಿರಿ.

[ಕುರಾನ್:-ಮಂ. 3; ಸಿ. 12; ಸೂ. 11; ಆ. 44,64]

## (ಖುದಾನ ಬಳಿ ಒಂಟೆ, ಆನೆ, ಕುದುರೆ, ಕತ್ತೆ ಮೊದಲಾದುವು)

**ಸಮೀಕ್ಷಕ:**—ಏನು ಹುಡುಗುತನದ ಮಾತು? ಪೃಥಿವೀ ಮತ್ತು ಆಕಾಶ ಎಂದಿಗಾದರೂ ಮಾತನ್ನು ಆಲಿಸಬಲ್ಲವೇ?

ಭಾಪು! ಸ್ವಾಮಿ, ಭಾಪು!! ಖುದಾನ ಬಳಿ ಹೆಣ್ಣು ಒಂಟೆ ಇರುವುದಾದರೆ, ಗಂಡು ಒಂಟೆಯೂ ಇರಬಹುದೇನೋ! ಹಾಗಾದರೆ, ಆನೆಗಳು, ಕುದುರೆಗಳು, ಕತ್ತೆಗಳು, ಮೊದಲಾದುವೂ ಕೂಡ, ಇರಬಹುದು! ಮತ್ತು ಖುದಾ ಹೆಣ್ಣು ಒಂಟೆಯಿಂದ ಹೊಲವನ್ನು ಮೇಯಿಸುವುದು ಎಂತಹ ಒಳ್ಳೆಯ ವ್ಯವಹಾರ!

ಹೆಣ್ಣು ಒಂಟೆಯ ಮೇಲೆ ಏರುವುದೂ ಉಂಟೋ? ಸ್ಥಿತಿಗಳು ಹೀಗೆ ಇರುವುವಾದರೆ, ನವಾಬೀ ಠಕ್ಕು-ಠೌಳಿಯಂತೆಯೇ ಖುದಾನ ಮನೆಯಲ್ಲಿಯೂ ಆಯಿತು! [93]

## (ಸದಾ ಸ್ವರ್ಗದಲ್ಲಿ ಇರುತ್ತಾರೆ)

[94] ಮತ್ತು ಆಕಾಶ ಮತ್ತು ಭೂಮಿ ಇರುವವರೆಗೂ, ಅದರ ನಡುವೆ, ಸದಾ ಇರುವರು.

ಮತ್ತು ಯಾವ ಜನರು ಸೌಭಾಗ್ಯಶಾಲಿಗಳಾದರೋ, [ಅವರು], ಆಯಿತು! ಆಕಾಶ ಮತ್ತು ಭೂಮಿಗಳಿರುವವರೆಗೆ ಸದಾ ಸ್ವರ್ಗದಲ್ಲಿ ಇರುವವರಾಗಿದ್ದಾರೆ.

[ಕುರಾನ್:-ಮಂ. 3; ಸಿ. 12; ಸೂ. 11; ಆ. 108, 109]

## (ಸ್ವರ್ಗ ಸಾವಧಿಯಾಗಿರುವುದರಿಂದ ಸದಾ ಹೇಗೆ?)

**ಸಮೀಕ್ಷಕ:**—ನರಕಕ್ಕೆ, ಮತ್ತು ಸ್ವರ್ಗಕ್ಕೆ ಕಯಾಮತ್ತಿನ ನಂತರ, ಎಲ್ಲ ಜನರೂ ಹೋಗುವವರಾದರೆ, ಮತ್ತೆ, ಆಕಾಶ ಮತ್ತು ಪೃಥಿವೀ ಏತಕ್ಕಾಗಿ ಇರುವುದು? ಮತ್ತು ನರಕ ಮತ್ತು ಸ್ವರ್ಗಗಳ ಇರುವಿಕೆಯ ಅವಧಿಯು ಆಕಾಶ

ಮತ್ತು ಪೃಥಿವಿಯು ಇರುವಿಕೆಯು ಅವಧಿಯಷ್ಟೇ ಆದರೆ, 'ಸದಾ ಇರುವರು ಸ್ವರ್ಗ ದಲ್ಲಿ ಅಥವಾ ನರಕದಲ್ಲಿ', ಎಂಬ ಮಾತು ಸುಳ್ಳಾಯಿತು!

## (ತಂದೆ-ಮಗನ ಸಂವಾದ)

[95] ಯಾವಾಗ 'ಯೂಸುಫ'*ನು ತನ್ನ ತಂದೆಗೆ—"ಓ ನನ್ನ ತಂದೆ! ನಾನು ಒಂದು ಸ್ವಪ್ನದಲ್ಲಿ ನೋಡಿದೆನು........"

[ಕುರಾನ್:-ಮಂ. 3; ಸಿ. 12; ಸೂ. 12; ಆ. 4-57]

## (ಇತಿಹಾಸದ ಪುಸ್ತಕ ಈಶ್ವರ-ರಚಿತವಾದುದು ಹೇಗೆ?)

ಸಮೀಕ್ಷಕ:—ಈ ಪ್ರಕರಣದಲ್ಲಿ ಪಿತಾ-ಪುತ್ರರ ಸಂವಾದರೂಪದ ಕಥೆ-ಕಗ್ಗ ತುಂಬಿ ಕೊಂಡಿದೆ. ಆದುದರಿಂದ, ಕುರಾನ್ ಈಶ್ವರನು ರಚಿಸಿದುದಲ್ಲ; ಯಾವನೋ ಮನುಷ್ಯನು ಮನುಷ್ಯರ ಇತಿಹಾಸವನ್ನು ಬರೆದುಬಿಟ್ಟಿದ್ದಾನೆ! [95]

## (ಖುದಾನ ಸರ್ವಶಕ್ತಿಮತ್ತ್ವ)

[96] ಯಾವನು ಆಕಾಶವನ್ನು ಕಂಭವಿಲ್ಲದೇ ನಿಲ್ಲಿಸಿದನೋ, ಅವನು ಅಲ್ಲಾಹನು ಆಗಿದ್ದಾನೆ. ನೀವು ಅದನ್ನು ನೋಡುತ್ತೀರಿ. ಮತ್ತೆ, ಊರ್ಧ್ವಾಕಾಶದ ಮೇಲೆ ನಿಂತನು. ಸೂರ್ಯನನ್ನು ಮತ್ತು ಚಂದ್ರನನ್ನು ಆಜ್ಞಾನುವರ್ತಿಗಳನ್ನಾಗಿ ಮಾಡಿದನು.

ಮತ್ತು ಪೃಥಿವಿಯನ್ನು ಹಾಸಿದವನೂ ಅವನೇ ಆಗಿದ್ದಾನೆ.

ಇಳಿಸಿದನು ಆಕಾಶದಿಂದ ನೀರನ್ನು! ಸರಿ! ಹರಿದವು ನಾಲೆಗಳು ತಮ್ಮದೇ ಆದ ರೀತಿಯೊಂದಿಗೆ!

ಅಲ್ಲಾಹನು ತನಗೆ ಬೇಕಾದವನ ಸಲುವಾಗಿ ಭೋಜನವನ್ನು ತೆರೆದಿಡುತ್ತಾನೆ. ಮತ್ತು [ಯಾವನಿಗೆ ಹಾಗೆ ಮಾಡಬಯಸುತ್ತಾನೋ, ಅವನನ್ನು] ಪೀಡಿಸುತ್ತಾನೆ.

[ಕುರಾನ್:-ಮಂ. 3; ಸಿ. 13; ಸೂ. 13; ಆ. 2, 3, 17, 26]

## (ಆಕಾಶಕ್ಕೆ ಕಂಭ ಏತಕ್ಕೆ?)

ಸಮೀಕ್ಷಕ:—ಮುಸಲ್ಮಾನರ ಖುದಾ ಪದಾರ್ಥವಿದ್ಯೆಯನ್ನು ಏನೇನೂ ತಿಳಿದಿರಲಿಲ್ಲ! ತಿಳಿದಿದ್ದಲ್ಲಿ, ಗುರುತ್ವವಿಲ್ಲದ ಆಕಾಶಕ್ಕೆ ಕಂಭವನ್ನು ನಿಲ್ಲಿಸುವ ಕತೆ-ಕಗ್ಗ ವೇನನ್ನೂ ಬರೆಯುತ್ತಿರಲಿಲ್ಲ! ಖುದಾ ಊರ್ಧ್ವಾಕಾಶವೆಂಬ ಒಂದು ಸ್ಥಾನದಲ್ಲಿರು ತ್ತಾನೆಯಾದರೆ, ಅವನು ಸರ್ವಶಕ್ತಿಮಂತನೂ, ಮತ್ತು ಸರ್ವವ್ಯಾಪಕನೂ ಆಗಲಾರನು!

---

*Joseph

ಮತ್ತು ಖುದಾ ಮೇಘ-ವಿದ್ಯೆಯನ್ನು ತಿಳಿದವನಾಗಿದ್ದರೆ, 'ಆಕಾಶದಿಂದ ನೀರನ್ನು ಇಳಿಸಿದೆವು', ಎಂದು ಬರೆದ ಮೇಲೆ, ಮತ್ತೆ 'ಪೃಥಿವಿಯಿಂದ ನೀರನ್ನು ಮೇಲಕ್ಕೇರಿಸಿದೆವು', ಎಂದೇಕೆ ಬರೆಯಲಿಲ್ಲ?

ಇದರಿಂದ, **ಕುರಾನನ್ನು ರಚಿಸಿದವನು ಮೇಘವಿದ್ಯೆಯನ್ನೂ ಕೂಡ, ತಿಳಿದಿರಲಿಲ್ಲವೆಂದು ನಿಶ್ಚಯವಾಯಿತು!**

ಮತ್ತು ಒಳ್ಳೆಯ-ಕೆಟ್ಟ ಕರ್ಮಗಳಿಲ್ಲದೇ ಸುಖ-ದುಃಖಗಳನ್ನು ಕೊಡುತ್ತಾನೆ ಯಾದರೆ, ಪಕ್ಷಪಾತಿಯೂ, ಅನ್ಯಾಯಕಾರಿಯೂ, ನಿರಕ್ಷರ ಭಟ್ಟನೂ ಆಗಿದ್ದಾನೆ!

[97]

## (ಅಲ್ಲಾಹನು ಪಥಭ್ರಷ್ಟಕ ಮತ್ತು ಪಥಪ್ರದರ್ಶಕ)

**[97] ಹೇಳು—ನಿಶ್ಚಯವಾಗಿ ಅಲ್ಲಾಹನು ಯಾವನನ್ನು [ಜಾರಿಸ] ಬಯಸುತ್ತಾನೋ, ಅವನನ್ನು ಪಥಭ್ರಷ್ಟನನ್ನಾಗಿ ಮಾಡುತ್ತಾನೆ. ಮತ್ತು ಯಾವನು ತನ್ನ ಕಡೆಗೆ ತಿರುಗುತ್ತಾನೋ, ಆ ಮನುಷ್ಯನಿಗೆ ತನ್ನ ಕಡೆಯ ಮಾರ್ಗವನ್ನು ತೋರಿಸುತ್ತಾನೆ.**

[ಕುರಾನ್:-ಮಂ. 3; ಸಿ. 13; ಸೂ. 13; ಆ. 27]

## (ಪಥಭ್ರಷ್ಟಕನು ಖುದಾ ಅಲ್ಲ; ಶೈತಾನ!)

**ಸಮೀಕ್ಷಕ:**—ಅಲ್ಲಾಹನು ದಾರಿ ತಪ್ಪಿಸುತ್ತಾನೆಯಾದರೆ, ಖುದಾನ ಮತ್ತು ಶೈತಾನನ ನಡುವೆ ವ್ಯತ್ಯಾಸವೇನುಳಿಯಿತು? ಶೈತಾನನು ಅನ್ಯರನ್ನು ಪಥಭ್ರಷ್ಟರ ನ್ನಾಗಿ, ಎಂದರೆ ದಿಗ್ಭ್ರಾಂತರನ್ನಾಗಿ ಮಾಡುವುದರಿಂದ, ದುಷ್ಟನೆನ್ನಿಸಿಕೊಳ್ಳುತ್ತಾನೆ ಯಾದರೆ, ಖುದಾ ಕೂಡ, ಅಂತಹ ಕೆಲಸವನ್ನೇ ಮಾಡುವುದರಿಂದ, ದುಷ್ಟ ಶೈತಾನ ನೇತಕ್ಕೆ ಅಲ್ಲ?

ಮತ್ತು ದಾರಿ ತಪ್ಪಿಸುವ ಪಾಪದಿಂದ, [ಅಲ್ಲಾಹನಿಗೆ] ನರಕ ಏಕೆ ಸಿಕ್ಕಬಾರದು?

[97]

## (ಸಂದೇಶ ತಲುಪಿಸುವುದು; ಲೆಕ್ಕ ತೆಗೆದು ಕೊಳ್ಳುವುದು)

**[98]** ಇದೇ ರೀತಿಯಲ್ಲಿ, ಇಳಿಸಿದೆವು ನಾವು ಈ ಕುರಾನನ್ನು 'ಅರಬ್ಬಿ' ಯಲ್ಲಿ! ನೀನು ಅವರ ಇಚ್ಛೆಯ ಪಕ್ಷ ವಹಿಸುವೆಯಾದರೆ, ವಿದ್ಯೆಯ ಮೂಲಕ ನಿನ್ನ ಬಳಿಗೆ ಅದು ಬಂದಿತು.

ತೀರಿತು! ಸಂದೇಶವನ್ನು ತಲುಪಿಸುವುದರ ಹೊರತು, ನಿನ್ನ ಮೇಲೆ [ಮತ್ತಾವ ಹೊಣೆಯೂ] ಇಲ್ಲ. ಮತ್ತು ಲೆಕ್ಕ ತೆಗೆದುಕೊಳ್ಳುವುದು ನಮ್ಮ [ಹೊಣೆಗಾರಿಕೆ] ಆಗಿದೆ.

[ಕುರಾನ್:-ಮಂ. 3; ಸಿ. 13; ಸೂ. 13; ಆ. 37, 40]

## (ಖುದಾ ಮೇಲೆ ಇರುತ್ತಾನೆಯೇ?)

**ಸಮೀಕ್ಷಕ:**—ಕುರಾನನ್ನು ಯಾವ ಕಡೆಯಿಂದ ಇಳಿಸಿದನು? ಖುದಾ ಮೇಲೆ ಇರುತ್ತಾನೇನು? ಈ ಮಾತು ಸತ್ಯವಾಗಿರುವುದಾರೆ, ಅವನು ಏಕದೇಶೀಯನಾಗಿರುವುದರಿಂದ. ಈಶ್ವರನೇ ಆಗಲಾರನು! **ಏಕೆಂದರೆ, ಈಶ್ವರನು ಎಲ್ಲೆಡೆಯೂ ಏಕರಸನಾಗಿ ವ್ಯಾಪಕನಾಗಿದ್ದಾನೆ!**

ಸಂದೇಶವನ್ನು ತಲುಪಿಸುವುದು ಸಂದೇಶವಾಹಕನ ಕೆಲಸವಾಗಿದೆ. ಮತ್ತು ಯಾವನು ಮನುಷ್ಯನಂತೆ ಏಕದೇಶೀಯನಾಗಿರುತ್ತಾನೋ, ಅವನಿಗೆ ಮಾತ್ರ ಸಂದೇಶ ವಾಹಕನ ಆವಶ್ಯಕತೆ ಇರುತ್ತದೆ.

ಮತ್ತು **ಲೆಕ್ಕ ತೆಗೆದುಕೊಳ್ಳುವುದೂ-ಕೊಡುವುದೂ ಕೂಡ, ಮನುಷ್ಯನ ಕೆಲಸವಾಗಿದೆ; ಈಶ್ವರನದಲ್ಲ!** ಏಕೆಂದರೆ, ಅವನು ಸರ್ವಜ್ಞನಾಗಿದ್ದಾನೆ.

ಕುರಾನ್, ಯಾವನೋ ಅಲ್ಪಜ್ಞನಾದ ಮಾನವನು ರಚಿಸಿದುದಾಗಿದೆ, ಎಂದು ನಿಶ್ಚಯವಾಗುತ್ತದೆ! [98]

## (ಮನುಷ್ಯನು ಅನ್ಯಾಯಿೀ ಮತ್ತು ಪಾಪಿ)

**[99] ಮತ್ತು ಸೂರ್ಯ-ಚಂದ್ರರನ್ನು ಸದಾ ತಿರುಗುವವರನ್ನಾಗಿ ಮಾಡಿದೆವು. ನಿಶ್ಚಯವಾಗಿ ಮಾನವನು ಅವಶ್ಯವಾಗಿ ಅನ್ಯಾಯವನ್ನೂ, ಪಾಪವನ್ನೂ, ಮಾಡುವವನಾಗಿದ್ದಾನೆ.**

**[ಕುರಾನ್:–ಮಂ. 3; ಸಿ. 13; ಸೂ. 14; ಆ. 33, 34]**

## (ಪೃಥಿವಿ ತಿರುಗುವುದಿಲ್ಲವೇನು?)

**ಸಮೀಕ್ಷಕ:**—ಚಂದ್ರ-ಸೂರ್ಯರು ಸದಾ ತಿರುಗುತ್ತಾರೆ; ಮತ್ತು ಪೃಥಿವೀ ತಿರುಗುವುದಿಲ್ಲವೇನು? ಪೃಥಿವಿಯು ತಿರುಗದಿದ್ದರೆ, ಅನೇಕ ವರ್ಷಗಳ ಹಗಲು-ಇರಳುಗಳಾಗುವುವು!

ಮತ್ತು **ಮಾನವನು ನಿಶ್ಚಯವಾಗಿ ಅನ್ಯಾಯವನ್ನು ಮತ್ತು ಪಾಪವನ್ನು ಮಾಡುವವನಾಗಿದ್ದರೆ, ಕುರಾನಿನಿಂದ ಶಿಕ್ಷಣವನ್ನು ಕೊಡುವುದು ವ್ಯರ್ಥವಾಗಿರುತ್ತದೆ!** ಏಕೆಂದರೆ, ಯಾರ ಸ್ವಭಾವವು ಪಾಪವನ್ನೇ ಮಾಡುವಂತಹುದಾಗಿದೆಯೋ, ಅವರಲ್ಲಿ [ಯಾವನೂ] ಪುಣ್ಯಾತ್ಮನೆಂದಿಗೂ ಆಗಲಾರನು. ಮತ್ತು **ಜಗತ್ತಿನಲ್ಲಿ ಸದಾ ಪುಣ್ಯಾತ್ಮರು ಮತ್ತು ಪಾಪಾತ್ಮರು ಕಂಡುಬರುತ್ತಾರೆ.**

ಆದುದರಿಂದ, ಇಂತಹ ಮಾತು ಈಶ್ವರಕೃತವಾದ ಪುಸ್ತಕದ್ದೆಂದಿಗೂ ಆಗಲಾರದು! [99]

## (ಆದಮನಲ್ಲಿ ಖುದಾನ ಆತ್ಮಾ)

[100] ಆಯಿತು! ಸರಿಪಡಿಸುವೆನು ನಾನು ಅವನನ್ನು, ಮತ್ತು ಅವನೊಳಕ್ಕೆ ಊದಿಬಿಡುವೆನು ನನ್ನ ಆತ್ಮನ ಅಂಶವನ್ನು. ಸರಿ! ನೆಲಕ್ಕೊರಗಿರಿ ಅವನಿಗಾಗಿ ಪ್ರಣಾಮವನ್ನು ಮಾಡುತ್ತಾ.

"ಓ ನನ್ನ ರಬ್!* ನೀನು ನನಗೆ ದಾರಿ ತಪ್ಪಿಸಿರುವೆಯಾದ ಕಾರಣ, ನಾನು ಅವಶ್ಯವಾಗಿ ಪೃಥಿವಿಯ ನಡುವೆ ಅವರಿಗೆ ಪ್ರಲೋಭನವನ್ನು ಒಡ್ಡುವೆನು ಮತ್ತು ಪಥಭ್ರಷ್ಟರನ್ನಾಗಿ ಮಾಡುವೆನು", ಎಂದನು.

[ಕುರಾನ್:-ಮಂ. 3; ಸಿ. 14; ಸೂ. 15; ಆ. 29,39]

## (ಹಾಗಾದರೆ, ಆದಮನೂ ಖುದಾನ ರೂಪವಾದನು)

**ಸಮೀಕ್ಷಕ:**—ಖುದಾ ತನ್ನ ಆತ್ಮನನ್ನು 'ಆದಮ್ ಸಾಹೇಬ'ನಲ್ಲಿ ಹಾಕಿದನಾದ್ದರಿಂದ, ಅವನೂ ಖುದಾನೇ ಆದನು! ಮತ್ತು ಅವನು ಖುದಾ ಆಗಿರಲಿಲ್ಲವಾದರೆ, 'ಪ್ರಣಾಮ',† ಎಂದರೆ ನಮಸ್ಕಾರ ಮೊದಲಾದವುಗಳಿಂದ ಭಕ್ತಿಯನ್ನು ತೋರಿಸುವಲ್ಲಿ ತನ್ನ ಭಾಗೀದಾರನನ್ನಾಗಿ ಏಕೆ ಮಾಡಿಕೊಂಡನು?

ಶೈತಾನನನ್ನು ಪಥಭ್ರಷ್ಟನನ್ನಾಗಿ ಮಾಡುವವನು ಖುದಾನೇ ಆಗಿರುವಾಗ, ಅವನು ಶೈತಾನನಿಗೂ ಶೈತಾನನು, ಅಣ್ಣನು ಮತ್ತು ಗುರುವು ಏತಕ್ಕಲ್ಲ? ಏಕೆಂದರೆ, ನೀವು ದಾರಿ ತಪ್ಪಿಸುವವನನ್ನು ಶೈತಾನನೆಂದು ಅಂಗೀಕರಿಸುತ್ತೀರಿ!

ಖುದಾ ಕೂಡ, ಶೈತಾನನನ್ನು ಪಥಭ್ರಷ್ಟನನ್ನಾಗಿ ಮಾಡಿದನು.

ಮತ್ತು ಪ್ರತ್ಯಕ್ಷವಾಗಿ ಶೈತಾನನು—"ನಾನು ದಾರಿ ತಪ್ಪಿಸುವೆನು", ಎಂದು ಹೇಳಿದನು. ಆದರೂ, ಅವನನ್ನು ಶಿಕ್ಷಿಸಿ, ಬಂಧಿಸಲಿಲ್ಲವೇಕೆ? ಮತ್ತು ಸಾಯಿಸಿಬಿಡಲಿಲ್ಲವೇಕೆ? [100]

## (ಎಲ್ಲ ಜನಾಂಗಗಳಲ್ಲೂ ಪೈಗಂಬರರನ್ನು ಕಳುಹಿಸಿದೆವು)

[101] ಮತ್ತು ನಿಶ್ಚಯವಾಗಿ ನಾವು ಪ್ರತಿಯೊಂದು ಜನಾಂಗದ ನಡುವೆಯೂ ಪೈಗಂಬರರನ್ನು‡ ಕಳುಹಿಸಿದೆವು.

ನಾವು ಯಾವಾಗ ಇಚ್ಛಿಸುತ್ತೇವೋ, ಆಗ ಅದಕ್ಕೆ—"ಆಗಿಹೋಗು", ಎಂದು ಹೇಳುತ್ತೇವೆ. ಸರಿ! ಅದು ಆಗಿ ಹೋಗುತ್ತದೆ.

[ಕುರಾನ್:-ಮಂ. 3; ಸಿ. 14; ಸೂ. 16; ಆ. 36, 40]

---

*ರಕ್ಷಕ, ದೇವರು—ಸಂ.

†ಇದಕ್ಕೆ 'ಸಿಜದಾ', ಎಂದು ಹೆಸರು.—ಸಂ.

‡ಪೈಗಂಬರರು, ಎಂದರೆ ಭಗವಂತನ ಸಂದೇಶವಾಹಕರು.—ಅನು.

## (ಹಾಗಾದರೆ, ಬೇರೆ ಪೈಗಂಬರರ ಮಾತು ಸ್ವೀಕಾರ್ಯವೇತಕ್ಕಲ್ಲ?)

**ಸಮೀಕ್ಷಕ:**—ಎಲ್ಲ ಜನಾಂಗಗಳ ನಡುವೆಯೂ ಪೈಗಂಬರರನ್ನು ಕಳುಹಿಸಿರುವುದಾದರೆ, ಯಾರು ಪೈಗಂಬರನ ಸಲಹೆಯಂತೆ ವರ್ತಿಸುತ್ತಾರೋ, ಆ ಸಮಸ್ತ ಜನರೂ ಕಾಫಿರರು ಹೇಗೆ?

ನಿಮ್ಮ ಪೈಗಂಬರರ ಹೊರತು, ಅನ್ಯ ಪೈಗಂಬರರಿಗೆ ಮಾನ್ಯತೆ ಏಕಿಲ್ಲ? ಇದು ಸರ್ವಥಾ ಪಕ್ಷಪಾತದ ಮಾತಾಗಿದೆ!

ಎಲ್ಲ ದೇಶಗಳಿಗೂ ಪೈಗಂಬರರನ್ನು ಕಳುಹಿಸಿರುವುದಾದರೆ, ಆರ್ಯಾವರ್ತಕ್ಕೆ ಯಾವನನ್ನು ಕಳುಹಿಸಿದನು ? ಆದುದರಿಂದ, ಈ ಮಾತು ಅಂಗೀಕರಿಸಲು ಯೋಗ್ಯವಲ್ಲ.

ಖುದಾ ಅಪೇಕ್ಷಿಸಿದಾಗ, ಮತ್ತು—"ಪೃಥಿವಿ! ಆಗಿ ಹೋಗು", ಎಂದು ಹೇಳಿದಾಗ, ಅದು ಜಡವಾಗಿರುವುದರಿಂದ, ಎಂದಿಗೂ ಆಲಿಸಲಾರದು! ಖುದಾನ ಆಜ್ಞೆಯನ್ನು ಯಾವ ರೀತಿ ಪಾಲಿಸಬಲ್ಲದು ?

ಮತ್ತು ಖುದಾನ ಹೊರತು, ಎರಡನೆಯ ವಸ್ತುವನ್ನು ನೀವು ಅಂಗೀಕರಿಸುವುದಿಲ್ಲವಾದುದರಿಂದ, ಆಲಿಸಿದನು ಯಾವನು? ಮತ್ತು ಆಗಿ ಹೋದುದಾದರೂ ಯಾವುದು?

ಇವೆಲ್ಲವೂ ಅವಿದ್ಯೆಯ ಮಾತುಗಳಾಗಿವೆ! **ಇಂತಹ ಮಾತುಗಳನ್ನು ಅಜ್ಞಾನಿಗಳು ಒಪ್ಪಿಕೊಳ್ಳುತ್ತಾರೆ!** [101]

## (ಅಲ್ಲಾಹನಿಗೆ ಪುತ್ರಿಯರು)

**[102] ಮತ್ತು ಗೊತ್ತು ಮಾಡುತ್ತೇವೆ ಅಲ್ಲಾಹನ ಸಲುವಾಗಿ ಪುತ್ರಿಯರನ್ನು. ಪವಿತ್ರತೆಯಿದೆ ಅವನಿಗೆ. ಮತ್ತು ಏನೆಲ್ಲವನ್ನೂ ಇಚ್ಛಿಸುತ್ತಾರೋ, ಅವೆಲ್ಲವೂ ಅವರ ಸಲುವಾಗಿವೆ.**

**ಅಲ್ಲಾಹನ ಆಣೆ! ಅವಶ್ಯವಾಗಿ ಕಳುಹಿಸಿದೆವು ನಾವು ಪೈಗಂಬರನನ್ನು!**

**[ಕುರಾನ್:-ಮಂ. 3; ಸಿ. 14; ಸೂ. 16; ಆ. 57, 63]**

## (ಅಲ್ಲಾಹನಿಗೆ ಹೆಣ್ಣುಮಕ್ಕಳೇತಕ್ಕೆ?)

**ಸಮೀಕ್ಷಕ:**—ಅಲ್ಲಾಹನು ಪುತ್ರಿಯರನ್ನು [ಕಟ್ಟಿಕೊಂಡು] ಏನು ಮಾಡುವನು? ಪುತ್ರಿಯರಂತೂ ಯಾವನಾದರೂ ಮಾನವನಿಗೆ ಬೇಕು. ಪುತ್ರರೇತಕ್ಕೆ ಗೊತ್ತು ಮಾಡಲ್ಪಡುವುದಿಲ್ಲ? ಮತ್ತು ಪುತ್ರಿಯರೇಕೆ ಗೊತ್ತುಮಾಡಲ್ಪಡುತ್ತಾರೆ? ಇದಕ್ಕೆ ಕಾರಣವೇನು? ಹೇಳಿರಿ!

## (ಆಣೆ ಇಡುವುದು ಸುಳ್ಳುಗಾರರ ಕಾರ್ಯ)

ಆಣೆ ಇಡುವುದು ಸುಳ್ಳುಗಾರರ ಕಾರ್ಯ; ಖುದಾನ ವರ್ತನೆಯಲ್ಲ!

ಏಕೆಂದರೆ, ಬಹುತೇಕವಾಗಿ ಪ್ರಪಂಚದಲ್ಲಿ ಯಾವನು ಸುಳ್ಳುಗಾರನಾಗಿರುತ್ತಾನೋ, ಅವನೇ ಆಣೆಯನ್ನಿಡುವುದು ಕಾಣುತ್ತದೆ!

ಸತ್ಯವಂತನೇಕೆ ಆಣೆ ಇಡಬೇಕು? [102]

## (ಹೃದಯ, ಕಿವಿ ಮತ್ತು ಕಣ್ಣುಗಳ ಮೇಲೆ ಮುದ್ರೆ)

[103] ಯಾರ ಹೃದಯಗಳ ಮೇಲೆ, ಮತ್ತು ಕಿವಿಗಳ ಮೇಲೆ ಮತ್ತು ಕಣ್ಣುಗಳ ಮೇಲೆ ಅಲ್ಲಾಹನು ಮುದ್ರೆಯೊತ್ತಿದನೋ, ಅವರೇ ಈ ಜನರು! ಮತ್ತು ಈ ಜನರು ಅದೇ ಎಚ್ಚರವಿಲ್ಲದ ಮಂದಿಗಳಾಗಿದ್ದಾರೆ.

ಮತ್ತು ಏನೇನು ಮಾಡಿದ್ದಾನೋ, ಅದಕ್ಕೆ ಅನುಸಾರವಾಗಿ ಪ್ರತಿಯೊಬ್ಬ ಜೀವನಿಗೂ ಪೂರ್ತಿಯಾಗಿ ಕೊಡಲ್ಪಡುವುದು. ಮತ್ತು ಅವರಿಗೆ ಅನ್ಯಾಯ ಮಾಡಲ್ಪಡುವುದಿಲ್ಲ.

[ಕುರಾನ್:–ಮಂ. 8; ಸಿ. 14; ಸೂ. 16; ಆ. 108, 111]

## (ಮುದ್ರೆಯೊತ್ತಿದ ಮೇಲೆ ಖುದಾನೇ ಕರ್ಮಫಲವನ್ನು ಭೋಗಿಸಲಿ!)

ಸಮೀಕ್ಷಕ:—ಖುದಾನೇ ಸ್ವತಃ ಮುದ್ರೆಯೊತ್ತಿಬಿಟ್ಟನೆಂದ ಮೇಲೆ, ಆ ಬಡಪಾಯಿಗಳು ಅಪರಾಧವಿಲ್ಲದೆಯೇ ಕೊಲ್ಲಲ್ಪಟ್ಟರು! ಏಕೆಂದರೆ, ಅವರನ್ನು ಪರಾಧೀನರನ್ನಾಗಿ ಮಾಡಿಬಿಟ್ಟನು! ಇದು ಎಷ್ಟು ದೊಡ್ಡ ಅಪರಾಧವಾಗಿದೆ?

ಮತ್ತು ಪುನಃ—"ಯಾವನು ಎಷ್ಟು ಮಾಡಿದ್ದಾನೋ, ಅಷ್ಟೇ ಅವನಿಗೆ ಕೊಡಲ್ಪಡುವುದು; ನ್ಯೂನಾಧಿಕವಲ್ಲ," ಎನ್ನುತ್ತಾರೆ, ಕೂಡ!

ಅಲ್ಲಾ! ಅವರು ಸ್ವತಂತ್ರತೆಯಿಂದ ಪಾಪಗಳನ್ನು ಮಾಡಲೇ ಇಲ್ಲ; ಆದರೆ, ಖುದಾ ಮಾಡಿಸಿದುದರಿಂದ ಮಾಡಿದರು! ಮತ್ತೆ, ಅವರಿಂದ ಅಪರಾಧವೇ ಆಗಲಿಲ್ಲ. ಅವರಿಗೆ ಫಲ ಸಿಕ್ಕಬಾರದು. ಇದರ ಫಲ ಖುದಾಗೆ ಸಿಕ್ಕುವುದು ಉಚಿತವಾಗಿದೆ!

ಮತ್ತು ಪೂರ್ತಿ ಕೊಡಲ್ಪಟ್ಟಿರುವುದಾದರೆ, ಕ್ಷಮೆ ಯಾವ ವರ್ತನೆಯದು ಮಾಡಲ್ಪಡುತ್ತದೆ? ಮತ್ತು ಕ್ಷಮೆ ಮಾಡಲ್ಪಡುವುದಾದರೆ, ನ್ಯಾಯ ಹಾರಿ ಹೋಗುವುದು!

ಇಂತಹ ಗಡಿಬಿಡಿಯ ಪ್ರಕರಣ ಈಶ್ವರನದೆಂದಿಗೂ ಆಗಲಾರದು; ಆದರೆ, ಬುದ್ಧಿಹೀನರಾದ ಹುಡುಗರದಾಗಿರುತ್ತದೆ! [103]

### (ಕಾಫಿರರಿಗೆ ನರಕ; ಕೊರಳಿನಲ್ಲಿ ಕರ್ಮಪತ್ರ)

[104] ಮತ್ತು ನಾವು ಕಾಫಿರರನ್ನು ಕೂಡಿಡುವ ಸ್ಥಾನವಾದ ನರಕವನ್ನು ನಿರ್ಮಿಸಿದೆವು.

ಮತ್ತು ಪ್ರತಿಯೊಬ್ಬ ಮಾನವನ ಕರ್ಮಪತ್ರವನ್ನು ಅವನ-ಅವನ ಕೊರಳಿನ ಮಧ್ಯೆ ತಗಲಿ ಹಾಕಿಬಿಟ್ಟೆವು. ಮತ್ತು, ನಾವು ಅವನ ಸಲುವಾಗಿ, ಕಯಾಮತ್ತಿನ ದಿವಸ, ಅವನು ತೆರೆದಿಟ್ಟದ್ದನ್ನು ನೋಡಲಿ, ಎಂದು ಒಂದು ಪುಸ್ತಕವನ್ನು ಹೊರತೆಗೆಯುವೆವು.

ಮತ್ತು ನೂಹ*ನ ನಂತರ, ನಾವು ಬಹಳ ಪೀಳಿಗೆಗಳನ್ನು ನಿರ್ನಾಮ ಮಾಡಿದೆವು.

[ಕುರಾನ್:-ಮಂ. 4; ಸಿ. 15; ಸೂ. 17; ಆ. 8, 13, 17]

### (ಕಾಫಿರರಿಗೆ ಮಾತ್ರ ನರಕ, ಎಂಬುದು ಪಕ್ಷಪಾತ)

**ಸಮೀಕ್ಷಕ:**—ಯಾರು ಕುರಾನ್, ಪೈಗಂಬರ್ ಮತ್ತು ಕುರಾನಿನಲ್ಲಿ ಹೇಳಲ್ಪಟ್ಟಿರುವ ಖುದಾ, ಏಳನೆಯ ಆಕಾಶ, ಹಾಗೂ ನಮಾಜ್ ಮೊದಲಾದುವನ್ನು ಒಪ್ಪುವುದಿಲ್ಲವೋ, ಅವರೇ ಕಾಫಿರರಾಗಿದ್ದರೆ, ಮತ್ತು ಅವರಿಗಾಗಿಯೇ ನರಕವಿರುವುದಾದರೆ, ಈ ಮಾತು ಕೇವಲ ಪಕ್ಷಪಾತದ್ದಾಗಿ ಸಿದ್ಧವಾಗುವುದು! ಏಕೆಂದರೆ, ಕೇವಲ ಕುರಾನನ್ನು ಒಪ್ಪಿಕೊಳ್ಳುವವರೆಲ್ಲರೂ ಒಳ್ಳೆಯವರು; ಮತ್ತು ಬೇರೆಯದನ್ನು ಒಪ್ಪುವವರೆಲ್ಲರೂ ಕೆಟ್ಟವರು, ಎಂದಿಗಾದರೂ ಆಗಬಲ್ಲರೇ?

### (ಕರ್ಮಪುಸ್ತಕ ಯಾರ ಕೊರಳಲ್ಲೂ ಕಾಣಿಸುತ್ತಿಲ್ಲ)

ಪ್ರತಿಯೊಬ್ಬನ ಕೊರಳಿನಲ್ಲಿಯೂ ಕರ್ಮಪುಸ್ತಕವನ್ನು [ಕಟ್ಟುವುದು] ಅತಿ ಬಾಲಕತನದ ಮಾತಾಗಿದೆ! ನಾವಂತೂ ಯಾವನೊಬ್ಬನ ಕೊರಳಿನಲ್ಲಿಯೂ ನೋಡಲಿಲ್ಲ! ಇದರ ಉದ್ದೇಶ್ಯವು ಕರ್ಮಫಲಗಳನ್ನು ಕೊಡುವುದಾದರೆ, ಮತ್ತೆ ಮಾನವರ ಹೃದಯಗಳು, ನೇತ್ರಗಳೇ ಮೊದಲಾದುವುಗಳ ಮೇಲೆ ಮುದ್ರೆಯನ್ನೊತ್ತುವುದು ಮತ್ತು ಪಾಪಗಳನ್ನು ಕ್ಷಮಿಸುವುದು! ಇದಾವ ಆಟವನ್ನು ಹೂಡಿದ್ದಾರೆ?

### (ಈಗ ಖುದಾನ ಪುಸ್ತಕ ಎಲ್ಲಿ ಹೋಯಿತು?)

ಖುದಾ ಕಯಾಮತ್ತಿನ ರಾತ್ರಿ ಪುಸ್ತಕವನ್ನು ಹೊರ ತೆಗೆಯುವನಾದರೆ, ಈ ದಿನಗಳಲ್ಲಿ ಆ ಪುಸ್ತಕ ಎಲ್ಲಿದೆ? ಸಾಹುಕಾರನ ಲೆಕ್ಕದ ಪುಸ್ತಕದ ಹಾಗೆ ಬರೆಯುತ್ತಾ ಇರುತ್ತಾನೇನು?

---

*Noa

ಈ ಸ್ಥಳದಲ್ಲಿ, ಪೂರ್ವಜನ್ಮವಿಲ್ಲವಾದರೆ, ಜೀವರ ಕರ್ಮಗಳೇ ಇರಲಾರವು! ಮತ್ತೆ, ಕರ್ಮದ ರೇಖೆಯನ್ನು ಹೇಗೆ ಬರೆದಿರಿ?, ಎಂದು ಆಲೋಚಿಸಬೇಕಾಗಿದೆ. ಕರ್ಮವಿಲ್ಲದೆಯೇ ಬರೆದಿದ್ದಾದರೆ, ಅವರಿಗೆ ಅನ್ಯಾಯವನ್ನು ಮಾಡಿದಿರಿ! ಏಕೆಂದರೆ, ಒಳ್ಳೆಯ-ಕೆಟ್ಟ ಕರ್ಮವಿಲ್ಲದೇ ಅವರಿಗೆ ಸುಖ–ದುಃಖಗಳನ್ನೇತಕ್ಕೆ ಕೊಟ್ಟಿರಿ?

## (ತನ್ನಿಷ್ಟದಂತೆ ಕರ್ಮಫಲ ಕೊಡುವುದು ಅನ್ಯಾಯ)

"ಖುದಾನ ಇಚ್ಛೆ", ಎನ್ನುವಿರಾದರೂ ಕೂಡ, ಅವನು ಅನ್ಯಾಯವನ್ನೇ ಮಾಡಿದನು!

ಕೆಟ್ಟ-ಒಳ್ಳೆಯ ಕರ್ಮಗಳನ್ನು ಮಾಡದಿದ್ದರೂ, ಸುಖ–ದುಃಖಗಳೆಂಬ ಫಲಗಳನ್ನು ಕಡಿಮೆಯಾಗಿಯೋ, ಹೆಚ್ಚಾಗಿಯೋ ಕೊಡುವುದನ್ನೇ 'ಅನ್ಯಾಯ', ಎನ್ನುತ್ತಾರೆ.

ಮತ್ತು ಆ ಸಮಯದಲ್ಲಿ ಖುದಾನೇ ಪುಸ್ತಕವನ್ನು ಓದುವನೋ, ಅಥವಾ ಯಾವನಾದರೂ ಸರಿಶ್ತೇದಾರನು ಓದಿ ಹೇಳುವನೋ? ಸ್ವತಃ ಖುದಾನೇ ದೀರ್ಘಕಾಲಸಂಬಂಧೀ-ಜೀವರನ್ನು* ಅಪರಾಧವಿಲ್ಲದೇ ಸಾಯಿಸಿದನೆಂದ ಮೇಲೆ, ಅವನು ಅನ್ಯಾಯಕಾರಿಯಾಗಿ ಹೋದನು! ಯಾವನು ಅನ್ಯಾಯಕಾರಿಯಾಗಿರುತ್ತಾನೋ, ಅವನು ಖುದಾನೇ ಆಗಲಾರನು!

## (ಸಮೂದನಿಗೆ ಹೆಣ್ಣು ಒಂಟೆ; ಬಲಗೈಯಲ್ಲಿ ಅಧಿಕಾರ ಪತ್ರ)

**[105]** ಮತ್ತು ನಾವು ಸಮೂದನಿಗೆ ಹೆಣ್ಣು ಒಂಟೆಯನ್ನು ಪ್ರಮಾಣವಾಗಿ ಕೊಟ್ಟೆವು.

ಮತ್ತು ಯಾರನ್ನು ಪಥಭ್ರಷ್ಟರನ್ನಾಗಿ ಮಾಡಬಲ್ಲೆಯೋ, ಪಥಭ್ರಷ್ಟರನ್ನಾಗಿ ಮಾಡು.

ಯಾವ ದಿನ ನಾವು ಜನರೆಲ್ಲರನ್ನೂ ಅವರವರ ಮುಖಂಡರೊಂದಿಗೆ ಕರೆಯುವೆವೋ, ಯಾವ ಯಾವನ ಬಲಗೈಯಲ್ಲಿ ಅವನವನ ಅಧಿಕಾರ ಪತ್ರ ಕೊಡಲ್ಪಟ್ಟಿತೋ, ತೀರಿತು! [ಕುರಾನ್:–ಮಂ. 4; ಸಿ. 15; ಸೂ. 17; ಆ. 59, 64, 71]

## (ಹೆಣ್ಣು ಒಂಟೆಯೂ ಖುದಾನ ಚಿಹ್ನೆಯೋ?)

**ಸಮೀಕ್ಷಕ:**—ಭಾಪು! ಖುದಾನ ಆಶ್ಚರ್ಯಭರಿತ ಚಿಹ್ನೆಗಳು ಎಷ್ಟಿವೆಯೋ, ಅವುಗಳಲ್ಲಿ ಒಂದು ಹೆಣ್ಣು ಒಂಟೆಯೂ ಖುದಾನ ಇರುವಿಕೆಗೆ ಪ್ರಮಾಣ, ಅಥವಾ ಪರೀಕ್ಷೆ [ಮಾಡುವುದರಲ್ಲಿ] ಸಾಧಕವಾಗಿದೆಯೋ?

---

*ಎಂದರೆ, ಇಸರಾಏಲನ ಸಂತತಿಗಳಿಂದ ಕೂಡಿದ ಜೀವರನ್ನು—ಯು.ಮೀ.

ಒಂದು ವೇಳೆ, ಖುದಾ ಶೈತಾನನಿಗೆ ದಾರಿ ತಪ್ಪಿಸುವ ಅಪ್ಪಣೆಯನ್ನು ಕೊಟ್ಟ ನಾವರೆ, ಖುದಾನೇ ಶೈತಾನನ ಸರದಾರನೂ, ಮತ್ತು ಎಲ್ಲ ಪಾಪಗಳನ್ನೂ ಮಾಡು ವವನೂ ಆಗಿ ಉಳಿದನು!

**ಇಂತಹವನನ್ನು ಖುದಾ, ಎನ್ನುವುದು ಕೇವಲ ಅಲ್ಪ ತಿಳುವಳಿಕೆಯ ಮಾತಾಗಿದೆ!**

ಕಯಾಮತ್ತಿನ [ರಾತ್ರಿ], ಎಂದರೆ ಪ್ರಳಯಕಾಲದಲ್ಲಿಯೇ ನ್ಯಾಯವನ್ನು ಮಾಡುವುದಕ್ಕೂ-ಮಾಡಿಸುವುದಕ್ಕೂ ಪೈಗಂಬರರನ್ನೂ, ಮತ್ತು ಅವರ ಉಪದೇಶ ಗಳನ್ನು ಅಂಗೀಕರಿಸುವವರನ್ನೂ ಖುದಾ ಕರೆಯುವನಾದರೆ, ಎಂದಿನವರೆಗೆ ಪ್ರಳಯ ವಾಗುವುದಿಲ್ಲವೋ, ಅಂದಿನವರೆಗೆ ಎಲ್ಲರೂ ವಿಚಾರಧೀನರಾಗಿರಬೇಕೇನು? ಮತ್ತು ಎಂದಿನವರೆಗೆ ನ್ಯಾಯ ಮಾಡುವುದಿಲ್ಲವೋ, ಅಂದಿನವರೆಗೆ ವಿಚಾರಾಧೀನರಾಗಿರುವುದು ಎಲ್ಲರಿಗೂ ದುಃಖದಾಯಕವಾಗಿರುವುದು! **ಆದುದರಿಂದ, ಶೀಘ್ರವಾಗಿ ನ್ಯಾಯ ಮಾಡುವುದು ನ್ಯಾಯಾಧೀಶನ ಉತ್ತಮ ಕರ್ಮವಾಗಿರುವುದು!**

## (ಇದೆಂತಹ ಐಲುಪೈಲು ರಾಜನ ನ್ಯಾಯ!)

ಇದಂತೂ **'ಪೋಪಾಂ ಬಾಯಿ'***ಯ ನ್ಯಾಯದಂತಾಯಿತು! ಯಾವನಾದರೂ ನ್ಯಾಯಾಧೀಶನು—

“ಎಂದಿನವರೆಗೆ ಐವತ್ತು ವರ್ಷಗಳವರೆಗೆ ಕಳ್ಳರೂ ಮತ್ತು ಪ್ರಾಮಾಣಿಕರೂ ಒಟ್ಟಾಗಿ ಸೇರರೋ, ಅಂದಿನವರೆಗೆ ಅವರೆಲ್ಲರಿಗೂ ಶಿಕ್ಷೆಯನ್ನಾಗಲೀ, ಗೌರವ ವನ್ನಾಗಲೀ ಸಲ್ಲಿಸಬಾರದು', ಎಂದು ಹೇಳಿದರೆ, ಹೇಗಿರುವುದೋ, ಹಾಗೆಯೇ ಇದೆ [ಈ ನ್ಯಾಯವ್ಯವಸ್ಥೆ] !

ಎಂದರೆ, ಒಬ್ಬನು ಐವತ್ತು ವರ್ಷಗಳವರೆಗೆ ವಿಚಾರಾಧೀನನಾಗಿ ಬಿದ್ದಿದ್ದನು. ಇನ್ನೊಬ್ಬನು ಇಂದೇ ಹಿಡಿಯಲ್ಪಟ್ಟನು! ನ್ಯಾಯನಿರ್ಣಯದ ಕಾರ್ಯ ಹೀಗೆ ನಡೆಯಲಾರದು!

**ನ್ಯಾಯ ಬೇಕಾಗಿದ್ದರೆ, ವೇದಗಳನ್ನು ಮತ್ತು ಮನುಸ್ಮೃತಿಯನ್ನು ನೋಡಿರಿ! ಅವುಗಳ ಪ್ರಕಾರ ಕ್ಷಣಮಾತ್ರವೂ ವಿಲಂಬವಾಗುವುದಿಲ್ಲ!** [ಜೀವರು] ತಮ್ಮ ತಮ್ಮ ಕರ್ಮಾನುಸಾರವಾಗಿ ಶಿಕ್ಷೆಯನ್ನು ಅಥವಾ ಮಾನ್ಯತೆಯನ್ನು ಸದಾ ಹೊಂದು ತ್ತಿರುತ್ತಾರೆ!

---

*ನಾನು ಮಾಡಿದುದೇ ನ್ಯಾಯ; ಅನ್ಯಾಯವೇ ಆದರೂ, ನಾನು ಮಾಡಿದುದರಿಂದ **ನ್ಯಾಯವೇ!—ಅನು.**

### (ಪೈಗಂಬರರ ಸಾಕ್ಷ್ಯದ ಆವಶ್ಯಕತೆ ಈಶ್ವರನಿಗೇತಕ್ಕೆ?)

ಎರಡನೆಯದಾಗಿ,—ಪೈಗಂಬರರನ್ನು ಸಾಕ್ಷಿಗಳನ್ನಾಗಿಟ್ಟುಕೊಳ್ಳುವುದರಿಂದ, ಈಶ್ವರನ ಸರ್ವಜ್ಞತ್ವಕ್ಕೆ ಹಾನಿ ತಟ್ಟುತ್ತದೆ. ಅಲ್ಲಾ! ಇಂತಹ ಪುಸ್ತಕ ಈಶ್ವರೀಯವೂ, ಮತ್ತು ಇಂತಹ ಪುಸ್ತಕದ ಉಪದೇಶವನ್ನು ಮಾಡುವವನು ಈಶ್ವರನೂ ಎಂದಿಗಾದರೂ ಆಗಿರಲು ಶಕ್ಯವೇ? ಎಂದಿಗೂ ಇಲ್ಲ! [105]

### (ಮುಸಲ್ಮಾನರ ಸ್ವರ್ಗ)

**[106] ಈ ಜನರು ಅವರ ಸಲುವಾಗಿದ್ದಾರೆ. ಉದ್ಯಾನಗಳು ಸದಾ ಇರುವುವಾಗಿವೆ. ಅವುಗಳ ಕೆಳಗಿನಿಂದ ಕಾಲುವೆಗಳು ಪ್ರವಹಿಸುತ್ತವೆ. ಆ ಮಧ್ಯದಲ್ಲಿ ಒಡವೆಗಳು ತೊಡಿಸಲ್ಪಡುವುವು. ಸ್ವರ್ಣದಂತಹ ಬಳೆಗಳನ್ನು ಮತ್ತು ಹಸಿರು ಬಣ್ಣದ ಜರತಾರಿಯ ವಸ್ತ್ರಗಳನ್ನು ತೊಡುವರು. ಅದರ ನಡುವೆ ಮಂಚಗಳ ಮೇಲೆ ಕಸೀದಿ ಮಾಡಿದ ಒರಗು ದಿಂಬುಗಳನ್ನಿಟ್ಟುಕೊಳ್ಳುವರು. ಒಳ್ಳೆಯದು [ಆ] ಪುಣ್ಯ! ಮತ್ತು ಲಾಭ ಪಡೆದುಕೊಳ್ಳಲು ಒಳ್ಳೆಯದಾಗಿದೆ ಸ್ವರ್ಗ!**

**[ಕುರಾನ್:-ಮಂ. 4; ಸಿ. 15; ಸೂ. 18; ಆ. 31]**

### (ಆ ಸ್ವರ್ಗದಲ್ಲಿ ಇಲ್ಲಿಗಿಂತ ಹೆಚ್ಚಾದುದು ಏನಿದೆ?)

**ಸಮೀಕ್ಷಕ:**—ಭಾಪು, ಸ್ವಾಮಿ! ಭಾಪು!! ಯಾವುದರಲ್ಲಿ ಉದ್ಯಾನಗಳು, [ಕಾಲುವೆಗಳು], ಒಡವೆಗಳು, ಬಟ್ಟೆಗಳು, ಮೆತ್ತೆಗಳು, ದಿಂಬುಗಳು ಆನಂದಕ್ಕಾಗಿ ಇವೆಯೋ, ಆ ಕುರಾನಿನ ಸ್ವರ್ಗವಾದರೂ ಏನು?

ಭಲೇ! ಯಾವನಾದರೂ ಬುದ್ಧಿವಂತನು ಈ ಸ್ಥಳದಲ್ಲಿ ಆಲೋಚಿಸುವನಾದರೆ, **ಅಲ್ಲಿ, ಮುಸಲ್ಮಾನರ ಸ್ವರ್ಗದಲ್ಲಿ, 'ಅನ್ಯಾಯ'ದ ಹೊರತು, ಇಲ್ಲಿಗಿಂತ ಹೆಚ್ಚಿನದು ಏನೇನೂ ಇಲ್ಲ! ಅದೇನೆಂದರೆ, ಅವರುಗಳ ಕರ್ಮಗಳು ಕೊನೆಯುಳ್ಳವು; ಆದರೆ, ಅವುಗಳ ಫಲಗಳು ಅನಂತ!**

### (ದುಃಖ ಭೋಗವಾದ ಮೇಲೆಯೇ ಸುಖದ ಸವಿ)

ಮತ್ತು ನಿತ್ಯವೂ ಸಿಹಿಯನ್ನು ಸವಿಯುವುದಾದರೆ, ಕೆಲವು ದಿನಗಳಲ್ಲಿ ಅದು ವಿಷಕ್ಕೆ ಸಮಾನವಾಗಿ ತೋರುತ್ತದೆ! **ಅವರು ಸದಾ ಸುಖವನ್ನು ಅನುಭವಿಸುವರಾದರೆ, ಅವರ ಪಾಲಿಗೆ ಸುಖವೇ ದುಃಖರೂಪವಾಗಿ ಹೋಗುವುದು!**

ಇದೇ ಕಾರಣದಿಂದ, **ಮಹಾಕಲ್ಪಪರ್ಯಂತ*** ಮುಕ್ತಿಸುಖವನ್ನನುಭವಿಸಿ, **ಪುನರ್ಜನ್ಮವನ್ನು ಹೊಂದುವುದೆಂಬುದೇ ಸತ್ಯಸಿದ್ಧಾಂತವಾಗಿರುತ್ತದೆ!** [106]

---

***ಪುಟ 467-468ನ್ನು ನೋಡಿ.—ಸಂ,**

## (ಗ್ರಾಮಗಳ ನಾಶ)

**[107] ಮತ್ತು, ಅವರು ಅನ್ಯಾಯವನ್ನು ಮಾಡಿದಾಗ, ನಾವು ಅವರನ್ನು ಸಂಹರಿಸಿದ ಗ್ರಾಮಗಳು ಇವೇ ಆಗಿವೆ. ಮತ್ತು ನಾವು ಅವರನ್ನು ಸಂಹರಿಸುವ ಪ್ರತಿಜ್ಞೆಯನ್ನು ಪೂರೈಸಿದೆವು.**

[ಕುರಾನ್:-ಮಂ. 4; ಸಿ. 15; ಸೂ. 18; ಆ. 59]

## (ಯಾವಾಗಲಾದರೂ ಸಮಸ್ತ ನಗರಿಯೇ ಪಾಪಿಯಾಗಬಲ್ಲದೇ?)

**ಸಮೀಕ್ಷಕ:**—ಆಹಾ! ಸಮಸ್ತ ನಗರಿಯೇ ಪಾಪಿಯಾಗಬಲ್ಲದೇ? ಮತ್ತು ನಂತರ, ಪ್ರತಿಜ್ಞೆಮಾಡುವುದರಿಂದ, ಈಶ್ವರನು ಸರ್ವಜ್ಞನಾಗಿ ಉಳಿಯಲಿಲ್ಲ. ಏಕೆಂದರೆ, ಯಾವಾಗ ಅವರ ಅನ್ಯಾಯವನ್ನು ನೋಡಿದನೋ, ಆಗ ಪ್ರತಿಜ್ಞೆ ಮಾಡಿದನು. ಮೊದಲು ತಿಳಿದಿರಲಿಲ್ಲ! ಇದರಿಂದ, ದಯಾಹೀನನೂ ಆಗಿ ಕುಳಿತನು. [107]

## (ಖುದಾ ಹೆದರುವುದು)

**[108] ಮತ್ತು ಆ ಹುಡುಗ! ಸರಿ! ಅವನ ತಾಯಿ–ತಂದೆಗಳು ನಂಬಿಕೆಯನ್ನುಳ್ಳವರಾಗಿದ್ದರು. ನಾವು ಅವರನ್ನು ದಂಗೆಗೆ ಮತ್ತು ಕಾಫಿರತನಕ್ಕೆ ಎಳೆದಾರೋ. ಎಂದು ಹೆದರಿದೆವು.**

**ಸೂರ್ಯನು ಮುಳುಗುವ ಸ್ಥಾನದ ವರೆಗೆ ಹೋಗಿ ಸೇರಿದನು. ಅವನು ಕೆಸರಿನ ಬುಗ್ಗೆಯ ಮಧ್ಯದಲ್ಲಿ ಮುಳುಗುತ್ತಿರುವುದನ್ನು ಕಂಡನು.**

**ಅವರು—"ಓ ಜುಲ್‌ಕರ್‌ನೈನ್!* ಪೃಥಿವಿಯ ನಡುವೆ ನಿಶ್ಚಯವಾಗಿ 'ಯಾಜೂಜ—ಮಾಜೂಜ'ರು† ಕಲಹವನ್ನುಂಟುಮಾಡುವವರಾಗಿದ್ದಾರೆ", ಎಂದು ಹೇಳಿದರು.**

[ಕುರಾನ್:-ಮಂ. 4; ಸಿ. 16; ಸೂ. 18; ಆ. 80, 86, 94]

## (ಖುದಾ ಹೆದರುವನೇತಕ್ಕೆ?)

**ಸಮೀಕ್ಷಕ:**—ಭಲೇ! ಇದು ಖುದಾನ ಎಷ್ಟು ತಿಳುವಳಿಕೆಹೀನತೆಯಾಗಿದೆ? ಹುಡುಗರ ತಾಯಿ-ತಂದೆಗಳು [ಹುಡುಗರನ್ನು] ಎಲ್ಲಿಯಾದರೂ ತನ್ನ ಮಾರ್ಗದಿಂದ ದೂರೀಕರಿಸಲ್ಪಟ್ಟು, ವಿರುದ್ಧರಾಗಿ ಮಾಡಲ್ಪಡದಿರಲಿ, ಎಂಬ ಸಂದೇಹದಿಂದ ಹೆದರಿದನು! ಇದು ಎಂದಿಗೂ ಈಶ್ವರನ ವರ್ಣನೆಯಾಗಲಾರದು!

---

*ಜುಲ್ಕರ್‌ನೈನ್, ಎಂದರೆ ಎರಡು ಕೊಂಬುಗಳನ್ನುಳ್ಳ ಪ್ರಾಣಿ. ಇಲ್ಲಿ ಒಬ್ಬ ಸಮ್ರಾಟನ ಹೆಸರು. – ಅನು.

†'ಯಾಜೂಜ್-ಮಾಜೂಜ್', ಎಂಬ ಎರಡು ಅಸಭ್ಯ ಜಾತಿಗಳಿದ್ದುವು. ಇವು ಸದಾ ದರೋಡೆ ಮಾಡುತ್ತಿದ್ದುವು.—ಮು.ಮೀ.

## (ವಿದ್ಯಾವಿರುದ್ಧ ಪುಸ್ತಕ; ವಿದ್ಯಾಹೀನ ಜನರು)

ಈಗ ಮುಂದಿನ 'ಅವಿದ್ಯೆ'ಯ ಮಾತನ್ನು ನೋಡಿರಿ! ಈ ಪುಸ್ತಕವನ್ನು ರಚಿಸಿದವನು 'ಸೂರ್ಯನು ರಾತ್ರಿಯಲ್ಲಿ ಒಂದು ಸರೋವರದಲ್ಲಿ ಮುಳುಗಿದನು', ಎಂದು ತಿಳಿಯುತ್ತಾನೆ. ಮತ್ತೆ, 'ಪ್ರಾತಃಕಾಲ ಉದಿಸುತ್ತಾನೆ', ಎಂದು.

**ಅಲ್ಲ! ಸೂರ್ಯನಂತೂ ಪೃಥಿವಿಗಿಂತ ಬಹಳ ದೊಡ್ಡವನಾಗಿದ್ದಾನೆ! ಅವನು ನದಿಯಲ್ಲಿ ಅಥವಾ ಸರೋವರದಲ್ಲಿ, ಅಥವಾ ಸಮುದ್ರದಲ್ಲಿ ಹೇಗೆ ಮುಳುಗಬಲ್ಲನು? ಇದರಿಂದ, ಕುರಾನನ್ನು ರಚಿಸಿದವನಿಗೆ ಭೂಗೋಳ-ಖಗೋಳದ ವಿದ್ಯೆಯಿರಲಿಲ್ಲ ವೆಂದು ವಿದಿತವಾಯಿತು!** ಇದ್ದಿದ್ದ ಪಕ್ಷದಲ್ಲಿ, ಇಂತಹ ವಿದ್ಯಾ–ವಿರುದ್ಧವಾದ ಮಾತನ್ನು ಏಕೆ ಬರೆಯುತ್ತಿದ್ದನು?

ಮತ್ತು ಈ ಪುಸ್ತಕವನ್ನು ಒಪ್ಪಿಕೊಳ್ಳುವವರಿಗೂ ಕೂಡ, ವಿದ್ಯೆಯಿಲ್ಲ! **ಇದ್ದಿದ್ದರೆ, ಇಂತಹ ಸುಳ್ಳು ಮಾತುಗಳಿಂದ ಯುಕ್ತವಾದ ಪುಸ್ತಕವನ್ನು ಏಕೆ ಅಂಗೀಕರಿಸುತ್ತಿದ್ದರು?**

## (ಇದು ಕಾಡು ಜನರು ಅಂಗೀಕರಿಸುವ ಪುಸ್ತಕ)

ಈಗ ನೋಡಿರಿ, ಖುದಾನ ಅನ್ಯಾಯವನ್ನು! ತಾನೇ ಪೃಥಿವಿಯನ್ನು ರಚಿಸುವವನೂ, ರಾಜನೂ, ನ್ಯಾಯಾಧೀಶನೂ ಆಗಿದ್ದಾನೆ! ಮತ್ತು **'ಯಾಜೂಜ-ಮಾಜೂಜ'**ರಿಗೆ ಪೃಥಿವಿಯಲ್ಲಿ ಗಲಭೆಯನ್ನುಂಟು ಮಾಡಲು ಎಡೆಯನ್ನೂ ಕೊಡುತ್ತಾನೆ. ಅದು ಈಶ್ವರತ್ವದ ಸ್ಥಿತಿಗೆ ವಿರುದ್ಧವಾಗಿದೆ.

**ಆದುದರಿಂದ, ಇಂತಹ ಪುಸ್ತಕವನ್ನು ಕಾಡುಜನರು ಅಂಗೀಕರಿಸುತ್ತಾರೆ; ವಿದ್ವಾಂಸರಲ್ಲ!** [108]

## (ದೇವದೂತನಿಂದ ಮೇರಿಯ ಗರ್ಭಧಾರಣೆ)

[109] ಮತ್ತು ಪುಸ್ತಕದ ನಡುವೆ, ಮೇರಿ ತನ್ನ ಜನರಿಂದ ಬೇರೆಯಾಗಿ, **ಪೂರ್ವದಿಕ್ಕಿನ ಮನೆಗೆ ಹೊರಟುಹೋದ ಕಾಲವನ್ನು ಸ್ಮರಿಸಿರಿ.**

**ಸರಿ! ಪರದೆ ಬಿದ್ದಿತು ಅವರಿಂದ ಈ ಕಡೆಗೆ! ಕಳುಹಿಸಿದೆವು ನಾವು ನಮ್ಮ ಆತ್ಮನನ್ನು, ಎಂದರೆ ದೇವದೂತನನ್ನು. ಆಯಿತು! ಅವಳ ಸಲುವಾಗಿ ಅವನು ಪುಷ್ಟನಾದ ಪುರುಷನ ಆಕೃತಿಯನ್ನು ತಳೆದನು.**

[ಅವಳು]—**"ನೀನು ಭಕ್ತಿವಂತನಾದ ಪಕ್ಷದಲ್ಲಿ ನಿಶ್ಚಯವಾಗಿ ನಾನು ಕರುಣಾಳುವಿನ ಶರಣನ್ನು ನಿನ್ನ ಮೂಲಕ ಹಿಡಿಯುತ್ತೇನೆ", ಎಂದು ಹೇಳಲಾರಂಭಿಸಿದಳು.**

[ಅವನು]—"ನಿನಗೆ ಪವಿತ್ರನಾದ ಪುತ್ರನನ್ನು ಕೊಡುವ ಸಲುವಾಗಿ ನಿನ್ನ ಸ್ವಾಮಿಯ ಕಡೆಯಿಂದ ಕಳುಹಿಸಲ್ಪಟ್ಟವನಾಗಿದ್ದೇನೆ, ಎಂಬ ಹೊರತು ಬೇರೇನೂ ಇಲ್ಲ", ಎಂದು ಹೇಳತೊಡಗಿದನು.

[ಅವಳು]—"ನನ್ನ ಸಲುವಾಗಿ ಪುತ್ರನು ಹೇಗೆ ಆದಾನು? ನನ್ನ ಮೇಲೆ [ಯಾವ] ಪುರುಷನೂ ಕೈಹಾಕಲಿಲ್ಲ. ನಾನು ಕೆಟ್ಟ ಕೆಲಸಮಾಡುವವಳಲ್ಲ!", ಎಂದು ಹೇಳಿದಳು.

ಆಯಿತು! ಅವನಿಂದ ಗರ್ಭವತಿಯಾಗಿ ಹೋದಳು. ಮತ್ತು ಅವನೊಂದಿಗೆ ದೂರ ಮನೆಗೆ ಹೋಗಿ ನೆಲೆಸಿದಳು. ಎಂದರೆ, ಅರಣ್ಯದಲ್ಲಿ!

[ಕುರಾನ್:-ಮಂ. 4; ಸಿ. 16; ಸೂ. 19; ಆ. 16-20, 22]

## (ದೇವದೂತರೂ ಖುದಾ ಆದರು)

ಸಮೀಕ್ಷಕ:—ಈಗ ಬುದ್ಧಿವಂತರು ಆಲೋಚಿಸಿಕೊಳ್ಳಬೇಕೇನೆಂದರೆ—ದೇವ ದೂತರೆಲ್ಲರೂ ಖುದಾನ ಆತ್ಮವಾದರೆ, [ಅವರು] ಖುದಾನಿಂದ ಬೇರೆಯಾದ ಪದಾರ್ಥ ಗಳಾಗಿ ಇರಲಾರರು.

## (ಖುದಾನ ಆಜ್ಞೆಯಂತೆ ಮೇರಿಯನ್ನು ಗರ್ಭವತಿಯನ್ನಾಗಿ ಮಾಡುವುದು ಅನ್ಯಾಯ)

ಎರಡನೆಯ ಅನ್ಯಾಯವೆಂದರೆ, ಕುಮಾರಿ ಮೇರಿಗೆ ಪುತ್ರನಾಗುವುದು !

[ಅವಳು] ಯಾವನ ಸಂಗವನ್ನೂ ಮಾಡಲು ಬಯಸುತ್ತಿರಲಿಲ್ಲ. ಆದರೆ, ಖುದಾನ ಆಜ್ಞೆಯಿಂದ, ದೇವದೂತನು ಅವಳನ್ನು ಗರ್ಭವತಿಯನ್ನಾಗಿ ಮಾಡಿದನು ! ಇದು ನ್ಯಾಯಕ್ಕೆ ವಿರುದ್ಧವಾದ ಮಾತಾಗಿದೆ. ಇಲ್ಲಿ ಅಸಭ್ಯತೆಯ ಬೇರೆಯ ಮಾತು ಗಳನ್ನೂ ಬಹಳ ಬರೆದಿದ್ದಾರೆ! ಅವುಗಳನ್ನು ಬರೆಯುವುದು ಉಚಿತವೆಂದು ತಿಳಿಯಲಿಲ್ಲ. [109]

## (ಕಾಫಿರರನ್ನು ದಾರಿ ತಪ್ಪಿಸಲು ಶೈತಾನನನ್ನು ಕಳುಹಿಸಿದ)

[110] ನಾವು ಶೈತಾನರನ್ನು ಕಾಫಿರರ ಮೇಲೆರಗಲು ಕಳುಹಿಸಿದೆವು. ಇದನ್ನು ನೀನು ನೋಡಲಿಲ್ಲವೇನು? ದಾರಿ ತಪ್ಪಿಸಿದಾಗ ಅವರಿಗೇ ದಾರಿತಪ್ಪಿಸುತ್ತಾರೆ.

[ಕುರಾನ್:-ಮಂ. 4; ಸಿ. 16; ಸೂ. 10; ಆ. 88]

## (ಖುದಾ ಪಥಭ್ರಷ್ಟಕನಾದರೆ, ಫಲವನ್ನೂ ಅವನೇ ಭೋಗಿಸಲಿ!)

ಸಮೀಕ್ಷಕ :—ಖುದಾನೇ ಸ್ವತಃ ಶೈತಾನರನ್ನು ಪಥಭ್ರಷ್ಟರನ್ನಾಗಿ ಮಾಡಲು ಕಳುಹಿಸುತ್ತಾನೆಂದರೆ, ಪಥಭ್ರಷ್ಟರಾದವರ ದೋಷ ಏನೇನೂ ಇರಲಾರದು.

ಮತ್ತು ಅವರಿಗೆ ಶಿಕ್ಷೆ ವಿಧಿಸುವುದೂ ಆಗುವುದಿಲ್ಲ; ಮತ್ತು ಶೈತಾನರಿಗೂ ಕೂಡ! ಏಕೆಂದರೆ, ಖುದಾನ ಅಪ್ಪಣೆಯಿಂದ ಇದೆಲ್ಲವೂ ಆಗುತ್ತದೆ! ಇದರ ಫಲವು ಖುದಾಗೇ ಸಿಕ್ಕಬೇಕು !

ಅವನು ನಿಜವಾದ ನ್ಯಾಯಕಾರಿಯಾಗಿರುವವನಾದರೆ, ಅದರ ಫಲವಾದ ನರಕವನ್ನು ತಾನೇ ಅನುಭವಿಸಲಿ ! ಮತ್ತು ನ್ಯಾಯವನ್ನು ಬಿಟ್ಟು, ಅನ್ಯಾಯವನ್ನು ಮಾಡುವವನಾದರೆ, ಅನ್ಯಾಯಕಾರಿಯಾದನು! ಅನ್ಯಾಯಕಾರಿಯೇ 'ಪಾಪಿ', ಎನಿಸುತ್ತಾನೆ ! [110]

### ('ತೋಬಾಃ' ಮಾಡುವುದರಿಂದ ಪಾಪ–ಕ್ಷಮೆ)

**[111] ಯಾವನು ಪಶ್ಚಾತ್ತಾಪ ಪಟ್ಟನೋ, ಮತ್ತು ನಂಬಿಕೆಯಿಟ್ಟನೋ, ಒಳ್ಳೆಯ ಕರ್ಮಗಳನ್ನು ಮಾಡಿದನೋ, ಪುನಃ ಮಾರ್ಗವನ್ನು ಕಂಡುಕೊಂಡನೋ, ಆ ಮಾನವನ ಸಲುವಾಗಿ, ನಿಶ್ಚಯವಾಗಿಯೂ ಕ್ಷಮೆ ಮಾಡುವವನಾಗಿದ್ದೇನೆ.**

**[ಕುರಾನ್:–ಮಂ. 4; ಸಿ. 16; ಸೂ. 20; ಆ. 82]**

### ('ತೋಬಾಃ'ದಿಂದ ಪಾಪ–ಕ್ಷಮೆಯಾದರೆ, ಪಾಪ ಹೆಚ್ಚುತ್ತದೆ)

**ಸಮೀಕ್ಷಕ:—'ತೋಬಾಃ',*** ಎಂದರೆ 'ಪಶ್ಚಾತ್ತಾಪ ಪಡುವುದರಿಂದ ಪಾಪವನ್ನು ಕ್ಷಮಿಸುವನು', ಎಂಬ ಕುರಾನಿನಲ್ಲಿರುವ ಮಾತು ಎಲ್ಲರನ್ನೂ ಪಾಪಿಗಳನ್ನಾಗಿ ಮಾಡುವಂತಹುದಾಗಿದೆ ! ಏಕೆಂದರೆ, **ಪಾಪಿಗಳಿಗೆ ಇದರಿಂದ ಪಾಪವನ್ನು ಮಾಡುವ ಸಾಹಸ ಬಹಳವಾಗಿ ಹೆಚ್ಚಿಹೋಗುತ್ತದೆ** ! ಆದುದರಿಂದ, ಈ ಪುಸ್ತಕವು, ಮತ್ತು ಇದನ್ನು ರಚಿಸಿದವನು, ಪಾಪಿಗಳಿಗೆ **ಪಾಪ ಮಾಡುವುದರಲ್ಲಿ ಸಾಹಸವನ್ನು ಹೆಚ್ಚಿಸುವವರಾಗಿದ್ದಾರೆ.** ಆದುದರಿಂದ, ಈ ಪುಸ್ತಕವು ಪರಮೇಶ್ವರಕೃತವೂ ಆಗಲಾರದು; ಮತ್ತು ಇದರಲ್ಲಿ ಹೇಳಲ್ಪಟ್ಟಿರುವವನು ಪರಮೇಶ್ವರನೂ ಆಗಿರಲಾರನು! [111]

### (ಪೃಥಿವಿಯನ್ನು ಹಿಡಿದಿಡಲು ಪರ್ವತ)

**[112] ಮತ್ತು ಅಲ್ಲಾಡಿ ಹೋಗದಿರಲಿ, ಎಂದು ನಾವು ಪೃಥಿವಿಯ ನಡುವೆ ಪರ್ವತಗಳನ್ನು ನಿರ್ಮಿಸಿದೆವು.** **[ಕುರಾನ್:–ಮಂ. 4; ಸಿ. 17; ಸೂ. 21; ಆ. 31]**

### (ಹಾಗಾದರೆ, ಭೂಕಂಪವಾದಾಗ ಪೃಥಿವಿ ಏಕೆ ಅಲುಗುತ್ತದೆ ?)

**ಸಮೀಕ್ಷಕ:**—ಕುರಾನನ್ನು ರಚಿಸುವವನು ಪೃಥಿವಿಯ ತಿರುಗುವಿಕೆ ಮೊದಲಾದುವನ್ನು ತಿಳಿದಿದ್ದರೆ, 'ಪರ್ವತಗಳನ್ನು ಇಡುವುದರಿಂದ ಪೃಥಿವೀ ಅಲ್ಲಾಡುವುದಿಲ್ಲ', ಎಂಬ ಈ ಮಾತನ್ನು ಎಂದಿಗೂ ಹೇಳುತ್ತಿರಲಿಲ್ಲ!

---

***ಪಶ್ಚಾತ್ತಾಪ.—ಸಂ.**

ಪರ್ವತವನ್ನು ಇಡದಿದ್ದರೆ, ಪೃಥಿವೀ ಅಲ್ಲಾಡಿ ಹೋದೀತು, ಎಂಬ ಸಂದೇಹ ಆಗಿರಬಹುದು! ಇಷ್ಟು ಹೇಳಿದ ಮೇಲೆಯೂ ಕೂಡ, ಭೂಕಂಪದಲ್ಲಿ ಏತಕ್ಕೆ ಅದುರಿ ಹೋಗುತ್ತದೆ ? [112]

## (ಸ್ತ್ರೀಯಲ್ಲಿ ಆತ್ಮನನ್ನು ಊದುವುದು)

**[113]** ಮತ್ತು ನಾವು ಶಿಕ್ಷಣವನ್ನಿತ್ತೆವು ಆ ನಾರಿಗೆ. ಮತ್ತು ಅವಳು ತನ್ನ ಗುಹ್ಯಾಂಗಗಳನ್ನು ರಕ್ಷಿಸಿಕೊಂಡಳು. ಸರಿ! ಊದಿಬಿಟ್ಟೆವು ಅದರೊಳಕ್ಕೆ ನಮ್ಮ ಆತ್ಮನನ್ನು !

[ಕುರಾನ್:-ಮಂ. 4; ಸಿ. 17; ಸೂ. 21; ಆ. 91]

## (ಕುರಾನಿನಲ್ಲಿ ಅಶ್ಲೀಲ ಮಾತುಗಳು)

ಸಮೀಕ್ಷಕ:—ಇಂತಹ ಅಶ್ಲೀಲವಾದ ಮಾತುಗಳು ಖುದಾನ ಪುಸ್ತಕದಲ್ಲಿ! ಖುದಾನದೇ ಏನು, ಒಬ್ಬ ಸಭ್ಯ ಮನುಷ್ಯನದೂ ಕೂಡ, ಆಗಿರಲಾರವು ! ಮಾನವರ ನಡುವೆಯೇ ಇಂತಹ ಮಾತುಗಳನ್ನು ಬರೆಯುವುದು ಉಚಿತವಲ್ಲವೆಂದಮೇಲೆ, ಪರಮೇಶ್ವರನ ಕಡೆಯಿಂದ ಹೇಗೆ ತಾನೇ ಉಚಿತವೆನಿಸಲು ಶಕ್ಯ ?

ಇಂತಿಂತಹ ಮಾತುಗಳಿಂದ ಕುರಾನ್ ದೂಷಿತವಾಗುತ್ತದೆ! ಒಳ್ಳೆಯ ವಚನ ವಿದ್ದಿದ್ದರೆ, ವೇದಗಳ [ಪ್ರಶಂಸೆಯಾಗು]ವಂತೆ, ಪ್ರಶಂಸೆಯೂ ಬಹುವಾಗಿ ಆಗುತ್ತಿದ್ದಿತು ! [113]

## (ಸೂರ್ಯಾದಿಗಳಿಂದ ಖುದಾಗೆ ಪ್ರಣಾಮ; ಅವನ ಮನೆಯ ಪ್ರದಕ್ಷಿಣೆ)

**[114]** ಆಕಾಶಗಳ ಮತ್ತು ಪೃಥಿವಿಯ ಮಧ್ಯೆ ಇರುವ ಸೂರ್ಯ ಮತ್ತು ಚಂದ್ರ-ನಕ್ಷತ್ರಗಳು ಮತ್ತು ಪರ್ವತಗಳು, ವೃಕ್ಷಗಳು ಮತ್ತು ಪ್ರಾಣಿಗಳು-ಎಲ್ಲವೂ ಅಲ್ಲಾಹನಿಗೆ ಪ್ರಣಾಮ ಮಾಡುತ್ತವೆ, ಎಂಬುದನ್ನು ನೀನು ನೋಡಲಿಲ್ಲವೇನು ?

ಅದರ ಮಧ್ಯೆ ಚಿನ್ನದ ಬಳೆಗಳು ತೊಡಿಸಲ್ಪಡುವುವು. ಮತ್ತು ಮುತ್ತು, ಹಾಗೂ ಅದರ ನಡುವೆ ರೇಷ್ಮೆಯ ಉಡುಪಿದೆ.

ಮತ್ತು ಸುತ್ತಲೂ ತಿರುಗಾಡುವವರ ಮತ್ತು ನಿಂತುಕೊಳ್ಳುವವರ ಸಲುವಾಗಿ ನನ್ನ ಮನೆಯನ್ನು ಪವಿತ್ರವಾಗಿಡು.

ಪುನಃ ತಮ್ಮ ಕಲ್ಮಷಗಳನ್ನು ದೂರಮಾಡಬೇಕು ಮತ್ತು ತಮ್ಮ ಕಾಣಿಕೆಗಳನ್ನು ಒಪ್ಪಿಸಬೇಕು. ಮತ್ತು ನಾಲ್ಕು ಕಡೆಯಿಂದ ಪ್ರಾಚೀನ ಗೃಹದ ಪ್ರದಕ್ಷಿಣೆಯನ್ನು ಮಾಡಬೇಕು.

ಏಕೆಂದರೆ, ಅಲ್ಲಾಹನ ಹೆಸರನ್ನು ಸ್ಮರಿಸಬೇಕು.

[ಕುರಾನ್:-ಮಂ. 4; ಸಿ. 17; ಸೂ. 22; ಆ. 18,23,26,29,34]

### (ಜಡ ಪದಾರ್ಥಗಳು ಯಾರಿಗೂ ಪ್ರಣಾಮ ಮಾಡುವುದಿಲ್ಲ)

**ಸಮೀಕ್ಷಕ:**—ಅಲ್ಲಾ! ಯಾವುವು ಜಡವಾದ ವಸ್ತುಗಳೋ, ಅವು ಪರಮೇಶ್ವರನನ್ನು ಎಂದಿಗೂ ತಿಳಿದುಕೊಳ್ಳಲಾರವು. ಮತ್ತೆ ಅವು ಅವನಲ್ಲಿ ಭಕ್ತಿಯನ್ನಿಡಬಲ್ಲವಾದರೂ ಎಂತು ? ಆದುದರಿಂದ, ಈ ಪುಸ್ತಕ ಈಶ್ವರಕೃತವಂತೂ ಎಂದಿಗೂ ಆಗಲಾರದು. ಆದರೆ, ಯಾವನೋ ಭ್ರಾಂತನಾದವನು ನಿರ್ಮಿಸಿದ್ದಂತೆ ಕಾಣುತ್ತದೆ!

### (ಈ ಸ್ವರ್ಗ ಇಲ್ಲಿನ ರಾಜರ ಮನೆಗಳಿಗಿಂತ ಹೆಚ್ಚೇನಲ್ಲ)

ಭೇಷ್! ಎಲ್ಲಿ ಚಿನ್ನ, ಮುತ್ತುಗಳ ಒಡವೆಗಳೂ, ರೇಷ್ಮೆಯ ವಸ್ತ್ರಗಳೂ ತೊಡಲು ಸಿಕ್ಕುತ್ತವೋ, ಆ ಸ್ವರ್ಗ ತುಂಬಾ ಚೆನ್ನಾಗಿದೆ! **ಈ ಸ್ವರ್ಗ ಇಲ್ಲಿನ ರಾಜರುಗಳ ಮನೆಗಿಂತ ಹೆಚ್ಚಾಗಿ ಏನೂ ತೋರುವುದಿಲ್ಲ!**

### (ಮುಸಲ್ಮಾನರು ದೊಡ್ಡ ಮೂರ್ತಿಪೂಜಕರು; ಪೌರಾಣಿಕರು, ಜೈನರು ಚಿಕ್ಕ ಮೂರ್ತಿಪೂಜಕರು)

ಮತ್ತು ಪರಮೇಶ್ವರನ ಮನೆಯಾಗಿರುವಾಗ, ಅವನು ಅದೇ ಮನೆಯಲ್ಲಿ ಇರುತ್ತಲೂ ಇರಬಹುದು! ಮತ್ತೆ, **'ಮೂರ್ತಿಪೂಜೆ'** ಏಕಾಗಲಿಲ್ಲ? **ಮತ್ತು ಬೇರೆಯ ಮೂರ್ತಿಪೂಜಕರ ಖಂಡನವನ್ನೇಕೆ ಮಾಡುತ್ತಾರೆ?**

**ಖುದಾ ಯಾವಾಗ ಕಾಣಿಕೆಯನ್ನು ತೆಗೆದುಕೊಳ್ಳುತ್ತಾನೋ, ತನ್ನ ಮನೆಯ ಪ್ರದಕ್ಷಿಣೆಯನ್ನು ಮಾಡುವ ಅಪ್ಪಣೆಯನ್ನು ಕೊಡುತ್ತಾನೋ, ಮತ್ತು ಪಶುಗಳನ್ನು ಕೊಲ್ಲಿಸಿ, ತಿನ್ನಿಸುತ್ತಾನೋ, ಆಗ, ಈ ಖುದಾ ದೇವಾಲಯುಗಳವರಂತೆ, ಮತ್ತು ಭೈರವ, ಹಾಗೂ ದುರ್ಗೆಯುರ ಹಾಗೆಯೇ ಆದನು! ಮತ್ತು 'ಮಹಾಮೂರ್ತಿ ಪೂಜೆ'ಯ ಪ್ರವರ್ತಕನಾದನು! ಏಕೆಂದರೆ, ಮೂರ್ತಿಗಳಿಗಿಂತ ಮಸೀದಿ ದೊಡ್ಡ ಮೂರ್ತಿಯಾಗಿದೆ! ಆದುದರಿಂದ, ಖುದಾ ಮತ್ತು ಮುಸಲ್ಮಾನರು ದೊಡ್ಡ ಮೂರ್ತಿಪೂಜಕರೂ, ಮತ್ತು ಪೌರಾಣಿಕರು, ಹಾಗೂ ಜೈನರು ಚಿಕ್ಕ ಮೂರ್ತಿ ಪೂಜಕರೂ ಆಗಿದ್ದಾರೆ!** [114]

### (ಕಯಾಮತ್ತಿನ ದಿನ ಹೆಣಗಳನ್ನು ಎಬ್ಬಿಸುವುದು)

[115] ಮತ್ತೆ, ನಿಶ್ಚಯವಾಗಿ ನೀವು ಕಯಾಮತ್ತಿನ ದಿನ ಎಬ್ಬಿಸಲ್ಪಡುವಿರಿ.

[ಕುರಾನ್:–ಮಂ. 4; ಸಿ. 18; ಸೂ. 23; ಆ. 16]

### (ಕಯಾಮತ್ತಿನ ತನಕ ಗೋರಿಗಳಲ್ಲಿ ಕೊಳೆಹಾಕುವುದು ಅನ್ಯಾಯ)

**ಸಮೀಕ್ಷಕ:**—ಕಯಾಮತ್ತಿನ ವರೆಗೆ ಶವಗಳು ಗೋರಿಯಲ್ಲಿಯೇ ಇರುತ್ತವೋ, ಅಥವಾ ಬೇರೆ ಯಾವುದಾದರೂ ಜಾಗದಲ್ಲಿಯೋ? ಅವುಗಳಲ್ಲಿಯೇ ಇರುವುವಾದರೆ,

ಕೊಳೆತಿರುವ ದುರ್ಗಂಧಮಯ ಶರೀರದಲ್ಲಿದ್ದು, ಪುಣ್ಯಾತ್ಮರುಗಳೂ ಕೂಡ, ದುಃಖವನ್ನು ಅನುಭವಿಸುವರಲ್ಲ! ಇದು ಅನ್ಯಾಯವಾಗಿದೆ! ಮತ್ತು ದುರ್ಗಂಧ ಅಧಿಕವಾಗಿ, ರೋಗ ಉತ್ಪತ್ತಿಮಾಡುವುದರಿಂದ. ಖುದಾ ಮತ್ತು ಮುಸಲ್ಮಾನರು ಪಾಪಭಾಗಿಗಳಾಗುವರು! [115]

## (ಕೈ-ಕಾಲುಗಳ ಸಾಕ್ಷ್ಯ; ಅಲ್ಲಾಹನ ತೇಜಸ್ಸು)

**[116] ಆ ದಿವಸಕ್ಕೆ, ಅವರ ನಾಲಿಗೆಗಳು, ಮತ್ತು ಅವರ ಕೈಗಳು ಮತ್ತು ಅವರ ಕಾಲುಗಳು, ತಾವು ಏನನ್ನು ಮಾಡುತ್ತಿದ್ದವೋ, ಆ ವಸ್ತುವಿನೊಂದಿಗೆ, ಅವರ ಮೇಲೆ ಸಾಕ್ಷ್ಯವನ್ನು ಕೊಡುವುವು.**

**ಅಲ್ಲಾಹನು ಆಕಾಶಗಳ ಮತ್ತು ಪೃಥಿವಿಯ ಪ್ರಕಾಶವಾಗಿದ್ದಾನೆ. ಅವನ ಜ್ಯೋತಿ [ಗೋಡೆಯಲ್ಲಿನ] ಗೂಡಿನಂತಿದೆ. ಅದರ ನಡುವೆ ದೀಪವಿದೆ. ಮತ್ತು ಆ ದೀಪದ ಮಧ್ಯೆ ಕಂದೀಲುಗಳು ಗಾಜಿನದಾಗಿವೆ. ಆ ಕಂದೀಲು ನಕ್ಷತ್ರವೋ, ಎಂಬಂತೆ ಥಳಥಳಿಸುತ್ತಿದೆ. ದೀಪವು ಆಶೀರ್ವದಿಸಲ್ಪಟ್ಟ 'ಆಲಿವ್' ವೃಕ್ಷದ [ತೈಲ]ದಿಂದ ಉರಿಯುವಂತಹುದಾಗಿದೆ. ಅದು ಪೂರ್ವದ ಕಡೆಯಿಂದಲೂ ಸಿಕ್ಕದು; ಪಶ್ಚಿಮದ ಹತ್ತಿರವೂ ಸಿಕ್ಕದು. ಮತ್ತೆ ಆ ತೈಲಕ್ಕೆ ಯಾವ ಅಗ್ನಿಯನ್ನೂ ಸ್ಪರ್ಶಮಾಡಿಸಬೇಕಾಗಿಲ್ಲ. [ಆದರೂ ಕೂಡ], ಅದು ಹೊತ್ತಿಕೊಂಡು ಪ್ರಕಾಶವನ್ನು ಮೇಲೆರಚುತ್ತದೆ. ಅಲ್ಲಾಹನು ಯಾವನನ್ನು ಬಯಸುತ್ತಾನೋ, ಅವನಿಗೆ ತನ್ನ ಜ್ಯೋತಿಯ ಮಾರ್ಗವನ್ನು ತೋರಿಸುತ್ತಾನೆ.**

**[ಕುರಾನ್:-ಮಂ. 4; ಸಿ. 18; ಸೂ. 24; ಆ. 24,35]**

## (ಜಡ ಕೈ-ಕಾಲುಗಳು ಹೇಗೆ ಸಾಕ್ಷ್ಯ ಕೊಡುತ್ತವೆ?)

**ಸಮೀಕ್ಷಕ:**—ಕೈ-ಕಾಲು ಮೊದಲಾದುವು ಜಡವಾಗಿರುವುದರಿಂದ, ಸಾಕ್ಷ್ಯವನ್ನೆಂದಿಗೂ ಕೊಡಲಾರವು. **ಈ ಮಾತು ಸೃಷ್ಟಿಕ್ರಮಕ್ಕೆ ವಿರುದ್ಧವಾಗಿರುವುದರಿಂದ, ಸುಳ್ಳಾಗಿದೆ!**

ಖುದಾ ಬೆಂಕಿ ಏನು? ವಿದ್ಯುತ್ತೇನು? ಎಂತಹ ದೃಷ್ಟಾಂತವನ್ನು ಕೊಡುತ್ತಾರೋ, ಅಂತಹ ದೃಷ್ಟಾಂತ ಈಶ್ವರನಿಗೆ ಅನ್ವಯಿಸಲಾರದು. ಅಹುದು! ಯಾವುದಾದರೂ ಸಾಕಾರವಸ್ತುವಿಗೆ ಅನ್ವಯಿಸಬಲ್ಲದು. [116]

## (ನೀರಿನಿಂದ ಪ್ರಾಣಿಗಳ ಉತ್ಪತ್ತಿ)

[117] ಮತ್ತು ಅಲ್ಲಾಹನು ಪ್ರತಿಯೊಂದು ಪ್ರಾಣಿಯನ್ನೂ ನೀರಿನಿಂದ ಉತ್ಪನ್ನ ಮಾಡಿದನು. ಆಯಿತು! ಅವುಗಳಲ್ಲಿ ಕೆಲವು ತಮ್ಮ ಹೊಟ್ಟೆಯ ಮೇಲೆ ತೆವಳಿಕೊಂಡು ಹೋಗುವಂತಹವಿವೆ.

ಮತ್ತು ಯಾವನೇ ಆಗಲೀ, ಅಲ್ಲಾಹನ ಮತ್ತು ಅವನ ರಸೂಲನ ಆಜ್ಞೆಯನ್ನು ಪಾಲಿಸುತ್ತಾನೋ!

ಖುದಾನ, ಮತ್ತು ಅವನ ರಸೂಲನ ಆಜ್ಞೆಯನ್ನು ಪಾಲಿಸಬೇಕು, ಎಂದು, ಹೇಳು.

ಮತ್ತು ನಿಮಗೆ ದಯೆ ತೋರಿಸಲ್ಪಡುವಂತೆ, ರಸೂಲನ ಆಜ್ಞೆಯನ್ನು ಪಾಲಿಸಿರಿ.

[ಕುರಾನ್:–ಮಂ. 4; ಸಿ. 18; ಸೂ. 24; ಆ.45,52,54,56]

## (ನೀರಿನಿಂದ ಎಲ್ಲ ಪ್ರಾಣಿಗಳ ಉತ್ಪತ್ತಿ, ಎಂದು ಹೇಳುವುದು ಅಜ್ಞಾನತೆ)

**ಸಮೀಕ್ಷಕ:**—ಯಾವ ಪ್ರಾಣಿಗಳ ಶರೀರದಲ್ಲಿ ಎಲ್ಲ ತತ್ತ್ವಗಳೂ* ಕಂಡು ಬರುತ್ತವೋ, [ಅವುಗಳ ವಿಷಯದಲ್ಲಿ] ಕೇವಲ ಜಲದಿಂದ ಉತ್ಪನ್ನಮಾಡಿದನು, ಎನ್ನುವುದು ಯಾವ 'ಫಿಲಾಸಫಿ'ಯಾಗಿದೆ! ಇದು ಕೇವಲ ಅವಿದ್ಯೆಯ ಮಾತು.

## (ಖುದಾ ಮತ್ತು ಪೈಗಂಬರರು ಜೊತೆ-ಜೊತೆ)

ಅಲ್ಲಾಹನೊಂದಿಗೆ ಪೈಗಂಬರನ ಆಜ್ಞೆಯನ್ನೂ ಪಾಲಿಸಬೇಕಾಗಿರುವುದಾದರೆ, [ರಸೂಲನು] ಖುದಾನ ಭಾಗೀದಾರನಾಗಿ ಹೋದನೋ, ಅಥವಾ ಇಲ್ಲವೋ? ಹೀಗೆ ಇರುವುದಾದರೆ, ಕುರಾನಿನಲ್ಲಿ ಖುದಾನನ್ನು ಭಾಗೀದಾರರಹಿತನೆಂದು ಏಕೆ ಬರೆದಿದ್ದಾರೆ? ಮತ್ತು ಏಕೆ ಹೇಳುತ್ತೀರಿ? [117]

## (ಕುರಾನ್ ಶಾಂತಿಭಂಗ ಮಾಡಿ, ದಂಗೆ ಮಾಡಿಸುತ್ತದೆ)

**[118]** ಮತ್ತು ಯಾವ ದಿನ ಆಕಾಶವು ಮೋಡದೊಂದಿಗೆ ಹರಿದು ಹೋಗುವುದೋ, ಮತ್ತು ದೇವದೂತರು ಇಳಿಸಲ್ಪಡುವರೋ!

ಆಯಿತು! ಕಾಫಿರರು ಹೇಳಿದುದನ್ನು ಒಪ್ಪಿಕೊಳ್ಳಬೇಡ. ಮತ್ತು ಜಗಳ ವಾಡು ಅವರೊಂದಿಗೆ! ದೊಡ್ಡ ಜಗಳವನ್ನು!

ಮತ್ತು ಅಲ್ಲಾಹನು ಅವರುಗಳ ಕೆಡಕುಗಳನ್ನು ಒಳಿತುಗಳಾಗುವಂತೆ ಪರಿವರ್ತಿಸಿಬಿಡುತ್ತಾನೆ.

ಮತ್ತು ಯಾವನು 'ಪಶ್ಚಾತ್ತಾಪ' ಪಡುವನೋ, ಮತ್ತು ಸತ್ಕರ್ಮಗಳನ್ನು ಮಾಡುವನೋ, ಅವನು ನಿಶ್ಚಯವಾಗಿಯೂ ಅಲ್ಲಾಹನ ಕಡೆಗೆ ಬರುತ್ತಾನೆ.

[ಕುರಾನ್:–ಮಂ. 4; ಸಿ. 19; ಸೂ. 25; ಆ. 25,52,70,71]

---

*ಎಂದರೆ, ಪೃಥಿವೀ, ಆಪಃ, ತೇಜಃ, ವಾಯು, ಮತ್ತು ಆಕಾಶ.—ಸಂ.

## (ಆಕಾಶ ಹೇಗೆ ಹರಿಯಬಲ್ಲದು?)

**ಸಮೀಕ್ಷಕ:**—ಆಕಾಶವು ಮೋಡಗಳೊಂದಿಗೆ ಹರಿದುಹೋಗುವುದು, ಎಂಬ ಈ ಮಾತು ಎಂದಿಗೂ ಸತ್ಯವಾಗಲಾರದು. ಆಕಾಶವು ಯಾವುದಾದರೂ ಮೂರ್ತಿಮಂತವಾದ ಪದಾರ್ಥವಾಗಿದ್ದರೆ, ಹರಿಯಬಲ್ಲದು!

## (ಕಾಫಿರರೊಂದಿಗೆ ಕಾದಾಡಿ; 'ತೋಬಾ' ಮಾಡಿದರೆ, ಪಾಪ–ಕ್ಷಮೆ)

ಮುಸಲ್ಮಾನರ ಈ ಕುರಾನ್ ಶಾಂತಿ-ಭಂಗವನ್ನು ಮಾಡಿ, ದಂಗೆ-ಕಲಹಗಳನ್ನು ಉಂಟುಮಾಡುವಂತಹುದಾಗಿದೆ! ಇದೇ ಕಾರಣದಿಂದ, ಧಾರ್ಮಿಕರಾದ ವಿದ್ವಾಂಸರುಗಳು ಇದನ್ನು ಅಂಗೀಕರಿಸುವುದಿಲ್ಲ!

ಪಾಪ ಮತ್ತು ಪುಣ್ಯಗಳನ್ನು ಅದಲು-ಬದಲು ಮಾಡುವಂತಹ ಇದೊಳ್ಳೆಯ ನ್ಯಾಯವಾಗಿದೆ! ಅದಲು-ಬದಲಾಗಿ ಹೋಗಲು ಇದು ಎಳ್ಳು-ಉದ್ದಿನಂತಹ ಮಾತೇನು?*

ಪಶ್ಚಾತ್ತಾಪ ಪಡುವುದರಿಂದ [ಪಾಪವು] ಬಿಟ್ಟು ಹೋಗುವುದಾದರೆ, ಮತ್ತು ಈಶ್ವರನು ಸಿಕ್ಕುವನಾದರೆ, ಯಾವನೂ ಪಾಪ ಮಾಡಲು ಹೆದರುವುದಿಲ್ಲ! ಆದುದರಿಂದ, ಈ ಮಾತುಗಳೆಲ್ಲವೂ ವಿದ್ಯೆಗೆ ವಿರುದ್ಧವಾಗಿವೆ. [118]

## (ಮೂಸಾಗೆ ಪುಸ್ತಕ ಕೊಡುವುದು)

**[119] ನನ್ನ ಸೇವಕರನ್ನು ರಾತ್ರಿಗೆ ಕರೆದುಕೊಂಡು ಹೋಗು; ನಿಶ್ಚಯವಾಗಿಯೂ ನೀನು ಹಿಂಬಾಲಿಸಲ್ಪಡುವೆ, ಎಂದು ಹೇಳಿ, ನಾವು ಪುಸ್ತಕವನ್ನು ಮೂಸಾಗೆ ಕಳುಹಿಸಿದೆವು.**

**ಸರಿ! ಫಿರೋನನು ನಗರಗಳ ಮಧ್ಯಕ್ಕೆ ಒಂದುಗೂಡಿಸುವ ಜನರನ್ನು ಕಳುಹಿಸಿದನು.**

**ಮತ್ತು ಯಾವ ಪುರುಷನು ನನ್ನನ್ನು ಉತ್ಪನ್ನಮಾಡಿದನೋ, ಅವನೇ ಮಾರ್ಗವನ್ನು ತೋರಿಸುತ್ತಾನೆ.**

**ಮತ್ತು ಯಾವನು ನನಗೆ ತಿನ್ನಿಸುತ್ತಾನೋ, [ಅವನು] ನನಗೆ ಕುಡಿಸುತ್ತಾನೆ.**

**ಮತ್ತು ಆ ಪುರುಷನು ನನ್ನ ಅಪರಾಧವನ್ನು ಕಯಾಮತ್ತಿನ ದಿನ ಕ್ಷಮಿಸುವನೆಂದು ನಾನು ಆಸೆಯಿಟ್ಟುಕೊಂಡಿದ್ದೇನೆ.**

[ಕುರಾನ್:-ಮಂ. 5; ಸಿ. 19; ಸೂ. 26; ಆ. 52, 53, 78, 79, 82]

---

*'ಮಾಷಾನಸ್ಮೈ ತಿಲೇಭ್ಯಃ ಪ್ರತಿಯಚ್ಛತಿ'—ಅಷ್ಟಾಧ್ಯಾಯೀ (1 4.92) ಮತ್ತು (2.3.11) ಸೂತ್ರಗಳಿಗೆ ಉದಾಹರಣೆ! ಪ್ರಾಚೀನಕಾಲದಲ್ಲಿ, (ಮತ್ತು ಹಲವು ವರ್ಷಗಳ ಮೊದಲಿನ ತನಕ ಗ್ರಾಮಗಳಲ್ಲಿಯೂ) ವಸ್ತುಗಳ ವಿನಿಮಯ ಆಗುತ್ತಿದ್ದಿತು.—ಯು.ಮೀ.

## (ಮೂಸಾಗೆ ಪುಸ್ತಕ ಕೊಟ್ಟ ಮೇಲೆ, ಇತರರಿಗೆ ಏಕೆ ಕೊಟ್ಟ?)

**ಸಮೀಕ್ಷಕ:**—ಖುದಾ ಮೂಸಾನ ಕಡೆಗೆ ಪುಸ್ತಕವನ್ನು ಕಳುಹಿಸಿದ ಮೇಲೆ, ಮತ್ತೆ, ದಾವೂದ್, ಏಸು ಮತ್ತು ಮುಹಮ್ಮದ್ ಸಾಹೇಬರ ಕಡೆಗೆ ಪುಸ್ತಕವನ್ನೇಕೆ ಕಳುಹಿಸಿದನು? **ಏಕೆಂದರೆ, ಪರಮೇಶ್ವರನ ಮಾತು ಸದಾ ಒಂದೇ ಬಗೆಯುದೂ, ದೋಷರಹಿತವೂ ಆಗಿರುತ್ತದೆ!**

ಮತ್ತು ಅದರ ನಂತರ, ಕುರಾನಿನ ವರೆಗೆ ಪುಸ್ತಕಗಳನ್ನು ಕಳುಹಿಸಿದುದರಿಂದ, ಮೊದಲನೆಯ ಪುಸ್ತಕವು ಅಪೂರ್ಣವೂ, ದೋಷಯುಕ್ತವೂ, ಆಗಿದ್ದಿತೆಂದು ಗ್ರಹಿಸಲ್ಪಡುವುದು. ಒಂದುವೇಳೆ, **ಈ ಮೂರು ಪುಸ್ತಕಗಳು* ಸತ್ಯವಾಗಿದ್ದರೆ, ಈ ಕುರಾನ್ ಸುಳ್ಳಾಗುವುದು!** ಪರಸ್ಪರ ಪ್ರಾಯಶಃ ವಿರೋಧವನ್ನು ಹೊಂದಿರುವುದರಿಂದ, **ಆ ನಾಲ್ಕು ಪುಸ್ತಕಗಳೂ ಸರ್ವಥಾ ಸತ್ಯವಾಗಿರುವುದು ಶಕ್ಯವೇ ಅಲ್ಲ!**

ಖುದಾ **'ರೂಹ್'**, ಎಂದರೆ ಜೀವರನ್ನು ಉತ್ಪನ್ನಮಾಡಿದ್ದಾನಾದರೆ, ಅವರು ಮೃತರೂ ಆಗುವರು. ಎಂದರೆ, ಎಂದಾದರೂ ಅವರುಗಳ ನಾಶವೂ, [ಅಥವಾ] ಯಾವಾಗಲಾದರೂ ಅಭಾವವೂ ಕೂಡ, ಆಗುವುದು!

ಪರಮೇಶ್ವರನೇ ಮಾನವರು ಮೊದಲಾದ ಪ್ರಾಣಿಗಳಿಗೆ ತಿನ್ನಿಸುತ್ತಾನೆ-ಕುಡಿಸುತ್ತಾನೆಯಾದರೆ, ಯಾವನಿಗೂ ರೋಗವು ಬರಬಾರದು! ಮತ್ತು ಎಲ್ಲರಿಗೂ ಸಮಾನವಾದ ಭೋಜನವನ್ನು ಕೊಡಬೇಕು. ಪಕ್ಷಪಾತದಿಂದ, ಹೇಗೆ ರಾಜನಿಗೆ ಮತ್ತು ದರಿದ್ರನಿಗೆ, ಶ್ರೇಷ್ಠವಾದ-ನಿಕೃಷ್ಟವಾದ ಭೋಜನ ಸಿಕ್ಕುವುದೋ, ಹಾಗೆ ಒಬ್ಬನಿಗೆ ಉತ್ತಮವೂ ಮತ್ತು ಇನ್ನೊಬ್ಬನಿಗೆ ನಿಕೃಷ್ಟವೂ ಆದುದು ಸಿಕ್ಕಬಾರದು ! ಪರಮೇಶ್ವರನೇ ತಿನ್ನಿಸುವವನೂ-ಕುಡಿಸುವವನೂ, ಮತ್ತು ಪಥ್ಯವನ್ನು ಇಡಿಸುವವನೂ ಆಗಿರುವನಾದರೆ, ರೋಗವೇ ಉಂಟಾಗಬಾರದು!

ಆದರೆ, **ಮುಸಲ್ಮಾನರು ಮೊದಲಾದವರಿಗೂ ರೋಗಗಳು ಉಂಟಾಗುತ್ತವೆ!** ಸ್ವತಃ ಖುದಾನೇ ರೋಗಗಳನ್ನು ನಿವಾರಿಸಿ, ಆರಾಮವನ್ನುಂಟುಮಾಡುವವನಾಗಿದ್ದರೆ, ಮುಸಲ್ಮಾನರ ಶರೀರಗಳಲ್ಲಿ ರೋಗವಿರಬಾರದು! ಇರುವುದಾದರೆ, **ಖುದಾ ಪೂರ್ಣ ವೈದ್ಯನಲ್ಲ! ಒಂದುವೇಳೆ, ಪೂರ್ಣವೈದ್ಯನಾಗಿರುವುದಾದರೆ, ಮುಸಲ್ಮಾನರ ಶರೀರದಲ್ಲಿ ರೋಗಗಳು ಏತಕ್ಕಿರುತ್ತವೆ?**

ಅವನೇ ಸಾಯಿಸುತ್ತಾನೆ, ಮತ್ತು ಬದುಕಿಸುತ್ತಾನೆಯಾದರೆ, ಅದೇ ಖುದಾಗೆ ಪಾಪ-ಪುಣ್ಯಗಳು ತಗಲುತ್ತಿರಬಹುದು! ಒಂದುವೇಳೆ, ಜನ್ಮ-ಜನ್ಮಾಂತರದ ಕರ್ಮಾನುಸಾರ ವ್ಯವಸ್ಥೆಯನ್ನು ಮಾಡುತ್ತಾನೆಯಾದರೆ, ಅವನದೇನೂ ಅಪರಾಧವಿಲ್ಲ.

---

*ಎಂದರೆ, **ಮೂಸಾ, ದಾವೂದ್ ಮತ್ತು ಏಸುವಿನ ಕಡೆಗೆ ಕಳುಹಿಸಿದ ಮೂರು ಪುಸ್ತಕಗಳು. ಅಂದರೆ, ಬೈಬಲ್.—ಸಂ.**

### (ಕಯಾಮತ್ತಿನ ರಾತ್ರಿಯಲ್ಲೇ ನ್ಯಾಯ ಮಾಡುವುದರಿಂದ ಖುದಾ ಪಾಪಿಯಾಗುತ್ತಾನೆ)

ಒಂದುವೇಳೆ, ಅವನು ಪಾಪಗಳನ್ನು ಕ್ಷಮಿಸುತ್ತಾನೆ; ಮತ್ತು ಕಯಾಮತ್ತಿನ ರಾತ್ರಿಗೆ ನ್ಯಾಯವನ್ನು ಮಾಡುತ್ತಾನೆಯಾದರೆ, ಖುದಾ ಪಾಪಗಳನ್ನು ಹೆಚ್ಚಿಸುವವನಾಗಿ ಪಾಪಯುಕ್ತನಾಗುವನು! ಕ್ಷಮಿಸುವುದಿಲ್ಲವಾದರೆ, ಕುರಾನಿನ ಈ ಮಾತು ಸುಳ್ಳಾಗದೇ ಉಳಿಯಲು ಶಕ್ಯವಲ್ಲ. [119]

### (ಹೆಣ್ಣು ಒಂಟೆಯ ಚಿಹ್ನೆ)

[120] ಆದರೆ, ನೀನು ಮಾನವನಲ್ಲ ನಮ್ಮ ಹಾಗೆ! ಸರಿ! ನೀನು ಸತ್ಯವಂತರ ನಡುವೆ ಒಬ್ಬನಾದರೆ, ಏನಾದರೂ ಸ್ಮೃತಿ-ಚಿಹ್ನೆಯನ್ನು ತೆಗೆದುಕೊಂಡು ಬಾ!

"ಈ ಹೆಣ್ಣು ಒಂಟೆಯಿದೆ. ಅದಕ್ಕೆ ಒಂದು ಸಾರಿ ನೀರನ್ನು ಕುಡಿಯಬೇಕಾಗಿದೆ.", ಎಂದು ಹೇಳಿದನು. [ಕುರಾನ್:-ಮಂ. 5; ಸಿ. 19; ಸೂ. 26; ಆ. 154, 155]

### (ಒಂಟೆಯ ಚಿಹ್ನೆ ಕೊಡುವುದು ಕಾಡುಜನರ ವ್ಯವಹಾರ)

ಸಮೀಕ್ಷಕ:—ಅಲ್ಲಾ! ಯಾವನಾದರೂ ಕಲ್ಲಿನಿಂದ ಒಂಟೆ ಹೊರಬರುತ್ತದೆ, ಎಂಬ ಮಾತನ್ನು ಒಪ್ಪಿಕೊಳ್ಳಬಲ್ಲನೇ? ಯಾರು ಈ ಮಾತನ್ನು ಒಪ್ಪಿಕೊಂಡುಬಿಟ್ಟರೋ, ಅವರು ಕಾಡುಮನುಷ್ಯರಾಗಿದ್ದರು! ಮತ್ತು ಹೆಣ್ಣು ಒಂಟೆಯ ಸ್ಮೃತಿ-ಚಿಹ್ನೆಯನ್ನು ಕೊಡುವುದು ಕೇವಲ ಕಾಡುಜನರ ವ್ಯವಹಾರವಾಗಿದೆ; ಈಶ್ವರನ ಕೆಲಸವಲ್ಲ!

**ಈ ಪುಸ್ತಕ ಈಶ್ವರಕೃತವಾಗಿದ್ದಿದ್ದರೆ, ಇಂತಹ ವ್ಯರ್ಥವಾದ ಮಾತುಗಳು ಇದರಲ್ಲಿ ಇರುತ್ತಿರಲಿಲ್ಲ!** [120]

### (ಚಮತ್ಕಾರಗಳ ಪ್ರದರ್ಶನ)

[121] ಓ ಮೂಸಾ! ನಿಶ್ಚಯವಾಗಿಯೂ ನಾನು ಶಕ್ತಿಮಾನ್ ಅಲ್ಲಾಹನಾಗಿದ್ದೇನೆ, ಎನ್ನುವುದು ತಥ್ಯ.

ಮತ್ತು ಕೆಳಕ್ಕೆಸೆದುಬಿಡು ನಿನ್ನ ಕೋಲನ್ನು. ಆಯಿತು! ಯಾವಾಗ ಅದನ್ನು ನೋಡಿದನೋ, ಆಗ ಅದು ಸರ್ಪವೋ, ಎನ್ನುವಂತೆ ಅಲ್ಲಾಡುತ್ತಿದ್ದಿತು. ಓ ಮೂಸಾ! ಹೆದರಬೇಡ. ನಿಶ್ಚಯವಾಗಿಯೂ ಪೈಗಂಬರರು ನನ್ನ ಸಮೀಪದಲ್ಲಿ ಹೆದರುವುದಿಲ್ಲ.

ಅಲ್ಲಾಹನ ಹೊರತು ಬೇರೆ ಯಾರೂ ದೇವರಲ್ಲ. ಆದರೆ, ಅವನು ದೊಡ್ಡ ಸಿಂಹಾಸನದ* ಸ್ವಾಮಿಯಾಗಿದ್ದಾನೆ.

---

*ಏಳನೆಯ ಆಕಾಶದ.—ಅನು.

ನನಗಿಂತ ಹೆಚ್ಚು, ಎಂದು ಆತ್ಮಸ್ತುತಿ ಮಾಡಿಕೊಳ್ಳಬೇಡಿ. ಮತ್ತು ಹೊರಟು ಬನ್ನಿರಿ, ನನ್ನ ಹತ್ತಿರ ಮುಸಲ್ಮಾನರಾಗಿ.

[ಕುರಾನ್:–ಮಂ. 5; ಸಿ. 19; ಸೂ. 27; ಆ. 9, 10, 26, 31]

## (ಗಾರುಡಿಗನಾಟ ಈಶ್ವರನ ಕೆಲಸವಲ್ಲ)

ಸಮೀಕ್ಷಕ:—ಮತ್ತೂ ಕೂಡ, ನೋಡಿರಿ! ತನ್ನ ಬಾಯಿನಿಂದ ತಾನೇ ಅಲ್ಲಾಹನು ಮಹಾಪ್ರಚಂಡನಾಗುತ್ತಾನೆ! ತನ್ನ ನಾಲಗೆಯಿಂದ ತನ್ನ ಪ್ರಶಂಸೆ ಮಾಡಿಕೊಳ್ಳುವುದು ಶ್ರೇಷ್ಠ ಪುರುಷನ ಕೆಲಸವೂ ಕೂಡ, ಅಲ್ಲ! ಇನ್ನು ಖುದಾನ ಕೆಲಸ ಹೇಗೆ ತಾನೇ ಆದೀತು?

ಅದಕ್ಕಾಗಿಯೇ, ಇಂದ್ರಜಾಲದ ದೊಂಬರಾಟವನ್ನು ತೋರಿಸಿ, ಕಾಡು ಜನರನ್ನು ವಶಪಡಿಸಿಕೊಂಡು, ತಾನೇ 'ವನವಾಸೀ ಖುದಾ' ಆಗಿ ಕುಳಿತನು! ಇಂತಹ ಮಾತು ಈಶ್ವರನ ಪುಸ್ತಕದಲ್ಲಿ ಎಂದಿಗೂ ಇರಲಾರದು.

ಒಂದುವೇಳೆ ಅವನು 'ಮಹಾನ್ ಆಸನ', ಎಂದರೆ ಏಳನೆಯ ಆಕಾಶದ ಸ್ವಾಮಿಯಾಗಿದ್ದರೆ, ಅವನು ಏಕದೇಶೀಯನಾದುದರಿಂದ, ಈಶ್ವರನಾಗಲಾರನು!

## (ಆತ್ಮಸ್ತುತಿ ಕೆಟ್ಟದ್ದಾದರೆ, ಕುರಾನಿನಲ್ಲಿ ಅದರ ಪ್ರಶಂಸೆ ಏಕೆ?)

ಆತ್ಮಸ್ತುತಿ ಮಾಡುವುದು ಕೆಟ್ಟದಾಗಿದ್ದರೆ, ಖುದಾ ಮತ್ತು ಮುಹಮ್ಮದ್ ಸಾಹೇಬರು ತಮ್ಮ ಸ್ತುತಿಯಿಂದ ಪುಸ್ತಕವನ್ನು ತುಂಬಿಸಿಬಿಟ್ಟರೇಕೆ?

'ಮುಹಮ್ಮದ್ ಸಾಹೇಬರು ಅನೇಕರನ್ನು ಕೊಂದರು!' ಇದರಿಂದ, ಆತ್ಮಸ್ತುತಿಯಾಯಿತೋ, ಅಥವಾ ಇಲ್ಲವೋ?

ಈ ಕುರಾನ್ ಪುನರುಕ್ತವಾದ ಮತ್ತು ಪೂರ್ವಾಪರ ವಿರುದ್ಧವಾದ ಮಾತುಗಳಿಂದ ತುಂಬಿಹೋಗಿದೆ! [121]

## (ಪರ್ವತಗಳು ಮೋಡಗಳಂತೆ ಚಲಿಸುವುದು)

[122] ಮತ್ತು ನೋಡುವೆ ನೀನು ಪರ್ವತಗಳನ್ನು! ಅವು ಹೊರಟು ಹೋಗುತ್ತವೆ, ಸಂಚರಿಸುವ ಮೋಡಗಳಂತೆ! ಯಾವನು ಪ್ರತಿಯೊಂದು ವಸ್ತುವನ್ನೂ ದೃಢವಾಗಿ ಮಾಡಿದ್ದಾನೋ, ಆ ಅಲ್ಲಾಹನ ಕಾರ್ಯಕೌಶಲವದು. ನಿಶ್ಚಯವಾಗಿಯೂ [ನೀವು ಏನನ್ನು] ಮಾಡುತ್ತೀರೋ, ಆ ವಸ್ತುವಿನ ಬಗ್ಗೆ ಜಾಗರೂಕನಾಗಿದ್ದಾನೆ.

[ಕುರಾನ್:–ಮಂ. 5; ಸಿ. 20; ಸೂ. 27; ಆ. 88]

### (ಮೋಡಗಳಂತೆ ಪರ್ವತಗಳು ಚಲಿಸುವುದು ಹೇಗೆ?)

ಸಮೀಕ್ಷಕ:-- ಮೋಡಗಳ ಹಾಗೆ ಪರ್ವತಗಳ ಚಲನೆಯು ಕುರಾನನ್ನು ಬರೆವವರ ದೇಶಗಳಲ್ಲಿ* ನಡೆಯುತ್ತಿರಬಹುದು. ಬೇರೆ ಕಡೆಗಳಲ್ಲಿ ಅಲ್ಲ!

### (ಶೈತಾನನೆದುರಿಗೆ ಖುದಾನ ಜಾಗರೂಕತೆ ನೆಲವುಟ್ಟಿತು)

ಮತ್ತು ಖುದಾನ 'ಜಾಗರೂಕತೆ'ಯಂತೂ ದಂಗೆಕೋರನಾದ ಶೈತಾನನನ್ನು ಹಿಡಿಯದೇ, ಮತ್ತು ಶಿಕ್ಷಿಸದೇ ಇರುವುದರಿಂದಲೇ ವಿದಿತವಾಗುತ್ತದೆ ! ಎಂದರೆ, ಅವನು ಒಬ್ಬ ದಂಗೆಕೋರನನ್ನೂ ಕೂಡ, ಹಿಡಿಯಲಾರದೇ ಹೋದನು! ಶಿಕ್ಷೆಯನ್ನೂ ಕೊಡಲಿಲ್ಲ! ಇದಕ್ಕಿಂತ ಹೆಚ್ಚು ಅಜಾಗರೂಕತೆ ಏನಿರಬಲ್ಲದು? [122]

### (ಕೊಲೆಪಾತಕನಾದ ಮೂಸಾನನ್ನು ಕ್ಷಮಿಸುವುದು)

[123] ಸರಿ, ಗುದ್ದಿದನು ಮೂಸಾ ಅವನಿಗೆ. ಆಯಿತು! ಅವನ ಆಯುಸ್ಸು ತೀರಿತು! ಅವನು—

"ಓ ನನ್ನ ದೇವ! ನಿಶ್ಚಯವಾಗಿ ನಾನು ನನ್ನ ಜೀವಕ್ಕೆ ಅನ್ಯಾಯಮಾಡಿದೆನು, ಎಂದು ತಿಳಿ. ಸರಿ! ಕ್ಷಮಿಸು ನನ್ನನ್ನು", ಎಂದನು.

ಸರಿ! ಕ್ಷಮಿಸಿ ಬಿಟ್ಟನು ಅವನನ್ನು! ನಿಶ್ಚಯವಾಗಿ, ಅವನು ಕ್ಷಮೆ ಮಾಡುವ ದಯಾಳುವಾಗಿದ್ದಾನೆ.

ಮತ್ತು ನಿನ್ನ ಪ್ರಭುವು, ಯಾವುದನ್ನು ಅಪೇಕ್ಷಿಸುತ್ತಾನೋ, ಮತ್ತು ಚುನಾಯಿಸುತ್ತಾನೋ, ಅದನ್ನು ಉತ್ಪನ್ನ ಮಾಡುತ್ತಾನೆ.

[ಕುರಾನ್:-ಮಂ. 5; ಸಿ. 20; ಸೂ. 28; ಆ. 15,16,68]

### (ಕೊಲೆಪಾತಕ-ಮೂಸಾನನ್ನು ಕ್ಷಮಿಸುವುದು ಯಾವ ನ್ಯಾಯ?)

ಸಮೀಕ್ಷಕ:—ಈಗ ಮತ್ತೂ ನೋಡಿರಿ, ಮುಸಲ್ಮಾನರ ಮತ್ತು ಕ್ರೈಸ್ತರ ಪೈಗಂಬರರನ್ನು ಮತ್ತು ಖುದಾನನ್ನು! ಪೈಗಂಬರ್ ಮೂಸಾ ನರಹತ್ಯೆ ಮಾಡುತ್ತಾ ಹೋಗುತ್ತಾನೆ, ಮತ್ತು ಖುದಾ ಕ್ಷಮಿಸುತ್ತಾ ಹೋಗುತ್ತಾನೆ! ಇವರಿಬ್ಬರೂ ಅನ್ಯಾಯಕಾರಿಗಳು ಅಹುದೋ, ಅಥವಾ ಅಲ್ಲವೋ ?

ತನ್ನ ಇಚ್ಛೆಯಿಂದಲೇ, ಹೇಗೆ ಅಪೇಕ್ಷಿಸುತ್ತಾನೋ, ಹಾಗೆ ಉತ್ಪತ್ತಿ ಮಾಡುತ್ತಾನೇನು ? ಅವನು ತನ್ನ ಇಚ್ಛೆಯಿಂದಲೇ, ಒಬ್ಬನನ್ನು ರಾಜನನ್ನಾಗಿಯೂ,

*ಅರೇಬಿಯಾ ಮರುಭೂಮಿಯು ಕುರಾನ್ ಬರೆದವರ ದೇಶ. ಅಲ್ಲಿ ಪರ್ವತಗಳಿಲ್ಲ; ಮೋಡಗಳೂ ಇಲ್ಲ! ಆದರೆ, ಕಡಿವಾಣ ಇಲ್ಲದೇ 'ಗಾಳಿ ಕುದುರೆ'ಯನ್ನು ಓಡಿಸುವುದು ಏನು ಮಹಾಕಷ್ಟ!—ಸಂ.

ಇನ್ನೊಬ್ಬನನ್ನು ದರಿದ್ರನನ್ನಾಗಿಯೂ; ಮತ್ತು ಒಬ್ಬನನ್ನು ವಿದ್ವಾಂಸನನ್ನಾಗಿಯೂ, ಹಾಗೂ ಇನ್ನೊಬ್ಬನನ್ನು ಮೂರ್ಖನನ್ನೇ ಮೊದಲಾಗಿಯೂ ಸೃಜಿಸಿದ್ದಾನೇನು ?

ಹೀಗೆ ಇರುವುದಾದರೆ, ಕುರಾನೂ ಸತ್ಯವಲ್ಲ ! ಮತ್ತು ಅನ್ಯಾಯಕಾರಿ ಯಾದುದರಿಂದ, ಇವನು ಖುದಾ ಕೂಡ, ಆಗಲಾರನು! [123]

## (ತಾಯಿ–ತಂದೆಗಳ ಸೇವೆಯ ಆದೇಶ)

**[124] ನಾವು ತಾಯಿ-ತಂದೆಗಳೊಂದಿಗೆ ಸದ್ವ್ಯವಹಾರ ಮಾಡಬೇಕೆಂದು ಮನುಷ್ಯನಿಗೆ ಆಜ್ಞಾಪಿಸಿದೆವು. [ಮತ್ತು] ನಿನ್ನ ಅರಿವಿಗೆ ಹಿಡಿಯದ ವಸ್ತುವನ್ನು ನನ್ನ ಸಹಭಾಗಿಯನ್ನಾಗಿ ಮಾಡುವ ವಿಷಯದಲ್ಲಿ, ಅವರಿಬ್ಬರೂ ನಿನ್ನೊಂದಿಗೆ ಜಗಳ ವಾಡಿದರೆ. ನೀನು ಅವರಿಬ್ಬರ ಕಥನವನ್ನೂ ಒಪ್ಪಿಕೊಳ್ಳಬೇಡ! ನನ್ನ ಪಕ್ಷವನ್ನು ಸ್ವೀಕರಿಸು.**

**ಮತ್ತು ಅವಶ್ಯವಾಗಿ ನಾವು 'ನೂಹ'ನನ್ನು ಅವನ ಜಾತಿಯೆಡೆಗೆ ಕಳುಹಿಸಿ ದೆವು. ಅಹುದು! ಅವರ ನಡುವೆ ಸಾವಿರ ವರ್ಷ ಕಾಲ ಇದ್ದನು; ಆದರೆ, ಐವತ್ತು ವರ್ಷ ಕಡಿಮೆ!**

**[ಕುರಾನ್:–ಮಂ. 5; ಸಿ. 20; ಸೂ. 29; ಆ. 8,14]**

## (ತಾಯಿ–ತಂದೆಗಳ ಸೇವೆಯ ಮಾತು ಸರಿ)

**ಸಮೀಕ್ಷಕ:**—ತಾಯಿ-ತಂದೆಗಳ ಸೇವೆ ಮಾಡುವುದೇನೋ ಒಳ್ಳೆಯದೇ ಸರಿ! ಮತ್ತು ಖುದಾನೊಂದಿಗೆ [ಬೇರೆ ಯಾವನನ್ನಾದರೂ] ಸಹಭಾಗಿಯನ್ನಾಗಿ ಮಾಡಲು [ಅವರು] ಹೇಳಿದುದನ್ನು ಒಪ್ಪಬಾರದೆನ್ನುವುದೂ ಕೂಡ, ಸರಿಯಾಗಿದೆ. ಆದರೆ, ಒಂದು ವೇಳೆ, ಮಾತಾಪಿತೃಗಳು, ಮಿಥ್ಯಾಭಾಷಣ ಮೊದಲಾದುದನ್ನು ಮಾಡಲು ಆಜ್ಞಾಪಿಸಿದರೆ, ಒಪ್ಪಿಕೊಂಡು ಬಿಡಬೇಕೇನು? ಆದುದರಿಂದ, ಈ ಮಾತು ಅರ್ಧ ಒಳ್ಳೆಯದು; ಅರ್ಧ ಕೆಟ್ಟದಾಗಿದೆ!

## (ಸಾವಿರ ವರ್ಷದ ಆಯುಸ್ಸು ಈಗೇಕೆ ಇಲ್ಲ?)

ನೂಹ್ ಮೊದಲಾದ ಪೈಗಂಬರರನ್ನು ಮಾತ್ರ ಖುದಾ ಜಗತ್ತಿಗೆ ಕಳುಹಿಸು ತ್ತಾನೇನು? ಹಾಗಾದರೆ, ಬೇರೆಯ ಜೀವರನ್ನು ಯಾವನು ಕಳುಹಿಸುತ್ತಾನೆ? ಎಲ್ಲರನ್ನೂ ಅವನೇ ಕಳುಹಿಸುತ್ತಾನೆಯಾದರೆ, ಎಲ್ಲರೂ ಪೈಗಂಬರರೇ ಅಲ್ಲವೇಕೆ?

ಮತ್ತು ಮೊದಲು ಮಾನವರ ಆಯುಸ್ಸು [ಐವತ್ತು ವರ್ಷ ಕಡಿಮೆ] ಸಾವಿರ ವರ್ಷದ್ದಾಗಿರುತ್ತಿದ್ದರೆ, ಈಗ ಏತಕ್ಕೆ ಆಗುವುದಿಲ್ಲ? ಆದುದರಿಂದ, ಈ ಮಾತು ಸರಿಯಾದುದಲ್ಲ! [124]

## (ಎರಡು ಸಲ ಉತ್ಪತ್ತಿ; ನಂಬಿದವರಿಗೆ ಸ್ವರ್ಗ)

**[125]** ಅಲ್ಲಾಹನು ಮೊದಲನೆಯ ಸಾರಿ ಉತ್ಪತ್ತಿಮಾಡುತ್ತಾನೆ. ಮತ್ತು ಎರಡನೆಯ ಸಾರಿ ಅದನ್ನು ಮಾಡುವನು. ಮತ್ತು ಅವನ ಕಡೆಗೆಯೇ ತಿರುಗಿಸಲ್ಪಡುವಿರಿ.

ಮತ್ತು ಎಂದು ಮಳೆ ಧಾರಾಕಾರವಾಗಿ ಬೀಳುವುದೋ, ಎಂದರೆ, ಕಯಾಮತ್ ನಿರ್ಧಾರಿತವಾಗುವುದೋ, ಆಗ ಪಾಪಿಗಳಾದವರು ನಿರಾಶರಾಗುವರು !

ಸರಿ! ನಂಬಿಕೆಯನ್ನಿಟ್ಟ ಮತ್ತು ಸತ್ಕರ್ಮಗಳನ್ನು ಮಾಡಿದ ಮಂದಿಗಳು, ವಸ್ತುತಃ ಉದ್ಯಾನದ ನಡುವೆ ಸಿಂಗರಿಸಲ್ಪಡುವರು.

ನಾವು ಒಂದು ಗಾಳಿಯನ್ನು ಕಳುಹಿದರೆ, ಸಾಕು! ಆ ಹೊಲ ಹಳದಿಯಾಗಿ ಹೋಗುವುದನ್ನು ನೋಡುವಿರಿ!

ಹೀಗೆಯೇ, ಅಲ್ಲಾಹನು ಆ ಜನರ ಹೃದಯಗಳ ಮೇಲೆ ಅವರು ತಿಳಿದುಕೊಳ್ಳದಂತೆ ಮುದ್ರೆಯನ್ನೊತ್ತುತ್ತಾನೆ.

[ಕುರಾನ್:-ಮಂ. 5; ಸಿ. 21; ಸೂ. 30; ಆ. 11,12,15,51,59]

## (ಕೇವಲ ಎರಡು ಸಲ ಉತ್ಪತ್ತಿಮಾಡಿ, ಮತ್ತೇನು ಮಾಡುವನು?)

**ಸಮೀಕ್ಷಕ:**—ಅಲ್ಲಾಹನು ಎರಡು ಸಾರಿ ಉತ್ಪತ್ತಿಮಾಡುತ್ತಾನೆ; ಮೂರನೆಯ ಸಾರಿ ಇಲ್ಲ, ಎಂದಾದರೆ, ಉತ್ಪತ್ತಿಯ ಮುನ್ನ, ಮತ್ತು ಎರಡನೆಯ ಸಾರಿಯ [ಉತ್ಪತ್ತಿಯ] ನಂತರ, ನಿಷ್ಕರ್ಮನಾಗಿ ಕುಳಿತುಕೊಂಡಿರಬಹುದೇನೋ? ಮತ್ತು ಒಂದನೆಯ, ಹಾಗೂ ಎರಡನೆಯ ಸಾರಿ ಉತ್ಪತ್ತಿಯ ನಂತರ, **ಅವನ ಸಾಮರ್ಥ್ಯವು ನಿರುಪಯೋಗಿಯೂ ಮತ್ತು ವ್ಯರ್ಥವೂ ಆಗಿಹೋಗುವುದೇನೋ ?**

ನ್ಯಾಯ ಮಾಡುವ ದಿನ ಪಾಪೀ ಜನರು ನಿರಾಶರಾಗುವರಾದರೆ, ಒಳ್ಳೆಯ ಸಂಗತಿಯಾಗಿದೆ! ಆದರೆ, ಮುಸಲ್ಮಾನರ ಹೊರತು, ಬೇರೆ ಎಲ್ಲರೂ ಪಾಪಿಗಳೆಂದರಿತು, ನಿರಾಶರನ್ನಾಗಿ ಮಾಡುವುದು ಈ ಮಾತಿನ ತಾತ್ಪರ್ಯವೇನೂ ಅಲ್ಲವಷ್ಟೇ? ಏಕೆಂದರೆ, ಕುರಾನಿನಲ್ಲಿ ಅನೇಕ ಸ್ಥಳಗಳಲ್ಲಿ ಪಾಪಿಗಳು, ಎನ್ನುವುದಕ್ಕೆ ಬೇರೆಯವರು, ಎಂದೇ ಅರ್ಥವಿದೆ !

## (ಖುದಾನೇ ತೋಟಗಾರ, ಅಕ್ಕಸಾಲಿಗ)

ಉದ್ಯಾನವಲ್ಲಿ ಇಡುವುದು ಮತ್ತು ಅಲಂಕಾರಗಳನ್ನು ಮಾಡುವುದೇ ಮುಸಲ್ಮಾನರ ಸ್ವರ್ಗವಾಗಿರುವುದಾದರೆ, ಈ ಜಗತ್ತಿನ ಹಾಗೆಯೇ ಆಯಿತು! ಮತ್ತು ಅಲ್ಲಿ ತೋಟಗಾರರೂ ಮತ್ತು ಅಕ್ಕಸಾಲಿಗರೂ ಕೂಡ, ಇರಬಹುದೋ? ಅಥವಾ **ಖುದಾನೇ ತೋಟಗಾರನ ಮತ್ತು ಅಕ್ಕಸಾಲಿಗ ಮೊದಲಾದವರ ಕೆಲಸವನ್ನು ಮಾಡುತ್ತಿರಬಹುದೋ ?**

ಯಾವನಿಗಾದರೂ ಒಡವೆ ಕಡಿಮೆ ಸಿಕ್ಕಬಹುದಾದರೆ, ಕಳವೂ ಆಗುತ್ತಿರಬಹುದಲ್ಲವೇ ? ಮತ್ತು ಕಳ್ಳತನ ಮಾಡುವವರನ್ನು ಸ್ವರ್ಗದಿಂದ ನರಕಕ್ಕೂ ತಳ್ಳುತ್ತಿರಬಹುದಲ್ಲವೇ? ಹೀಗೆ ಆಗುತ್ತಿರಬಹುದಾದರೆ, 'ಸದಾ ಸ್ವರ್ಗದಲ್ಲಿರುವವರು', ಎಂಬ ಮಾತು ಸುಳ್ಳಾಗಿ ಹೋಗುವುದು!

ಒಂದುವೇಳೆ, ಬೇಸಾಯಗಾರರ ಬೇಸಾಯದ ಮೇಲೆಯೂ ಖುದಾನ ದೃಷ್ಟಿ ಇರುತ್ತದೆಯಾದರೆ, ಈ ವಿದ್ಯೆ ಬೇಸಾಯಮಾಡುವ ಅನುಭವದಿಂದಲೇ ಉಂಟಾಗುತ್ತದೆ!

'ಖುದಾ ತನ್ನ ವಿದ್ಯೆಯಿಂದ ಎಲ್ಲ ಮಾತುಗಳನ್ನೂ ತಿಳಿದುಕೊಂಡಿದ್ದಾನೆ', ಎಂದು ಅಂಗೀಕರಿಸಲ್ಪಡುವುದಾದರೆ, ಹೀಗೆ ಭಯವನ್ನೊಡ್ಡುವುದು ತನ್ನ ಗರ್ವವನ್ನು ಪ್ರದರ್ಶಿಸುವುದಾಗಿದೆ!

ಅಲ್ಲಾಹನು ಜೀವರುಗಳ ಹೃದಯಗಳ ಮೇಲೆ ಮುದ್ರೆಯನ್ನೊತ್ತಿ ಪಾಪಗಳನ್ನು ಮಾಡಿದವನಾದರೆ, ಆ ಪಾಪದ ಭಾಗಿಯು ಅವನೇ ಆಗುವನು; ಜೀವರು ಆಗಲಾರರು ! ಹೇಗೆ ಜಯ-ಪರಾಜಯುಗಳು ಸೇನಾಧೀಶನಿಗೆ ಆಗುತ್ತವೋ, ಹಾಗೆ ಈ ಪಾಪಗಳೆಲ್ಲವೂ ಖುದಾಗೇ ತಗಲಬೇಕು ! [125]

## (ಅಲ್ಲಾಹನ ಕೆಲವು ವಿಶೇಷ ಸ್ಮೃತಿ-ಚಿಹ್ನೆಗಳು)

**[126] ಈ ಆಯತ್ತುಗಳು ಬುದ್ಧಿವಂತನ ಪುಸ್ತಕದವು ಆಗಿವೆ.**

**ಸ್ತಂಭವಿಲ್ಲದೇ ಆಕಾಶಗಳನ್ನು ಉತ್ಪನ್ನಮಾಡಿದನು. ನೀವು ಅದನ್ನು ನೋಡುತ್ತೀರಿ. ಮತ್ತು ಅಲ್ಲಾಡಿ ಹೋಗದಿರಲಿ, ಎಂದು ಪೃಥಿವಿಯ ನಡುವೆ ಪರ್ವತಗಳನ್ನು ಹಾಕಿದನು.**

**ಅಲ್ಲಾಹನು ರಾತ್ರಿಯನ್ನು ಹಗಲಿನ ನಡುವೆ ಪ್ರವೇಶಗೊಳಿಸುತ್ತಾನೆ; ಮತ್ತು ಹಗಲನ್ನು ರಾತ್ರಿಯ ನಡುವೆ ಪ್ರವೇಶಗೊಳಿಸುತ್ತಾನೆ, ಎಂಬುದನ್ನು ನೀನು ನೋಡಲಿಲ್ಲವೇನು ?**

**ನಿಮಗೆ ತನ್ನ ಸ್ಮೃತಿ-ಚಿಹ್ನೆಗಳನ್ನು ತೋರಿಸಬೇಕೆಂದು ಅಲ್ಲಾಹನ ಅನುಗ್ರಹದಿಂದ ಸಮುದ್ರದ ನಡುವೆ ದೋಣಿಗಳು ನಡೆಯುವುದನ್ನು ನೀವು ನೋಡಲಿಲ್ಲವೇನು?**

[ಕುರಾನ್:-ಮಂ. 5; ಸಿ. 21; ಸೂ. 31; ಆ. 2,10,29,31]

## (ಆಕಾಶದ ಉತ್ಪತ್ತಿ ಮೊದಲಾದ ಮಾತುಗಳು ವಿದ್ಯಾವಿರುದ್ಧ)

**ಸಮೀಕ್ಷಕ:**—ಧನ್ಯ ಮಹಾಶಯ! ಧನ್ಯ! ಈ ಬುದ್ಧಿವಂತ-ಪುಸ್ತಕದಲ್ಲಿ—ವಿದ್ಯೆಗೆ ಸರ್ವಥಾ ವಿರುದ್ಧವಾಗಿ ಆಕಾಶದ ಉತ್ಪತ್ತಿ! ಮತ್ತು ಅದಕ್ಕೆ ಸ್ತಂಭಗಳನ್ನು ಒತ್ತುಕೊಡಬೇಕೇನೋ, ಎಂಬ ಸಂಶಯ!! ಮತ್ತು ಪೃಥಿವಿಯನ್ನು ದೃಢೀಕರಿಸುವುದಕ್ಕಾಗಿ ಪರ್ವತಗಳ ಸ್ಥಾಪನೆ!!! ಸ್ವಲ್ಪ ವಿದ್ಯೆಯನ್ನು ಕಲಿತವನೂ

ಕೂಡ, ಇಂತಹ ಲೇಖನವನ್ನು ಎಂದಿಗೂ ಬರೆಯುವುದಿಲ್ಲ. ಮತ್ತು ಒಪ್ಪಿ ಕೊಳ್ಳುವುದೂ ಕೂಡ, ಇಲ್ಲ!

ಇಷ್ಟೆಷ್ಟು 'ಬುದ್ಧಿವಂತಿಕೆ'ಯುನ್ನಾದರೂ ನೋಡಿರಿ! ಹಗಲಿರುವೆಡೆ ರಾತ್ರಿ ಇರುವುದಿಲ್ಲ; ಮತ್ತು ರಾತ್ರಿಯಿರುವೆಡೆ ಹಗಲೂ ಇರುವುದಿಲ್ಲ! [ಹಾಗಿರುವಾಗ], ಮತ್ತೆ ಅವುಗಳಲ್ಲಿ ಒಂದನ್ನು ಮತ್ತೊಂದರಲ್ಲಿ ಪ್ರವೇಶಮಾಡಿಸುತ್ತಾನೆ, ಎಂದು ಬರೆದಿದ್ದಾನೆ! ಇದು ಮಹಾನ್ ಅವಿದ್ವಾಂಸರ ಕಥನವಾಗಿದೆ! **ಆದುದರಿಂದ, ಈ ಕುರಾನ್ ವಿದ್ಯೆಯ ಪುಸ್ತಕವಾಗಲಾರದು !**

### (ನೀರಿನಲ್ಲಿ ಹಡಗು ನಡೆದರೆ, ಖುದಾನ ಕೃಪೆ ಯಾವುದು?)

ಹಡಗುಗಳು ಮಾನವರಿಂದ ಮತ್ತು ಕ್ರಿಯಾಕೌಶಲ ಮೊದಲಾದುವುಗಳಿಂದ ಚಲಿಸುತ್ತವೋ, ಅಥವಾ ಖುದಾನ ಕೃಪೆಯಿಂದಲೋ? ಇದು ವಿದ್ಯಾವಿರುದ್ಧವಾದ ಮಾತಲ್ಲವೇನು? **ಕಬ್ಬಿಣದ ಅಥವಾ ಕಲ್ಲುಗಳ ಹಡಗುಗಳನ್ನು ನಿರ್ಮಿಸಿ, ಸಮುದ್ರದಲ್ಲಿ ನಡೆಸಿದರೆ, ಖುದಾನ ಸ್ಮೃತಿ-ಚಿಹ್ನೆ ಮುಳುಗಿ ಹೋಗುವುದೋ, ಅಥವಾ ಇಲ್ಲವೋ?** ಆದುದರಿಂದ, ಈ ಪುಸ್ತಕವು ವಿದ್ವಾಂಸನು ಬರೆದುದೂ ಆಗಿರಲಾರದು; ಮತ್ತು ಈಶ್ವರನು ಬರೆದುದೂ ಆಗಿರಲಾರದು ! [126]

### (ಆಕಾಶದಿಂದ ಬರುವುದು–ಹೋಗುವುದು, ಮೃತ್ಯುವಿನ ದೇವದೂತ, ನರಕ ತುಂಬಿಸುವುದು)

**[127] ಆಕಾಶದಿಂದ ಪೃಥಿವಿಯ ಕಡೆಗೆ ಕಾರ್ಯದ ವ್ಯವಸ್ಥೆಯನ್ನು ಮಾಡುತ್ತಾನೆ. ಅದರ ಕಡೆಗೆ ಒಂದು ದಿವಸದ ನಡುವೆ ಪುನಃ ಏರಿಹೋಗುತ್ತಾನೆ. ಅದರ ಅವಧಿಯು ನೀವು ಎಣಿಸುವಂತಹ ವರ್ಷಗಳ ಸಾವಿರಪಟ್ಟಾಗಿದೆ.**

**ಅವನು ಪರೋಕ್ಷವನ್ನೂ ಮತ್ತು ಪ್ರತ್ಯಕ್ಷವನ್ನೂ ತಿಳಿಯುವವನಾಗಿದ್ದಾನೆ. ಮಹಾ ಶಕ್ತನೂ, ದಯಾಳುವೂ ಆಗಿದ್ದಾನೆ.**

**ಮತ್ತೆ ಅವನನ್ನು ನಿರ್ಮಿಸಿದನು, ಮತ್ತು [ಅವನ] ಒಳಕ್ಕೆ ತನ್ನ ಆತ್ಮವನ್ನು* ಊದಿದನು.**

**'ನಿಮ್ಮೊಂದಿಗೆಯೇ ನಿರ್ಧಾರಿತವಾಗಿರುವ ಮೃತ್ಯುದೇವತೆಯು ನಿಮ್ಮನ್ನು ವಶ ಪಡಿಸಿಕೊಳ್ಳುವನು', ಎಂದು ಹೇಳು.**

**ಮತ್ತು ನಾವು ಬಯಸುತ್ತಿದ್ದಲ್ಲಿ ಅವಶ್ಯವಾಗಿ ನಾವು ಪ್ರತಿಯೊಬ್ಬ ಜೀವನಿಗೂ ಅವನಿಗೆ ಯುಕ್ತವಾದ ಶಿಕ್ಷಣವನ್ನು ಕೊಡುತ್ತಿದ್ದೆವು. ಆದರೆ—'ನಾನು ನರಕವನ್ನು**

---

*ಪ್ರಾಣವನ್ನು—ಅನು.

ಭೂತಗಳಿಂದ ಮತ್ತು ಮಾನವರಿಂದ ಒಟ್ಟಾಗಿ, ಅವಶ್ಯವಾಗಿ ತುಂಬುವೆನು', ಎಂಬ ನನ್ನ ಕಡೆಯಿಂದ ಹೊರಟ ವಚನವು ಸತ್ಯವೆಂದು ಸಿದ್ಧವಾಗಿದೆ.

[ಕುರಾನ್:-ಮಂ. 5; ಸಿ. 21; ಸೂ. 32; ಆ. 5,6,9,11,13]

**(ಏರುವ-ಹತ್ತುವ ಕೆಲಸ ಏಕದೇಶೀಯನು ಮಾಡಬಲ್ಲನು)**

**ಸಮೀಕ್ಷಕ:**—ಮುಸಲ್ಮಾನರ ಖುದಾ ಮನುಷ್ಯರಂತೆ ಏಕದೇಶೀಯನಾಗಿದ್ದಾನೆ, ಎನ್ನುವುದು ಈಗ ಸರಿಯಾಗಿ ಸಿದ್ಧವಾಗಿ ಹೋಯಿತು ! ಏಕೆಂದರೆ, ವ್ಯಾಪಕನಾಗಿರುವುದಾದರೆ, ಒಂದು ಸ್ಥಾನದಿಂದ ವ್ಯವಸ್ಥೆಮಾಡುವುದು, ಮತ್ತು ಇಳಿಯುವುದು-ಹತ್ತುವುದು ಆಗಲಾರದು.

ಒಂದುವೇಳೆ, ಖುದಾ ದೇವದೂತರನ್ನು ಕಳುಹಿಸುತ್ತಾನೆ, ಎಂದರೂ ಕೂಡ, ತಾನು ಏಕದೇಶೀಯನಾದನು! ತಾನು ಆಕಾಶದ ಮೇಲೆ ಜೋಲಾಡುತ್ತಾ ಕುಳಿತಿದ್ದಾನೆ! ಮತ್ತು ದೇವದೂತರನ್ನು ಓಡಾಡಿಸುತ್ತಾನೆ! ! ಒಂದು ವೇಳೆ, ದೇವದೂತರು ಲಂಚ ತೆಗೆದುಕೊಂಡು, ಯಾವುದಾದರೂ ಕಾರ್ಯವನ್ನು ಕೆಡಿಸಿಬಿಡುವರಾದರೆ, ಅಥವಾ ಯಾವುದಾದರೂ ಶವವನ್ನು ಬಿಟ್ಟುಬಿಡುವರಾದರೆ, ಖುದಾಗೆ ಏನು ಗೊತ್ತಾದೀತು ?

**ಗೊತ್ತಾಗುವುದಂತೂ ಸರ್ವಜ್ಞನೂ, ಸರ್ವವ್ಯಾಪಕನೂ ಆಗಿರುವವನಿಗೆ ಮಾತ್ರವೇ! [ಇವನು] ಹಾಗಂತೂ ಇಲ್ಲವೇ ಇಲ್ಲ!** ಹಾಗಿದ್ದಿದ್ದರೆ, ದೇವತೆಗಳನ್ನು ಕಳುಹಿಸುವ, ಹಾಗೂ ಅನೇಕರನ್ನು ಅನೇಕ ರೀತಿಯಲ್ಲಿ ಪರೀಕ್ಷಿಸುವ ಕೆಲಸವೇನಿದ್ದಿತು? ಮತ್ತು ಒಂದು ಸಾವಿರ ವರ್ಷಗಳಲ್ಲಿ, ಮತ್ತು ಬರುವುದರಿಂದ-ಹೋಗುವುದರಿಂದ, [ಹಾಗೂ] ಪ್ರಬಂಧವನ್ನು ಮಾಡುವುದರಿಂದ, ಸರ್ವಶಕ್ತಿಮಂತನೂ ಕೂಡ, ಆಗಲಿಲ್ಲ!

ಮೃತ್ಯು-ದೇವತೆಯು ಇರುವುದಾದರೆ, ಆ ದೇವತೆಯನ್ನು ಸಂಹರಿಸುವ ಮೃತ್ಯುವು ಯಾವುದು? ಅವನು ನಿತ್ಯನಾಗಿರುವುದಾದರೆ, ಅಮರತ್ವದಲ್ಲಿ ಖುದಾಗೆ ಸಮನಾಗಿ ಭಾಗೀದಾರನಾದನು! ಒಬ್ಬ ದೇವದೂತನು ಏಕಕಾಲದಲ್ಲಿ ನರಕವನ್ನು ತುಂಬುವುದಕ್ಕಾಗಿ ಜೀವರಿಗೆ ಶಿಕ್ಷಣ ಕೊಡಲಾರನು.

**(ಪಾಪವಿಲ್ಲದೇ ನರಕಕ್ಕೆ ಕಳುಹಿಸುವುದು ಅನ್ಯಾಯ)**

ಮತ್ತು ಪಾಪವನ್ನು ಮಾಡದೆಯೇ, ಅವರನ್ನು ತನ್ನ ಇಚ್ಛೆಯಿಂದ **ನರಕದಲ್ಲಿ ತುಂಬಿಸಿ, ಅವರಿಗೆ ದುಃಖವನ್ನಿತ್ತು, ವಿನೋದವನ್ನು ನೋಡುತ್ತಾನೆಯಾದರೆ, ಆ ಖುದಾ ಪಾಪಿಯೂ, ಅನ್ಯಾಯಕಾರಿಯೂ ಮತ್ತು ದಯಾಹೀನನೂ ಆಗಿರುತ್ತಾನೆ!**

ಇಂತಹ ಮಾತುಗಳು ಯಾವ ಪುಸ್ತಕದಲ್ಲಿರುತ್ತವೋ, ಅದು ವಿದ್ವಾಂಸನು ರಚಿಸಿದುದೂ ಅಲ್ಲ; ಮತ್ತು ಈಶ್ವರಕೃತವೂ ಅಲ್ಲ! ಮತ್ತು **ಯಾವನು ದಯಾ-ನ್ಯಾಯಹೀನನಾಗಿರುತ್ತಾನೋ, ಅವನು ಈಶ್ವರನೂ ಕೂಡ, ಎಂದಿಗೂ ಆಗಲಾರನು!**

[127]

### (ಕದನದಿಂದ ಓಡಿಹೋಗಬೇಡ! ಪೈಗಂಬರನ ಹೆಂಡಂದಿರಿಗೆ ಬೆದರಿಕೆ!)

[128] ಸಾವಿನಿಂದ ಅಥವಾ ಕೊಲೆಯಿಂದ ಓಡಿಹೋಗುವಿರಾದರೆ, ಪಲಾಯನ ನಿಮಗೆಂದಿಗೂ ಲಾಭದಾಯಕವಾಗುವುದಿಲ್ಲ, ಎಂದು ಹೇಳು.

ಎಲೈ ಪೈಗಂಬರನ ಪತ್ನಿಯರೇ! ನಿಮ್ಮಲ್ಲಿ ಯಾರು ನಿರ್ಲಜ್ಜರಾಗಿ ವರ್ತಿಸುವಿರೋ, ಅವರಿಗೆ ಪ್ರತ್ಯಕ್ಷವಾಗಿ ದ್ವಿಗುಣವಾದ ಶಿಕ್ಷೆ ಕೊಡಲ್ಪಡುವುದು. ಮತ್ತು ಇದು ಅಲ್ಲಾಹನಿಗೆ ಬಹಳ ಸುಲಭವಾಗಿದೆ.

[ಕುರಾನ್:-ಮಂ. 5; ಸಿ. 21; ಸೂ. 33; ಆ. 16, 30]

### (ಕದನ ಮಾಡಿಸುವುದು ಶಿಷ್ಟಪುರುಷರ ಕೆಲಸವಲ್ಲ)

**ಸಮೀಕ್ಷಕ:**—ಮುಹಮ್ಮದ್ ಸಾಹೇಬರು ಇದನ್ನು—'ಯುದ್ಧದಲ್ಲಿ ಯಾವನೂ ಓಡಿ ಹೋಗದಿರಲಿ! ನಮಗೆ ವಿಜಯವಾಗಲಿ! ಕೊಲ್ಲುವುದರಿಂದಲೂ ಹೆದರದಿರಲಿ! ಐಶ್ವರ್ಯ ಹೆಚ್ಚಲಿ! ಮತವನ್ನು ಹೆಚ್ಚು ಪ್ರಸರಿತವಾಗಿ ಮಾಡಿಕೊಳ್ಳಲಿ!,' ಎಂಬ ಅಭಿಪ್ರಾಯದಿಂದ ಬರೆದಿರಬಹುದು—ಬರೆಯಿಸಿರಬಹುದು!

### (ಪೈಗಂಬರನ ಪರಿವಾರದ ವಿಷಯದಲ್ಲಿ ಖುದಾನ ಪಕ್ಷಪಾತ)

ಮತ್ತು ಒಂದು ವೇಳೆ, ಪತ್ನಿಯು ಲಜ್ಜಾರಹಿತೆಯಾಗಿ ಬಾರದಿದ್ದರೆ, ಪೈಗಂಬರ್ ಸಾಹೇಬರು ನಿರ್ಲಜ್ಜರಾಗಿ ಬರಬೇಕೇನು? 'ಪತ್ನಿಯರಿಗೆ ಶಿಕ್ಷೆಯಾಗಬೇಕು ಮತ್ತು ಪೈಗಂಬರ್ ಸಾಹೇಬರಿಗೆ ಶಿಕ್ಷೆಯಾಗಬಾರದು!' ಇದಾವ ಮನೆಯ ನ್ಯಾಯ? [128]

### (ಪೈಗಂಬರನ ಹೆಂಡತಿಯರ ಮೇಲೆ ನಿರ್ಬಂಧ; ಸೊಸೆಯೊಡನೆ ವಿವಾಹ)

[129] ಮತ್ತು ನಿಮ್ಮ ಮನೆಯೊಳಗೆ ದೃಢವಾಗಿ ಇದ್ದುಬಿಡಿರಿ! ಅಲ್ಲಾಹನ ಮತ್ತು ರಸೂಲನ ಆಜ್ಞೆಯನ್ನು ಪಾಲಿಸಿರಿ! ಇದರ ಹೊರತು ಮತ್ತೇನೂ ಇಲ್ಲ!

ಸರಿ! ಜೈದನು ಅವಳೊಂದಿಗೆ ತನ್ನ ಇಚ್ಛೆಯನ್ನು ಪೂರೈಸಿಕೊಂಡಾಗ, ನಾವು ಸಾಕು-ಪುತ್ರರ ಪತ್ನಿಯರ ಬಗೆಗೆ ನಿಜವಾದ ನಂಬಿಕೆಯುಳ್ಳವರಿಗೆ ಯಾವುದೇ ಕಷ್ಟವೂ ಆಗದಿರಲಿ, ಮತ್ತು ತಮ್ಮ ಇಚ್ಛೆ ಪೂರೈಸಿಕೊಳ್ಳಲಿ, ಎಂದು ಅವಳನ್ನು ನಿನ್ನೊಡನೆ ವಿವಾಹಿತಳನ್ನಾಗಿ ಮಾಡಿದೆವು. ಮತ್ತು ಖುದಾನ ಆಜ್ಞೆ ನೆರವೇರಿಸಲ್ಪಟ್ಟಿತು.*

ಆ ವಸ್ತುವಿನ ವಿಷಯದಲ್ಲಿ ಪೈಗಂಬರನಿಗೆ ಯಾವುದೇ ಅಡ್ಡಿಯೂ ಅಲ್ಲ.

ಮುಹಮ್ಮದನು ಯಾವನೇ ಪುರುಷನ ತಂದೆಯೂ ಅಲ್ಲ!

---

*ಈ ಮೊದಲು, ಅರೇಬಿಯಾದಲ್ಲಿ ತನ್ನ ಮಾನಸಪುತ್ರನಿಂದ ವಿವಾಹವಿಚ್ಛೇದ ಪಡೆದ ಅವನ ಪತ್ನಿಯೊಡನೆ ವಿವಾಹ ಮಾಡಿಕೊಳ್ಳುವ ಪದ್ಧತಿ ಇರಲಿಲ್ಲ.—ಯು.ಮೀ.

ಮತ್ತು ಯಾವುದೇ 'ವಧುದಕ್ಷಿಣೆ'ಯೂ* ಇಲ್ಲದೇ, ಯಾವ ನಂಬಿಕೆಯುಳ್ಳ ಸ್ತ್ರೀಯು ತನ್ನ ಪ್ರಾಣವನ್ನು ಪೈಗಂಬರನಿಗಾಗಿ ಕೊಡುವಳೋ, ಅವಳನ್ನು ಸ್ವೀಕರಣೀಯಳನ್ನಾಗಿ ಮಾಡಿದ್ದೇವೆ.

ಅವರಲ್ಲಿ ಯಾರಿಗೆ ಬೇಕಾದರೂ ನೀನು ಅವಕಾಶ ಕೊಡಬಹುದು. ಮತ್ತು ಯಾವಳನ್ನು ಬಯಸುತ್ತೀಯೋ, ಅವಳಿಗೆ ನಿನ್ನ ಕಡೆ ಬರಲು ಎಡೆಕೊಡು. ನಿನ್ನ ಮೇಲೆ ಪಾಪವಿಲ್ಲ.

ಎಲೈ ಜನರೇ! ನಂಬಿಕೆಯುಳ್ಳವರಾಗಿರುವಿರಾದರೆ, ಪೈಗಂಬರನ ಮನೆಗಳೊಳಗೆ ಪ್ರವೇಶಿಸಬೇಡಿರಿ!

[ಕುರಾನ್:-ಮಂ. 5; ಸಿ. 22; ಸೂ. 33; ಆ. 33,37,38,40,50,51,53]

## (ಸ್ತ್ರೀಯರನ್ನು ಮನೆಯಲ್ಲಿ ನಿರ್ಬಂಧಿಸುವುದು ಅನ್ಯಾಯ)

ಸಮೀಕ್ಷಕ:—ಸ್ತ್ರೀಯು ಮನೆಯಲ್ಲಿ ಕೈದಿಯ ಹಾಗೆ ಇರುವುದು; ಮತ್ತು ಪುರುಷರು ಸ್ವಚ್ಛಂದದಿಂದ ಇರುವುದು ಮಹಾ ಅನ್ಯಾಯದ ಮಾತಾಗಿದೆ!

ಸ್ತ್ರೀಯರ ಚಿತ್ತವು ಶುದ್ಧ ವಾಯುವನ್ನೂ, ಶುದ್ಧ ಸ್ಥಾನದಲ್ಲಿ ತಿರುಗಾಡುವುದನ್ನೂ, ಸೃಷ್ಟಿಯ ಅನೇಕ ಪದಾರ್ಥಗಳನ್ನು ನೋಡುವುದನ್ನೂ, ಬಯಸದೇ ಇರಬಹುದೇನು?

ಇದೇ ಅಪರಾಧದಿಂದ, ಮುಸಲ್ಮಾನರ ಹುಡುಗರು ವಿಶೇಷವಾಗಿ ಉಚ್ಛೃಂಖಲರೂ, ವಿಷಯಾಸಕ್ತರೂ ಆಗಿರುತ್ತಾರೆ!

## (ತನ್ನ ಸ್ವಾರ್ಥಸಿದ್ಧಿಗಾಗಿ ಖುದಾನನ್ನು ಕೂಡ, ಜತೆಗೆ ಸೇರಿಸಿಕೊಂಡನು)

ಅಲ್ಲಾಹನ, ಮತ್ತು ರಸೂಲನ ಆಜ್ಞೆಗಳು ಒಂದು. ಹಾಗೂ ಅವಿರುದ್ಧವೂ ಆಗಿರುತ್ತವೋ; ಅಥವಾ ಬೇರೆ ಬೇರೆಯವೂ, ಹಾಗೂ ವಿರುದ್ಧವೂ ಆಗಿರುತ್ತವೋ? ಒಂದೇ ಆಗಿದ್ದರೆ. 'ಇಬ್ಬರ ಆಜ್ಞೆಯನ್ನೂ ಪಾಲಿಸಿರಿ', ಎಂದು ಹೇಳುವುದು ವ್ಯರ್ಥವಾಗಿರುತ್ತದೆ! ಮತ್ತು ಬೇರೆ ಬೇರೆಯೂ, ವಿರುದ್ಧವೂ ಆಗಿರುವುದಾದರೆ, ಒಂದು ಸತ್ಯ; ಮತ್ತು ಇನ್ನೊಂದು ಸುಳ್ಳು!

ಒಬ್ಬನು ಖುದಾ; ಮತ್ತೊಬ್ಬನು ಶೈತಾನ್ ಆಗಿ ಹೋಗುವನು! ಮತ್ತು ಭಾಗೀದಾರನೂ ಕೂಡ, ಆಗುವನು! ಶಾಬಾಶ್! ಕುರಾನಿನ ಖುದಾಗೆ! ಮತ್ತು ಪೈಗಂಬರನಿಗೆ!! ಹಾಗೂ ಕುರಾನಿಗೆ!!!

---

*ಇದಕ್ಕೆ 'ಮಿಹರ್' ಎನ್ನುತ್ತಾರೆ. ವಿವಾಹದ ಸಮಯದಲ್ಲಿ ವರನು ವಧುವಿಗೆ ಕೊಡುವ ಹಣ ಅಥವಾ ವಸ್ತು.—ಯು.ಮೀ.

ಯಾವನಿಗೆ ಬೇರೆಯವರ ಸ್ವಾರ್ಥವನ್ನು ಹಾಳುಮಾಡಿ, ತನ್ನ ಸ್ವಾರ್ಥವನ್ನು ಸಾಧಿಸಲು ಇಚ್ಛೆ ಇರುವುದೋ, [ಅವನು] ಇಂತಹ ಲೀಲೆಯನ್ನು ಅವಶ್ಯವಾಗಿ ರಚಿಸುತ್ತಾನೆ!

**(ಸೊಸೆಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳುವುದು ಅಧರ್ಮ)**

ಇದರಿಂದ, ಮುಹಮ್ಮದ್ ಸಾಹೇಬರು ಮಹಾ ವಿಷಯಾಸಕ್ತರಾಗಿದ್ದರು, ಎನ್ನುವುದೂ ಕೂಡ, ಸಿದ್ಧವಾಯಿತು! ಹಾಗೆ ಅಲ್ಲವಾಗಿದ್ದರೆ, ಯಾವಳು ಪುತ್ರ-ವಧುವಾಗಿದ್ದಳೋ, ಆ ಸಾಕು-ಪುತ್ರನ ಪತ್ನಿಯನ್ನು ತನ್ನ ಪತ್ನಿಯನ್ನಾಗಿ ಏಕೆ ಮಾಡಿಕೊಳ್ಳುತ್ತಿದ್ದರು? ಮತ್ತು ಪುನಃ ಇಂತಹ ವ್ಯವಹಾರಗಳನ್ನು ಮಾಡುವವನ ಖುದಾ ಕೂಡ, ಪಕ್ಷಪಾತಿಯಾದನು; ಮತ್ತು ಅನ್ಯಾಯವನ್ನು ನ್ಯಾಯವೆಂದು ತೀರ್ಪುಕೊಟ್ಟನು!

ಮಾನವರಲ್ಲಿ ಯಾವನು ಕಾಡುಮನುಷ್ಯನೂ ಆಗಿರುತ್ತಾನೋ, ಅವನೂ ಕೂಡ, ಮಗನ ಪತ್ನಿಯ ಮೇಲೆ ಕೈಹಾಕುವುದಿಲ್ಲ!

**(ಪೈಗಂಬರನು ಯಾರ ಅಪ್ಪನೂ ಆಗದಿದ್ದಲ್ಲಿ ಜೈದ್ ಯಾರ ಮಗನಾಗಿದ್ದನು?)**

ಮತ್ತು ಪೈಗಂಬರನಿಗೆ ವಿಷಯಾಸಕ್ತಿಯ ಲೀಲೆ ಮಾಡುವುದರಲ್ಲಿ ಯಾವುದೇ ಅಡ್ಡಿಯೂ ಇರಬಾರದೆನ್ನುವುದು, ಎಷ್ಟು ದೊಡ್ಡ ಅನ್ಯಾಯದ ವಿಷಯವಾಗಿದೆ! ಈ ಪೈಗಂಬರನು ಯಾವನ ತಂದೆಯೂ ಆಗಿರದಿದ್ದರೆ, ಜೈದನು ಯಾರ [ಸಾಕು]–ಮಗನಾಗಿದ್ದನು? ಮತ್ತು [ಹಾಗೆ] ಬರೆದರೇಕೆ?

ಮಗನ ಹೆಂಡತಿಯನ್ನೂ ಕೂಡ, ಮನೆಯಲ್ಲಿ ಇಟ್ಟುಕೊಂಡು ಬಿಡಲು ಪೈಗಂಬರ್ ಸಾಹೇಬರು ಹೇಸದೇ ಹೋದ ಸ್ವಾರ್ಥದ ಮಾತು ಇದಾಗಿರುವಾಗ, ಇನ್ನು ಬೇರೆಯವರಿಂದ ಹೇಗೆ ತಾನೇ ದೂರ ಉಳಿದಿದ್ದಾರು? ಇಂತಹ ಚಾತುರ್ಯ ದಿಂದಲೂ ಕೂಡ, ದುರ್ವ್ಯವಹಾರದಿಂದ, ನಿಂದೆ ತಟ್ಟುವುದು ಎಂದಿಗೂ ತಪ್ಪದು!

**(ಅನೇಕ ಸ್ತ್ರೀಯರನ್ನಿಟ್ಟುಕೊಳ್ಳುವುದು ದುಃಖದಾಯಕ)**

ಬೇರೆ ಯಾವಳಾದರೂ ಪರನಾರಿಯೂ ಕೂಡ, 'ನಬಿ'*ಯೊಂದಿಗೆ ಪ್ರಸನ್ನಳಾಗಿ 'ನಿಕಾಹ್'† ಮಾಡಿಕೊಳ್ಳಲಿಚ್ಛಿಸಿದರೆ, [ಅವಳೂ] ಸ್ವೀಕರಣೀಯಳೇನು?

---

*ಪೈಗಂಬರ್—ಸಂ.

†ವಿವಾಹ—ಸಂ.

ನಬೀ ಮಾತ್ರ ಯಾವಳನ್ನು ಬೇಕಾದರೂ ತ್ಯಜಿಸಬಹುದು; ಆದರೆ, ಮುಹಮ್ಮದ್ ಸಾಹೇಬರ ಹೆಂಡಂದಿರು, ಪೈಗಂಬರರು ಅಪರಾಧಿಗಳೇ ಆಗಿದ್ದರೂ ಕೂಡ, ಎಂದಿಗೂ ಅವರನ್ನು ಬಿಡಬಾರದು. ಎನ್ನುವುದು ಮಹಾ ಅಧರ್ಮದ ಸಂಗತಿಯಾಗಿದೆ!

## (ವ್ಯಭಿಚಾರವನ್ನು ಯಾರು ಮಾಡಿದರೂ ಕೂಡ, ಅದು ತಪ್ಪೇ!)

ಹೇಗೆ, ಪೈಗಂಬರರ ಮನೆಗಳಿಗೆ ಬೇರೆ ಯಾರೂ ಕೂಡ, ವ್ಯಭಿಚಾರ ಮಾಡುವ ಉದ್ದೇಶ್ಯದಿಂದ ಪ್ರವೇಶಿಸಬಾರದೋ, ಹಾಗೆಯೇ ಪೈಗಂಬರ್ ಸಾಹೇಬರೂ ಕೂಡ, ಯಾರ ಮನೆಗೂ ಪ್ರವೇಶಿಸಬಾರದು! ನಬೀ ಮಾತ್ರ ಯಾರ–ಯಾರದೇ ಮನೆಗೆ ಬೇಕಾದರೂ ನಿಃಶಂಕರಾಗಿ ಪ್ರವೇಶಿಸಬಹುದೋ? ಮತ್ತು ಮಾನ್ಯರೂ ಆಗಿರ ಬಹುದೋ?

## (ಅರಬ್‌ದೇಶವಾಸಿಗಳ ವ್ಯವಹಾರ ಆಶ್ಚರ್ಯಕರ!)

ಅಲ್ಲಾ! ಈ ಕುರಾನನ್ನು ಈಶ್ವರಕೃತವೆಂದೂ, ಮುಹಮ್ಮದ್ ಸಾಹೇಬರನ್ನು ಪೈಗಂಬರರೆಂದೂ, ಮತ್ತು ಈ ಕುರಾನಿನಲ್ಲಿ ಹೇಳಲ್ಪಟ್ಟಿರುವ ಈಶ್ವರನನ್ನು ಪರಮೇಶ್ವರನೆಂದೂ ಒಪ್ಪಿಕೊಳ್ಳಬಲ್ಲ 'ಹೃದಯದ ಅಂಧ'ನಾದರೂ ಯಾವನಿದ್ದಾನು?

ಇಂತಹ ಯುಕ್ತಿಶೂನ್ಯವೂ, ಧರ್ಮವಿರುದ್ಧವೂ ಆದ ಮಾತುಗಳಿಂದ ಯುಕ್ತ ವಾದ ಈ ಮತವನ್ನು ಅರಬ್‌ದೇಶನಿವಾಸಿಗಳೇ ಮೊದಲಾದ ಮಾನವರು ಅಂಗೀಕರಿಸಿಕೊಂಡುಬಿಟ್ಟರು, ಎನ್ನುವುದು ಮಹದಾಶ್ಚರ್ಯದ ಮಾತಾಗಿದೆ! [129]

## (ರಸೂಲನಿಗೆ ದುಃಖ ಕೊಡಬೇಡ; ಅವನ ಹೆಂಡಂದಿರೊಡನೆ ವಿವಾಹವಾಗುವುದು ಪಾಪ!)

[130] 'ರಸೂಲ'*ನಿಗೆ ದುಃಖವನ್ನುಂಟುಮಾಡುವುದು; ನಂತರ, ಅವನ ಪತ್ನಿಯರನ್ನು ಎಂದಿಗಾದರೂ ಮದುವೆಯಾಗುವುದು ನಿನಗೆ ಯೋಗ್ಯವಲ್ಲ! ಖುದಾನ ಬಳಿ ಅದು ಮಹಾ ಪಾಪವೆನ್ನುವುದು ನಿಶ್ಚಯವಾಗಿದೆ.

ನಿಶ್ಚಯವಾಗಿಯೂ ಯಾರು ಅಲ್ಲಾಹನಿಗೆ, ಮತ್ತು ಅವನ ರಸೂಲನಿಗೆ ದುಃಖವನ್ನುಂಟುಮಾಡುತ್ತಾರೋ, ಅವರಿಗೆ ಅಲ್ಲಾಹನು ಧಿಕ್ಕಾರ ಹಾಕಿದ್ದಾನೆ.

ಮತ್ತು ಯಾರು ಮುಸಲ್ಮಾನರಿಗೂ ಮತ್ತು ಮುಸಲ್ಮಾನ-ಸ್ತ್ರೀಯರಿಗೂ, ಅವರು ತಪ್ಪೇನನ್ನು ಮಾಡದಿದ್ದರೂ. ದುಃಖವನ್ನು ಕೊಡುತ್ತಾರೋ, ಅವರು

---

*ಪೈಗಂಬರ್, ನಬೀ, ರಸೂಲ ಇವೆಲ್ಲಾ ಸಂದೇಶವಾಹಕ-ಅರ್ಥದಲ್ಲಿ ಪರ್ಯಾಯ ಶಬ್ದಗಳು —ಸಂ.

ನಿಃಸಂದೇಹವಾಗಿ, ನಿಶ್ಚಯವಾಗಿಯೂ ನಿಂದೆಯನ್ನು, ಎಂದರೆ ಸುಳ್ಳನ್ನು ಮತ್ತು ಪ್ರತ್ಯಕ್ಷ ಪಾಪವನ್ನು ಹೊತ್ತುಕೊಂಡಿದ್ದಾರೆ!

ಎಲ್ಲಿ ಕಂಡುಬರುವರೋ, ಅಲ್ಲಿ ಅವರು ಧಿಕ್ಕರಿಸಲ್ಪಡಲಿ! ಕೊಲ್ಲಲ್ಪಡಲಿ! ಹಿಡಿಯಲ್ಪಡಲಿ ! ಚೆನ್ನಾಗಿ ವಧಿಸಲ್ಪಡಲಿ !

ಓ ನಮ್ಮ ರಕ್ಷಕನೇ! ಅವರಿಗೆ ದ್ವಿಗುಣ ಶಿಕ್ಷೆಯನ್ನು ಕೊಡು! ಮತ್ತು ದೊಡ್ಡಕ್ಕಿಂತ ದೊಡ್ಡ ಧಿಕ್ಕಾರವನ್ನು ಹಾಕು.

[ಕುರಾನ್:-ಮಂ. 5; ಸಿ. 22; ಸೂ. 33; ಆ. 53, 57, 58, 61, 68]

## (ಯಾರಿಗೂ ದುಃಖ ಕೊಡಬೇಡವೆಂದು ಏಕೆ ಹೇಳಲಿಲ್ಲ?)

**ಸಮೀಕ್ಷಕ:**—ಆಹಾ! ಖುದಾ ತನ್ನ ಖುದಾತನವನ್ನು ಧರ್ಮದೊಂದಿಗೆ ಹೇಗೆ ಪ್ರಕಟಪಡಿಸುತ್ತಿದ್ದಾನೆ !

ರಸೂಲನಿಗೆ ದುಃಖ ಕೊಡುವುದನ್ನು ನಿಷೇಧಿಸುವುದೇನೋ ಸರಿಯಾಗಿದೆ ! ಆದರೆ, **ಅನ್ಯರಿಗೆ ದುಃಖ ಕೊಡುವುದರಲ್ಲಿ ರಸೂಲನನ್ನೂ ಕೂಡ, ತಡೆಗಟ್ಟುವುದು ಯೋಗ್ಯವಾಗಿತ್ತು ! ಅವನನ್ನೇತಕ್ಕೆ ತಡೆಯಲಿಲ್ಲ ?**

ಯಾವನಿಗಾದರೂ ದುಃಖವನ್ನು ಕೊಡುವುದರಿಂದ ಅಲ್ಲಾಹನೂ ಕೂಡ, ದುಃಖಿತನಾಗಿ ಹೋಗುತ್ತಾನೇನು ? ಹೀಗಿರುವುದಾದರೆ, ಅವನು ಈಶ್ವರನೇ ಆಗಲಾರನು! ಅಲ್ಲಾಹನಿಗೆ ಮತ್ತು ರಸೂಲನಿಗೆ ದುಃಖ ಕೊಡುವುದರ ನಿಷೇಧವನ್ನು ಮಾಡಿರುವುದರಿಂದ, ಅಲ್ಲಾಹನು ಮತ್ತು ರಸೂಲನು ಯಾವನಿಗೆ ಬೇಕಾದರೂ ದುಃಖ ಕೊಡಬಹುದು, ಎನ್ನುವುದು ಸಿದ್ಧವಾಗುವುದಿಲ್ಲವೇನು? ಅನ್ಯರೆಲ್ಲರಿಗೂ ದುಃಖವನ್ನು ಕೊಡಬೇಕೇನು?

**ಹೇಗೆ, ಮುಸಲ್ಮಾನರಿಗೂ, ಮುಸಲ್ಮಾನ ಸ್ತ್ರೀಯರಿಗೂ ದುಃಖವನ್ನೀಯುವುದು ಕೆಟ್ಟದಾಗಿರುವುದೋ, ಹಾಗೆಯೇ, ಇವರಿಂದ ಬೇರೆಯಾದ ಮಾನವರಿಗೆ ದುಃಖವನ್ನುಂಟುಮಾಡುವುದೂ ಕೂಡ, ಅವಶ್ಯವಾಗಿ ಕೆಟ್ಟದಾಗಿದೆ !** ಯಾವನು ಒಪ್ಪುವುದಿಲ್ಲವೋ, ಅವನ ಈ ಚರ್ಯೆಯೂ ಪಕ್ಷಪಾತಯುಕ್ತವೇ ಆಗಿರುತ್ತದೆ !

## (ಇತರರನ್ನು ಕೊಲ್ಲುವ ಮಾತು ಮಹಾ ಅಧರ್ಮ)

ಭೇಷ್! ದಂಗೆಯನ್ನೆಬ್ಬಿಸುವ ಖುದಾ ಮತ್ತು ನಬೀ! ಹೇಗೆ ಇಂತಹ ನಿರ್ದಯಿಗಳು ಜಗತ್ತಿನಲ್ಲಿದ್ದಾರೋ, ಅಂತಹವರು ಬೇರೆ ಬಹಳ ಕಡಿಮೆ ಇರಬಹುದು!

**ಹೇಗೆ**—'ಬೇರೆಯ ಜನರು ಎಲ್ಲಿ ಸಿಕ್ಕುವರೋ, ಅಲ್ಲಿ ಕೊಲ್ಲಲ್ಪಡಲಿ; ಹಿಡಿಯಲ್ಪಡಲಿ!', ಎಂದು ಬರೆದಿದೆಯೋ, ಹಾಗೆಯೇ, ಮುಸಲ್ಮಾನರ ಬಗೆಗೆ

ಯಾರಾದರೂ ಆಜ್ಞೆಯನ್ನಿತ್ತು ಪ್ರಕಟಿಸಿದರೆ, ಮುಸಲ್ಮಾನರಿಗೆ ಇಂತಹ ಆಜ್ಞೆ ಕೆಟ್ಟದಾಗಿ ತೋರುವುದೋ, ಅಥವಾ ಇಲ್ಲವೋ?

ಭಾಪು! ಈ ಪೈಗಂಬರ ಮೊದಲಾದವರು ಎಂತಹ ಹಿಂಸಕರು! ಪರಮೇಶ್ವರನನ್ನು ಪ್ರಾರ್ಥಿಸಿ, ಅನ್ಯರಿಗೆ ತಮಗಿಂತ ಎರಡರಷ್ಟು ಶಿಕ್ಷೆಯನ್ನು ವಿಧಿಸುವುದಕ್ಕಾಗಿ ಕೋರಬೇಕೆಂದು ಬರೆದಿದ್ದಾರಲ್ಲ? ಇದೂ ಕೂಡ, ಪಕ್ಷಪಾತದ, ಸ್ವಾರ್ಥಸಾಧನೆಯ ಮತ್ತು ಮಹಾ ಅಧರ್ಮದ ವಿಷಯವೇ ಆಗಿದೆ!

ಇದರಿಂದಾಗಿ, ಈಗಿನ ವರೆಗೂ ಕೂಡ, ಮುಸಲ್ಮಾನರಲ್ಲಿ ಬಹು ಮಂದಿ ದುಷ್ಟರು ಇದೇ ಬಗೆಯ ಕಾರ್ಯ ಮಾಡಲು ಹೆದರುವುದಿಲ್ಲ!

ಶಿಕ್ಷಣವಿಲ್ಲದಿದ್ದರೆ, ಮಾನವರು ಪಶುಗಳಿಗೆ ಸಮಾನರಾಗಿರುತ್ತಾರೆ, ಎನ್ನುವುದು ಸರಿಯಾಗಿದೆ!* [130]

## (ಹೆಣಗಳನ್ನು ಜೀವಂತಗೊಳಿಸುವುದು)

[131] ಮತ್ತು ಗಾಳಿಯನ್ನು ಕಳುಹಿಸುವ ಪುರುಷನಾಗಿದ್ದಾನೆ ಅಲ್ಲಾಹನು. ಸರಿ! [ಆ ಗಾಳಿ] ಎಬ್ಬಿಸುತ್ತದೆ ಮೋಡಗಳನ್ನು! ಸರಿ! ನಾವು ಅದನ್ನು ನಿರ್ಜೀವ ನಗರದ ಕಡೆಗೆ ಓಡಿಸಿಬಿಡುತ್ತೇವೆ. ಸರಿ! ನಾವು ಅದರಿಂದ ಪೃಥಿವಿಯನ್ನು ಸಜೀವಗೊಳಿಸಿದೆವು, ಅದರ ಸಾವಿನ ನಂತರ! ಇದೇ ರೀತಿಯಲ್ಲಿ, ಗೋರಿಗಳಿಂದ ಹೊರಡಿಸಬೇಕಾಗಿದೆ.

ತನ್ನ ದಯೆಯಿಂದ ಸದಾ ಕಾಲಕ್ಕೂ ಇರುವಂತಹ ಮನೆಯನ್ನು ಅವನು ಮಧ್ಯದಲ್ಲಿ ನಿರ್ಮಿಸಿದ್ದಾನೆ. ಅದರ ಮಧ್ಯೆ ನಮಗೆ ಅದರ ಪರಿಶ್ರಮ ತೋರದು; ಮತ್ತು ಅದರ ಮಧ್ಯೆ ಆಯಾಸವೂ ತೋರುತ್ತಿಲ್ಲ.

[ಕುರಾನ್:-ಮಂ. 5; ಸಿ. 22; ಸೂ. 35; ಆ. 9, 35]

## (ಹೆಣಗಳನ್ನು ಜೀವಂತಗೊಳಿಸುವ ಮಾತು ಅಸಂಭವ)

**ಸಮೀಕ್ಷಕ:**—ಆಹಾ! ಎಂತಹ 'ಫಿಲಾಸಫೀ' ಖುದಾನದು! ವಾಯುವನ್ನು ಕಳುಹುತ್ತಾನೆ! ಅದು ಮೋಡಗಳನ್ನು ಎಬ್ಬಿಸುತ್ತಾ ತಿರುಗಾಡುತ್ತದೆ! ಮತ್ತು ಖುದಾ ಅದರಿಂದ ಶವಗಳನ್ನು ಸಜೀವಗೊಳಿಸುತ್ತಾ ಅಲೆಯುತ್ತಾನೆ.

ಈ ಮಾತು ಎಂದಿಗೂ ಈಶ್ವರನಿಗೆ ಸಂಬಂಧಪಟ್ಟುದು ಆಗಲಾರದು. ಏಕೆಂದರೆ, ಈಶ್ವರನ ಕಾರ್ಯವು ನಿರಂತರವೂ ಏಕಪ್ರಕಾರವಾಗಿ ನಡೆಯುತ್ತಾ ಹೋಗುತ್ತದೆ!

---

*ಈ ಮಾತು ಮುಸಲ್ಮಾನರಿಗೆ ಸದಾ ಕಾಲಕ್ಕೂ ಅನ್ವಯಿಸುತ್ತದೆ! ಏಕೆಂದರೆ, ಕೇವಲ ಕುರಾನಿನ ಅಧ್ಯಯನಮಾತ್ರವೇ ಶಿಕ್ಷಣವೆಂದು ಅವರು ಅಂಗೀಕರಿಸುತ್ತಾರೆ.—ಸಂ.

ಮನೆಗಳು ಇರುವುದಾದರೆ, ಅವು [ಯಾರೂ] ನಿರ್ಮಿಸದೇ ಆಗಲಾರವು. ಮತ್ತು ಯಾವುದು ನಿರ್ಮಿತವಾಗಿರುವುದೋ, ಅದು ಸದಾ ಇರಲಾರದು!

ಯಾವನಿಗೆ ಶರೀರವಿದೆಯೋ, ಅವನು ಪರಿಶ್ರಮವಿಲ್ಲದಿದ್ದರೆ, [ನಿಷ್ಕ್ರಿಯನಾಗಿ] ದುಃಖಿತನಾಗುತ್ತಾನೆ! ಮತ್ತು ಶರೀರಧಾರಿಯು ರೋಗಿಯಾಗದೇ ಎಂದಿಗೂ ಉಳಿಯಲಾರನು!

### (ಅನೇಕ ಸ್ತ್ರೀಯರೊಡನೆ ಸಂಭೋಗ ದುಃಖದಾಯಕ)

ಯಾವನು ಒಬ್ಬಳು ನಾರಿಯೊಂದಿಗೆ ಸಮಾಗಮ ಮಾಡುತ್ತಾನೋ, ಅವನು ರೋಗಿಯಾಗದೇ ಉಳಿಯಲಾರನು! ಎಂದ ಮೇಲೆ, ಯಾವನು ಬಹುಮಂದಿ ನಾರಿಯರೊಂದಿಗೆ ವಿಷಯೋಪಭೋಗ ಮಾಡುತ್ತಾನೋ, ಅವನ ದುರವಸ್ಥೆ ಮತ್ತೆ ಇನ್ನೆಷ್ಟು ಆಗುತ್ತಿರಬಹುದು?

ಆದುದರಿಂದ, ಮುಸಲ್ಮಾನರ ಸ್ವರ್ಗದಲ್ಲಿನ ಇರುವಿಕೆಯೂ ಕೂಡ, ಸದಾ ಸುಖದಾಯಕವಾಗಿರಲಾರದು! [131]

### (ಖುದಾನಿಂದ ಕುರಾನಿನ ಮೇಲೆ ಆಣೆ)

**[132] ದೃಢವಾದ ಕುರಾನಿನ ಆಣೆಯಿದೆ.**
**ನಿಶ್ಚಯವಾಗಿಯೂ ನೀನು ಕಳುಹಿಸಲ್ಪಟ್ಟವರಲ್ಲಿ ಒಬ್ಬನಾಗಿರುತ್ತೀಯೆ.**
**ಆ ನೇರವಾದ ಮಾರ್ಗದ ಮೇಲೆ.**
**ಮಹಾಶಕ್ತನಾದ ದಯಾಳುವು ಇಳಿಸಿದ್ದಾನೆ.**

[ಕುರಾನ್:—ಮಂ. 5; ಸಿ. 23; ಸೂ. 36; ಆ. 2–5]

### (ಖುದಾ ಕುರಾನಿನ ಮೇಲೆ ಆಣೆ ಏಕಿಡುತ್ತಾನೆ?)

ಸಮೀಕ್ಷಕ:—ಈಗ ನೋಡಿರಿ! ಈ ಕುರಾನ್ ಖುದಾ ರಚಿಸಿದುದಾಗಿದ್ದರೆ, ಅವನು ಇದರ ಮೇಲೆ ಆಣೆ ಏತಕ್ಕೆ ಇಡುತ್ತಿದ್ದನು?

ಒಂದು ವೇಳೆ, ನಬೀ ಖುದಾನಿಂದ ಕಳುಹಲ್ಪಟ್ಟವನಾಗಿದ್ದಿದ್ದರೆ, ತನ್ನ ಸಾಕು-ಮಗನ ಹೆಂಡತಿಯ ಮೇಲೇಕೆ ಮೋಹಿತನಾಗುತ್ತಿದ್ದನು?

### (ಕುರಾನಿನಲ್ಲಿ ಹೇಳಿರುವ ಮಾರ್ಗ ನೇರವಾದ ಮಾರ್ಗವಲ್ಲ)

'ಕುರಾನನ್ನು ಅಂಗೀಕರಿಸುವವರು ನೇರವಾದ ಮಾರ್ಗದಲ್ಲಿದ್ದಾರೆ', ಎನ್ನುವುದು ಕಥನಮಾತ್ರವಾಗಿದೆ!

ಏಕೆಂದರೆ, ಯಾವುದರಲ್ಲಿ ಸತ್ಯದ ಅಂಗೀಕಾರ, ಸತ್ಯಭಾಷಣ, ಸತ್ಯಾಚರಣ, ಪಕ್ಷಪಾತರಹಿತವಾದ ನ್ಯಾಯ-ಧರ್ಮದ ಅನುಷ್ಠಾನ ಮೊದಲಾದುವುಗಳಿವೆಯೋ, ಮತ್ತು ಅವುಗಳಿಗೆ ಪ್ರತಿಕೂಲವಾದುದರ ಪರಿತ್ಯಾಗವಿದೆಯೋ, ಅದೇ 'ನೇರವಾದ ಮಾರ್ಗ'ವಾಗಿರುತ್ತದೆ!

ಆದರೆ, ಇಂತಹ ಸ್ವಭಾವವು* ಕುರಾನಿನಲ್ಲಿಯೂ ಇಲ್ಲ! ಮುಸಲ್ಮಾನರಲ್ಲಿಯೂ ಇಲ್ಲ!! ಮತ್ತು ಇವರ ಖುದಾನಲ್ಲಿಯೂ ಇಲ್ಲ!!!

ಮುಹಮ್ಮದ್ ಸಾಹೇಬರು ಎಲ್ಲರಿಗಿಂತಲೂ ಪ್ರಬಲರಾದ ಪೈಗಂಬರರಾಗಿದ್ದಿದ್ದರೆ, ಎಲ್ಲರಿಗಿಂತ ಅಧಿಕ ವಿದ್ಯಾವಂತರೂ, ಮತ್ತು ಶುಭಗುಣಯುಕ್ತರೂ ಆಗಿರುತ್ತಿರಲಿಲ್ಲವೇಕೆ?

ಆದುದರಿಂದ, ಹೇಗೆ, ತರಕಾರಿ ಮಾರುವವಳು ತನ್ನ ಎಲಚೀ ಹಣ್ಣುಗಳನ್ನು [ಎಂದಿಗೂ] ಹುಳಿ, ಎಂದು ಹೇಳುವುದಿಲ್ಲವೋ, ಹಾಗೆಯೇ ಈ ಮಾತೂ ಇದೆ! [132]

## (ಗೋರಿಗಳಿಂದ ಹೊರಬಂದು, ಓಡುವುದು)

**[133] ಮತ್ತು ತುತ್ತೂರಿಯ ಸ್ವರ ಆ ನಡುವೆ ಮೊಳಗುವುದು. ಸರಿ! ಇದ್ದಕ್ಕಿದ್ದಂತೆಯೇ ಅವರು ತಮ್ಮ ತಮ್ಮದಾದ ಗೋರಿಗಳಿಂದ ಎದ್ದು, ತಮ್ಮ ಪ್ರಭುವಿನ ಕಡೆಗೆ ಓಡುವರು.**

**ಮತ್ತು ಅವರ ಪಾದಗಳು ಅವರು ಸಂಪಾದಿಸುತ್ತಿದ್ದ ಆ ವಸ್ತುವಿನೊಡನೆ ಸಾಕ್ಷ್ಯವನ್ನು ಕೊಡುವುವು.**

**ಅವನ ಆಜ್ಞೆಯಿಲ್ಲದೇ ಯಾವುದೂ ಆಗುವುದಿಲ್ಲ. ಯಾವುದಾದರೂ ವಸ್ತುವನ್ನು ಅವರುಗಳ ಸಲುವಾಗಿ ನಿರ್ಮಿಸಲಪೇಕ್ಷಿಸುವಾಗ—**

**"ಆಗಿಹೋಗು.", ಎನ್ನುತ್ತಾನೆ. ಸರಿ! ಅದು ಆಗಿಹೋಗುತ್ತದೆ!**

**[ಕುರಾನ್:-ಮಂ. 5; ಸಿ. 23; ಸೂ. 36; ಆ. 51, 65, 82]**

## (ಕಾಲುಗಳು ಸಾಕ್ಷ್ಯ ಹೇಳಬಲ್ಲವೇನು?)

**ಸಮೀಕ್ಷಕ:**—ಈಗ ಆಲಿಸಿರಿ, ತಲೆ-ಬಾಲಗಳಿಲ್ಲದ ಮಾತುಗಳನ್ನು! ಪಾದಗಳು ಎಂದಾದರೂ ಸಾಕ್ಷ್ಯಕೊಡಬಲ್ಲವೇನು? ಖುದಾನ ಹೊರತು ಅದಕ್ಕೆ ಆಜ್ಞೆ ಕೊಡಲು ಆ ಸಮಯದಲ್ಲಿ ಯಾವುದಿತ್ತು? ಯಾವುದು ಆಲಿಸಿತು? ಮತ್ತು ಆಗಿಹೋದುದು ಯಾವುದು? [ಯಾವುದೂ] 'ಇರಲಿಲ್ಲ', ಎಂಬ ಪಕ್ಷದಲ್ಲಿ, ಈ ವಚನವೇ ಸುಳ್ಳು!

---

*ವಿಧಿ-ನಿಷೇಧಗಳು –ಅನು.

ಮತ್ತು, 'ಇದ್ದಿತು.', ಎಂಬ ಪಕ್ಷದಲ್ಲಿ—'ಖುದಾನ ಹೊರತು, ಯಾವುದೇ ವಸ್ತುವೂ ಇರಲಿಲ್ಲ. ಮತ್ತು ಖುದಾ ಎಲ್ಲವನ್ನೂ ಸೃಜಿಸಿದನು.', ಎಂಬ ವಚನ ಸುಳ್ಳಾಗಿ ಹೋಗುತ್ತದೆ! [133]

## (ಸ್ವರ್ಗದಲ್ಲಿ ಮದ್ಯ ಮತ್ತು ಸ್ತ್ರೀಯರು! ಲೂತನ ಮುಕ್ತಿ)

[134] ಅದರ ನಂತರ, ಶುದ್ಧವಾದ ಮದ್ಯದ ಪಾತ್ರೆ ಸುತ್ತಾಡಿಸಲ್ಪಡುವುದು!

ಕುಡಿಯುವವರಿಗೆ ಸರ್ವದಾ ಹರ್ಷ ಕೊಡುವಂತಹುದು !

ಅವರ ಸಮೀಪದಲ್ಲಿ, ದೃಷ್ಟಿಯನ್ನು ಕೆಳಗೆ ಬಾಗಿಸಿರುವ, [ಸ್ತ್ರೀಯರು] ಕುಳಿತಿರುವರು ! ಸುಂದರವಾದ ಕಣ್ಣುಗಳನ್ನುಳ್ಳವರು !

ಬಚ್ಚಿಡಲ್ಪಟ್ಟ ಮೊಟ್ಟೆಗಳಂತಿರುವ ಕಣ್ಣುಗಳನ್ನುಳ್ಳವರು!

ಆಯಿತು! ನಾವು ಸಾಯುವುದಿಲ್ಲವೇನು !

ಮತ್ತು ಅವಶ್ಯವಾಗಿ 'ಲೂತ'ನು ಪೈಗಂಬರರಲ್ಲಿ ನಿಶ್ಚಯವಾಗಿ ಒಬ್ಬನಾಗಿದ್ದನು.

ಆಗ ನಾವು ಅವನಿಗೆ, ಮತ್ತು ಅವನ ಜನರೆಲ್ಲರಿಗೆ ಮುಕ್ತಿಯಿತ್ತೆವು.

ಆದರೆ, ವೃದ್ಧೆಯೊಬ್ಬಳು ಹಿಂದೆ ಉಳಿದವರಲ್ಲಿದ್ದಾಳೆ.

ಮತ್ತು ನಾವು ಬೇರೆಯವರನ್ನು ಸಂಹರಿಸಿದೆವು.

[ಕುರಾನ್:-ಮಂ. 6; ಸಿ. 23; ಸೂ. 32; ಆ. 45,46,48,49,58,133-136]

## (ಸ್ವರ್ಗದಲ್ಲಿ ಮದ್ಯ ಮತ್ತು ಸ್ತ್ರೀಯರ ಕಾರಣದಿಂದ ದುರ್ಗತಿ)

**ಸಮೀಕ್ಷಕ:**—ಏನು ಸ್ವಾಮಿ! ಇಲ್ಲಿಯಂತೂ, ಮುಸಲ್ಮಾನರುಗಳು ಮದ್ಯವನ್ನು ಕೆಟ್ಟದೆನ್ನುತ್ತಾರೆ! ಆದರೆ, ಅವರ ಸ್ವರ್ಗದಲ್ಲಿಯಂತೂ, [ಮದ್ಯದ] ನದಿಗಳಿಗೆ ನದಿಗಳೇ ಹರಿಯುತ್ತಿವೆಯಲ್ಲ! ಇಲ್ಲಿಯಂತೂ, ಯಾವ ರೀತಿಯಿಂದಲೋ, ಮದ್ಯ ಕುಡಿಯುವುದನ್ನು ಬಿಡಿಸಿದರು! ಇಷ್ಟೇನೋ ಒಳ್ಳೆಯದೇ ಆಗಿದೆ! ಆದರೆ, 'ಇಲ್ಲಿಗೆ' ಪ್ರತಿಯಾಗಿ ಅಲ್ಲಿ, ಅವರ ಸ್ವರ್ಗದಲ್ಲಿ, ದೊಡ್ಡ ಕೇಡಿದೆ!

ಸ್ತ್ರೀಯರ ಕಾರಣದಿಂದ, ಅಲ್ಲಿ ಯಾವನ ಚಿತ್ತವೂ ಸ್ಥಿರವಾಗಿರಲಾರದೇನೋ? ಮತ್ತು ದೊಡ್ಡ-ದೊಡ್ಡ ರೋಗಗಳೂ ಕೂಡ, ಉಂಟಾಗುತ್ತಿರಬಹುದು!

ಶರೀರಯುಕ್ತರಾಗಿರುವರಾದರೆ, ಅವಶ್ಯವಾಗಿ ಸಾಯುವರು! ಮತ್ತು ಶರೀರಯುಕ್ತರಾಗಿರುವುದಿಲ್ಲವಾದರೆ, ಭೋಗ-ವಿಲಾಸಗಳನ್ನೇ ಅನುಭವಿಸಲಾರರು! ಮತ್ತೆ, ಅವರ ಸ್ವರ್ಗಕ್ಕೆ ಹೋಗುವಿಕೆಯು ವ್ಯರ್ಥವಾಗಿದೆ !

### (‘ಲೂತ’ನಂತಹ ಮದ್ಯಪಾಯಿ; ಆದರೂ ಪೈಗಂಬರ್!)

ಲೂತನನ್ನು ಪೈಗಂಬರನೆಂದು ಅಂಗೀಕರಿಸುತ್ತೀರಾದರೆ,—‘ಅವನೊಂದಿಗೆ ಅವನ ಹೆಣ್ಣು ಮಕ್ಕಳು ಸಮಾಗಮವನ್ನು ಮಾಡಿ, ಇಬ್ಬರು ಪುತ್ರರನ್ನು ಉತ್ಪನ್ನ ಮಾಡಿದರು’, ಎಂದು ಬೈಬಲಿನಲ್ಲಿ ಬರೆದಿರುವ ಮಾತನ್ನೂ ಕೂಡ, ಒಪ್ಪಿಕೊಳ್ಳು ತ್ತೀರೋ, ಅಥವಾ ಇಲ್ಲವೋ? ಒಪ್ಪಿಕೊಳ್ಳುವಿರಾದರೆ, ಇಂತಹವನನ್ನು ಪೈಗಂಬರ ನೆಂದು ಅಂಗೀಕರಿಸುವುದು ವ್ಯರ್ಥವಾಗಿರುತ್ತದೆ!

ಮತ್ತು ಇಂತಹವರಿಗೂ, ಮತ್ತು ಇಂತಹವರ ಸಂಗಾತಿಗಳಿಗೂ ಖುದಾ ಮುಕ್ತಿ ಯನ್ನು ಕೊಡುತ್ತಾನೆಯಾದರೆ, ಆ ಖುದಾ ಕೂಡ, ಅಂತಹವನೇ ಆಗಿರುತ್ತಾನೆ! ಏಕೆಂದರೆ, ಅಡಗೂಲಜ್ಜಿಯ ಕತೆಯನ್ನು ಹೇಳುವವನೂ, ಮತ್ತು ಪಕ್ಷಪಾತದಿಂದ ಬೇರೆಯವರನ್ನು ಕೊಲ್ಲುವವನೂ ಎಂದಿಗೂ ಖುದಾ ಆಗಲಾರನು!

ಇಂತಹ ಖುದಾ ಮುಸಲ್ಮಾನರ ಮನೆಗಳಲ್ಲಿ ಮಾತ್ರ ಇರಬಲ್ಲನು! ಬೇರೆಡೆಗೆ ಸಲ್ಲನು!

[134]

### (ಸ್ವರ್ಗದ ದೃಶ್ಯ! ಶೈತಾನನು ಖುದಾನ ಮಾತನ್ನೊಪ್ಪಲಿಲ್ಲ)

[135] ಸ್ವರ್ಗಗಳಿವೆ ಸದಾ ಇರುವಂತಹವು! ಅವುಗಳ ಬಾಗಿಲುಗಳು ತೆರೆಯಲ್ಪಟ್ಟಿವೆ ಅವರ ಸಲುವಾಗಿ!

ಅವುಗಳ ನಡುವೆ ಒರಗು ದಿಂಬುಗಳು ಇಡಲ್ಪಟ್ಟಿವೆ. ಇದರ ನಡುವೆ ತರಿಸಿಕೊಳ್ಳುವರು, ಒಣ ಹಣ್ಣುಗಳನ್ನು ಮತ್ತು ಕುಡಿಯುವ ವಸ್ತುವನ್ನು !

ಮತ್ತು ಅವರ ಸಮೀಪದಲ್ಲಿ ದೃಷ್ಟಿಯನ್ನು ಕೆಳಕ್ಕೆ ಇಟ್ಟುಕೊಂಡಿರುವ, ಸಮವಯಸ್ಕರಾದ ಸ್ತ್ರೀಯರಿರುವರು!

ಆಯಿತು! ದೇವದೂತರೆಲ್ಲರೂ ಪ್ರಣಾಮವನ್ನು ಮಾಡಿದರು.

ಆದರೆ, ಶೈತಾನನು ಒಪ್ಪಲಿಲ್ಲ! ದುರಭಿಮಾನಪಟ್ಟನು, ಮತ್ತು ಕಾಫಿರರ ಗುಂಪಿನವನಾಗಿದ್ದನು!

“ಓ ಶೈತಾನ್! ಯಾವುದನ್ನು ನಾನು ನನ್ನ ಎರಡು ಕೈಗಳಿಂದಲೂ ಮಾಡಿದ್ದನೋ, ಆ ವಸ್ತುವಿಗೆ ನಮಿಸಬೇಕೆಂದು ಆಜ್ಞಾಪಿಸಿದಾಗ, ನಿನ್ನನ್ನು ತಡೆದ ವಸ್ತುವಾವುದು? ನೀನು ಗರ್ವಪಟ್ಟೆಯಾ ? ಅಥವಾ ದೊಡ್ಡ ವಿದ್ರೋಹಿಗಳ ಕಡೆಯವನಾಗಿದ್ದೆಯೋ?”

[ಅವನು]—“ನಾನು ಆ ವಸ್ತುವಿಗಿಂತ ಉತ್ತಮನಾಗಿದ್ದೇನೆ. ನೀನು ನನ್ನನ್ನು ಅಗ್ನಿಯಿಂದ ಸೃಜಿಸಿದೆ! ಅವನನ್ನು ಮಣ್ಣಿನಿಂದ!”, ಎಂದನು.

[ಅವನು]—“ಸರಿ ! ಹೊರಡು ಈ ಆಕಾಶಗಳಲ್ಲಿಂದ ! ಆಯಿತು ! ನಿಜ ವಾಗಿಯೂ ನೀನು ಹೊರಡಿಸಲ್ಪಟ್ಟಿದ್ದೀಯೆ”.

"ನಿಶ್ಚಯುವಾಗಿ ನಿನ್ನ ಮೇಲೆ ನನ್ನ ಧಿಕ್ಕಾರವಿದೆ, ನ್ಯಾಯ-ಶೀರ್ಮಾನದ ದಿನದ ವರೆಗೆ.", ಎಂದನು.

[ಅವನು]—"ಓ ನನ್ನ ಸ್ವಾಮಿ! ಶವಗಳು ಎಬ್ಬಿಸಲ್ಪಡುವ ದಿನದ ವರೆಗೆ ಅವಕಾಶ ಕೊಡು.", ಎಂದನು.

[ಅವನು]—"ಆಯಿತು! ನಿಜವಾಗಿ ನೀನು ಅವಕಾಶ ಕೊಡಲ್ಪಡುವವರಲ್ಲಿದ್ದೀಯೆ. ಆ ದಿನದ ಗೊತ್ತಾದ ಸಮಯುದವರೆಗೆ.", ಎಂದನು.

[ಅವನು]—"ಸರಿ ! ನಿನ್ನ ಪ್ರತಿಷ್ಠೆಯು ಆಣೆ ! ಅವಶ್ಯವಾಗಿ ನಾನು ಅವರನ್ನು ಒಟ್ಟಾಗಿ ಪಥಭ್ರಷ್ಟರನ್ನಾಗಿ ಮಾಡುವೆನು.", ಎಂದನು.

[ಕುರಾನ್:-ಮಂ. 6; ಸಿ. 23; ಸೂ. 38; ಆ. 50, 52,73.82]

## (ಉದ್ಯಾನ-ಉಪವನಗಳು ಅನಿತ್ಯವಾದುದರಿಂದ ಸ್ವರ್ಗವೂ ಅನಿತ್ಯ)

**ಸಮೀಕ್ಷಕ:**—ಅಲ್ಲಿ, ಕುರಾನಿನಲ್ಲಿ ಬರೆದಿರುವಂತೆ ತೋಟ-ತುಡಿಕೆ, ಕಾಲುವೆಗಳು, ಮನೆ ಮೊದಲಾದುವು ಇರುವುವಾದರೆ, ಅವು ಸದಾ ಇರಲಿಲ್ಲ ! ಸದಾ ಇರಲೂ ಶಕ್ಯವಲ್ಲ! ಏಕೆಂದರೆ, ಯಾವ ಪದಾರ್ಥವು ಸಂಯೋಗದಿಂದ ಆಗುತ್ತದೋ, ಅದು ಸಂಯೋಗಕ್ಕೆ ಮೊದಲು ಇರಲಿಲ್ಲ. ಅವಶ್ಯವಾಗಿ, ಆಗಲಿರುವ ವಿಯೋಗದ ಅಂತದಲ್ಲಿ ಇರುವುದೂ ಇಲ್ಲ !

ಯಾವಾಗ ಸ್ವರ್ಗವೇ ಇರುವುದಿಲ್ಲವೋ, ಆಗ ಅದರಲ್ಲಿರುವವರು ಸದಾ ಹೇಗೆ ತಾನೇ ಇರಬಲ್ಲರು? ಏಕೆಂದರೆ, 'ಹಾಸಿಗೆ, ದಿಂಬುಗಳು, ಒಣ ಹಣ್ಣುಗಳು ಮತ್ತು ಕುಡಿಯುವ ಪದಾರ್ಥಗಳು ಅಲ್ಲಿ ಸಿಕ್ಕುವುವು', ಎಂದು ಬರೆದಿದೆ. ಇದರಿಂದ, ಯಾವ ಕಾಲದಲ್ಲಿ ಮುಸಲ್ಮಾನರ ಮತ ಪ್ರಚಲಿತವಾಯಿತೋ, ಆ ಕಾಲದಲ್ಲಿ ಅರಬ್ ದೇಶವು ವಿಶೇಷ ಧನಾಢ್ಯವಾಗಿರಲಿಲ್ಲ, ಎಂದು ಸಿದ್ಧವಾಗುತ್ತದೆ ! ಆದುದರಿಂದಲೇ, ಮುಹಮ್ಮದ್ ಸಾಹೇಬರು ದಿಂಬು ಮೊದಲಾದುವುಗಳ ಕಥೆಯನ್ನು ಹೇಳಿ, ಬಡವರನ್ನು ತಮ್ಮ ಮತದಲ್ಲಿ ಸಿಕ್ಕಿಸಿಕೊಂಡು ಬಿಟ್ಟರು!

## (ಎಲ್ಲಿ ಸ್ತ್ರೀಯರಿರುತ್ತಾರೋ, ಅಲ್ಲಿ ನಿರಂತರ ಸುಖವೆಲ್ಲಿ?)

ಮತ್ತು ಎಲ್ಲಿ ಸ್ತ್ರೀಯರಿರುತ್ತಾರೋ, ಅಲ್ಲಿ ನಿರಂತರವಾದ ಸುಖವೆಲ್ಲಿ?*

---

*ಎಂದರೆ, ಸ್ತ್ರೀಯರ ಕಡೆಯಿಂದ ಮೊದಲು ಸುಖವೂ; ನಂತರ, ಅವರ ಅನವರತ ಬೇಡಿಕೆಗಳನ್ನು ಪೂರೈಸುವಲ್ಲಿ ದುಃಖವೂ ಉಂಟಾಗುವುದರಿಂದ, ಸ್ತ್ರೀಯರ ಸಾನ್ನಿಧ್ಯ-ಮಾತ್ರದಿಂದ ಸುಖವೇ ಸುಖವಿರುವುದಿಲ್ಲ, ಎಂದು ಇಲ್ಲಿ ಅಭಿಪ್ರಾಯ. ಇಷ್ಟೆ ಅಲ್ಲದೇ, ಅವರ ಕಾರಣದಿಂದ, ಸಂಭಾವ್ಯ ಸಾಮಾಜಿಕ, ಹಾಗೂ, ರಾಜನೈತಿಕ ಸಂಕಟಗಳ ಹೇತುವಿನಿಂದಲೂ ಕೂಡ, ದುಃಖದ ಸಂದರ್ಭ ಒದಗಿ ಬರುತ್ತದೆ. →

ಆ ಸ್ತ್ರೀಯರು ಅಲ್ಲಿಗೆ ಎಲ್ಲಿಂದ ಬಂದಿದ್ದಾರೆ? ಅಥವಾ ಸ್ವರ್ಗದ ನಿವಾಸಿನಿಯರೇನು? ಒಂದುವೇಳೆ, ಬಂದಿರುವರಾದರೆ, ಹೋಗುವರು! ಮತ್ತು ಅಲ್ಲಿನ ನಿವಾಸಿನಿಯರೇ ಆಗಿದ್ದರೆ, ಕಯಾಮತ್ತಿಗೆ ಮುನ್ನ, ಏನು ಮಾಡುತ್ತಿದ್ದರು? ನಿಷ್ಕರ್ಮರಾಗಿ ತಮ್ಮ ಆಯುಸ್ಸನ್ನು ತಳ್ಳುತ್ತಿದ್ದರೇನು ?

ಈಗ ನೋಡಿರಿ, ಖುದಾನ ತೇಜಸ್ಸನ್ನು! ಎಂದರೆ, ಯಾವನ ಆಜ್ಞೆಯನ್ನು ಬೇರೆ ಎಲ್ಲಾ ದೇವತೆಗಳೂ ಒಪ್ಪಿಕೊಂಡರೋ, ಮತ್ತು ಆದಮ್ ಸಾಹೇಬರಿಗೆ ಪ್ರಣಾಮ ಮಾಡಿದರೋ, ಅವನ ಆಜ್ಞೆಯನ್ನು ಶೈತಾನನು ಒಪ್ಪಲಿಲ್ಲ!

## (ಆದಮನನ್ನು ನಿರ್ಮಿಸುವ ಖುದಾ ಎರಡು ಕೈ-ಕಾಲುಗಳ ಮನುಷ್ಯನಾಗಿದ್ದನು)

ಖುದಾ ಶೈತಾನನನ್ನು ಪ್ರಶ್ನಿಸಿದನು. [ಮತ್ತು]—

"ನಾನು ಅವನನ್ನು ನನ್ನ ಎರಡು ಕೈಗಳಿಂದಲೂ ಸೃಜಿಸಿದೆನು. ನೀನು ಅಭಿಮಾನ ಪಡಬೇಡ.", ಎಂದು ಹೇಳಿದನು.

ಇದರಿಂದ, ಕುರಾನಿನ ಖುದಾ ಎರಡು ಕೈಗಳ ಮನುಷ್ಯನಾಗಿದ್ದನು, ಎಂದು ಸಿದ್ಧವಾಗುತ್ತದೆ! ಆದುದರಿಂದ, ಅವನು ವ್ಯಾಪಕನು ಅಥವಾ ಸರ್ವಶಕ್ತಿಮಂತನು ಎಂದಿಗೂ ಆಗಲಾರನು.

ಮತ್ತು ಶೈತಾನನು—"ನಾನು ಆದಮನಿಗಿಂತ ಉತ್ತಮನಾಗಿದ್ದೇನೆ.", ಎಂದು ಸತ್ಯವನ್ನೇ ಹೇಳಿದ್ದನು. ಇದರ ಮೇಲೆ, ಖುದಾ ಕೋಪಿಸಿಕೊಂಡನೇಕೆ?

---

→ಉದಾಹರಣೆಗೆ—ರಾಮಾಯಣದಲ್ಲಿ ಸೀತೆ ಮತ್ತು ಚಿತ್ತೌರ್ಗಢದ ರಾಣಿ ಪದ್ಮಿನಿ ತಮ್ಮ ರೂಪಾತಿಶಯದಿಂದ ; ಮಹಾಭಾರತದ ದ್ರೌಪದಿ ತನ್ನ ರೂಪ, ಹಠ ಮತ್ತು ಕ್ಷಾತ್ರ ವೃತ್ತಿಯಿಂದ; ಜಯಚಂದ್ರನ ಮಗಳು ಸಂಯುಕ್ತಾ ತನ್ನ ತಂದೆಯ ಶತ್ರುವಾದ ಪೃಥಿವೀರಾಜನನ್ನು ವರಿಸಿದ್ದರಿಂದ; ಮತ್ತು ರಾಮಾಯಣದ ಕೈಕೇಯಿ ತನ್ನ ಸ್ವಾರ್ಥಸಿದ್ಧಿಗಾಗಿ, ತಮ್ಮ-ತಮ್ಮ ಪತಿಗಳನ್ನು ವಿಪತ್ತಿಗೀಡು ಮಾಡಿದರು.

ಈ ಮೊದಲಾದ ಉದಾಹರಣೆಗಳು ವಿಶಿಷ್ಟ, ಹಾಗೂ ಇತಿಹಾಸ-ಪ್ರಸಿದ್ಧ; ಸಾಮಾನ್ಯವಲ್ಲ! ದಾರ್ಶನಿಕ ದೃಷ್ಟಿಯಿಂದ ಆಲೋಚಿಸಿದಾಗ, ಸ್ತ್ರೀ-ಪುರುಷರ ಯೋಗದಿಂದ, ಸುಖವೂ ಇದೆ; ಆದರೆ, ದುಃಖವೂ ಬರಬಹುದಾದ್ದರಿಂದ, ಅದಕ್ಕೂ ತಯಾರಿರಬೇಕು, ಎಂದರ್ಥ. ಹೀಗೆಯೇ ಪುರುಷನ ಕಡೆಯಿಂದಲೂ, ಸ್ತ್ರೀಯರಿಗೆ ಸುಖ; ನಂತರ, ದುಃಖ ಒದಗಿ ಬರುವ ಸಂಭವವಿರುತ್ತದೆಂದು ತಿಳಿದುಕೊಳ್ಳಬೇಕು.—ಸಂ.

**(ಖುದಾನ ಮನೆ ಆಕಾಶದಲ್ಲಿಯೇ ಏಕೆ? ಭೂಮಿಯ ಮೇಲೇಕಿಲ್ಲ?)**

ಆಕಾಶದಲ್ಲಿಯೇ ಖುದಾನ ಮನೆ ಇದೆಯೋ ? ಭೂಮಿಯ ಮೇಲೆ ಇಲ್ಲವೋ? ಹಾಗೆ ಇದ್ದರೆ, **'ಕಾಬಾ'***ವನ್ನು ಖುದಾನ ಮನೆಯೆಂದು ಮೊದಲೇಕೆ ಬರೆದರು?

ಭಲೇ! ಪರಮೇಶ್ವರನು ತನ್ನೊಳಗಿನಿಂದ, ಅಥವಾ ಸೃಷ್ಟಿಯೊಳಗಿನಿಂದ, ಬೇರೆಯಾಗಿ ಹೊರಕ್ಕೆ ಹೇಗೆ ತರಬಲ್ಲನು? ಏಕೆಂದರೆ, ಸೃಷ್ಟಿಯೆಲ್ಲವೂ ಪರಮೇಶ್ವರನದಾಗಿದೆ.

ಇದರಿಂದ, **ಕುರಾನಿನ ಖುದಾ ಸ್ವರ್ಗದ ಉತ್ತರದಾತೃ[ಮಾತ್ರ] ಆಗಿದ್ದನು**, ಎಂದು ವಿದಿತವಾಯಿತು.

**(ಖುದಾ ಮತ್ತು ಶೈತಾನರ ಮಧ್ಯೆ ವಾದ-ವಿವಾದ)**

ಖುದಾ ಅವನಿಗೆ ಶಾಪವಿತ್ತನು; ಧಿಕ್ಕರಿಸಿದನು. ಮತ್ತು ಸೆರೆ ಹಿಡಿದಿಟ್ಟನು! ಮತ್ತು ಶೈತಾನನು—

"ಓ ಪ್ರಭೋ! ನನ್ನನ್ನು ಕಯಾಮತ್ತಿನವರೆಗೆ ಬಿಟ್ಟುಬಿಡು.", ಎಂದು ಹೇಳಿದನು.

ಖುದಾ ಪ್ರಸನ್ನಗಾಗಿ, ಕಯಾಮತ್ತಿನ ದಿನದವರೆಗೆ ಬಿಟ್ಟುಬಿಟ್ಟನು ! ಯಾವಾಗ ಶೈತಾನನು ಬಿಡುಗಡೆ ಹೊಂದಿದನೋ, ಆಗ ಖುದಾಗೆ—

"ಈಗ ನಾನು ಚೆನ್ನಾಗಿ ದಾರಿ ತಪ್ಪಿಸುವೆನು. ಮತ್ತು ದಂಗೆ ಎಬ್ಬಿಸುವೆನು", ಎಂದು ಹೇಳುತ್ತಾನೆ! ಆಗ ಖುದಾ—

"ನೀನು ಎಷ್ಟು ಮಂದಿಗೆ ದಾರಿ ತಪ್ಪಿಸುವೆಯೋ, ಅವರನ್ನು ನಾನು ನರಕಕ್ಕೆ ಹಾಕಿ ಬಿಡುವೆನು. ಮತ್ತು ನಿನ್ನನ್ನೂ ಕೂಡ.!", ಎಂದನು.

ಈಗ ಸಜ್ಜನರೇ! ಶೈತಾನನನ್ನು ಪಥಭ್ರಷ್ಟನನ್ನಾಗಿ ಮಾಡಿದವನು ಖುದಾನೋ, ಅಥವಾ [ಅವನು] ತಾನೇ ದಾರಿತಪ್ಪಿದನೋ?, ಎಂದು ಆಲೋಚಿಸಿರಿ. **ಒಂದು ವೇಳೆ, ಖುದಾ ದಾರಿತಪ್ಪಿಸಿದವನಾದರೆ, ಅವನು ಶೈತಾನನಿಗೂ ಶೈತಾನನಾಗಿಬಿಟ್ಟನು!** ಒಂದುವೇಳೆ, ಶೈತಾನನು ಸ್ವತಃ ದಾರಿತಪ್ಪಿದನಾದರೆ, ಬೇರೆಯ ಜೀವರೂ ಕೂಡ, ಸ್ವತಃ ದಾರಿ ತಪ್ಪುವರು. ಶೈತಾನನ ಅವಶ್ಯಕತೆಯಿಲ್ಲ!

---

*ಮಕ್ಕಾದಲ್ಲಿರುವ ಮುಸಲ್ಮಾನರ ದೇಗುಲ! ಇದರಲ್ಲಿ ವಿಶಾಲವಾದ ಸಮಾಧಿಯಂತಹ ಜಗುಲಿ ಇದೆ. ಇಲ್ಲಿ ಇರುವ 'ಸಂಗೇ ಅಸವದ್', ಎಂಬ ಕಲ್ಲನ್ನು ಹಜ್ ತೀರ್ಥಯಾತ್ರೆಗಾಗಿ ಬಂದ ಮುಸಲ್ಮಾನರು ಚುಂಬಿಸುತ್ತಾರೆ. —ಸಂ.

ಮತ್ತು ಪಂಗೆಕೋರನಾದ ಈ ಶೈತಾನನನ್ನು ಖುದಾ ಸ್ವತಂತ್ರನಾಗಿರಲು ಬಿಟ್ಟು ಬಿಟ್ಟನಾದ ಕಾರಣ, ಅವನೂ ಕೂಡ, ಅಧರ್ಮವನ್ನು ಮಾಡುವುದರಲ್ಲಿ, ಶೈತಾನನ ಭಾಗೀದಾರನಾದನು, ಎಂದು ವಿದಿತವಾಯಿತು. ಒಂದು ವೇಳೆ, ತಾನೇ ಕಳ್ಳತನ ಮಾಡಿಸಿ, ಶಿಕ್ಷೆಯನ್ನು ಕೊಡುವನಾದರೆ, ಅವನ ಅನ್ಯಾಯಕ್ಕೆ ಸ್ವಲ್ಪವಾದರೂ ಪಾರಾವಾರವಿಲ್ಲ!* [135]

## (ಪಾಪಗಳಿಗೆ ಕ್ಷಮೆ; ಒಟ್ಟಿಗೇ ಎಲ್ಲರಿಗೂ ತೀರ್ಮಾನ)

**[136] ಅಲ್ಲಾಹನು ಸಮಸ್ತ ಪಾಪಗಳನ್ನೂ ಕ್ಷಮಿಸುತ್ತಾನೆ. ನಿಶ್ಚಯವಾಗಿಯೂ ಅವನು ಕ್ಷಮಿಸುವ ದಯಾಳುವಾಗಿದ್ದಾನೆ!**

**ಮತ್ತು ಸಂಪೂರ್ಣ ಪೃಥಿವಿಯು ಅವನ ಮುಷ್ಟಿಯಲ್ಲಿರುವುದು ಕಯಾಮತ್ತಿನ ದಿನದವರೆಗೆ ಮತ್ತು ಆಕಾಶವನ್ನು ತನ್ನ ಬಲಗೈಯಿಂದ ಸುತ್ತ ಸುತ್ತಿಕೊಂಡಿದ್ದಾನೆ.**

**ಮತ್ತು ಪೃಥಿವೀ ತನ್ನೊಡೆಯನ ಪ್ರಕಾಶದಿಂದ ಥಳಥಳಿಸುವುದು. ಮತ್ತು ಕರ್ಮಪತ್ರಗಳು ಇಡಲ್ಪಡುವುವು. ಮತ್ತು ಪೈಗಂಬರರನ್ನೂ, ಹಾಗೂ ಸಾಕ್ಷಿಗಳನ್ನೂ ತರಲಾಗುವುದು. ಮತ್ತು ತೀರ್ಮಾನ ಮಾಡಲ್ಪಡುವುದು.**

[ಕುರಾನ್:-ಮಂ. 6; ಸಿ. 24; ಸೂ. 39; ಆ. 53, 67, 69]

## (ಪಾಪಗಳ ಕ್ಷಮೆಯಿಂದ ಅಪರಾಧಗಳ ಸುಗ್ಗಿ)

**ಸಮೀಕ್ಷಕ:**—ಸಮಗ್ರ ಪಾಪಗಳನ್ನೂ ಖುದಾ ಕ್ಷಮಿಸುತ್ತಾನೆಯಾದರೆ, ಸಮಸ್ತ ಜಗತ್ತನ್ನೂ ಪಾಪಿಯನ್ನಾಗಿ ಮಾಡುತ್ತಾನೆ ಮತ್ತು ದಯಾಹೀನನಾಗಿದ್ದಾನೆ, ಎಂದು ತಿಳಿಯಿರಿ ! ಏಕೆಂದರೆ, ಒಬ್ಬ ದುಷ್ಟನ ಮೇಲೆ ದಯೆಯನ್ನು ಮಾಡಿ, ಮತ್ತು ಕ್ಷಮೆಯನ್ನು ನೀಡುವುದರಿಂದ, ಅವನು ಹೆಚ್ಚು ದುಷ್ಟತನವನ್ನು ಮಾಡುವನು. ಮತ್ತು ಬೇರೆ ಅನೇಕ ಧರ್ಮಾತ್ಮರಿಗೆ ದುಃಖವನ್ನುಂಟುಮಾಡುವನು! **ಕಿಂಚಿತ್ತಾದರೂ ಅಪರಾಧವನ್ನು ಕ್ಷಮಿಸುವುದಾದರೆ, ಅಪರಾಧವೇ ಅಪರಾಧವು ಜಗತ್ತಿನಲ್ಲಿ ಹರಡಿ ಹೋದೀತು!**

ಪರಮೇಶ್ವರನು ಅಗ್ನಿಯಂತೆ ಪ್ರಕಾಶಯುಕ್ತನಾಗಿದ್ದಾನೇನು? ಮತ್ತು ಕರ್ಮ-ಪತ್ರಗಳು ಎಲ್ಲಿ ಕೂಡಿಡಲ್ಪಡುತ್ತವೆ? ಮತ್ತು ಯಾವನು ಬರೆಯುತ್ತಾನೆ?

ಒಂದು ವೇಳೆ, ಪೈಗಂಬರರ ಮತ್ತು ಸಾಕ್ಷಿಗಳ ಭರವಸೆಯ ಮೇಲೆ ಖುದಾ ನ್ಯಾಯ ಮಾಡುತ್ತಾನೆಯಾದರೆ, ಅವನು ಅಸರ್ವಜ್ಞ ಮತ್ತು ಅಸಮರ್ಥನಾಗುತ್ತಾನೆ!

---

*ಎಂದರೆ, ಮೇರೆ ಇಲ್ಲ, ಎಂದರ್ಥ—ಸಂ.

'ಅವನು ಅನ್ಯಾಯವನ್ನು ಮಾಡುವುದಿಲ್ಲ; ನ್ಯಾಯವನ್ನೇ ಮಾಡುತ್ತಾನೆ', ಎನ್ನುವುದಾದರೆ, ಕರ್ಮಗಳಿಗೆ ಅನುಸಾರವಾಗಿ ಮಾಡುತ್ತಿರಬಹುದು! ಆ ಕರ್ಮಗಳು ಪೂರ್ವಾಪರ, ವರ್ತಮಾನ ಜನ್ಮಗಳದಾಗಬಹುದು! ಹಾಗಾದರೆ, ಮತ್ತೆ ಕ್ಷಮಿಸುವುದು, ಹೃದಯಗಳ ಮೇಲೆ ಬೀಗ ಜಡೆಯುವುದು, ಮತ್ತು ಶಿಕ್ಷಣವನ್ನು ಕೊಡದಿರುವುದು, ಶೈತಾನನಿಂದ ದಾರಿ ತಪ್ಪಿಸುವುದು, ವಿಚಾರಾಧೀನವಾಗಿಡುವುದು-[ಇವೆಲ್ಲಾ] ಕೇವಲ ಅನ್ಯಾಯವಾಗಿರುತ್ತದೆ! [136]

**(ಖುದಾನಿಂದ ಕುರಾನ್ ಇಳಿಯುವುದು; 'ತೋಬಾ'ದಿಂದ ಪಾಪ-ಕ್ಷಮೆ)**

**[137] ಪುಸ್ತಕವನ್ನಿಳಿಸುವುದು ಶಕ್ತಿಮಾನ್, ಹಾಗೂ ಜ್ಞಾನವಾನ್ ಅಲ್ಲಾಹನ ಕಡೆಯಿಂದಾಗಿರುತ್ತದೆ.**

**ಮತ್ತು ಪಾಪಗಳನ್ನು ಕ್ಷಮಿಸುವವನೂ, ಮತ್ತು ತೋಬಾಃ ಮಾಡುವುದನ್ನೂ ಅಂಗೀಕರಿಸುವವನೂ ಆಗಿದ್ದಾನೆ.**

**[ಕುರಾನ್:-ಮಂ. 6; ಸಿ. 24; ಸೂ. 40; ಆ. 2,3]**

**(ಮುಗ್ಧರನ್ನು ಸಿಕ್ಕಿಸಿಕೊಳ್ಳಲು ಖುದಾನ ಹೆಸರು)**

**ಸಮೀಕ್ಷಕ:**—ಸ್ವಲ್ಪ ಸತ್ಯವನ್ನುಳಿದು, ಅಸತ್ಯ ತುಂಬಿರುವ ಈ ಪುಸ್ತಕವನ್ನು ಮುಗ್ಧರಾದ ಜನರು ಅಲ್ಲಾಹನ ಹೆಸರಿನಿಂದ, ಒಪ್ಪಿಕೊಂಡು ಬಿಡಲಿ, ಎಂಬುದಕ್ಕಾಗಿ ಈ ಮಾತು ಬರೆಯಲ್ಪಟ್ಟಿದೆ! ಮತ್ತು ಆ ಸತ್ಯವೂ ಕೂಡ, ಅಸತ್ಯದೊಂದಿಗೆ ಸೇರಿ, ಕೆಟ್ಟುಹೋಗಿರುವಂತೆ ಇದೆ!

**(ಪಾಪ-ಕ್ಷಮೆಯಿರುವುದರಿಂದಲೇ ಮುಸಲ್ಮಾನರು ಪಾಪ-ಉಪದ್ರವ ಮಾಡುವುದರಲ್ಲಿ ಹೆದರುವುದಿಲ್ಲ)**

ಆದುದರಿಂದಲೇ, ಕುರಾನ್, ಮತ್ತು ಕುರಾನಿನ ಖುದಾ, ಮತ್ತು ಇದನ್ನು ಒಪ್ಪಿಕೊಳ್ಳುವ ಜನರು ಪಾಪವನ್ನು ಹೆಚ್ಚಿಸುವವರು ಮತ್ತು ಪಾಪವನ್ನು ಮಾಡುವವರೂ-ಮಾಡಿಸುವವರೂ ಆಗಿದ್ದಾರೆ! ಏಕೆಂದರೆ, ಪಾಪವನ್ನು ಕ್ಷಮಿಸುವುದು **ಅತ್ಯಂತ ಅಧರ್ಮವಾಗಿರುತ್ತದೆ!**

ಪ್ರಾಯಶಃ ಇದರಿಂದಲೇ, ಮುಸಲ್ಮಾನರು ಪಾಪಗಳನ್ನು ಮತ್ತು ಉಪದ್ರವಗಳನ್ನು ಮಾಡುವುದರಲ್ಲಿ ಕಡಿಮೆ ಹೆದರುತ್ತಾರೆ! [137]

**(ಏಳು ಆಕಾಶಗಳ ರಚನೆ ಎರಡು ದಿನಗಳಲ್ಲಿ)**

**[138] ಆಯಿತು! ಎರಡು ದಿನಗಳಲ್ಲಿ ಏಳು ಆಕಾಶಗಳನ್ನು ಅವನು ಸೃಜಿಸಿದನು. ಮತ್ತು ನಾವು ಅವುಗಳ ಕೆಲಸವನ್ನು ಅವಕ್ಕೆ ಗೊತ್ತುಮಾಡಿದೆವು.**

**ಎಲ್ಲಿಯ ವರೆಗೆ, ಎಂದರೆ, ಯಾವಾಗ ಹೋಗುವರೋ, ಅವನ ಬಳಿಗೆ, ಅವರುಗಳ ಮೇಲೆ ಅವರ ಕಿವಿಗಳು ಮತ್ತು ಅವರ ಕಣ್ಣುಗಳು ಮತ್ತು ಚರ್ಮಗಳು ತಮ್ಮ ತಮ್ಮ ಕೆಲಸಗಳೊಂದಿಗೆ ಸಾಕ್ಷ್ಯವನ್ನು ಕೊಡುವುವು.**

**ಮತ್ತು ತಮ್ಮ ಚರ್ಮಗಳ ಬಗೆಗೆ—'ನಮ್ಮ ಮೇಲೆ ನೀನೇಕೆ ಸಾಕ್ಷ್ಯವನ್ನಿತ್ತೆ?', ಎಂದು ಕೇಳುವರು.**

**ಅವು—"ಯಾವನು ಎಲ್ಲ ವಸ್ತುಗಳನ್ನೂ ಕರೆಯುತ್ತಾನೋ, ಆ ಅಲ್ಲಾಹನು ನಮ್ಮನ್ನು ಕರೆದಿದ್ದಾನೆ.", ಎನ್ನುವುವು.**

**ಅವಶ್ಯವಾಗಿ ಸಜೀವಗೊಳಿಸುವವನಾಗಿದ್ದಾನೆ ಶವಗಳನ್ನು.**

[ಕುರಾನ್:-ಮಂ. 6; ಸಿ. 24; ಸೂ. 41; ಆ. 12,20,21,39]

## (ಏಳು ಆಕಾಶಗಳಿಗೆ ಎರಡು ದಿನ ಹಿಡಿದರೆ, ಅವನೆಂತಹ ಶಕ್ತಿವಂತ?)

**ಸಮೀಕ್ಷಕ:**—ಭೇಷ್! ಸ್ವಾಮಿ, ಭೇಷ್!! ಮುಸಲ್ಮಾನರೇ! ಯಾವನನ್ನು ನೀವು ಸರ್ವಶಕ್ತಿವಂತನೆಂದು ಅಂಗೀಕರಿಸುತ್ತೀರೋ, ಅವನು ಏಳು ಆಕಾಶಗಳನ್ನು ಎರಡು ದಿನಗಳಲ್ಲಿ ನಿರ್ಮಿಸಲು ಶಕ್ತನಾದನು! ಮತ್ತು ಯಾವನು ಸರ್ವಶಕ್ತಿವಂತನಾಗಿರುತ್ತಾನೋ, ಅವನು ಕ್ಷಣಮಾತ್ರದಲ್ಲಿ ಎಲ್ಲವನ್ನೂ ನಿರ್ಮಿಸಬಲ್ಲನು!

ಅಲ್ಲಾ! ಕಿವಿಗಳು, ಕಣ್ಣುಗಳು ಮತ್ತು ಚರ್ಮ, ಇವನ್ನು ಈಶ್ವರನು ಜಡದಿಂದ ನಿರ್ಮಿಸಿದ್ದಾನೆ. ಅವು ಹೇಗೆ ಸಾಕ್ಷ್ಯ ಕೊಡಬಲ್ಲವು? ಒಂದು ವೇಳೆ, ಸಾಕ್ಷ್ಯವನ್ನು ಕೊಡಿಸುವವನಾದರೆ, ಅವನ್ನು ಮೊದಲು ಜಡವನ್ನಾಗಿ ಏಕೆ ಸೃಜಿಸಿದನು? ಮತ್ತು ತನ್ನ ಪೂರ್ವಾಪರ ನಿಯಮಗಳಿಗೆ ವಿರುದ್ಧವಾಗಿ ಏಕೆ ಮಾಡಿದನು?

## (ಜೀವರು ತಮ್ಮ ಚರ್ಮಗಳನ್ನು ಹೇಗೆ ಕೇಳುವರು?)

ಇದಕ್ಕಿಂತಲೂ ಹೆಚ್ಚಾದ ಒಂದು ಸುಳ್ಳು ಮಾತೆಂದರೆ, ಯಾವಾಗ ಜೀವರುಗಳ ಮೇಲೆ ಸಾಕ್ಷ್ಯವನ್ನು ಕೊಟ್ಟವೋ, ಆಗ ಆ ಜೀವಾತ್ಮರು ತಮ್ಮ ತಮ್ಮ ಚರ್ಮವನ್ನು—

"ನೀನು ನಮ್ಮ ಮೇಲೆ ಸಾಕ್ಷ್ಯವನ್ನೇಕೆ ಕೊಟ್ಟೆ?", ಎಂದು ಕೇಳತೊಡಗಿದರು. ಚರ್ಮವು—

"ಖುದಾ ಕೊಡಿಸಿದನು. ನಾನೇನು ಮಾಡಲಿ!", ಎನ್ನುವುದು.

ಆಹಾ!! ಈ ಮಾತು ಎಂದಾದರೂ ಆಗಬಲ್ಲದೇ ?

ಯಾವನಾದರೂ—"ನಾನು ಬಂಜೆಯ ಮಗನ ಮುಖವನ್ನು ನೋಡಿದೆನು", ಎಂದು ಹೇಳಿದಂತೆ [ಇದೆ ಇದು]!

ಪುತ್ರನಿರುವುದಾದರೆ, ಬಂಜೆ ಏಕೆ? ಬಂಜೆಯಾಗಿರುವುದಾದರೆ, ಅವಳಿಗೆ ಮಗ ನಾಗುವುದೇ ಅಸಂಭವವಾಗಿರುತ್ತದೆ! ಇದೇ ರೀತಿಯು ಈ ಮಾತೂ ಕೂಡ, ಸುಳ್ಳಾಗಿದೆ.

## (ಈಗಲೂ ಶವಗಳನ್ನು ಜೀವಿಸಬಲ್ಲನೇನು?)

ಅವನು ಶವಗಳನ್ನು ಸಜೀವಗೊಳಿಸುತ್ತಾನೆಯಾದರೆ, ಮೊದಲು ಸಾಯಿಸಿದ ನಾದರೂ ಏತಕ್ಕೆ? ಈಗಲೂ ಕೂಡ, ಶವವು [ಸಜೀವ]ವಾಗ ಬಲ್ಲದೋ, ಅಥವಾ ಇಲ್ಲವೋ? ಆಗಲಾರದಾದರೆ, ಶವತ್ವವನ್ನು ಕೆಟ್ಟದೆಂದೇಕೆ ತಿಳಿಯುತ್ತಾನೆ?

ಮತ್ತು ಕಯಾಮತ್ತಿನ ರಾತ್ರಿಯವರೆಗೆ ಮೃತರಾದ ಜೀವರು ಯಾವ ಮುಸಲ್ಮಾನನ ಮನೆಯಲ್ಲಿರುವರು? ಮತ್ತು ಅಪರಾಧವಿಲ್ಲದೆಯೇ, ಖುದಾ ಅವರನ್ನು ವಿಚಾರಾಧೀನರನ್ನಾಗಿ ಇಟ್ಟನೇತಕ್ಕೆ? ಶೀಘ್ರವಾಗಿ ನ್ಯಾಯವನ್ನೇಕೆ ಮಾಡಲಿಲ್ಲ? ಇಂತಿಂತಹ ಮಾತುಗಳಿಂದ ಈಶ್ವರತ್ವಕ್ಕೆ ಕಳಂಕ ಬರುತ್ತದೆ! [138]

## (ಎಲ್ಲವೂ ಖುದಾನ ಮರ್ಜಿಯಂತೆ)

**[139] ಅವನ ಸಲುವಾಗಿ, ಆಕಾಶಗಳ ಮತ್ತು ಪೃಥಿವಿಯು ಬೀಗದ ಕೈಗಳಿವೆ. ಯಾವನನ್ನು ಬಯುಸುತ್ತಾನೋ, ಅವನಿಗಾಗಿ ಭೋಜನವನ್ನು ದಯ ಪಾಲಿಸುತ್ತಾನೆ. ಮತ್ತು ಬೇಕಾದವರನ್ನು ಪೀಡಿಸುತ್ತಾನೆ.**

**ತಾನು ಬಯಸಿದುದೆಲ್ಲವನ್ನೂ ಉತ್ಪನ್ನ ಮಾಡುತ್ತಾನೆ. ಮತ್ತು ಯಾವನನ್ನು ಇಚ್ಛಿಸುತ್ತಾನೋ, ಅವನಿಗೆ ಪುತ್ರಿಯರನ್ನು ಕೊಡುತ್ತಾನೆ. ಮತ್ತು ಯಾವನನ್ನು ಬಯಸುತ್ತಾನೋ, ಅವನಿಗೆ ಪುತ್ರರನ್ನು ಕೊಡುತ್ತಾನೆ.**

**ಅಥವಾ, ಅವನಿಗೆ, [ಅವಳಿಗೆ] ಪುತ್ರ-ಪುತ್ರಿಯರ ಸಂತಸ್ತನವನ್ನೂ ಕಲ್ಪಿಸುತ್ತಾನೆ. ಮತ್ತು ಇಚ್ಛೆಬಂದವರನ್ನು ಬಂಜೆಯನ್ನಾಗಿ ಮಾಡುತ್ತಾನೆ.**

**ಮತ್ತು ಅಲ್ಲಾಹನು ಅವನೊಂದಿಗೆ ಮಾತನಾಡಲು ಯಾವ ಮನುಷ್ಯನಿಗೂ ಶಕ್ತಿಯಿಲ್ಲ. ಆದರೆ, [ಅಲ್ಲಾಹನು] ಹೃದಯದಲ್ಲಿ [ಸ್ಪಂದನವನ್ನುಂಟು]ಮಾಡಿ, ಅಥವಾ ತೆರೆಯ ಹಿಂದಿನಿಂದ* [ಮಾತನಾಡುತ್ತಾನೆ.] ಅಥವಾ ಸಂದೇಶವಾಹಕರಾದ ದೇವದೂತರನ್ನು ಕಳುಹಿಸುವನು.**

[ಕುರಾನ್:–ಮಂ. 6; ಸಿ. 25; ಸೂ. 42; ಆ. 12, 49-51]

---

* ಈ ಆಯತ್ತಿನ ಭಾಷ್ಯವಾದ 'ತಫ್‌ಸೀರ್ ಹುಸೈನೀ'ಯಲ್ಲಿ ಹೀಗೆ ಬರೆಯಲಾಗಿದೆ —

"ಮುಹಮ್ಮದ್ ಸಾಹೇಬರು ಎರಡು ಪರದೆಗಳ ಹಿಂದೆ ಇದ್ದರು. ಮತ್ತು ಖುದಾನ ಶಬ್ದವನ್ನು ಆಲಿಸಿದರು. ಒಂದು ಪರದೆ ಜರತಾರಿಯದಾಗಿತ್ತು; ಇನ್ನೊಂದು ಬಿಳಿಯ ಮುತ್ತುಗಳದು. ಮತ್ತು ಎರಡೂ ಪರದೆಗಳ ನಡುವೆ ಎಪ್ಪತ್ತು ವರ್ಷಗಳ ತನಕ ನಡೆಯಲು ಯೋಗ್ಯವಾದ ಮಾರ್ಗವಿತ್ತು". →

## (ಬೀಗ, ಬೀಗದ ಕೈ ಖುದಾಗೇತಕ್ಕೆ?)

**ಸಮೀಕ್ಷಕ:**—ಖುದಾನ ಬಳಿ ಬೀಗದ ಕೈಗಳ ಭಂಡಾರ ತುಂಬಿರಬಹುದು! ಏಕೆಂದರೆ, ಎಲ್ಲೆಡೆಯು ಬೀಗಗಳನ್ನೂ, ತೆಗೆಯಬೇಕಾಗುತ್ತಿರಬಹುದು! ಇದು ಹುಡುಗುತನದ ಮಾತಾಗಿದೆ!

ಯಾವನನ್ನು ಬಯಸುತ್ತಾನೋ, ಅವನಿಗೆ ಪುಣ್ಯಕರ್ಮವಿಲ್ಲದೆಯೇ, ಐಶ್ವರ್ಯವನ್ನು ಕೊಡುತ್ತಾನೇನು? ಮತ್ತು [ಪಾಪವಿಲ್ಲದೇ], ಕಷ್ಟ ಕೊಡುತ್ತಾನೇನು? ಹೀಗೆ ಆಗಿರುವುದಾದರೆ, ಅವನು ದೊಡ್ಡ ಅನ್ಯಾಯಕಾರಿಯಾಗಿರುತ್ತಾನೆ.

## (ಪುತ್ರ-ಪುತ್ರಿಯರನ್ನು ಕೊಡುವ ಮಾತು ಸ್ತ್ರೀಯರನ್ನು ಸಿಕ್ಕಿಸುವುದಕ್ಕಾಗಿ)

ನಾರಿಯರೂ ಕೂಡ, ಮೋಹಿತರಾಗಿ, ಸಿಕ್ಕಿಹಾಕಿಕೊಳ್ಳುವಂತಹ, ಕುರಾನ್-ಲೇಖಕನ ಚಾತುರ್ಯವನ್ನಾದರೂ ಈಗ ನೋಡಿರಿ!*

ತಾನು ಬಯಸಿದುದೆಲ್ಲವನ್ನು ಉತ್ಪಾದಿಸುತ್ತಾನೆ, ಎನ್ನುವುದಾದರೆ, ಎರಡನೆಯ 'ಖುದಾ'ನನ್ನೂ ಕೂಡ, ಉತ್ಪನ್ನಮಾಡಬಲ್ಲನೋ, ಅಥವಾ ಇಲ್ಲವೋ? ಮಾಡಲಾರನಾದರೆ, ಸರ್ವಶಕ್ತಿಮತ್ತ್ವವು ಇಲ್ಲಿ ತೊಡಕಿಗೀಡಾಯಿತು!

ಅಲ್ಲಾ! ಮಾನವರಿಗಂತೂ ಖುದಾ, ತನಗೆ ಬೇಕಾದವನಿಗೆ ಪುತ್ರರನ್ನೂ, ಪುತ್ರಿಯರನ್ನೂ ಕೊಡುತ್ತಾನೆ! ಆದರೆ, ಬಹುವಾಗಿ ಹೆಣ್ಣು-ಮರಿ-ಗಂಡು-ಮರಿಗಳನ್ನು ಪಡೆದುಕೊಳ್ಳುವ ಹುಂಜಗಳು, ಮೀನುಗಳು, ಹಂದಿಗಳು ಮೊದಲಾದುವುಗಳಿಗೆ ಯಾವನು ಕೊಡುತ್ತಾನೆ?

ಮತ್ತು ಸ್ತ್ರೀ-ಪುರುಷರ ಸಮಾಗಮವಿಲ್ಲದೇ, [ಸಂತತಿಯನ್ನು] ಕೊಡುವುದಿಲ್ಲವೇಕೆ? ತನ್ನ ಇಚ್ಛೆಯಂತೆ ಯಾವಳನ್ನೋ ಬಂಜೆಯನ್ನಾಗಿ ಮಾಡಿ, ದುಃಖವನ್ನೇತಕ್ಕೆ ಕೊಡುತ್ತಾನೆ?

---

→ ಇವನು ಖುದಾನೋ, ಅಥವಾ ಪರದೆಯ ಮರೆಯಿಂದ ಮಾತನಾಡುವ ಸ್ತ್ರೀಯೋ, ಎಂದು ಬುದ್ಧಿವಂತ ಜನರು ಈ ಮಾತಿನ ಮೇಲೆ ವಿಚಾರ ಮಾಡಲಿ! ಈ ಜನರಂತೂ ಈಶ್ವರನ ದುರ್ಗತಿಯನ್ನೇ ಮಾಡಿಬಿಟ್ಟರು! ವೇದ ಮತ್ತು ಉಪನಿಷತ್ ಮೊದಲಾದ ಸದ್ಗ್ರಂಥಗಳಲ್ಲಿ ಪ್ರತಿಪಾದಿತನಾದ ಶುದ್ಧ ಪರಮಾತ್ಮನೆಲ್ಲಿ? ಮತ್ತು ಕುರಾನಿನಲ್ಲಿ ಹೇಳಿರುವಂತಹ ತೆರೆಯ ಮರೆಯಿಂದ ಮಾತನಾಡುವ ಖುದಾ ಎಲ್ಲಿ? ನಿಜವಾದುದೇನೆಂದರೆ, ಅರಬ್‌ದೇಶದವರು ತಿಳಿವಳಿಕೆ ಇಲ್ಲದ ಜನರಾಗಿದ್ದರು! ಉತ್ತಮ ಮಾತುಗಳನ್ನು ಯಾರ ಮನೆಯಿಂದ ತಂದಾರು ? [ಪಾಪ!]—ದ.ಸ.

*ಪುಟ 856ರ ಪಾದ ಟಿಪ್ಪಣಿಯನ್ನು ನೋಡಿ.—ಸಂ.

ಆಹಾ! ಅವನ ಸಮ್ಮುಖದಲ್ಲಿ ಯಾವನೂ ಮಾತನ್ನೇ ಆಡಲಾರನೆನ್ನುವಷ್ಟು ತೇಜಸ್ವಿಯಾಗಿದ್ದಾನೇನು ಖುದಾ? ಆದರೆ, ಇದಕ್ಕೆ ಮೊದಲು—'ಅವನು ತೆರೆಯ ಮರೆಯಿಂದ ಮಾತನಾಡಬಲ್ಲನು; ಅಥವಾ ದೇವದೂತರು ಖುದಾನೊಂದಿಗೆ ಮಾತನಾಡುತ್ತಾರೆ; ಅಥವಾ ಪೈಗಂಬರರು [ಮಾತನಾಡುತ್ತಾರೆ]', ಎಂದು ಹೇಳಿದ್ದಾರೆ! ವಿಷಯ ಹೀಗೆ ಇರುವುದಾದರೆ, ದೇವದೂತರು ಮತ್ತು ಪೈಗಂಬರರು ಚೆನ್ನಾಗಿ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಿರಬಹುದು!

### (ಖುದಾ ತೆರೆಯ ಹಿಂದಿನಿಂದ ಮಾತನಾಡುವುದು ವ್ಯರ್ಥ)

ಯಾವನಾದರೂ—'ಖುದಾ ಸರ್ವಜ್ಞನು ಮತ್ತು ಸರ್ವವ್ಯಾಪಕನು', ಎಂದು ಹೇಳಿದರೆ, ತೆರೆಯ ಹಿಂದಿನಿಂದ ಮಾತನಾಡುವುದು, ಅಥವಾ ಅಂಚೆಯಂತೆ ಸಮಾಚಾರಗಳನ್ನು ತರಿಸಿ ತಿಳಿದುಕೊಳ್ಳುವುದು, ಎಂಬುದನ್ನು ಬರೆಯುವುದು ವ್ಯರ್ಥವಾಗಿದೆ! ಮತ್ತು, ಹೀಗೆ ಇರುವುದಾದರೆ, ಅವನು ಖುದಾನೇ ಅಲ್ಲ! ಯಾವನಾದರೂ ಚತುರನಾದ ಮನುಷ್ಯನಿರಬಹುದು! **ಆದುದರಿಂದ, ಈ ಕುರಾನ್ ಈಶ್ವರಕೃತವೆಂದಿಗೂ ಆಗಲಾರದು.** [139]

### (ಏಸುವು ಪ್ರಮಾಣದೊಂದಿಗೆ ಬಂದನು)

**[140] ಮತ್ತು ಯಾವಾಗ ಏಸುವು ಪ್ರತ್ಯಕ್ಷ ಪ್ರಮಾಣದೊಂದಿಗೆ ಬಂದನೋ.**

**[ಕುರಾನ್:-ಮಂ. 6; ಸಿ. 25; ಸೂ. 43; ಆ. 63]**

### (ಹಾಗಾದರೆ, ಕುರಾನ್ ಮತ್ತು ಬೈಬಲಿನ ಉಪದೇಶಗಳಲ್ಲಿ ವಿರೋಧ ಏಕೆ?)

**ಸಮೀಕ್ಷಕ:**—ಏಸುವೂ ಕೂಡ, ಖುದಾನಿಂದ ಕಳುಹಿಸಲ್ಪಟ್ಟವನಾಗಿದ್ದರೆ, ಅವನ ಉಪದೇಶಕ್ಕೆ ವಿರುದ್ಧವಾಗಿ ಖುದಾ ಕುರಾನನ್ನೇತಕ್ಕೆ ರಚಿಸಿದನು? ಮತ್ತು ಕುರಾನಿಗೆ ವಿರುದ್ಧವಾಗಿ ಇಂಜೀಲ್ ಇದೆಯಲ್ಲ! **ಆದುದರಿಂದಲೇ, ಈ ಪುಸ್ತಕಗಳು ಈಶ್ವರಕೃತವಾದುವಲ್ಲ!** [140]

### (ನರಕಕ್ಕೆ ಎಳೆಯುವುದು; ಮದುವೆ ಮಾಡಿಸುವುದು)

**[141] ಹಿಡಿಯಿರಿ ಅವನನ್ನು. ಸಾಕು! ಎಳೆಯಿರಿ ಅವನನ್ನು ನರಕದ ನಡು ಮಧ್ಯದಲ್ಲಿ.**

**ಇದೇ ರೀತಿ ಇರುವರು. ಮತ್ತು ಅವರಿಗೆ ಸುಂದರ ಕಣ್ಣುಗಳನ್ನುಳ್ಳವರಾದ ಸುಂದರಿಯರೊಂದಿಗೆ ಮದುವೆ ಮಾಡಿಸುವೆವು.**

**[ಕುರಾನ್:-ಮಂ. 6; ಸಿ. 25; ಸೂ. 44; ಆ. 47, 54]**

### (ಖುದಾನೇ ಹೀಗೆ ಮಾಡಿದರೆ, ಮುಸಲ್ಮಾನರೇಕೆ ಮಾಡುವುದಿಲ್ಲ!)

ಸಮೀಕ್ಷಕ:—ಆಹಾ! ಎಂತಹ ಖುದಾ!! ನ್ಯಾಯಕಾರಿಯಾಗಿದ್ದೂ, ಪ್ರಾಣಿಗಳನ್ನು ಹಿಡಿಸುತ್ತಾನಲ್ಲ! ಮತ್ತು ಎಳೆದಾಡಿಸುತ್ತಾನಲ್ಲ!

ಮುಸಲ್ಮಾನರ ಖುದಾನೇ ಹೀಗೆ ಇರುವಾಗ, ಅವನ ಉಪಾಸಕರಾದ ಮುಸಲ್ಮಾನರು ಅನಾಥರನ್ನೂ, ದುರ್ಬಲರನ್ನೂ ಹಿಡಿದರೆ-ಎಳೆದಾಡಿದರೆ, ಇದರಲ್ಲಿ ಆಶ್ಚರ್ಯವೇನಿದೆ?

ಮತ್ತು ಮುಸಲ್ಮಾನರ ಪುರೋಹಿತನೇ ಆಗಿದ್ದಾನೋ, ಎನ್ನುವಂತೆ ಅವನು ಸಾಂಸಾರಿಕ ಮನುಷ್ಯರ ಹಾಗೆ ವಿವಾಹವನ್ನೂ ಕೂಡ, ಮಾಡಿಸುತ್ತಾನಲ್ಲ! [141]

### (ಕಾಫಿರರ ಕೊರಳನ್ನು ಕತ್ತರಿಸಿ! ಸ್ವರ್ಗದಲ್ಲಿ ಏನಿಲ್ಲ!)

[142] ಸರಿ! ಕಾಫಿರರಾದ ಜನರನ್ನು ನೀವು ಸಂಧಿಸಿದಾಗ, ಅವರನ್ನು ಚೂರು-ಚೂರಾಗಿ ಮಾಡಿ ಬಿಡುವವರೆಗೆ, ಅವರ ಕೊರಳಿನ ಮೇಲೆ ಒಳಿತಾಗಿ ಥಳಿಸಿರಿ. ಆಯಿತು! ದೃಢವಾಗಿ ಹಿಡಿದಿಡಿರಿ.

ಮತ್ತು, ನಿನ್ನ ಆ ಊರಿಗಿಂತ ಶಕ್ತಿಯಲ್ಲಿ ಮಹಾ ದುರ್ಗಮವಾದ ನೆಲೆಗಳು ಬಹಳವಾಗಿವೆ. ಯಾವನು ನಿನ್ನನ್ನು ಓಡಿಸಿಬಿಟ್ಟನೋ, ನಾವು ಅವನನ್ನು ಧ್ವಂಸ ಮಾಡಿಬಿಟ್ಟೆವು! ಮುಗಿಯಿತು! ಅವರಿಗೆ ಸಹಾಯಕನಾವನೂ ಉಳಿಯಲಿಲ್ಲ.

ಭಕ್ತಿಯುಳ್ಳವರಿಗೆ [ಲಭಿಸುವುದೆಂದು] ಆಶ್ವಾಸನೆ ಕೊಡಲ್ಪಟ್ಟ ಆ ಸ್ವರ್ಗದ ಪ್ರಶಂಸೆಯಾದರೂ ಅದೆಷ್ಟು! ಕೆಡದ ನೀರಿನ ಕಾಲುವೆಗಳು ಅದರ ನಡುವೆ ಇವೆ. ಮತ್ತು ಅವುಗಳಿಗೆ ಸರಿತೂಗುವ ಆನಂದವೇ ಇಲ್ಲದ ಹಾಲಿನ ಕಾಲುವೆಗಳೂ ಕೂಡ ಇವೆ. ಮತ್ತು, ಕುಡಿಯುವವರಿಗೆ ಮಜಾ ಕೊಡುವ ಮದ್ಯದ ಕಾಲುವೆಗಳೂ ಇವೆ. ಮತ್ತು ಶುದ್ಧೀಕರಿಸಲ್ಪಟ್ಟ ಜೇನುತುಪ್ಪದ [ಕಾಲುವೆಗಳೂ ಇವೆ]. ಮತ್ತು ಅದರ ಮಧ್ಯೆ ಅವರಿಗಾಗಿ ಪ್ರತಿಯೊಂದು ರೀತಿಯ ಒಣ ಹಣ್ಣುಗಳೂ ಇವೆ. ಅವರಿಗಾಗಿ ಪ್ರಭುವಿನ ಕ್ಷಮೆ ಇದೆ. [ಕುರಾನ್:- ಮಂ. 6; ಸಿ. 26; ಸೂ. 47; ಆ. 4,13,15]

### (ಕಾಫಿರರನ್ನು ಕೊಲ್ಲುವ ಮಾತು ಅಶಾಂತಿ ಹರಡಲೆಂದು)

ಸಮೀಕ್ಷಕ:—ಇದೇ ಕಾರಣದಿಂದ, ಈ ಕುರಾನ್, ಖುದಾ ಮತ್ತು ಮುಸಲ್ಮಾನರು ವಿಪ್ಲವ ಮಾಡುವವರೂ, ಎಲ್ಲರಿಗೂ ದುಃಖವನ್ನು ಕೊಡುವವರೂ, ಮತ್ತು ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವ ನಿರ್ದಯರೂ ಆಗಿದ್ದಾರೆ!

ಇಲ್ಲಿ ಬರೆದಿರುವ ಹಾಗೆಯೇ, ಬೇರೆ ಯಾವುದಾದರೂ ಮತದವನು ಮುಸಲ್ಮಾನರ ಮೇಲೆ ಕೈ ಮಾಡುವನಾದರೆ, ಮುಸಲ್ಮಾನರು ಅನ್ಯರಿಗೆ ಕೊಡುವಂತಹ ದುಃಖವೇ, ಮುಸಲ್ಮಾನರಿಗೂ ಆಗುವುದೋ, ಅಥವಾ ಇಲ್ಲವೋ?

ಯಾರು ಮುಹಮ್ಮದ್ ಸಾಹೇಬರನ್ನು ಹೊರದೂಡಿದರೋ, ಅವರನ್ನು* ಖುದಾ ಸಾಯಿಸಿದನು! ಆದುದರಿಂದ, ಖುದಾ ಮಹಾಪಕ್ಷಪಾತಿಯಾಗಿದ್ದಾನೆ!

ಅಲ್ಲಾ! ಯಾವುದರಲ್ಲಿ ನಿರ್ಮಲವಾದ ನೀರು, ಹಾಲು, ಮದ್ಯ ಮತ್ತು ಜೇನುತುಪ್ಪ ಇವುಗಳ ಕಾಲುವೆಗಳಿರುವವೋ, ಅದು ಈ ಜಗತ್ತಿಗಿಂತ ಹೆಚ್ಚೆನಿಸಲು ಶಕ್ಯವೇ?

ಮತ್ತು, ಹಾಲಿನ ಕಾಲುವೆಗಳು ಎಂದಾದರೂ ಇರಬಲ್ಲವೇನು? ಏಕೆಂದರೆ, ಹಾಲು ಸ್ವಲ್ಪ ಹೊತ್ತಿನಲ್ಲಿಯೇ ಒಡೆದುಹೋಗುತ್ತದೆ!

**(ಪೃಥಿವಿಯ ಅಗಲುವಿಕೆ; ಪರ್ವತ ಹಾರುವುದು; ಸ್ವರ್ಗ–ಸುಖ!)**

**[143] ಅಲ್ಲಾಡಿಸಲ್ಪಟ್ಟ ಮೇಲೆ, ಯಾವಾಗ ಪೃಥಿವೀ ಅಲ್ಲಾಡಿಸಲ್ಪಡುವುದೋ.**

**ಮತ್ತು ಹಾರಾಡಿಸಲ್ಪಟ್ಟಮೇಲೆ, ಪರ್ವತಗಳು ಹಾರಿಸಲ್ಪಡುವುವೋ.**

**ಆಯಿತು! ಪತಂಗಗಳು ಚೂರು-ಚೂರಾಗಿ ಹೋಗುವುವು.**

**ಆಯಿತು! ಬಲಗಡೆಗಿರುವ ಭದ್ರಪುರುಷರೇನು? ಬಲಗಡೆಯ ಭದ್ರಪುರುಷರೇ!**

**ಮತ್ತು ಎಡಗಡೆಯುವರೇನು? ಎಡಗಡೆಯುವರೇ!**

**ಮೇಲೆ ಮಂಚಗಳು ಚಿನ್ನದ ಎಳೆಗಳಿಂದ ಹೆಣೆಯಲ್ಪಟ್ಟಿವೆ!**

**ಅವುಗಳ ಮೇಲೆ ಎದುರು-ಬದುರಾಗಿ ದಿಂಬುಗಳು ಇಡಲ್ಪಟ್ಟಿವೆ!**

**ಮತ್ತು ಅವುಗಳ ಮೇಲೆ ಸದಾ ಇರುವ ಹುಡುಗರು ತಿರುಗಾಡುತ್ತಿರುವರು!**

**ನೀರು ಕುಡಿಯುವ ಲೋಟಗಳೊಂದಿಗೆ! ಮತ್ತು ಹಿಡಿಯುಳ್ಳ ದೊಡ್ಡ ಬಟ್ಟಲುಗಳೊಂದಿಗೆ! ಮತ್ತು ಶುಭ್ರವಾದ ಮದಿರೆ ತುಂಬಿದ ಪಾತ್ರೆಗಳೊಂದಿಗೆ!**

**ಅದರಿಂದ ತಲೆನೋವುಗಳು ಉಂಟಾಗುವುದಿಲ್ಲ. ಮತ್ತು ಅಪಶಬ್ದಗಳನ್ನು ಆಡುವುದೂ ಇಲ್ಲ!**

**ಮತ್ತು ಅಭಿರುಚಿಗನುಸಾರವಾದಂತಹ ಪ್ರಕಾರದ ಒಣ ಹಣ್ಣುಗಳು!**†

**ಮತ್ತು ಅಭಿರುಚಿಗನುಸಾರವಾದಂತಹ ಜಾತಿಯ ಪಶು-ಪಕ್ಷಿಗಳ ಮಾಂಸ!**

**ಮತ್ತು ಅವರ ಸಲುವಾಗಿ ಸುಂದರವಾದ ಕಣ್ಣುಗಳನ್ನುಳ್ಳ ನಾರಿಯರು ಇರುತ್ತಾರೆ!**

**[ಕಣ್ಣುಗಳು] ಮರೆಯಲ್ಲಿಡಲ್ಪಟ್ಟ ಮುತ್ತುಗಳಂತೆ ಇರುತ್ತವೆ!**

**ಮತ್ತು [ಹಾಸಿದ] ದೊಡ್ಡ ಹಾಸಿಗೆಗಳಿವೆ!**

---

*ಶತ್ರುಗಳು ಮುಹಮ್ಮದ್ ಸಾಹೇಬರನ್ನು ಮಕ್ಕಾದಿಂದ ಹೊರದೂಡಿದ್ದರು. —ಯು.ಮೀ.

†ಎಂದರೆ, ದ್ರಾಕ್ಷಿ ಮುಂತಾದುವು—ಸಂ.

ನಿಶ್ಚಯವಾಗಿ ನಾವು ಉತ್ಪನ್ನ ಮಾಡಿದ್ದೇವೆ ನಾರಿಯರನ್ನು, ಮಾಡಬೇಕಾದ ವಿಶಿಷ್ಟ ಕ್ರಮದಿಂದ!*

ಆಯಿತು! ನಾವು ಅವರನ್ನು ಕುಮಾರಿಯರನ್ನಾಗಿ ಮಾಡಿದ್ದೇವೆ!

ಸೌಭಾಗ್ಯವತಿಯರು, ಸಮ-ಸಮನಾದ ವಯಸ್ಸಿನವರು!

ತೀರಿತು! ಅದರಿಂದ ಹೊಟ್ಟೆ ತುಂಬಿಸಿಕೊಳ್ಳುವವರಾಗಿದ್ದೀರಿ.

ಸರಿ! ಬೀಳುವ ನಕ್ಷತ್ರಗಳ ಆಣೆಯಿಡುತ್ತೇನೆ ನಾನು.

[ಕುರಾನ್:-ಮಂ. 7; ಸಿ. 27; ಸೂ. 56; ಆ. 4-6, 8, 9, 15-23,34-37,58,75]

## (ಪೃಥಿವೀ ಸ್ಥಿರವೇನು? ಪರ್ವತಗಳು ಪಕ್ಷಿಗಳೇನು?)

**ಸಮೀಕ್ಷಕ:**—ಈಗ ನೋಡಿರಿ, ಕುರಾನನ್ನು ರಚಿಸುವವನ ಲೀಲೆಯನ್ನು! ಅಲ್ಲಾ! ಪೃಥಿವಿಯಂತೂ ಅಲುಗಾಡುತ್ತಲೇ ಇರುತ್ತದೆ! ಆಗಲೂ ಅಲುಗಾಡುತ್ತಲೇ ಇರುವುದು! ಇದರಿಂದ, ಕುರಾನನ್ನು ರಚಿಸಿದವನು ಪೃಥಿವಿಯನ್ನು ಸ್ಥಿರವಾಗಿರುವುದೆಂದು ತಿಳಿದಿದ್ದನೆಂದು ಸಿದ್ಧವಾಗುತ್ತದೆ. ಅಲ್ಲಾ! ಪರ್ವತಗಳನ್ನು ಪಕ್ಷಿಗಳಂತೆ ಹಾರಿಸಿ ಬಿಡುವನೇನು? ಪತಂಗಗಳಾಗಿ ಹೋಗುವುವಾದರೂ ಕೂಡ, ಸೂಕ್ಷ್ಮ ಶರೀರ ಧಾರಿಗಳಾಗಿರುವರು. ಮತ್ತೆ, ಅವರಿಗೆ ಎರಡನೆಯ ಜನ್ಮವೇತಕ್ಕಿಲ್ಲ?

ಸರಿ, ಸ್ವಾಮಿ! ಖುದಾ ಶರೀರಧಾರಿಯಾಗಿರದಿದ್ದರೆ. ಅವನ ಬಲಗಡೆಗೆ, ಮತ್ತು ಎಡಗಡೆಗೆ ಹೇಗೆ ನಿಲ್ಲಲು ಸಾಧ್ಯವಿತ್ತು?

## (ಸ್ವರ್ಗದಲ್ಲಿ ತಿಗಣೆಗಳೂ ಇದ್ದು ದುರ್ಗತಿ ಮಾಡುತ್ತಿರಬೇಕು!)

ಅಲ್ಲಿ ಮಂಚಗಳು ಚಿನ್ನದ ಎಳೆಗಳಿಂದ ಹೆಣೆಯಲ್ಪಟ್ಟಿರುವುವಾದರೆ, ಬಡಗಿಗಳೂ, ಅಕ್ಕಸಾಲಿಗರೂ ಕೂಡ, ಅಲ್ಲಿರಬಹುದಲ್ಲವೇ! ಮತ್ತು ಅವರನ್ನು ರಾತ್ರಿಯಲ್ಲಿ ನಿದ್ರಿಸಲೂ ಕೂಡ, ಬಿಡದಿರಬಹುದಾದ ತಿಗಣೆಗಳು ಕಚ್ಚುತ್ತಿರಬಹುದಲ್ಲವೇ!

ಅವರು ದಿಂಬುಗಳನ್ನಿಟ್ಟುಕೊಂಡು, ನಿಷ್ಕರ್ಮರಾಗಿ ಸ್ವರ್ಗದಲ್ಲಿ ಕುಳಿತೇ ಇರುತ್ತಾರೋ, ಅಥವಾ ಏನಾದರೂ ಕೆಲಸವನ್ನೂ ಮಾಡುತ್ತಾರೋ? ಒಂದು ವೇಳೆ, ಕುಳಿತೇ ಇರುತ್ತಾರೆಯಾದರೆ, ಅವರಿಗೆ ಅನ್ನ ಜೀರ್ಣವಾಗದೇ, ಅವರು ರೋಗಿಗಳಾಗಿ, ಬೇಗ ಸತ್ತುಹೋಗುತ್ತಲೂ ಇರಬಹುದು! ಮತ್ತು ಕೆಲಸವನ್ನೇನಾದರೂ ಮಾಡುತ್ತಿರಬಹುದಾದರೆ, ಹೇಗೆ ಇಲ್ಲಿ ಶ್ರಮ-ಕೂಲಿಗಾರಿಕೆ ಮಾಡುತ್ತಾರೋ, ಹಾಗೆಯೇ ಅಲ್ಲಿಯೂ ಪರಿಶ್ರಮಮಾಡಿ ನಿರ್ವಾಹ ಮಾಡುತ್ತಿರಬಹುದು! ಮತ್ತೆ, ಇಲ್ಲಿಗಿಂತ ಅಲ್ಲಿ, ಸ್ವರ್ಗದಲ್ಲಿ, ವಿಶೇಷವೇನಿದೆ? ಏನೇನೂ ಇಲ್ಲ!

---

*ಎಂದರೆ, ಶರೀರದ ಏರು-ತಗ್ಗುಗಳು ವಿಶೇಷ ಪ್ರಕಾರವಾಗಿರುವಂತೆ, ಉತ್ಪನ್ನ ಮಾಡಿದ್ದೇವೆ, ಎಂದು ಅಭಿಪ್ರಾಯ.—ಯು.ಮೀ.

## (ಹುಡುಗರಿಂದ ಜನಸಂದಣಿ)

ಅಲ್ಲಿ ಹುಡುಗರು ಸದಾ ಇರುತ್ತಾರೆಯಾದರೆ, ಅವರ ತಾಯಿ-ತಂದೆಗಳೂ ಕೂಡ, ಇರುತ್ತಿರಬಹುದಲ್ಲವೇ? ಮತ್ತು ಅತ್ತೆ-ಮಾವಂದಿರೂ ಕೂಡ, ಇರಬಹುದಲ್ಲವೇ? ಆಗಲಂತೂ ಬಹು ದೊಡ್ಡ ನಗರವೇ ನೆಲೆಗೊಳ್ಳುತ್ತಿರಬಹುದಲ್ಲ? ಮತ್ತೆ, ಮಲ-ಮೂತ್ರಾದಿಗಳು ಹೆಚ್ಚುವುದರಿಂದ, ರೋಗಗಳೂ ಬಹಳವಾಗಿ ಉದ್ಭವಿಸುತ್ತಿರಬಹುದು !

## (ಇದು ಸ್ವರ್ಗವೋ, ಹೋಟಲೋ?)

ಏಕೆಂದರೆ, ಯಾವಾಗ ಒಣ ಹಣ್ಣುಗಳನ್ನು ತಿನ್ನುವರು ; ಗ್ಲಾಸುಗಳಲ್ಲಿ ನೀರನ್ನು ಕುಡಿಯುವರು ಮತ್ತು ಬಟ್ಟಲುಗಳಲ್ಲಿ ಮದ್ಯವನ್ನು ಕುಡಿಯುವರು; [ಆಗ] ಅವರಿಗೆ ತಲೆನೋವೂ ಬಾರದು; ಮತ್ತು ಯಾವನೂ ಅಪಶಬ್ದಗಳನ್ನಾಡುವುದಿಲ್ಲ!

ಯಥೇಷ್ಟವಾಗಿ ಫಲಗಳನ್ನು ಭಕ್ಷಿಸುವರು ಮತ್ತು ಪಶುಗಳ, ಹಾಗೂ ಪಕ್ಷಿಗಳ ಮಾಂಸಗಳನ್ನೂ ಕೂಡ, ತಿನ್ನುವರು! ಎಂದಮೇಲೆ, ಅನೇಕ ಪ್ರಕಾರದ ಕಷ್ಟಗಳೂ [ಆಗುತ್ತಿರಬಹುದು!]

ಪಕ್ಷಿಗಳೂ, ಪ್ರಾಣಿಗಳೂ ಅಲ್ಲಿರುವುವು. ಹತ್ಯೆಯಾಗುವುದು! ಮತ್ತು ಮೂಳೆಗಳು ಅಲ್ಲಿ-ಇಲ್ಲಿ ಹರಡಿರುವುವು! ಮತ್ತು ಕಟುಕರ ಅಂಗಡಿಗಳೂ ಇರಬಹುದು!

ಆಹಾ! ಏನೆಂದು ಹೇಳಬೇಕು, ಇವರ ಸ್ವರ್ಗದ ಪ್ರಶಂಸೆಯನ್ನು!! ಅದು ಅರಬ್‌ದೇಶವನ್ನೂ ಮೀರಿಸಿದಂತೆ ಕಾಣುತ್ತದೆ!!!

## (ಮದ್ಯ-ಮಾಂಸ ತಿನ್ನುವರಾದರೆ, ಸ್ತ್ರೀಯರೂ ಮತ್ತು ಹುಡುಗರೂ ಅಲ್ಲಿರಬೇಕಲ್ಲ!)

**ಮತ್ತು ಮದ್ಯ-ಮಾಂಸಗಳನ್ನು ಕುಡಿದು-ತಿಂದು ಉನ್ಮತ್ತರಾಗುತ್ತಾರೆ! ಆದುದರಿಂದಲೇ ಒಳ್ಳೆ-ಒಳ್ಳೆಯ ನಾರಿಯರೂ ಮತ್ತು ಹುಡುಗರೂ* ಕೂಡ, ಅಲ್ಲಿ ಅವಶ್ಯವಾಗಿರಬೇಕು! ಇಲ್ಲವಾದರೆ, ಇಂತಹ ದುಶ್ಚಟದವರ ತಲೆಗೆ ಕಾವು ಏರಿ, ಪ್ರಮತ್ತರಾಗಿ ಹೋದಾರು!**

---

*ಇಲ್ಲಿ "ಲೌಂಡಾ", ಎಂಬ ಶಬ್ದಪ್ರಯೋಗವಿದೆ. ಎಂದರೆ, ವಿಕೃತಕಾಮ-ತೃಪ್ತಿಗಾಗಿ ಪ್ರಯುಕ್ತವಾಗುವ ಅಬೋಧ ಬಾಲಕರು. ಈ ದುಶ್ಚಟವು ಅರಬ್‌ನಿಂದ ಮುಸಲ್ಮಾನರ ಮೂಲಕ ಭಾರತದ ನವಾಬರಲ್ಲೂ; ನಂತರ, ಹಲವು ಹಿಂದೂ ರಾಜರಲ್ಲೂ, ಧನಿಕರಲ್ಲೂ ಪ್ರವೇಶ ಪಡೆಯಿತು. ಅತಿಸ್ತ್ರೀಪ್ರಸಂಗದಿಂದ, ಪೌರುಷತ್ವವನ್ನು ಕಳೆದುಕೊಂಡ ಇಂತಹ ನಪುಂಸಕರು ಹಲವು ದುಶ್ಚಟಗಳಿಗೀಡಾಗುತ್ತಾರೆ. ಮುಸಲ್ಮಾನರ ಸ್ವರ್ಗದಲ್ಲಿ 'ಬಂಡಕ್ಕೆ' ಸದವಕಾಶವಿರುವುದರಿಂದ, 'ಇನ್ಸೊಂದರ' ವ್ಯವಸ್ಥೆಯನ್ನೂ ಸಹ ಖುದಾ ಮಾಡಲೇ ಬೇಕಲ್ಲ? →

ಬಹುಮಂದಿ ಸ್ತ್ರೀ-ಪುರುಷರು ಕುಳಿತುಕೊಳ್ಳಲು ಮತ್ತು ಮಲಗಲು ಅವಶ್ಯವಾಗಿ ದೊಡ್ಡ ದೊಡ್ಡ ಹಾಸಿಗೆಗಳಿರಬೇಕು! ಯಾವಾಗ ಖುದಾ ಕುಮಾರಿ ಹುಡುಗಿಯರನ್ನು ಸ್ವರ್ಗದಲ್ಲಿ ಉತ್ಪನ್ನಮಾಡುತ್ತಾನೋ, ಆಗ, ಕುಮಾರ ಹುಡುಗರನ್ನೂ ಉತ್ಪನ್ನಮಾಡುತ್ತಾನೆ!

## (ಅಲ್ಲಿ ಕುಮಾರಿಯರ ವಿವಾಹ ಕುಮಾರರೊಂದಿಗೆ ಏಕೆ ಮಾಡಲಿಲ್ಲ?)

ಸರಿ! ಕುಮಾರಿಯರ ವಿವಾಹವನ್ನೇನೋ, ಇಲ್ಲಿಂದ ಅಭ್ಯರ್ಥಿಗಳಾಗಿ ಹೋಗುವವರೊಂದಿಗೆ ಆಗುವುದೆಂದು ಖುದಾ ಬರೆದನು! ಆದರೆ, ಅಲ್ಲಿ ಸದಾ ಇರುವ ಕುಮಾರರ ವಿವಾಹಗಳು ಯಾರಾದರೂ ಕುಮಾರಿಯರೊಂದಿಗೆ [ಆಗುವುವು], ಎಂದು ಬರೆಯಲಿಲ್ಲವಲ್ಲ! **ಹಾಗಾದರೆ, ಅವರೂ ಕೂಡ, ಆ ಅಭ್ಯರ್ಥಿಗಳಿಗೆಯೇ ಕುಮಾರಿಯರಂತೆ ಕೊಟ್ಟು ಬಿಡಲ್ಪಡುವರೇನು?** ಇದರ ವ್ಯವಸ್ಥೆಯನ್ನೇನೂ ಸ್ವಲ್ಪವೂ ಬರೆಯಲಿಲ್ಲ! ಈ ದೊಡ್ಡ ಮರೆವು ಅದೇತಕ್ಕೆ ಖುದಾಗೆ ಉಂಟಾಯಿತು?

## (ಸಮವಯಸ್ಕರ ವಿವಾಹ ಸರಿಯಲ್ಲ)

ಸಮವಯಸ್ಕರಾದ ಸುಮಂಗಲೀ ಸ್ತ್ರೀಯರು ಪತಿಗಳನ್ನು ಪಡೆದುಕೊಂಡು, ಸ್ವರ್ಗದಲ್ಲಿರುತ್ತಾರೆಯಾದರೆ, ಸರಿ ಹೋಗಲಿಲ್ಲ!

**ಏಕೆಂದರೆ, ಸ್ತ್ರೀಯರಿಗಿಂತ ಪುರುಷರ ವಯಸ್ಸು ಎರಡರಷ್ಟು-ಎರಡೂವರೆಯಷ್ಟು* ಇರಬೇಕು.**

ಇದಂತೂ ಮುಸಲ್ಮಾನರ ಸ್ವರ್ಗದ ಕಥೆಯಾಯಿತು!

## (ಈಗ ನರಕದಲ್ಲಿ ಮುಳ್ಳುಗಿಡ)

ಇನ್ನು ನರಕದವರು ಮೂರು ಮೂಲೆಯ ಮುಳ್ಳು, ಹಣ್ಣುಗಳನ್ನು ತಿಂದು, ಹೊಟ್ಟೆ ತುಂಬಿಸಿಕೊಳ್ಳುವರಾದರೆ, ಆ ಮುಳ್ಳು ಮರಗಳೂ ನರಕದಲ್ಲಿರಬೇಕಲ್ಲ! ಆಗ, ಮುಳ್ಳುಗಳೂ ಚುಚ್ಚುತ್ತಿರಬಹುದು!

---

→ ದುಶ್ಚಟಗಳಿಗೀಡಾಗುವ ಪೌರುಷತ್ವಹೀನರು ನಾಲ್ಕು ವಿಧದವರಿರುತ್ತಾರೆ—'ಆಸೇಕ್ಯ', 'ಸೌಗಂಧಿಕ', 'ಕುಂಭಿಕ', ಹಾಗೂ 'ಈರ್ಷ್ಯಕ'! ಮತ್ತು ಕೊನೆಯದಾಗಿ, ನಪುಂಸಕನಾದ 'ಷಂಢಕ'. ಕುರಾನಿನಲ್ಲಿ ಮಾಡಿರುವ ಉಲ್ಲೇಖವು 'ಕುಂಭಿಕ'ನಿಗೆ ಸಂಬಂಧಿಸಿದೆ. ಹೆಚ್ಚು ವಿವರಗಳಿಗೆ ಸುಶ್ರುತ (ಆಯುರ್ವೇದ), ಶಾರೀರಸ್ಥಾನ, 2/38-45ನ್ನು ನೋಡಿ.—ಸಂ.

*ಇಲ್ಲಿ ಪಾಠ ಭ್ರಷ್ಟವಾಗಿದೆ. ಗ್ರಂಥಕಾರರು ಇದೇ ಗ್ರಂಥದಲ್ಲಿ ಮತ್ತು 'ಸಂಸ್ಕಾರವಿಧಿ'ಯಲ್ಲಿ ವರನ ವಯಸ್ಸು ಕನ್ಯೆಯ ವಯಸ್ಸಿಗಿಂತ ಒಂದೂವರೆ-ಎರಡರಷ್ಟು ಇರಬೇಕೆಂದು ಬರೆದಿದ್ದಾರೆ.—ಯು.ವೀ.

ಮತ್ತು ಬಿಸಿ ನೀರನ್ನೂ ಕುಡಿಯುವರು! ಈ ಮೊದಲಾದ ದುಃಖಗಳನ್ನು ನರಕದಲ್ಲಿ ಅನುಭವಿಸುವರು!

ಆಣೆಯನ್ನಿಡುವುದು ಪ್ರಾಯಶಃ ಅಸತ್ಯವಾದಿಗಳ ಕಾರ್ಯವಾಗಿದೆ; ಸತ್ಯವಾದಿಗಳದಲ್ಲ! ಒಂದುವೇಳೆ, ಖುದಾನೇ ಆಣೆಯನ್ನಿಡುತ್ತಾನೆ, ಎಂದಾದರೆ, ಅವನೂ ಕೂಡ, ಸುಳ್ಳಿನಿಂದ ದೂರವಿರಲಾರನು! [143]

## (ಅಲ್ಲಾಹನ ಮಿತ್ರರು)

[144] ಅಲ್ಲಾಹನು ನಿಶ್ಚಯವಾಗಿ, ತನ್ನ ಮಾರ್ಗದಲ್ಲಿ ಹೋರಾಡುವ ಜನರನ್ನು ತನ್ನ ಮಿತ್ರರನ್ನಾಗಿ ಇಟ್ಟುಕೊಳ್ಳುತ್ತಾನೆ.

[ಕುರಾನ್:-ಮಂ. 7; ಸಿ. 28; ಸೂ. 61; ಆ. 4]

## (ಸಂಪ್ರದಾಯದ ಹೆಸರಿನಲ್ಲಿ ಯುದ್ಧ ಅನುಚಿತ)

ಸಮೀಕ್ಷಕ:—ಆಹಾ! ಇದು ಸರಿಯೇ! ಇಂತಿಂತಹ ಮಾತುಗಳನ್ನುಪದೇಶಿಸಿ, ಬಡಪಾಯಿಗಳಾದ ಅರಬ್‌ದೇಶವಾಸಿಗಳನ್ನು ಎಲ್ಲರೊಂದಿಗೂ ಕಾದಾಡಿಸಿ, ಪರಸ್ಪರ ಶತ್ರುಗಳನ್ನಾಗಿ ಮಾಡಿ, ದುಃಖವನ್ನು ಕೊಡಿಸಿದನು! ಮತ್ತು ಸಂಪ್ರದಾಯದ ಧ್ವಜವನ್ನೇರಿಸಿ, ಯುದ್ಧವನ್ನು ಪ್ರಸರಿಸುವ ಇಂತಹವನನ್ನು ಯಾವ ಬುದ್ಧಿವಂತರೂ ಈಶ್ವರನೆಂದು ಎಂದಿಗೂ ಅಂಗೀಕರಿಸಲಾರರು!

ಯಾವನು ಜನಾಂಗದಲ್ಲಿ ವಿರೋಧವನ್ನು ಹೆಚ್ಚಿಸುವನೋ, ಅವನೇ ಎಲ್ಲರಿಗೂ ದುಃಖದಾಯಕನಾಗಿರುತ್ತಾನೆ! [144]

## (ರಸೂಲನ ಕುಟುಂಬದಲ್ಲಿ ಹಸ್ತಕ್ಷೇಪ)

[145] ಓ ನಬೀ! ಖುದಾ ನಿನ್ನ ಸಲುವಾಗಿ ಪವಿತ್ರವಾಗಿ ಮಾಡಿರುವ ವಸ್ತುವನ್ನು ನೀನೇಕೆ ಹೇಯವನ್ನಾಗಿ ಮಾಡುತ್ತೀಯೆ? ನೀನು ನಿನ್ನ ಪತ್ನಿಯರ ಪ್ರಸನ್ನತೆಯನ್ನು ಬಯಸುತ್ತೀಯೋ ಮತ್ತು ಅಲ್ಲಾಹನು ಕ್ಷಮೆಯನ್ನು ಮಾಡುವ ದಯಾಳುವಾಗಿದ್ದಾನೆ.

ಅವನು ನಿನ್ನನ್ನು ಬಿಟ್ಟುಬಿಡುವನಾದರೆ, ಸ್ವಾಮಿಯು* ಬದಲಾಗಿ ಅವನಿಗೆ, ನಿನಗಿಂತ ಉತ್ತಮರಾದ ಮುಸ್ಲಿಮೆಯರೂ ಮತ್ತು ನಂಬಿಕೆಯನ್ನುಳ್ಳವರೂ, ಸೇವಾತತ್ಪರರೂ, ಪಶ್ಚಾತ್ತಾಪ ಪಡುವವರೂ, ಭಕ್ತಿಯುಳ್ಳವರೂ, ಉಪವಾಸವ್ರತ

*ಅಲ್ಲಾಹನು—ಅನು.

ನಿಷ್ಠೆಯುರೂ, ಪುರುಷರನ್ನು ನೋಡಿರುವವರೂ. ಮತ್ತು ನೋಡಿರದವರೂ ಆದ ಪತ್ನಿಯರನ್ನು ಶೀಘ್ರವಾಗಿ ಕರುಣಿಸುವನು!

[ಕುರಾನ್:-ಮಂ. 7; ಸಿ. 28; ಸೂ. 66; ಆ. 1, 5]

## (ಪೈಗಂಬರನ ಮನೆಯ ಜಗಳದಿಂದ ಖುದಾಗೂ ಚಿಂತೆ)

**ಸಮೀಕ್ಷಕ:**—ಗಮನವಿತ್ತು ನೋಡಬೇಕೇನೆಂದರೆ, ಖುದಾ ಆದನಾದರೂ ಏನು! ಮುಹಮ್ಮದ್ ಸಾಹೇಬರ ಮನೆಯೊಳಗಿನ, ಹಾಗೂ ಹೊರಗಿನ ವ್ಯವಸ್ಥೆಯನ್ನು ಮಾಡುವ ಪರಿಚಾರಕನು ಮಾತ್ರ ಆದನು !

ಮೊದಲ ಆಯತ್ತಿನ ಮೇಲೆ ಎರಡು ಕಥೆಗಳಿವೆ. **ಒಂದನೆಯ ಕಥೆ ಇದು:**—

ಮುಹಮ್ಮದ್ ಸಾಹೇಬರಿಗೆ ಜೇನುತುಪ್ಪದ ಶರಬತ್ತು ಪ್ರಿಯವಾಗಿತ್ತು. ಅವರಿಗೆ ಅನೇಕ ಜನ ಪತ್ನಿಯರಿದ್ದರು.* ಅವರಲ್ಲಿ ಒಬ್ಬಳ ಮನೆಯಲ್ಲಿ ಕುಡಿಯುವುದರಲ್ಲಿ ತಡವಾದುದರಿಂದ, ಅನ್ಯರಿಗೆ† ಸಹಿಸಲಾಗದಂತೆ ತೋರಿತು. ಅವರೊಂದಿಗೆ ಮಾತು-ಕತೆಯಾದ ಮೇಲೆ, ಮುಹಮ್ಮದ್ ಸಾಹೇಬರು —"ನಾವು ಕುಡಿಯುವುದಿಲ್ಲ', ಎಂದು ಆಣೆಯಿಟ್ಟರು.

**ಎರಡನೆಯದು ಹೀಗಿದೆ:**—ಅವರ ಅನೇಕ ಪತ್ನಿಯರಲ್ಲಿ ಒಬ್ಬಳ 'ಸರದಿ' ಬಂದಿದ್ದಿತು. ಅವಳ ನೆಲೆಗೆ ರಾತ್ರಿಗೆ ಹೋದಾಗ, ಅವಳು ಇರಲಿಲ್ಲ. ತನ್ನ ತಂದೆಯ ಮನೆಗೆ ಹೋಗಿದ್ದಳು. ಮುಹಮ್ಮದ್ ಸಾಹೇಬರು ಒಬ್ಬಳು **"ಲೌಂಡೀ"**, ಎಂದರೆ ದಾಸಿಯನ್ನು ಕರೆದು, **'ಪಾವನ'**ಗೊಳಿಸಿದರು!

ಪತ್ನಿಗೆ ಈ ಸಮಾಚಾರ ಸಿಕ್ಕಿದಾಗ. ಅಪ್ರಸನ್ನಳಾಗಿ ಹೋದಳು. ಆಗ ಮುಹಮ್ಮದ್ ಸಾಹೇಬರು—"ನಾನು ಹೀಗೆ ಮಾಡುವುದಿಲ್ಲ", ಎಂದು

---

*ಮುಹಮ್ಮದ್ ಸಾಹೇಬರಿಗೆ ಪ್ರಥಮ ಪತ್ನಿಯಾದ ಖದೀಜಾ ಬೇಗಂ ಅಲ್ಲದೇ, ಇತರ ಪತ್ನಿಯರೂ ಇದ್ದರು. ಈ ಕೌಟುಂಬಿಕ-ರಸದಲ್ಲಿ ವಿರಸವಾಗದಂತೆ ಮುಹಮ್ಮದ್ ಸಾಹೇಬರು ತಮ್ಮ ಜಾಣತನದಿಂದ ಕುರಾನನ್ನು ಉಪಯೋಗಿಸಿ ಕೊಂಡಿದ್ದರು. ಆದರೂ, ಒಮ್ಮೊಮ್ಮೆ ಕಹಿ ಪ್ರಸಂಗ ಬಂದೇ ಬರುತ್ತಿತ್ತು. ಈ ಕೌಟುಂಬಿಕ ಘಟನೆಗಳು ಅವರ ಜೀವನಚರಿತ್ರದಲ್ಲಿದ್ದು ಅರಬ್ ದೇಶದಲ್ಲಿ, ವಿದಿತವಾಗಿದ್ದುವು. ಆದರೆ, ಭಾರತದಲ್ಲಿ ಆರ್ಯಸಮಾಜಿಗಳಾದ ಮಹಾಶಯ ರಾಜಪಾಲರು 'ರಂಗೀಲಾ ರಸೂಲ್', ಎಂಬ ಪುಸ್ತಕದಲ್ಲಿ ಇವನ್ನು ಉರ್ದುವಿನಲ್ಲಿ ಬರೆದು ಪ್ರಕಟಿಸಿದರು. ಇದರಿಂದ ರೊಚ್ಚಿಗೆದ್ದ ಭಾರತೀಯ ಮುಸಲ್ಮಾನರು ಅವರನ್ನು ಕೊಲೆಮಾಡಿಸಿದರು. ಕೊಲೆಗಡುಕನಿಗೆ ಗಲ್ಲಾಯಿತು. — ಸಂ.

†ಸವತಿಯರಿಗೆ— ಅನು.

ಆಣೆಯಿಟ್ಟರು. ಮತ್ತು ಪತ್ನಿಗೂ ಕೂಡ—"ನೀನು ಯಾರಿಗೂ ಈ ಮಾತನ್ನು ಹೇಳಬಾರದು", ಎಂದು ತಿಳಿಸಿಬಿಟ್ಟರು. ಪತ್ನಿಯು—'ನಾನು ಹೇಳುವುದಿಲ್ಲ', ಎಂದು ಒಪ್ಪಿಕೊಂಡಳು.

ನಂತರ, ಅವರು ಇನ್ನೊಬ್ಬಳು ಪತ್ನಿಯ ಹತ್ತಿರ ಹೋಗಿ ಹೇಳಿದರು. ಇದರ ಮೇಲೆ, ಖುದಾ—

**'ಯಾವ ವಸ್ತುವನ್ನು ನಾವು ನಿನ್ನ ಸಲುವಾಗಿ ಪವಿತ್ರಗೊಳಿಸಿದ್ದೆವೋ, ಅದನ್ನು ನೀನೇತಕ್ಕೆ ಹೇಯವಾಗಿ ಮಾಡುತ್ತೀಯೆ?'**, ಎಂಬ ಆಯತ್ತನ್ನು ಇಳಿಸಿದನು.

**(ಅನೇಕ ಪತ್ನಿಯರ ಕಾರಣದಿಂದ ಮುಹಮ್ಮದ್ ಸಾಹೇಬರ ದುರ್ಗತಿ)**

ಬುದ್ಧಿಶಾಲಿಗಳಾದ ಜನರು—"ಅಲ್ಲಾ! ಖುದಾ ಕೂಡ, ಎಲ್ಲಿಯಾದರೂ, ಯಾವನದೋ ಮನೆಯ [ಒಡಕನ್ನು] ಸರಿಪಡಿಸುತ್ತಾ ತಿರುಗಾಡುತ್ತಾನೇನು?", ಎಂದು ಆಲೋಚಿಸಿ ನೋಡಲಿ !

ಮತ್ತು ಈ ಮಾತುಗಳಿಂದ, ಮುಹಮ್ಮದ್ ಸಾಹೇಬರ ಆಚರಣವಂತೂ ಪ್ರಕಟವಾಗಿಯೇ ಇದೆ! **ಏಕೆಂದರೆ, ಯಾವನು ಅನೇಕ ಜನ ಸ್ತ್ರೀಯರನ್ನು 'ಇಟ್ಟು' ಕೊಂಡಿರುತ್ತಾನೋ, ಅವನು ಈಶ್ವರನ ಭಕ್ತನು, ಅಥವಾ ಪೈಗಂಬರನು ಹೇಗೆ ಆಗಬಲ್ಲನು ?**

**(ತನ್ನ ಪತ್ನಿಯರನ್ನು ಬಿಟ್ಟು, ದಾಸಿಯರಲ್ಲಿ ಜಾರುವುದು ನಾಚಿಕೆಗೇಡು)**

ಮತ್ತು ಯಾವನು ಪಕ್ಷಪಾತದಿಂದ, ಒಬ್ಬ ಸ್ತ್ರೀಯಳಿಗೆ ಅಪಮಾನವನ್ನೂ, ಮತ್ತೊಬ್ಬಳಿಗೆ ಗೌರವವನ್ನೂ ಸಲ್ಲಿಸುವನೋ, ಅವನು ಪಕ್ಷಪಾತಿಯಾಗಿ, ಅಧಾರ್ಮಿಕನೇಕಾಗುವುದಿಲ್ಲ?

**ಮತ್ತು ಯಾವನು ಬಹುಮಂದಿ ಪತ್ನಿಯರಿಂದಲೂ ಸಂತುಷ್ಟನಾಗದೇ, ದಾಸಿಯರೊಡನೆಯೂ ಸಿಕ್ಕಿಕೊಳ್ಳುವನೋ, ಅವನಿಗೆ ಲಜ್ಜೆ, ಭಯ ಮತ್ತು ಧರ್ಮ ಅನ್ವಯಿಸುವುದಾದರೂ ಎಲ್ಲಿನಿಂದ?** ಯಾವನೋ—

**"ಕಾಮಾತುರಾಣಾಂ ನ ಭಯಂ ನ ಲಜ್ಜಾ"**—

'ಕಾಮೀ ಮಾನವರಿಗೆ ಅಧರ್ಮದಿಂದ ಭಯ ಅಥವಾ ಲಜ್ಜೆ ಉಂಟಾಗುವುದಿಲ್ಲ!', ಎಂದು ಹೇಳಿದ್ದಾನೆ.

ಮತ್ತು ಇವರ ಖುದಾ ಕೂಡ, ಮುಹಮ್ಮದ್ ಸಾಹೇಬರ ಸ್ತ್ರೀಯರ, ಮತ್ತು ಪೈಗಂಬರರ ಜಗಳವನ್ನು ತೀರ್ಮಾನಿಸುವಲ್ಲಿ, ಮುಖ್ಯ ಪಂಚಾಯತದಾರನಾಗಿರುವಂತೆ

ಕಾಣುತ್ತಾನೆ! ಈಗ ಬುದ್ಧಿವಂತರಾದ ಜನರು—'ಈ ಕುರಾನ್ ವಿದ್ವಾಂಸನು ಅಥವಾ ಈಶ್ವರನು ರಚಿಸಿದುದೋ, ಅಥವಾ ಯಾವನಾದರೂ ಅವಿದ್ವಾಂಸನಾದ ಸ್ವಾರ್ಥಿಯು ರಚಿಸಿದುದೋ', ಎಂದು ಪರ್ಯಾಲೋಚಿಸಬೇಕು ! ಸ್ಪಷ್ಟವಾಗಿ ವಿದಿತವಾಗಿ ಹೋಗುವುದು!

## (ಪೈಗಂಬರರಿಗೆ ಹೊಸ ಪತ್ನಿಯರನ್ನು ತರುವ ಪ್ರಸ್ತಾವ)

ಮತ್ತು ಎರಡನೆಯ ಆಯತ್ತಿನಿಂದ,—"ಮುಹಮ್ಮದ್ ಸಾಹೇಬರ ಮೇಲೆ, ಅವರ ಯಾವಳೋ ಪತ್ನಿಯು ಕೋಪಿಸಿಕೊಂಡಿರಬಹುದು! ಅದರ ಮೇಲೆ, ಖುದಾ ಈ ಆಯತ್ತನ್ನು ಇಳಿಸಿ—

'ನೀನು ಗಲಿಬಿಲಿ ಮಾಡುವೆಯಾದರೆ, ಮತ್ತು ಮುಹಮ್ಮದ್ ಸಾಹೇಬರು ನಿನ್ನನ್ನು ಬಿಟ್ಟುಬಿಡುವರಾದರೆ, ಅವರಿಗೆ ಅವರ ಖುದಾ ಪುರುಷರ ಸಂಪರ್ಕವನ್ನೇ ಮಾಡದಿರುವ, ನಿನಗಿಂತ ಉತ್ತಮರಾದ ಪತ್ನಿಯರನ್ನು ಕೊಡುವನು,'. ಎಂದು ಬೆದರಿಸಿರಬಹುದು", ಎಂದು ಪ್ರತೀತವಾಗುತ್ತದೆ!

ಕಿಂಚಿನ್ಮಾತ್ರವಾದರೂ ಬುದ್ಧಿಯುಳ್ಳ ಮಾನವನು—"ಇದು ದೇವರ-ದಿಂಡರ ಕೆಲಸವೋ, ಅಥವಾ ತನ್ನ ಸ್ವಾರ್ಥಸಾಧನೆಯದೋ?", ಎಂದು ಆಲೋಚಿಸಿ ಕೊಳ್ಳಬಲ್ಲನು !

ಇಂತಿಂತಹ ಮಾತುಗಳಿಂದ, **'ಖುದಾ ಏನನ್ನೂ ಹೇಳುತ್ತಿರಲಿಲ್ಲ. ಕೇವಲ ದೇಶ-ಕಾಲಗಳನ್ನು ನೋಡಿ, ತಮ್ಮ ಸ್ವಾರ್ಥ ಸಿದ್ಧವಾಗುವುದಕ್ಕಾಗಿ, ಖುದಾನ ಕಡೆಯಿಂದ ಮುಹಮ್ಮದ್ ಸಾಹೇಬರು ಹೇಳಿಬಿಡುತ್ತಿದ್ದರು.', ಎಂಬುದು ಸರಿಯಾಗಿ ಸಿದ್ಧವಾಗಿದೆ !** ಯಾವ ಜನರು ಈ ಮಾತುಗಳನ್ನೆಲ್ಲಾ ಖುದಾನ ಕಡೆಯದೆಂದೇ ಗ್ರಹಿಸುತ್ತಾರೋ, ಅವರಿಗೆ, ನಾವೇ ಏನು?, ಬುದ್ಧಿವಂತರೆಲ್ಲರೂ—

**"ಖುದಾ ಏನಾಗಿದ್ದನು ? ಮುಹಮ್ಮದ್ ಸಾಹೇಬರಿಗಾಗಿ ಪತ್ನಿಯರನ್ನು ಒದಗಿಸುವ ನಾಯಿಂದ* ಮಾತ್ರನಾಗಿದ್ದನು!", ಎಂದೇ ಹೇಳುವರು.**

[145]

---

*ಮೊದಲು ಉತ್ತರ ಭಾರತದಲ್ಲಿ ವರ-ಕನ್ಯಾನ್ವೇಷಣದಲ್ಲಿ ನಾಯಿಂದನ ಪಾತ್ರ ಬಹಳ ವಾಗಿತ್ತು.—ಅನು.

ಇದು ಮುಸ್ಲಿಮರಲ್ಲಿನ ವ್ಯವಸ್ಥೆ. ಇದನ್ನು ಹಿಂದೂ ಕಾಯಸ್ಥರು ಅನುಕರಣೆ ಮಾಡಿ, ತಮ್ಮಲ್ಲಿಗೂ ಜಾರಿಗೆ ತಂದರು. ಹಳ್ಳಿಗಳಲ್ಲಿ ಈಗಲೂ ಪ್ರಚಲಿತವಾಗಿದೆ.—ಸಂ.

### (ಕಾಫಿರರೊಡನೆ ಜಗಳವಾಡುವ ಆದೇಶ)

[146] ಓ ನಬೀ! ಜಗಳವಾಡು ಕಾಫಿರರೊಂದಿಗೆ, ಮತ್ತು ಗುಪ್ತ ಶತ್ರುಗಳೊಂದಿಗೆ. ಮತ್ತು ಅವರ ಮೇಲೆ ಕಠೋರನಾಗಿ ವರ್ತಿಸು.

[ಕುರಾನ್:-ಮಂ. 7; ಸಿ. 28; ಸೂ. 66; ಆ. 9]

### (ಜಗಳಕ್ಕಾಗಿ ಮುಸಲ್ಮಾನರನ್ನು ಉದ್ರೇಕಿಸುವುದು ಅದೂರದರ್ಶಿತೆ)

ಸಮೀಕ್ಷಕ:—ನೋಡಿರಿ, ಮುಸಲ್ಮಾನರ ಖುದಾನ ಲೀಲೆಯನ್ನು! ಅನ್ಯ ಮತೀಯರೊಂದಿಗೆ ಹೋರಾಡಲು ಪೈಗಂಬರರನ್ನೂ ಮತ್ತು ಮುಸಲ್ಮಾನರನ್ನೂ ಉದ್ರೇಕಗೊಳಿಸುತ್ತಾನೆ. ಇದೇ ಕಾರಣದಿಂದ, ಮುಸಲ್ಮಾನರು ಉಪದ್ರವ ಮಾಡುವುದರಲ್ಲಿ ಪ್ರವೃತ್ತರಾಗಿರುತ್ತಾರೆ!

ಈ ಜನರು ಉಪದ್ರವ ಮಾಡುವುದನ್ನು ಬಿಟ್ಟು, ಎಲ್ಲರೊಂದಿಗೂ ಮೈತ್ರಿಯಿಂದ ವರ್ತಿಸುವಂತೆ, ಪರಮಾತ್ಮನು ಮುಸಲ್ಮಾನರ ಮೇಲೆ ಕೃಪಾದೃಷ್ಟಿಯನ್ನು ಬೀರಲಿ! [146]

### (ಎಂಟು ಜನರಿಂದ ಖುದಾನ ಆಸನವನ್ನು ಎತ್ತುವುದು)

[147] ಹರಿದು ಹೋಗುವುದು ಆಕಾಶ! ಆಯಿತು! ಅವನು ಅಂದು ಆಲಸ್ಯಯುಕ್ತನಾಗಿರುವನು.

ಮತ್ತು ದೇವದೂತರು ಅದರ ಅಂಚುಗಳ ಮೇಲೆ ಇರುವರು. ಮತ್ತು ಆ ದಿನ ನಿನ್ನ ಪ್ರಭುವಿನ ಆಸನವನ್ನು ಎಂಟು ಜನರು ತಮ್ಮ [ಹೆಗಲುಗಳ] ಮೇಲೆ ಎತ್ತುವರು.

ಆ ದಿನ ಎದುರಿಗೆ ತರಲ್ಪಡುವೆ ನೀನು. ಮುಚ್ಚಿಟ್ಟ ಯಾವ ಮಾತೂ ಗುಪ್ತವಾಗಿರುವುದಿಲ್ಲ.

ಆಯಿತು! ಯಾವನಿಗೆ ಅವನ ಕರ್ಮಪತ್ರವು ಅವನ ಬಲಗೈಯಲ್ಲಿ ಕೊಡಲ್ಪಡುವುದೋ, ಆಗಲೇ ಅವನು—'ತೆಗೆದುಕೋ, ಓದು ನನ್ನ ಕರ್ಮಪತ್ರವನ್ನು', ಎನ್ನುವನು.

ಮತ್ತು ಯಾವನಿಗೆ ಕರ್ಮಪತ್ರವು ಅವನ ಎಡಗೈಯಲ್ಲಿ ಕೊಡಲ್ಪಡುವುದೋ, ಅವನು—"ಅಯ್ಯೋ! ನನಗೆ ನನ್ನ ಕರ್ಮಪತ್ರ ಕೊಡಲ್ಪಡದೇ ಇರಬೇಕಾಗಿತ್ತಲ್ಲ!", ಎಂದು ಹೇಳುವನು.

[ಕುರಾನ್:- ಮಂ. 7; ಸಿ. 29; ಸೂ. 69; ಆ. 16-19,25]

### (ಆಕಾಶವೂ ಹರಿದು ಹೋಗುವುದೇನು?)

**ಸಮೀಕ್ಷಕ:**—ಭಲೇ! ಎಂತಹ 'ಫಿಲಾಸಫೀ' ಮತ್ತು ನ್ಯಾಯದ ಮಾತಾಗಿದೆ? ಅಲ್ಲಾ! ಆಕಾಶವೂ ಎಂದಾದರೂ ಹರಿದು ಹೋಗಬಲ್ಲದೇನು? ಅದು ಹರಿದು ಹೋಗುವುದಕ್ಕೆ ಬಟ್ಟೆಯು ಹಾಗಿದೆಯೇನು ?

ಮೇಲಿನ ಲೋಕವನ್ನು ಆಕಾಶವೆಂದು ಹೇಳುವರಾದರೆ, ಈ ಕಥನವು ವಿದ್ಯಾವಿರುದ್ಧವಾಗಿರುತ್ತದೆ !

### (ಕುರಾನಿನ ಖುದಾ ನಿಸ್ಸಂದೇಹವಾಗಿ ಶರೀರಧಾರಿ!)

ಈಗ ಕುರಾನಿನ ಖುದಾ ಶರೀರಧಾರಿಯಾಗಿರುವುದರಲ್ಲಿ ಸಂಶಯಾಸ್ಪದವಾದುದೇನೂ ಉಳಿಯಲಿಲ್ಲ. ಏಕೆಂದರೆ, **ಆಸನದ ಮೇಲೆ ಕುಳಿತುಕೊಳ್ಳುವುದು, ಎಂಟು ಜನ ಬೋಯಿಗಳಿಂದ ಎತ್ತಿಸಲ್ಪಡುವುದು** ಮೂರ್ತಿಮಂತನ ಹೊರತು, ಮತ್ತಾರಿಗೂ ಅನ್ವಯಿಸದು !

ಮತ್ತು ಮುಂದೆ ಅಥವಾ ಹಿಂದೆ, ಆಗಮನ-ನಿರ್ಗಮನ ಮಾಡುವುದೂ ಕೂಡ, ಮೂರ್ತಿಮಂತನಿಗೆ ಮಾತ್ರವೇ ಶಕ್ಯವಾಗಿರುತ್ತದೆ. ಅವನು ಮೂರ್ತಿಮಂತನಾಗಿರುವಾಗ, ಏಕದೇಶೀಯನಾಗಿರುವುದರಿಂದ, ಸರ್ವಜ್ಞನೂ, ಸರ್ವವ್ಯಾಪಕನೂ, ಸರ್ವಶಕ್ತಿಮಂತನೂ ಆಗಿರಲಾರನು. ಮತ್ತು, ಸಮಸ್ತ ಜೀವರ ಸರ್ವಕರ್ಮಗಳನ್ನೂ ಎಂದಿಗೂ ತಿಳಿದುಕೊಳ್ಳಲಾರನು!

### (ಕರ್ಮಪತ್ರಗಳನ್ನು ಓದಿ, ನ್ಯಾಯಮಾಡುವುದು ಸರ್ವಜ್ಞನ ಕೆಲಸವಲ್ಲ)

ಪುಣ್ಯಾತ್ಮರುಗಳ ಬಲಗೈಯಲ್ಲಿ ಪತ್ರಗಳನ್ನು ಕೊಡುವುದು, ಓದಿಸುವುದು, ಸ್ವರ್ಗಕ್ಕೆ ಕಳುಹಿಸುವುದು! ಮತ್ತು ಪಾಪಾತ್ಮರುಗಳ ಎಡಗೈಯಲ್ಲಿ ಕರ್ಮ-ಪತ್ರಗಳನ್ನು ಕೊಡುವುದು, ನರಕಕ್ಕೆ ಕಳುಹಿಸುವುದು! ಕರ್ಮಪತ್ರಗಳನ್ನೋದಿ, ನ್ಯಾಯತೀರ್ಮಾನ ಮಾಡುವುದು! ಇದು ಮಹಾದಾಶ್ಚರ್ಯದ ವಿಷಯವಾಗಿದೆ! ಅಲ್ಲಾ! ಈ ವ್ಯವಹಾರವು ಸರ್ವಜ್ಞನದಾಗಬಲ್ಲದೇನು? ಎಂದಿಗೂ ಇಲ್ಲ! ಇದೆಲ್ಲವೂ ಹುಡುಗುತನದ ಲೀಲೆಯಾಗಿದೆ! [147]

### (ಐವತ್ತು ಸಾವಿರ ವರ್ಷಗಳ ದಿನ;<br>ಗೋರಿಯಿಂದ ಹೊರಬಂದು ಓಡುವುದು)

**[148] ಅವನ ಕಡೆಗೆ ಆತ್ಮಗಳು ಮತ್ತು ದೇವದೂತರು ಹತ್ತುವರು. ಆ ದಿವಸದಂದು ಮಹಾವಿಪತ್ತು ಆಗುವುದು. ಮತ್ತು ಅದರ ಪರಿಮಾಣ ಐವತ್ತು ಸಾವಿರ ವರ್ಷಗಳಷ್ಟಾಗಿದೆ.**

ಯಾವಾಗ ಸಮಾಧಿಗಳಿಂದ ಓಡುತ್ತಾ ಹೊರಡುತ್ತಾರೋ. ಆಗ ವಿಗ್ರಹಗಳ ಆಲಯಗಳ ಕಡೆಗೆ ಓಡುವಂತೆ, ಇದ್ದಾರೆಂದು ತಿಳಿಯಿರಿ.

[ಕುರಾನ್:-ಮಂ. 7; ಸಿ. 29; ಸೂ. 70; ಆ. 4, 43]

## (ಐವತ್ತು ಸಾವಿರ ವರ್ಷಗಳ ತನಕ ಖುದಾ ಮೊದಲಾದವರು ಏನು ಮಾಡುವರು?)

**ಸಮೀಕ್ಷಕ:**—ಒಂದು ವೇಳೆ, ಐವತ್ತು ಸಾವಿರ ವರ್ಷಗಳು ದಿವಸದ ಪರಿಮಾಣ ವಾಗಿದ್ದರೆ, ಐವತ್ತು ಸಾವಿರ ವರ್ಷದ ರಾತ್ರಿ ಏತಕ್ಕಿಲ್ಲ? ಒಂದು ವೇಳೆ, ಅಷ್ಟು ದೊಡ್ಡ ರಾತ್ರಿಯಿಲ್ಲವಾದರೆ, ಅಷ್ಟು ದೊಡ್ಡ ಹಗಲು ಎಂದಿಗೂ ಇರಲಾರದು !

ಐವತ್ತು ಸಾವಿರ ವರ್ಷಗಳವರೆಗೆ, ಖುದಾ, ದೇವದೂತರು ಮತ್ತು ಕರ್ಮಪತ್ರ ಗಳವರು ನಿಂತುಕೊಂಡು, ಅಥವಾ ಕುಳಿತುಕೊಂಡು, ಅಥವಾ ಎಚ್ಚರದ ಸ್ಥಿತಿ ಯಲ್ಲಿಯೇ ಇರುವರೇನು? ಹೀಗೆ ಇರುವರಾದರೆ, ಎಲ್ಲರೂ ರೋಗಿಗಳಾಗಿ, ಮತ್ತೆ ಸತ್ತೇ ಹೋಗುವರು!

ಸಮಾಧಿಗಳಿಂದ ಎದ್ದು, ಖುದಾನ ನ್ಯಾಯಾಲಯದ ಕಡೆಗೆ ಓಡುವರೇನು? ಅವರ ಬಳಿ 'ಸಮನ್ಸ್'* ಸಮಾಧಿಗಳೊಳಗೆ ಹೇಗೆ ತಲಪುವುವು ?

ಮತ್ತು ಯಾರು ಪುಣ್ಯಾತ್ಮರೋ, ಅಥವಾ ಪಾಪಾತ್ಮರೋ. ಆಗಿದ್ದಾರೋ, ಆ ಬಡಪಾಯಿಗಳೆಲ್ಲರನ್ನೂ ಇಷ್ಟು ಕಾಲದವರೆಗೆ ಸಮಾಧಿಗಳಲ್ಲಿಯೇ ವಿಚಾರಾಧೀನ ಕೈದಿಗಳನ್ನಾಗಿ ಇಟ್ಟನೇತಕ್ಕೆ ?

ಮತ್ತು ಈ ದಿನಗಳಲ್ಲಿ ಖುದಾನ ನ್ಯಾಯಾಲಯ ಮುಚ್ಚಿ ಹೋಗಿರಬಹುದೇನು? ಮತ್ತು ಖುದಾ. ಹಾಗೂ ದೇವದೂತರು ನಿಷ್ಕರ್ಮರಾಗಿ ಕುಳಿತಿರಬಹುದೇನು? ಅಥವಾ ಯಾವ ಕೆಲಸವನ್ನು ಮಾಡುತ್ತಿರಬಹುದು? ತಮ್ಮ-ತಮ್ಮ ಸ್ಥಾನಗಳಲ್ಲಿ ಕುಳಿತು, ಅತ್ತ-ಇತ್ತ ತಿರುಗುತ್ತಾ, ನಿದ್ರಿಸುತ್ತಾ, ನೃತ್ಯ-ವಿನೋದಗಳನ್ನು ನೋಡುತ್ತಾ, ಅಥವಾ ಭೋಗ-ವಿಲಾಸಗಳಲ್ಲಿ ನಿರತರಾಗಿ ಇರಬಹುದೇನೋ! ಇಂತಹ ಮೊಬ್ಬು ಯಾವನ ರಾಜ್ಯದಲ್ಲಿಯೂ ಇರಲಾರದು! ಇಂತಿಂತಹ ಮಾತುಗಳನ್ನು ಕಾಡು ಜನರ ಹೊರತು, ಬೇರೆ ಯಾವನು ಒಪ್ಪಿಕೊಳ್ಳುವನು? [148]

## (ಒಂದರ ಮೇಲೊಂದು ಏಳು ಆಕಾಶಗಳನ್ನು ನಿರ್ಮಿಸುವುದು)

[149] ನಿಶ್ಚಯವಾಗಿ ಉತ್ಪನ್ನ ಮಾಡಿದೆವು, ನಿಮ್ಮನ್ನು ಅನೇಕ ಪ್ರಕಾರ ಗಳಿಂದ.

---

*Summons, ಎಂದರೆ, ನ್ಯಾಯಾಲಯದ ಕರೆಯೋಲೆ.—ಅನು.

ಅಲ್ಲಾಹನು ಏಳು ಆಕಾಶಗಳನ್ನು ಒಂದರ ಮೇಲೊಂದು ಹೇಗೆ ಸೃಜಿಸಿದ್ದಾನೆ, ಎಂದು ನೀವು ನೋಡಲಿಲ್ಲವೇನು?

ಮತ್ತು ಚಂದ್ರನನ್ನು ಅವುಗಳ ನಡುವೆ ಪ್ರಕಾಶಕನನ್ನಾಗಿ ಮಾಡಿದನು! ಮತ್ತು ಸೂರ್ಯನನ್ನು ದೀಪವನ್ನಾಗಿ ಮಾಡಿದನು!

[ಕುರಾನ್:-ಮಂ. 7; ಸಿ. 29; ಸೂ. 17; ಅ. 14-16]

## (ಉತ್ಪನ್ನ ಜೀವರು ಸ್ವರ್ಗದಲ್ಲಿ ಸದಾ ಹೇಗೆ ಇರಬಲ್ಲರು?)

**ಸಮೀಕ್ಷಕ:**—ಜೀವರನ್ನು ಖುದಾ ಉತ್ಪನ್ನ ಮಾಡಿದ್ದಾನೆಯಾದರೆ, ಅವರು ಎಂದಿಗೂ ನಿತ್ಯರೂ, ಅಮರರೂ ಆಗಿರಲಾರರು! ಮತ್ತೆ, ಸ್ವರ್ಗದಲ್ಲಿ ಸರ್ವದಾ ಹೇಗೆ ತಾನೇ ಇರಬಲ್ಲರು?

ಯಾವುದು ಉತ್ಪನ್ನವಾಗುತ್ತದೋ, ಆ ವಸ್ತು ಅವಶ್ಯವಾಗಿ ನಾಶವಾಗಿ ಹೋಗುತ್ತದೆ!

## (ನಿರಾಕಾರ ಆಕಾಶದ ತಳ ಯಾವುದು?)

[ಖುದಾ] ಆಕಾಶಗಳನ್ನು ಒಂದರ ಮೇಲೊಂದು ಹೇಗೆ ತಾನೇ ನಿರ್ಮಿಸಬಲ್ಲನು? ಏಕೆಂದರೆ, ಅದು ನಿರಾಕಾರವೂ, ಮತ್ತು ವ್ಯಾಪಕವೂ ಆದ ಪದಾರ್ಥವಾಗಿದೆ. ಒಂದು ವೇಳೆ, ಬೇರೆ ವಸ್ತುವಿನ ಹೆಸರನ್ನು 'ಆಕಾಶ', ಎಂದು ಇಡುವಿರಾದರೆ, ಆಗಲೂ ಕೂಡ, ಅದರ ಹೆಸರನ್ನು 'ಆಕಾಶ', ಎಂದು ಇಡುವುದು ವ್ಯರ್ಥವಾಗಿದೆ!

## (ಏಳು ಆಕಾಶಗಳಲ್ಲಿ ಪ್ರಕಾಶ ಹೇಗೆ?)

ಒಂದರ ಮೇಲೊಂದು ಆಕಾಶಗಳನ್ನು ಸೃಜಿಸಿರುವನಾದರೆ, ಅವೆಲ್ಲವುಗಳ ನಡುವೆ ಚಂದ್ರ-ಸೂರ್ಯರು ಎಂದಿಗೂ ಇರಲಾರರು! ಮಧ್ಯದಲ್ಲಿ ಇಡಲ್ಪಡುವುದಾದರೆ, ಮೇಲಿನದೊಂದು ಮತ್ತು ಕೆಳಗಿನದೊಂದು ಪದಾರ್ಥ ಪ್ರಕಾಶಿತವಾಗುತ್ತದೆ. ಎರಡನೆಯದಿಂದ ಆರಂಭಿಸಿ, ಎಲ್ಲದರಲ್ಲಿಯೂ ಕತ್ತಲೆಯಿರಬೇಕು. ಹಾಗೇನೂ ಕಾಣುವುದಿಲ್ಲ! **ಆದುದರಿಂದ, ಈ ಮಾತು ಸರ್ವಥಾ ಸುಳ್ಳಾಗಿದೆ.** [149]

## (ಅಲ್ಲಾಹನೊಂದಿಗೆ ಯಾವನನ್ನೂ ಕರೆಯಬೇಡಿ)

**[150] ಏನೆಂದರೆ, ಮಸೀದಿಗಳಿರುವುದು ಅಲ್ಲಾಹನ ಸಲುವಾಗಿ! ಸರಿ! ಯಾವನನ್ನೂ ಅಲ್ಲಾಹನ ಜೊತೆಯೊಂದಿಗೆ ಕರೆಯಬೇಡಿ.**

[ಕುರಾನ್:-ಮಂ. 7; ಸಿ. 29; ಸೂ. 72; ಅ. 18]

## ('ಕಲಮಾ'ದಲ್ಲಿ ಖುದಾನ ಹೆಸರಿನೊಂದಿಗೆ ಪೈಗಂಬರನ ಹೆಸರು ಹೇಗೆ?)

**ಸಮೀಕ್ಷಕ:**—ಒಂದು ವೇಳೆ, ಈ ಮಾತು ಸತ್ಯವಾಗಿರುವುದಾದರೆ, ಮುಸಲ್ಮಾನರು—

"ಲಾಇಲಾಹ್ ಇಲ್ಲಿಲ್ಲಾ: ಮುಹಮ್ಮದರ್ರಸೂಲಲ್ಲಾ:",—

ಈ 'ಕಲವಾ'*ದಲ್ಲಿ ಖುದಾನ ಜೊತೆಗೆ ಮುಹಮ್ಮದ್ ಸಾಹೇಬರನ್ನು ಏತಕ್ಕೆ ಕೂಗುತ್ತಾರೆ? ಈ ಮಾತು ಕುರಾನಿಗೆ ವಿರುದ್ಧವಾಗಿದೆ. ಮತ್ತು ಒಂದು ವೇಳೆ, ವಿರುದ್ಧವಾದುದನ್ನು ಮಾಡುವುದಿಲ್ಲವೆಂದರೆ, ಕುರಾನಿನ ಈ ಮಾತನ್ನು ಸುಳ್ಳಾಗಿಸುತ್ತಾರೆ!

**(ಮಸೀದಿಗಳು ಖುದಾನ ಮನೆಯೆಂಬುದೇ ವಿಗ್ರಹಾರಾಧನೆ!)**

ಮಸೀದಿಗಳು ಖುದಾನ ಮನೆಗಳಾದರೆ, ಮುಸಲ್ಮಾನರು 'ಮಹಾಮೂರ್ತಿಪೂಜಕ'ರಾದರು! ಏಕೆಂದರೆ, ಹೇಗೆ ಪೌರಾಣಿಕರು ಮತ್ತು ಜೈನರು ಚಿಕ್ಕ ವಿಗ್ರಹವನ್ನು ಈಶ್ವರನ ಮನೆಯೆಂದು ಒಪ್ಪುವುದರಿಂದ, ಮೂರ್ತಿಪೂಜಕರೆಂದು ನಿರ್ಧರಿಸಲ್ಪಡುವರೋ, [ಹಾಗೆಯೇ,] ಈ ಜನರು [ಮಹಾಮೂರ್ತಿಪೂಜಕರೆಂದು] ಏತಕ್ಕಾಗಿ ನಿರ್ಧರಿಸಲ್ಪಡುವುದಿಲ್ಲ? [150]

**(ಸೂರ್ಯ-ಚಂದ್ರರನ್ನು ಒಂದುಗೂಡಿಸುವುದು)**

[151] ಸೂರ್ಯನು ಮತ್ತು ಚಂದ್ರನು ಒಂದುಗೂಡಿಸಲ್ಪಡುವರು.

[ಕುರಾನ್:-ಮಂ. 7; ಸಿ. 29; ಸೂ. 75; ಆ. 9]

**(ಸೂರ್ಯ ಮತ್ತು ಚಂದ್ರ ಎಂದಿಗೂ ಒಂದುಗೂಡಲಾರರು)**

**ಸಮೀಕ್ಷಕ;**—ಅಲ್ಲಾ! ಸೂರ್ಯ-ಚಂದ್ರರು ಎಂದಿಗಾದರೂ ಒಂದಾಗಬಲ್ಲರೇ? ನೋಡಿರಿ! ಇದೆಷ್ಟು ತಿಳುವಳಿಕೆಯಿಲ್ಲದ ಮಾತಾಗಿದೆ?

ಮತ್ತು ಸೂರ್ಯ-ಚಂದ್ರರನ್ನು ಮಾತ್ರ ಒಂದುಗೂಡಿಸುವುದರಲ್ಲಿ ಏನು ಪ್ರಯೋಜನವಿತ್ತು? ಬೇರೆ ಎಲ್ಲ ಲೋಕಗಳನ್ನು ಒಂದು ಗೂಡಿಸದಿರುವುದರಲ್ಲಿ ಯುಕ್ತಿ ಏನಿದೆ? ಇಂತಹ-ಇಂತಹ ಅಸಂಭವವಾದ ಮಾತುಗಳು ಎಂದಿಗಾದರೂ ಪರಮೇಶ್ವರಕೃತವಾಗಬಲ್ಲವೇನು? ಅವಿದ್ವಾಂಸರ ಹೊರತು, ಬೇರೆ ಯಾವ ವಿದ್ವಾಂಸನ [ಮಾತುಗಳೂ] ಕೂಡ, ಆಗಿರಲಾರವು! [151]

**(ಸ್ವರ್ಗದಲ್ಲಿ ಬಾಲಕರು; ಅವರಿಗೆ ಖುದಾ ಮದ್ಯ ಕುಡಿಸುವುದು)**

[152] ಮತ್ತು ತಿರುಗಾಡುವರು ಅವುಗಳ ಮೇಲೆ ಸದಾ ಇರುವ ಬಾಲಕರುಗಳು. ಯಾವಾಗ ನೀನು ಅವರನ್ನು ನೋಡುವೆಯೋ, ಆಗ ನೀನು ಅವರುಗಳನ್ನು ಚದರಿದ ಮುತ್ತುಗಳೆಂದು ಊಹಿಸುವೆ!

---

*ಇಸ್ಲಾಂ ಧರ್ಮದ ಮೂಲಮಂತ್ರ—ಸಂ.

ಮತ್ತು ಬೆಳ್ಳಿಯ ಬಳೆಗಳು ತೊಡಿಸಲ್ಪಡುವುವು. ಮತ್ತು ಅವರ ಪ್ರಭುವು ಪವಿತ್ರವಾದ ಮದ್ಯವನ್ನು ಅವರಿಗೆ ಕುಡಿಸುವನು.

[ಕುರಾನ್:-ಮಂ. 7; ಸಿ. 29; ಸೂ. 76; ಆ. 19, 21]

## (ಸ್ವರ್ಗದಲ್ಲಿ ಬಾಲಕರೇತಕ್ಕೆ?)

**ಸಮೀಕ್ಷಕ:**—ಏನು ಸ್ವಾಮಿ! ಮುತ್ತಿನ ಬಣ್ಣದ ಹುಡುಗರನ್ನು ಅಲ್ಲಿ ಏತಕ್ಕಾಗಿ ಇಟ್ಟಿರುತ್ತಾರೆ? ಯುವಕರು ಸೇವೆಯನ್ನು [ಮಾಡಲಾರರೇನು?] ಅಥವಾ ನಾರಿಯರು ಅವರನ್ನು ತೃಪ್ತರನ್ನಾಗಿ ಮಾಡಲಾರರೇನು? ದುಷ್ಟ ಜನರು ಬಾಲಕರೊಂದಿಗೆ ಮಾಡುವ ಈ ಮಹಾ ಕೆಟ್ಟಕಾರ್ಯದ ಮೂಲವು ಕುರಾನಿನ ಈ ವಚನವೇ ಆಗಿದ್ದರೆ, ಅದರಲ್ಲಿ ಆಶ್ಚರ್ಯವಾದರೂ ಏನು?*

## (ಖುದಾ ತಾನೇ ಮದ್ಯ ಕುಡಿಸುವವನಾದರೆ, ಅವನ ಮಹತ್ವ ಮುಗಿಯಿತು)

ಮತ್ತು ಸ್ವರ್ಗದಲ್ಲಿ ಸ್ವಾಮಿ-ಸೇವಕಭಾವವಿರುವುದರಿಂದ, ಸ್ವಾಮಿಗೆ ಆನಂದ, ಮತ್ತು ಸೇವಕನಿಗೆ ಪರಿಶ್ರಮವಾಗುವುದರಿಂದ, ದುಃಖ ಮತ್ತು ಪಕ್ಷಪಾತವೇತಕ್ಕಿದೆ?

ಮತ್ತು ಸ್ವತಃ ಖುದಾನೇ ಮದ್ಯವನ್ನು ಕುಡಿಸುವವನಾದರೆ, ಅವನೂ ಕೂಡ, ಅವರಿಗೆ ಸೇವಕಸಂತಾಗುವನು! ಮತ್ತೆ, ಖುದಾನ ಹಿರಿಮೆ ಹೇಗೆ ತಾನೇ ಉಳಿದೀತು?

ಮತ್ತು ಅಲ್ಲಿ, ಸ್ವರ್ಗದಲ್ಲಿ ಸ್ತ್ರೀ-ಪುರುಷರ ಸಮಾಗಮ ಮತ್ತು ಗರ್ಭಸ್ಥಿತಿ, ಹಾಗೂ ಮಕ್ಕಳು-ಮರಿಗಳೂ ಕೂಡ, ಆಗುತ್ತಾರೋ, ಅಥವಾ ಇಲ್ಲವೋ? **ಒಂದು ವೇಳೆ, ಆಗುವುದಿಲ್ಲವಾದರೆ, ಅವರ ವಿಷಯಸೇವನ ಮಾಡುವಿಕೆಯು ವ್ಯರ್ಥವಾಯಿತು!** ಮತ್ತು ಆಗುವರಾದರೆ, ಆ ಜೀವರು ಎಲ್ಲಿಂದ ಬಂದರು?

## (ಖುದಾನ ಸೇವೆ ಮಾಡದೆಯೇ ಸ್ವರ್ಗ ಸಿಕ್ಕರೆ, ಅದು ಅನ್ಯಾಯ)

ಮತ್ತು ಖುದಾನ ಸೇವೆಯನ್ನು ಮಾಡದೆಯೇ, ಸ್ವರ್ಗದಲ್ಲಿ ಏಕೆ ಜನಿಸಿದರು? ಒಂದು ವೇಳೆ, ಜನಿಸಿದರೆ, ನಂಬಿಕೆಯನ್ನಿಡದೆಯೇ ಮತ್ತು ಖುದಾನ ಭಕ್ತಿಯನ್ನು ಮಾಡದೆಯೇ, ಬಿಟ್ಟಿಯಾಗಿ ಸ್ವರ್ಗ ಸಿಕ್ಕಿಹೋಯಿತು! ಯಾರಾರೋ ಬಡಪಾಯಿಗಳಿಗೆ ನಂಬಿಕೆಯಿಡುವುದರಿಂದಲೋ, ಮತ್ತು ಇನ್ನು ಯಾರಾರಿಗೂ ಧರ್ಮವಿಲ್ಲದೆಯೇ, ಸುಖ ಸಿಕ್ಕಿಬಿಟ್ಟರೆ, ಇದಕ್ಕಿಂತ ಬೇರೆ ದೊಡ್ಡ ಅನ್ಯಾಯ ಯಾವುದಿದ್ದೀತು? [152]

---

*1271-72 ನೆಯ ಪುಟದ ಪಾದಟಿಪ್ಪಣಿಯನ್ನು ನೋಡಿ.—ಸಂ.

### (ಕರ್ಮಾನುಸಾರ ಫಲ)

[153] ಕರ್ಮಾನುಸಾರವಾಗಿ ಪ್ರತಿಫಲಗಳು ಕೊಡಲ್ಪಡುವುವು.
ಮತ್ತು ಬಟ್ಟಲುಗಳಿವೆ ತುಂಬಿರುವಂತಹವು!
ಯಾವ ದಿನ ರೂಹ್* ಮತ್ತು ದೇವದೂತರು ಸಾಲು ಕಟ್ಟಿ ನಿಲ್ಲುವರೋ.

[ಕುರಾನ್:-ಮಂ. 7; ಸಿ. 30; ಸೂ. 78; ಆ. 26, 34, 38]

### (ದೇವದೂತರಿಗೆ, ಅಪ್ಸರೆಯರಿಗೆ, ಮತ್ತು ಬಾಲಕರಿಗೆ ಸ್ವರ್ಗ ಹೇಗೆ ಸಿಕ್ಕಿತು?)

**ಸಮೀಕ್ಷಕ:**—ಕರ್ಮಾನುಸಾರವಾಗಿ ಫಲಗಳು ಕೊಡಲ್ಪಡುವುವಾದರೆ, ಸದಾ ಸ್ವರ್ಗದಲ್ಲಿರುವ ಅಪ್ಸರೆಯರು, ದೇವದೂತರು ಮತ್ತು ಮುತ್ತಿನಂತಿರುವ ಹುಡುಗರು – ಇವರಿಗೆ ಯಾವ ಕರ್ಮಕ್ಕನುಸಾರವಾಗಿ ಸದಾಕಾಲಕ್ಕೂ ಸ್ವರ್ಗ ಸಿಕ್ಕಿತು?

**ಯಾವಾಗ ಬಟ್ಟಲುಗಳಲ್ಲಿ ತುಂಬಿ-ತುಂಬಿ, ಮದ್ಯವನ್ನು ಕುಡಿಯುವರೋ, ಆಗ ಉನ್ಮತ್ತರಾಗಿ ಕಾದಾಡದೇ ಹೇಗೆ ಇದ್ದಾರು!**

ಈ ಸ್ಥಳದಲ್ಲಿ 'ರೂಹ್'†, ಎನ್ನುವುದು ಎಲ್ಲ ದೇವದೂತರಿಗಿಂತಲೂ ದೊಡ್ಡವನಾಗಿರುವ ಒಬ್ಬ ದೇವದೂತನ ಹೆಸರಾಗಿದೆ. ಖುದಾ ರೂಹ್ ಮತ್ತು ಬೇರೆ ದೇವದೂತರನ್ನು ಪಂಕ್ತಿಬದ್ಧರನ್ನಾಗಿ ನಿಲ್ಲಿಸಿ, ಸೇನಾವ್ಯೂಹವನ್ನು ರಚಿಸುವನೇನು? ಸೇನೆಯಿಂದ ಸರ್ವಜೀವರಿಗೂ ಶಿಕ್ಷೆಯನ್ನು ಕೊಡಿಸುವನೇನು? ಮತ್ತು ಖುದಾ ಆ ಸಮಯದಲ್ಲಿ ನಿಂತಿರುವನೋ, ಅಥವಾ ಕುಳಿತಿರುವನೋ?

ಒಂದುವೇಳೆ, ಕಯಾಮತ್ತಿನ ವರೆಗೆ ಖುದಾ ತನ್ನ ಸೇನೆಯನ್ನೆಲ್ಲಾ ಒಟ್ಟುಗೂಡಿಸಿ, ಶೈತಾನನನ್ನು ಹಿಡಿದುಕೊಂಡು ಬಿಡುವುದಾದರೆ, ಅವನ ರಾಜ್ಯ ನಿಷ್ಕಂಟಕವಾಗಿ ಹೋದೀತು! 'ಈಶ್ವರತ್ವ', ಎಂಬ ಹೆಸರು ಇದರದ್ದೇ ಆಗಿದೆ!! [153]

### (ಸೂರ್ಯನನ್ನು ಸುತ್ತಿಡುವುದು; ಆಕಾಶದ ಚರ್ಮ ಸುಲಿಯುವುದು)

[154] ಯಾವಾಗ ಸೂರ್ಯನು ಸುತ್ತಲ್ಪಡುವನೋ.
ಮತ್ತು ಯಾವಾಗ ನಕ್ಷತ್ರಗಳು ಮಸುಕು-ಮಸುಕಾಗಿ ಹೋಗುವುವೋ.
ಮತ್ತು ಯಾವಾಗ ಪರ್ವತಗಳು ನಡೆಯಿಸಲ್ಪಡುವುವೋ.
ಮತ್ತು ಯಾವಾಗ ಆಕಾಶದ ಚರ್ಮ ಸುಲಿಯಲ್ಪಡುವುದೋ.

[ಕುರಾನ್:-ಮಂ. 7; ಸಿ. 30; ಸೂ. 81; ಆ. 1-3, 11]

---

*ಆತ್ಮಾ—ಅನು.
†ಎಂದರೆ, ಹಜರತ್ ಜಿಬ್ರಾಈಲ್—ಯು.ಮೀ.

(ಇವೆಲ್ಲಾ ಕಾಡುಜನರ ಮಾತುಗಳು)

ಸಮೀಕ್ಷಕ:—ಗೋಳಾಕೃತಿಯ ಸೂರ್ಯನು ಚಾಪೆಯಂತೆ ಸುತ್ತಲ್ಪಡುವನು, ಎಂಬುದು ಅತ್ಯಂತ ಅಜ್ಞಾನದ ವಿಷಯವಾಗಿದೆ! ಮತ್ತು ನಕ್ಷತ್ರಗಳು ಅದು ಹೇಗೆ ಮಸುಕಾಗಬಲ್ಲವು? ಮತ್ತು ಪರ್ವತಗಳು ಜಡವಾಗಿರುವುದರಿಂದ, ಹೇಗೆ ಚಲಿಸ ಬಲ್ಲವು? ಮತ್ತು ಆಕಾಶದ ಚರ್ಮ ಸುಲಿಯಲ್ಪಡುವುದೆನ್ನಲು ಅದನ್ನು ಪಶುವೆಂದು ತಿಳಿದರೇನು? ಇದು ಅತ್ಯಂತ ತಿಳಿವಳಿಕೆ ಇಲ್ಲದ ಮತ್ತು ಕಾಡುಜನರ ಮಾತಾಗಿದೆ! [154]

(ಆಕಾಶದ ಹರಿಯುವಿಕೆ;
ನಕ್ಷತ್ರಗಳ ಉದುರುವಿಕೆ; ಸಮುದ್ರಗಳ ಸೀಳುವಿಕೆ)

[155] ಮತ್ತು ಯಾವಾಗ ಆಕಾಶ ಹರಿದುಹೋಗುವುದೋ.
ಮತ್ತು ಯಾವಾಗ ನಕ್ಷತ್ರಗಳು ಉದುರಿಹೋಗುವುವೋ.
ಮತ್ತು ಯಾವಾಗ ಸಮುದ್ರಗಳು ಸೀಳಲ್ಪಡುವುವೋ.
ಮತ್ತು ಯಾವಾಗ ಗೋರಿಗಳು ಸಜೀವಗೊಳಿಸಲ್ಪಟ್ಟು ಎಬ್ಬಿಸಲ್ಪಡುವುವೋ.

[ಕುರಾನ್:-ಮಂ. 7; ಸಿ. 30; ಸೂ. 82; ಆ. 1-4]

(ಇವೆಲ್ಲಾ ಹುಡುಗರ ಮಾತುಗಳು)

ಸಮೀಕ್ಷಕ:—ಧನ್ಯ, ಧನ್ಯ! ಕುರಾನ್-ಕರ್ತೃಗಳಾದ 'ಫಿಲಾಸಫರ್ ಮಹಾ ಶಯರೇ'! ಆಕಾಶವನ್ನು ಯಾವನಾದರೂ ಹೇಗೆ ತಾನೇ ಹರಿಯಬಲ್ಲನು? ಮತ್ತು ನಕ್ಷತ್ರಗಳನ್ನು ಹೇಗೆ ತಾನೇ ಉದುರಿಸಬಲ್ಲನು? ಮತ್ತು ಸೀಳಿಹಾಕಲು ಸಮುದ್ರವು ಮರವಾಗಿದೆಯೇನು ? ಮತ್ತು ಸಜೀವಗೊಳಿಸಲು ಆದೀತೆನ್ನಲು ಗೋರಿಗಳು ಶವಗಳೇನು?

ಈ ಮಾತುಗಳೆಲ್ಲಾ ಹುಡುಗರವರ ಹಾಗೆ ಇವೆ! [155]

(ಗುಮ್ಮಟಗಳನ್ನುಳ್ಳ ಆಕಾಶ)

[156] ಗುಮ್ಮಟಗಳನ್ನುಳ್ಳ ಆಕಾಶದ ಆಣೆಯಿದೆ!
ಆದರೆ, ಆ ಕುರಾನ್ ದೊಡ್ಡದಿದೆ.
ಸುರಕ್ಷಿತ ಲೋಹದ ಪೆಟ್ಟಿಗೆಯಲ್ಲಿದೆ.

[ಕುರಾನ್:-ಮಂ. 7; ಸಿ. 30; ಸೂ. 85; ಆ. 1, 21, 22]

### (ಆಕಾಶವನ್ನು ಗುಮ್ಮಟದ ಕೋಟೆಯಂತೆ ನಿರ್ಮಿಸುವುದು ಅಜ್ಞಾನತೆ)

**ಸಮೀಕ್ಷಕ:**—ಈ ಕುರಾನನ್ನು ರಚಿಸಿದವನು ಭೂಗೋಳ-ಖಗೋಳಗಳನ್ನು ಸ್ವಲ್ಪವೂ ಓದಿರಲಿಲ್ಲ! ಇಲ್ಲವಾದರೆ, ಆಕಾಶವನ್ನು ಕೋಟೆಯಂತೆ ಗುಮ್ಮಟಗಳನ್ನುಳ್ಳದ್ದೆಂದು ಏಕೆ ಹೇಳುತ್ತಿದ್ದನು? ಒಂದುವೇಳೆ, ಮೇಷ ಮೊದಲಾದ ರಾಶಿಗಳನ್ನು "ಗುಮ್ಮಟ", ಎನ್ನುತ್ತಾನೆ, ಎನ್ನುವುದಾದರೆ, ಬೇರೆಯವು ಗುಮ್ಮಟಗಳೇತಕ್ಕಲ್ಲ? ಆದಕಾರಣ, ಇವು ಗುಮ್ಮಟಗಳಲ್ಲ; ಆದರೆ, ಎಲ್ಲವೂ ನಕ್ಷತ್ರಲೋಕಗಳಾಗಿವೆ!

ಈ ಕುರಾನ್ ಖುದಾನ ಬಳಿ ಇದೆಯೇನು? ಒಂದುವೇಳೆ, ಈ ಕುರಾನ್ ಅವನು ಬರೆದುದಾದರೆ, ಅದು ಕೂಡ, ವಿದ್ಯೆ ಮತ್ತು ಯುಕ್ತಿಗೆ ವಿರುದ್ಧವಾಗಿ, ಅವಿದ್ಯೆಯಿಂದ ಹೆಚ್ಚು ತುಂಬಿರಬಹುದು! [156]

### (ಖುದಾ ವಂಚನೆಗೆ ಪ್ರತಿಯಾಗಿ ವಂಚನೆ ಮಾಡುತ್ತಾನೆ)

**[157]** ನಿಶ್ಚಯವಾಗಿ ಅವರು ವಂಚನೆ* ಮಾಡುತ್ತಾರೆ, ಒಂದು ವಂಚನೆಯನ್ನು!

ಮತ್ತು ನಾನೂ ಕೂಡ, ವಂಚನೆ ಮಾಡುತ್ತೇನೆ, ಒಂದು ವಂಚನೆಯನ್ನು!

[ಕುರಾನ್:-ಮಂ. 7; ಸಿ. 30; ಸೂ. 86; ಆ. 15, 16]

### (ಖುದಾ ಕೂಡ ಮೋಸ ಮಾಡತೊಡಗಿದನೋ?)

**ಸಮೀಕ್ಷಕ:**—ಮೋಸಗಾರಿಕೆಯನ್ನು 'ಮಕರ್', ಎನ್ನುತ್ತಾರೆ. ಖುದಾ ಕೂಡ, ಮೋಸಗಾರನೇನು? ಮತ್ತು ಕಳುವಿಗೆ ಕಳುವೇ ಉತ್ತರ, ಮತ್ತು ಸುಳ್ಳಿಗೆ ಸುಳ್ಳೇ ಉತ್ತರವೇನು?

ಯಾವನಾದರೂ ಕಳ್ಳನು ಸತ್ಪುರುಷನ ಮನೆಯಲ್ಲಿ ಕಳ್ಳತನವನ್ನು ಮಾಡಿದರೆ, ಸತ್ಪುರುಷನು ಅವನ ಮನೆಗೆ ಹೋಗಿ ಕಳ್ಳತನ ಮಾಡಬೇಕೇನು? ಧನ್ಯ, ಧನ್ಯ! ಮಹಾಶಯ! ಕುರಾನ್-ಕರ್ತೃವೇ! [ಧನ್ಯ, ಧನ್ಯ!!] [157]

### (ಖುದಾ ಮತ್ತು ದೇವದೂತರು ಬರುವುದು)

**[158]** ಮತ್ತು ಯಾವಾಗ ಬರುವನೋ ನಿನ್ನ ಪ್ರಭು, ಮತ್ತು ದೇವದೂತರು ಪಂಕ್ತಿಬದ್ಧರಾಗಿ, [ಬರುವರೋ.]

ಮತ್ತು ಆ ದಿನ ತರಲ್ಪಡುವುದು ನರಕ!

[ಕುರಾನ್:-ಮಂ. 7; ಸಿ. 30; ಸೂ. 89; ಆ. 22, 23]

---

*ಕುರಾನಿನಲ್ಲಿ ಇದಕ್ಕೆ 'ಮಕರ್', ಎಂಬ ಶಬ್ದವಿದೆ.—ಸಂ.

## (ನರಕವೂ ಇಲ್ಲಿ-ಅಲ್ಲಿ ತರುವ ಪದಾರ್ಥವೇನು?)

**ಸಮೀಕ್ಷಕ:**—ಹೇಳಿರಿ, ಮಹೋದಯರೇ! ಹೇಗೆ ದುರ್ಗರಕ್ಷಕನು ಅಥವಾ ಸೇನಾಧ್ಯಕ್ಷನು ತನ್ನ ಸೈನಿಕರನ್ನು ಸಾಲಾಗಿ ನಿಲ್ಲಿಸಿ, ಸುತ್ತಾಡಿಸುತ್ತಾನೋ, ಹಾಗೆಯೇ ಇವರ ಖುದಾ ಆಗಿದ್ದಾನಲ್ಲ?

ಎತ್ತಿಕೊಂಡು, ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಲು, ನರಕವು ಬಿಂದಿಗೆಯಂತಿದೆ, ಎಂದು ತಿಳಿದಿದ್ದಾನೋ? ಇಷ್ಟು ಚಿಕ್ಕದಾಗಿರುವುದಾದರೆ, ಅಸಂಖ್ಯ ಕೈದಿಗಳು ಅದರಲ್ಲಿ ಹೇಗೆ ಹಿಡಿಸಬಲ್ಲರು? [158]

## (ಖುದಾನ ಹೆಣ್ಣು ಒಂಟೆ)

**[159] ಆಯಿತು! ಖುದಾನ ಪೈಗಂಬರನು ಅವರಿಗೆ—'ಖುದಾನ ಹೆಣ್ಣು ಒಂಟೆಯನ್ನು ರಕ್ಷಿಸಿರಿ. ಮತ್ತು ಅದಕ್ಕೆ ನೀರನ್ನು ಕುಡಿಸಬೇಕು.', ಎಂದು ಹೇಳಿದ್ದನು.**

**ತೀರಿತು! ಸುಳ್ಳಾಗಿಸಿದರು ಅದನ್ನು. ಸರಿ! ಅದರ ಕಾಲುಗಳನ್ನು ಕತ್ತರಿಸಿದರು. ಮುಗಿಯಿತು! ಅವರುಗಳ ಪ್ರಭುವು ಅವರ ಮೇಲೆ ಮಾರೀ ಬೇನೆಯನ್ನು ಕಳುಹಿಸಿದನು.**

**[ಕುರಾನ್:-ಮಂ. 7; ಸಿ. 80; ಸೂ. 91; ಆ. 18, 14]**

## (ಖುದಾ ಹೆಣ್ಣು ಒಂಟೆಯನ್ನೇಕೆ ಇಡುತ್ತಾನೆ? ಪ್ರಳಯಕ್ಕೆ ಮೊದಲು ಮಾರಿ ಹೇಗೆ?)

**ಸಮೀಕ್ಷಕ:**—ಖುದಾ ಕೂಡ, ಹೆಣ್ಣು ಒಂಟೆಯ ಮೇಲೆ ಕುಳಿತು ಪರ್ಯಟನ ಮಾಡುತ್ತಾನೇನು? ಇಲ್ಲವಾದರೆ, ಇಟ್ಟುಕೊಂಡನೇತಕ್ಕೆ?

ಮತ್ತು ಕಯಾಮತ್ತು ಬಾರದೇ, ತನ್ನ ನಿಯಮವನ್ನು ಮುರಿದು, ಅವರುಗಳ ಮೇಲೆ ಮಾರೀ ಬೇನೆಯನ್ನು ಏಕೆ ಕಳುಹಿಸಿದನು? ಕಳುಹಿಸಿದನಾದರೆ, ಅವರಿಗೆ ಶಿಕ್ಷೆಯನ್ನಿತ್ತನು! ಮತ್ತೆ, ಕಯಾಮತ್ತಿನ ರಾತ್ರಿ ನ್ಯಾಯದ ತೀರ್ಪು, ಮತ್ತು ಆ ರಾತ್ರಿಯ ಇರುವಿಕೆ ಸುಳ್ಳೆಂದು ತಿಳಿಯಲ್ಪಡುವುದು!

ಹೆಣ್ಣು ಒಂಟೆಯ ಈ ಉಲ್ಲೇಖದಿಂದ, ಅರಬ್ ದೇಶದಲ್ಲಿ ಗಂಡು ಒಂಟೆ-ಹೆಣ್ಣು ಒಂಟೆಗಳನ್ನು ಬಿಟ್ಟರೆ. ಬೇರೆ ವಾಹನಗಳು ಕಡಿಮೆ ಇರುತ್ತವೆ, ಎಂಬ ಊಹೆ ಏಳುತ್ತದೆ. ಇದರಿಂದ, ಯಾವನೋ ಅರಬ್ ದೇಶಿಯನು ಕುರಾನನ್ನು ರಚಿಸಿದ್ದಾನೆ, ಎಂಬುದು ಸಿದ್ಧವಾಗುತ್ತದೆ! [159]

## (ಕೂದಲನ್ನು ಹಿಡಿದು ಎಳೆಯುವುದು)

**[160] ಈ ರೀತಿ ಅವನು ನಿಲ್ಲುವುದಿಲ್ಲವಾದರೆ, ನಾವು ಅವಶ್ಯವಾಗಿ [ಅವನನ್ನು] ಅವನ ಮುಂಗುರುಳುಗಳನ್ನು ಹಿಡಿದು ಎಳೆಯುವೆವು.**

ಆ ತಲೆ ಸುಳ್ಳುಗಾರ, ಹಾಗೂ ಅಪರಾಧಿಯಾಗಿದೆ.
ನಾವು ಕರೆಯುವೆವು ನರಕದ ದೇವದೂತರನ್ನು.

[ಕುರಾನ್:-ಮಂ. 7; ಸಿ. 30; ಸೂ. 96; ಆ. 15,16, 18]

### (ತಲೆಯು ಎಂದಿಗಾದರೂ ಅಪರಾಧಿಯಾಗಬಲ್ಲದೇ?)

ಸಮೀಕ್ಷಕ:—ಭೃತ್ಯರುಗಳ ಈ ನೀಚ ಕಾರ್ಯವಾದ ಎಳೆದಾಟದಿಂದಲೂ ಕೂಡ, ಖುದಾ ದೂರ ಉಳಿಯಲಿಲ್ಲವಲ್ಲ!

ಅಲ್ಲಾ! ಜೀವನಲ್ಲದೇ ತಲೆ ಎಂದಿಗಾದರೂ ಸುಳ್ಳುಗಾರ, ಹಾಗೂ ಅಪರಾಧಿಯಾಗಬಲ್ಲದೇನು? ಸರಿ! ಕಾರಾಗಾರದ ಅಧಿಕಾರಿಯನ್ನು ಕರೆಕಳುಹಿಸುವಂತೆ ವರ್ತಿಸುವ ಇವನು ಎಂದಾದರೂ ಖುದಾ ಆಗಬಲ್ಲನೇನು? [160]

### (ಕುರಾನನ್ನು ಕತ್ತಲು ರಾತ್ರಿಯಲ್ಲಿ ಇಳಿಸುವುದು)

**[161] ನಿಶ್ಚಯವಾಗಿ ಇಳಿಸಿದೆವು ನಾವು ಕುರಾನನ್ನು ಅಂಧಕಾರದ ರಾತ್ರಿಯ ನಡುವೆ.**
**ಮತ್ತು ಅಂಧಕಾರದ ರಾತ್ರಿ ಏನೆಂದು ನೀನೇನು ಬಲ್ಲೆ?**
**ಅದರ ನಡುವೆ ದೇವದೂತರೂ ಮತ್ತು ಪವಿತ್ರಾತ್ಮನೂ ಪ್ರತಿಯೊಂದು ಕಾರ್ಯಕ್ಕಾಗಿ, ತಮ್ಮ ಪ್ರಭುವಿನ ಆಜ್ಞೆಯೊಂದಿಗೆ ಇಳಿಯುತ್ತಾರೆ.**

[ಕುರಾನ್:-ಮಂ. 7; ಸಿ. 30; ಸೂ. 97; ಆ. 1, 2, 4]

### (ಒಂದೇ ರಾತ್ರಿಯಲ್ಲಿ ಕುರಾನ್ ಇಳಿಸಿದ ಮಾತು ಅಸತ್ಯ)

ಸಮೀಕ್ಷಕ:—ಒಂದೇ ರಾತ್ರಿಯಲ್ಲಿ ಕುರಾನ್ ಇಳಿಯಿತಾದರೆ, ಆ ಆಯತ್ತು ಎಂದರೆ—

'ಆ ಸಮಯದಲ್ಲಿಳಿಯಿತು ಮತ್ತು ನಿಧಾನ-ನಿಧಾನವಾಗಿ ಇಳಿಸಿದನು,' ಎಂಬ, ಈ ಮಾತು ಹೇಗೆ ತಾನೇ ಸತ್ಯವಾಗಬಲ್ಲದು? ಮತ್ತು 'ರಾತ್ರಿ ಅಂಧಕಾರಮಯವಾಗಿದೆ!' ಈ ಬಗೆಗೆ ಕೇಳುವುದಾದರೂ ಏನಿದೆ?

ಮೇಲೆ-ಕೆಳಗೆ ಎಂಬುದೇನೂ ಸಿದ್ಧಿಸದು, ಎಂದು ನಾವು ಬರೆದೇ ಇದ್ದೇವೆ. ಮತ್ತು ಇಲ್ಲಿ—"ದೇವದೂತರು ಮತ್ತು ಪವಿತ್ರಾತ್ಮಾ ಖುದಾನ ಅಪ್ಪಣೆಯಿಂದ ಜಗದ್ವ್ಯವಸ್ಥೆ ಮಾಡಲು ಬರುತ್ತಾರೆ," ಎಂದು ಬರೆದಿದೆ. ಇದರಿಂದ, ಖುದಾ ಮಾನವನಂತೆ ಏಕದೇಶೀಯನಾಗಿದ್ದಾನೆ, ಎಂಬುದು ಸ್ಪಷ್ಟವಾಯಿತು!

## (ಈ ನಾಲ್ಕನೆಯ ಪವಿತ್ರಾತ್ಮನು ಎಲ್ಲಿಂದ ಬಂದ?)

ಇಲ್ಲಿಯವರೆಗೆ, ಖುದಾ, ದೇವದೂತರು ಮತ್ತು ಪೈಗಂಬರ್—ಈ ಮೂವರ ಕತೆಯಿದೆಯೆಂದು ನೋಡಿದ್ದೆವು. ಈಗ, ಒಬ್ಬ ಪವಿತ್ರಾತ್ಮಾ ನಾಲ್ಕನೆಯವನಾಗಿ ಹೊರಟುಬಂದನು! ಈಗ, ಈ ನಾಲ್ಕನೆಯವನಾದ ಪವಿತ್ರಾತ್ಮಾ ಏನಾಗಿದ್ದಾನೋ, ತಿಳಿಯದು! ಇದಂತೂ ಕ್ರೈಸ್ತರ ಮತದಂತೆ, ಎಂದರೆ ಪಿತಾ, ಪುತ್ರ, ಹಾಗೂ ಪವಿತ್ರಾತ್ಮಾ-ಈ ಮೂವರನ್ನು ಒಪ್ಪುವುದಕ್ಕಿಂತ ಹೆಚ್ಚಾಗಿ, ನಾಲ್ಕನೆಯವನೂ ಕೂಡ, ಬಂದಿಳಿದನು!

'ನಾವು ಈ ಮೂವರನ್ನೂ "ಖುದಾ", ಎಂದು ಒಪ್ಪುವುದಿಲ್ಲ', ಎನ್ನುವಿರಾದರೆ, ಹಾಗೂ ಆಗಲಿ! ಆದರೆ, ಪವಿತ್ರಾತ್ಮನು ಬೇರೆ ಇರುವಾಗ, ಖುದಾ, ದೇವದೂತರು ಮತ್ತು ಪೈಗಂಬರರನ್ನು ಪವಿತ್ರಾತ್ಮರೆನ್ನಬೇಕೋ, ಅಥವಾ ಬೇಡವೋ? ಒಂದು ವೇಳೆ, [ಅವರೂ ಕೂಡ,] ಪವಿತ್ರಾತ್ಮರಾಗಿದ್ದಾರೆ, ಎಂದಾದರೆ, ಕೇವಲ ಒಬ್ಬನ ಹೆಸರು "ಪವಿತ್ರಾತ್ಮಾ", ಎಂದೇಕೆ?

ಮತ್ತು, ಕುದುರೆಗಳೇ ಮೊದಲಾದ ಪ್ರಾಣಿಗಳು! ರಾತ್ರಿ-ಹಗಲು! ಮತ್ತು, ಕುರಾನ್! ಈ ಮೊದಲಾದುವುಗಳ ಮೇಲೆ ಖುದಾ ಆಣೆಯಿಡುತ್ತಾನೆ!

ಆಣೆಯಿಡುವುದು ಸತ್ಪುರುಷರ ಕಾರ್ಯವಲ್ಲ! [161]

## (ಕುರಾನಿನ ವಿಷಯದಲ್ಲಿ ಗ್ರಂಥಕರ್ತರ ಸಂಕ್ಷಿಪ್ತ ವಿಚಾರ)

[ಹೀಗೆ,] ಈ ಕುರಾನಿನ ವಿಷಯವನ್ನು ಸಂಕ್ಷಿಪ್ತವಾಗಿ ಬರೆದು, ಈಗ ಬುದ್ಧಿವಂತರ ಸಮ್ಮುಖದಲ್ಲಿ—'ಈ ಪುಸ್ತಕ ಹೇಗಿದೆ?', ಎಂದು ಮುಂಡಿಸುತ್ತೇನೆ.

ನನ್ನನ್ನು ಕೇಳುವಿರಾದರೆ. ಈ ಪುಸ್ತಕವು ಈಶ್ವರನಿಂದ ಅಥವಾ ವಿದ್ವಾಂಸನಿಂದ ರಚಿತವಾದುದಲ್ಲ! ಮತ್ತು ವಿದ್ಯಾಪುಸ್ತಕವೂ ಆಗಲಾರದು!

ಜನರು ವಂಚನೆಗೆ ಸಿಕ್ಕಿ, ತಮ್ಮ ಜನ್ಮವನ್ನು ವ್ಯರ್ಥವಾಗಿ ಕಳೆದುಕೊಳ್ಳದಿರಲಿ, ಎಂಬ ಉದ್ದೇಶ್ಯದಿಂದ, ಈ ರೀತಿ ಬಹಳ-ಸ್ವಲ್ಪ ದೋಷಗಳನ್ನು ಪ್ರಕಟಪಡಿಸಿದ್ದೇನೆ.

ಇದರಲ್ಲಿ ಯಾವ ಸ್ವಲ್ಪ ಸತ್ಯವಿದೆಯೋ, ಅದು ವೇದಗಳೇ ಮೊದಲಾದ ವಿದ್ಯಾಪುಸ್ತಕಗಳಿಗೆ ಅನುಕೂಲವಾಗಿರುವುದರಿಂದ, ನನಗೆ ಹೇಗೆ ಗ್ರಾಹ್ಯವೋ, ಹಾಗೆಯೇ, ಹಠ ಮತ್ತು ಪಕ್ಷಪಾತಗಳಿಂದ ರಹಿತರಾದ, ವಿದ್ವಾಂಸರೂ, ಬುದ್ಧಿಶಾಲಿಗಳೂ ಆದ ಅನ್ಯಮತೀಯರಿಗೂ ಗ್ರಾಹ್ಯವಾಗಿದೆ!

ಇದನ್ನು ಬಿಟ್ಟರೆ, ಇದರಲ್ಲಿ ಬೇರೆ ಏನೇನಿದೆಯೋ, ಅದೆಲ್ಲಾ ಅವಿದ್ಯೆ, ಭ್ರಾಂತಿ ಜಾಲ, ಮತ್ತು ಮಾನವನ ಆತ್ಮನನ್ನು ಪಶುವಿನಂತೆ ಮಾಡಿ, ಶಾಂತಿಭಂಗವನ್ನುಂಟು ಮಾಡಿ, ಉಪದ್ರವಗಳನ್ನು ಹರಡಿ, ಮಾನವರಲ್ಲಿ ವಿದ್ರೋಹವನ್ನು ವಿಸ್ತರಿಸಿ, ಪರಸ್ಪರ ದುಃಖವನ್ನು ಅಭಿವೃದ್ಧಿಗೊಳಿಸುವ ವಿಷಯವೇ ಆಗಿದೆ!

ಮತ್ತು ಪುನರುಕ್ತ ದೋಷಕ್ಕಂತೂ ಕುರಾನ್ ಭಂಡಾರವೇ ಆಗಿದೆ, ಎಂದು ತಿಳಿಯಿರಿ!

ಎಲ್ಲರೂ ಎಲ್ಲರ ಮೇಲೆಯೂ ಪ್ರೀತಿಯಿಡುವಂತೆ, ಪರಸ್ಪರ ಐಕ್ಯವನ್ನು ಬೆಳೆಯಿಸುವಂತೆ, ಮತ್ತು ಒಬ್ಬರು ಇನ್ನೊಬ್ಬರ ಸುಖದ ಉನ್ನತಿಯನ್ನು ಮಾಡುವುದರಲ್ಲಿ ಪ್ರವೃತ್ತರಾಗುವಂತೆ ಪರಮಾತ್ಮನು ಮಾನವರೆಲ್ಲರ ಮೇಲೆಯೂ ಕೃಪೆಯನ್ನು ಮಾಡಲಿ!

ನಾನು ಹೇಗೆ ನನ್ನ, ಮತ್ತು ಅನ್ಯರ ಮತ-ಮತಾಂತರಗಳ ದೋಷಗಳನ್ನು ಪಕ್ಷಪಾತರಹಿತನಾಗಿ ಪ್ರಕಾಶಪಡಿಸುತ್ತೇನೋ, ಅದೇ ರೀತಿಯಲ್ಲಿ, ಒಂದು ವೇಳೆ, ಸಮಸ್ತ ವಿದ್ವಾಂಸರೂ ಮಾಡುವವರಾದರೆ, ಪರಸ್ಪರರ ವಿರೋಧ ಕೊನೆಗೊಂಡು, ಒಗ್ಗಟ್ಟು ಕೈಗೂಡಿ, ಆನಂದದಲ್ಲಿ ಏಕಮತರಾಗಿ, ಸತ್ಯದ ಪ್ರಾಪ್ತಿಯನ್ನು ಸಿದ್ಧಿಸುವುದರಲ್ಲಿ ಕಠಿಣವಾದುದ್ದು ಏನಿದೆ?

ಹೀಗೆ, ಕುರಾನಿನ ವಿಷಯದಲ್ಲಿ ಸ್ವಲ್ಪ ಬರೆದಿದ್ದೇನೆ. ಇದನ್ನು ಬುದ್ಧಿವಂತರಾದ ಧಾರ್ಮಿಕ ಜನರು [ಓದಿ,] ಗ್ರಂಥಕಾರನ ಅಭಿಪ್ರಾಯವನ್ನು ತಿಳಿದು, [ಇದರಿಂದ] ಲಾಭ ಪಡೆಯಲಿ! ಒಂದು ವೇಳೆ, ಎಲ್ಲಿಯಾದರೂ ಭ್ರಮದಿಂದ ಅಯುಕ್ತವಾಗಿ ಏನಾದರೂ ಬರೆಯಲ್ಪಟ್ಟಿದ್ದರೆ, ಅದನ್ನು ಸರಿಪಡಿಸಿಕೊಳ್ಳಲಿ!

## (ಮುಸಲ್ಮಾನರ ಮತದ ವಿಷಯವನ್ನು ವೇದದಲ್ಲೂ ಹೇಳಿದೆಯೇನು?)

*ಈಗ ಒಂದು ಮಾತು ಉಳಿದುಕೊಂಡಿದೆಯೇನೆಂದರೆ—

---

*ಕಲಕತ್ತೆಯ "ಭಾರತಮಿತ್ರ"ದ ವಿಕ್ರಮ ಸಂವತ್ 1940 (ಇಸವಿ 1883) ಶ್ರಾವಣ, ಶುಕ್ಲಪಕ್ಷ ಷಷ್ಠೀ ಗುರುವಾರದ ಅಂಕದಲ್ಲಿ—'ಮುಸಲ್ಮಾನರ ಮತದ ಮೂಲವು ಅಥರ್ವವೇದದಲ್ಲಿದೆ', ಎಂಬ ಸಮಾಚಾರದೊಡನೆ ಅಲ್ಲೋಪನಿಷತ್ತಿನ ಉಲ್ಲೇಖ ಮಾಡಲಾಗಿತ್ತು. ಈ ಸಂಬಂಧದಲ್ಲಿ ಗ್ರಂಥಕರ್ತರು 'ಭಾರತಮಿತ್ರ'ದ ಸಂಪಾದಕನಿಗೆ ಪತ್ರ ಬರೆದಿದ್ದರು. ಈ ಪತ್ರವು 'ಋಷಿ ದಯಾನಂದ ಕೇ ಪತ್ರ ಔರ್ ವಿಜ್ಞಾಪನ್' ಗ್ರಂಥದ ಪುಟ 447, 448ರಲ್ಲಿ ಮುದ್ರಿತವಾಗಿದೆ.

ಅಲ್ಲೋಪನಿಷತ್ತಿನ ಈ ಸಮೀಕ್ಷಾಂಶವು ಈ ಸಂದರ್ಭದಲ್ಲಿ ಈ ಗ್ರಂಥದಲ್ಲಿ ಸಮ್ಮಿಳಿತವಾಗಿದೆ, ಎಂಬುದು ಸ್ಪಷ್ಟವಾಗಿದೆ.—ಯು.ವಿ.

ಅನೇಕ ಮಂದಿ ಮುಸಲ್ಮಾನರು—"ನಮ್ಮ ಸಂಪ್ರದಾಯದ ವಿಷಯವು ಅಥರ್ವ ವೇದದಲ್ಲಿ ಬರೆಯಲ್ಪಟ್ಟಿದೆ.", ಎಂದು ಹೇಳುತ್ತಾ, ಬರೆಯುತ್ತಾ ಅಥವಾ ಮುದ್ರಿಸುತ್ತಾ ಇರುತ್ತಾರೆ!

ಅಥರ್ವವೇದವಲ್ಲಿ ಈ ಮಾತಿನ ಹೆಸರೂ-ಚಿಹ್ನೆಯೂ ಕೂಡ, ಇಲ್ಲವೆಂಬುದೇ ಇದಕ್ಕೆ ಉತ್ತರವಾಗಿದೆ!

## ('ಅಲ್ಲೋಪನಿಷತ್')

ಪ್ರಶ್ನೆ:—ನೀವು ಸಮಸ್ತ ಅಥರ್ವವೇದವನ್ನೂ ನೋಡಿದ್ದೀರೇನು? ಒಂದು ವೇಳೆ, ನೋಡಿರುವಿರಾದರೆ, 'ಅಲ್ಲೋಪನಿಷತ್ತ'ನ್ನು ನೋಡಿರಬಹುದು! ಇದು ಸಾಕ್ಷಾತ್ತಾಗಿ ಅದರಲ್ಲಿ ಬರೆಯಲ್ಪಟ್ಟಿದೆ! ಮತ್ತೆ, ಅಥರ್ವವೇದದಲ್ಲಿ ಮುಸಲ್ಮಾನರ ನಾಮ-ಸಂಕೇತವೂ ಕೂಡ, ಇಲ್ಲವೆಂದು, ಅದೇಕೆ ಹೇಳುತ್ತೀರಿ?—

### ಅಥಾಽಲ್ಲೋಪನಿಷದಂ ವ್ಯಾಖ್ಯಾಸ್ಯಾಮಃ ॥

ಅಸ್ಮಾಲ್ಲಾಂ ಇಲ್ಲೇ ಮಿತ್ರಾವರುಣಾ ದಿವ್ಯಾನಿ ಧತ್ತೇ ।

ಇಲ್ಲಲ್ಲೇ ವರುಣೋ ರಾಜಾ ಪುನರ್ದ್ದದುಃ ।

ಹಯಾ ಮಿತ್ರೋ ಇಲ್ಲಾಂ ಇಲ್ಲಲ್ಲೇ ಇಲ್ಲಾಂ ವರುಣೋ ಮಿತ್ರಸ್ತೇಜಸ್ಕಾಮಃ ॥ 1 ॥

ಹೋತಾರಮಿಂದ್ರೋ ಹೋತಾರಮಿಂದ್ರ ಮಹಾಸುರಿಂದ್ರಾಃ ।

ಅಲ್ಲೋ ಜ್ಯೇಷ್ಠಂ ಶ್ರೇಷ್ಠಂ ಪರಮಂ ಪೂರ್ಣಂ ಬ್ರಹ್ಮಾಣಂ ಅಲ್ಲಾಮ್ ॥ 2 ॥

ಅಲ್ಲೋರಸೂಲ ಮಹಾಮದರಕಬರಸ್ಯ ಅಲ್ಲೋ ಅಲ್ಲಾಮ್ ॥ 3 ॥

ಆದಲ್ಲಾಬೂಕಮೇಕಕಮ್ । ಅಲ್ಲಾಬೂಕನಿಖಾತಮ್ ॥ 4 ॥

ಅಲ್ಲೋ ಯಜ್ಞೇನ ಹುತಹುತ್ವಾ । ಅಲ್ಲಾ ಸೂರ್ಯಚಂದ್ರಸರ್ವನಕ್ಷತ್ರಾಃ ॥ 5 ॥

ಅಲ್ಲಾ ಋಷೀಣಾಂ ಸರ್ವದಿವ್ಯಾಂ ಇಂದ್ರಾಯ ಪೂರ್ವಂ ಮಾಯಾ ಪರಮ-ಮಂತರಿಕ್ಷಾಃ ॥ 6 ॥

ಅಲ್ಲಃ ಪೃಥಿವ್ಯಾ ಅಂತರಿಕ್ಷಂ ವಿಶ್ವರೂಪಮ್ ॥ 7 ॥

ಇಲ್ಲಾಂ ಕಬರ ಇಲ್ಲಾಂ ಕಬರ ಇಲ್ಲಾಂ ಇಲ್ಲಲ್ಲೇತಿ ಇಲ್ಲಲ್ಲಾಃ ॥ 8 ॥

ಓಂ ಅಲ್ಲಾ ಇಲ್ಲಲ್ಲಾ ಅನಾದಿಸ್ವರೂಪಾಯ ಅಥರ್ವಣಾಶ್ಯಾಮಾ ಹುಂ ಹ್ರೀಂ ಜನಾನಪಶೂನಸಿದ್ಧಾನ್ ಜಲಚರಾನ್ ಅದೃಷ್ಟಂ ಕುರು ಕುರು ಫಟ್ ॥ 9 ॥

ಅಸುರಸಂಹಾರಿಣೀ ಹುಂ ಹ್ರೀಂ ಅಲ್ಲೋರಸೂಲಮುಹಮದರಕಬರಸ್ಯ ಅಲ್ಲೋ ಅಲ್ಲಾಂ ಇಲ್ಲಲ್ಲೇತಿ ಇಲ್ಲಲ್ಲಾಃ ॥ 10 ॥

ಇತ್ಯಲ್ಲೋಪನಿಷತ್ಸಮಾಪ್ತಾ ॥

ಇವರಲ್ಲಿ ಪ್ರತ್ಯಕ್ಷವಾಗಿ ಮುಹಮ್ಮದ್ ಸಾಹೇಬರನ್ನು **'ರಸೂಲ'**, ಎಂದು ಬರೆದಿರುವ ಕಾರಣದಿಂದ, ಮುಸಲ್ಮಾನರ ಮತವು ವೇದಮೂಲಕವಾಗಿದೆ, ಎಂದು ಸಿದ್ಧವಾಗುತ್ತದೆ.



## (ಅಥರ್ವವೇದದಲ್ಲೆಲ್ಲಿಯೂ ಪೈಗಂಬರನ ಅಥವಾ ಅವನ ಮತದ ಉಲ್ಲೇಖವಿಲ್ಲ)

**ಉತ್ತರ:**—ನೀವು ಅಥರ್ವವೇದವನ್ನು ನೋಡಿಲ್ಲವಾದರೆ, ನಮ್ಮ ಹತ್ತಿರ ಬನ್ನಿರಿ! ಆದಿಯಿಂದ ಸಮಾಪ್ತಿಯವರೆಗೆ ನೋಡಿರಿ! ಅಥವಾ ಯಾವನಾದರೂ ಅಥರ್ವವೇದಿಯ ಬಳಿ 20 ಕಾಂಡಗಳನ್ನುಳ್ಳ ಮಂತ್ರಸಂಹಿತಾ **ಅಥರ್ವವೇದವನ್ನು** ನೋಡಿಕೊಳ್ಳಿರಿ. ಎಲ್ಲಿಯೂ ನಿಮ್ಮ ಪೈಗಂಬರ ಸಾಹೇಬರ **ಹೆಸರಿನ, ಅಥವಾ ಮತದ ಚಿಹ್ನೆಯನ್ನು ನೀವು ಕಾಣುವುದಿಲ್ಲ!**

## (ಅಲ್ಲೋಪನಿಷತ್ತಿನ ರಚನೆ ಅಕ್ಬರನ ಸಮಯದಲ್ಲಾಯಿತು)

ಮತ್ತು ಈ ಅಲ್ಲೋಪನಿಷತ್ತು ಅಥರ್ವವೇದದಲ್ಲಿಯೂ ಇಲ್ಲ! ಅದರ ಗೋಪಥಬ್ರಾಹ್ಮಣದಲ್ಲಿ ಅಥವಾ ಯಾವುದೇ ಶಾಖೆಯಲ್ಲಿಯೂ ಇಲ್ಲ! ಇದನ್ನಂತೂ, ಅಕ್ಬರ್ ಬಾದಶಾಹನ ಕಾಲದಲ್ಲಿ ಯಾವನೋ ರಚಿಸಿದ್ದಾನೆ, ಎಂದು ಊಹೆಯಾಗುತ್ತದೆ. ಇದರ ಲೇಖಕನು ಸ್ವಲ್ಪ ಅರಬ್ಬಿಯನ್ನೂ ಮತ್ತು ಸ್ವಲ್ಪ ಸಂಸ್ಕೃತವನ್ನೂ ಓದಿದ್ದನೆಂದು ಕಾಣುತ್ತದೆ. ಏಕೆಂದರೆ, ಇವರಲ್ಲಿ ಅರಬ್ಬಿಯ ಮತ್ತು ಸಂಸ್ಕೃತದ ಪದಗಳು ಲಿಖಿತವಾಗಿರುವುದು ಕಂಡುಬರುತ್ತದೆ.

ನೋಡಿರಿ—

"ಅಸ್ಮಾಲ್ಲಾಂ ಇಲ್ಲೇ ಮಿತ್ರಾವರುಣಾ ದಿವ್ಯಾನಿ ಧತ್ತೇ".

ಈ ಮೊದಲಾಗಿ ಪತ್ತು ಅಂಕಗಳಲ್ಲಿ* ಹೇಗೆ ಬರೆದಿದೆ!, ಅದರಲ್ಲಿ— 'ಅಸ್ಮಾಲ್ಲಾಂ' ಮತ್ತು 'ಇಲ್ಲೇ', ಈ ಅರಬ್ಬಿಯ; ಮತ್ತು 'ಮಿತ್ರಾವರುಣಾ

---

*ಎಂದರೆ, ಹತ್ತು ಶ್ಲೋಕಗಳಲ್ಲಿ—ಯು.ಮೀ.

ದಿವ್ಯಾನಿ ಧತ್ತೇ!, ಈ ಸಂಸ್ಕೃತದ ಪದಗಳನ್ನು ಬರೆದಿದ್ದಾರೆ. ಹಾಗೆಯೇ ಎಲ್ಲೆಡೆಯೂ ಕಂಡುಬರುವುದರಿಂದ. ಯಾವನೋ ಸಂಸ್ಕೃತವನ್ನು ಮತ್ತು ಅರಬ್ಬಿಯನ್ನು ಓದಿರುವವನು ರಚಿಸಿದ್ದಾನೆ!

ಇದರ ಅರ್ಥವನ್ನು ನೋಡಲ್ಪಟ್ಟರೆ, ಇದು ಕೃತ್ರಿಮವೂ, ಅಯುಕ್ತವೂ, ವೇದಗಳಿಗೆ ಮತ್ತು ವ್ಯಾಕರಣದ ರೀತಿಗೆ ವಿರುದ್ಧವೂ ಆಗಿದೆ!

**(ಹೀಗೆಯೇ ಇತರರೂ ಇಂತಹ ಉಪನಿಷತ್ತುಗಳನ್ನು ರಚಿಸಿಕೊಂಡಿದ್ದಾರೆ)**

**ಹೇಗೆ ಈ ಉಪನಿಷತ್ತನ್ನು ಬರೆದಿದ್ದಾರೋ, ಹಾಗೆಯೇ ಅನೇಕ ಉಪನಿಷತ್ತುಗಳನ್ನು ಮತ-ಮತಾಂತರವಾದಿಗಳಾದ ಪಕ್ಷಪಾತಿಗಳು ರಚಿಸಿಕೊಂಡಿದ್ದಾರೆ! ಉದಾಹರಣೆಗೆ—**

**'ಸ್ವರೋಪನಿಷತ್'', 'ನೃಸಿಂಹತಾಪನೀ', 'ರಾಮತಾಪನೀ', 'ಗೋಪಾಲ-ತಾಪನೀ', ಮೊದಲಾದುವುಗಳಂತೆ ಬಹಳವಾಗಿ ರಚಿಸಿಕೊಂಡಿದ್ದಾರೆ!**

**(ಅಥರ್ವವೇದದ ಯಾವ ಶಾಖೆಯಲ್ಲೂ ಇದರ ವರ್ಣನೆ ಇಲ್ಲ)**

**ಪ್ರಶ್ನೆ:**—ಇಂದಿನವರೆಗೆ ಯಾವನೂ ಹೀಗೆ ಹೇಳಲಿಲ್ಲ. ಈಗ ನೀವು ಹೇಳುತ್ತೀರಿ! ನಾವು ನಿಮ್ಮ ಮಾತನ್ನು ಹೇಗೆ ಒಪ್ಪಿಕೊಳ್ಳೋಣ?

**ಉತ್ತರ:**—ನಿಮ್ಮ ಒಪ್ಪುವಿಕೆ ಅಥವಾ ಒಪ್ಪದಿರುವಿಕೆಯಿಂದ ನಮ್ಮ ಮಾತು ಸುಳ್ಳಾಗಲಾರದು! ಹೇಗೆ ನಾನು ಇದನ್ನು ಅಯುಕ್ತವೆಂದು ಪ್ರತಿಪಾದಿಸಿದ್ದೇನೆಯೋ, ಹಾಗೆಯೇ ನೀವು ಅಥರ್ವವೇದ, ಗೋಪಥ, ಅಥವಾ ಇದರ ಶಾಖೆಗಳಿಂದ, ಪ್ರಾಚೀನಲಿಖಿತ ಪುಸ್ತಕಗಳಲ್ಲಿ ಯಥಾವತ್ತಾದ ಉಲ್ಲೇಖವನ್ನು ತೋರಿಸುವಿರಾದರೆ, ಮತ್ತು ಅರ್ಥ-ಸಂಗತಿಯ ದೃಷ್ಟಿಯಿಂದಲೂ ಶುದ್ಧವೆಂದು ಸಿದ್ಧಪಡಿಸುವಿರಾದರೆ, ಆಗ ಸಪ್ರಮಾಣವಾಗಬಲ್ಲದು!

**(ಎಲ್ಲರೂ ತಮ್ಮ ಮತಗಳನ್ನು ಒಳ್ಳೆಯದೆನ್ನುತ್ತಾರೆ! ಯಾವುದನ್ನು ಸತ್ಯವೆಂದು ಒಪ್ಪೋಣ?)**

**ಪ್ರಶ್ನೆ:**—ನೋಡಿರಿ! ಯಾವುದರಲ್ಲಿ ಸರ್ವವಿಧದ ಸುಖವೂ ಮತ್ತು ಕೊನೆಯಲ್ಲಿ ಮುಕ್ತಿ-ಪ್ರಾಪ್ತಿಯೂ ಆಗುತ್ತದೋ, ಆ ನಮ್ಮ ಮತ ಎಷ್ಟು ಒಳ್ಳೆಯದಾಗಿದೆ!

**ಉತ್ತರ:**—ಹಾಗೆಯೇ, ತಮ್ಮ-ತಮ್ಮ ಮತಗಳವರಾದ ಸರ್ವಮತೀಯರೂ—

"ನಮ್ಮ ಮತ ಮಾತ್ರ ಒಳ್ಳೆಯದಾಗಿದೆ. ಉಳಿದುದೆಲ್ಲವೂ ಕೆಟ್ಟವಾಗಿವೆ! ನಮ್ಮ ಮತದ ಹೊರತು, ಅನ್ಯ ಮತದಲ್ಲಿ ಮುಕ್ತಿ ಲಭಿಸಲಾರದು!", ಎಂದೇ ಹೇಳುತ್ತಾರೆ.

ಈಗ ನಾವು ನಿಮ್ಮ ಮಾತನ್ನು ಸತ್ಯವೆಂದು ಒಪ್ಪಿಕೊಳ್ಳೋಣವೋ, ಅಥವಾ ಅವರದನ್ನೋ?

ನಾವೇನೋ—"ಸತ್ಯಭಾಷಣ, ಅಹಿಂಸೆ, ದಯೆ, ಮೊದಲಾದ ಶುಭಗುಣಗಳು ಎಲ್ಲ ಮತಗಳಲ್ಲಿಯೂ ಒಳ್ಳೆಯವಾಗಿವೆ! ಮತ್ತು ಉಳಿದ ವಾದ-ವಿವಾದಗಳು, ಈರ್ಷ್ಯೆ-ದ್ವೇಷ, ಮಿಥ್ಯಾಭಾಷಣ ಮೊದಲಾದ ಕರ್ಮಗಳು ಎಲ್ಲ ಮತಗಳಲ್ಲಿಯೂ ಕೆಟ್ಟವಾಗಿವೆ!", ಎಂದೇ ಅಂಗೀಕರಿಸುತ್ತೇವೆ.

ಒಂದುವೇಳೆ, ನಿಮಗೆ ಸತ್ಯ ಮತವನ್ನು ಗ್ರಹಿಸುವ ಇಚ್ಛೆ ಇರುವುದಾದರೆ, ವೈದಿಕ ಮತವನ್ನು ಗ್ರಹಿಸಿರಿ!

ಇದರಿಂದ ಮುಂದೆ, 'ಸ್ವಮಂತವ್ಯಾಮಂತವ್ಯದ ಪ್ರಕಾಶವು' ಸಂಕ್ಷೇಪವಾಗಿ ಬರೆಯಲ್ಪಡುವುದು.

ಇತಿ ಶ್ರೀಮದ್ದಯಾನಂದಸರಸ್ವತೀಸ್ವಾಮಿನಿರ್ಮಿತೇ ಸತ್ಯಾರ್ಥಪ್ರಕಾಶೇ

ಸುಭಾಷಾವಿಭೂಷಿತೇ ಯವನಮತವಿಷಯೇ

ಚತುರ್ದಶಃ ಸಮುಲ್ಲಾಸಃ ಸಂಪೂರ್ಣಃ ॥ ೧೪ ॥



# ಸ್ವಮಂತವ್ಯಾಮಂತವ್ಯಪ್ರಕಾಶಃ

## (ಸರ್ವತಂತ್ರ-ಸಿದ್ಧಾಂತದ ಪರಿಭಾಷೆ)

ಸರ್ವರೂ, ಸದಾಕಾಲದಿಂದಲೂ ಅನುಸರಿಸುತ್ತಾ ಬಂದಿರುವ, [ಈಗ] ಅಂಗೀಕರಿಸುತ್ತಿರುವ, ಮತ್ತು [ಮುಂದಕ್ಕೂ] ಅಂಗೀಕರಿಸುತ್ತಾ ಹೋಗುವ, [ಮತ್ತು] ಯಾವನಿಂದಲೂ ವಿರೋಧಿಸಲು ಶಕ್ಯವಾಗದ ತತ್ತ್ವ **"ಸರ್ವತಂತ್ರ ಸಿದ್ಧಾಂತ"**, ಎಂದರೆ, ಸಾರ್ವಭೌಮ* ಸಾರ್ವಜನಿಕ ಧರ್ಮವಾಗಿದೆ. ಆದುದರಿಂದ, ಅದನ್ನು **'ಸನಾತನ ನಿತ್ಯಧರ್ಮ'**, ಎನ್ನುತ್ತಾರೆ.

## (ಪ್ರಮಾಣಕ್ಕೆ ಯಾರು ಯೋಗ್ಯ? ಯಾರಲ್ಲ?)

ಒಂದುವೇಳೆ, ಅವಿದ್ಯಾಯುಕ್ತನಾದ ಮಾನವನು ಅಥವಾ ಯಾವನಾದರೂ ಮತೀಯನಿಂದ ಭ್ರಾಂತಿಗೀಡು ಮಾಡಲ್ಪಟ್ಟ ಮಾನವನು ಅದನ್ನು ಅನ್ಯಥಾ ತಿಳಿಯುವ ನಾದರೆ, ಅಥವಾ ಅಂಗೀಕರಿಸುವನಾದರೆ, ಅದನ್ನು ಯಾವ ಬುದ್ಧಿವಂತರೂ ಕೂಡ, ಸ್ವೀಕರಿಸಲಾರರು. ಆದರೆ, ಯಾವುದನ್ನು **'ಆಪ್ತರು'**, ಎಂದರೆ **ಸತ್ಯವನ್ನು ಅಂಗೀಕರಿಸುವವರೂ, ಸತ್ಯವಾದಿಗಳೂ, ಸತ್ಯಾನುಷ್ಠಾನವನ್ನು ಮಾಡುವವರೂ, ಪರೋಪಕಾರಿಗಳೂ, ಪಕ್ಷಪಾತರಹಿತರೂ ಆದ ವಿದ್ವಾಂಸರು ಒಪ್ಪಿಕೊಳ್ಳುವರೋ, ಅದೇ ಎಲ್ಲರಿಗೂ, ಮಂತವ್ಯ'†[ವಾದುದರಿಂದ ಪ್ರಮಾಣಕ್ಕೆ ಯೋಗ್ಯ]ವಾಗಿರುತ್ತದೆ!** ಮತ್ತು ಯಾವುದನ್ನು [ಅವರು] ಒಪ್ಪಿಕೊಳ್ಳುವುದಿಲ್ಲವೋ, ಅದು **'ಅಮಂತವ್ಯ'** ಆಗಿರುವ ಕಾರಣದಿಂದ, ಪ್ರಮಾಣಕ್ಕೆ ಯೋಗ್ಯವಾಗಿರುವುದಿಲ್ಲ!

## (ನನ್ನ ಮಂತವ್ಯ ಯಾವುದು?)

**ಈಗ, ವೇದಗಳೇ ಮೊದಲಾದ ಸತ್ಯಶಾಸ್ತ್ರಗಳಿಂದಲೂ, ಮತ್ತು ಬ್ರಹ್ಮನಿಂದಾ ರಂಭಿಸಿ ಜೈಮಿನಿ ಮುನಿಯವರೆಗಿನವರು ಅಂಗೀಕರಿಸಿರುವ, ಮತ್ತು ನಾನೂ ಕೂಡ, ಅಂಗೀಕರಿಸುವ, ಈಶ್ವರನೇ ಮೊದಲಾದ ಪದಾರ್ಥಗಳನ್ನು ಸಮಸ್ತ ಸಜ್ಜನ ಮಹಾ ಶಯರುಗಳ ಸಮ್ಮುಖದಲ್ಲಿ ಪ್ರಕಾಶ ಪಡಿಸುತ್ತೇನೆ.**

**ಮೂರು ಕಾಲಗಳಲ್ಲಿಯೂ, ಸರ್ವರಿಗೂ ಏಕಪ್ರಕಾರವಾಗಿ ಸ್ವೀಕಾರಯೋಗ್ಯ ವಾಗಿರುವುದನ್ನೇ ನನ್ನ ಮಂತವ್ಯ, ಎಂದು ನಾನು ತಿಳಿಯುತ್ತೇನೆ.**

---

*ಮೂಲಗ್ರಂಥದಲ್ಲಿ 'ಸಾಮ್ರಾಜ್ಯ', ಎಂಬ ಶಬ್ದವಿದೆ.—ಸಂ.

†ಎಂದರೆ, ಮಾನನೀಯ—ಅನು.

ಯಾವುದೇ ನವೀನ ಕಲ್ಪನೆಯನ್ನು ಅಥವಾ ಮತ-ಮತಾಂತರವನ್ನು ಪ್ರತಿಷ್ಠಾಪಿಸುವ ಅಭಿಪ್ರಾಯವು ನನಗೆ ಲೇಶಮಾತ್ರವೂ ಇಲ್ಲ! ಆದರೆ, ಯಾವುದು ಸತ್ಯವೋ, ಅದನ್ನು ಒಪ್ಪುವುದು-ಒಪ್ಪಿಸುವುದು, ಮತ್ತು ಯಾವುದು ಅಸತ್ಯವೋ, ಅದನ್ನು ಬಿಡುವುದು ಮತ್ತು ಬಿಡಿಸುವುದು ನನಗೆ ಅಭೀಷ್ಟವಾಗಿದೆ!

**(ಧರ್ಮಯುಕ್ತ ಮಾತುಗಳನ್ನು ಬಿಟ್ಟುಬಿಡುವುದು ಮನುಷ್ಯಧರ್ಮವಲ್ಲ)**

ಒಂದುವೇಳೆ, ನಾನು ಪಕ್ಷಪಾತ ಮಾಡುತ್ತಿದ್ದರೆ, ಆರ್ಯಾವರ್ತದಲ್ಲಿ ಪ್ರಚಲಿತವಾಗಿರುವ ಮತಗಳಲ್ಲಿ, ಯಾವುದಾದರೂ ಒಂದು ಮತದ ಆಗ್ರಹಿಯಾಗಿರುತ್ತಿದ್ದೆನು.

ಆದರೆ, [ನಾನು] ಆರ್ಯಾವರ್ತದಲ್ಲಿ ಅಥವಾ ಅನ್ಯ ದೇಶಗಳಲ್ಲಿ ಪ್ರಚಲಿತವಾಗಿರುವ ಯಾವ ಅಧರ್ಮಯುಕ್ತವಾದ ನಡವಳಿಕೆಗಳಿವೆಯೋ, ಅವುಗಳ ಸ್ವೀಕಾರವನ್ನೂ, ಮತ್ತು ಯಾವ-ಯಾವ ಧರ್ಮಯುಕ್ತವಾದ ವಿಷಯಗಳಿವೆಯೋ, ಅವುಗಳ ತ್ಯಾಗವನ್ನೂ, ಮಾಡುವುದಿಲ್ಲ! ಮಾಡಲಪೇಕ್ಷಿಸುವುದೂ ಇಲ್ಲ! ಏಕೆಂದರೆ, ಹೀಗೆ ಮಾಡುವುದು ಮಾನವಧರ್ಮಕ್ಕೇ ಹೊರತಾದುದಾಗಿದೆ!

**(ನಿಜವಾದ ಮನುಷ್ಯ ಯಾವನೆಂದು ಕರೆಯಲ್ಪಡುತ್ತಾನೆ?)**

ಮನನಶೀಲನಾಗಿ, ತನಗಿರುವಂತೆಯೇ, ಅನ್ಯರಿಗೂ ಸುಖ-ದುಃಖಗಳೂ, ಮತ್ತು ಹಾನಿ-ಲಾಭಗಳೂ ಇವೆ, ಎಂದು ತಿಳಿಯುತ್ತಾ ಹೋಗುವವನನ್ನೇ 'ಮನುಷ್ಯ', ಎಂದು ಹೇಳಬೇಕು!

ಅನ್ಯಾಯಕಾರಿಯಾದ ಬಲಶಾಲಿಗೂ ಹೆದರಬಾರದು!

ಮತ್ತು ಧರ್ಮಾತ್ಮನಾದ ನಿರ್ಬಲನಿಗೂ ಕೂಡ, ಹೆದರುತ್ತಿರಬೇಕು!

ಇಷ್ಟೇ ಅಲ್ಲ! ತನ್ನ ಸಮಸ್ತ ಸಾಮರ್ಥ್ಯದಿಂದಲೂ, ಧರ್ಮಾತ್ಮರುಗಳು, ಎಷ್ಟೇ ಮಹಾ ಅನಾಥರೂ, ನಿರ್ಬಲರೂ ಮತ್ತು ಪದವಿ, ಅಧಿಕಾರ* ಮೊದಲಾದ ಗುಣಗಳಿಂದ ರಹಿತರೂ ಆಗಿರಲೀ; ಅವರ ರಕ್ಷಣೆಯನ್ನೂ, ಉನ್ನತಿಯನ್ನೂ, ಪ್ರಿಯಾ ಚರಣವನ್ನೂ [ಮಾಡುತ್ತಿರಬೇಕು].

ಮತ್ತು [ಅಧರ್ಮಿಯು,] ಬೇಕಾದರೆ, ಚಕ್ರವರ್ತಿಯೂ, ಸನಾಥನೂ, ಮಹಾಬಲಶಾಲಿಯೂ, ಮತ್ತು ಗುಣವಂತನೂ* ಆಗಿರಲೀ; ಆದರೂ ಕೂಡ, ಅವನ ಧ್ವಂಸವನ್ನೂ, ಪತನವನ್ನೂ [ಸಾಧಿಸಬೇಕು]. ಮತ್ತು ಅಪ್ರಿಯಾಚರಣವನ್ನೂ ಸದಾ ಮಾಡುತ್ತಾ ಇರಬೇಕು!

---

*ಅನ್ಯರ ಮೇಲೆ ವರ್ಚಸ್ಸನ್ನು ಬೀರುವುದು—ಅನು.

ಎಂದರೆ, ಶಕ್ಯವಿದ್ದಷ್ಟು ಅನ್ಯಾಯಕಾರಿಗಳ ಬಲಕ್ಕೆ ಹಾನಿಯನ್ನೂ, ಮತ್ತು ನ್ಯಾಯಕಾರಿಗಳ ಬಲದ ಉನ್ನತಿಯನ್ನೂ ಸರ್ವಥಾ ಸಾಧಿಸುತ್ತಾ ಹೋಗಬೇಕು.

ಈ ಕಾರ್ಯದಲ್ಲಿ ಅವನಿಗೆ ಎಷ್ಟೇ ದಾರುಣವಾದ ದುಃಖ ಪ್ರಾಪ್ತವಾಗಲೀ; ಪ್ರಾಣಗಳೇ ಬೇಕಾದರೂ ಹೊರಟುಹೋಗಲೀ; ಆದರೆ, 'ಮನುಷ್ಯತ್ವ', ಎಂಬೀ ಧರ್ಮದಿಂದ ಎಂದಿಗೂ ದೂರ ಸರಿಯಬಾರದು!

**(ಭರ್ತೃಹರಿ ಮೊದಲಾದ ಮಹಾಪುರುಷರ ಅಭಿಪ್ರಾಯವೂ ಹೀಗೇ ಇದೆ)**

ಈ ವಿಷಯದಲ್ಲಿ ಶ್ರೀಮನ್ಮಹಾರಾಜಾ ಭರ್ತೃಹರಿ ಮೊದಲಾದವರು ಶ್ಲೋಕಗಳನ್ನು ರಚಿಸಿದ್ದಾರೆ. ಅವುಗಳನ್ನು ಬರೆಯುವುದು ಉಪಯುಕ್ತವೆಂದು ತಿಳಿದು ಉದ್ಧರಿಸುತ್ತೇನೆ:—

ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ
ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ॥1॥

[ಭರ್ತೃಹರಿ, ನೀತಿಶತಕ:-84]

ನ ಜಾತು ಕಾಮಾನ್ನ ಭಯಾನ್ನ ಲೋಭಾತ್
ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ ।
ಧರ್ಮೋ ನಿತ್ಯಃ ಸುಖದುಃಖೇ ತ್ವನಿತ್ಯೇ
ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥2॥

[ಮಹಾಭಾರತ, ಉದ್ಯೋಗಪರ್ವ:-40.11]

ಏಕ ಏವ ಸುಹೃದ್ಧರ್ಮೋ ನಿಧನೇಽಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ॥3॥

[ಮನು:-8.17]

ಸತ್ಯಮೇವ ಜಯತೇ ನಾನೃತಂ
ಸತ್ಯೇನ ಪಂಥಾ ವಿತತೋ ದೇವಯಾನಃ ।
ಯೇನಾಽಽಕ್ರಮಂತ್ಯೃಷಯೋ ಹ್ಯಾಪ್ತಕಾಮಾ
ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥4॥

[ಮುಂಡಕ:-3.1.6]

ನಹಿ ಸತ್ಯಾತ್ಪರೋ ಧರ್ಮೋ ನಾನೃತಾತ್ಪಾತಕಂ ಪರಮ್ ।
ನಹಿ ಸತ್ಯಾತ್ಪರಂ ಜ್ಞಾನಂ ತಸ್ಮಾತ್ಸತ್ಯಂ ಸಮಾಚರೇತ್ ॥5॥*

ಈ ಮಹಾಶಯರುಗಳ ಶ್ಲೋಕಗಳ ಅಭಿಪ್ರಾಯಕ್ಕೆ ಅನುಕೂಲವಾಗಿಯೇ ಎಲ್ಲರೂ ನಿಶ್ಚಯವನ್ನು ತಾಳುವುದು ಯೋಗ್ಯವಾಗಿದೆ!

## (ಸ್ವಮಂತವ್ಯಗಳ ಸಂಕ್ಷಿಪ್ತ ಉಲ್ಲೇಖ)

ಈಗ ನಾನು ಯಾವ-ಯಾವವುಗಳ ವಿಶೇಷ ವ್ಯಾಖ್ಯಾನವನ್ನು ಈ ಗ್ರಂಥದಲ್ಲಿ ಆಯಾ ಪ್ರಕರಣದಲ್ಲಿ ಮಾಡಿದ್ದೇನೋ,† ಮತ್ತು ಯಾವ-ಯಾವ ಪದಾರ್ಥಗಳನ್ನು‡ ಹೇಗೆ-ಹೇಗೆ ಅಂಗೀಕರಿಸುತ್ತೇನೋ, ಅವುಗಳ ವರ್ಣನೆಯನ್ನು ಇಲ್ಲಿ ಸಂಕ್ಷೇಪವಾಗಿ ಮಾಡುತ್ತೇನೆ. ಅವುಗಳಲ್ಲಿ, ಮೊದಲಾಗಿ:—

1. **'ಈಶ್ವರ'**—ಯಾವನಿಗೆ ಬ್ರಹ್ಮ, ಪರಮಾತ್ಮಾ. ಮೊದಲಾದ ಹೆಸರುಗಳಿವೆಯೋ, ಯಾವನು ಸತ್-ಚಿತ್-ಆನಂದ ಮೊದಲಾದ ಲಕ್ಷಣಗಳಿಂದ ಯುಕ್ತನಾಗಿದ್ದಾನೋ, ಯಾವನ ಗುಣ-ಕರ್ಮ-ಸ್ವಭಾವಗಳು ಪವಿತ್ರವಾಗಿವೆಯೋ, ಯಾವನು ಸರ್ವಜ್ಞ, ನಿರಾಕಾರ, ಸರ್ವವ್ಯಾಪಕ, ಅಜನ್ಮಾ, ಅನಂತ, ಸರ್ವಶಕ್ತಿಮಾನ್, ದಯಾಳು, ನ್ಯಾಯಕಾರಿ, ಸರ್ವಸೃಷ್ಟಿಯ ಕರ್ತೃ, ಧರ್ತೃ,[1] ಹರ್ತೃ,[2] ಆಗಿದ್ದಾನೋ, ಮತ್ತು ಸಮಸ್ತ ಜೀವರಿಗೂ ಅವರವರ ಕರ್ಮಗಳಿಗನುಸಾರವಾಗಿ, ಸತ್ಯ-ನ್ಯಾಯಾನುಕೂಲವಾಗಿ ಫಲವನ್ನು ಕೊಡುವನೋ—ಈ ಮೊದಲಾದ ಲಕ್ಷಣಗಳಿಂದ ಯುಕ್ತನಾಗಿದ್ದಾನೋ, ಅವನನ್ನೇ ನಾನು **'ಪರಮೇಶ್ವರ'**, ಎಂದು ಒಪ್ಪಿಕೊಳ್ಳುತ್ತೇನೆ.

2. **'ನಾಲ್ಕು ವೇದಗಳು'**—(ವಿದ್ಯಾ-ಧರ್ಮ-ಯುಕ್ತವೂ, ಈಶ್ವರ-ಪ್ರಣೀತವೂ ಆದ ಸಂಹಿತಾ ಮಂತ್ರಭಾಗರೂಪವಾದ) **ನಾಲ್ಕೂ ವೇದಗಳನ್ನೂ 'ನಿರ್ಭ್ರಾಂತ'**, ಎಂದೂ, **'ಸ್ವತಃಪ್ರಮಾಣ'**, ಎಂದೂ **ಅಂಗೀಕರಿಸುತ್ತೇನೆ.**

---

*ತುಲನೆಮಾಡಿ. (ಮನು. 8.83)—ಅನು.

†ಈ ಮಂತವ್ಯಗಳು ಗ್ರಂಥಕರ್ತರ ಬೇರೆಲ್ಲಾ ಕೃತಿಗಳಲ್ಲೂ ವರ್ಣಿಸಲ್ಪಟ್ಟಿವೆ. ಅಲ್ಲದೇ, ಇದಕ್ಕನುರೂಪವಾಗಿ, "ಆರ್ಯೋದ್ದೇಶ್ಯರತ್ನಮಾಲಾ", ಎಂಬ ಪುಸ್ತಿಕೆಯನ್ನೂ ಗ್ರಂಥಕರ್ತರು ರಚಿಸಿದ್ದಾರೆ. ಇದರಲ್ಲಿ ನೂರು ಮಂತವ್ಯಗಳಿವೆ. ಇದರ ಭಾಷ್ಯರೂಪವಾಗಿ ಪಂ. ಸತ್ಯಪಾಲ ಶರ್ಮಾ ಅವರಿಂದ ರಚಿತವಾದ 'ವೈದಿಕ ಸಿದ್ಧಾಂತ ರತ್ನಾವಳಿ', ಎಂಬ ಗ್ರಂಥದ ಕನ್ನಡ ಅನುವಾದವೂ ಪ್ರಕಾಶಿತವಾಗಿದೆ.—ಸಂ.

‡ತತ್ತ್ವಗಳನ್ನು—ಅನು.

1. ಧಾರಕತ್ವ.—ಅನು.

2. ಸಂಹಾರಕತ್ವ.—ಅನು.

**ಯಾವವುಗಳ ಪ್ರಮಾಣವಾಗಿರುವಿಕೆಗೆ ಬೇರೆ ಯಾವ ಗ್ರಂಥಗಳ ಆಧಾರವೂ ಆವಶ್ಯಕವಲ್ಲವೋ, ಅವು ಅಂತಹ 'ಸ್ವತಃಪ್ರಮಾಣ'ರೂಪವಾಗಿವೆ.**

ಉದಾಹರಣೆಗೆ—ಸೂರ್ಯನು ಅಥವಾ ಪ್ರದೀಪವು ತಮ್ಮ ಸ್ವರೂಪದಿಂದಲೇ ಸ್ವತಃ ಪ್ರಕಾಶಮಯವೂ, ಮತ್ತು ಪೃಥಿವೀ ಮೊದಲಾದುವುಗಳ ಪ್ರಕಾಶಕವೂ ಆಗಿರುವ ಹಾಗೆಯೇ, ನಾಲ್ಕೂ ವೇದಗಳೂ [ಸ್ವಯಂ ಪ್ರಕಾಶಮಯವು] ಆಗಿರುತ್ತವೆ!

ಮತ್ತು ನಾಲ್ಕು ವೇದಗಳ ಬ್ರಾಹ್ಮಣಗಳು; ಆರು ಅಂಗಗಳು, ಆರು ಉಪಾಂಗಗಳು; ನಾಲ್ಕು ಉಪವೇದಗಳು ಮತ್ತು **ಬ್ರಹ್ಮನೇ ಮೊದಲಾದ ಮಹರ್ಷಿಗಳಿಂದ ರಚಿತವಾದ ಗ್ರಂಥಗಳಾಗಿದ್ದು ವೇದಗಳ ವ್ಯಾಖ್ಯಾನರೂಪವಾದ, 1,127 (ಒಂದು ಸಾವಿರದ ನೂರ ಇಪ್ಪತ್ತೇಳು) ವೇದಗಳ ಶಾಖೆಗಳು!* ಇವನ್ನು 'ಪರತಃಪ್ರಮಾಣ', ಎಂದರೆ, ವೇದಗಳಿಗೆ ಅನುಕೂಲವಾಗಿರುವುದರಿಂದ, 'ಪ್ರಮಾಣ', [ಎಂದು ಗ್ರಹಿಸುತ್ತೇನೆ.] ಮತ್ತು ಇವುಗಳಲ್ಲಿ ಯಾವ ವೇದವಿರುದ್ಧವಾದ ವಚನಗಳಿವೆಯೋ, ಅವನ್ನು 'ಅಪ್ರಮಾಣ', ಎಂದು ತಿಳಿಯುತ್ತೇನೆ.**

**3. ['ಧರ್ಮಾಧರ್ಮ']**—ಪಕ್ಷಪಾತರಹಿತವಾದ ನ್ಯಾಯಾಚರಣ, ಸತ್ಯಭಾಷಣ ಮೊದಲಾದುದರಿಂದ ಯುಕ್ತವಾದುದು, ಈಶ್ವರಾಜ್ಞೆ, [ಮತ್ತು] ವೇದಗಳಿಗೆ ಅವಿರುದ್ಧವಾಗಿರುವುದನ್ನು **'ಧರ್ಮ'**, ಎಂದೂ; ಮತ್ತು ಪಕ್ಷಪಾತಸಹಿತವಾದ ಅನ್ಯಾಯಾಚರಣ, ಮಿಥ್ಯಾಭಾಷಣ ಮೊದಲಾದುದು, ಈಶ್ವರಾಜ್ಞಾಭಂಗ, [ಮತ್ತು] ವೇದವಿರುದ್ಧವಾಗಿರುವುದನ್ನು **'ಅಧರ್ಮ'**, ಎಂದೂ ಅಂಗೀಕರಿಸುತ್ತೇನೆ.

**4. ['ಜೀವ']**—ಇಚ್ಛಾ, ದ್ವೇಷ, [ಪ್ರಯತ್ನ], ಸುಖ, ದುಃಖ ಮತ್ತು ಜ್ಞಾನ ಮೊದಲಾದ ಗುಣಗಳಿಂದ ಯುಕ್ತನೂ, ಅಲ್ಪಜ್ಞನೂ, ನಿತ್ಯನೂ ಆದವನನ್ನೇ **'ಜೀವ'**, ಎಂದು ಅಂಗೀಕರಿಸುತ್ತೇನೆ.

**5. 'ಜೀವ ಮತ್ತು ಈಶ್ವರ'**—[ಜೀವನು ಮತ್ತು ಈಶ್ವರನು] ಸ್ವರೂಪದಿಂದ ಮತ್ತು ವೈಧರ್ಮ್ಯದಿಂದ ಭಿನ್ನರೂ, ಮತ್ತು ವ್ಯಾಪ್ಯ-ವ್ಯಾಪಕ ಭಾವದಿಂದ, ಹಾಗೂ ಸಾಧರ್ಮ್ಯದಿಂದ, ಅಭಿನ್ನರೂ ಆಗಿದ್ದಾರೆ. ಎಂದರೆ, ಹೇಗೆ ಆಕಾಶದಿಂದ ಮೂರ್ತಿಮಾನ್ ಪದಾರ್ಥವು ಎಂದೂ ಭಿನ್ನವಾಗಿರಲಿಲ್ಲವೋ, ಈಗಲೂ ಇಲ್ಲವೋ, ಮುಂದೆ ಆಗುವುದೂ ಇಲ್ಲವೋ; ಮತ್ತು ಹೇಗೆ ಎಂದಿಗೂ ಒಂದಾಗಿರಲಿಲ್ಲವೋ, ಈಗಲೂ ಒಂದಾಗಿಲ್ಲವೋ, ಮುಂದೆ ಒಂದಾಗುವುದೂ ಇಲ್ಲವೋ, ಇದೇ ಪ್ರಕಾರ **ಪರಮೇಶ್ವರ, ಮತ್ತು ಜೀವರನ್ನು ವ್ಯಾಪ್ಯ-ವ್ಯಾಪಕ, ಉಪಾಸ್ಯ-ಉಪಾಸಕ ಮತ್ತು ಪಿತೃ-ಪುತ್ರ** ಮೊದಲಾದ ಸಂಬಂಧಗಳಿಂದ ಯುಕ್ತರೆಂದು ಅಂಗೀಕರಿಸುತ್ತೇನೆ.

---

***ತೃತೀಯ ಸಮುಲ್ಲಾಸದ ಪುಟ 119–120ನ್ನು ನೋಡಿ.—ಸಂ.**

6. **ಅನಾದಿ ಪದಾರ್ಥಗಳು**—ಮೂರು ಇವೆ. ಒಬ್ಬನು **'ಈಶ್ವರ'**; ಎರಡನೆಯವನು 'ಜೀವ'; ಮೂರನೆಯದು **'ಪ್ರಕೃತಿ'**, ಎಂದರೆ ಜಗತ್ತಿನ [ಉಪಾದಾನ] ಕಾರಣ! ಇವುಗಳನ್ನೇ **'ನಿತ್ಯ'**, ಎಂದೂ ಕೂಡ, ಹೇಳುತ್ತಾರೆ. **ಯಾವುವು ನಿತ್ಯಪದಾರ್ಥಗಳೋ, ಅವುಗಳ ಗುಣ-ಕರ್ಮ-ಸ್ವಭಾವಗಳೂ ಕೂಡ. ನಿತ್ಯವಾಗಿರುತ್ತವೆ!**

7. **ಪ್ರವಾಹದಿಂದ ಅನಾದಿ**—ಯಾವ ದ್ರವ್ಯಗಳು, ಗುಣಗಳು ಮತ್ತು ಕರ್ಮಗಳು ಸಂಯೋಗದಿಂದ ಉತ್ಪನ್ನವಾಗುತ್ತವೋ, ಅವು ವಿಯೋಗವಾದ ಮೇಲೆ ಇರುವುದಿಲ್ಲ. ಆದರೆ, ಯಾವುವರಿಂದ ಮೊದಲು ಸಂಯೋಗವಾಗುತ್ತದೋ, ಆ ಸಾಮರ್ಥ್ಯ ಅವುಗಳಲ್ಲಿ ಅನಾದಿಯಾಗಿರುತ್ತದೆ. ಮತ್ತು ಅದರಿಂದ, ಮತ್ತೆಯೂ ಸಂಯೋಗವಾಗುವುದು; ಹಾಗೆಯೇ ವಿಯೋಗವೂ ಕೂಡ! **ಈ ಮೂರನ್ನೂ* ಪ್ರವಾಹದಿಂದ 'ಅನಾದಿ', ಎಂದು ಅಂಗೀಕರಿಸುತ್ತೇನೆ.**

8. **'ಸೃಷ್ಟಿ'**—ಬೇರೆ ಬೇರೆ ದ್ರವ್ಯಗಳ† ಸಂಯೋಜನವು ಜ್ಞಾನ-ಯುಕ್ತಿ ಪೂರ್ವಕವಾಗಿ ಆಗಿ, ನಾನಾ ರೂಪವಾಗುವುದನ್ನು **'ಸೃಷ್ಟಿ'**, ಎನ್ನುತ್ತಾರೆ.

9. **ಸೃಷ್ಟಿಯ ಉದ್ದೇಶ್ಯ**—ಯಾವುದರಲ್ಲಿ ಈಶ್ವರನ ಸೃಷ್ಟಿಗೆ ನಿಮಿತ್ತವಾದ ಗುಣ-ಕರ್ಮ-ಸ್ವಭಾವಗಳ ಸಾಫಲ್ಯ-[ಸಿದ್ಧಿ] ಆಗುವುದೋ, ಅದೇ ಸೃಷ್ಟಿಯ ಉದ್ದೇಶ್ಯವಾಗಿದೆ. ಉದಾಹರಣೆಗೆ—

ಒಬ್ಬನು ಇನ್ನೊಬ್ಬನನ್ನು—'ಕಣ್ಣುಗಳು ಏತಕ್ಕಿವೆ?', ಎಂದು ಪ್ರಶ್ನಿಸಿದನು.

ಅವನು—'ನೋಡುವುದಕ್ಕೆ!', ಎಂದು ಹೇಳಿದನು.

ಹಾಗೆಯೇ, ಈಶ್ವರನ ಸೃಜನ-ಸಾಮರ್ಥ್ಯದ ಸಾಫಲ್ಯವು ಸೃಷ್ಟಿಸುವುದರಲ್ಲಿಯೇ ಇದೆ! ಮತ್ತು ಜೀವರುಗಳಿಗೆ ಅವರ ಕರ್ಮಾನುಸಾರವಾಗಿ ಯಥಾವತ್ ಭೋಗ ಮಾಡಿಸುವುದು, ಮೊದಲಾಗಿಯೂ ಇದೆ.‡

10. **['ಸೃಷ್ಟಿಕರ್ತಾ']**—"**ಸೃಷ್ಟಿಯು ಸಕರ್ತೃಕ**"ವಾಗಿದೆ. ಪೂರ್ವೋಕ್ತ ಈಶ್ವರನೇ ಇದರ ಕರ್ತೃವಾಗಿದ್ದಾನೆ. ಏಕೆಂದರೆ, ಸೃಷ್ಟಿರಚನೆಯನ್ನು

---

*ಎಂದರೆ, ಈಶ್ವರ, ಜೀವ ಮತ್ತು ಪ್ರಕೃತಿ—ಸಂ.

†ಸೂಕ್ಷ್ಮ ಪರಮಾಣುಗಳು, ಪೃಥಿವೀ ಮೊದಲಾದುವು– ಅನು.

‡ಜೀವರುಗಳು [ಪೂರ್ವಕೃತ]ಕರ್ಮಗಳ ಫಲ-ಭೋಗವನ್ನು ಯಥಾವತ್ತಾಗಿ ಪಡೆದುಕೊಳ್ಳುವುದು, ಹಾಗೂ ಭವಿಷ್ಯದ್ವಿಕಾಸಕ್ಕಾಗಿ ಪುರುಷಾರ್ಥವನ್ನು ಮಾಡುವುದು, ಮೊದಲಾದ ಉದ್ದೇಶ್ಯಗಳೂ ಕೂಡ, ಇದ್ದೇ ಇವೆ.—ಅನು.

ನೋಡುವುದರಿಂದ, ಮತ್ತು ಜಡಪದಾರ್ಥಗಳಲ್ಲಿ ತನ್ನಷ್ಟಕ್ಕೆ ತಾನೇ ಯಥಾಯೋಗ್ಯವಾಗಿ ಬೀಜವೇ ಮೊದಲಾದ ಸ್ವರೂಪಗಳನ್ನು ತಾಳುವ ಸಾಮರ್ಥ್ಯವಿಲ್ಲದಿರುವುದರಿಂದ, **'ಸೃಷ್ಟಿಯ ಕರ್ತೃ'ವು ಅವಶ್ಯವಾಗಿಯೂ ಇದ್ದಾನೆ!**

**11.** **'ಬಂಧ'**—ಇದು ಸನಿಮಿತ್ತಕ, ಎಂದರೆ ಅವಿದ್ಯಾ-ನಿಮಿತ್ತದಿಂದಾಗುತ್ತದೆ. ಪಾಪಕರ್ಮಗಳು, ಈಶ್ವರನಿಂದ ಬೇರೆಯಾದುದರ ಉಪಾಸನೆ, ಅಜ್ಞಾನ ಮೊದಲಾದುವುಗಳೆಲ್ಲವೂ ದುಃಖವೆಂಬ ಫಲವನ್ನುಂಟುಮಾಡುವಂತಹವಾಗಿವೆ.

ಇದರ ಇಚ್ಛೆ ಏನೋ ಇಲ್ಲ; ಆದರೂ ಅನುಭವಿಸಬೇಕಾಗುತ್ತದೆ! ಆದುದರಿಂದಲೇ, ಇದು **'ಬಂಧ'**, ಎನಿಸುತ್ತದೆ.

**12.** **'ಮುಕ್ತಿ'**—ಎಂದರೆ, ಎಲ್ಲ ದುಃಖಗಳಿಂದಲೂ ಬಿಡುಗಡೆ ಹೊಂದಿ, ಬಂಧರಹಿತನಾಗಿ, ಸರ್ವವ್ಯಾಪಕನಾದ ಈಶ್ವರನಲ್ಲಿಯೂ, ಮತ್ತು ಅವನ ಸೃಷ್ಟಿಯಲ್ಲಿಯೂ ಸ್ವೇಚ್ಛೆಯಿಂದ ವಿಚರಣ ಮಾಡುವುದು **['ಮುಕ್ತಿ']!** ನಿಯತ ಸಮಯದವರೆಗೆ ಮುಕ್ತಿಯ ಆನಂದವನ್ನು ಸವಿದು, ಪುನಃ ಜಗತ್ತಿಗೆ ಬರಬೇಕಾಗುವುದು.

**13.** **'ಮುಕ್ತಿಯ ಸಾಧನಗಳು'**—ಈಶ್ವರೋಪಾಸನೆ, ಎಂದರೆ, ಯೋಗಾಭ್ಯಾಸ, ಧರ್ಮಾನುಷ್ಠಾನ, ಬ್ರಹ್ಮಚರ್ಯಪೂರ್ವಕವಾಗಿ ವಿದ್ಯಾ-ಪ್ರಾಪ್ತಿ, ಆಪ್ತ ವಿದ್ವಾಂಸರ ಸಂಗ, ಸತ್ಯವಿದ್ಯಾ, ಸದ್ವಿಚಾರ, ಮತ್ತು ಪುರುಷಾರ್ಥ [ಮಾಡುವುದು,] ಮೊದಲಾದುವು.

**14.** **'ಅರ್ಥ'**—ಕೇವಲ ಧರ್ಮದಿಂದ ಗಳಿಸಲ್ಪಡುವುದೇ **'ಅರ್ಥ'**! ಮತ್ತು ಅಧರ್ಮದಿಂದ ಸಂಪಾದಿಸುವುದನ್ನು **'ಅನರ್ಥ'**, ಎನ್ನುತ್ತಾರೆ.

**15.** **'ಕಾಮ'**—ಧರ್ಮದಿಂದ ಮತ್ತು [ತದನುಕೂಲವಾದ] ಅರ್ಥದಿಂದ ಸಾಧಿಸಲ್ಪಡುವುದು **'ಕಾಮ'**, ಎನಿಸುತ್ತದೆ.

**16.** **'ವರ್ಣಾಶ್ರಮಗಳು'**—ಗುಣ-ಕರ್ಮಗಳ ಯೋಗ್ಯತೆಯಿಂದ ಅಂಗೀಕರಿಸುತ್ತೇನೆ.*

**17.** **'ರಾಜಾ'**—ಶುಭಗುಣ-ಕರ್ಮ-ಸ್ವಭಾವಗಳಿಂದ ಪ್ರಕಾಶಿಸುವವನೂ, ಪಕ್ಷಪಾತರಹಿತನೂ, ನ್ಯಾಯ–ಧರ್ಮದ ಅನುಷ್ಠಾನ ಮಾಡುವವನೂ, ಪ್ರಜೆಗಳ ಬಗೆಗೆ ತಂದೆಯಂತೆ ವರ್ತಿಸುವವನೂ, ಮತ್ತು ಅವರನ್ನು ಮಕ್ಕಳಂತೆಯೇ ತಿಳಿದು,

---

*ಕೇವಲ ಹುಟ್ಟಿನ ಆಧಾರದಿಂದಲ್ಲ.—ಅನು.

ಅವರ ಉನ್ನತಿಯನ್ನು ಮತ್ತು ಸುಖವನ್ನು ಸಂವರ್ಧಿಸುವುದರಲ್ಲಿ ಸದಾ ಯತ್ನಿಸುತ್ತಿರುವವನೂ ಆದವನನ್ನು 'ರಾಜ', ಎನ್ನುತ್ತಾರೆ.

**18.** **'ಪ್ರಜೆ'**—ಪವಿತ್ರ ಗುಣ-ಕರ್ಮ-ಸ್ವಭಾವಗಳನ್ನು ಧರಿಸಿಕೊಂಡು, ಪಕ್ಷಪಾತರಹಿತವಾದ ನ್ಯಾಯ-ಧರ್ಮವನ್ನು ಅವಲಂಬಿಸುವುದರಿಂದ ರಾಜ ಮತ್ತು ಪ್ರಜೆಗಳ ಉನ್ನತಿಯನ್ನು ಬಯಸುತ್ತಾ, **ರಾಜವಿದ್ರೋಹರಹಿತರಾಗಿ,*** ರಾಜನೊಂದಿಗೆ ಮಕ್ಕಳಂತೆ ವರ್ತಿಸುವವರನ್ನು **'ಪ್ರಜೆ'**, ಎನ್ನುತ್ತಾರೆ.

**19.** **['ನ್ಯಾಯಕಾರಿ']**—ಯಾವನು ಸದಾ ವಿಚಾರವಂತನಾಗಿ, ಅಸತ್ಯವನ್ನು ವರ್ಜಿಸಿ, ಸತ್ಯವನ್ನು ಗ್ರಹಿಸುವವನೂ, ಅನ್ಯಾಯಕಾರಿಗಳನ್ನು ದೂರೀಕರಿಸುವವನೂ, ಮತ್ತು ನ್ಯಾಯಕಾರಿಗಳಿಗೆ ವೃದ್ಧಿಯನ್ನುಂಟುಮಾಡುವವನೂ, ತನ್ನ ಆತ್ಮನ [ಸುಖದ] ಹಾಗೆಯೇ, ಎಲ್ಲರ ಸುಖವನ್ನೂ ಬಯಸುವವನೂ, ಆಗಿರುತ್ತಾನೋ, ಅವನು **'ನ್ಯಾಯಕಾರಿ'**† ಆಗಿರುತ್ತಾನೆ.

ಅವನನ್ನು ನಾನೂ ಕೂಡ, ಸರಿ. ಎಂದು ಒಪ್ಪುತ್ತೇನೆ.

**20.** **'ದೇವ'**—ವಿದ್ವಾಂಸರನ್ನು **'ದೇವ'**ಜನರೆಂದೂ, ಮತ್ತು ಅವಿದ್ವಾಂಸರನ್ನು **'ಅಸುರ'**ರೆಂದೂ, ಪಾಪಿಗಳನ್ನು **'ರಾಕ್ಷಸ'**ರೆಂದೂ, ಅನಾಚಾರಿಗಳನ್ನು **'ಪಿಶಾಚ'**ರೆಂದೂ ಅಂಗೀಕರಿಸುತ್ತೇನೆ.

**21.** **['ದೇವಪೂಜಾ']**—ಅದೇ ರೀತಿಯ ವಿದ್ವಾಂಸರುಗಳು, ತಾಯಿ, ತಂದೆ, ಆಚಾರ್ಯ, ಅತಿಥಿ, ನ್ಯಾಯಕಾರಿಯಾದ ರಾಜಾ, ಹಾಗೂ ಧರ್ಮಾತ್ಮರಾದ ಜನರು, **ಪತಿವ್ರತೆಯಾದ‡ ನಾರಿ** ಮತ್ತು **ಪತ್ನೀವ್ರತನಾದ ಪತಿ**–ಇವರ ಸತ್ಕಾರ ಮಾಡುವುದು **'ದೇವಪೂಜೆ'**, ಎನಿಸುತ್ತದೆ.

---

*ಮೇಲೆ ಕೊಟ್ಟಿರುವ ಯೋಗ್ಯತೆಗಳನ್ನುಳ್ಳ 'ರಾಜ'ನಿಗೆ ವಿದ್ರೋಹ ಮಾಡುವ ಅವಕಾಶ ಇಲ್ಲ. ಇದನ್ನರಿಯದೇ, ಹಲವು ವಿದ್ವಾಂಸರು ಮಹರ್ಷಿ ದಯಾನಂದರ ಮೇಲೆ 'ರಾಜವ್ಯವಸ್ಥೆಯ ಸಮರ್ಥಕ'ರೆಂದು ಆರೋಪ ಹೊರೆಸುತ್ತಾರೆ. ಪ್ರಶಾಸಕನಿಗೆ, ಶಾಸನ-ಪ್ರಮುಖನಿಗೆ 'ರಾಜಾ', ಎಂದು ಹೆಸರಷ್ಟೇ!—ಸಂ.

†ಎಂದರೆ, ನ್ಯಾಯಾಧೀಶ.—ಯು.ಮೀ.

‡'ಪತಿವ್ರತೆ', ಎಂಬ ಶಬ್ದಕ್ಕೆ ಇಲ್ಲಿ—

"ಪತ್ಯುರನುವ್ರತಾ ಭೂತ್ವಾ ಸಂನ್ಹಸ್ವಾಮೃತಾಯ ಕಮ್"

(ಅಥರ್ವವೇದ–14.1.42)

ಎಂದರೆ, ಪತಿಯ ಎಲ್ಲ ಸದ್‌ವ್ಯವಹಾರಗಳಲ್ಲೂ, ಸದಾಕಾಲದಲ್ಲೂ ಪತಿಗೆ ಅನುಕೂಲಳಾಗಿ, ಅನುವ್ರತಳಾಗಿ ವರ್ತಿಸುವವಳು, ಎಂದರ್ಥ! ಪೌರಾಣಿಕ ಮಾನ್ಯತೆಯಂತೆ, ಪರಪುರುಷಸಂಗ ಮಾತ್ರ ಮಾಡದೇ ಇದ್ದು, ಪತಿಗೆ ನಿರುದ್ಧವಾಗಿ ವರ್ತಿಸುತ್ತಾ, ಅವನೊಡನೆ ಹೋರಾಡುತ್ತಾ,→

ಇದಕ್ಕೆ ಪ್ರತಿಕೂಲವಾದುದು '**ಅದೇವಪೂಜೆ**'!

ಮೂರ್ತಿಮಂತರು*ಗಳಾದ ಇವರು ಪೂಜ್ಯರೆಂದೂ, ಶಿಲೆಯೇ ಮೊದಲಾದ ಜಡಮೂರ್ತಿಗಳು ಸರ್ವಥಾ ಅಪೂಜ್ಯವೆಂದೂ ತಿಳಿಯುತ್ತೇನೆ!

22. **'ಶಿಕ್ಷಣ'**—ಯಾವುದರಿಂದ, ವಿದ್ಯೆ, ಸಭ್ಯತೆ, ಧರ್ಮಾತ್ಮತ್ವ, ಜಿತೇಂದ್ರಿಯತ್ವ ಮೊದಲಾದುದರ ವೃದ್ಧಿಯೂ ಮತ್ತು ಅವಿದ್ಯೆ ಮೊದಲಾದ ದೋಷಗಳ ದೂರೀಕರಣವೂ ಆಗುವುದೋ, ಅದನ್ನು **'ಶಿಕ್ಷಣ'**. ಎನ್ನುತ್ತಾರೆ.

23. **'ಪುರಾಣ'**—ಬ್ರಹ್ಮನೇ ಮೊದಲಾದವರಿಂದ ನಿರ್ಮಿತವಾದ ಯಾವ ಐತರೇಯವೇ ಮೊದಲಾದ ಬ್ರಾಹ್ಮಣ ಗ್ರಂಥಗಳಿವೆಯೋ, ಅವುಗಳನ್ನೇ ಪುರಾಣ, ಇತಿಹಾಸ, ಕಲ್ಪ, ಗಾಥಾ, ನಾರಾಶಂಸೀ, ಎಂಬ ಹೆಸರುಗಳಿಂದ ಗ್ರಹಿಸುತ್ತೇನೆ.

**ಭಾಗವತವೇ ಮೊದಲಾದ ಬೇರೆಯ ಗ್ರಂಥಗಳನ್ನಲ್ಲ!**

24. **'ತೀರ್ಥ'**—ಯಾವುದರಿಂದ ದುಃಖಸಾಗರದಿಂದ ಪಾರುಗಾಣಿಸುವುದು ಶಕ್ಯವೋ, ಎಂದರೆ, ಸತ್ಯಭಾಷಣ, ವಿದ್ಯೆ, ಸತ್ಸಂಗ, ಯಮ ಮೊದಲಾದ ಯೋಗಾಂಗಗಳ ಅಭ್ಯಾಸ, ಪುರುಷಾರ್ಥ†, ವಿದ್ಯಾದಾನ ಮೊದಲಾದ ಶುಭಕರ್ಮಗಳನ್ನೇ **'ತೀರ್ಥ'**, ಎಂದು ತಿಳಿಯುತ್ತೇನೆ.

**ಬೇರೆ ಜಲ-ಸ್ಥಳ ಮೊದಲಾದುವನ್ನಲ್ಲ!**

25. **ಪುರುಷಾರ್ಥವು ಪ್ರಾರಬ್ಧಕ್ಕಿಂತ ಶ್ರೇಷ್ಠ**—ಏಕೆಂದರೆ, ಇದರಿಂದಲೇ ಸಂಚಿತ, ಪ್ರಾರಬ್ಧ[ಕರ್ಮಗಳೂ] ಉದ್ಭವಿಸುತ್ತವೆ. ಇವರ ಸುಧಾರಣೆಯಿಂದಲೇ ಸರ್ವವೂ ಸುಧಾರಿಸುತ್ತವೆ; ಮತ್ತು ಇವರ ವಿಕೃತಿಯಿಂದಲೇ ಸರ್ವವೂ ವಿಕೃತವಾಗುತ್ತವೆ. ಆದುದರಿಂದಲೇ—

'ಪ್ರಾರಬ್ಧಕ್ಕಿಂತ ಪುರುಷಾರ್ಥವೇ ಶ್ರೇಷ್ಠವಾದುದು'!

---

→ಅವನನ್ನು ತಿರಸ್ಕರಿಸುತ್ತಾ ನಡೆದರೂ ಕೂಡ, ಕಾಲ-ಕಾಲಕ್ಕೆ ತಕ್ಕಂತೆ ಗೌರೀಪೂಜೆ, ತುಳಸೀಪೂಜೆ, ಅರಿಶಿನ-ಕುಂಕುಮ, ವ್ರತ-ಉಪವಾಸ, ಪೂಜಾ-ಪಾಠ, ಉದ್ಯಾಪನೆ, ದೇವಾಲಯಗಳ ಮೂರ್ತಿದರ್ಶನ, "ಸೇವೆ", ಪುರಾಣಶ್ರವಣ, ತೀರ್ಥಯಾತ್ರೆ ಮೊದಲಾದ ಧೂರ್ತಪ್ರಚೋದಿತ ವ್ಯವಹಾರಗಳಲ್ಲಿ ತೊಡಗಿರುವ ಸ್ತ್ರೀ, ಪತಿವ್ರತೆಯೆಂಬ ಯೋಗ್ಯತೆಯನ್ನು ಪಡೆಯಲಾರಳು. ಇನ್ನು ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಪ್ರಭಾವಿತಳಾಗಿ ಅದನ್ನನುಕರಿಸುತ್ತಿರುವ ಸ್ತ್ರೀಯ ಬಗ್ಗೆ ಮಾತನಾಡದಿರುವುದೇ ಒಳಿತು! ಹೀಗೆಯೇ, 'ಪತ್ನೀವ್ರತ'ನ ಬಗೆಗೂ ತಿಳಿಯಿರಿ.—ಸಂ.

*ದೇಹಯುಕ್ತ ಚೈತನ್ಯರು—ಅನು.

†ಪುರುಷ-ಪ್ರಯತ್ನ—ಅನು.

26. [**'ಮನುಷ್ಯ'**]—'ಮನುಷ್ಯ'ನಾದವನು ಸರ್ವರೊಂದಿಗೂ ಯಥಾಯೋಗ್ಯವಾಗಿ ಸುಖ-ದುಃಖಗಳಲ್ಲಿ, ಮತ್ತು ಲಾಭ-ಹಾನಿಗಳಲ್ಲಿ, ತನ್ನ ಆತ್ಮನಂತೆಯೇ ಎಲ್ಲರೂ ಎಂದರಿತು. ವರ್ತಿಸುವುದು ಶ್ರೇಷ್ಠವೆಂದೂ, ಅನ್ಯಥಾ ವರ್ತಿಸುವುದು ನೀಚವೆಂದೂ ತಿಳಿಯುತ್ತೇನೆ.

27. **'ಸಂಸ್ಕಾರ'**—ಯಾವುದರಿಂದ, ಶರೀರ, ಮನಸ್ಸು, ಮತ್ತು ಆತ್ಮಾ ಉತ್ತಮವಾಗುವುವೋ. ಅದಕ್ಕೆ **'ಸಂಸ್ಕಾರ'**, ಎನ್ನುತ್ತಾರೆ. ಅದು ನಿಷೇಕದಿಂದಾರಂಭಿಸಿ, ಅಂತ್ಯೇಷ್ಟಿಯುವರೆಗೆ ಹದಿನಾರು ಬಗೆಯದಿದೆ*. ಇದನ್ನು ಕರ್ತವ್ಯವೆಂದು ತಿಳಿಯುತ್ತೇನೆ.

**ಮತ್ತು ಶವದಹನವಾದ ಮೇಲೆ, ಮೃತಕನಿಗಾಗಿ ಏನೂ ಮಾಡಬಾರದು!**

28. **'ಯಜ್ಞ'**—ಯಾವುದರಲ್ಲಿ ವಿದ್ವಾಂಸರ ಸತ್ಕಾರ; ಯಥಾಯೋಗ್ಯವಾಗಿ ಶಿಲ್ಪ [ವಿದ್ಯೆ]; ಎಂದರೆ, **'ರಸಾಯನ'**—ಎಂದರೆ, ಪದಾರ್ಥವಿದ್ಯೆ, ಅದರ ಉಪಯೋಗ; ಮತ್ತು ವಿದ್ಯೆ ಮೊದಲಾದ ಶುಭಗುಣಗಳ ದಾನ; ವಾಯು, ಜಲ, ಮಳೆ, ಓಷಧಿಗಳು—ಇವೆಲ್ಲದರ ಪವಿತ್ರೀಕರಣದಿಂದ ಸರ್ವಜೀವರ ಸುಖ-ಸಂಪಾದನೆಯೂ ಆಗುವಂತೆ. ಮಾಡುವ ಅಗ್ನಿಹೋತ್ರ ಮೊದಲಾದುವು. ಇದಕ್ಕೆ **'ಯಜ್ಞ'**, ಎಂದು ಹೇಳುತ್ತಾರೆ. ಅದನ್ನು ಉತ್ತಮವೆಂದು ತಿಳಿಯುತ್ತೇನೆ.

29. [**'ಆರ್ಯ ಮತ್ತು ದಸ್ಯು'**]—ಶ್ರೇಷ್ಠರಿಗೆ **'ಆರ್ಯ'**ರೆಂದೂ, ದುಷ್ಟ ಮನುಷ್ಯರಿಗೆ **'ದಸ್ಯು'**, ಎಂದೂ ಹೇಳುತ್ತಾರೆ. ನಾನೂ ಕೂಡ, ಹಾಗೆಯೇ ಅಂಗೀಕರಿಸುತ್ತೇನೆ.

30. **'ಆರ್ಯಾವರ್ತ'**—ಸೃಷ್ಟಿಯ ಆದಿಕಾಲದಿಂದ ಈ ದೇಶದಲ್ಲಿ ಆರ್ಯರು ವಾಸಿಸುತ್ತಾ ಬಂದಿರುವುದರಿಂದ ಈ ಭೂಮಿಯ ಹೆಸರು **'ಆರ್ಯಾವರ್ತ'**, ಎಂದಾಗಿದೆ. ಆದರೆ. ಇದರ ಎಲ್ಲೆಗಳು—

ಉತ್ತರದಲ್ಲಿ ಹಿಮಾಲಯ, ದಕ್ಷಿಣದಲ್ಲಿ ವಿಂಧ್ಯಾಚಲ†, ಪಶ್ಚಿಮದಲ್ಲಿ ಅಟಕ್, ಮತ್ತು ಪೂರ್ವದಲ್ಲಿ ಬ್ರಹ್ಮಪುತ್ರಾ ನದೀ ಇವೆ. ಈ ನಾಲ್ಕರ ಮಧ್ಯೆ ಎಷ್ಟು ಪ್ರದೇಶವಿದೆಯೋ, ಅದನ್ನು **'ಆರ್ಯಾವರ್ತ'**,ಎನ್ನುತ್ತಾರೆ.

---

*ಈ 16 ಸಂಸ್ಕಾರಗಳ ಸಂಪೂರ್ಣ ವಿಧಿ ಮತ್ತು ಪ್ರಮಾಣಗಳಿಗಾಗಿ 'ಸಂಸ್ಕಾರವಿಧಿ' ಯನ್ನು ನೋಡಿರಿ. ಪ್ರಕಾಶಕರು ; ಆರ್ಯಸಮಾಜ, ಸ್ವಾಮೀ ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ, ಬೆಂಗಳೂರು 560 004, ಬೆಲೆ : 40ರೂ.—ಸಂ.

†ಪೂರ್ವಘಟ್ಟ-ಪಶ್ಚಿಮಘಟ್ಟಗಳೆಂಬ ಉತ್ತರ-ದಕ್ಷಿಣ ದಿಕ್ಕಿಗೆ ಹಬ್ಬಿರುವ ಪರ್ವತಗಳ ನಡುವಣ ಪ್ರದೇಶಕ್ಕೆ ವಿಂಧ್ಯಾಚಲವೆಂಬ ಸಂಜ್ಞೆ ಪ್ರಾಚೀನಕಾಲದಲ್ಲಿತ್ತು. ವಾಲ್ಮೀಕಿ ರಾಮಾಯಣದ ಕಿಷ್ಕಿಂಧಾ ಕಾಂಡದಲ್ಲಿ ಈ ಉಲ್ಲೇಖವಿದೆ.—ಸಂ.

ಮತ್ತು ಇದರಲ್ಲಿ ಯಾರು ಸದಾ ಇರುತ್ತಾರೋ, ಅವರನ್ನೂ ಕೂಡ, **'ಆರ್ಯ'***, ಎನ್ನುತ್ತಾರೆ.

**30.** [**'ಆಚಾರ್ಯ'**]—ಯಾವನು ಸಾಂಗೋಪಾಂಗವಾಗಿ ವೇದವಿದ್ಯೆಗಳನ್ನು ಕಲಿಸುವವನೋ, ಸತ್ಯಾಚಾರದ ಸ್ವೀಕಾರವನ್ನೂ ಮತ್ತು ಮಿಥ್ಯಾಚಾರದ ತ್ಯಾಗವನ್ನೂ ಮಾಡಿಸುವವನೋ, ಅವನು **'ಆಚಾರ್ಯ'**. ಎನಿಸುತ್ತಾನೆ.

**32.** **'ಶಿಷ್ಯ'**—ಯಾವನು ಸತ್ಯಶಿಕ್ಷಣವನ್ನು ಮತ್ತು ವಿದ್ಯೆಯನ್ನು ಗ್ರಹಿಸಲು ಅರ್ಹನೋ. ಧರ್ಮಾತ್ಮನೂ, ವಿದ್ಯಾಗ್ರಹಣದ ಇಚ್ಛುಕನೂ, ಮತ್ತು ಆಚಾರ್ಯನಿಗೆ ಪ್ರಿಯವಾದುದನ್ನು ಮಾಡುವವನೂ ಆಗಿರುವನೋ, ಅವನನ್ನು **'ಶಿಷ್ಯ'**, ಎನ್ನುತ್ತಾರೆ.

**33.** **'ಗುರು'**—ತಾಯಿ, ತಂದೆ! ಮತ್ತು ಸತ್ಯವನ್ನು ಸ್ವೀಕಾರ ಮಾಡಿಸುವವನೂ, ಹಾಗೂ ಅಸತ್ಯವನ್ನು ಪರಿತ್ಯಾಗ ಮಾಡಿಸುವವನೂ ಕೂಡ, **'ಗುರು'**, ಎನಿಸುತ್ತಾನೆ.

**34.** **'ಪುರೋಹಿತ'**—ಯಾವನು ಯಜಮಾನರುಗಳಿಗೆ† ಹಿತಕಾರಿಯೂ, ಸತ್ಯೋಪದೇಶಕನೂ ಆಗಿರುವನೋ, [ಅವನು **'ಪುರೋಹಿತ'**, ಎನಿಸುತ್ತಾನೆ.]

**35.** **'ಉಪಾಧ್ಯಾಯ'**—ಯಾವನು ವೇದಗಳ ಒಂದು ಭಾಗವನ್ನು, ಅಥವಾ ಅಂಗಗಳನ್ನು ಓದಿಸುತ್ತಾನೋ, [ಅವನು **'ಉಪಾಧ್ಯಾಯ'**, ಎನಿಸುತ್ತಾನೆ].

**36.** **'ಶಿಷ್ಟಾಚಾರ'**:—ಧರ್ಮಾಚರಣಪೂರ್ವಕವಾಗಿ, ಬ್ರಹ್ಮಚರ್ಯಾನುಷ್ಠಾನದಿಂದ, ವಿದ್ಯೆಯನ್ನು ಗ್ರಹಿಸಿ, ಪ್ರತ್ಯಕ್ಷವೇ ಮೊದಲಾದ ಪ್ರಮಾಣಗಳಿಂದ ಸತ್ಯಾಸತ್ಯ ನಿರ್ಣಯವನ್ನು ಮಾಡಿ. ಸತ್ಯದ ಸ್ವೀಕಾರವನ್ನೂ. ಅಸತ್ಯದ ಪರಿತ್ಯಾಗವನ್ನೂ ಮಾಡುವುದೇ **'ಶಿಷ್ಟಾಚಾರ'**!‡

ಮತ್ತು ಯಾವನು ಇದನ್ನನುಸರಿಸುವನೋ, ಅವನು **'ಶಿಷ್ಟ'**. ಎನಿಸುತ್ತಾನೆ.

---

*ದೇಶ-ಸಂಬಂಧದ ಈ ಪರಿಭಾಷೆಯಲ್ಲದೇ, ಶ್ರೇಷ್ಠರನ್ನೂ "ಆರ್ಯ"ರೆಂದು ಮಹರ್ಷಿಗಳು ತಮ್ಮ ಮಂತವ್ಯ-29ರಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು.—ಅನು.

†ಯಜ್ಞಕರ್ತೃಗಳಿಗೆ.—ಅನು.

‡ಊಟ, ಉಡಿಗೆ-ತೊಡಿಗೆ, ಸ್ವಾಗತ-ಸತ್ಕಾರ ಮೊದಲಾದ ವ್ಯವಹಾರ-ಸಂಬಂಧದ ವಿಷಯಗಳಿಗೆ 'ಶಿಷ್ಟಾಚಾರ' (Etiquette), ಎಂಬುದು ಆಧುನಿಕ ಕಾಲದ ಪರಿಭಾಷೆ. ಇದನ್ನು ಮೇಲಿನ ವೈದಿಕ ಸಂಸ್ಕೃತಿಯ ಶಿಷ್ಟಾಚಾರದೊಂದಿಗೆ ಹೋಲಿಸಿ, ನೋಡಿ.—ಸಂ.

**37.** **[‘ಪ್ರಮಾಣಗಳು’]**:—ಪ್ರತ್ಯಕ್ಷವೇ ಮೊದಲಾದ ಎಂಟು ಪ್ರಮಾಣಗಳನ್ನೂ* ನಾನು ಅಂಗೀಕರಿಸುತ್ತೇನೆ.

**38.** **‘ಆಪ್ತ’**—ಯಾವನು ಯಥಾರ್ಥವಾದುದನ್ನು ಹೇಳುತ್ತಾನೋ, ಧರ್ಮಾತ್ಮನೂ, ಸರ್ವರ ಸುಖಕ್ಕಾಗಿ ಪ್ರಯತ್ನಿಸುವವನೂ ಆಗಿರುತ್ತಾನೋ, ಅವನನ್ನೇ ‘ಆಪ್ತ’, ಎಂದು ಹೇಳುತ್ತೇನೆ.

**39.** **‘ಪರೀಕ್ಷೆ’**—ಐದು ವಿಧವಾಗಿರುತ್ತದೆ.† ಇವುಗಳಲ್ಲಿ—

ಮೊದಲನೆಯದು—ಈಶ್ವರ, ಅವನ ಗುಣ-ಕರ್ಮ-ಸ್ವಭಾವಗಳು ಮತ್ತು ವೇದವಿದ್ಯೆ;

ಎರಡನೆಯದು—ಪ್ರತ್ಯಕ್ಷ ಮೊದಲಾದ ಎಂಟು ಪ್ರಮಾಣಗಳು;

ಮೂರನೆಯದು—ಸೃಷ್ಟಿಕ್ರಮ;

ನಾಲ್ಕನೆಯದು—ಆಪ್ತರ ವ್ಯವಹಾರ; ಮತ್ತು

ಐದನೆಯದು—ತನ್ನ ಆತ್ಮನ ಪವಿತ್ರತೆ, ಹಾಗೂ ವಿದ್ಯೆ.

ಈ ಐದು ಪರೀಕ್ಷೆಗಳಿಂದ ಸತ್ಯಾಸತ್ಯದ ನಿರ್ಣಯವನ್ನು ಮಾಡಿ, ಸತ್ಯದ ಸ್ವೀಕಾರವನ್ನೂ, ಅಸತ್ಯದ ಪರಿತ್ಯಾಗವನ್ನೂ ಮಾಡಬೇಕು.

**40.** **‘ಪರೋಕಾರ’**—ಯಾವುದರಿಂದ ಮಾನವರ ದುರಾಚಾರ-ದುಃಖಗಳು ದೂರವಾಗುವುವೋ, ಶ್ರೇಷ್ಠಾಚಾರ ಮತ್ತು ಸುಖಗಳು ಹೆಚ್ಚುವುವೋ, ಆ [ಕಾರ್ಯ] ಮಾಡುವುದನ್ನೇ, **‘ಪರೋಪಕಾರ’**, ಎಂದು ಹೇಳುತ್ತೇನೆ.

**41.** **‘ಸ್ವತಂತ್ರ’; ‘ಪರತಂತ್ರ’**—ಜೀವನು ತನ್ನ ಕರ್ಮಗಳನ್ನು ಮಾಡುವುದರಲ್ಲಿ ‘ಸ್ವತಂತ್ರ’ನೂ, ಮತ್ತು ಕರ್ಮಫಲವನ್ನು ಭೋಗಿಸುವುದರಲ್ಲಿ ಈಶ್ವರನ ವ್ಯವಸ್ಥೆಯಿಂದ **‘ಪರತಂತ್ರ’**ನೂ ಆಗಿದ್ದಾನೆ.

ಹಾಗೆಯೇ, ಈಶ್ವರನೂ ಕೂಡ, ಸತ್ಯಾಚಾರ ಮೊದಲಾದ ಕರ್ಮಗಳನ್ನು ಮಾಡುವುದರಲ್ಲಿ **‘ಸ್ವತಂತ್ರ’**ನಾಗಿದ್ದಾನೆ.

**42.** **‘ಸ್ವರ್ಗ’**—ಸುಖವಿಶೇಷದ ಭೋಗದ, ಮತ್ತು ಅದರ ಸಾಧನಗಳ ಸಂಪಾದನೆಯ ಹೆಸರು ‘ಸ್ವರ್ಗ’, ಎಂದಾಗಿದೆ.

---

*ಈ ಗ್ರಂಥದ ಪುಟ 89-94ನ್ನು ನೋಡಿ.—ಸಂ.

†ಈ ಗ್ರಂಥದ ಪುಟ 88-89ನ್ನು ನೋಡಿ.—ಸಂ.

**43.** **'ನರಕ'**—ದುಃಖವಿಶೇಷದ ಭೋಗದ, ಮತ್ತು ಅದರ ಸಾಧನಗಳ ಸಂಪಾದನೆಯ ಹೆಸರು **'ನರಕ'**, ಎಂದಾಗಿದೆ.

**44.** **'ಜನ್ಮ'**—ಶರೀರಧಾರಣ ಮಾಡಿ, ಪ್ರಕಟವಾಗುವುದು[ಜನ್ಮವಾಗಿದೆ.] ಅದುದರಿಂದ, ಪೂರ್ವ,ಪರ ಮತ್ತು ಮಧ್ಯ,* ಎಂಬ ಭೇದದಿಂದ ಮೂರೂ ಬಗೆಯು ದನ್ನೂ ಒಪ್ಪಿಕೊಳ್ಳುತ್ತೇನೆ.

**45.** **['ಜನ್ಮ-ಮೃತ್ಯು']**—ದೇಹದೊಂದಿಗೆ ಸಂಯೋಗವಾಗುವುದರ ಹೆಸರು **'ಜನ್ಮ'**; ಮತ್ತು ವಿಯೋಗಮಾತ್ರವಾಗುವುದರ ಹೆಸರು **'ಮರಣ'**, ಎಂದು ಹೇಳುತ್ತಾರೆ.

**46.** **'ವಿವಾಹ'**—ನಿಯಮಪೂರ್ವಕವಾಗಿ, ಪ್ರಸಿದ್ಧಗೊಳಿಸಿ, ಸ್ವಂತ ಇಚ್ಛೆ ಯಿಂದ ಪಾಣಿಗ್ರಹಣಮಾಡುವುದು **'ವಿವಾಹ'**,ಎನಿಸುತ್ತದೆ.

**47.** **'ನಿಯೋಗ'**—ವಿವಾಹವಾದ ಮೇಲೆ, ಪತಿ [ಅಥವಾ ಪತ್ನಿ]ಯ ಮೃತ್ಯು ಮೊದಲಾದ ವಿಯೋಗದಲ್ಲಿ, ಅಥವಾ ನಪುಂಸಕತ್ವಾದಿ ಸ್ಥಿರ ರೋಗಗಳಲ್ಲಿ, ಸ್ತ್ರೀ ಅಥವಾ ಪುರುಷನು, ಆಪತ್ಕಾಲದಲ್ಲಿ ಸ್ವವರ್ಣಸ್ಥ ಅಥವಾ ತನ್ನಿಂದ ಉತ್ತಮ ವರ್ಣಸ್ಥ ಪುರುಷನ, ಅಥವಾ ಸ್ತ್ರೀಯ ಸಂಗಡ, ಸಂತಾನೋತ್ಪತ್ತಿ ಮಾಡುವುದು.†

**48.** **'ಸ್ತುತಿ'**—ಗುಣಕೀರ್ತನ, ಶ್ರವಣ ಮತ್ತು ಜ್ಞಾನದ ಲಭಿಸುವಿಕೆ, ಇದರ ಫಲ ಪ್ರೀತಿ ಮೊದಲಾದುವಾಗಿವೆ.

**49.** **'ಪ್ರಾರ್ಥನೆ'**—ತನ್ನ ಸಾಮರ್ಥ್ಯದ ನಂತರ,ಈಶ್ವರನ ಸಂಬಂಧದಿಂದ, ಪ್ರಾಪ್ತವಾಗುವ ವಿಜ್ಞಾನ ಮೊದಲಾದುವುಗಳಿಗಾಗಿ ಈಶ್ವರನಲ್ಲಿ ಯಾಚನೆಯನ್ನು ಮಾಡುವುದು [**'ಪ್ರಾರ್ಥನೆ'**, ಎನಿಸುತ್ತದೆ].

ಮತ್ತು ನಿರಭಿಮಾನತ್ವ ಮೊದಲಾದುದು‡ ಇದರ ಫಲವಾಗಿರುತ್ತದೆ.

---

*ವರ್ತಮಾನ.—ಅನು.

†ವಿವಾಹಾನಂತರ, ಪತಿ [ಅಥವಾ ಪತ್ನಿ] ಮೃತರಾಗುವುದು, ಇಬ್ಬರೂ ಜೀವಂತರಾಗಿದ್ದರೂ ಸಂತತಿಯಾಗದಿರುವುದು, ಪತಿಯ ನಪುಂಸಕತ್ವ, ಪತ್ನಿಯ ಬಂಜೆತನ, ಯಾವುದಾದರೂ ಅಸಾಧ್ಯರೋಗದಿಂದ ಗ್ರಸ್ತರಾಗಿರುವುದು—ಈ ಮೊದಲಾದ ಆಪತ್ಕಾಲಗಳಲ್ಲಿ, ಗುರು-ಹಿರಿಯರ ಮುಂದೆ, ಪ್ರಕಟಪಡಿಸಿ, ಕೇವಲ ಸಂತಾನಪ್ರಾಪ್ತಿಗಾಗಿ ಸ್ವವರ್ಣದ ಅಥವಾ ತನ್ನದಕ್ಕಿಂತ ಉತ್ಕೃಷ್ಟ ವರ್ಣದ ಸ್ತ್ರೀಯೊಂದಿಗೆ ಅಥವಾ ಪುರುಷನೊಂದಿಗೆ ದೇಹಸಂಗ ಮಾಡುವುದು ನಿಯೋಗ, ಎನಿಸುತ್ತದೆ.—ಅನು.

‡ಗರ್ವನಾಶ, ನಮ್ರತಾವರ್ಧನ.—ಅನು.

50. **'ಉಪಾಸನೆ'**—ಹೇಗೆ ಈಶ್ವರನ ಗುಣ-ಕರ್ಮ-ಸ್ವಭಾವಗಳು ಪವಿತ್ರವಾಗಿವೆಯೋ, ಹಾಗೆ ತಮ್ಮದನ್ನೂ ಮಾಡಿಕೊಳ್ಳುವುದು. ಈಶ್ವರನನ್ನು ಸರ್ವವ್ಯಾಪಕನು, ಮತ್ತು ತಮ್ಮನ್ನು ವ್ಯಾಪ್ಯನು, ಎಂದು ತಿಳಿದು, 'ಈಶ್ವರನ ಬಳಿ ನಾವಿದ್ದೇವೆ, ಹಾಗೂ ನಮ್ಮ ಬಳಿ ಈಶ್ವರನಿದ್ದಾನೆ', ಎಂಬ ನಿಶ್ಚಯವನ್ನು ಯೋಗಾಭ್ಯಾಸದಿಂದ ಸಾಕ್ಷಾತ್ತಾಗಿ ಮಾಡಿಕೊಳ್ಳುವುದು **'ಉಪಾಸನೆ'**, ಎನಿಸುತ್ತದೆ. ಇದರ ಫಲವು ಜ್ಞಾನದ ಉನ್ನತಿ ಮೊದಲಾದುದಾಗಿದೆ.

51. **'ಸಗುಣ-ನಿರ್ಗುಣ-ಸ್ತುತಿ-ಪ್ರಾರ್ಥನೋಪಾಸನೆ'**—ಯಾವ ಯಾವ ಗುಣಗಳು ಪರಮೇಶ್ವರನಲ್ಲಿವೆಯೋ, ಅವುಗಳಿಂದ [ಅವನು] ಯುಕ್ತನು; ಮತ್ತು ಯಾವ ಯಾವ ಗುಣಗಳು ಅವನಲ್ಲಿಲ್ಲವೋ, ಅವುಗಳಿಂದ [ಅವನು] ರಹಿತನು, ಎಂದು ತಿಳಿದುಕೊಂಡು, [ಅವನ] ಗುಣಗಾನ ಮಾಡುವುದು **'ಸಗುಣ-ನಿರ್ಗುಣ-ಸ್ತುತಿ'**, [ಎನಿಸುತ್ತದೆ.]*

ಈಶ್ವರನಿಂದ ಶುಭಗುಣಗಳನ್ನು ಪಡೆದುಕೊಳ್ಳಲು ಇಚ್ಛಿಸುವುದು ಮತ್ತು ದೋಷ-ವಿಮೋಚನಕ್ಕಾಗಿ ಪರಮಾತ್ಮನ ಸಹಾಯವನ್ನು ಬಯಸುವುದು **'ಸಗುಣ-ನಿರ್ಗುಣ-ಪ್ರಾರ್ಥನೆ'**,† [ಎನಿಸುತ್ತದೆ.]

ಮತ್ತು ಪರಮೇಶ್ವರನ ಬಗೆಗೆ, ಅವನು ಸಮಸ್ತ ಗುಣಗಳಿಂದ ಸಹಿತನು, ಹಾಗೂ ಎಲ್ಲ ದೋಷಗಳಿಂದ ರಹಿತನು, ಎಂದು ತಿಳಿದುಕೊಂಡು, ತನ್ನ ಆತ್ಮನನ್ನು ಅವನ,‡ ಹಾಗೂ ಅವನ ಆಜ್ಞೆಯ [ಪರಿಪಾಲನದ] ಸಲುವಾಗಿ ಸಮರ್ಪಣ ಮಾಡಿಬಿಡುವುದು **'ಸಗುಣ-ನಿರ್ಗುಣೋಪಾಸನೆ'**, ಎನ್ನಿಸುತ್ತದೆ.$

## (ಈ ಸಿದ್ಧಾಂತಗಳು ನನ್ನ ಗ್ರಂಥಗಳಲ್ಲಿ ಯತ್ರ-ತತ್ರ ಬರೆಯಲಾಗಿವೆ)

ಹೀಗೆ, ಸಂಕ್ಷೇಪವಾಗಿ ಸ್ವಸಿದ್ಧಾಂತಗಳನ್ನು ತೋರಿಸಿದ್ದೇನೆ. **ಇವುಗಳ ವಿಶೇಷ ವ್ಯಾಖ್ಯಾನವು** ಇದೇ "ಸತ್ಯಾರ್ಥಪ್ರಕಾಶ"ದ ಪ್ರಕರಣ—ಪ್ರಕರಣಗಳಲ್ಲಿದೆ. ಮತ್ತು

*ಈ ಬಗೆಯ ಸ್ತುತಿಗೆ ಕೇವಲ ಈಶ್ವರೋಕ್ತ ನಾಲ್ಕು ವೇದಗಳೇ ಆಧಾರ! ಇತರ ಮನುಷ್ಯಕೃತ ಗ್ರಂಥಗಳಲ್ಲಿ ಈಶ್ವರನ ಅಯಥಾರ್ಥ ಸ್ತುತಿ ಇರುತ್ತದೆ. ಸಂ.

†ಈ ಬಗೆಯ ಪ್ರಾರ್ಥನೆಗೂ ನಾಲ್ಕು ವೇದಗಳೇ ಆಧಾರ. ಮನುಷ್ಯಕೃತ ಗ್ರಂಥಗಳಲ್ಲಿ ಅಯಥಾರ್ಥ ಪ್ರಾರ್ಥನೆ ಇರುತ್ತದೆ.—ಸಂ.

‡ಅವನ ಸಲುವಾಗಿ, ಎಂದರೆ ಅವನ ಸಾಕ್ಷಾತ್ಕಾರದ ಸಲುವಾಗಿ! 'ಅವನಿಗೆ ನಮ್ಮಿಂದ ಏನೋ ಬೇಕಾಗಿದೆ; ಅದಕ್ಕಾಗಿ', ಎಂಬ ಭಾವನೆ ವೇದಾನುಕೂಲವಲ್ಲ.—ಅನು.

$ಸಾಧಾರಣತಃ ಪಾಮರರು ಗ್ರಹಿಸುವಂತೆ, 'ಸಗುಣ', ಎಂದರೆ ಸಾಕಾರ; 'ನಿರ್ಗುಣ', ಎಂದರೆ ನಿರಾಕಾರ, ಎಂದು ತಿಳಿಯುವುದು ಪ್ರಮಾಣ, ಯುಕ್ತಿ ಎರಡಕ್ಕೂ ವಿರುದ್ಧವಾಗಿರುತ್ತದೆ. —ಅನು.

"ಋಗ್ವೇದಾದಿಭಾಷ್ಯಭೂಮಿಕಾ" ಮೊದಲಾದ ಗ್ರಂಥಗಳಲ್ಲಿಯೂ ಕೂಡ, ಬರೆಯು ಲಾಗಿದೆ. ಎಂದರೆ, ಯಾವ-ಯಾವ ತತ್ವಗಳು ಸರ್ವರಿಗೂ ಮಾನನೀಯವಾಗಿರು ವುವೋ, ಅವುಗಳನ್ನು ಒಪ್ಪುತ್ತೇನೆ. ಎಂದರೆ, ಉದಾಹರಣೆಗೆ—

ಸತ್ಯಭಾಷಣ ಸರ್ವರ ದೃಷ್ಟಿಯಲ್ಲಿಯೂ ಒಳ್ಳೆಯದು! ಮತ್ತು ಮಿಥ್ಯಾ ಭಾಷಣ ಕೆಟ್ಟದು! ಇಂತಹ ಸಿದ್ಧಾಂತಗಳನ್ನು ಅಂಗೀಕರಿಸುತ್ತೇನೆ.

### (ಮತ-ಮತಾಂತರಗಳ ಜಗಳಗಳಲ್ಲಿ ನನ್ನ ಅಭಿರುಚಿ ಇಲ್ಲ)

ಮತ್ತು ಮತ-ಮತಾಂತರಗಳಲ್ಲಿನ ಪರಸ್ಪರ ವಿರುದ್ಧವಾದ ಕಲಹಗಳನ್ನು ನಾನು ಅಪೇಕ್ಷಿಸುವುದಿಲ್ಲ.* ಏಕೆಂದರೆ, ಈ ಮತವಾದಿಗಳೇ ತಮ್ಮ ಮತಗಳನ್ನು ಪ್ರಸರಿಸಿ, ಮಾನವರನ್ನು [ಅವುಗಳಲ್ಲಿ] ಸಿಕ್ಕಿಸಿಕೊಂಡು, ಪರಸ್ಪರ ಶತ್ರುಗಳನ್ನಾಗಿ ಮಾಡಿಬಿಟ್ಟಿದ್ದಾರೆ!

ಈ ವಿವಾದವನ್ನು ಖಂಡಿಸಿ, ಸರ್ವಸತ್ಯವನ್ನು ಪ್ರಚುರಗೊಳಿಸಿ, ಸರ್ವರನ್ನೂ ಐಕ್ಯಮತ್ಯದ [ಆಶ್ರಯದಲ್ಲಿ] ತಂದು, ದ್ವೇಷವನ್ನು ದೂರೀಕರಿಸಿ, ಪರಸ್ಪರರಲ್ಲಿ ದೃಢ ಪ್ರೀತಿಯುಕ್ತರನ್ನಾಗಿ ಮಾಡಿಸಿ, ಎಲ್ಲರಿಂದಲೂ, ಎಲ್ಲರಿಗೂ ಸುಖಲಾಭ ವನ್ನುಂಟುಮಾಡುವ ಸಲುವಾಗಿಯೇ ನನ್ನ ಪ್ರಯತ್ನ [ನಡೆದಿದೆ]. ಮತ್ತು [ನನ್ನ] ಅಭಿಪ್ರಾಯವೂ [ಅದೇ] ಆಗಿದೆ!

### (ಭರತವಾಕ್ಯ)

ಸರ್ವಶಕ್ತಿಮಾನ್ ಪರಮಾತ್ಮನ ಕೃಪೆಯಿಂದ, ಮತ್ತು ಸಹಾಯದಿಂದ, ಹಾಗೂ ಆಪ್ತಜನರ ಸಹಾನುಭೂತಿಯಿಂದ, 'ಈ ಸಿದ್ಧಾಂತವು ಸರ್ವತ್ರ ಭೂಮಂಡಲದಲ್ಲಿ ಶೀಘ್ರವೇ ಪ್ರವರ್ತಿತವಾಗಲಿ!' ಅದರಿಂದ ಸಮಸ್ತಜನರೂ ಸಹಜ ವಾಗಿ ಧರ್ಮಾರ್ಥ-ಕಾಮ-ಮೋಕ್ಷಗಳ ಸಿದ್ಧಿಯನ್ನು ಪಡೆದುಕೊಂಡು, ಸದಾ ಉನ್ನತಿ ಶೀಲರೂ, ಮತ್ತು ಆನಂದ-ಸಮನ್ವಿತರೂ ಆಗುತ್ತಾ ಇರಲಿ!!

ಇದೇ ನನ್ನ ಮುಖ್ಯ ಪ್ರಯೋಜನವಾಗಿರುತ್ತದೆ! ॥

ಅಲಮತಿವಿಸ್ತರೇಣ ಬುದ್ಧಿಮದ್ವರ್ಯೇಷು ॥†

---

*ವೈದಿಕ ಸಿದ್ಧಾಂತಗಳ ಮಂಡನಕ್ಕಾಗಿ ಮಹರ್ಷಿ ದಯಾನಂದರು ಎಷ್ಟು ಅಧ್ಯಯನ ಮಾಡಿದ್ದರೋ, ಹಾಗೆಯೇ ವೇದವಿರುದ್ಧ ಮತಗಳ ಸಮೀಕ್ಷೆಗಾಗಿಯೂ ಅಷ್ಟೇ ವಿಸ್ತೃತ ಅಧ್ಯಯನ ಮಾಡಿದ್ದರು. 'ಸತ್ಯಾರ್ಥಪ್ರಕಾಶ'ದಲ್ಲಿ ಉದ್ಧೃತವಾದ ಅಧಿಕಾಂಶ ಗ್ರಂಥಗಳ ಸೂಚಿಯನ್ನು ಪರಿಶಿಷ್ಟ-೭ರಲ್ಲಿ ಕೊಡಲಾಗಿದೆ.—ಸಂ.

†ಬುದ್ಧಿವಂತರಾದ ಶ್ರೇಷ್ಠರ ಮುಂದೆ ಅತಿ ವಿಸ್ತಾರವೇಕೆ?—ಅನು.

ಓಮ್ ಶನ್ನೋ ಮಿತ್ರಃ ಶಂ ವರುಣಃ ಶನ್ನೋ ಭವತ್ವರ್ಯಮಾ।

ಶನ್ನ ಇಂದ್ರೋ ಬೃಹಸ್ಪತಿಃ ಶನ್ನೋ ವಿಷ್ಣುರುರುಕ್ರಮಃ ॥

ನಮೋ ಬ್ರಹ್ಮಣೇ ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ।

ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್ ಋತಮವಾದಿಷಂ

ಸತ್ಯಮವಾದಿಷಮ್ ।

ತನ್ಮಾಮಾವೀತ್ ತದ್ವಕ್ತಾರಮಾವೀದ್ ಆವೀನ್ಮಾಮ್ ಆವೀದ್ವಕ್ತಾರಮ್॥*

ಓಮ್ ಶಾಂತಿಃ ಶಾಂತಿಃ ಶಾಂತಿಃ ॥†

---

*ತೈತ್ತಿರೀಯ ಆರಣ್ಯಕ (7.12)—ಯಜು.ವೇ.

†[ಓಂ ಮಿತ್ರಃ] ಸರ್ವರಕ್ಷಕನೂ, ಸರ್ವಸ್ನೇಹಿಯೂ ಆದ ಭಗವಂತನು [ನಃ] ನಮಗೆ [ಶಮ್] ಶಾಂತಿದಾಯಕನಾಗಲಿ! [ವರುಣಃ] ಸರ್ವತಾಪನಿವಾರಕನೂ, ಸರ್ವವರಣೀಯನೂ ಆದ ಈಶ್ವರನು [ಶಮ್] ಶಾಂತಿಪ್ರದನಾಗಲಿ! [ಅರ್ಯಮಾ] ಆತ್ಮಾಧಿಪತ್ಯ ಪಡೆದವರನ್ನು ಮಾನಿಸುವ, ಆತ್ಮಾಧಿಪತ್ಯ ಪಡೆದವರಿಂದಲೇ ತಿಳಿಯಲ್ಪಡುವ ಪರಮಾತ್ಮನು [ನಃ] ನಮಗೆ [ಶಂ ಭವತು] ಶಾಂತಿದಾಯಕನಾಗಲಿ! [ಇಂದ್ರಃ] ಪರಮೈಶ್ವರ್ಯಸಂಪನ್ನನೂ, ಸರ್ವೇಶ್ವರನೂ, ಜೀವಮಾತ್ರರಿಗೆ ದಯೆ ತೋರುವ ಕರುಣಾನಿಧಿಯೂ, [ಬೃಹಸ್ಪತಿಃ] ಬೃಹದ್ವಿಶ್ವದ, ಬೃಹತೀ ವೇದವಾಣಿಯ ಸ್ವಾಮಿಯೂ, ರಕ್ಷಕನೂ ಆದ ಪರಮಾತ್ಮನು [ನಃ] ನಮಗೆ [ಶಮ್] ಶಾಂತಿಪ್ರದಾತೃವಾಗಲಿ! [ವಿಷ್ಣುಃ] ಸರ್ವವ್ಯಾಪಕನೂ, [ಉರುಕ್ರಮಃ] ಮಹಾನ್ ಶಕ್ತಿಶಾಲಿಯೂ ಆದ ಭಗವಂತನು [ನಃ] ನಮಗೆ [ಶಮ್] ಶಾಂತಿದಾಯಕನಾಗಲಿ!

[ಬ್ರಹ್ಮಣೇ] ಸರ್ವಶ್ರೇಷ್ಠ, ಸರ್ವಜ್ಯೇಷ್ಠ, ಪ್ರಜ್ಞಾನಮಯನಿಗೆ [ನಮಃ] ನಮಸ್ಕಾರ! [ವಾಯೋ] ಪ್ರಾಣಗಳಿಗೂ ಪ್ರಾಣನಾದ ಸರ್ವಜೀವನಪ್ರದನೇ ! [ತೇ ನಮಃ] ನಿನಗೆ ನಮಸ್ಕಾರ! [ತ್ವಮ್ ಏವ] ಸರ್ವಜೀವನಾಧಾರನಾದ ನೀನೇ [ಪ್ರತ್ಯಕ್ಷಮ್] ಜ್ಞಾನಗೋಚರವಾದ, [ಬ್ರಹ್ಮ ಅಸಿ] ಸರ್ವೋತ್ತಮತತ್ತ್ವವಾಗಿದ್ದೀಯೆ. [ತ್ವಾಮ್ ಏವ] ಆ ನಿನ್ನನ್ನೇ [ಪ್ರತ್ಯಕ್ಷಂ ಬ್ರಹ್ಮ] ಅನುಭವಗಮ್ಯವಾದ ಮಹಾತತ್ತ್ವವೆಂದು, [ ಅವಾದಿಷಮ್] ಹೇಳುತ್ತಾ ಬಂದಿದ್ದೇನೆ. [ಋತಮ್] ಸತ್ಯಜ್ಞಾನಸ್ವರೂಪನೆಂದು, [ಅವಾದಿಷಮ್] ಹೇಳುತ್ತಾ ಬಂದಿದ್ದೇನೆ. [ಅಥವಾ ನಿನ್ನನ್ನು ಪ್ರತ್ಯಕ್ಷ ಬ್ರಹ್ಮನೆನ್ನುವಾಗ ಸತ್ಯವನ್ನೇ ಹೇಳಿದ್ದೇನೆ.] [ಸತ್ಯಮ್ ಅವಾದಿಷಮ್] ನಿನ್ನನ್ನು ಸತ್ಯಸ್ವರೂಪನೆಂದೇ, ಸತ್ಯವನ್ನೇ ಹೇಳಿದ್ದೇನೆ. [ತತ್] ಅದು [ಮಾಮ್ ಆವೀತ್]ನನ್ನನ್ನು ಕಾಪಾಡಿಕೊಂಡು ಬಂದಿದೆ. [ತತ್] ಅದೇ [ವಕ್ತಾರಮ್] ನನಗೆ ಉಪದೇಶಕನಾದ ಗುರುವನ್ನೂ [ಆವೀತ್] ರಕ್ಷಿಸಿಕೊಂಡು ಬಂದಿದೆ. [ಆವೀತ್ →

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಾಣಾಂ ಪರಮ-

ವಿದುಷಾಂ ಶ್ರೀವಿರಜಾನಂದಸರಸ್ವತೀಸ್ವಾಮಿನಾಂ ಶಿಷ್ಯೇಣ

ಶ್ರೀಮದ್ದಯಾನಂದಸರಸ್ವತೀಸ್ವಾಮಿನಾ ವಿರಚಿತಃ

ಸ್ವಮಂತವ್ಯಾಮಂತವ್ಯಸಿದ್ಧಾಂತಸಮನ್ವಿತಃ

ಸುಪ್ರಮಾಣಯುಕ್ತಃ ಸುಭಾಷಾವಿಭೂಷಿತಃ

ಸತ್ಯಾರ್ಥಪ್ರಕಾಶೋಽಯಂ ಗ್ರಂಥಃ

ಸಂಪೂರ್ತಿಮಗಮತ್ ॥



→ ಮಾಮ್] ರಕ್ಷಿಸುತ್ತಾ ಬಂದಿದೆ ನನ್ನನ್ನು. [ಅವೀತ್ ವಕ್ತಾರಮ್] ರಕ್ಷಿಸುತ್ತಾ ಬಂದಿದೆ ಪ್ರವಚನಕರ್ತೃವಾದ ಗುರುವನ್ನು.

[ಓಂ ಶಾಂತಿಃ ಶಾಂತಿಃ ಶಾಂತಿಃ] ಸರ್ವರಕ್ಷಕನು ಆಧಿದೈವಿಕೀ ಶಾಂತಿಯನ್ನೂ, ಅಧಿಭೌತಿಕೀ ಶಾಂತಿಯನ್ನೂ, ಆಧ್ಯಾತ್ಮಿಕಾ ಶಾಂತಿಯನ್ನೂ ಕರುಣಿಸಲಿ !—ಅನು.

ಪರಿಶಿಷ್ಟ-೨

# ವೈದಿಕಧರ್ಮದ ಹ್ರಾಸ



ಪರಿಶಿಷ್ಟ–೩

# ಜೈನರ ಐತಿಹಾಸಿಕ ಹಿನ್ನೆಲೆ ಮತ್ತು ಮೂರ್ತಿಪೂಜೆ

**'ಸತ್ಯಾರ್ಥ ಪ್ರಕಾಶ'**, ಪ್ರಥಮ ಸಂಸ್ಕರಣ (1875) (ಪುಟ 311-312)ದಲ್ಲಿ ಸ್ವಾಮೀ ದಯಾನಂದರು ಜೈನರ ಐತಿಹಾಸಿಕ ಹಿನ್ನೆಲೆಯ ಬಗ್ಗೆ ಹೊಸ ಬೆಳಕನ್ನು ಬೀರಿದ್ದಾರೆ. ಅದರಂತೆ, ಜೈನರು ಚೀನಾ ಮೊದಲಾದ ದೇಶಗಳ ನಿವಾಸಿಗಳಾಗಿ ಅಲ್ಲಿ ವ್ಯಾಪಾರಸ್ಥರಾಗಿದ್ದರು. ಭಾರತದಲ್ಲಿನ ಶಾಸನಗಳು ನಿರ್ಬಲವಾದಾಗ ಜೈನರು ಭಾರತಕ್ಕೆ ಬಂದರು. ಆದ್ದರಿಂದ, ಅವರು ಭಾರತದಲ್ಲಿ ರಾಜ್ಯಗಳನ್ನು ಸ್ಥಾಪಿಸಲು ಸಮರ್ಥರಾಗಿ, ಭಾರತೀಯರ ಮೇಲೆ ಆಳ್ವಿಕೆಯನ್ನಾರಂಭಿಸಿದರು. ಜೈನರೇ ಭಾರತ ದಲ್ಲಿ ಮೂರ್ತಿಪೂಜೆಯ ಪ್ರಚಲನೆಯನ್ನು ಜಾರಿಗೆ ತಂದರು. ಅದಕ್ಕೆ ಮೊದಲು, ಭಾರತದಲ್ಲಿ ಮೂರ್ತಿಪೂಜೆಯ ಗಂಧವೂ ಇರಲಿಲ್ಲ! ಸ್ವಾಮೀ ದಯಾನಂದರು ಹೀಗೆ ಬರೆಯುತ್ತಾರೆ:—

ಅತ್ಯಂತ ಪ್ರಮಾದ ಮತ್ತು ಕಾಮುಕತೆಯ ಪರಿಣಾಮವಾಗಿ, ಆರ್ಯಾವರ್ತದ ಜನರು ವಿದ್ಯೆ, ಬುದ್ಧಿಗಳಿಂದ ರಹಿತರಾದ ಕಾರಣದಿಂದ. ಶಕ್ತಿ, ಸಾಹಸ ಮತ್ತು ಶೌರ್ಯಗಳನ್ನು ಕಳೆದುಕೊಂಡರು. ಪಾರಸ್ಪರಿಕ ವ್ಯವಹಾರಗಳಲ್ಲಿ ಅತ್ಯಧಿಕ ಈರ್ಷ್ಯೆ ಕಂಡುಬರತೊಡಗಿತು. ಒಬ್ಬರು ಇನ್ನೊಬ್ಬರ ಇರುವನ್ನು ಸಹಿಸಲಾರದವರಾಗಿ ಹೋದರು; ಮತ್ತು ಪರಸ್ಪರ ಕಾದಾಡಲಾರಂಭಿಸಿದರು. ಆರ್ಯಾವರ್ತದ ಈ ಪರಿಸ್ಥಿತಿಯು ಚೀನಾದಲ್ಲಿದ್ದ ಜೈನರಿಗೆ ಮತ್ತು ಇತರ ದೇಶಗಳಲ್ಲಿದ್ದ ಜನರಿಗೆ ಅರಿವಾಯಿತು. ವ್ಯಾಪಾರಕ್ಕಾಗಿ ಈ ದೇಶಕ್ಕೆ ಬರುತ್ತಿದ್ದ ವಿದೇಶೀಯರೂ ಕೂಡ, ಈ ಪರಿಸ್ಥಿತಿಯನ್ನು ತಮ್ಮ ಕಣ್ಮುಟ್ಟಿ ನೋಡಿದರು.

ಆಗ ಜೈನರು, ಈ ಸಮಯವು ಆರ್ಯಾವರ್ತದಲ್ಲಿ ಸುಲಭವಾಗಿ ರಾಜ್ಯವನ್ನು ಸ್ಥಾಪಿಸಲು ಅನುಕೂಲವಾಗಿದೆ, ಎಂಬುದಾಗಿ ಯೋಚಿಸಿದರು. ನಂತರ, ಅವರು ಆರ್ಯಾವರ್ತಕ್ಕೆ ಬಂದು, ರಾಜ್ಯವಾಳಲಾರಂಭಿಸಿದರು. ಕ್ರಮವಾಗಿ, ಅವರು ಬೋಧಗಯಾದಲ್ಲಿ ತಮ್ಮ ಬಿಗಿಯನ್ನು ಭದ್ರಮಾಡಿಕೊಳ್ಳುತ್ತಾ, ವಿದೇಶಗಳಲ್ಲೂ, ದ್ವೀಪ-ದ್ವೀಪಾಂತರಗಳಲ್ಲೂ ತಮ್ಮ ರಾಜ್ಯವನ್ನು ವಿಸ್ತರಿಸತೊಡಗಿದರು.

ಅವರು ವೈದಿಕ ಮತ್ತು ಸಂಸ್ಕೃತ ಗ್ರಂಥಗಳ ನಿಂದೆಯನ್ನು ಮಾಡುತ್ತಾ ತಮ್ಮ ಮತಗ್ರಂಥಗಳ ಅಧ್ಯಯನವನ್ನು ಹರಡಲಾರಂಭಿಸಿದರು. ತಮ್ಮ ಮತೀಯ ಸಿದ್ಧಾಂತಗಳ ಉಪದೇಶಗಳನ್ನು ಬಿತ್ತಲಾರಂಭಿಸಿದರು. ಆಗ, ಈ ದೇಶದಲ್ಲಿ ವಿದ್ಯೆ

ಲುಪ್ತವಾಗಿದ್ದುದರಿಂದ, ಬಹಳ ಜನರು ಅವರ ಮತವನ್ನಂಗೀಕರಿಸಲಾರಂಭಿಸಿದರು. ಆದರೆ, ಕಾನ್ಯಕುಬ್ಜ, ಕಾಶೀ, ಮತ್ತು ಪರ್ವತ, ದಕ್ಷಿಣ, ಹಾಗೂ ಪಶ್ಚಿಮ ಪ್ರದೇಶಗಳ ಜನರು ಈ ಹೊಸ ಮತವನ್ನು ಅಂಗೀಕರಿಸಲಿಲ್ಲ. ಆದರೆ, ಇವರು ಅಲ್ಪ ಸಂಖ್ಯೆಯಲ್ಲಿದ್ದರು. ಇವರಂತಹವರು ಮಾತ್ರವೇ ವೇದಾದಿ ಶಾಸ್ತ್ರಗಳ ಅಧ್ಯಯನ-ಅಧ್ಯಾಪನಗಳಲ್ಲಿ ನಿರತರಾಗಿದ್ದರು.

ಆಗ, ಜೈನರು ವರ್ಣಾಶ್ರಮಧರ್ಮ ಮತ್ತು ವೈದಿಕ ಸಂಸ್ಕಾರಗಳ ಮೇಲೆ ಸುಳ್ಳು ಅಪಾದನೆಗಳನ್ನು ಹೊರಿಸಿ, ಜನರಿಗೆ ಅವುಗಳಲ್ಲಿದ್ದ ವಿಶ್ವಾಸವನ್ನು ಸಡಿಲ ಮಾಡಿದರು. ಪರಿಣಾಮಸ್ವರೂಪವಾಗಿ, ಜನರು ತಮ್ಮ ಕರ್ತವ್ಯ-ಕರ್ಮಗಳಲ್ಲಿ ಉದಾಸೀನರಾದರು. ನಂತರ, ಯಜ್ಞೋಪವೀತಾದಿ ಇತರ ಸಂಸ್ಕಾರಗಳೂ ಅಂತ್ಯಗೊಂಡವು.

ಆ ಮೇಲೆ, ಜೈನರು ವೇದಕ್ಕೆ ಸಂಬಂಧಿಸಿದ ಮತ್ತು ವೈದಿಕ ಸಿದ್ಧಾಂತಗಳಿಗೆ ಸಂಬಂಧಿಸಿದ, ಹಾಗೂ ಈ ದೇಶದ ಇತಿಹಾಸಕ್ಕೆ ಸಂಬಂಧಪಟ್ಟ, ಮತ್ತು ತಮ್ಮ ಕೈಗೆ ಸಿಕ್ಕಿದ ಗ್ರಂಥಗಳೆಲ್ಲವನ್ನೂ ನಾಶಮಾಡಿದರು. ಇದರಿಂದ, ಜನರು ತಮ್ಮ ಇತಿಹಾಸದಲ್ಲಿ ತಮ್ಮ ಪ್ರಾಚೀನ ಗೌರವದ ಗುರುತನ್ನೂ ಕೂಡ ಹುಡುಕಲಾರದೇ, ಎಲ್ಲವನ್ನು ಮರೆತುಬಿಟ್ಟರು.

ಆಗ, ಜೈನರ ಆಡಳಿತವು ಈ ದೇಶದಲ್ಲಿ ಬಹಳ ದೃಢವಾಗಿ ಸ್ಥಾಪಿತವಾಯಿತು. ಅದರಿಂದ, ಜೈನರು ಬಹಳ ಗರ್ವಿಷ್ಠರೂ, ಮತ್ತು ಧೃಷ್ಟರೂ ಆಗಿ ಹೋಗಿ, ಅನ್ಯಾಯ ಮತ್ತು ದುರಾಚರಣೆಗಳನ್ನು ಮಾಡತೊಡಗಿದರು. ಏಕೆಂದರೆ, ದೇಶೀಯ ರಾಜ-ಪ್ರಜೆಗಳೆಲ್ಲರೂ ಅವರ ಮತವನ್ನಂಗೀಕರಿಸಿಬಿಟ್ಟಿದ್ದರು. ಆಗ, ಅವರಿಗೆ ಯಾರ ಭಯವೂ ಇಲ್ಲವಾಯಿತು; ಯಾವುದರ ಬಗ್ಗೆ ಸಂದೇಹವೂ ಇಲ್ಲವಾಯಿತು.

ಜೈನಮತಾನುಯಾಯಿಗಳಾದವರಿಗೆ ದೊಡ್ಡ ಹುದ್ದೆಗಳನ್ನೂ, ದೊಡ್ಡ ಅಧಿಕಾರಗಳನ್ನೂ ಪುರಸ್ಕಾರರೂಪದಲ್ಲಿ ಕೊಡಲಾರಂಭಿಸಿದರು. ವೈದಿಕ ಗ್ರಂಥಗಳ ಅಧ್ಯಯನ ಮಾಡುತ್ತಿದ್ದವರಿಗೆ ಮತ್ತು ವೈದಿಕ ಸಿದ್ಧಾಂತಗಳಿಗನುಸಾರವಾಗಿ ನಡೆಯುತ್ತಿದ್ದವರಿಗೆ ಅಪಮಾನ ಮಾಡಲಾರಂಭಿಸಿದರು.

ಜೈನರು ಅನೇಕ ದೇವಸ್ಥಾನಗಳನ್ನು ನಿರ್ಮಿಸಿ, ಅವುಗಳಲ್ಲಿ ತಮ್ಮ ಆಚಾರ್ಯರುಗಳ ಮೂರ್ತಿಗಳನ್ನು ಸ್ಥಾಪಿಸಿ, ಅವುಗಳ ಪೂಜೆಯನ್ನಾರಂಭಿಸಿದರು.

**ಈ ರೀತಿಯಾಗಿ ಮೂರ್ತಿಪೂಜೆಯು ಜೈನರ ರಾಜ್ಯಗಳಿಂದ ಪ್ರಾರಂಭವಾಗಿ, ಹರಡಲಾರಂಭಿಸಿತು; ಇದಕ್ಕೆ ಮೊದಲಿರಲಿಲ್ಲ!** ಏಕೆಂದರೆ, ಮಹಾಭಾರತಯುದ್ಧಕ್ಕೆ

ಮೊದಲು ರಚಿತವಾದ ಋಷಿ-ಮುನಿಗಳ ಯಾವ ಗ್ರಂಥದಲ್ಲೂ ಮೂರ್ತಿಪೂಜೆಯ ಉಲ್ಲೇಖ ಕೂಡ ಇಲ್ಲ*.

ಇದರಿಂದ ಸಿದ್ಧವಾಗುವುದೇನೆಂದರೆ, ಈ ದೇಶದಲ್ಲಿ ಜೈನರಿಂದಲೇ ಮೂರ್ತಿ ಪೂಜೆಯ ಪದ್ಧತಿ ಪ್ರಚಲಿತವಾಗಿದೆಯೇ ಹೊರತು, ಇದಕ್ಕೆ ಮೊದಲಿರಲಿಲ್ಲ, ಎಂದು.



## ಕಾಮಜ್ವರವನ್ನು ದೂರೀಕರಿಸುವ ಉಪಾಯ

ಪಂ. ಗಂಗಾರಾಮಜೀ—ಕಾಮದೇವನು ಎಲ್ಲರನ್ನೂ ಹಾಳುಮಾಡುತ್ತಿದ್ದಾನೆ. ನೀವು ಹೇಗೆ ಉಳಿದುಕೊಂಡಿದ್ದೀರಿ?

ಸ್ವಾಮೀಜೀ—ಇದರ ವಿಧಿ ಹೀಗಿದೆ:—

1. ಒಂದು ಸ್ಥಾನದಲ್ಲಿರಬೇಡಿ. 2. ನೃತ್ಯ, ನಾಟಕಗಳನ್ನು ನೋಡಲು ಹೋಗಬೇಡಿ. 3. ಸ್ತ್ರೀಯರ ಕಡೆ ನೋಡಬೇಡಿ. ನಿರಂತರ ಅಭ್ಯಾಸ ಮಾಡುವುದರಿಂದ ಇದರ ಸ್ವಭಾವವಾಗಿ ಹೋಗುತ್ತದೆ. 4. 'ಓಂಕಾರ'ದ ಜಪವನ್ನು ಹಗಲು-ರಾತ್ರಿ ಮಾಡುತ್ತಿರಿ.

5. ಬಹಳ ಆಲಸ್ಯವಾಗಿದ್ದರೆ, ನಿದ್ರೆ ಮಾಡಿ. ಇದು ಸುಷುಪ್ತಿಯ ನಿದ್ರೆಯಾಗಿರುತ್ತದೆ. ಅತ್ಯಂತ ಪರಿಶ್ರಮ ಮಾಡಿದ ಮೇಲೆ ಬರುವ ನಿದ್ರೆಯು ಸುಷುಪ್ತಿಯ ನಿದ್ರೆಯಾಗಿರುತ್ತದೆ. ಇದು ಕೇವಲ ಅಲ್ಪಕಾಲದಷ್ಟು ಅವಧಿಯುಕ್ತವಾಗಿರುತ್ತದೆ. ಹೆಚ್ಚು ನಿದ್ರಿಸುವುದರಿಂದ ಭ್ರಾಂತಿ ಉಂಟಾಗುತ್ತದೆ.

6. ಎರಡು ಗಂಟೆಯ ನಂತರ, ಎದ್ದು ಈಶ್ವರ-ಭಜನ ಮಾಡಬೇಕು.

7. ಮಾಲಕಂಗನಿಯ ಐದು ಕಾಳುಗಳನ್ನು (ಒಂದು ಮಾಶೆಯಷ್ಟು) ಪ್ರಾತಃಕಾಲ ಶೌಚದಿಂದ ನಿವೃತ್ತನಾದ ಮೇಲೆ, ಪ್ರತಿನಿತ್ಯ ತಿನ್ನಬೇಕು.

8. ಕೆಟ್ಟದನ್ನು ನೋಡಬಾರದು. ಕೆಟ್ಟದನ್ನು ಆಲಿಸಬಾರದು ಮತ್ತು ಕೆಟ್ಟದನ್ನು ಯೋಚಿಸಬಾರದು. 9. ಕೇವಲ ಬ್ರಹ್ಮಧ್ಯಾನದಲ್ಲಿರಬೇಕು.

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನಚರಿತ್ರ'—
ಪಂ. ಲೇಖರಾಮ್ : ಪುಟ 71]

*'ಸತ್ಯಾರ್ಥಪ್ರಕಾಶ'ದ ದ್ವಾದಶ ಸಮುಲ್ಲಾಸದ ಅನುಭೂಮಿಕೆ (೨)ನ್ನು ನೋಡಿ. ಪುಟ 870.—ಸಂ.

# ಮೂರ್ತಿಪೂಜೆಯ ದೋಷದಿಂದ ಭಾರತದ ಸ್ವಾತಂತ್ರ್ಯ-ನಾಶ

ಭಾರತವು ವಿದೇಶೀ (ಮುಸಲ್ಮಾನರ) ಆಕ್ರಮಣಕ್ಕೀಡಾಗಿ, ತತ್ಪರಿಣಾಮ ಸ್ವರೂಪವಾಗಿ, ಸುಮಾರು ಒಂದು ಸಾವಿರ ವರ್ಷಗಳ ತನಕ ಈ ದೇಶವು ಅವರ ಅಧೀನತೆಗೆ ಒಳಗಾಗಿತ್ತು. ಈ ಇತಿಹಾಸಕ್ಕೆ ಮೂಲವಾದ ಘಟನೆಗಳ ಸಂಕ್ಷಿಪ್ತ ಕಥಾನಕವನ್ನು ಕೆಳಗೆ ಕೊಡಲಾಗಿದೆ:—

ಏಳನೆಯ ಶತಮಾನದ ಮಧ್ಯದ ಹೊತ್ತಿಗೆ ಅರೇಬಿಯಾ, ಮತ್ತು ಅದರ ನೆರೆಹೊರೆಯ ರಾಷ್ಟ್ರಗಳು ಇಸ್ಲಾಮಿನ ಪ್ರಭಾವಕ್ಕಾಗಲೇ ಒಳಗಾಗಿದ್ದವು. ಅರೇಬಿಯಾ, ತುರ್ಕಿಸ್ತಾನ, ಈಜಿಪ್ಟ್ ಮತ್ತು ಇತರ ದೇಶಗಳೊಡನೆ ಭಾರತವು ಬಹಳ ಪ್ರಾಚೀನ ಕಾಲದಿಂದಲೂ ಧಾರ್ಮಿಕ, ಸಾಂಸ್ಕೃತಿಕ ಮತ್ತು ವ್ಯಾಪಾರಿಕ ಸಂಬಂಧಗಳನ್ನು ಇಟ್ಟು ಕೊಂಡಿದ್ದ ಕಾರಣದಿಂದ, ಆ ದೇಶಗಳು ಹೊಸ ಮತವನ್ನು ಸ್ವೀಕರಿಸಿದೊಡನೆಯೇ, ಈ ದೇಶಕ್ಕೂ ಕೂಡ, ಇಸ್ಲಾಮಿನ ಒತ್ತಡವನ್ನು ತಡೆಯುವುದು ಅಸಾಧ್ಯವಾಯಿತು. ಈ ಒತ್ತಡದ ಪರಿಣಾಮವಾಗಿ, ಆ ದೇಶಗಳ ಜನರು ಒಬ್ಬ ಈಶ್ವರ (ಅಲ್ಲಾ), ಒಂದು ಧರ್ಮ (ಇಸ್ಲಾಂ), ಮತ್ತು ಒಂದು ಧಾರ್ಮಿಕ ಗ್ರಂಥ (ಕುರಾನ್)ದ ಅಡಿಯಲ್ಲಿ ಒಟ್ಟುಗೂಡಿದಾಗ, ಭಾರತದ ಜನರು ಮೂರ್ತಿಪೂಜೆಯ ಮೂಲಕ ವಿಭಿನ್ನ ದೇವೀ-ದೇವತೆಗಳ ಉಪಾಸನೆಗಳಲ್ಲಿ ನಿರತರಾಗಿ, ವಿಭಿನ್ನ ಮತ-ಮತಾಂತರಗಳಲ್ಲಿ ತಮ್ಮನ್ನು ವಿಭಜಿಸಿಕೊಂಡು, ಅನೇಕ ಸಣ್ಣ-ಸಣ್ಣ ಸ್ವತಂತ್ರ ರಾಜ್ಯಗಳ ರೂಪದಲ್ಲಿ ಸ್ಥಾಪಿಸಿಕೊಂಡು, ಯಾವುದಾದರೂ ಸಣ್ಣ ನೆವ ಸಿಕ್ಕಿದೊಡನೆಯೇ ತಮ್ಮ-ತಮ್ಮಲ್ಲೇ ಕಾದಾಡಲು ಸಿದ್ಧರಾಗಿದ್ದರು.

ಕ್ರಿಸ್ತಶಕ 712 ರಲ್ಲಿ ಈರಾನ್, ಮಕರಾನ್ ಮತ್ತು ಬಲೂಚಿಸ್ತಾನದ ಆಡಳಿತಗಾರನಾದ **ಹಜ್ಜಾಜ**ನು ಸಿಂಧು ಪ್ರದೇಶದ ಹಿಂದೂ ರಾಜನಾದ **ದಾಹಿರ**ನ ಮೇಲೆ ಧಾಳಿ ಮಾಡಲು, ಕೇವಲ 20 ವರ್ಷ ವಯಸ್ಸಿನ ಯುವಕನಾದ **ಮುಹಮ್ಮದ್ ಬಿನ್ ಕಾಸಿಮ**ನನ್ನು ಕಳುಹಿಸಿದನು. ಕಾಸಿಮನ ಕೇವಲ 6000 ಸೈನಿಕರು ರಾಜಾ ದಾಹಿರನ 30.000 ಸೈನಿಕರೊಂದಿಗೆ ಯುದ್ಧ ಮಾಡಬೇಕಾದ ಆ ಪ್ರಸಂಗದಲ್ಲಿ, ಕಾಸಿಮನ ಸತ್ಯಾನಾಶವೇ ಫಲಿತಾಂಶವಾಗಿತ್ತು. ಆದರೆ, **ಕಾಕಾ**, ಎಂಬ ಬ್ರಾಹ್ಮಣನೊಬ್ಬನು ವಿಶ್ವಾಸಘಾತ ಮಾಡಿ, ಗುಪ್ತವಾಗಿ ಕಾಸಿಮನನ್ನು ಸೇರಿ ಹೋದುದರಿಂದ, ಪರಿಸ್ಥಿತಿಯೇ ಬದಲಾಯಿಸಿಬಿಟ್ಟಿತು.

ಪ್ರಪ್ರಥಮವಾಗಿ ಹಿಂದುಗಳು ಪರಾಜಯದ ರುಚಿಯನ್ನು ಸವಿಯಬೇಕಾಯಿತು. ಕಾಕಾ ಕೊಟ್ಟ ಸಲಹೆಯ ಮೇರೆಗೆ ಕಾಸಿಮನು ದಾಹಿರನ ಧ್ವಜವನ್ನು ಹಾರಿಸಿಬಿಟ್ಟನು! ಇನ್ನೇನು! ಹಿಂದೂ ಸೈನಿಕರು ಕೂಡಲೇ ಚೆಲ್ಲಾಪಿಲ್ಲಿಯಾಗಿ ಅತ್ತ-ಇತ್ತ ಪಲಾಯನ ಮಾಡತೊಡಗಿದರು. ಏಕೆಂದರೆ, ಅವರಿಗೆ ತಿಳಿಸಿಕೊಟ್ಟ ನಂಬಿಕೆಯ ಮೇರೆಗೆ ಧ್ವಜವು ಕೆಳಗೆ ಬಿದ್ದೊಡನೆಯೇ ಜಯವು ಅಸಂಭವ! ಮತ್ತು ಸೋಲು ನಿಶ್ಚಿತ!!

(ಇವಕ್ಕೆ ಮೊದಲೇ ಕಾಕಾ ರಾಜಾ ದಾಹಿರನಿಗೆ ಏನು ಮನದಟ್ಟು ಮಾಡಿಸಿದ್ದ ನೆಂದರೆ, **ಫಲಿತ ಜ್ಯೋತಿಷ್ಯದ ಭವಿಷ್ಯವಾಣಿಯಂತೆ, ಅವನ ದೇಶವು ಇಸ್ಲಾಮೀ ಶಕ್ತಿಗಳಿಂದ ಪರಾಜಿತವಾಗಬೇಕಾಗುವುದು ನಿಶ್ಚಯವಾದುದರಿಂದ, ವಿದೇಶೀ ಆಕ್ರಮಣ ವನ್ನು ತಡೆಯಲು ಹೋರಾಡುವುದು ವ್ಯರ್ಥ, ಎಂದು**).

ದಾಹಿರನ ಶರೀರದಿಂದ ಅವನ ತಲೆಯನ್ನು ಕತ್ತರಿಸಿ, ಈಟಿಯ ತುದಿಗೆ ಅವನ್ನು ತಗುಲಿಸಿ ಪ್ರದರ್ಶಿಸಲಾಯಿತು. ಅವನ ಸೈನಿಕರೆಲ್ಲಾ ಪಲಾಯನ ಮಾಡಿ ದರು. ಕಾಸಿಮನು ದೇವಾಲಯಗಳನ್ನೆಲ್ಲಾ ಕೆಡಹಿ ಹಾಕಿದನು. ಚಿನ್ನ ಮತ್ತು ಆಭರಣಗಳಿಂದೊಡಗೂಡಿದ ಸಂಪತ್ತೆಲ್ಲವನ್ನೂ ಲೂಟಿ ಮಾಡಿದನು. ಮತ್ತು ಇಸ್ಲಾಮನ್ನು ಅಂಗೀಕರಿಸಲು ಸಿದ್ಧರಾಗದ ಸಾವಿರಾರು ಸ್ತ್ರೀ-ಪುರುಷರ ಕೊಲೆ ಮಾಡಿದನು. ದಾಹಿರನ ಜೊತೆ ವಿದ್ರೋಹ ಮತ್ತು ವಿಶ್ವಾಸಘಾತ ಮಾಡಿದ್ದಕ್ಕೆ ಪುರಸ್ಕಾರರೂಪವಾಗಿ ಕಾಕಾ ಕೂಡ, ಕ್ರೌರ್ಯದಿಂದ ಕೊಲ್ಲಲ್ಪಟ್ಟನು.

ಹಿಂದುಗಳ ಪರಾಜಯಕ್ಕೆ ಯಾವ ರಾಜನೈತಿಕ ದುರ್ಬಲತೆ, ಅಥವಾ ಸೈನಿಕ ಶಕ್ತಿಯ ಕೊರತೆ ಅಥವಾ ಶೌರ್ಯಹೀನತೆ ಕಾರಣವಾಗಿರಲಿಲ್ಲ. ಆದರೆ, ಅವರ ಧಾರ್ಮಿಕ ಮತ್ತು ಮನೋವೈಜ್ಞಾನಿಕ ಅಂಧ-ವಿಶ್ವಾಸಗಳೇ ಪೂರ್ಣತಃ ಕಾರಣವಾಗಿ ದ್ದುವು. ಯಾವ ಜಾತಿಯು ಜಡ ಕಲ್ಲಿನ ಎದುರಿಗೆ ಭಯದಿಂದ ನಡುಗಲಾರಂಭಿಸು ತ್ತದೋ, ಅದು. ಅಡಿಯಿಂದ ಮುಡಿಯ ತನಕ ಶೌರ್ಯದಿಂದ ಯುಕ್ತವಾಗಿದ್ದು, ಮತ್ತು ಒಬ್ಬ ಈಶ್ವರನ ವಿಶ್ವಾಸದ ಮೇಲೆ ಒಟ್ಟು ಗೂಡಿದ ಇನ್ನೊಂದು ಜಾತಿಯ ಎದುರಿಗೆ ಎಷ್ಟು ಕಾಲ ತಾನೇ ಸೆಟೆದು ನಿಂತೀತು!

ಕಾಸಿಮನು ಮುಲ್ತಾನನ್ನು ವಶಪಡಿಸಿಕೊಂಡ ಮೇಲೆ, ಅಲ್ಲಿದ್ದ ಅತ್ಯಂತ ಸಂಪತ್ತಿಶಾಲಿಯಾದ ದೇವಸ್ಥಾನವನ್ನು ಕೆಡಹಿಸಲಿಲ್ಲ. ಅದರ ಬದಲು, ರಾಜನೈತಿಕ ಮತ್ತು ಭೌತಿಕಲಾಭಗಳನ್ನು ಅರ್ಜಿಸುವ ಉದ್ದೇಶ್ಯದಿಂದ, ಆ ದೇವಸ್ಥಾನದ ಐಶ್ವರ್ಯಕ್ಕೂ, ಆಸ್ತಿ-ಪಾಸ್ತಿಗಳಿಗೂ, ಅದಕ್ಕೆ ಸಲ್ಲಿಸುತ್ತಿದ್ದ ಪೂಜಾ—ಕಾಣಿಕೆಗಳಿಗೂ ತಾನೇ ಸ್ವತಃ ಒಡೆಯನಾದನು. ಹಿಂದೂ ರಾಜರು, ಕಾಸಿಮನೊಡನೆ ಹೋರಾಡಿದರೆ, ಅವನು ದೇವಾಲಯವನ್ನು ಕೆಡಹಿ ಬಿಟ್ಟಾನೇನೋ, ಎಂಬ ಭಯದಿಂದ ಪ್ರತಿಭಟನಾ ತ್ಮಕ ಯುದ್ಧ ಮಾಡಲಿಲ್ಲ.

ಅಸೀಮ ಸಂಪತ್ತುಳ್ಳ ದೇವಾಲಯಗಳಿಂದ ಕೂಡಿದ ಕಾರಣದಿಂದ, ಗುಜರಾತ್ ಪ್ರದೇಶವು ಮುಸ್ಲಿಮ್ ಆಕ್ರಮಣಕಾರಿಗಳ ಧಾಳಿಗಳನ್ನು ಬಹಳ ಸಲ ಅನುಭವಿಸ ಬೇಕಾಯಿತು.

ಮುಹಮ್ಮದ್ ಬಿನ್ ಕಾಸಿಮನ ಆಕ್ರಮಣದ 300 ವರ್ಷಗಳಾದ ಮೇಲೆ, **ಗಜನೀ ಮಹಮೂದನು** ಭಾರತವನ್ನು 30 ವರ್ಷಗಳಲ್ಲಿ 17 ಸಲ ಮುತ್ತಿಗೆ ಹಾಕಿ, ಲೂಟಿ ಮಾಡಿದನು. ಅವನು ಭಾರತದ ಪಶ್ಚಿಮೋತ್ತರ ಭಾಗವನ್ನು ಧೂಳು-ಧೂಸರಿತವನ್ನಾಗಿ ಮಾರ್ಪಡಿಸಿದನು. ನಗರಕೋಟದ ದೇವಸ್ಥಾನವನ್ನು ಅವನು ನೆಲಸಮಮಾಡಿ, 700 ಮಣ ಚಿನ್ನದ ಮತ್ತು ಬೆಳ್ಳಿಯ ಪಾತ್ರೆಗಳು, 740 ಮಣ ಚಿನ್ನ, 2000 ಮಣ ಬೆಳ್ಳಿ ಮತ್ತು 20 ಮಣ ವಜ್ರ, ಹಾಗೂ ಮುತ್ತುಗಳಿಂದೊಡ ಗೂಡಿದ ಅಪಾರ ಐಶ್ವರ್ಯವನ್ನು ಲೂಟಿಮಾಡಿದ್ದೇ ಅಲ್ಲದೇ. 2 ಲಕ್ಷ ಹಿಂದುಗಳನ್ನು ಸೆರೆ ಹಿಡಿದು, ಗಜನಿಗೆ ಕೊಂಡೊಯ್ದು, ಅಲ್ಲಿ ಅವರನ್ನು 2 ರೂಪಾಯಿಗೊಬ್ಬರಂತೆ ಗುಲಾಮರನ್ನಾಗಿ ಮಾರಾಟ ಮಾಡಿದನು.

ಮತ್ತೆ, ಐಶ್ವರ್ಯಶಾಲೀ ದೇವಸ್ಥಾನಗಳಿಂದೊಡಗೂಡಿದ ಕಾರಣದಿಂದ, ದಕ್ಷಿಣ ಭಾರತದ ಮದುರೈ ಕೂಡ, ಅವನ ಆಕ್ರಮಣ ಮತ್ತು ಲೂಟಿಗೆ ಒಳಗಾಗ ಬೇಕಾಯಿತು.

**ಉತ್ತರ ಭಾರತದಲ್ಲಿ ನಗರದೊಳಗೆ ದೇವಾಲಯವಿದ್ದರೆ, ದಕ್ಷಿಣ ಭಾರತದ ತಮಿಳುನಾಡಿನಲ್ಲಿ ದೇವಾಲಯದಲ್ಲಿ ನಗರವಿರುತ್ತದೆ !**

ಅನಂತರ, **ಗಜನೀ ಮಹಮೂದನು** ಗುಜರಾತಿನ ಜಗತ್ಪ್ರಸಿದ್ಧ ಸೋಮನಾಥ ದೇವಾಲಯವನ್ನು ಆಕ್ರಮಿಸಿದನು. ಈ ದೇವಾಲಯದ ಕೊಳ್ಳೆ, ಮತ್ತು ಅವನು ಅಲ್ಲಿ ಕೈಗೊಂಡ ವಿನಾಶಕೃತ್ಯಗಳು ಇತಿಹಾಸದಲ್ಲಿ ಕಪ್ಪು ಪುಟಗಳನ್ನೇ ಸೃಜಿಸಿದುವು.

ತದನಂತರ, ಮಾಡಲ್ಪಟ್ಟ ದೇವಾಲಯಗಳ ವಿನಾಶ, ಮತ್ತು ಅವೇ ಸ್ಥಾನ ಗಳಲ್ಲಿ ಕಟ್ಟಿದ ಮಸೀದಿಗಳು, ಮತ್ತು ಹಿಂದುಗಳ 'ಪವಿತ್ರ' ದೇವಾಲಯಗಳ, ಹಾಗೂ 'ಪವಿತ್ರ' ತೀರ್ಥಸ್ಥಾನಗಳಾದ ಕಾಶೀ, ಅಯೋಧ್ಯೆ, ಮಥುರಾ, ಮತ್ತು ಉಜ್ಜಯಿನೀ ಮೊದಲಾದ ಕೇಂದ್ರಗಳಲ್ಲಿ ದೇವಸ್ಥಾನಗಳಿಗೆ ಅಂಟಿಕೊಂಡೇ ಕಟ್ಟಿದ, ಹಾಗೂ ಈ ವರೆಗೂ ವಿದ್ಯಮಾನವಾಗಿರುವ ಮಸೀದಿಗಳು ಮೂರ್ತಿಪೂಜೆಯ ಪರವಾಗಿ ಕೊಡುವ ವಿವಿಧ ದ್ರಾವಿಡೀ ಪ್ರಾಣಾಯಾಮರೂಪದ ಸಮರ್ಥನೆಗಳು. ಸಾಧನೆಗಳು ಎಷ್ಟು ಪೊಳ್ಳು, ಎಂಬುದನ್ನು ಸಿದ್ಧಪಡಿಸಿವೆ!

ನಂತರ, ಸುಮಾರು 150 ವರ್ಷಗಳಾದ ಮೇಲೆ, ಹನ್ನೆರಡನೆಯ ಶತಮಾನ ದಲ್ಲಿ, **ಮುಹಮ್ಮದ್ ಗೋರಿಯು** ಭಾರತದ ಮೇಲೆ ಆಕ್ರಮಣ ಮಾಡಿದನು.

ಪೃಥ್ವೀರಾಜನು ಅವನನ್ನು ಆರು ಸಲ ಹೊಡೆದೋಡಿಸಿದನು. ಆದರೆ, ಏಳನೆಯ ಪ್ರಯತ್ನದಲ್ಲಿ, ಗೋರಿಯು ಭಾರತದಲ್ಲಿ ಮುಸ್ಲಿಂ ಶಾಸನದ ತಳಪಾಯವನ್ನು ಭದ್ರವಾಗಿ ಹಾಕಿ, ಭಾರತೀಯ ರಾಜರ ಮತ್ತು ಭಾರತದ ಭಾಗ್ಯಭವನಕ್ಕೆ ಬೀಗಹಾಕಿದನು.

ಹೀಗೆ, ಭಾರತವು ತಾನು ಸ್ವತಂತ್ರವಾಗಿರಬೇಕಾದ ಇಚ್ಛೆಯನ್ನೂ ಕೂಡ, ಚಿರಕಾಲದ ತನಕ ಕಳೆದುಕೊಂಡು, ಮುಸ್ಲಿಂ ಶಾಸನದ ನಿವಾರಣೆಯನ್ನು, ತಾನು ಮಾಡದೇ, ಐರೋಪ್ಯರ ಮೂಲಕ ಮಾಡಲು ಆಸ್ಪದ ಕೊಟ್ಟು, ಮತ್ತೆ ಸ್ವತಃ ಆಂಗ್ಲರಿಗಧೀನವಾಯಿತು!

[ಸ್ರೋತ: ಪಂಡಿತ **ರಾಜೇಂದ್ರ** ಅವರಿಂದ ರಚಿತವಾದ **"ಭಾರತ ಮೇಂ ಮೂರ್ತಿಪೂಜಾ"**, ಎಂಬ ಗ್ರಂಥದ ಆಧಾರ. (ಪುಟ 118–139). ಪ್ರಕಾಶಕರು: ವೇದ ಮಂದಿರ ಪ್ರಕಾಶನ, ಅತರೌಲೀ, ಅಲೀಗಢ್ (1963)]



## ವೇದದ ಪ್ರಮಾಣ ಎಲ್ಲಿಂದ ಕೊಡಲಿ?

ಒಂದು ಸಲ ಲಕ್ಷ್ಮಣ ಶಾಸ್ತ್ರಿಗಳು ಸ್ವಾಮೀಜೀಯವರ ಬಳಿ ಬಂದು, ಶಾಸ್ತ್ರಾರ್ಥ ಮಾಡತೊಡಗಿದರು. ಶಾಸ್ತ್ರಾರ್ಥದ ವಿಷಯ ಮೂರ್ತಿಪೂಜೆ ಆಗಿತ್ತು. ಸ್ವಾಮೀಜೀಯವರು—"ನಿಮ್ಮ ಪಕ್ಷದ ಪುಷ್ಟಿಗಾಗಿ ವೇದದ ಯಾವುದಾದರೂ ಪ್ರಮಾಣವನ್ನು ಕೊಡಿರಿ", ಎಂದು ಶಾಸ್ತ್ರಿಗಳನ್ನು ಕೇಳಿದರು. ಶಾಸ್ತ್ರೀ ಮಹಾಶಯರು—

"ವೇದದ ಪ್ರಮಾಣ ಎಲ್ಲಿಂದ ಕೊಡಲಿ? ವೇದವನ್ನಂತೂ ಶಂಖಾಸುರನು ಅಪಹರಿಸಿಕೊಂಡು ಹೋಗಿಬಿಟ್ಟಿದ್ದಾನಲ್ಲ!", ಎಂದು ಉತ್ತರ ಕೊಟ್ಟರು.

ಸ್ವಾಮೀಜೀಗಳು ತತ್ಕಾಲ ವೇದವನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡು—"ಪಂಡಿತಜೀ! ನಿಮ್ಮ ಆಲಸ್ಯ ಮತ್ತು ಪ್ರಮಾದರೂಪದ ಶಂಖಾಸುರನ ವಧೆ ಮಾಡಿ, ಈ ವೇದವನ್ನು ನಾನು ಜರ್ಮನಿಯಿಂದ ತರಿಸಿದ್ದೇನೆ. ತೆಗೆದುಕೊಳ್ಳಿ! ಇದರಲ್ಲಿ ಹುಡುಕಿ, ಯಾವುದಾದರೂ ಪ್ರಮಾಣವನ್ನು ತೆಗೆಯಿರಿ", ಎಂದು ಹೇಳಿದರು.

['ಶ್ರೀಮದ್ದಯಾನಂದ ಪ್ರಕಾಶ'—
ಸ್ವಾಮೀ ಸತ್ಯಾನಂದ; ಸಂಗಠನಕಾಂಡ, ಪುಟ 328]

ಪರಿಶಿಷ್ಟ –೫

# ಮೂರ್ತಿಪೂಜೆಯು ವಂಚಕತನದ ಔದ್ಯೋಗಿಕ ಸಾಮ್ರಾಜ್ಯ

ಭಾರತದಲ್ಲಿ ಮೂರ್ತಿಪೂಜೆಯು ತನ್ನ ವಿವಿಧ ರೂಪಗಳನ್ನು ಪ್ರದರ್ಶನ ಮಾಡುತ್ತಿರುವ ಔದ್ಯೋಗಿಕ ಸಾಮ್ರಾಜ್ಯವಾಗಿದೆ. ಈ ಸಾಮ್ರಾಜ್ಯದ ಹಲವು ರೂಪಗಳನ್ನು ''Dayananda, the Great Patriot and Nation Builder'', ಎಂಬ ಗ್ರಂಥದಲ್ಲಿ ಕೊಡಲಾಗಿದೆ. ಅವಿಕಲವಾಗಿ ಅವುಗಳನ್ನು ಕೆಳಗೆ ಉದ್ಧರಿಸಲಾಗಿದೆ—

What is meant by 'Pakhanda'? (or, 'Pashanda')? It is a concised form of 'Pashana khanda' ie., 'Pashana'=stone; and 'khanda'=a piece. A piece of stone! Idol worship originated with the worship of stones ie., stony statues of revered people. When statues became the representatives of gods and goddesses, idolatry became a source of income. This led to the institution of priests.

The priestcraft, with an eye on money and enjoyment, rendered idol worship to be associated with :

idolism, demonism, fire-worship, devil-worship, self immolation, 'suttee' (burning the widow on the funeral pyre of her dead hushand), holocaust, human sacrifice, mactation (slaying of the sacrificial animal), infanticide, hypocrisy, jugglery, trickery, falsehood, deception, fraud, legerdamain (sleight of hand), hocus-pocus, coggery, imposture, chicanery, complicity, guile, quackery, fortune-telling, charlatanry, humbug, bluff, mummery (masquerading), camouflage, ruse, manoeuvre, hoax, canard, fetch, catch swindle, plant, sell, dodge, bite, forgery, counterfeit, sham, delusion, stalking horse (to pursue under cover), snake-charming, necromancy (worship of the dead), snare, trap, net, hook, bait, trap-door, darkness, slipperiness, false-bottom, ambush, mask, mine, mystery, fiddling, sycophancy, nudity, debauchery,

abduction, mesmerism, hypnotism, robbery, murder; and, what not!

All these vile traits, and many more, are available in all the places of pilgrimage in India, and in the Hindu temples.

Swami Dayandnda, based on his eye-witness account, has described more than three dozens of them in the eleventh chapter of his 'Satyartha Prakasha'. Thus, 'Pashanda' = 'Pakhanda' = 'Pashana khanda' = idolatry ie., worshipping of stone pieces resulted in the attribution of the above mentioned vile traits.

**Manusmrti** also quotes these vile traits :

'Pashandino vikarmasthan vaidala vrttikan shathan.

Haitukan bakavrttinshcha vangmatrenapi narchayet'.

(4/80)



## ಈಗ ಔರಂಗಜೇಬನ ರಾಜ್ಯ ನಡೆಯುತ್ತಿಲ್ಲ

ಎಷ್ಟೇ ದೊಡ್ಡ ಮನುಷ್ಯನು ಬೇಕಾದರೆ ಆಗಿರಲೀ, ಅವನು ಯಾವುದಾದರೂ ಒತ್ತಾಯದ ಅಥವಾ ಗದರಿಸುವ ಮಾತನ್ನಾಡಿದರೆ, ಸ್ವಾಮಿಗಳು ತತ್‌ಕ್ಷಣ ತಕ್ಕಂತಹ ಉತ್ತರ ಕೊಟ್ಟು, ಅವನ ಬಾಯಿಯನ್ನು ಮುಚ್ಚುವಂತೆ ಮಾಡುತ್ತಿದ್ದರು. ಒಂದು ದಿನ, ಡೆಪ್ಯುಟೀ ಕಲೆಕ್ಟರ್ ಆದ ಅಲೀಜಾನ್ ಮಹಾಶಯನು ಸ್ವಾಮೀಜೀಯವರು ವ್ಯಾಖ್ಯಾನ ಕೊಡುತ್ತಿದ್ದ ಸ್ಥಾನದ ಕಡೆಗೆ ಬಂದನು. ಅವನು—

"ಪಂಡಿತಜೀ! ನೀವು ವ್ಯಾಖ್ಯಾನ ಕೊಡುವಾಗ ಸ್ವಲ್ಪ ಎಚ್ಚರ ವಹಿಸಿ, ಮಾತನ್ನಾಡಿರಿ", ಎಂದು ಹೇಳಿದನು.

ಸ್ವಾಮೀಜೀಗಳು—"ಭಯದ ಮಾತೇನೂ ಇಲ್ಲ. ಈಗ ಆಂಗ್ಲರ ರಾಜ್ಯ ನಡೆಯುತ್ತಿದೆ; ಔರಂಗಜೇಬನದಲ್ಲ!", ಎಂದು ತತ್ಕಾಲ ಉತ್ತರ ಕೊಟ್ಟರು.

['ಶ್ರೀಮದ್ದಯಾನಂದ ಪ್ರಕಾಶ'—
ಸ್ವಾಮೀ ಸತ್ಯಾನಂದ; ಸಂಗಠನಕಾಂಡ, ಪುಟ 380]

# ಏಷ್ಯಾ ಮತ್ತು ಯೂರೋಪ್ ಖಂಡಗಳಲ್ಲಿ ಮುಸಲ್ಮಾನರಿಂದ ಧಾಳಿ ಮತ್ತು ವಿನಾಶ

ಮೊಹಮ್ಮದ್ ಪೈಗಂಬರರ ಜನನ, ಮತ್ತು ಆ ಮೇಲೆ, ಆದ ಇಸ್ಲಾಮಿನ ಪ್ರಸಾರವು, ನಂತರ 1200 ವರ್ಷಗಳವರೆಗೆ ಏಷ್ಯಾ ಮತ್ತು ಯೂರೋಪ್ ಖಂಡಗಳಲ್ಲಿ ವಿಶಾಲಪ್ರಮಾಣದಲ್ಲಿ ನಡೆಸಿದ ಯುದ್ಧ, ರಕ್ತಪಾತ, ರಾಜ್ಯಾಧಿಕಾರ ಮತ್ತು ವಿಸ್ತೃತ ನಾಶಕ್ಕೆ ಸಂಬಂಧಿಸಿದ ಐತಿಹಾಸಿಕ ಘಟನಾಚಕ್ರವನ್ನು ಕೆಳಗೆ ಕೊಡಲಾಗಿದೆ:—

570 ಮೊಹಮ್ಮದರ ಜನನ.

622 ಹಿಜಿರಿ, ಅಥವಾ **ಮಕ್ಕಾ**ದಿಂದ **ಮದೀನಾ**ಕ್ಕೆ ಮೊಹಮ್ಮದರ ಪಲಾಯನ; ಮುಸಲ್ಮಾನರ ಸಂವತ್ಸರಾರಂಭ.

632 ಮೊಹಮ್ಮದರ ಮರಣ. ಪ್ರಥಮ ಖಲೀಫನಾಗಿ ಅಬೂ ಬಕರನ ರಾಜ್ಯಾರೋಹಣ.

636 ಮುಸಲ್ಮಾನರಿಂದ **ಡಮಾಸ್ಕಸ್**–ಅಧಿಕಾರವಶ.

638 ಮುಸಲ್ಮಾನರಿಂದ **ಜರೂಸಲೇಮ್**-ವಶ.

641 ಮುಸಲ್ಮಾನರಿಂದ **ಈರಾನ್**-ಜಯ.

643 ಮುಸಲ್ಮಾನರಿಂದ **ಅಲೆಕ್ಸಾಂಡ್ರಿಯಾ**–ವಶ.

698 ಮುಸಲ್ಮಾನರಿಂದ **ಕಾರ್ಥೇಜಿನ** ಮೇಲೆ ಆಕ್ರಮಣ.

711 **ಸ್ಪೇನಿ**ನಲ್ಲಿ ಮುಸಲ್ಮಾನರ ಹರಡುವಿಕೆ.

712 **ಸಿಂಧೂದೇಶ**ದ ಮೇಲೆ ಅರಬರ ಪ್ರಥಮ ಆಕ್ರಮಣ.

718 **ಕಾಂಸ್ಟಾಂಟಿನೋಪಲ್** ಮೇಲೆ ಮುಸಲ್ಮಾನರ ಅತಿ ದೊಡ್ಡ ಧಾಳಿಯು ವಿಫಲತೆ.

732 **ಸ್ಪೇನಿ**ನಲ್ಲಿ ಮುಸಲ್ಮಾನರ ವಿಸ್ತಾರವನ್ನು ಚಾರ್ಲ್ಸ್ ಮಾರ್ಟೇಲನು ತಡೆದನು.

750 ಒಮ್ಮಯ್ಯಾಡರನ್ನು ತಳ್ಳಿಹಾಕಿ, ಅಬ್ಬಾ ಸಯೀದ್ ಖಲೀಫನ ರಾಜ್ಯಾರಂಭ.

786 ಬಗದಾದ್‌ನಲ್ಲಿ ಹಾರೂನ್–ಅಲ್-ರಶೀದನ ರಾಜ್ಯಾರೋಹಣ.

827 ಸಿಸಿಲಿಯ ಮೇಲೆ ಮುಸಲ್ಮಾನರ ಆಕ್ರಮಣ.

840 ಮುಸಲ್ಮಾನರಿಂದ **ಬಾರಿಯನ್ನು** ವಶಪಡಿಸಿಕೊಂಡು, **ದಕ್ಷಿಣ ಇಟಲಿಯ** ಮೇಲೆ ಆಕ್ರಮಣ.

912 ಅಬ್ದುರ್ ರಹಮಾನ್ (ತೃತೀಯ)ನ ರಾಜ್ಯಾರೋಹಣ. **ಕಾರ್ಡೋವಾ (ಸ್ಪೇನ್)**ದ ಒಮ್ಮೆಯ್ಯಾಡ್ ಖಲೀಫನ ವೈಭವ ಯುಗ.

998 ಸುಲ್ತಾನ್ ಮಹಮೂದನ ರಾಜ್ಯಾರೋಹಣ.

1001 ಗಜನೀ ಮಹಮೂದನಿಂದ **ಭಾರತ**ದ ಮೇಲೆ ಪ್ರಥಮ ಆಕ್ರಮಣ.

1025 ಗಜನೀ ಮಹಮೂದನಿಂದ **ಸೋಮನಾಥ ದೇವಾಲಯ**ದ ನಾಶ.

1075 ಸೇಲ್ಜುಕ್ ತುರ್ಕರಿಂದ **ಜರೂಸಲೇಮ್**-ವಶ.

1095 ಕ್ಲೇರ್‌ಮಾಂಟ್‌ನ ಸಮಿತಿ. ಪೋಪ್ (ಅರ್ಬನ್) ದ್ವಿತೀಯನು ಪ್ರಥಮ **'ಕ್ರುಸೇಡ್'** (ಧರ್ಮಯುದ್ಧ)ವನ್ನು ಉಪದೇಶಿಸಿದನು.

1099 ಗೋಡ್ ಫ್ರೇ ಬೂಯಿಲನ್‌ನ ನಾಯಕತ್ವದಲ್ಲಿ **ಪ್ರಥಮ ಕ್ರುಸೇಡ್** ಯುದ್ಧ; ಜರೂಸಲೇಮ್-ವಶ.

1144 ಕ್ರೈಸ್ತರ ಶಕ್ತಿಶಾಲಿ ಪಟ್ಟಣವಾದ **ಎಡೆಸ್ಸಾ** ಮುಸಲ್ಮಾನರ ವಶಕ್ಕೆ.

1148 **ದ್ವಿತೀಯ ಕ್ರುಸೇಡ್** ಯುದ್ಧವು **ಡಮಾಸ್ಕಸನ್ನು** ವಶಪಡಿಸಿಕೊಳ್ಳಲು ವಿಫಲವಾಯಿತು.

1189 ಫ್ರೆಡರಿಕ್ ಬಾರ್ಬರೋಸಾ, ಫ್ರಾನ್ಸಿನ ಫಿಲಿಪ್ ಅಗಸ್ಟಸ್ ಮತ್ತು ಇಂಗ್ಲೆಂಡಿನ 'ಸಿಂಹ–ಹೃದಯ' ರಿಚರ್ಡ್‌ರ ನಾಯಕತ್ವದಲ್ಲಿ **ತೃತೀಯ ಕ್ರುಸೇಡ್** ಯುದ್ಧ.

1191 **ಅಕ್ರಾ** ಕ್ರುಸೇಡರ ವಶಕ್ಕೆ. ಭಾರತದಲ್ಲಿ **ತರಾಯೀನ್**‌ನ ಪ್ರಥಮ ಸಂಗ್ರಾಮ.

1192 **ಜರೂಸಲೇಮ**ನ್ನು ವಶಮಾಡಿಕೊಳ್ಳಲಾಗದೇ ತೃತೀಯ ಕ್ರುಸೇಡ್ ಯುದ್ಧದ ಸಮಾಪ್ತಿ. ಭಾರತದಲ್ಲಿ **ತರಾಯೀನ್**‌ನ ದ್ವಿತೀಯ ಸಂಗ್ರಾಮ.

1204 **ಚತುರ್ಥ ಕ್ರುಸೇಡ್** ಯುದ್ಧದಲ್ಲಿ **ಕಾಂಸ್ಟಾಂಟಿನೋಪಲ್**-ವಶ.

1206 ಚಂಗೇಜ್ ಖಾನ್ ಮಂಗೋಲರ ರಾಜನಾಗಿ, ಮಧ್ಯ ಏಷ್ಯಾದಲ್ಲಿ ಧಾಳಿಯಿಟ್ಟನು. ದೆಹಲಿಯಲ್ಲಿ ಕುತುಬ್–ಉದ್-ದೀನನ ಸಿಂಹಾಸನಾರೋಹಣ.

1210 ಕುತುಬ್–ಉದ್-ದೀನನ ಮರಣ.

1212 ಲಾಸ್ ನವಾಸ್ ಡಿ ಟೋಲೋಸಾದ ಯುದ್ಧ. ಮುಸ್ಲಿಂ ಮೂರ್‌ರ ಮೇಲೆ ಸ್ಪೇನಿನವರ ನಿರ್ಣಾಯಕ ವಿಜಯ.

1221 ಚಂಗೇಜ್ ಖಾನ್‌ನ ನೇತೃತ್ವದಲ್ಲಿ ಭಾರತದ ಮೇಲೆ ಮಂಗೋಲರ ಆಕ್ರಮಣ.

1236 ದೆಹಲಿಯ ಸಿಂಹಾಸನದ ಮೇಲೆ ರಜಿಯಾ ಸುಲ್ತಾನಳ ರಾಜ್ಯಾರೋಹಣ.

1237 ಮಂಗೋಲರಿಂದ ರಷ್ಯಾದ ಮೇಲೆ ಆಕ್ರಮಣ.

1240 ರಜಿಯಾ ಸುಲ್ತಾನಳ ಮರಣ.

1241 ಮಧ್ಯ ಯೂರೋಪಿನಲ್ಲಿ ಮಂಗೋಲರ ಮುನ್ನುಗ್ಗುವಿಕೆ.

1260 ಚೀಣದ ಮೇಲೆ ಕುಬಲಾಯೀ ಖಾನನ ಆಡಳಿತ.

1291 ಮುಸಲ್ಮಾನರಿಂದ ಅಕ್ರಾ-ವಶ; ಕ್ರುಸೇಡಿನ ಅಂತ.

1296 ದೆಹಲಿ ಸಿಂಹಾಸನದ ಮೇಲೆ ಅಲ್ಲಾವುದೀನ್ ಖಿಲ್ಜಿಯ ರಾಜ್ಯಾರೋಹಣ.

1316 ಅಲ್ಲಾವುದೀನ್ ಖಿಲ್ಜಿಯ ಮರಣ.

1325 ಮುಹಮ್ಮದ್ ಬಿನ್ ತುಘಲಕನ ರಾಜ್ಯಾರೋಹಣ.

1351 ಫಿರೋಜ್‌ಶಾಹನ ರಾಜ್ಯಾರೋಹಣ.

1363 ಏಷ್ಯಾದ ವಿಜಯಕ್ಕಾಗಿ ತೈಮೂರ ಲಂಗನ ಉದ್ಯಮದ ಆರಂಭ.

1398 ತೈಮೂರನಿಂದ ಉತ್ತರ ಭಾರತದ ಮೇಲೆ ಆಕ್ರಮಣ.

1492 ಸ್ಪೇನಿನವರಿಂದ ಯೂರೋಪಿನಲ್ಲಿ ಮುಸಲ್ಮಾನರ ಅಂತಿಮ ರಾಜ್ಯದ ವಶ.

1494 ಫರಘನಾದಲ್ಲಿ ಬಾಬರನ ರಾಜ್ಯಾರೋಹಣ.

1517 ಈಜಿಪ್ಟ್ ತುರ್ಕಿಗಳ ವಶ.

1520 ತುರ್ಕಿಯ ಸುಲ್ತಾನನಾಗಿ ಸುಲೇಮಾನ್. ತುರ್ಕ್ ಶಕ್ತಿಯ ಉಚ್ಛ್ರಾಯ ಸ್ಥಿತಿ.

*

1526 ಪಾನೀಪತ್ತಿನ ಪ್ರಥಮ ಯುದ್ಧ, ಉತ್ತರ ಭಾರತದಲ್ಲಿ ಮುಗಲ್ ಸಾಮ್ರಾಜ್ಯದ ತಳಹದಿ.

1527 ಖನುಆ ಯುದ್ಧ.

1540 ಕಾನ್ಯಕುಬ್ಜ ಯುದ್ಧ.

1545 ಶೇರ್‌ಶಾಹನ ಮರಣ

1556 ಪಾನೀಪತ್ತಿನ ದ್ವಿತೀಯ ಯುದ್ಧ. ಅಕ್ಬರನಿಂದ ರಾಣಾ ಪ್ರತಾಪನ ಸೋಲು.

1605 ಅಕ್ಬರನ ಮರಣ.

1628 ಮುಗಲ್ ಸಮ್ರಾಟನಾಗಿ ಶಾಹ್‌ಜಹಾನ್.

1634 ಬಂಗಾಳದಲ್ಲಿ ವ್ಯಾಪಾರ ಮಾಡಲು ಆಂಗ್ಲರಿಗೆ ಅನುಮತಿ-ಪ್ರದಾನ.

1649 ಪರ್ಶಿಯನರಿಂದ **ಕಾಂದಹಾರ್** ಪುನಃ ವಶ.

1657 ಶಾಹ್‌ಜಹಾನನ ಪುತ್ರರಿಂದ ರಾಜ್ಯಕ್ಕಾಗಿ ಯುದ್ಧ.

1658 **ಧರ್ಮಟ್** ಯುದ್ಧ.

1659 **ಸಾಮುಗಢ್** ಯುದ್ಧ. ಔರಂಗಜೇಬನ ರಾಜ್ಯಾರೋಹಣ.

1666 ಮುಗಲ್ ಆಸ್ಥಾನದಲ್ಲಿ ಶಿವಾಜೀ; ಅವನ ಬಂಧನ ಮತ್ತು ಪಲಾಯನ.

1675 ಸಿಕ್ಖರ ಒಂಬತ್ತನೆಯ ಗುರು ತೇಗ್ ಬಹಾದೂರನಿಗೆ ಮರಣದಂಡನೆ.

1707 ಔರಂಗಜೇಬನ ಮರಣ.

1739 ಈರಾನಿನ ನಾದಿರ್‌ಶಾಹನಿಂದ ದೆಹಲಿಯ ಲೂಟಿ.

1761 ಪಾನೀಪತ್ತಿನ ತೃತೀಯ ಯುದ್ಧ.

1858 ಸಂಪೂರ್ಣ ಭಾರತ ಆಂಗ್ಲರ ವಶಕ್ಕೆ.

['ಮನೋರಮಾ ಇಯರ್ ಬುಕ್' (1979); ಮತ್ತು 'ಕಾಂಪಿಟಿಶನ್ ಸಕ್ಸೆಸ್ ರಿವ್ಯೂ ಇಯರ್ ಬುಕ್' (1986) ಗಳ ಆಧಾರದ ಮೇಲೆ.]



# 'ಸತ್ಯಾರ್ಥ ಪ್ರಕಾಶ'ದಲ್ಲಿ ಉದ್ಧೃತ ಮತ್ತು ಸ್ಮೃತ ಗ್ರಂಥಾವಳಿ

1. ಅಥರ್ವವೇದ
2. ಅಮರಕೋಶ
3. ಅಲ್ಲೋಪನಿಷತ್
4. ಅಷ್ಟಾಧ್ಯಾಯೀ
5. ಅಷ್ಟಾವಕ್ರಗೀತಾ
6. ಆದಿತ್ಯಪುರಾಣ
7. ಆಪಸ್ತಂಬ ಧರ್ಮಸೂತ್ರ
8. ಆಶ್ವಲಾಯನ ಗೃಹ್ಯಸೂತ್ರ
9. ಆಶ್ವಲಾಯನ ಶ್ರೌತಸೂತ್ರ
10. ಇಂಜೀಲ್ (ಬೈಬಲ್)
11. ಇತಿಹಾಸ ತಿಮಿರನಾಶಕ
12. ಈಶೋಪನಿಷತ್
13. ಉಡ್ಡೀಸತಂತ್ರ
14. ಉಣಾದಿಕೋಶ
15. ಋಗ್ವೇದ
16. ಋಗ್ವೇದಾದಿಭಾಷ್ಯಭೂಮಿಕಾ
17. ಐತರೇಯ ಬ್ರಾಹ್ಮಣ
18. ಐತರೇಯೋಪನಿಷತ್
19. ಕಠೋಪನಿಷತ್
20. ಕಲ್ಪಭಾಷ್ಯ
21. ಕಲ್ಪಸೂತ್ರ
22. ಕಾತಂತ್ರ
23. ಕಾತ್ಯಾಯನ ಪ್ರತಿಜ್ಞಾಪರಿಶಿಷ್ಟ
24. ಕಾಮರತ್ನತಂತ್ರ
25. ಕಾಲಾಗ್ನಿರುದ್ರೋಪನಿಷತ್
26. ಕಾಲೀತಂತ್ರ
27. ಕಿರಾತಾರ್ಜುನೀಯ
28. ಕುರಾನ್
29. ಕುಲಾರ್ಣವತಂತ್ರ
30. ಕುವಲಯಾನಂದ
31. ಕೇನೋಪನಿಷತ್
32. ಕೈವಲ್ಯೋಪನಿಷತ್
33. ಗಣೇಶಪುರಾಣ
34. ಗರುಡಪುರಾಣ
35. ಗಾಂಧರ್ವವೇದ
36. ಗೀತಗೋವಿಂದ
37. ಗುರುಗೀತಾ
38. ಗುರು ಗ್ರಂಥಸಾಹಬ್
39. ಗೋಪಥ ಬ್ರಾಹ್ಮಣ
40. ಗೋಪಾಲತಾಪಿನೀ ಉಪನಿಷತ್
41. ಗೋಪಾಲಸಹಸ್ರನಾಮ
42. ಗೌಡಪಾದೀಯಕಾರಿಕಾ
43. ಗ್ರಹಲಾಘವ
44. ಚರಕ (ಆಯುರ್ವೇದ)
45. ಚಾಣಕ್ಯನೀತಿ
46. ಛಾಂದೋಗ್ಯೋಪನಿಷತ್
47. ಜನ್ಮಸಾಖೀ
48. ಜಾಗದೀಶೀ (ನ್ಯಾಯ)
49. ಜಾಬಾಲೋಪನಿಷತ್
50. ಜಿನದತ್ತಸೂರಿಕೃತಶ್ಲೋಕ
51. ಜ್ಞಾನಸಂಕಲಿನೀತಂತ್ರ

52. ಜ್ಯೋತಿಷ (ವೇದಾಂಗ)
53. ತರ್ಕಸಂಗ್ರಹ
54. ತತ್ವವಿವೇಕ (ಜೈನಗ್ರಂಥ)
55. ತೈತ್ತಿರೀಯಾರಣ್ಯಕ
56. ತೈತ್ತಿರೀಯೋಪನಿಷತ್
57. ತೌರೇತ್ (ಬೈಬಲ್)
58. ದಿವ್ಯಸೂರಿಚರಿತ
59. ದೇವೀ ಭಾಗವತ
60. ಧರ್ಮಸಿಂಧು
61. ಧಾತುಪಾಠ (ಪಾಣಿನೀಯ)
62. ನಾನಕ ಚಂದ್ರೋದಯ
63. ನಾಮಪ್ರತಾಪ
64. ನಾರದಪರಿವ್ರಾಜಕೋಪನಿಷತ್
65. ನಾರದ ಸಂಹಿತಾ
66. ನಾಯಿಕಾಭೇದ
67. ನಿಘಂಟು
68. ನಿರುಕ್ತ
69. ನಿರ್ಣಯಸಿಂಧು
70. ನೀತಿಶತಕ (ಭರ್ತೃಹರಿ)
71. ನೃಸಿಂಹತಾಪಿನೀ ಉಪನಿಷತ್
72. ನ್ಯಾಯದರ್ಶನ
73. ಪಂಚತಂತ್ರ
74. ಪಂಚದಶೀ
75. ಪದ್ಮ ಪುರಾಣ
76. ಪಾಂಡವಗೀತಾ
77. ಪಾಣಿನೀಯ ಶಿಕ್ಷಾ
78. ಪಾರಸ್ಕರ ಪರಿಶಿಷ್ಟ
79. ಪಾರಾಶರಸ್ಮೃತಿ
80. ಪಾರಾಶರೀ
81. ಪಿಂಗಲ ಛಂದೋಗ್ರಂಥ
82. ಪುಷ್ಪಾಂಜಲೀ (ಸಂನ್ಯಾಸಿಗಳದ್ದು)
83. ಪೂರ್ವಮೀಮಾಂಸಾ
84. ಪೋಪಪುರಾಣ
85. ಪ್ರಕರಣ ರತ್ನಾಕರ
86. ಪ್ರಪನ್ನಾಮೃತ
87. ಪ್ರಶ್ನೋಪನಿಷತ್
88. ಬೃಹದಾರಣ್ಯಕೋಪನಿಷತ್
89. ಬ್ರಹ್ಮ ಪುರಾಣ
90. ಬ್ರಹ್ಮವೈವರ್ತ ಪುರಾಣ
91. ಭಕ್ತಮಾಲ
92. ಭಗವದ್ಗೀತಾ
93. ಭವಿಷ್ಯಪುರಾಣ
94. ಭಾಗವತ ಪುರಾಣ
95. ಭೋಜಪ್ರಬಂಧ
96. ಮನುಸ್ಮೃತಿ
97. ಮನೋರಮಾ (ವ್ಯಾಕರಣ)
98. ಮಹಾಭಾರತ
99. ಮಹಾಭಾಷ್ಯ (ವ್ಯಾಕರಣ)
100. ಮಾಂಡೂಕ್ಯೋಪನಿಷತ್
101. ಮಾರ್ಕಂಡೇಯ ಪುರಾಣ
102. ಮೀಮಾಂಸಾ ನ್ಯಾಯಪ್ರಕಾಶ
103. ಮುಂಡಕೋಪನಿಷತ್
104. ಮುಗ್ಧಬೋಧ (ವ್ಯಾಕರಣ)
105. ಮುಹೂರ್ತ ಚಿಂತಾಮಣಿ
106. ಮೈತ್ರ್ಯಾಯಣ್ಯುಪನಿಷತ್
107. ಮೋಹನಚಂದ್ರಿಕಾ (ಪಾಕ್ಷಿಕಪತ್ರ)
108. ಯಜುರ್ವೇದ
109. ಯೋಗದರ್ಶನ (ವ್ಯಾಸಭಾಷ್ಯ)
110. ಯೋಗವಾಸಿಷ್ಠ
111. ರಘುವಂಶ
112. ರತ್ನಸಾರಭಾಗ
113. ರಾಮತಾಪಿನೀ ಉಪನಿಷತ್
114. ರಾಮದಾಸಸಾಖೀ
115. ರಾಮಸನೇಹೀ ಧರ್ಮಪ್ರಕಾಶ

116. ರಾಮಾನುಜಪಟಲಪದ್ಧತಿ
117. ರುಕ್ಮಿಣೀಮಂಗಲ
118. ರಾಮಾಯಣ (ವಾಲ್ಮೀಕೀಯ)
119. ರುದ್ರಯಾಮಲತಂತ್ರ
120. ವಾಯುಪುರಾಣ
121. ವಿದುರನೀತಿ
122. ವಿವೇಕವಿಲಾಸ
123. ವಿವೇಕಸಾರ
124. ವಿಷ್ಣುಪುರಾಣ
125. ವೃತ್ತರತ್ನಾಕರ
126. ವೃತ್ತಿಪ್ರಭಾಕರ
127. ವೃದ್ಧಚಾಣಕ್ಯ
128. ವೇದಾಂತದರ್ಶನ
129. ವೈರಾಗ್ಯಶತಕ (ಭರ್ತೃಹರಿ)
130. ವೈಶೇಷಿಕದರ್ಶನ
131. ಶತಪಥ ಬ್ರಾಹ್ಮಣ
132. ಶಾಂಖಾಯನ ಶ್ರೌತಸೂತ್ರ
133. ಶಾರೀರಕಸೂತ್ರ
134. ಶಾರ್ಙ್ಗಧರಸಂಹಿತಾ
135. ಶಿವಪುರಾಣ
136. ಶೀಘ್ರಬೋಧ
137. ಶುಕ್ರನೀತಿ
138. ಶೇಖರ (ವ್ಯಾಕರಣ)
139. ಶ್ರಾದ್ಧದಿನಕೃತ್ಯ
140. ಶ್ವೇತಾಶ್ವತರೋಪನಿಷತ್
141. ಷಡ್ವಿಂಶಬ್ರಾಹ್ಮಣ
142. ಸಂಕ್ಷೇಪಶಾರೀರಕ
143. 'ಸಂಜೀವನೀ' (ಭೋಜಕೃತ)
144. ಸಂಸ್ಕಾರವಿಧಿ
145. ಸರ್ವದರ್ಶನ ಸಂಗ್ರಹ
146. ಸಾಂಖ್ಯತತ್ತ್ವಕೌಮುದೀ
147. ಸಾಂಖ್ಯದರ್ಶನ
148. ಸಾಮವೇದ
149. ಸಾರಸ್ವತಚಂದ್ರಿಕಾ
150. ಸಿದ್ಧಾಂತರಹಸ್ಯ
151. ಸುಖಮನೀ ಅಷ್ಟಪದೀ
152. ಸುಮರಣ ಕೋ ಅಂಗ
153. ಸುಶ್ರುತ (ಆಯುರ್ವೇದ)
154. ಸೂರ್ಯಪುರಾಣ
155. ಸೂರ್ಯಸಿದ್ಧಾಂತ
156. ಸ್ವರೋಪನಿಷತ್
157. ಹಠಪ್ರದೀಪಿಕಾ
158. ಹರಿಶ್ಚಂದ್ರಚಂದ್ರಿಕಾ (ಪಾಕ್ಷಿಕಪತ್ರ)
159. ಹರಿವಂಶ
160. ಹಿಮಾದ್ರಿ
161. 'Bible in India' (by Jacoliot)*



*ಇಷ್ಟೇ ಅಲ್ಲದೇ ಮತ್ತೆಷ್ಟೋ ಗ್ರಂಥಗಳ ವಾಕ್ಯಗಳೂ, ಶ್ಲೋಕಗಳೂ ಗ್ರಂಥಕರ್ತರಿಂದ ಉದ್ಧರಿಸಲ್ಪಟ್ಟಿವೆ. ಆದರೆ, ಅವುಗಳ ಸಂದರ್ಭಗ್ರಂಥಗಳೂ, ಅಜ್ಞಾತಗ್ರಂಥಗಳ ಹೆಸರುಗಳೂ ಈವರೆಗೂ ದೊರೆತಿಲ್ಲ.—ಸಂ,

# ಭಾರತದ ಪೂರ್ಣ ಹಿತ, ಮತ್ತು ಉನ್ನತಿ ಯಾವಾಗ?

ಒಂದು ದಿನ ಮೋಹನಲಾಲ ವಿಷ್ಣುಲಾಲ ಪಂಡ್ಯಾ ಅವರು—

"ಭಗವನ್! ಭಾರತದ ಪೂರ್ಣ ಹಿತ ಯಾವಾಗ ಆಗುವುದು? ಮತ್ತು ಇಲ್ಲಿ ಜನಾಂಗದ ಉನ್ನತಿ ಆಗುವುದು ಯಾವಾಗ?", ಎಂದು ನಿವೇದನ ಮಾಡಿದರು.

ಸ್ವಾಮೀಜೀ—ಒಂದು ಧರ್ಮ, ಒಂದು ಭಾಷೆ, ಮತ್ತು ಒಂದು ಲಕ್ಷ್ಯ ಇಡದೇ, ಭಾರತದ ಪೂರ್ಣ ಹಿತ ಮತ್ತು ಜನಾಂಗದ ಉನ್ನತಿಯಾಗುವುದು ದುಷ್ಕರವಾದ ಕಾರ್ಯ!

ಪಂಡ್ಯಾಜೀ—ತಮ್ಮ ಉದ್ದೇಶ್ಯ ಮತ್ತು ಆದರ್ಶವು ಏಕತಾಸಂಪಾದನೆಯಾಗಿರುವಾಗ, ತಾವು ಮತ-ಮತಾಂತರಗಳ ಕಠೋರ ಖಂಡನವನ್ನೇಕೆ ಮಾಡುತ್ತೀರಿ? ಇದರಿಂದಂತೂ, ಬದಲಾಗಿ, ವೈರ-ವಿರೋಧ-ವೈಮನಸ್ಯ ಹೆಚ್ಚುತ್ತವಲ್ಲ!

ಸ್ವಾಮೀಜೀ—ನನ್ನ ಧಾರ್ಮಿಕ ಲಕ್ಷ್ಯವು ಸಾರ್ವಜನಿಕವಾಗಿದೆ. ಅದನ್ನು ಸಂಕುಚಿತವಾಗಿ ಮಾಡಲಾಗುವುದಿಲ್ಲ. ಎರಡನೆಯದಾಗಿ, ಭಾರತವಾಸಿಗಳು ಗಾಢ ನಿದ್ರೆಯಲ್ಲಿ ಎಷ್ಟು ಮಗ್ನರಾಗಿದ್ದಾರೆಂದರೆ, ಸಿಹಿ ಮಾತುಗಳಿಂದ, ಕಣ್ಣು ತೆರೆಯುವುದಕ್ಕೇ ತಯಾರಿಲ್ಲ! ಕುರೀತಿ-ಕುನೀತಿಗಳ ಖಂಡನರೂಪವಾದ ಚಾಟಿ ಏಟಿನಂತಹ ಧ್ವನಿಯಿಂದ ಕೂಡ, ಇವರು ಎಚ್ಚೆತ್ತುಕೊಂಡರೆ, ಈಶ್ವರನಿಗೆ ಕೋಟಿ-ಕೋಟಿ ಧನ್ಯವಾದಗಳು!

ದೇಶದಲ್ಲಿ ಯಾವಾಗಲೂ ಜನರೇನೋ ಒಂದೇ ತರಹದವರಾಗಿ ಇರುತ್ತಾರೆ. ಆದರೆ, ಧಾರ್ಮಿಕ, ಸಾಮಾಜಿಕ ನೇತಾರರ ಆಲಸ್ಯ, ಪ್ರಮಾದಗಳಿಂದ ಜನಾಂಗದ ಭಾವನೆ, ಭಾಷೆ, ಆಚಾರ-ವಿಚಾರಗಳು ಪರಿವರ್ತಿತವಾಗಿಬಿಡುತ್ತವೆ. ಜೀವನದ ರೀತಿ-ನೀತಿಗಳಲ್ಲಿ ಭೇದ ಉಂಟಾಗಿಬಿಡುತ್ತದೆ. ಈ ಕಾರಣಗಳಿಂದ, ಹಿಂದೆ, ಕೋಟ್ಯಂತರ ಭಾರತೀಯರು ಮುಸಲ್ಮಾನರಾಗಿಬಿಟ್ಟರು! ಈಗ, ಪ್ರತಿದಿನವೂ ನೂರಾರು ಮಂದಿ ಕ್ರೈಸ್ತರಾಗುತ್ತಿದ್ದಾರೆ! ಇಂತಹ ಸಮಯದಲ್ಲಿ ಜನರ ಜುಟ್ಟನ್ನು ಹಿಡಿದು, ಜಗ್ಗಾಡಿ, ಎಚ್ಚರಿಸಲೂ ಬೇಕಾಗಿದೆ!

ಈ ಕಹಿ ಕರ್ತವ್ಯವನ್ನು ನಾನು ನನ್ನ ಸ್ವಾರ್ಥಸಿದ್ಧಿಗಾಗಿಯಂತೂ ಮಾಡುತ್ತಿಲ್ಲ. ನನಗಂತೂ, ಇದರ ಕಾರಣದಿಂದ, ಅಪಮಾನ, ನಿಂದೆ, ಕುವಚನ, ಇಟ್ಟಿಗೆ, ಕಲ್ಲು ಮತ್ತು ವಿಷ ಸ್ಥಾನ-ಸ್ಥಾನದಲ್ಲಿ ಸಿಗುತ್ತಿವೆ. ಆದರೆ, ಬಂಧುವಾತ್ಸಲ್ಯದ ಭಾವನೆಯು ನನ್ನನ್ನು ಸಮಾಜ ಸುಧಾರಣೆಗಾಗಿ ಪ್ರೋತ್ಸಾಹಿಸುತ್ತಿದೆ".

['ಶ್ರೀಮದ್ದಯಾನಂದಪ್ರಕಾಶ'—ಸ್ವಾಮೀ ಸತ್ಯಾನಂದ, ರಾಜಸ್ಥಾನ ಕಾಂಡ; ಪುಟ 410]

# ಸತ್ಯಾರ್ಥಪ್ರಕಾಶ

## (ಉತ್ತರಾರ್ಧ)

## ಶುದ್ಧಾಶುದ್ಧ ಪತ್ರ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 575 | ಮೇಲೆ | ಸದುುಲ್ಲಾಸ | ಸಮುಲ್ಲಾಸ |
| 576 | 9 | ಅಂಗೀಕರಿಸಿರಿ. | ಅಂಗೀಕರಿಸಿರಿ." |
| 578 | 12 | ಯಾವಳಾದವರೂ, | ಯಾವಳಾದರೂ, |
| 598 | 3 | ಮತ್ತುಮಹ | ಮತ್ತು ಮಹ |
| 607 | 23 | ವೇದಾಂತ–[4.4.9] | [ವೇದಾಂತ-4.4.9] |
| 619 | 4 | ಇಂದಿದವರೆಗೆ | ಇಂದಿನವರೆಗೆ |
| 620 | 17 | ಚಮತ್ಕಾರ) | ಚಮತ್ಕಾರ (?) |
| 621 | 22 | ಬಿಟ್ಟನು! | ಬಿಟ್ಟರು! |
| 630 | 18 | ದಿವಸ್ಪದೇ ॥ | ದಿವಸ್ಪದೇ ॥ 2 ॥ |
| 633 | 6 | ವಿರುದ್ದವಾಗಿ | ವಿರುದ್ಧವಾಗಿ |
| 636 | 24 | ಕೊಲಾಹಲ | ಕೋಲಾಹಲ |
| 638 | 3 | ಧೂರ್ತನೊದಿಂಗೆ | ಧೂರ್ತನೊಂದಿಗೆ |
| 640 | 25 | ಆವತಾರಗಳನ್ನು | ಅವತಾರಗಳನ್ನು |
| 642 | 12 | ಮೊದಲಾದವನ್ನು | ಮೊದಲಾದುವನ್ನು |
| 649 | 13 | ಮಾಡುಲಾಗಿದೆ. | ಮಾಡಲಾಗಿದೆ. |
| 650 | 14 | ಶಕ್ತವಾಗುವನು. | ಶಕ್ತನಾಗುವನು. |
| 650 | 26 | ಹೇಗಿದೆಯೆಂದರೆ | ಹೇಗಿವೆಯೆಂದರೆ |
| 652 | 16 | ಪರಮೇಶ್ವರನ್ನು | ಪರಮೇಶ್ವರನನ್ನು |
| 664 | 19 | ಸುಳುಮಾತೇ | ಸುಳ್ಳು ಮಾತೇ |
| 673 | 18 | ಅದರಲ್ಲಿ | ಅಧರದಲ್ಲಿ |
| 678 | 6 | ಜ್ವಾಲಾಮುಖಿಯು, | ಜ್ವಾಲಾಮುಖಿಯು |
| 679 | 10 | ಹೊಗುತ್ತವೆ! | ಹೋಗುತ್ತವೆ! |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 703 | 27 | ಬುರ್ಝುಕಡ್ | ಬುರ್ಝುಕ್ಕಡ್ |
| 710 | 1 | ಹಿರಣ್ಯಕಶಿಪುವಿನ | ಹಿರಣ್ಯಾಕ್ಷನ |
| 737 | 3 | ಪಾತ್ರರಾಗಿರುತ್ತಾರೆ. | ರಾಗಿರುತ್ತಾರೆ. |
| 737 | 26 | ವಾಗ್ಧೋರಣೆಯನು | ವಾಗ್ಧೋರಣೆಯನ್ನು |
| 748 | 26 | ಕಲಿತ | ಕಲ್ಪಿತ |
| 754 | 5 | ಚಂದಾಪುರ್ | ಚಾಂದಾಪುರ್ |
| 759 | 4 | ಅದೇರೀತಿ | ಅದೇ ರೀತಿ |
| 762 | 4 | ಚಂದ | ಚಂದ್ರ |
| 785 | 21 | ಕೋಳ್ಳುತ್ತಾರೆ | ಕೊಳ್ಳುತ್ತಾರೆ |
| 798 | 19 | ಪೀಡಿತನಾಗ | ಪೀಡಿತರಾಗ |
| 811 | 22 | ದಿವಾನರು | ದಿವಾನರು— |
| 825 | 25 | ಪ್ರಶ್ನೆ | (5) ಪ್ರಶ್ನೆ |
| 832 | 28 | Wiliams | Williams |
| 853 | 27 | ಆರ್ಯಾ | ಆರ್ಯ |
| 885 | 4 | ಬಡಾಪಾಯಿ | ಬಡಪಾಯಿ |
| 886 | 11 | ನಷ್ಟಭ್ರಷ್ಟನಾಗುವ | ನಷ್ಟಭ್ರಷ್ಟರಾಗುವ |
| 917 | ಮೇಲೆ | ಬೌದ | ಬೌದ್ಧ |
| 919 | 2 | ಸಮಯುವಾಯ | ಸಮವಾಯ |
| 939 | 9 | ಹೋತ್ತದೋ. | ಹೋಗುತ್ತದೋ. |
| 946 | 21 | ಮತಾಹುಃ | ಮತ್ರಾಹುಃ |
| 955 | 1 | ಅನ್ಯರಲಿಲ್ಲ | ಅನ್ಯರಲ್ಲಿಲ್ಲ |
| 956 | 8 | ಪರಮ | ಪರಮತ |
| 957 | 8 | ಮತ್ತುೃ | ಮತ್ತು |
| | 22 | ದೃಷ್ಟಿಯಕ್ತ | ದೃಷ್ಟಿಯುಕ್ತ |
| 970 | 3 | ಸ್ನನಿಪಾತ | ಸನ್ನಿಪಾತ |
| 976 | 11 | † | ‡ |
| 98 | 19 | ಗಳಾಗಿಯೋ, | ಗಳಾಗಿವೆಯೋ, |
| 990 | 2 | ವಿವೇಕಾಸಾರ | ವಿವೇಕಸಾರ |
| 994 | 18 | ಕೈಮೇಲೆ | ಕೈಯ ಮೇಲೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 998 | 5 | ಜೀವದ | ಜೀವರ |
| 1023 | 21 | 1.2 | 1-2 |
| 1036 | 9 | ಈಶ್ವರು ನ | ಈಶ್ವರನು |
| 1038 | 17 | ಆದಮನ ಯಾವಾಗ | ಯಾವಾಗ ಆದಮನ |
| 1051 | 6 | ಹೆದರುತ್ತಿಯೇ | ಹೆದರುತ್ತೀಯೆ |
| 1060 | 19 | ಸಂಹರಿಬಿಟ್ಟನು | ಸಂಹರಿಸಿಬಿಟ್ಟನು |
| 1060 | 22 | ಕೊಳ್ಳರಿ | ಕೊಳ್ಳಿರಿ |
| 1061 | 4 | ಇಜಿಪ್ತದೇಶೀಯನನ್ನು | ಇಜಿಪ್ತದೇಶೀಯನು |
| 1068 | 6 | ಆಶಿರ್ವಾದ | ಆಶೀರ್ವಾದ |
| 1074 | 1 | ಕ್ರೈಸ್ತ ಜನರೇ | ಕ್ರೈಸ್ತ ಜನರೇ! |
| 1084 | 3 | ಏಕೆಂರೆದ, | ಏಕೆಂದರೆ, |
| 1084 | 12 | ಪರಮೇಶ್ಚರನೂ | ಪರಮೇಶ್ವರನೂ |
| 1097 | 7 | ಶಿಪರ | ಶಿಷ್ಯರ |
| | 8 | ನಿಪ್ಟಾಪ | ನಿಷ್ಪಾಪ |
| 1098 | 8 | ಆಭಿಮಾನ | ಅಭಿಮಾನ |
| 1102 | 21 | 18 9 | 18-9 |
| 1104 | 5 | ಮುಂಬೆಳಗು | ಮುಂಬೆಳಗಿನಲ್ಲಿ |
| 1114 | 1 | ಶಿಲಬೆಯ | ಶಿಲುಬೆಯ |
| 1119 | 28 | ಆಯುತ್ತು | ಆಯಿತ್ತು |
| 1124 | 23 | ವಧಿಸಲ್ಪಟುದೋ, | ವಧಿಸಲ್ಪಟ್ಟುದೋ, |
| 1136 | 6 | ಬಾಯನ್ನು | ಬಾಯಿಯನ್ನು |
| 1167 | 1 | ಆನ್ಯಾಯ | ಅನ್ಯಾಯ |
| 1185 | 2 | ಯಾವನೂ | ಯಾವನೋ |
| | | ನಂಬಿಕೆಯನ್ನಿಡಲಿಲ್ಲ. | ನಂಬಿಕೆಯನ್ನಿಟ್ಟನು. |
| 1185 | 23 | ಕೊಳುವುದಿಲ್ಲ | ಕೊಳ್ಳುವುದಿಲ್ಲ |
| 1190 | 2 | ಮಿತ್ರನನ್ನಾಗಿ | ಮಿತ್ರರನ್ನಾಗಿ |
| 1200 | 2 | ಅವರ | ಅವನ |
| 1200 | 18 | ಅವನ | ಅವನು |
| 1211 | 16 | ಇಂತಹ | ಇಂತಹ, |
| | | ಅನ್ಯಾಯದೊಂದಿಗೆ | ಅನ್ಯಾಯದಿಂದ, |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1229 | 8 | ವಿಚಾರಧೀನ | ವಿಚಾರಾಧೀನ |
| 1230 | 2 | ಸಾಕ್ಷಿಗಳನಾಗಿ | ಸಾಕ್ಷಿಗಳನ್ನಾಗಿ |
| 1231 | 24 | [ಹುಡುಗರನ್ನು] | (ಸೂಚನೆ:–ತೆಗೆದು ಹಾಕಿ.) |
| 1237 | 1 | ದುರ್ಗಂಧ | ದುರ್ಗಂಧ |
| 1238 | 18 | (ಕುರಾನ್ | (ಕುರಾನ್ |
| | | ಶಾಂತಿಭಂಗ...ತ್ತದೆ) | (ಕಾಫಿರರೊಂದಿಗೆ....ಕ್ಷಮೆ) |
| 1239 | 5 | (ಕಾಫಿರರೊಂದಿಗೆ...ಕ್ಷಮೆ) | ಶಾಂತಿಭಂಗ...ತ್ತದೆ.) |
| 1259 | 27 | ಇಷ್ಟೆ ಅಲ್ಲದೇ | ಇಷ್ಟೇ ಅಲ್ಲದೇ |
| 1261 | 14 | ಪ್ರಸನ್ನಗಾಗಿ | ಪ್ರಸನ್ನನಾಗಿ |
| 1261 | 24 | ಅವಶ್ಯಕತೆಯಿಲ್ಲ | ಆವಶ್ಯಕತೆಯಿಲ್ಲ |
| 1279 | 14 | ತಲಪುವುವು | ತಲುಪುವುವು |
| 1284 | 23 | ಅಣೆಯಿದೆ | ಆಣೆಯಿದೆ |
| 1296 | 6 | ಪುರಷರ | ಪುರುಷರ |
| 1303 | 20 | ಅರ್ಯಾವರ್ತ | ಆರ್ಯಾವರ್ತ |
| 1305 | 14 | ಅಸ್ಯತ್ಯದ | ಅಸತ್ಯದ |
| 1307 | 3 | ವ್ಯಾಪ್ಯನು | ವ್ಯಾಪ್ಯರು |
| 1316 | 27 | ಪಾಪ್ತಿಗಳಗೂ | ಪಾಪ್ತಿಗಳಿಗೂ |
| 1320 | 6 | Dayandnda | Dayananda |
| 1320 | 16 | ಔರಂಗಜೀಬನ | ಔರಂಗಜೇಬನ |

## ಒಂದೇ ವಿವಾಹ ಸಾಕು!

ನಜಫ್ ಅಲೀ ತಹಸೀಲ್‌ದಾರ—ಅನೇಕ ಸ್ತ್ರೀಯರೊಂದಿಗೆ ವಿವಾಹ ಮಾಡಿಕೊಳ್ಳಬೇಕೆಂದು ನಮ್ಮ ಪೈಗಂಬರ ಸಾಹೇಬರ ಆಜ್ಞೆ ಇದೆ.

ಸ್ವಾಮೀಜೀ—ಒಬ್ಬ ಪುರುಷನಿಗೆ ಒಬ್ಬ ಸ್ತ್ರೀಯೇ ಸಾಕು. ಇದು ಅನುಭವದಿಂದಲೂ, ಯುಕ್ತಿಯಿಂದಲೂ, ಶಾಸ್ತ್ರಪ್ರಮಾಣದಿಂದಲೂ ಸಿದ್ಧವಾಗಿದೆ. ಒಬ್ಬ ವೇಶ್ಯೆಯು ಬಹುಮಂದಿ ಪುರುಷರನ್ನು ಹಾಳು ಮಾಡಿಬಿಡುತ್ತಾಳೆ. ಒಂದು ಕುಟುಂಬದಲ್ಲಿ ಅನೇಕ ಪತ್ನಿಯರಿದ್ದರೆ, ಅವರಿಗೆ ಒಬ್ಬ ಗಂಡನು ಸಾಕಾಗುವುದಿಲ್ಲ. ಆದ್ದರಿಂದ, ವೇದಗಳ ಆಜ್ಞೆಯಂತೆ, ಒಂದೇ ವಿವಾಹವಾಗಬೇಕು!

['ಮಹರ್ಷಿ ದಯಾನಂದ ಸರಸ್ವತೀ ಕಾ ಜೀವನ ಚರಿತ್ರ'
—ಪಂ. ಲೇಖರಾಮ್ ; ಪುಟ 650]

# ಭರತವಾಕ್ಯ

ಓದು–ಬರಹ ಬಲ್ಲ ವಿದ್ವಾಂಸರು ನಿಜವಾದ ಧರ್ಮದ ಉಪದೇಶ ಮಾಡುವುದರ ಕಡೆ ವಿಶೇಷ ಗಮನ ಕೊಡಬೇಕು. ಗ್ರಾಮ–ಗ್ರಾಮಗಳಲ್ಲಿ ಆರ್ಯ ಸಮಾಜದ ಸ್ಥಾಪನೆ ಮಾಡಿ, ಮೂರ್ತಿ ಪೂಜೆ ಮೊದಲಾದ ದುರಾಚಾರಗಳನ್ನು ದೂರ ಮಾಡಿ, ಬ್ರಹ್ಮಚರ್ಯದಿಂದ ತಪಸ್ಸಿನ ಸಾಮರ್ಥ್ಯ ವನ್ನು ಹೆಚ್ಚಿಸಿಕೊಂಡು, ಎಲ್ಲ ವರ್ಣ ಮತ್ತು ಆಶ್ರಮಗಳ ಜನರು ಶಾರೀರಿಕ ಮತ್ತು ಆತ್ಮಿಕ ಬಲಗಳನ್ನು ವರ್ಧಿಸಿಕೊಳ್ಳಬೇಕು. ಆಗ ಸುಲಭ ವಾಗಿ, ಶೀಘ್ರತೆಯಿಂದ ಜನರ ಕಣ್ಣು ತೆರೆಯಲ್ಪಡು ವುದು. ಮತ್ತು ದುರ್ದಶೆ ದೂರವಾಗಿ ಸುದಶೆಯು ಪ್ರಾಪ್ತವಾಗುವುದು.

[13ನೆಯ ಪ್ರವಚನ, ದಿ. 2–8–1875]

ಆರ್ಯಧರ್ಮದ ಉನ್ನತಿಗಾಗಿ ನನ್ನಂತಹ ಬಹಳ ಉಪದೇಶಕರು ನಿಮ್ಮ ದೇಶದಲ್ಲಿ ಆಗ ಬೇಕು. ಇಂತಹ ಕೆಲಸವನ್ನು ಏಕಾಕಿಯಾದ ಮನುಷ್ಯನು ಚೆನ್ನಾದ ರೀತಿಯಲ್ಲಿ ಮಾಡಲಾರನು. ಆದರೂ ಕೂಡ, ಯಾವ ದೀಕ್ಷೆಯನ್ನು ತೆಗೆದು ಕೊಂಡಿದ್ದೇನೋ, ಅದನ್ನು ನನ್ನ ಬುದ್ಧಿ ಮತ್ತು ಶಕ್ತಿಗನುಸಾರವಾಗಿ ನಡೆಯಿಸುತ್ತೇನೆ, ಎಂಬ ದೃಢ ನಿಶ್ಚಯವನ್ನು ಮಾಡಿಕೊಂಡಿದ್ದೇನೆ.

ಈಗ, ಕೊನೆಯಲ್ಲಿ ಈಶ್ವರನಲ್ಲಿ ಪ್ರಾರ್ಥನೆಯೇ ನೆಂದರೆ—ಸರ್ವತ್ರ ಆರ್ಯ ಸಮಾಜಗಳು ಸ್ಥಾಪಿಸ ಲ್ಪಟ್ಟು, ಮೂರ್ತಿಪೂಜೆ ಮೊದಲಾದ ದುರಾಚಾರ ಗಳು ದೂರವಾಗಲಿ! ವೇದಶಾಸ್ತ್ರಗಳ ನಿಜವಾದ ಅರ್ಥಗಳು ಎಲ್ಲರ ತಿಳಿವಳಿಕೆಗೆ ಬರಲಿ! ಮತ್ತು ಅವುಗಳಿಗನುಸಾರವಾಗಿಯೇ, ಜನರ ಆಚರಣೆ ಗಳಾಗಿ, ದೇಶದ ಉನ್ನತಿಯಾಗಲಿ! ತಾವೆಲ್ಲ ಸಜ್ಜನರ ಸಹಾಯದಿಂದ ನನ್ನ ಈ ಇಚ್ಛೆ ಪೂರ್ಣವಾಗುವುದು, ಎಂದು ನನಗೆ ಪೂರ್ತಿ ಅಪೇಕ್ಷೆ ಇದೆ.

[ಪೂನಾ ಪ್ರವಚನ–15ನೆಯ ಪ್ರವಚನ. ದಿ. 4–8–1875]

# ಸತ್ಯಾರ್ಥ ಪ್ರಕಾಶ

1. ಓಂಕಾರ. ಎಂಬ ಶಬ್ದವು ಪರಮೇಶ್ವರನ ಸರ್ವೋತ್ತಮ ನಾಮವಾಗಿದೆ.

2. ಪೂರ್ವರು ಉತ್ತಮ ಶಿಕ್ಷಕರು, ಎಂದರೆ ಮಾತೆ, ಪಿತೃ, ಆಚಾರ್ಯ– ಇವರು ಲಭಿಸಿದಾಗಲೇ ಮಾನವನು ಜ್ಞಾನವಂತನಾಗುತ್ತಾನೆ.

3. ಋಷಿಪ್ರಣೀತ ಗ್ರಂಥಗಳನ್ನೇ ಓದಬೇಕು. ಏತಕ್ಕೆಂದರೆ, ಅವರು ಮಹಾ ವಿದ್ವಾಂಸರೂ, ಸರ್ವಶಾಸ್ತ್ರಜ್ಞರೂ, ಧರ್ಮಾತ್ಮರೂ ಆಗಿದ್ದರು.

4. ಬ್ರಹ್ಮಚರ್ಯದಲ್ಲಿ, ನಾಲ್ಕು ವೇದಗಳನ್ನು ಓದಿ, ಮುಗಿಸಿದನಂತರ, ಗೃಹಾಶ್ರಮದಲ್ಲಿ ಪ್ರವೇಶ ಮಾಡಬೇಕು.

5. ಗೃಹಸ್ಥರು ವಾನಪ್ರಸ್ಥಿಗಳಾಗಿ, ಸಂನ್ಯಾಸಿಗಳಾಗುವುದು ಉಚಿತವಾಗಿದೆ.

6. ರಾಜ–ಪ್ರಜಾ ಸಂಬಂಧದ ವ್ಯವಹಾರದಲ್ಲಿ ವಿದ್ಯಾರ್ಯಸಭೆ, ಧರ್ಮಾರ್ಯ ಸಭೆ, ಮತ್ತು ರಾಜಾರ್ಯಸಭೆಗಳನ್ನು ನಿಯತಮಾಡಬೇಕು.

7. ಸರ್ವವ್ಯಾಪಕ ಪರಮೇಶ್ವರನನ್ನು ಅರಿಯದ ಮಂದಮತಿಗಳು ದುಃಖದಲ್ಲಿ ಮುಳುಗಿರುತ್ತಾರೆ. ಪರಮಾತ್ಮನಿಂದ ವೇದಗಳು ಪ್ರಕಾಶಿತವಾಗಿವೆ.

8. ಈ ವಿವಿಧಸೃಷ್ಟಿಯ ಪ್ರಕಾಶನ–ಧಾರಣ–ಪ್ರಳಯವನ್ನು ಮಾಡುವ ಪರಮಾತ್ಮನನ್ನು ತಿಳಿಯಿರಿ !

9. ಮಾನವನು ಅವಿದ್ಯೆ=ಕರ್ಮೋಪಾಸನೆಯಿಂದ ಮೃತ್ಯುವನ್ನು ದಾಟಿ, ವಿದ್ಯೆ=ಯಥಾರ್ಥಜ್ಞಾನದಿಂದ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ.

10. ಧರ್ಮಯುಕ್ತಕರ್ಮಗಳ ಆಚರಣ, ಸುಶೀಲತ್ವ, ಸತ್ಪುರುಷರ ಸಂಗ, ಸದ್ವಿದ್ಯೆಯಲ್ಲಿ ಅಭಿರುಚಿ—ಇವು ಆಚಾರ; ಇದಕ್ಕೆ ವಿರುದ್ಧ ಅನಾಚಾರ.

11. ವೇದವಿರುದ್ಧ ಪುರಾಣಾದಿ ಗ್ರಂಥಗಳಿಂದ ಶಾಖಾ–ಶಾಖಾಂತರರೂಪ ಮತಗಳು ಆರ್ಯಾವರ್ತದೇಶದಲ್ಲಿ ಪ್ರಚಲಿತವಾಗಿವೆ.

12. ವೇದವಿದ್ಯೆ ಬಿಟ್ಟು ಹೋಗಿ, ಅವಿದ್ಯೆ ಹರಡಿ, ಚಾರವಾಕ, ಜೈನ, ಬೌದ್ಧ ಮೊದಲಾದ ವಿದ್ಯಾವಿರುದ್ಧ ಮತ–ಮತಾಂತರಗಳು ಬಂದವು.

13. ಕ್ರೈಸ್ತರ ಮತ ನಿರ್ದೋಷವಾಗಿದೆಯೋ, ಇಲ್ಲವೋ ; ಬೈಬಲ್ ಈಶ್ವರಕೃತವೋ, ಅಲ್ಲವೋ, ಎಂಬುದು ಇದರಿಂದ ತಿಳಿಯುತ್ತದೆ.

14. ಇಂತಹ ಮಾತುಗಳಿಂದ ಕುರಾನ್ ದೂಷಿತವಾಗುತ್ತದೆ. ಒಳ್ಳೆಯ ವಚನಗಳಿದ್ದಲ್ಲಿ, ಪ್ರಶಂಸೆ ಬಹುವಾಗಿ ಆಗುತ್ತಿದ್ದಿತು.

- ವೇದಗಳೇ ಮೊದಲಾದ ಸತ್ಯಶಾಸ್ತ್ರಗಳೊಡನೆ, ಬ್ರಹ್ಮನಿಂದಾರಂಭಿಸಿ, ಜೈಮಿನಿ ಮುನಿಗಳವರೆಗಿನ ಮತವನ್ನು ಅಂಗೀಕರಿಸುತ್ತೇನೆ.